# ಶಿವಾನುಭವ.

ವರ್ಷ ೧೨]　　ಅಕ್ಟೋಬರ ೧೯೩೭.　　[ಸಂಚಿಕೆ ೧

## ಹರಿಹರದೇವನು ಚಿತ್ರಿಸಿದ ಚನ್ನಯ್ಯ.

ಲೇಖಕರು:— ಶ್ರೀ ಚಂದ್ರಶೇಖರದೇವರು, ಅಡ್ನೂರ.
ಮುಕ್ಕಾಂ ಸರ್ಪಭೂಷಣಮಠ ಬೆಂಗಳೂರ.

ಕನ್ನಡ ವಾಙ್ಮಯದಲ್ಲಿ ಶಿವಶರಣರ ವಚನಗಳು ಉಚ್ಚತರಗತಿಯನ್ನು ಪಡೆದಿರುವಂತೆ, ಸರಳುಗಬ್ಬಗಳಾದ ಸೊಗಸುರಗಳೆಗಳೂ ಮೇಲ್ಮೆಯನ್ನು ಪಡೆದಿವೆ. ವಚನಗಳು ವಿಶ್ವವ್ಯಾಪಕವಾದ ವಿಶಾಲ ತತ್ವಗಳನ್ನು ತೋರುವಂತೆ ಸುಲಲಿತಗಳಾದ ರಗಳೆಗಳು ಸಹೃದಯರಿಗೆ ಅನನ್ಯವಾದ ಕಾವ್ಯಾನಂದದ ಸೊಬಗನ್ನುಣಿಸುವವು; ತಣಿಸುವವು. ಒಟ್ಟಿಗೆ ವಚನ-ರಗಳೆಗಳೆರಡೂ ನಮ್ಮ ಕನ್ನಡ ಸಾಹಿತ್ಯದೇವಿಗೆ ಹೆಚ್ಚು ಕಳೆಯನ್ನೂ ಕೀರ್ತಿಯನ್ನೂ ತಂದುಕೊಟ್ಟಿವೆಯೆಂದರೆ ಏನೂ ತಪ್ಪಾಗದು; ಯಾರೂ ಒಪ್ಪದಿರಲಾರರು.

ರಗಳೆಗಾರರು ನಮ್ಮಲ್ಲಿ ಬಹಳವಾಗಿದ್ದಾರೆ. ಅವರಲ್ಲಿ ರಸವತ್ತಾಗಿಯೂ, ರಹಸ್ಯಪೂರ್ಣವಾಗಿಯೂ ಹಾಗು ರಮ್ಯವಾಗಿಯೂ ರಚಿಸಿದ ರಗಳೆಗಾರನೆಂದರೆ ಹರಿಹರದೇವನು. ಆದ್ದರಿಂದಲೇ ಆತನಿಗೆ 'ರಗಳೆಯಕವಿ' ಯೆಂದು ಕರೆದಿರುವರು. ಆತನು ಕವಿಯಾಗಿ ಹಾಡಿದನು. ಋಷಿಯಾಗಿ ಬೋಧಿಸಿದನು. ಶರಣನಾಗಿ ಭಕ್ತಿರಸವನ್ನು ಬೆರಿಸಿದನು. ಆತನ ರಗಳೆಗಳಲ್ಲಿ ಕನ್ನಡದೇವಿಯ ಸೊಂಪು, ಪೆಂಪು, ನುಣ್ಪುಗಳು ಬಹು ಸೊಗಸಾಗಿ ಚಿತ್ರಿಸಲ್ಪಟ್ಟಿವೆ. ಭಕ್ತಿರಸವಾಹಿನಿಯು ಕಥಾರೂಪ ತೀರಗಳನ್ನು ಮೀರಿ, ಶಬ್ದತರಂಗಗಳಿಂದ ಅತಿಮನೋಹರವಾಗಿ ಅಟ್ಟಹಾಸದಿಂದ ಹರಿದಿರುವದು. ಆತನ ರಗಳೆಗಳಲ್ಲಿ ಹೆಚ್ಚಿನ ವರ್ಣನೆಯು

ಹಂಬಲವಿಲ್ಲ. ಮೆಚ್ಚದ ತೊಡಕುಗಳಿಗಿಂಬಿಲ್ಲ. ಬೇರೆ ಯಾವ ರಸ-ಭಾವಗಳಿಗೂ ಕೊರತೆಯಿಲ್ಲ. ಹರಿಹರದೇವನ ಈ ರಮ್ಯರಗಳೆಗಳಿಂದ ಕನ್ನಡ ಸಾಹಿತ್ಯಕ್ಕಾದ ಉಪಕಾರಕ್ಕೆ ಉಪಮೆಯಿಲ್ಲ. ಅವನ್ನು ಪ್ರಕಟಿಸುವ ಕಾಯಕವ ಕೈಕೊಂಡ ಶ್ರೀಮಾನ್ ರಾ. ಸಾ. ಹಳಕಟ್ಟಿಯವರ ಕೀರ್ತಿಗೆ ಕೊನೆಯಿಲ್ಲ. ಅದಿರಲಿ.

ಹರಿಹರನ ರಗಳೆಯ ಕಾವ್ಯಗಳು ಹಳೆಯುವೆಂದರೆ ಹಳೆಯವು; ಹೊಸವೆಂದರೆ ಹೊಸವು. ಏಕೆಂದರೆ ಆತನ ಶೈಲಿಯೇ ಆ ತೆರನಾದುದು. ಆತನ ಆ ಶೈಲಿಯಲ್ಲಿ ನಾವೀನ್ಯವು ನರ್ತನವಾಡುತ್ತಿದೆ. ಅದೇ ರೀತಿಯಲ್ಲಿ ರಚಿಸಿದ ಆತನ ರಗಳೆಗಳಲ್ಲಿ "ಚನ್ನಯ್ಯಗಳ ಮಹಾತ್ಮೆ" ಯೆಂಬುದೊಂದು. ಅದನ್ನು ಆತನು ಕಾವೇರಿಯಂತೆ ಕಾವೇರಿ (ಕಾವು-ಏರಿ) ಹೆಣದಿರುವನು. ಏಕೆಂದರೆ ಕಥಾನಾಯಕನಾದ ಚನ್ನಯ್ಯನಲ್ಲಿ ಅಂಥದೊಂದು ಅಮೋಘಶಕ್ತಿಯಿತ್ತು, ಅನನ್ಯಭಕ್ತಿಯಿತ್ತು. ಅಂತೆಯೆ ಬಸವಣ್ಣನವರ ವಚನದಲ್ಲಿ ಚನ್ನಯ್ಯನವರಿಗೆ ಹೆಚ್ಚಿನ ಸ್ಥಾನ-ಮಾನಗಳು ದೊರೆತಿವೆ. ಏನಿಲ್ಲೆಂದರೂ ೩೦-೪೦ ವಚನಗಳು ಆ ಚನ್ನಯ್ಯಗಳ ಬಣ್ಣನೆಗೆ ಮೀಸಲಾಗಿವೆ. ಆತನ ವಿಷಯಕ್ಕೆ ಬಸವಣ್ಣನವರ ಮನವುಕ್ಕಿ ಮೆಯ್ಯುಬ್ಬಿ ಹಲವೆಡೆಯಲ್ಲಿ ಹೀಗೆ ಉದ್ಗಾರ ತೆಗೆದಿದ್ದಾರೆ.—

> "ಸೂಳೆಗೆ ಹುಟ್ಟಿದ ಕೂಸಿನಂತೆ ಆರನಾದಡೆಯೂ ಅಯ್ಯಾ ಎನಲಾರೆನಯ್ಯಾ. ಚನ್ನಯ್ಯನೆಮ್ಮಯ್ಯನು. ಚನ್ನಯ್ಯನ ಮಗ ನಾನು. ಚನ್ನಯ್ಯನ ಮನೆಯ ದಾಸನ ಮಗ ನಾನು. ಚನ್ನಯ್ಯನೆನ್ನ ಮುತ್ತಯ್ಯನಜ್ಜನಪ್ಪಯ್ಯ, ಅಯ್ಯಗಳ ಅಯ್ಯ ನಮ್ಮ ಮಾದಾರ ಚನ್ನಯ್ಯ, ಕುಲತಿಲಕ ನಮ್ಮ ಮಾದರ ಚನ್ನಯ್ಯ ಉನ್ನತ ಮಹಿಮ, ಉಮೇಶನಿಂದಧಿಕ. ಚಿಕ್ಕಯ್ಯ ಚನ್ನಯ್ಯಗಳೆತ್ತಿ ಮುದ್ದಾಡಿದರೆನ್ನ ಆನ್ದರಿಂದಲೇ "ವೇದಕ್ಕೆ ಒರೆಯ ಕಟ್ಟುವೆ. ಶಾಸ್ತ್ರಕ್ಕೆ ನಿಗಳನಿಕ್ಕುವೆ. ತರ್ಕದ ಬೆನ್ನಬಾರನೆತ್ತುವೆ. ಆಗಮದ ಮೂಗ ಕೊಯ್ಯುವೆ ನೋಡಯ್ಯ. ಮಹಾದಾನಿ ಕೂಡಲಸಂಗಮದೇವ ಮಾದರ ಚನ್ನಯ್ಯನ ಮಗ ನಾನಯ್ಯ."

ಎಂದು ಮುಂತಾಗಿ ಆ ಚನ್ನಯ್ಯಗಳ ಚನ್ನ ನಡೆಗೆ ಮೆಚ್ಚಿ ಮುದ್ದಿಕ್ಕಿ ವೇದಾಗಮಶಾಸ್ತ್ರಗಳ ಹಾದಿಯನ್ನೂ ಸಹ ಹೀಯಾಳಿಸಿರುವನು. ಇದೇನು?

ಆ ವೇದಾಗಮಶಾಸ್ತ್ರಗಳಿಗಿಂತ ಮಾದಾರ ಚನ್ನಯ್ಯನ ನಡೆಯು ಮೇಲಾ ದುದೆ? ಎಂದರೆ ಆತನೇ ಮತ್ತೊಂದು ವಚನದಿಂದ ಹೀಗೆ ಉತ್ತರಿಸಿ ರುವನು.—

"ವೇದ ನಡ ನಡುಗಿತ್ತು. ಶಾಸ್ತ್ರವಗಲಿ ಕೆಲಕ್ಕೆ ಸಾರಿದುದಯ್ಯ. ತರ್ಕತರ್ಕಿಸಲರಿಯದೆ ಮೂಗುವಟ್ಟಿದ್ದಿತಯ್ಯಾ. ಆಗಮ ಹೊರ ತೊಲಗಿ ಅಗಲಿದ್ದಿತಯ್ಯ. ನಮ್ಮ ಕೂಡಲಸಂಗಯ್ಯನು ಚನ್ನ ಯ್ಯನ ಮನೆಯಲುಂಡ ಕಾರಣ."

ವೇದಾದಿಗಳು ಪರಬ್ರಹ್ಮವನ್ನು ಬಾಯ್ತುಂಬ ಹೊಗಳಿದವೆ ಹೊರತು ಪ್ರತ್ಯಕ್ಷ ತೋರಿಸಲಿಲ್ಲ. ಅವುಗಳಲ್ಲಿರುವದು ಶಬ್ದಬ್ರಹ್ಮವೇ ವಿನಹ ಸತ್ಯ ಬ್ರಹ್ಮವಲ್ಲ. ಆ ಶಬ್ದಬ್ರಹ್ಮದಲ್ಲಿ ತೊಡಕು-ತೊಳಲಿಕೆಗಳೇ ಹೊರತು ತೃಪ್ತಿ ಯಿಲ್ಲ. ನಮ್ಮ ಚನ್ನಯ್ಯ ಹಾಗಲ್ಲ. ಶಿವನನ್ನು ತನ್ನ ಮನೆಗೆಯೇ ಬರ ಮಾಡಿಕೊಂಡವನು. ತನ್ನ ಅಂಬಲಿಯ ಅದ್ವಿತೀಯ ರುಚಿಯನ್ನು ಹಂ। ಸಿದವನು. ಬೇಕಾದಾಗ ಬೇಡುವ ಭಕ್ತರಿಗೆ ತೋರಿಸಬಲ್ಲವನು. ಮಹ ದೇವನಿಗುಣಬಡಿಸಿ ವೇದಾದಿಗಳ ನಡೆಯನ್ನು ನಡುಗಿಸಿದನಲ್ಲದೆ ಬುಡ ಮೇಲು ಮಾಡಿದನು. ಅಂಥವನ ಮಗ ನಾನು ಎಂಬುದಾಗಿ ಎದೆತಟ್ಟಿ ಎರಕುಗೊಂಡು ಚನ್ನಯ್ಯಗಳ ಪೆರ್ಮೆ-ಕೂರ್ಮೆಗಳೆರಡನ್ನೂ ಸೊಗಸಾಗಿ ಸಾರಿ ರುವನು, ಬೀರಿರುವನು.

ಇನ್ನು ಹರಿಹರನತ್ತ ಹೊರಳೋಣ. ಹರಿಹರನಾದರೂ ಏನನ್ನ ವನು?

"ವೇದವ ಡಂಗುರಂ ಹೆದರಿ ಸೈವೆರಗಾದವು. ಶಾಸ್ತ್ರಸಂಭ್ರಮಂ।
ಪೋದವು ನಿಚ್ಚಲೋದುವ ಪುರಾಣದ ಮಾತಿನ ಮಾಲೆಯಲ್ಲ ಹಾ-।
ಳಾದವು ನೇಮ ನಿತ್ಯ ಸುಸಮಾಧಿಗಳೆಂಬುವವೆಲ್ಲ ನುಚ್ಚುನೂ-।
ರಾದವು ಹಂಪೆಯಾಳ್ದವರ ಚನ್ನನ ಕೂಡೊಲೆದುಂಡ ಕಾರಣಂ॥"

"ವೇದ ನಡನಡುಗಿತ್ತೆಂಬ" ಆ ಬಸವಣ್ಣನವರ ವಚನವೋ? ಹರಿಹರ ದೇವನ ವೃತ್ತವೋ? ಎಂದು ಭ್ರಾಂತಿ ಬರುವಂತಿದೆ. ಇಲ್ಲಿ ಸ್ವಲ್ಪ ವಿಚಾರಿಸಿದರೆ ಚನ್ನನ ನಡೆಯೇ ಬಸವಣ್ಣನ ನುಡಿಯಾದಂತಿದೆ. ಬಸ ವೇಶ್ವರನ ವಚನವೇ ಹರೀಶ್ವರನ ವೃತ್ತವಾಗಿ ನಿಂತಂತಿದೆ. ನೋಡಿ ಎಂಥ ವಿಚಿತ್ರ! ಚನ್ನ ಚರಿತ್ರ!! ಇವೆಲ್ಲಕ್ಕೂ ಎಳ್ಳಷ್ಟು ವ್ಯತ್ಯಯವಿ

ಲ್ಲೆಂಬುದೆ ತಾತ್ಪರ್ಯ. ಇಂತು ಮಹಾನುಭಾವನಾದ ಮಾದರ ಚೆನ್ನ ಯ್ಯನವರೊಲ್ಮೆಯ ಬಲ್ಮೆಯನ್ನು ಕವಿಯು ಎಂತು ಚಿತ್ರಿಸಿರುವನೆಂಬು ದನ್ನು ನಿರೀಕ್ಷಿಸೋಣ.

ಚೋಳರಾಜ್ಯವು ನಮ್ಮ ಕನ್ನಡಿಗರಿಗೆ ಹೆಮ್ಮೆಯ ರಾಜ್ಯ. ನಮ್ಮ ಕಲೆಗಳನ್ನು ಉಳಿಸಿ ಬೆಳಸಿದ ರಾಜ್ಯ. ಅದರಲ್ಲೂ ನಮ್ಮ ಪುರಾತನರೆಲ್ಲ ಅಲ್ಲಿಯೇ ಹುಟ್ಟಿ ಬೆಳೆದು ಬಾಳಿ ಬೆಳಕಿಗೆ ಬಂದ ರಾಜ್ಯ. ಅಂತೆಯೆ ಆ ರಾಜ್ಯವನ್ನು ಕವಿಯು ಇಂತು ಬಣ್ಣಿಸುತ್ತಾನೆ. ಆ ರಾಜ್ಯವು ಶಿವ ಭಕ್ತ ಸಂಕುಳಕೆ ಶಿವಭವನವಾಗಿತ್ತು. ಅಲ್ಲಿರುವ ಊರುಗಳೆಲ್ಲ ಶಿವಪುರ ಗಳಾಗಿದ್ದವು. ಅವುಗಳಲ್ಲಿರುವ ಜನರೆಲ್ಲ ಶಿವಭಕ್ತರಾಗಿದ್ದರು. ಹೀಗೆ ಎಲ್ಲ ಬಗೆಯಿಂದಲೂ ಶಿವಮಯವಾದ ಆ ದೇಶದಲ್ಲಿ ಎಲ್ಲಿನೋಡಿದರೂ ಬೆಳೆಯಿಲ್ಲದೆಡೆಯಿರಲಿಲ್ಲ; ಜನವಿಲ್ಲದೂರಿರಲಿಲ್ಲ; ನೆಳಲತಂಪಿಲ್ಲದಿಂಪಿರ ಲಿಲ್ಲ. ಅದರೊಳಗೆ ಹರಭಕ್ತಿ ರಸದಂತೆ ಹರಿದಿಹುದು ಕಾವೇರಿ. ಅದರ ತೀರದೊಳು ಫಲಭರಿತ ಚಲುವ ವೃಕ್ಷಗಳ ರಾಜಿ; ಆ ರಾಜಿಯಲ್ಲಿ ಜಪಿ ಸುವ-ತಪಿಸುವ ಯತಿಗಳ ಪಂಕ್ತಿ; ಆ ಪಂಕ್ತಿಯಲ್ಲಿ ಜಪದರ್ಥವೆನಿಪ ಶಿವನ ಸಂಚಾರ. ಆದ್ದರಿಂದ ಅಲ್ಲಿರುವ ತರುಗಳು ಕಲ್ಪತರಗಳು, ಗಿರಿಗಳು ಹೇಮಗಿರಿಗಳು, ಅಲ್ಲಲೆವ ಧೇನುಗಳು ಕಾಮಧೇನುಗಳು. ಹೆಚ್ಚೇನು? ಆ ದೇಶ ಸರ್ವಸೌಂದರ್ಯನಿವಾಸ! ಶರ್ವ ಸೌಖ್ಯದ ಕೈಲಾಸ!! ಅಂತಹ

ಆ ದೇಶಮಂ ಪೊಗಳ್ವೊಡೆನ್ನಳವೆ ಸುರರಳವೆ ? ।
ವೇದಮಯವಭವಮಯವಾದುದಕೆ ಪಡಿಯೊಳವೆ ? ॥

ಎಂದು ಕವಿಕುಲತಿಲಕನಾದ ಹರಿಹರನೇ ಆ ದೇಶವನ್ನು ಪೊಗ ಳಲು ಎನ್ನೊಳವೆ ? ಸುರರಳವೆ? ಎಂದು ಹೇಳಿರುವಲ್ಲಿ ನಮ್ಮಳವೆ?

ಇಂತು ಅವರ್ಣನೀಯವಾದ ಚೋಳದೇಶವನ್ನು ಕರಿಕಾಲಚೋಳ ನೆಂಬರಸನು ಆಳುತ್ತಿದ್ದನು. ಆತನು ಹರಭಕ್ತ-ಗುರುಭಕ್ತ-ಚರಭಕ್ತ ನಾಗಿದ್ದನು. ಸತ್ಯಸಂಧನೆನಿಸಿದ್ದನು. ಆತನ ರಾಜಧಾನಿಯಲ್ಲಿ ಚನ್ನ ಯ್ಯನೆಂಬ ಮಾದಾರನಿದ್ದನು. ಈತನೇ ನಮ್ಮ ಕಥಾನಾಯಕನು. ಈತನು ನಿತ್ಯದಲ್ಲಿಯೂ ಹುಲ್ಲು ಹೊರೆಯನ್ನು ತಂದು, ಚೋಳನ ಕುದುರೆಗೆ ಹಾಕುವದೇ ಈತನ ಬಹಿರಂಗಕಾಯಕ. ಅಂತರಂಗದಲ್ಲಿ ಮಾತ್ರ ಲಿಂಗಭಕ್ತಿ. ಸದಾ ಲಿಂಗಾಭಿಮಾನಿ, ಲಿಂಗಾನುಭಾವಿ, ಲಿಂಗ ಪ್ರಾಣಿಯಾಗಿದ್ದನು. ಆತನದು ಹೊರಗೆ ಕುಲಾಚಾರ, ಒಳಗೆ ಶಿವಾ

ಚಾರ. ತನುವು ಚೋಳನಿಗಾಳ, ಮನವು ಲಿಂಗದಿ ಮೇಳ. ವ್ಯಕ್ತದಿ ಮಾದಾರ, ಗುಪ್ತದಿ ಮಾಹೇಶ್ವರ. ಹೀಗೆ ಯಾರು ಅರಿಯದಂತೆ ಗುಪ್ತ ಭಕ್ತನಾಗಿದ್ದನು. ಇದರಿಂದ ಆಗಿನ ಕಾಲದಲ್ಲಿ ಶಿವಭಕ್ತರೆಂದು ಗೊತ್ತಾದರೆ ಯಾರೂ ತಮ್ಮ ಸೇವೆಗೆ ಹಚ್ಚಿಕೊಳ್ಳುತ್ತಿರಲಿಲ್ಲವೆಂದು ಗೊತ್ತಾಗುತ್ತದೆ. ಆದ್ದರಿಂದ ಚನ್ನಯ್ಯನು ಹಾಗೆ ವರ್ತಿಸಿರಬೇಕು. ಹಾಗೆ ನಡೆದುದನ್ನು ಕವಿಯು ಇಂತು ಬಣ್ಣಿಪನು—

"ಒಳಗೆ ಭಕ್ತಿಯು ಗುಂಪು, ಹೊರಗೆ ಜಾತಿಯು ಸೊಂಪು ।  
ಒಳಗೆ ಮುಕ್ತಿಯು ನುಂಪು, ಹೊರಗೆ ಜನ್ಮದ ಪೆಂಪು ॥  
ತಿಲದ ತೈಲದ ತೆರದೆ, ಕಾಷ್ಠದಗ್ನಿಯು ತೆರದೆ ।  
ನೆಲದ ಮರೆಯೊಳಗೆ ತೋರುವ ನಿಧಾನದ ತೆರದೆ, ॥  
ಪೆರರರಿಯದಂತೊಳಗೆ ಲಿಂಗಾರ್ಚನೆಯೊಳಿರ್ಪ ।  
ಅರಿವಂತೆ ಹೊರಗೆ ಕುಲಧರ್ಮ ಕರ್ಮದೊಳಿರ್ಪ ॥  
ಆತನ ಶಿವಾರ್ಚನೆಯನೆಣಿಸಲೆನ್ನಳವಲ್ಲ ।  
ಭೂತೇಶ್ವರಂಗೆ ಕೌತುಕಂ, ಉಳಿದವರ್ಗಳವಲ್ಲ ॥

ಇಲ್ಲಿ ಒಡಮೂಡಿದ ರಸಭಾವಗಳನ್ನು ನೋಡಿ! ಈ ರಸಭಾವಗಳಿಲ್ಲದ ಸಾಹಿತ್ಯವು ಸಾಹಿತ್ಯವಲ್ಲ. ಅದು ಆತ್ಮವಿಲ್ಲದ ಶರೀರವಿದ್ದಂತೆ, ನಿರ್ಜೀವ ಸಾಹಿತ್ಯ. ಇಲ್ಲಿ ಹಾಗಿಲ್ಲ. ಚನ್ನಯ್ಯನಂತರಂಗವೇ ತಾನಾಗಿ ಹಾಡಿದ ಹರಿಹರನ ಈ ನುಡಿಗಳಲ್ಲಿ ರಸ ಭಾವಗಳು ತಾಂಡವವಾಡುತ್ತವೆ. ಓದುಗರ ಹೃದಯಗಳೂ ನರ್ತಿಸುವಂತಿವೆ. ೩—೪ನೇ ಪಂಕ್ತಿಗಳನ್ನು ಓದುವಾಗ ಮಹಾದೇವಿಯಕ್ಕನ ಮೂರನೆಯ ವಚನವು ಮಾರ್ಪಟ್ಟು ರಗಳೆಯಾಗಿ ಬಂದಿಲ್ಲಿ ಸೇರಿದೆಯೋ ಎಂಬಂತಿದೆ. ಕೊನೆಯ ಚರಣದಲ್ಲಿ ಚನ್ನಯ್ಯಗಳ ಅಂತರಂಗದ ಅರ್ಚನೆಯ ಕಂಡರೆ ಕೃತ್ತಿವಾಸನಿಗೂ ಕೌತುಕ! ಇನ್ನು ಜಡ ದೃಷ್ಟಿಯುಳ್ಳ ಜಗದ ಜನರರಿವುದೆಂತು? ಎಂದು ವರ್ಣಿಸುವದರಿಂದ ಆತನ ವರ್ತನೆಯ ವೈಶಿಷ್ಟವು ಎಂತಹದಿತ್ತೆಂದು ವ್ಯಕ್ತವಾಗುತ್ತದೆ; ಒಡೆದು ತೋರುತ್ತದೆ.

ಹೀಗೆ ಗುಪ್ತವಾಗಿ ಗಿರೀಶನಿಗಾಪ್ತನಾಗಿ ಚನ್ನಯ್ಯನೊಂದು ದಿನ ಉದಯದೊಳೆದ್ದು ಕುಲಕರ್ಮಕನುಗುಣವಾಗಿ ಚೋಳರಸನ ಕುದುರೆಗೆ ಹುಲ್ಲು ತರಲು ಕಾನನಕ್ಕೆ ಹೊರಟು ದಾರಿಯಲ್ಲಿ—

"ಕಂಡ ಚಲ್ವಕ್ಷಿ ಮುಖದಿಂದ ಲಿಂಗಾರ್ಪಿತಂ। ಕೊಂಡನಾಲಿಗೆಯ
ರುಚಿಯಿಂದಲರ್ಪಿತಂ ॥
ಕೇಳ್ದ ಸವಿನುಡಿ ಕಿವಿಯ ಮುಖದಿಂದರ್ಪಿತಂ। ತಾಳ್ದಗಂಧಂ ನಾಸಿಕದ
ಮುಖದೊಳರ್ಪಿತಂ ॥
ಸೋಂಕಿದ ಮೃದುದ್ರವ್ಯವಂಗದಿಂದರ್ಪಿತಂ। ಮುಂಕೊಳಸಿ ನೆನೆದ
ರುಚಿಮನದಿಂದವರ್ಪಿತಂ" ॥

ಇಲ್ಲಿ ನೋಡಿ! ಕವಿಯು ಅತಿಗಾಢವಾದ ಅಧ್ಯಾತ್ಮಿಕ ವಿಚಾರವನ್ನು ಎಷ್ಟು ಸುಲಭವಾದ ಮಾರ್ಗದಿಂದ ತೋರಿಸುತ್ತಾನೆ. ಈ ಕವಿತೆಯಲ್ಲಿ ಒಂದು ಚಮತ್ಕಾರವಿದೆ. ಈ ಭಾವದಲ್ಲಿ ಒಂದು ಸ್ವಾರಸ್ಯವಿದೆ. ಇಲ್ಲಿ ಹೇಳಿದುದಕಿಂತಲೂ ಹೆಚ್ಚಿನ ಧರ್ಮವಿನ್ನಾವದಿದೆ? ಈ ಧರ್ಮದಿಂದಿರುವವರು ಕುಲಹೀನರಾಗಬಲ್ಲರೇ? ಎಲ್ಲ ವಿಷಯಗಳನ್ನು ತನಗೆಂದು ವಾಂಛಿಸದೆ ಲಿಂಗಕ್ಕರ್ಪಿಸುವ ಚನ್ನಯ್ಯನು ಮಾದಾರನೇ? ಕಂಡುದುದ ಶಿವಲಿಂಗಕ್ಕೆ, ಕೊಂಡುದುದ ಗುರುಲಿಂಗಕ್ಕೆ, ಕೇಳಿದುದ ಪ್ರಸಾದ ಲಿಂಗಕ್ಕೆ ಅರ್ಪಿಸುವಾತನು ಭವಿಯಾಗಬಲ್ಲನೆ? ಮೂಸಿದುದ ಆಚಾರ ಲಿಂಗಕ್ಕೆ, ಸ್ಪರ್ಶಿಸಿದುದ ಜಂಗಮಲಿಂಗಕ್ಕೆ, ನೆನೆದುದ ಮಹಾಲಿಂಗಕ್ಕೆ ಅರ್ಪಿಸಿದವನು ಶಿವಭಕ್ತನಾಗನೆ? ಎಲ್ಲವನ್ನೂ ಶಿವಾರ್ಪಣ ಮಾಡುವ ಆಚರಣೆಗಿಂತ ಬೇರೆ ವೀರಶೈವಾಚಾರಮುಂಟೆ? ಷಡಿಂದ್ರಿಯಗಳಲ್ಲಿಯೂ ಷಡ್ಲಿಂಗಗಳನ್ನು ಧಾರಣ ಮಾಡಿದ ಆ ಚನ್ನಯ್ಯನಿಗೆ ಅದಾವ ಷಟ್‌ಸ್ಥಲ ಬ್ರಹ್ಮಿಯು ಸಾಟಿಯಾಗುವನು? ಲಿಂಗಾಂಗಿಯಾದ ಆತನನ್ನು ಮತ್ತಾವ ವಿಷಯಗಳು ವಿಕಾರಗೊಳಿಸಬಲ್ಲವು? ಹಾಗು ಅದಾವ ಸ್ವರ್ಗ ಮೋಕ್ಷ ಮುಂತಾದ ಪದವಿಗಳು ಬಾಯ್‌ನೀರಕರಿಸಬಲ್ಲವು? ಇದೇ ಅಭಿಪ್ರಾಯವನ್ನೇ ಮಗ್ಗೆಯ ಮಾಯಿದೇವನು ಎಷ್ಟು ಸರಸಾಗಿ ಬಣ್ಣಿಸುವನು ನೋಡಿ—

ಎಲ್ಲಿಯ ಮುಕ್ತಿಯಲ್ಲಿಯ ಪರಾ ಗತಿಯೆಲ್ಲಿಯ ಪಾರಲೌಕಿಕಂ।
ನಿಲ್ಲು ಷಡಂಗಲಿಂಗ ಮುಖಖಂಡಿತಜೀವ ಶರೀರಯೋಗದಿಂ ॥
ಪಲ್ಲಟವಾಗಿ, ಪೂರ್ವತನು ಪೋಗಿ, ನಿಜೈಕ್ಯ ವಿಶೇಷದಲ್ಲಿ ತಾಂ।
ನಿಲ್ಲದೆ ನಿಂದವಂಗೆ ಪರಮಪ್ರಭುವೇ ಮಹದೈಪುರೀಶ್ವರಾ ॥

ಈತನ ಈ ಮಾತು ರತ್ನ ಮೌಕ್ತಿಕದಚ್ಚು. ಈತನ ಶತಕತ್ರಯವು ನಿಜವಾಗಿಯೂ ರತ್ನತ್ರಯ. ಈತನ ಈ ಕಾವ್ಯದಲ್ಲಿ ಗಂಗೆ-ಯಮುನೆಗಳಂತೆ

ಧರ್ಮ-ಸಾಹಿತ್ಯಗಳೆರಡೂ ಕೂಡಿ ಹರಿದಿವೆಯೆಂಬುದಕ್ಕೆ ಇದೇ ಸಾಕ್ಷಿ. 'ಲಿಂಗಭಕ್ತಿಯಿಂದ ದೇಹಧರ್ಮವಳಿದು ಲಿಂಗವೇ ತಾನಾದ ಶರಣನಿಗೆ ಮೋಕ್ಷ ಪರಾಗತಿ ಪರಲೋಕಗತಿ ಎಂಬಿವುಗಳೆಲ್ಲಾ ಯಾವ ಮಹಾ ಪದವಿಗಳು ? ಕುಲಜಾತಿಗಳು ಚತುರ್ವಿಧ ಪುರುಷಾರ್ಥಗಳು ಎಂಥವರ ಸೊತ್ತು !! ಅವೆಲ್ಲ ಆ ಲಿಂಗಭಕ್ತನಿಗೆ ತೃಣಪ್ರಾಯಗಳು ಎಂದು ಹೇಳುವಲ್ಲಿ ಚನ್ನಯ್ಯಗಳಿಗೆ ಹೊಲೆತನವು ನಿಲ್ಲಬಹುದೆ ? ಇದಲ್ಲದೆ ವೀರಶೈವರಲ್ಲಿ ಚತುರ್ವರ್ಣಗಳುಂಟೆಂದು ಹೇಳಿ ತಮ್ಮ ಅಜ್ಞಾನವನ್ನು ಹೊರಗೆಡುವವರಿಗೆ ಏನನ್ನಬೇಕು ? ಇದನ್ನು ಬೋಧಿಸುವದಕ್ಕಾಗಿಯೇ ಹರಿಹರನು ಆತನ ಲಿಂಗಪ್ರೇಮವನ್ನು ಈ ಬಗೆಯಾಗಿ ಬಣ್ಣಿಸಿರುವನು. ಇದರಿಂದ ಆತನಲ್ಲಿರುವ ವಿಷಯ ವಿರತಿ, ಲಿಂಗ ಪ್ರೀತಿಗಳು ಎಷ್ಟೊಂದು ಬಲಿತಿದ್ದವೆಂಬುದು ಗೊತ್ತಾಗುವದು. ಇದು ಅವನ ಲಿಂಗಪ್ರೇಮದ ಪರಮಾವಧಿ. ಆದರೂ ಇನಿತು ಮಾತ್ರಕ್ಕೆ ಅವನ ಲಿಂಗಪ್ರೇಮವು ಪೂರೈಸಲಿಲ್ಲ. ಇದೆಲ್ಲ ಬಟ್ಟೆಯ ಮಾತು.

ಆಮೇಲೆ ಚನ್ನಯ್ಯನು ಕಾನನವ ಪೊಕ್ಕು ಕಾವೇರಿ ನದಿಯ ತೀರಕ್ಕೆ ಬರುವನು. ಆ ನದೀ ತೀರದಲ್ಲಿ ಮಗ ಮಗಿಪ ಮಲ್ಲಿಗೆಯ ಮಂಟಪವೊಂದು ಆತನ ಕಣ್ಣಿಗೆ ಬೀಳುವದು. ಅದರಲ್ಲಿ ತಣ್ಣೆಳಲನೆರಚುವ ಸೊಗಸಾದುದೊಂದು ತಾಣ. ಆ ಸ್ಥಾನಕ್ಕೆ ಬರುವನು. ನುಣ್ಮಳಲ ಕಟ್ಟೆಯ ಕಟ್ಟಿ ತಳಿರ ಹಸೆಯ ಹಾಸುವನು. ಹರುಷವೇರಿ ಕಣ್ಮನಗಳನ್ನು ಲಿಂಗದತ್ತ ತಿರುಗಿಸುವನು. ಮಿತ್ರನು ಮಿತ್ರನನ್ನು ಅಕ್ಕರೆಯಿಂದ ಕರೆಯುವಂತೆ ಕೈವೀಸಿ--

ಬಾರಯ್ಯಬಾರ ಶಿವಭಕ್ತ್ಯೈಕ ಸಿಂಧುವೆ ।
ಬಾರಯ್ಯಬಾರ ಕಾರುಣ್ಯರಸ ಸಿಂಧುವೆ ॥
ಗುರುವೆ, ವರಗುರುವೆ, ಸದ್ಗುರುವೆ, ಗುರುಲಿಂಗವೆ ।
ಭರದಲರ್ಚಿಪ ಜನದ ಮನದ ಸರ್ವಾಂಗವೆ ॥

ಎಂದು ಮೈಪುಳಕವೇರಿ, ನೇತ್ರಬಿಂದುಗಳೆಂಬ ಕುಸುಮಗಳುದುರಿ, ಸ್ನೇಹ ತೈಲ ಸುಗಂಧ ಬೀರಿ, ಕರೆವ ಈ ಸಂಬೋಧನಗಳು ಯಾರ ಮನಸ್ಸನ್ನು ಕರಗಿಸವು ? ಈ ಇನಿದನಿಗೆ ಶಿವನು 'ಓ' ಎನ್ನದೆ ಸುಮ್ಮನಿರಬಲ್ಲನೆ ? ಹೀಗೆ ಭಕ್ತಿಯಿಂದ ಕರೆದು ಸಜ್ಜೆಯೊಳಗಿರ್ಪ ಶಿವಲಿಂಗಮಂ

ತೆಗೆದು, ಕರತಳದೊಳಿರಿಸಿ, ಕಣ್ತುಂಬ ಪರಿಕಿಸಿ, ತಿಳಿಯುಗ್ಗಣಿಯನೆರೆದು, ಹೃದಯದಿಂಬೆರೆದು, ಆ ಲಿಂಗದೇವನಂ ಮತ್ತೆ ಮತ್ತೆ ಮೆಲುದನಿಯಿಂದ ಕರೆವನು. ಕರೆತಂದು ತಾ ರಚಿಸಿದ ತಳಿರ ಸಿಂಹಾಸನದ ಮೇಲೆ ಬಿಜಯಂಗೈಸುವನು. ಪರಿಮಳದ ತಿರುಳೆನಿಪ ಮೊಲ್ಲ ಮಲ್ಲಿಗೆಗಳನು ಕಂಪಿಡುವ ಸಂಪಿಗೆಗಳನು ಧರಿಸುವನು. ಮತ್ತೆ ಪಚ್ಚೆ ಪಡ್ಡಳೆಯಪೂಗಳನು, ಸುರಗಿ-ಸುರಹೊನ್ನೆ-ಸೇವಂತಿಗೆಯ ಕುಸುಮಗಳನು ಅಂದವಾಗಿ ಧರಿಸುವನು. ಮೇಲೆ ಹೊಂಗೇದಿಗೆಯ ಸುತ್ತಲೂ ನಿಲ್ಲಿಸುವನು. ಈ ಬಗೆಯಾಗಿ ಸಿಂಗರಿಸಿ, ಹೊಂಗಿ ಹೊರೆಯೇರಿ, ಮಮತೆ ಮಿತಿಮೀರಿ—

"ಅಡಿಗಡಿಗೆ ನೋಡಿ ಮಾತಾಡಿ ಮೈಮರೆಯುತುಂ । ಹಾಡಿತಣಿವುತೆ
ಮತ್ತೆ ಮತ್ತೆ ಮಿಗೆಕೊಬ್ಬುತುಂ ॥
ಪುಳಕಿಸುತೆ ಪುಟವೇರಿ ತವಕಿಸುತೆ ಮದವೇರಿ । ಎಳಸುತುಂ ದಳವೇರಿ
ಬಳಸುತುಂ ಬಲ್ಪೇರಿ ॥
ನುಡಿಯುತುಂ ಗದುಗದಿಸಿ, ಬೆಮರುತುಂ ಸಡಗರಿಸಿ । ನಡೆವುತುಂ
ಡೆಂಡಣಿಸಿ, ಬೀಳುತುಂ ತರಹರಿಸಿ ॥
ಮೆಲ್ಲನೆಚ್ಚತ್ತು ಶಿವಲಿಂಗಮಂ ನಡೆನೋಡಿ । ಲಲ್ಲೆಗರೆವುತ್ತೆ ಪರಮ
ಸ್ನೇಹಮಂ ಮಾಡಿ" ॥

ಹೀಗೆ ಗಾಢವಾದ ಪ್ರೇಮದಿಂದ ಪೂಜೆ ಮಾಡುವವರಿಗೆ ಇಂತು ಕ್ರಿಯೆಗಳಾಗುವದು ಸಹಜ. ಚನ್ನಯ್ಯನು ನೋಡುವ ನೋಟ, ಆಡುವ ಮಾತು, ಮಾಡುವ ಪೂಜೆ ಮುಂತಾದವುಗಳನ್ನು ನೆನಿಸಿಕೊಂಡರೆ ಆತನ ಕಣ್ಗಳಲಿ ಲಿಂಗಮೂರ್ತಿ, ವಾಕ್ಕಿನಲಿ ಲಿಂಗಕೀರ್ತಿ, ಚಿತ್ತದಲ್ಲಿ ಲಿಂಗಪ್ರೀತಿಗಳು ಎಷ್ಟೊಂದು ತುಂಬಿ ತುಳುಕುತ್ತಿದ್ದವೆಂಬದನ್ನು ಯಾವ ಶಬ್ದಗಳಿಂದ ಹೇಳೋಣ ! ಇನಿತು ಭಾವರತಿ ಬಲಿದು, ಬಂದಂತೆ ಬಗೆದು, ಪುಟವೇರಿ ಬಲ್ಪೇರಿ, ದಳವೇರಿ, ಕಳೆಯೇರಿ, ಸಡಗರಿಸಿ-ತರಹರಿಸಿ, ಲಿಂಗಮೂರ್ತಿಯ ಪೂಜಿಸುವುದನು ನೋಡಿದರೆ ಆತನಿಗಾದ ಆನಂದ ಎಷ್ಟೆಂದು ಬಣ್ಣಿಸೋಣ !!

ಆ ಅವಸ್ಥೆಯು ಬರಬೇಕಾದರೆ ಸರ್ವೇಂದ್ರಿಯಗಳು ಶಿವನತ್ತ ಧಾವಿಸುತ್ತಿರಬೇಕು. ಇದಿಲ್ಲದೆ ಮನಸ್ಸಿನೊಳಗೊಂದಿಟ್ಟು ಮೇಲೆ ಮಾತ್ರ ಮಾಡುವ ಪೂಜೆ ಪೂಜೆಯಲ್ಲ. ಮತ್ತೊಬ್ಬರೊಡನಾಡುತ್ತ ಹೇಳುವ ಮಂತ್ರ

ಮಂತ್ರವಲ್ಲ. ಮುಗದೊಂದು ನೋಡುತ್ತ ಮಾಡುವ ಪೂಜೆಯೂ ಪೂಜೆಯಲ್ಲ. ಅವೆಲ್ಲವನ್ನೂ ತಡೆಯಬೇಕು; ಹ್ಯಾಹ ಕಟ್ಟಿ ಒಂದೆಡೆಗೆ ನಿಲ್ಲಿಸಬೇಕು. ಅಂದರೆ ಮನವು ಶಿವನನ್ನೇ ನೆನೆಯುತ್ತಿರಬೇಕು. ಬಾಯಿ ಭಾಲಾಕ್ಷನನ್ನೇ ಬಣ್ಣಿಸುತ್ತಿರಬೇಕು. ಕಣ್ಣು ಮುಕ್ಕಣ್ಣನನ್ನೇ ಕಾಣುತ್ತಿರಬೇಕು. ಈ ತೆರನಾಗಿ ಮೈಮರೆತು, ಮನಬೆರೆತು ಅರ್ಚಿಸುವದೇ ನಿಜವಾದ ಲಿಂಗಾರ್ಚನೆ; ಅದೇ ನಿಜವಾದ ಲಿಂಗಭಕ್ತಿ; ಅದೇ ನಿಜವಾದ ಲಿಂಗೈಕ್ಯ. ಆದನ್ನೇ —

> "ಅಷ್ಟವಿಧಾರ್ಚನೆಯು ಷೋಡಶೋಪಚಾರವ ಮಾಡುವದು. ಮಾಡಿದ ಪೂಜೆಯ
> ನೋಡುವದಯ್ಯ. ಶಿವತತ್ವಗೀತವ ಪಾಡುವದು. ಶಿವನ ಮುಂದೆ ನಲಿನಲಿದಾಡುವ
> ದಯ್ಯ. ಭಕ್ತಿ ಸಂಭಾಷಣೆಯ ಮಾಡುವದು. ನಮ್ಮ ಕೂಡಲಸಂಗಯ್ಯನ ಕೂಡುವದು."

ಎಂದು ಭಕ್ತಿ ಭಾಂಡಾರಿಯಾದ ಬಸವಣ್ಣನೂ ಬಲು ಸೊಗಸಾಗಿ ಬಣ್ಣಿಸಿದ್ದಾನೆ. ಇದಕ್ಕೂ ನಮ್ಮ ಚನ್ನಯ್ಯಗಳ ಆಚರಣೆಗೂ ಯಾವ ಭೇದವಿಲ್ಲ. ಆತನ ಭಕ್ತಿಪರವಶತೆಗೆ ಪ್ರತಿಯಿಲ್ಲ.

ಭಕ್ತಿಲಂಪಟನಾದ ಭಾಳಲೋಚನನು ಭಕ್ತಿ (ಪ್ರೇಮ) ದಿಂದಲ್ಲದೆ ಬೇರೆ ಸಾಧ್ಯವಲ್ಲ. ಏಕೆಂದರೆ ಪರಮಾತ್ಮನು ಪ್ರೇಮಸ್ವರೂಪನಾಗಿದ್ದಾನೆ. 'ಪ್ರೇಮವು ಪ್ರೇಮವನ್ನು ಹುಟ್ಟಿಸುತ್ತದೆ' ಎಂಬ ಆಂಗ್ಲೋಕ್ತಿಯಂತೆ ಪ್ರೇಮವೇ ಪರಮಾತ್ಮನನ್ನು ಪಡೆಯಲು ಪರಮ ಸಾಧನವು. ಅದೊಂದನ್ನು ಬಿಟ್ಟು ಆತನಿಗೆ ಅರ್ಪಿಸತಕ್ಕ ಬೇರೆ ಪದಾರ್ಥವೇ ಇಲ್ಲ. ಸರ್ವಭರಿತನಾದ ಶಿವನಿಗೆ ನಾವೇನು ಅರ್ಪಿಸಬೇಕಾಗಿದೆ? ಮಗುವು ಮಾತೆಗೆ ಅರ್ಪಿಸುವದೇನು? ಮಮತೆಯೊಂದನ್ನಲ್ಲವೇ? ಹಾಗೆ ಚನ್ನಯ್ಯಗಳು ಶಿವನಲ್ಲಿ ಶುದ್ಧ ಪ್ರೇಮವನ್ನಿಟ್ಟು ಸಂತಸದೆ ಬೀಗಿ, ಸಂಭ್ರಮದಿ ಕೂಗಿ, ಆ ಪ್ರೇಮದುದ್ರೇಕದಿಂದ ಮೆಲ್ಲನೆಚ್ಚತ್ತು—

ಹಸಿದೆಯ್ಯ ಎನ್ನ ಜೀವದ ಜೀವವೇ ಎಂದು ।<br>
ಉಸಿರ ಸಂತೈಸುತೋವುತ್ತೆ ಹತ್ತಿರ ಬಂದು ॥<br>
ಜಂಬೂಫಳಂ ಚೂತಫಳವನೊಲವಿಂ ಕರಂ ।<br>
ಇಂಬಿನಲ್ಲಾರೋಗಿಸಲ್ಕೊಟ್ಟನಂತರಂ ॥

'ಎನ್ನವನೆ, ಎನ್ನವನೆ' ಎಂದು ಕರೆವ ಕಣ್ಣಪ್ಪನ ನುಡಿಯಲ್ಲಿ ತೋರುವ ಒಂದು ಬಗೆಯ ಭಿನ್ನಭಾವವು 'ಎನ್ನ ಜೀವದ ಜೀವವೇ' ಎಂದು ಸಂಬೋಧಿಸುವ ಚನ್ನಯ್ಯಗಳ ಈ ಚನ್ನುಡಿಯಲ್ಲಿ ತೋರುವದೇ? ಆಹಾ! ಎಂಥ ಜಾಣ್ಣುಡಿಯಿದು; ಎಂಥ ಐಕ್ಯಭಾವವಿದು.

ಓ ದೇವ! ಪೂಜಿಸಿ ಪ್ರಸಾದವನ್ನು ಅರ್ಪಿಸಲು ಮರತೆ. ನಿಜವಾಗಿ ಹಸಿವೆಗೊಂಡಿರಬೇಕು ಎಂದು ಶಿವನೊಡಲವೇ ತಾನಾಗಿಹನೋ ಎಂಬಂತೆ 'ಎನ್ನ ಜೀವದ ಜೀವವೇ, ಹಸಿದಯ್ಯ ಹಸದಿ, ನಿಜವಾಗಿಯೂ ಹಸಿದಿರುವಿ. ಆನಂದಭರದಲ್ಲಿ ಅರ್ಪಿಸಲು ಮರೆತ ಮಹಾಪರಾಧಿ ನಾನು, ಎಂಬುವಂತೆ ಉಸಿರು ಹಿಡಿಹಿಡಿದು ಬಿಡುತ್ತ ಶಿವನ ಸಮೀಪಕ್ಕೈತಂದು 'ಓ ತಂದೆ, ನಾ ಬಂದೆ, ನಿನಗಾಗಿ ನೀರಲ-ಮಾವಿನ ಫಲಗಳನ್ನು ತಂದೆ, ಇದೋ ತೆಗೆದುಕೋ' ಎಂದು ಆರೋಗಿಸಲು ಕೊಡುವನು. ಕೊಟ್ಟುದನ್ನು ಶಿವನು ಕೈಕೊಳ್ಳಲು ಆ ಚನ್ನಯ್ಯನು ಆನಂದಾತಿಶಯದಿಂದ—

ತೂಪಿರಿದು ಕಾಪಿಟ್ಟು ಕಣ್ಗಳೊಳಗೊತ್ತುತುಂ ।
ಭಾಪು ಭಾಗ್ಯವೇ ಎಂದು ಕೊಂಡಾಡಿ ಹೆಚ್ಚುತುಂ ॥
ಕರುಣ ಪ್ರಸಾದಮಂ ಪ್ರೀತಿಯಿಂ ಕೈಕೊಂಡು ।
ಹರನ ಕಾರುಣ್ಯಮಂ ತಾನೊಚ್ಚತಂ ಗೊಂಡು ॥

ಇನಿತು ಹರುಷದಿಂ ಹೊರೆಯೇರಿ, ನೇಹದಿಂ ಕಳೆಯೇರಿ, ಕೊಂಡಾಡಿ-ಮುಂಡಾಡಿ, ಆ ಲಿಂಗಪ್ರಸಾದವನ್ನು ತಾನೂ ಕೈಕೊಂಡು, ಹರನ ಕಾರುಣ್ಯವ ಪಡೆದುಕೊಂಡು, ಬಾಹ್ಯಸ್ಮರಣೆಯಲ್ಲಿ ಬನದ ಸಿರಿಯಲ್ಲಿ ಒಂದು ನಿಲ್ಲುವನು- ಕಾಯಕವು ನೆನಪಾಗಿ, ಕುದುರೆಗೆ ಹುಲ್ಲನ್ನು ಕೊಯ್ದು ಎತ್ತಿನ ಮೇಲೆ ಹೇರಿ, ತಾನು ಶಿವಪೂಜೆಯಿಂದ ಸಂದಣಿಸ ಪುಳಕಮಂ ತನ್ನ ಮೈಯಲ್ಲಿ ಹೇರಿ, ನಡೆತಂದು ಚೋಳರಾಜನ ಅಶ್ವಶಾಲೆಯ ಮುಂದೆ ವೇಳೆಗೆ ಸರಿಯಾಗಿ ಹುಲ್ಲು ಹೊರೆಯನು ಚಲ್ಲಿ, ಬಳಲಿ ಭರದಿಂದ ಮನೆಗೆ ಬಂದು ಕುಳ್ಳಿರುವದೇ ತಡ, ಮತ್ತೆ ಲಿಂಗಧ್ಯಾನ. ಇತ್ತ ಕಡು ಬಡವೆಯರಾದ ಆ ಚನ್ನಯ್ಯಗಳರಸಿಯರು ಶಿವನಿತ್ತುದನ್ನೇ ಭಕ್ತಿಯಿಂದ ಬೋನಮಂ ಮಾಡಿ, ತಂದುಣಬಡಿಸಲು, ಧ್ಯಾನಾಮೃತ ಮತ್ತರಾದ ಚನ್ನಯ್ಯಗಳು ಉಳ್ಳುದೇ ಅಮೃತವೆಂದು ಭಾವಿಸಿ, ಶಿವ

ಲಿಂಗಕ್ಕೆ ಸುಖದಿಂದರ್ಪಿಸಿ ಆ ಲಿಂಗಪ್ರಸಾದವನ್ನು ಪ್ರೀತಿಯಿಂದ ಕೈಕೊಂಡು ತೃಪ್ತರಾಗುತ್ತಿದ್ದರು.

ಈ ತೆರದೊಳವರುವತ್ತು ವರುಷಗಳುರುಳೆ ಹರನು ಗುಪ್ತ ಭಕ್ತನಾದ ನನ್ನೀ ಚನ್ನನನ್ನು ಧರೆಯೊಳದೆಂದು ಮೆರೆಯಿಸಲಿ, ಮಹಾಪದವಿಯನೀಯಲಿ, ಎಂದು ಯೋಚನೆಯೊಳಗಾಗುವನು. ಇತ್ತ ಚನ್ನಯ್ಯಗಳು ಎಂದಿನಂತೆ ಹೊಲಕ್ಕೆ ಹೋಗಿ, ಹೊಳೆಯ ಧಡಕ್ಕೆ ಬಂದು, ಹರನ ಪೂಜೆಯ ಮಾಡಿ, ಹರುಷವೇರಿ ಆಡಿ-ಹಾಡಿ ಮೈಮರೆತಿರಲು ಒಮ್ಮೆಲೆ ಕಾಯಕದ ನೆನಪಾಗಿ ಎಚ್ಚತ್ತು ವೇಳೆಮಿಕ್ಕುವದೆಂದು ವೇಗದಿಂದ ವನದೊಳಗೆ ಹೋಗಿ, ಬೇಗ ಬೇಗ ಹುಲ್ಲೊಯ್ದು ಎತ್ತಿನ ಮೇಲೆ ಹೊರೆ ಹೇರಿ ಗಳಗಳನೆ ಹೊಡೆತಂದು ಅಶ್ವಶಾಲೆಯಲ್ಲಿ ಹುಲ್ಲು ಹೊರೆಯನಂ ಒಗೆದು, ಸೊಂಪೇರಿ ಮನೆಗೆ ಬಂದು ಚಿತ್ತದೊಳ್ ಕೃತ್ತಿವಾಸನ ನೆನೆಯುತ್ತ ಕುಳ್ಳಿರಲು, ಅರಸಿಯರು ಅಂಬಲಿಯ ತಂದು ಎಡೆಬಡಿಸಿ, ಉಪ್ಪುಗಾಯುಂ ಹಚ್ಚಿ, ಶಾಕಪಾಕಂಗಳಂ ನೀಡಿ ನಿಲ್ಲುತಿರೆ, ಅದನ್ನು ಚನ್ನಯ್ಯಗಳೊಲವಿಂದ ಲಿಂಗಾರ್ಪಿತವ ಮಾಡಿ, ಮನವಿಟ್ಟು ಕೈಯಿಟ್ಟು ಭಕ್ತಿರಸವನು ಬೆರಿಸಿ ಕೈಕೊಳ್ವಲ್ಲಿ ಆ ಅಂಬಲಿಯ ಸವಿ ಜಿಹ್ವೆಯುಂ ಮುತ್ತಿ, ಶಿವಲಿಂಗಮುಂ ತಾಗೆ ಅಮೃತದ ಸವಿಗಿಂತ ಅಂಬಲಿಯ ಸವಿ ನೂರ್ಪಾಲು ಸಾಸಿರಪಾಲು ಹೆಚ್ಚಾಗುವದು. ಆ ಸವಿಗೆ ಶಿವನು ಲವಲವಿಸಿ—

> "ಕೊಂಡನೇನೆಂಬೆನಾಂ ಚನ್ನಯ್ಯನೊಂದಾಗಿ ।
> ಉಂಡನಭವಂ ಸ್ವರ್ಗಮರ್ತ್ಯಕ್ಕೆಪೊಸತಾಗಿ ॥
> ಒಂದು ಸುರಿಯೊಳಗೆ ಕೈವಂದುದೇ ಶಿವಪದಂ ।
> ಮುಂದೆ ಸವಿದರ್ಪಿಸುವದಕ್ಕಿಲ್ಲ ಘನಪದಂ ॥
> ಎಂದಂಜಿಕೊಂಡನಾಶಿವನು ........ " ।

ಕವಿಯು ಚನ್ನಯ್ಯನಂಬಲಿಯ ಸವಿಯ ಘನತೆಯನ್ನು ಎಷ್ಟೊಂದು ಸೊಗಸಾಗಿ ಚಿತ್ರಿಸುವನು ನೋಡಿ! ಸ್ವರ್ಗ ಮರ್ತ್ಯಗಳೆರಡಕ್ಕೂ ಪೊಸತಾಗಿ ಹರನುಂಡ ಊಟವನು ಇನ್ನಾವ ಶಬ್ದಗಳಿಂದ ಬಣ್ಣಿಸೋಣ!! ಸಾಕ್ಷಾತ್ ಶಿವನೇ ಮನಸೋತ ಚನ್ನಯ್ಯನಂಬಲಿಯ ಸವಿಯನ್ನು ಹೀಯಾಳಿಸುವ ಸುಧೆಯಾವುದಿದೆ ಹೇಳಿ ನೋಡೋಣ !!! ಅಹಾ! ಭಕ್ತಿರಸದ ಸ್ವಾದವೇ ಆ ತೆರನಾದುದು. ಆ ಸ್ವಾದಕ್ಕೆ ಮೂಲೋಕದಲ್ಲಿಯೂ

ಪ್ರತಿಯಿಲ್ಲ. ಆ ಸವಿಯನ್ನು ಶಿವನೊಮ್ಮೆ ಸುರಿದು, ಆ ಸುರಿತಕ್ಕೆ ಸರಿಯಾದ ತನ್ನ ಪದವನ್ನೇ ಕೊಟ್ಟು ಬಿಟ್ಟನಂತೆ. ಆ ಮೇಲೆ ಮತ್ತೊಮ್ಮೆ ಸುರಿಯಬೇಕೆಂದರೆ ಅದಕ್ಕೇನು ಕೊಡಲಿ, ಎಂದು ಅಂಜಿಕೊಂಡನಂತೆ. ಕೇಳಿ ಎಂತಹ ಮಾತಿದು. ನೋಡಿ ಭಕ್ತಿರಸದ ಭವ್ಯ ದಿವ್ಯ ಪ್ರಭಾವವನು. ಈ ತೆರನಾದ ಚನ್ನಯ್ಯಗಳ ಅಂಬಲಿಯ ಅನನ್ಯವಾದ ಅಮೃತದ ಸವಿಯನ್ನು ಸವಿದು ಸವಿಗಲಿತ ಶಿವನು, ಕಣ್ಣಪ್ಪನರ್ಪಿಸಿದ ಖಂಡ ಮಾಂಸಕ್ಕೆ ಮನವೆಳಿಸದೆ ಭೂತಸಂಕುಳಕೆ ಹಂಚಿದನೆಂದು ಹೇಳುವಲ್ಲಿ ಆಶ್ಚರ್ಯವೇನು ?

ಪರಮಾತ್ಮನಲ್ಲಿ ಪ್ರೇಮವೊಂದನ್ನಿಡದೆ ಬೇರೆ ಬೇಕಾದಂಥ ನೇಮವನ್ನಿಟ್ಟುಗೊಂಡರೂ ಅವೆಲ್ಲ ವ್ಯರ್ಥ. ಅವುಗಳಿಂದ ದೇವಾನುಗ್ರಹವನ್ನು ಪಡೆಯಲು ಸಾಧ್ಯವಿಲ್ಲ. ಆತನಲ್ಲಿ ಕೇವಲ ಸಾತ್ವಿಕವಾದ ನಿರ್ಹೇತುಕವಾದ ಪ್ರೇಮ (ಭಕ್ತಿ) ವೊಂದಿದ್ದರಾಯಿತು. ಅದರೊಡನೆ ಬೇರೆ ಯಾವದನ್ನರ್ಪಿಸಿದರೂ ಅದು ಆತನಿಗೆ ಅಮೃತ. ಅವನೇ ಆತನಿಗೆ ಪರಮ ಭಕ್ತ.

"ಹಾಲ ನೇಮ, ಹಾಲಕೆನೆಯ ನೇಮ, ಕೆನೆಯ ತಪ್ಪಿದ ಬಳಿಕ
ಕಿಚ್ಚಡಿಯ ನೇಮ.
ಬೆಣ್ಣೆಯ ನೇಮ, ಬೆಲ್ಲದ ನೇಮ, ಅಂಬಲಿಯ ನೇಮದವರಾರನೂ
ಕಾಣೆ. ಕೂಡಲ
ಸಂಗನ ಶರಣರಲ್ಲಿ ಅಂಬಲಿಯ ನೇಮದಾತ ಮಾದಾರಚನ್ನಯ್ಯ."

ಮನವೊಂದಿಲ್ಲದೆ ಇಲ್ಲದ ನೇಮವ ಹಿಡಿದು, ಮಾಡಿ. ನೀಡಿ ಕೆಟ್ಟು ಹೋಗುವವರೇ ಬಹಳ. ಇದ್ದುದ ವಂಚನೆಯ ಮಾಡದೆ, ಪ್ರತಿಫಲ ವಾಂಛಿಸದೆ, ಪ್ರೇಮಪರವಶರಾಗಿ ಶಿವನಿಗರ್ಪಿಸುವವರು ವಿರಳ. ಇಂಥವನು ನಮ್ಮ ಮಾದರ ಚನ್ನಯ್ಯನೊಬ್ಬನಲ್ಲದೆ ಇನ್ನಾರನು ಕಾಣೆ ಎಂದು ಬಸವಣ್ಣನು ಚನ್ನಯ್ಯಗಳ ಮೇಲಣ ಪ್ರೇಮದ ಭರ ಹರಿಯದೆ ಮೇಲಿಂದ ಮೇಲೆ ಇನಿತು ಬಣ್ಣಿಸುವನು.

"ಎನಗೆ ಗುರುವಿನ ಪ್ರಸಾದ. ನಿನಗೆ ಚನ್ನನ ಪ್ರಸಾದ. ಎನಗೆಯೂ ನಿನಗೆಯೂ ಸಮಯಾಚಾರ ಸರಿ. ಕೂಡಲಸಂಗಮದೇವಾ ! ನೀನೆನಗೆ ಚಿಕ್ಕ ತಮ್ಮ." ಚನ್ನನ ಪ್ರಸಾದಕ್ಕೆ ಪರಮಾತ್ಮನು ಎಷ್ಟೊಂದು ಮನಸೋತಿದ್ದನೆಂಬುದು ಇದರಿಂದ ನಮಗೆ ಚೆನ್ನಾಗಿ ತಿಳಿದುಬರುತ್ತದೆ. ಇದಲ್ಲದೆ ಬಸ

ವಣ್ಣನವರಿಗೆ ಪ್ರತಿಯೊಂದು ಮಾತಿಗೂ ಚನ್ನಯ್ಯನವರನ್ನು ಬಣ್ಣಿಸದಿದ್ದರೆ ಸಮಾಧಾನವಿದ್ದಿಲ್ಲ; ಶಾಂತಿಯಿದ್ದಿಲ್ಲ. ಇದರಿಂದ ಚನ್ನಯ್ಯಗಳ ನಡತೆಯು ಬಸವಣ್ಣನವರ ಹೃದಯದಲ್ಲಿ ಎಷ್ಟೊಂದು ಆಳವಾಗಿ ಇಳಿದು ಮನೆಮಾಡಿಕೊಂಡಿತ್ತೆಂಬುದು ವ್ಯಕ್ತವಾಗುತ್ತಿದೆ.

ಹೀಗೆ ಶಿವನು ಚನ್ನನೊಡನೆ ಅಮೃತಪ್ರಾಯವಾದ ಅಂಬಲಿಯನುಂಡು ಸುಖದಿಂದಿರಲು ಸೂರ್ಯೋದಯವು ಸಮನಿಸಿದೆ. ನಿತ್ಯ ನೇಮದಂತೆ ಚೋಳರಾಜನು ಪೂಜೆಗೈಯಲು ದೇವಾಲಯಕ್ಕೆ ಬಂದಿದ್ದಾನೆ. ದೇವರಿಗೆ ಕೈಮುಗಿದು ವಾಮಭಾಗದಿ ಕುಳಿತು, ಷೋಡಶೋಪಚಾರದಿಂದ--ರಾಜೋಪಚಾರದಿಂದ ಪೂಜಿಸಿದ್ದಾನೆ. ಆಮೇಲೆ ಪ್ರದಕ್ಷಣೆಮಾಡಿ ಪೊಡಮಟ್ಟು, ನವವಸ್ತ್ರಗಳನ್ನೂ ನೂತನರತ್ನಗಳನ್ನೂ ತರಿಸಿ ಶಿವಲಿಂಗಕ್ಕಲಂಕರಿಸಿ, ನೇಹದಿಂ ನೋಡಿ, ಮುದದಿಂ ಹಾಡಿ ನಲಿನಲಿದು ರಾಜೋಪಚಾರದಿಂದಿಂತು ಎಡೆಬಡಿಸುವನು. ರನ್ನದಡ್ಡಣಿಗೆಗಳಮೇಲೆ ಹೊನ್ನಹರಿವಾಣಗಳನಿರಿಸಿದ್ದಾನೆ. ದೇವಾನ್ನ-ದಿವ್ಯಾನ್ನ ಅಮೃತಾನ್ನಗಳನ್ನು ಬಡಿಸಿದ್ದಾನೆ. ಮೇಲೆ ಶಾಕಂಗಳನಿರಿಸಿ, ಹಪ್ಪಳಗಳನ್ನಿಟ್ಟು, ಚಲುಪಾಲಬಟ್ಟಲಗಳನಣಿ ಮಾಡಿದ್ದಾನೆ. ಕಂಪು ತುಪ್ಪ-ಕೆನೆಮೊಸರು-ಸಕ್ಕರೆಗಳೆಲ್ಲವನ್ನು ಎಡೆಮಾಡಿ, ಜವನಿಕೆಯಿಂದ ಮುಚ್ಚಿ, ಓ ಮೃಡನೆ! ಶರಣಾಗತರಕ್ಷಕನೆ !! ಆರೋಗಿಸೆಂದೊಲವಿಂದ ನಮಸ್ಕರಿಸಿ, ಜವನಿಕೆಗೆ ಕಿವಿಗೊಟ್ಟು ನಿಲ್ಲುವನು. ಶಿವನು ತನ್ನ ಮುಂದಿರಿಸಿದ ರಾಜಾನ್ನಗಳನ್ನು ಸ್ವಲ್ಪೂ ಮುಟ್ಟದೆ ಸುಮ್ಮನಿರಲು ಎಂದಿನಂತೆ ಉಂಬ ಬಾಯ್ದನಿಯು ಇಂದೇಕೆ ಕೇಳಲೊಲ್ಲದು ? ಎಂದು ಅರಸನು ಶಂಕಿಸಿ ಶೀಘ್ರದಿಂದ ಜವನಿಕೆಯ ತೆಗೆದು ನೋಡುವನು. ಶಿವನು ಎಷ್ಟೂ ಪರಕಿಸದೆ, ಲಿಕ್ಕಿಸದೆ, ಕಂಪಿಸದೆ ಇರುವದನ್ನು ಕಂಡು ಕಳವಳಿಸಿ, ಕೆಟ್ಟೆನೆಂದು ಕೂಗಿ ಓ ಪಶುಪತಿಯೆ! ಇಂದೇಕೆ ಉಣಲೊಲ್ಲೆ! ಇಂದು ಅನುಗ್ರಹಿಸದೆ ಕುಪಿಸಲು ಕಾರಣವೇನು ? ನಿನ್ನೊಲುಮೆಯಿಲ್ಲದೆ ಈ ವಸುಮತಿಯೂ ಈ ಅಸುಗಳೂ ಇದ್ದೇನು ಫಲ? ಎಂದು ನಿಂದಿಸಿಕೊಳ್ಳುತ್ತ ಕತ್ತಿಯನ್ನು ಹಿರಿದು ಕತ್ತನ್ನು ಕತ್ತರಿಸಿಕೊಳ್ಳಲು ಪ್ರಾರಂಭಿಸುವನು. ಇದನ್ನು ಶಂಕರನು ನೋಡಿ, ಓಹೋ! ವಿಚಾರವಿಲ್ಲದೆ ಇಂತು ಮಾಳ್ಪುದೇ? ನಿನ್ನರಸುತನವೆನಗೆ ತೋರುವದೇ ? ಬೇಡ ಬೇಡ. ಎಲೋ

ಚೋಳಭೂಪನೇ! ನಿನಗಿನಿತು ಸಹ ಸೈರಣೆಯಿಲ್ಲವಲ್ಲ! ನಾವು ಚನ್ನ ನೊಡನೆ ಉಂಡಿರುವೆವಾದ್ದರಿಂದ ನಮಗಿಂದು ಹಸಿವಿಲ್ಲ.

ಕೇಳಂಬಕಳದ ಸವಿಯದನೇನನೆಂದಪೆಂ। ಚೋಳಾದಿಗಳ್ ಪಡೆಯರದ ನೆಂತು ಬಣ್ಣಿಪೆಂ ||

ಪಾಕದಿಂದಿಪ್ಪ ವಸ್ತುಗಳದಕೆ ಪಡಿಯಿಲ್ಲ। ಲೋಕದೊಳ್ ಕಾಣೆನಾಂ ಪೇಳ್ವೊಡಂ ಪ್ರತಿಯಿಲ್ಲ ||

ದೇವಾನ್ನ ದಿವ್ಯಾನ್ನವೆಂಬುದಂ ನೇಳಿಪುದು। ಭಾವಿಸುವೊಡಿನ್ನದಂ ಪೆಸರಿಡಲ್ಕೇನರಿದು ||

ಕ್ಷೀರ ಮಧುಗಳ ರುಚಿಯುದಕ್ಕೆ ಕೇಳ್ಸರಿಯಿಲ್ಲ। ಹಾರಯಿಸಿ ಸವಿಯುಳ್ಳ ಸಕ್ಕರೆಯುಮೆಣೆಯಿಲ್ಲ ||

ಎಂದು ಶಿವನಾ ಲಿಂಗದೊಳ್ ಪೊಕ್ಕನಾಕ್ಷಣಂ। ನಿಂದುಚೋಳಂ ಕೌತುಕಂಬಟ್ಟನಾಕ್ಷಣಂ ||

ಇದನ್ನು ಕೇಳಿ ಚೋಳಭೂಪನು ಬೆರಗಾಗಿ ಬೆಚ್ಚಿ ಬಿದ್ದಿದ್ದಾನೆ. ಏನು? ಮಾದರ ಚನ್ನನ ಮನೆಯಲ್ಲಿ ಮಹಾದೇವನುಂಡನೇ? ಎಂದು ಚಿಂತೆ ಯಲ್ಲಿ ಮಗ್ನನಾಗುವನು. ಆಮೇಲೆ ಚಿಂತೆಯಿಂದೆಚ್ಚತ್ತು ಶಿವನಿಗುಣ ಬಡಿಸಿದ ಚನ್ನಶರಣನನ್ನು ಇಂತು ಕಂಡೆನೆ? ಅಯ್ಯೋ ಮುಂದೆ ಎಂತು ಕಾಣುವೆನು? ಹರುಷದಿಂದವನ ಚರಣಕ್ಕೆ ಎಂದು ಬಾಗಿ ಬೀಗುವೆನ.? ಎಂದು ಚೋಳನಿಗೆ ಚನ್ನಯ್ಯಗಳಲ್ಲಿ ಆದರಾತುರಗಳುಕ್ಕಿ ತಾನು ರಾಜ ನಾಗಿದ್ದರೂ ಕಾಲ್ನಡಿಗೆಯಿಂದ ಚನ್ನನನ್ನು ಹುಡುಕಲು ಹೊರಡುವನು! ಸುತ್ತಲೂ ಸೇವಕರು-ರಾಜಕುವರರು ನೆರೆದು ಬೆಂಬತ್ತಿದ್ದಾರೆ. ಚೋಳ ರಾಜನ ಮನದಲ್ಲಿ ಚನ್ನನ ಕೀರ್ತಿತುಂಬಿ, ಕಣ್ಣಲ್ಲಿ ಮೂರ್ತಿತುಂಬಿ ಹಾದಿಹಾದಿಯಲ್ಲಿ ನಿಂತವರನ್ನು ನೆರೆದವರನ್ನು ಕೇಳಹತ್ತಿದ್ದಾನೆ. ತನ್ನತ್ತ ಬಂದವರನ್ನು ಬರುವವರನ್ನು ಹೀಗೆ ಕೇಳಹತ್ತಿದ್ದಾನೆ--

ಸಕಲಗುಣ ಜಲಧಿ ಚನ್ನಯ್ಯನಂ ಕಂಡಿರೇ। ಅಕಳಂಕ ಚರಿತ ಚನ್ನ ಯ್ಯನಂ ಕಂಡಿರೇ ||

ಎನ್ನಗತಿ ಎನ್ನಮತಿ ಚನ್ನನಂ ಕಂಡಿರೇ। ಎನ್ನ ನಿಧಿ ಎನ್ನ ಸುಧೆ ಚನ್ನನಂ ಕಂಡಿರೇ ||

ಶಿವನ ಸದ್ಭಕ್ತನಂ ಚನ್ನನಂ ಕಂಡಿರೇ। ಶಿವನಂತರಂಗವೊಳಭಿನ್ನನಂ ಕಂಡಿರೇ ||

ಗುರುಲಿಂಗದೊಡನುಂಡ ಚನ್ನನಂ ಕಾಣಿರೇ। ಪುರಹರಂಗುಣಲಿತ್ತ ಚನ್ನನಂ ತೋರಿರೇ ||

ಹೀಗೆ ಕೇಳಿಕೇಳಿದಂತೆ ಆತನ ಹೃದಯದಲ್ಲಿ ಉತ್ಕಂಠತೆಯು ಹೆಚ್ಚು ಹೆಚ್ಚುತ್ತ ಹೋಗಿದೆ. ಹೆಚ್ಚಾಗಿ ರೂಪುಗೊಂಡು ನರ್ತಿಸಹತ್ತಿದೆ. ಕೊನೆಗೆ ಚನ್ನನ ವಿರಹ ಸಂತಾಪವು ಶಬ್ದರೂಪಗೊಂಡು ಮುಖದಿಂದ ಮತ್ತೆ ಮತ್ತೆ ಈ ಪರಿ ಹೊರಬೀಳತೊಡಗಿದೆ--

ತೋರಿರೇ ಚಂದ್ರಮೌಲಿಯ ಭಕ್ತ ಚನ್ನನಂ ತೋರಿರೇ। ಷಡ್ವರ್ಗಕರ್ಣನಂ ಚನ್ನನಂ ॥
ಚನ್ನನಂ ತೋರಿ ಎನ್ನಂ ಕಾಯ್ದುಕೊಳ್ಳಿರೇ। ಚನ್ನಯ್ಯ ನೆನ್ನಯ್ಯ ನಿರ್ದೆಡೆಯನರುಪಿರೇ ॥
ಚನ್ನಯ್ಯನಿರ್ಪಗುಡಿಯಿದೇ ಎಂದು ತೋರಿರೇ। ಚನ್ನಯ್ಯ ಭಕ್ತನೆನ್ನಯ್ಯನಂ ತೋರಿರೇ ॥
ಅಯ್ಯೋ ಮಹಾದೇವ ಆವೊಳ್ತು ಕಾಣ್ಬೆನೇ। ಅಯ್ಯನಪದದ್ವಯವನೆಂದಪ್ಪಿಕೊಳ್ವೆನೇ ॥

ಎಂದು ಮುಂತಾಗಿ ಚನ್ನಯ್ಯನ ಚಿಂತೆ ಚೋಳರಾಜನ ಚಿತ್ತವನ್ನೆಲ್ಲಾ ವ್ಯಾಪಿಸಿಬಿಟ್ಟಿತ್ತು. ಪ್ರತಿಕ್ಷಣವೂ ಚನ್ನನ ಚಿತ್ರವು ಕಣ್ಣಿಗೆ ಕಟ್ಟಿದಂತಾಗುತ್ತಿತ್ತು. ಪ್ರತಿಸೊಲ್ಲಿನಲ್ಲಿಯೂ ಚನ್ನನ ಮಹಿಮೆ-ಮೇಲ್ಮೆಗಳು ಹೊರಬೀಳುತ್ತಿದ್ದವು. ಸಾಲದೆ ಚಾರರನ್ನು ಹುಡುಕಲು ಮುಂದೆ ಮುಂದೆ ಕಳುಹುವನು. ಆ ಚಾರರು ದೊಡ್ಡ ದೊಡ್ಡ ಕೇರಿಗಳಲ್ಲಿ ಹುಡುಕುತ್ತ ಚನ್ನನಿರುವ ಮನೆಯಾವುದೆಂದು ಕೇಳುತ್ತ ಬರುತಿರಲು ಕೆಲವರು ಒಂದೇ ಸ್ವರದಲ್ಲಿ ಇದೇ ಇದೇ ಎಂದು ತೋರುವರು.

ಬಾಗಿಲ ಬಳಿಗೆ ಬಂದ ನೃಪಚಾರರನ್ನು ಕಂಡು ಒಳಗಿರುವ ಚನ್ನಯ್ಯನತಿಕಂದಿ ಕುಂದಿ ಇದೇನೆನುತ ಇಣಿಕಿ ನೋಡಿ -- ಓ! ಅರಮನೆಯ ಚಾರರೇ? ಇವರೇಕೆ? ಎಂದು ಎದೆಗುಂದಿ ನಿಲ್ಲುವಷ್ಟರಲ್ಲಿ ಎದುರಿಗೆ ಬರುವ ಅರಸನನ್ನು ಕಂಡು ಅತ್ಯಂತವಾಗಿ ಖತಿಗೊಂಡು ಹೇ ದೇವಾ! ಅರಸನೇಕೆ ಈ ತಿರುಕನ ಮನೆಗೆ? ಏನಿದು ನಿನ್ನ ತಂತ್ರ! ಒಂದು ವೇಳೆ ಬಂದರೂ ಚಿಂತೆಯಿಲ್ಲ. ನನ್ನನ್ನು ನಿನ್ನ ಭಕ್ತನೆಂದರಿಯದಿರ್ದಡೆ ಬದುಕುವೆನು. ಇಲ್ಲವಾದರೆ ಎಂತು ನಾ ಮುಂದೆ ನಾ ಬಾಳುವದು? ಶಿವಶಿವಾ! ರಾಜನು ಬಂದೇ ಬಿಟ್ಟನು. ಏತಕ್ಕಾಗಿಯೋ? ಏನಾಗುವದೋ? ಅವಿಚಾರದಿಂದ ಹೀಗೆ ಮಾಡುವದು (ಹೇಳಿ ಕಳುಹುವದು) ಉಚಿತವೇ

ದೇವಾ! ಎಂದು ಚನ್ನಯ್ಯಗಳು ಚಿಂತಿಸುತ್ತಿರಲು ಚೋಳನ ಚಾರರು ಬಂದು ಗುಡಿಸಲವನ್ನು ಮುತ್ತುವರು; ಮುದದಿಂದ ಜಯಘೋಷವನ್ನು ಮಾಡುವರು; ಚನ್ನಯ್ಯಗಳನ್ನು ಕಂಡು ಚರಣಗಳಿಗೆ ಬಾಗುವರು. ಅಷ್ಟರಲ್ಲಿಯೇ ಉದ್ಘೋಷಿಸುವ ರಾಜಪುತ್ರರ ನಡುವೆ ಬರುವ ಸಮ್ಯಜ್ಞಾನಿ ಸತ್ಯಪ್ರಾಣಿಯಾದ ಚೋಳರಾಜನೂ ಸದ್ಭಕ್ತಿಯಿಂದಲ್ಲಿಗೆ ಗಳಗಳನೆ ಬಂದು—

ಭಕ್ತಿಗುಡಿಸಿರ್ದಗುಡಿಸಲೊಳಿರ್ಪನಂ ಕಂಡು ।
ಮುಕ್ತಿಮೂವಡಿಸಿ ಮುಂದಡಸಿರ್ದನಂ ಕಂಡು ॥
ಪುಳುಕಿಸುತೆ ಪುಟವೇರುತುಬ್ಬುತುಂ ಕೊಬ್ಬುತುಂ ।
ಇಳಿವಶ್ರು ಜಲದಿಂದೆ ಮೂಡುತುಂ ಮುಳುಗುತುಂ ॥
ಎನ್ನೊಡೆಯನಿದನಿದನೆ ಚನ್ನಯ್ಯನೆಂದೆನುತ ।
ಎನ್ನಸುಧೆ ಇದನಿದನೆ ಚನ್ನಯ್ಯನೆಂದೆನುತ ॥
ಇಳುಪಿಪಂ ಸರ್ವಾಂಗಮಂ ಚನ್ನನಂಘ್ರಿಯೊಳ್ ।
ತೊಳತೊಳಗೆ ಮಣಿಮುಕುಟ ಕಾಂತಿಪದ ಭೂಮಿಯೊಳ್ ॥
......'ಪಾದಮಂ ಬಲ್ಪಿಡಿದು ಬಿಡೆನೆಂದು ಹೆಣಗುತಿರೆ.'

ಇಲ್ಲಿ ಕೊಂಚ ವರ್ಣನೆಯು ಒಡೆದು ತೋರುವಂತಿದ್ದರೂ ನಿಜವಾಗಿಯೂ ಚೋಳರಾಜನು ಚನ್ನಯ್ಯನನ್ನು ಚನ್ನಾಗಿ ಪ್ರೀತಿಸುವನೆಂದು ತೋರುವದು. ಏಕೆಂದರೆ ಸಹೋದ್ಯೋಗಿಗಳಲ್ಲಿ ಶ್ರೇಷ್ಠ ಪುರುಷರಲ್ಲಿ ಸ್ನೇಹಾದರಗಳು ಹುಟ್ಟುವದು ಸಹಜವಿದೆ. ಈ ಕಾರಣದಿಂದ ಚೋಳನಿಗೆ ಚನ್ನಯ್ಯಗಳಲ್ಲಿ ಒಲವು ಒಡಮೂಡಿ ಓಲಾಡಿ ಸರ್ವಾಂಗ ನಮಸ್ಕಾರ ಮಾಡಿ, ಕೊಂಡಾಡಿ ಓ ಎನ್ನ ಚನ್ನಯ್ಯ ಇನ್ನು ನಿನ್ನ ಪಾದವ ಬಿಡಲಾರೆ. ಬಡವನಿಗೆ ಭಾಗ್ಯದೊರೆತಂತಾಗಿದೆ. ಕುರುಡನಿಗೆ ಕಣ್ಬಂದಂತಾಗಿದೆ. ಎಂದು ಮುಂತಾಗಿ ಚೋಳರಾಜನು, ಭಕ್ತಿ ಬಲವನ್ನು ಮಾಡುವನು. ಆಗ ಚನ್ನಯ್ಯಗಳು—ಏನಯ್ಯ ಚೋಳಭೂಪಾಲ! ಸೂರ್ಯವಂಶದ ಮುಕುರ!! ನೀನಿಂತು ಬರುವುದುಚಿತವೇ? ಎನ್ನ ಕುಲ-ಜಾತಿಗಳನೆಣಿಸದೆ ನೀನಿಂತು ಬರುವುದೆ? ಸೂರ್ಯವಂಶದವರು ಶೂದ್ರರ ಮನೆಗೆ ಬರುವದು ನ್ಯಾಯವೇ? ಪಾಲಕರು ಸೇವಕರ ಗುಡಿಸಲಿಗೆ ಬರುವದು ಅನ್ಯಾಯವಲ್ಲವೇ? ನೀವು ಮಡಿದರೆ ವೀರಸ್ವರ್ಗ; ಉಳಿದರೆ ಭುವನ ಭೋಗ. ನಿಮಗೆ ನರಕವೆಂಬುದಿಲ್ಲ. ಇಂಥ ನೀವು ಇಂತು ಬರುವದೆ?

ಬಂದರೂ ಚಿಂತೆಯಿಲ್ಲ. ಕಾಲ್ಪಿಡಿಯುವದೇ ? ಲೋಕಕ್ಕಿದು ವಿಪರೀತ ವಲ್ಲವೇ ? ಏನಿದೇನಿದು ? ಎನುತ ಗದ್ಗದಿಸಿ ಕಂಪನಂಗೊಂಡು ಕೈವಿಡಿದು ತನ್ನ ಕಾಲಬಿಡಿಸಲು ಯತ್ನಿಸುವನು. ಏನು ಮಾಡಿದರೂ ರಾಜನು ಬಿಡದಿರುವದನ್ನು ಕಂಡು—ಓ ಚೋಳ ಭೂಪಾಲ! ನೀನೆನ್ನ ಕಾಲ್ಬಿಡ ದಿದ್ದರೆ 'ನಿನಗೆ ನಿನ್ನಾಣೆ-ಎನ್ನಾಣೆ' ಎಂದು ಆಣೆಯಿಟ್ಟು, ಅಂಜಿಕೆಹಾಕಿ, ಬಿಡು, ಬಿಡು, ಬೇಗಬಿಡು, ಎಂದೆನಲು ಅದಕ್ಕಳುಕದೆ ರಾಜನು—

ಎಲೆದೇವ ! ದೇವನೊಲ್ದನ ಕುಲಂ ಸತ್ಕುಲಂ ।
ಘನಮಹಿಮನೊಲ್ದ ಜಾತಿಯೇಜಾತಿ ನಿರ್ಮಲಂ ॥
ಶರ್ವನೊಡನುಂಡ ನಿಮ್ಮಯ ಜಾತಿಗಾಂ ಸರಿಯೆ ? ।
ಸರ್ವಜ್ಞ ನಿಮ್ಮ ಕೆರವಿಂಗೆನ್ನ ಶಿರ ಸರಿಯೇ ? ॥

ಎಂದು ಉತ್ತರಿಸುವನು. ಇಲ್ಲಿ ಚೋಳನು ಹೇಳಿದ ಮಾತಿಗೂ ಬಸವ ಣ್ಣನ ವಚನಗಳಿಗೂ ಎಷ್ಟೊಂದು ಪೋಲ್ಕೆಯಿದೆ ನೋಡಿ—

" ...ಕುಲವೇನೋ ಅವಂದಿರ ಕುಲವೇನೋ ? ಸಕಲ ಜೀವಾತ್ಮ ರಿಗೆ ಲೇಸನೇ ಬಯಸುವ ನಮ್ಮ ಕೂಡಲ ಸಂಗನ ಶರಣರೇ ಕುಲಜರು."

"ಹೊಲೆಯ ಮಾದಿಗ ಭಕ್ತನಾದಡೆ ಆತನ ಮನೆಯ ಸೊಣಗಂಗೆ ಪಂಚಮಹಾವಾದ್ಯದಲ್ಲಿ ಸನ್ಮಾನವ ಮಾಡನೇ ? ನೆಲನನುಪ್ಪುಡಿಸಿ, ಉಘೆ, ಚಾಂಗು ಭಲಾ ಎಂದು ? ಕುಲಕಧಿಕ ಹಾರುವಂಗೆ ಸಿದ್ಧಿಗೆಯ್ಯ. ಸಲೆ ನಿಮ್ಮ ಶರಣರ ಮಹಿಮೆ ಘನಕ್ಕೆ ಘನ. ಎಲೆ ಕೂಡಲಸಂಗಮ ದೇವ, ನಿಮ್ಮ ನಂಬದವ ಹೊಲೆಯ"

' ನಿಮ್ಮ ಶರಣರ ಚರಣದ ಚಮ್ಮಾವುಗೆಗೆ ಪೃಥ್ವಿಸಮಬಾರದಯ್ಯಾ "

"ಚತುರ್ವೇದಿಯಾದರೇನು? ಲಿಂಗವಿಲ್ಲದವನೇ ಹೊಲೆಯ. ಶ್ವಪ ಚನಾದರೇನು? ಲಿಂಗವಿದ್ದವನೇ ವಾರಣಸಿ. ಆತನ ನುಡಿಗಡಣ ಲೇಸು. ಆತನ ನಡೆ ಜಗಕ್ಕೆ ಪಾವನ. ಆತನ ಪ್ರಸಾದವೆನಗಮೃತಸೇವನೆ.... ಕೂಡಲಸಂಗಮದೇವನನರಿತು ಪೂಜಿಸಿದಾತ ಷಡುದರ್ಶನಕ್ಕಧಿಕ, ಜಗಕ್ಕೆ ಪಾವನ ನೋಡಾ!" ಇದಲ್ಲದೆ

"ದೇವ ನಿಮ್ಮ ಪೂಜಿಸಿ ಚನ್ನನ ಕುಲ ಚನ್ನಾಯಿತ್ತು. ದೇವ ನಿಮ್ಮ ಪೂಜಿಸಿ ದಾಸನ ಕುಲ ದೇಸೆವಡೆಯಿತ್ತು. ದೇವ ನಿಮ್ಮಡಿಗೆರಗಿ ಮಡಿವಾಳಮಾಚಯ್ಯ ನಿಮ್ಮಡಿಯಾದ. ನೀನೊಲಿದ ಕುಲಕ್ಕೆ ನೀನೊಲಿದ ಹೊಲೆಗೆ ಮೇರೆಯುಂಟೇ ದೇವಾ!

ಹೀಗೆ ಬಸವಣ್ಣನವರ ಅಭಿಪ್ರಾಯವನ್ನೇ ಇಲ್ಲಿ ಕವಿಯು ಚೋಳನ ಬಾಯಿಂದ ರಗಳೆ ರೂಪಾಗಿ ಹೇಳಹಚ್ಚಿದ್ದಾನೆ. ಅದಿರಲಿ. ಕಡೆಗೆ ಚೋಳನು—'ಎಮ್ಮವರಧಿಕರು, ಎಲ್ಲರಿಂದಲೂ ಅಧಿಕರು, ಎಂಬ ಬಸವಣ್ಣನುಕ್ತಿಯನ್ನು ಭಕ್ತಿಯಿಂದ ಶಿರಸಾ ವಹಿಸಿ—

ಬಿಡೆನಯ್ಯ ನಿಮ್ಮ ಪದವಂ ಬಿಟ್ಟು ಬಾಳ್ವೆನೇ ? ।
ಮೃಡಮೂರ್ತಿಯಂ ಬಿಟ್ಟು ಸಂಸೃತಿಯೊಳಾಳ್ವೆನೇ ? ॥
ಪಲವು ಮಾತೇಕೆ ಶಿವನಲ್ಲಿಗೈತನ್ನಿರೇ ।
ಕುಲಗೋತ್ರದಿರವನೀಶ್ವರನೊಡನೆ ಪೇಳಿರೇ ! ॥

ನಾನು ಮಾತ್ರ ನಿಮ್ಮ ಪಾದಪದ್ಮವ ಬಿಡೆನು. ಬಿಟ್ಟು ಬದುಕುವದೆಂತು? ನಿನ್ನ ಪದವ ಬಿಟ್ಟರೆ ಸಂಸೃತಿಯು ಎನ್ನನು ಸೆರೆಯಾಳದೇ? ಹಲವು ಮಾತೇನು? ಇದು ನಿಮಗೆ ಒಪ್ಪಿಗೆಯಾಗದಿದ್ದರೆ ಶಿವನೆಡೆಗೆ ಬನ್ನಿ. ಕುಲಗೋತ್ರದ ವಿಷಯಕ್ಕೆ ನಿಮ್ಮಭಿಮತವನ್ನು ಅವನೆದುರು ಪೇಳಬನ್ನಿ ಎಂದು ಅರಸನು ಕರೆಯುತಿರಲು ಚನ್ನಯ್ಯಗಳದಕೊಪ್ಪುವರು. ಚನ್ನಯ್ಯಗಳು ಒಪ್ಪಿದುದೇ ಚೋಳನಿಗೆ ಸಾಕಾಯಿತು. ಬಡತನದಿಂದೆತ್ತಿ ಅಮೃತವ ನೀಡಿದಂತಾಯಿತು. ಉತ್ಸಾಹಕ್ಕೆ ಮೇರೆಯಿಲ್ಲದಾಯಿತು. ಆತನ ಉಲ್ಲಾಸವು ನೂರ್ಮಡಿ, ಸಾಸಿರಮಡಿ, ಕೋಟಿಮಡಿ ಹೆಚ್ಚಿತು. ತರಿಸಿದಾನೆಯ ಮೇಲೆ ಚನ್ನಯ್ಯಗಳನೇರಿಸಿದನು. ಊರಕೇರಿಗಳಲ್ಲಿ ಗುಡಿಗಟ್ಟಿ ಶೃಂಗರಿಸಲು ಸಾರಿದನು. ಕ್ಷಣಕಾಲದಲ್ಲಿಯೇ ಎಲ್ಲೆಡೆಯಲ್ಲಿಯೂ ಸುದ್ದಿಯು ಹಬ್ಬಿತು. ಜನರು ಸೇರಿದರು. ಜಯಘೋಷವಾಗಿ ಮೆರವಣಿಗೆಯು ಸಾಗಿತು. ಆಗ ಆನಂದಾತಿಶಯದಿಂದ ಚೋಳರಾಜನು—

'ಮುಂದೆ ತುರಗವನೇರಿ ಕೆಲಬಲಕೆ ತೋರುತುಂ । ಮುಂದ್ಮೈಪ
ಪುಳಕದಿಂ ಬೆಳೆದು ದಳವೇರುತುಂ ॥
ಚನ್ನಯ್ಯನಂ ನೋಡಿ ನೋಡಿ ಕೆಯ್ಮುಗಿವುತುಂ । ಉನ್ನತಂ
ಜ್ಞಾನಿ ಚೋಳಂ ಹೆಚ್ಚಿ ಹಿಗ್ಗುತುಂ ॥
ನಡೆತಂದುಮೃಡನಾಲಯದ ಮುಂದೆ ನಿಂದಿರ್ದು । ಕಡುನೇಹದಿಂ
ಗಜದ ಮಗ್ಗಲತ್ತಂ ಸಾರ್ದು ॥
ಆನೆಯಿಂದಿಳುಪಿ ಮೆಲ್ಲನೆ ಬಂದು ಕೈಯೆತ್ತಿಟ್ಟು । ದಾನನಿಧಿ ಚನ್ನಂ
ಸಂತಸದೆ ಮುಂದಿಟ್ಟು ॥

ಗಾಢವಾದ ಭಕ್ತಿಯು ಕೆಚ್ಚು ತುಂಬಿ ಇನಿತು ಉಲ್ಲಾಸ-ಉತ್ಸಾಹಗಳಿಂದ ಮೆರವಣಿಗೆಯು ಮುಗಿಸಿ, ಶಿವಾಲಯಕ್ಕೆ ಬಂದು, ಕುದುರೆಯಿಂದಿಳಿದು, ಆನೆಯ ಬಳಿಗೆ ಬಂದು, ಚನ್ನಯ್ಯಗಳಿಗೆ ಕೈಯೊಗ್ಗಿಟ್ಟು, ಮೆಲ್ಲಮೆಲ್ಲನೆ ಇಳುಹಿ, ಕರವಿಡಿದು ಶಿವಾಲಯದೊಳಗೆ ಕರೆದುಕೊಂಡು ಹೋಗುವನು. 'ಭಕ್ತಜನ ಕಲಹಲೀಲಾಲೋಲ' ನಾದ ಶಿವನನ್ನು ತೋರುವನು. ಆ ಶಿವ ನನ್ನು ಕಂಡೊಡನೆ ಚನ್ನಯ್ಯಗಳಿಗೆ ಭಕ್ತಿಕೋಪವು ಹೆಚ್ಚಾಗಿ 'ಓ ದೇವನೆ! ನೀನಿಂತು ದೂರುವದೇ ? ಈಪರಿ ಚೋಳನಿಂದ ಓಡಿಸಿ ತರಿಸಲು ನಾನೇನು ತಪ್ಪುಮಾಡಿರುವೆನೆ ? ಹೇಳಯ್ಯ. ನಿಮ್ಮನ್ನು ಪದವಿಯನ್ನಾದರೂ ಬೇಡಿ ದೇನೆ ? ಅರಿಯದಂಬಲಿಯನರ್ಪಿಸಿದರೆ ಇಂತರಿದು ಪೆರರಿಗೆ ದೂರುವದೆ? ಅಯ್ಯೋ! ಜಗಕ್ಕೆಲ್ಲ ಬೀರಿ ಗುರುವಾಯಿತೆನ್ನಭಕ್ತಿ. ವಾದಕ್ಕೆ ಅವಕಾಶ ವನ್ನು ತಂದಿಕ್ಕಿತೀ ಭಕ್ತಿ. ಇನ್ನಿಳೆಯೊಳಿರಲು ಎನಗೆ ಸಾಲದು ಶಕ್ತಿ. ಒಪ್ಪದು ಎನ್ನ ಮನ. ಸಾಕೀ ಗೌರವದ ಸಂಕೋಲೆ; ಬೇಡೀ ಶರೀರದ ಕೋಟಲೆ.' ಎಂದೆನುತೆ ಅಲಗನೆತ್ತಿ ಕೊರಳಿಗೆ ಹಚ್ಚಲು ಶಿವಲಿಂಗದಿಂದ ಶಿವನೆದ್ದು ಚನ್ನಯ್ಯನ ಕೈಪಿಡಿದು-ಓ! ಎನ್ನ ಚನ್ನಯ್ಯ! ವಿಚಾರಿಸದೆ ಇಂತು ಉದ್ಯಮಿಸುವರೇ ? ಮರೆತು ಚೋಳನಿಗೆ ಪೇಳಿದುದು ತಪ್ಪೆ ? ಇಷ್ಟಕ್ಕೆ ಇನಿತು ಕೊಪವೇಕೆ ? ಇನಿತು ತಾಪವೇಕೆ? ಬೇಡ, ಬೇಡ ಈ ಆಸುರೀಕರ್ಮ. ಅರಿಯದೆ ಆರುಹಿದೆನು ಸೈರಿಸೈ ಚನ್ನಯ್ಯ! ನಿನ್ನ ಮೇಲಣ ಪ್ರೇಮದಿಂದ ಪೇಳಿದೆನು. ಸೈರಿಸೈ ಚನ್ನಯ್ಯ !! ಎಂದು ಹಲವು ವಿಧವಾಗಿ ಹೇಳಿ, ಹೇಗೋ ಚನ್ನಯ್ಯಗಳಂ ಸಂತೈಸಿ, ಇತ್ತ. ಚೋಳ ಭೂಪಾಲನ ಕಡೆಗೆ ಹೊರಳಿ, ನೋಡಯ್ಯ ಚೋಳ ಭೂಪಾಲ ! ಚನ್ನಯ್ಯ ನಾಡಂಬರವಿಲ್ಲದ ಗುಪ್ತಾರ್ಚನೆಯ ಶಕ್ತಿಯನು; ಆತನ ಅತ್ಯಾದರದ ಭಕ್ತಿಯ ಪ್ರಭಾವವನು. ನಾನು ಆಡಂಬರದ ರಾಜಪೂಜೆಗೆ ಒಲಿಯು ವವನಲ್ಲ. ಅಂತರಂಗದ ಅಮಿತ ಪ್ರೇಮಕ್ಕೆ ಒಲಿಯುವವನು. ನೀನರ್ಪಿ ಸಿದ ರಾಜಾನ್ನಗಳಿಗಿಂತಲೂ ಭಕ್ತಿರಸದಿಂದ ಬೆರೆದ ಚನ್ನಯ್ಯನಂಬ ಲಿಯು ನನಗೆ ಹೆಚ್ಚು ಮಧುರವಾದುದು. ಏನು ಮಾಡಿದರೆಯೂ ನನ್ನ ನೆನಹು ಬಿಡದಿರುವವರೇ ನನಗೆ ಪರಮ ಪ್ರಿಯರು. ಇಷ್ಟೇ ಅಲ್ಲ 'ಮಮಭಕ್ತಾ ಮಮಾಧಿಕಾಃ " ಎಂದು ಹೇಳಿದ್ದಾದರೂ ಇಂಥವರಿಗಾ ಗಿಯೇ. ಹೀಗೆಂದು ಹೇಳುತ್ತ ನಿಂತ ಪರಮಾತ್ಮನಿಗೆ ಒಮ್ಮೆಲೆ ಭಾವೋ ದ್ರೇಕಗೊಂಡು, ಭಕ್ತಾಭಿಮಾನ ಹೆಚ್ಚಿ—

ಭಾಷೆವುಮಾದರ ಚನ್ನ ಪೂತುಮಾದರ ಚನ್ನ । ಸೋಪಾಧಿಕಂಪುಗದೆ
ಶೈವಮಾದರ ಚನ್ನ ॥
ಗುಪ್ತಪೂಜೆಯ ಚನ್ನಗುರುತರಾಜ್ಞೆಯುಚನ್ನ । ಆಪ್ತಗುಣ ನಿಧಿ ಚನ್ನ
ಎನ್ನ ಭಕ್ತಿಯ ಚನ್ನ ॥

ಎಂದು ಮನದಣಿ ಕೊಂಡಾಡಿ, ಮುಂಡಾಡಿ, ಒಂದಾಗಿ ನಿಂತಿರಲು ಅನಿತರೊಳು ಪೂಮಳೆಗಳೆರಗುವವು. ದುಂದುಭಿಕಹಳೆಗಳು ಗಗನದೊಳು ಮೊಳಗುವವು. ನಂದೀಶ್ವರಾದಿ ಗಣಸಂದೋಹದೊಡನೆ ಪುಷ್ಪಕ ವಿಮಾನವು ಬಂದು ನಿಲ್ಲುವದು. ಬಂದ ಪುಷ್ಪಕದೊಳಗೆ ಚನ್ನನಂ ಕುಳ್ಳಿರಿಸಿ, ಚೋಳನಂ ಬೀಳ್ಕೊಟ್ಟು, ಆಕಾಶಕ್ಕೆ ಹಾರಿ, ಕೈಲಾಸಕ್ಕೆ ಹೋಗಿ ಸಿಂಹಾಸನವನೇರುವನು. ಶೈಲಜೆಗೆ ಶರಣ ಚನ್ನಯ್ಯನಂ ಸಂತಸದಿ ತೋರುವನು. ಗಣಪದವಿಯನೀಯುವನು.

ಶಿವನಿತ್ತ ಗಣಪದವಿಯನ್ನು ಪಡೆದು, ಮಾದರ ಚನ್ನಯ್ಯ ಮಾದೇವರೊಂದಾಗಿ, ಭಕ್ತ ಚನ್ನಯ್ಯ ಭೂತೇಶರೊಂದಾಗಿ––

"ಕುಲತಿಲಕನೊಪ್ಪಿದಂ ಕುಲಹೀನನೊಪ್ಪಿದಂ । ಹೊಲೆಗಲಿಸಿ
ಭಕ್ತರೊಳ್ನೆಲಸಿರ್ಪನೊಪ್ಪಿದಂ ॥
ಉಲಿವವೇದಂಗಳ ಶಿಖಾರತ್ನನೊಪ್ಪಿದಂ । ಸಲೆಪೊಗಳ್ವಶರಣರ
ಸುಖಾಂಬೋಧಿಯೊಪ್ಪಿದಂ ॥
ಚನ್ನನ ಮಹಾನಿಧಿ ಮಹಾದಾನಿಯೊಪ್ಪಿದಂ । ಚನ್ನಹಂಪೆಯ
ವಿರೂಪಾಕ್ಷನಿಂತೊಪ್ಪಿದಂ॥ "

ಕೊನೆಗೆ ಚನ್ನಯ್ಯ ನೊಲ್ಮೆಯ ಪೆರ್ಮೆಯು ಹರಿಹರನಿಂದ 'ವೇದಶಿಖಾರತ್ನ " "ಶರಣಸುಖಾಂಬೋಧಿ" ಎಂಬ ಬಿರುದುಗಳನ್ನು ದೊರಕಿಸಿಯೇ ಬಿಟ್ಟಿತು. ನಿಜವಾಗಿಯೂ ಆತನ ಭಕ್ತಿಗೆ ಅಂಥದೊಂದು ಬೆಲೆಯುಂಟು. ಆತನ ಪ್ರೇಮರಸವು ಉಳಿದವರಂತೆ ಸಹೇತುಕವಾಗದೆ ಸಹಜವಾಗಿ ಹೃದಯದಿಂದ ಹೊರಟು ಹೃದಯಂಗಮವಾಗಿ ಹರಿದಿದೆ. ಅಂತೆಯೇ ಈ ರಗಳೆಯಲ್ಲಿ ಹರಿಹರದೇವನ ಘನವಾದ ಕಾವ್ಯಶೈಲಿಯೂ ಇನಿದಾದ ಭಕ್ತಿರಸವೂ ಎಡೆತಡೆಯಿಲ್ಲದೆ ಮನೋಹರವಾಗಿ ಸಾಗಿದೆ. 'ಪೊಸಬಗೆ' 'ಮೃದುಪದ' ಗಳು ಈತನ ಕಾವ್ಯದಲ್ಲಿರುವ ಉತ್ತಮ ಗುಣಗಳು. ಭಕ್ತಿ ಸೃಷ್ಟಿ-ಭಾವಪುಷ್ಟಿಗಳು ಮೆಚ್ಚಿ ತಲೆದೂಗುವಂತಹವು. ಇವುಗಳಿಂದಲೇ

ಇವನ ರಗಳೆಗಳು ರಮ್ಯವಾಗಿವೆ, ಗಮ್ಯವಾಗಿವೆ. ಕಾವ್ಯದುನ್ನತಿಯೂ ಕತೆಯ ಉಜ್ವಲತೆಯೂ ಕಂಗೊಳಿಸುತ್ತವೆ. ಇದಕ್ಕೆ ಚನ್ನಯ್ಯಗಳ ಬಾವದಲ್ಲಿ ಸ್ವತಃ ಭಕ್ತಿಬೀಜವಂಕುರಿಸಿ, ಅದು ಬುದ್ಧಿಯಲ್ಲಿ ಪಲ್ಲವಿಸಿ, ನಿಷ್ಠೆಯಲ್ಲಿ ಕುಡಿವರೆದು, ಕೃತಿಯಲ್ಲಿ ಕಾಯಾಗಿ ಹಣ್ಣಾದುದೇ ಕಾರಣ. ಆ ಹಣ್ಣಿನ ರಸವೇ ಹರಿಹರದೇವನ ಈ ರಗಳೆ. ಅಂದಮೇಲೆ ಇದರಲ್ಲಿ ಇಷ್ಟೊಂದು ಸವಿ-ಸೊಬಗುಗಳಿರುವದೇನಾಶ್ಚರ್ಯ! "ಕಾರಣಗುಣಾಃ ಕಾರ್ಯೇಷು ಸಂಕ್ರಾಮಂತಿ" ಎಂಬ ಮಾತು ಇದರಿಂದಲೇ ಕೃತಾರ್ಥ. ಚನ್ನಯ್ಯಗಳ ನಿರ್ವ್ಯಾಜ ನಿರುಪಮ ಪ್ರೇಮವು ಭಕ್ತಕಲಹ ಪ್ರಿಯನಾದ ಶಿವನನ್ನು ತಪ್ಪಿತನನ್ನಾಗಿ ಮಾಡಿರುವಲ್ಲಿ ಅದರ ಬಲ್ಮೆಯನ್ನು ಬರೆದು ಚಿತ್ರಿಸಲು ನಾವೆಷ್ಟರವರು? ಸಮರ್ಥರಾದ ಆ ಹರೀಶ್ವರ ಬಸವೇಶ್ವರರ ಬಾಯಿಂದಲೇ ಕೊನೆಗೊಮ್ಮೆ ಕೇಳಿ ತಣಿಯೋಣ ದಣಿಯೋಣ ಬನ್ನಿ!

ಚನ್ನನನಿಧಿ, ಚನ್ನನ ಸುಧೆ।
ಚನ್ನನ ಸಕಳಾಯು ಚನ್ನನಮೃತ ಸಮುದ್ರ. ॥
ಚನ್ನಂ ರಕ್ಷಿಸುಗೆನ್ನಂ।
ಚನ್ನನ ಸುತನೆಂದು ಹಂಪೆಯ ವಿರೂಪಾಕ್ಷಂ ॥

— ಹರೀಶ್ವರ

''ನಡೆ ಚನ್ನ, ನುಡಿಚನ್ನ, ಎಲ್ಲಿ ನೋಡಿದಡೆ ಚನ್ನ. ಪ್ರಮಥರೊಳಗೆ ಚನ್ನ, ಪುರಾತನರೊಳಗೆ ಚನ್ನ. ಸವಿದು ನೋಡಿ ಅಂಬಲಿ ರುಚಿಯಾಯಿತ್ತೆಂದು ಕೂಡಲಸಂಗಮದೇವಂಗೆ ಬೇಕೆಂದು ಕೈದೆಗೆದ ನಮ್ಮ ಚನ್ನ.

—ಬಸವೇಶ್ವರ

ಚನ್ನಯ್ಯನೊಲ್ಮೆಯ ಪೆರ್ಮೆಗೆ ಇವಕ್ಕಿಂತಲೂ ಮಿಕ್ಕಿನ ಬಣ್ಣಿಸೆಯಿನ್ನಾವುದು ಬೇಕು? ಅಮೃತ ಸಮುದ್ರದೆದುರಿಗೆ ತಂಬುಳಿಯ ರುಚಿಯೇ? ಬೇಡ ಬೇಡ ಇದಂ ಬಗೆದು ಈ ಬಡಲೇಖನಿಯನಿಲ್ಲಿಗೆ ನಿಲ್ಲಿಸುವೆ. ಬಸವೇಶ್ವರನ ಬಣ್ಣನೆಗೂ-ಹರೀಶ್ವರನ ಹೊಗಳಿಕೆಗೂ-ಪರಮಾತ್ಮನ ಪ್ರೀತಿಗೂ ಪಾತ್ರನಾದ ಓ ಚನ್ನಯ್ಯ ತಂದೆಯೇ! ತೋರು ಆ ಭಾವವ! ಬಾಗಿ ಬೇಡುವೆ.

ಓಂ ಶಾಂತಿಃ

# "ದಾಸಿಮಯ್ಯಗಳ ಕಾಲನಿರ್ಣಯ."

ಲೇಖಕ:— ಬಿ. ಶಿವಮೂರ್ತಿಶಾಸ್ತ್ರಿ ಕೀರ್ತನಕೇಸರಿ, ಕವಿರತ್ನ,
ಹುಲ್ಯಕುಂಟೆಮಠ, ತುಮಕೂರು.

---

ಮ॥ ರಾ॥ ಶ್ರೀ. ಯಂ. ಆರ್. ಶ್ರೀನಿವಾಸಮೂರ್ತಿ ಬಿ. ಎ. ರವರು ೧೯೩೦ನೇ ಇಸವಿಯಲ್ಲಿ "ಭಕ್ತಿ ಭಂಡಾರಿ ಬಸವಣ್ಣನವರು" ಎಂಬ ಪುಸ್ತಕವನ್ನು ಬರೆದು ಪ್ರಕಟಿಸಿದರು. ಅದರಲ್ಲಿ ಜೇಡರ ದಾಸಿಮಯ್ಯ, ಶಂಕರದಾಸಿಮಯ್ಯ ಎಂಬ ಪ್ರಾಚೀನ ಶಿವಶರಣರಿಬ್ಬರು ಬಸವೇಶ್ವರನ ಸಮಕಾಲೀನರಾಗಿರಬಹುದೆಂದು ಅವರು ತಿಳಿದು ವಾದಿಸಿದರು. ಅಲ್ಲಿಂದೀಚೆಗೆ ಕೆಲವರು ಅವರ ಈ ಬರೆಹವನ್ನೇ ಪ್ರಮಾಣವನ್ನಾಗಿ ಸ್ವೀಕರಿಸಿ ಲೇಖನ ಭಾಷಣಾದಿಗಳನ್ನೂ ಮಾಡಿದರು. ವೀರಶೈವಮತ ಚರಿತ್ರೆಯಲ್ಲಿ ಈ ದಾಸಿಮಯ್ಯಗಳಿಬ್ಬರ ಕಾಲನಿರ್ಣಯವು ಅತ್ಯಂತ ಮಹತ್ವದ್ದಾದುದರಿಂದ ನಾನು ಐತಿಹಾಸಿಕ ದೃಷ್ಟಿಯಿಂದ ಈ ವಿಚಾರವನ್ನು ಚರ್ಚಿಸಿ ಮ॥ ರಾ॥ ಶ್ರೀನಿವಾಸಮೂರ್ತಿಗಳ ಅಭಿಪ್ರಾಯವು ಸಾಧುವಲ್ಲವೆಂದೂ, ಈ ಶರಣರಿಬ್ಬರೂ ಚಾಲುಕ್ಯ ಜಯಸಿಂಹನ ಕಾಲದವರೆಂದೂ ಸಮರ್ಥಿಸಿ ಶಿವಾನುಭವ ಸಂ. ೯ ಸಂ. ೬ ರಲ್ಲಿ "ಜೇಡರ ದಾಸಿಮಯ್ಯ, ಶಂಕರದಾಸಿಮಯ್ಯಗಳ ವಿಚಾರ" ಎಂಬ ಹೆಸರಿನಿಂದ ಒಂದು ಲೇಖನವನ್ನು ಬರೆದನು. ಈ ಲೇಖನವು ಸಂಯುಕ್ತ ಕರ್ನಾಟಕ ಶರಣಸಂದೇಶ ಮೊದಲಾದ ಪತ್ರಿಕೆಗಳಲ್ಲಿಯೂ ಪ್ರಕಟವಾಯಿತು. ಮ॥ ರಾ॥ ಶ್ರೀನಿವಾಸಮೂರ್ತಿಗಳು ೧೯೩೬ ನೇ ಇಸವಿಯಲ್ಲಿ ಮುದ್ರಿಸಿರುವ "ಭಕ್ತಿ ಭಂಡಾರಿ ಬಸವಣ್ಣನವರು" ಎಂಬ ಗ್ರಂಥದ ದ್ವಿತೀಯ ಪೀಠಿಕೆಯಲ್ಲಿ ನನ್ನ ಶಿವಾನುಭವದ ಲೇಖನವನ್ನು ಖಂಡಿಸಿ ಮತ್ತೆ ತಾವು ಮೊದಲು ಬರೆದಂತೆ ಶಂಕರದಾಸಿ, ದೇವರದಾಸಿಗಳಿಬ್ಬರೂ ಬಸವನ ಸಮಕಾಲೀನರೆಂದೂ ವಚನಕಾರ ದೇವರದಾಸಿಯೇ ಪುರಾಣ ಪ್ರಸಿದ್ಧ ದಾಸಿಯೆಂದೂ ನಿರೂಪಿಸಿದ್ದಾರೆ. ಪುನಃ ಪುನಃ ಎಷ್ಟು ವಿಚಾರಮಾಡಿ ನೋಡಿದರೂ ಅವರು ಹೇಳಿರುವ ಸಿದ್ಧಾಂತವು ಇತಿಹಾಸದ ಒರೆಗಲ್ಲಿನ ಮೇಲೆ ಉತ್ತೀರ್ಣವಾಗುವುದಿಲ್ಲವೆಂದು ತಿಳಿದು ನಿರ್ವಾಹವಿಲ್ಲದೆ ನಾನು ಅವರ ವಾದವು ಸಾಧುವಲ್ಲವೆಂಬದನ್ನು ತೋರಿಸಿ ಕೊಡಬೇಕಾಗಿದೆ.

ಮ॥ ರಾ॥ ಶ್ರೀನಿವಾಸಮೂರ್ತಿಗಳ ಅಭಿಪ್ರಾಯಃ—

(*i*) "ಶಂಕರದಾಸಿಗೂ, ಜೇಡರದಾಸಿಗೂ ಸಂಬಂಧಪಟ್ಟ ಕಥೆ ಪುರಾಣ ಗ್ರಂಥದಲ್ಲಿ ಬರುವುದರಿಂದ ಇವರಿಬ್ಬರಲ್ಲಿ ಯಾರೊಬ್ಬರು ಬಸವಣ್ಣನವರ ಸಮಕಾಲೀನರಾದಾಗ್ಗೂ ಇನ್ನೊಬ್ಬರೂ ಸಮಕಾಲೀನರಾಗುತ್ತದಷ್ಟೇ. ಈಗ ಶಂಕರದಾಸಿಯ ವಿಚಾರವನ್ನೇ ತೆಗೆದುಕೊಳ್ಳೋಣ.

(*a*) ಬಸವ ಪುರಾಣದ ೨೪ನೇ ಸಂಧಿಯಲ್ಲಿ ಕಿನ್ನರಿ ಬ್ರಹ್ಮಯ್ಯನ ಕಥೆ ಬರುತ್ತದೆ. ಈ ಕಿನ್ನರಿ ಬ್ರಹ್ಮಯ್ಯನು ಬಸವಣ್ಣನವರ ಸಮಕಾಲೀನನೆಂಬುದು ನಿರ್ವಿವಾದ ವಿಷಯ. ೨೯ನೇ ಸಂಧಿಯಲ್ಲಿ ಕಿನ್ನರಿ ಬ್ರಹ್ಮಯ್ಯನ ಗರ್ವಭಂಗವನ್ನು ಕಲಕೇತ ಬ್ರಹ್ಮಯ್ಯನು ಮಾಡುವ ಕಥೆಯಿದೆ. ಈ ಕಲಕೇತ ಬ್ರಹ್ಮಯ್ಯನು ಶಂಕರದಾಸಿಮಯ್ಯನ ಶಿಷ್ಯನೆಂದು ತಾನು ಹೇಳಿಕೊಂಡಿದ್ದಾನೆ. "ಶರಣ ಶಂಕರದಾಸಿಮಯ್ಯನ—ಚರಣಯುಗಳವನೋಲವಿಪ ಕಿಂಕರಗೆ ಧನವಿಲ್ಲೆನಲು ಬಾರದು ಬಸವ ನಿಮ್ಮಾಣೆ." ಈ ಮಾತುಗಳನ್ನು ಕಲಕೇತ ಬ್ರಹ್ಮಯ್ಯನು ಬಸವಣ್ಣನವರಿಗೆ ಹೇಳಿದ್ದು.

(*b*) ಇದೇ ಕಲಕೇತ ಬ್ರಹ್ಮಯ್ಯನ ಕಥೆ ವೃಷಭೇಂದ್ರವಿಜಯದ ೧೮ನೇ ಆಶ್ವಾಸದಲ್ಲಿ ಬರುತ್ತದೆ. ಅಲ್ಲಿ ಕಲಕೇತ ಬ್ರಹ್ಮಯ್ಯನು "ಶಂಕರದಾಸಯ್ಯನ ಭೃತ್ಯ ನಾಂ ಬಸವ" ಎಂದು ಹೇಳಿಕೊಂಡಿದ್ದಾನೆ. (ಟಿಪ್ಪಣಿಃ—ಪಾಲ್ಕುರಿಕೆ ಸೋಮನಾಥನ ಬಸವ ಪುರಾಣದಲ್ಲಿಯೂ ಇದೇ ವಿಷಯವನ್ನು ೧೫೦ನೇ ಪುಟದಲ್ಲಿ ಹೇಳಿದೆ. ಪಾಲ್ಕುರಿಕೆ ಸೋಮನು ಭೀಮಕವಿಗಿಂತ ಹಿಂದಿನವನು.) ಇವುಗಳಿಂದ ಶಂಕರದಾಸಿಮಯ್ಯನು ಬಸವಣ್ಣನವರ ಸಮಕಾಲೀನನೆಂದು ಹೇಳಬಹುದಷ್ಟೇ.

(*c*) ಮುಂದೆ ಬಸವ ಪುರಾಣದ ೮ನೇ ಸಂಧಿಯಲ್ಲಿ ಕಬ್ಬಲಿಗರೊಡನೆ ಪ್ರಸಾದ ವಿವಾದ ನಡೆಯುತ್ತದಷ್ಟೇ. ಈ ವಿವಾದಕ್ಕೆ ಬಸವಣ್ಣನವರೊಡನೆ ಯಾರು ಯಾರು ಹೋಗಿದ್ದರೆನ್ನುವುದನ್ನು ಭೀಮಕವಿ ಹೇಳಿದ್ದಾನೆ. ಅದರಲ್ಲಿ "ದೇವರದಾಸಿ, ಶಂಕರದಾಸಿಮಯ್ಯನೂ" ಎಂಬ ಈ ಎರಡು ಹೆಸರುಗಳೂ ಇವೆ.

(*d*) ಬಸವ ಪುರಾಣದ ೫೯ನೇ ಸಂಧಿಯಲ್ಲಿ ಪ್ರಸಾದ ವಿನಿಯೋಗವಾಗುತ್ತಿದ್ದಾಗ " ಮೀಸೆಗಳನಲುಗಾಡಿಸಿದಿರಾ ದಾಸಿದೇವ " ಎಂದು

ಹೇಳಿದೆ. ಅಲ್ಲದೆ ಪ್ರಸಾದ ಸೇವನೆ ಮಾಡಿದ ಶಿವಶರಣೆಯರ ಹೆಸರಿನಲ್ಲಿ ದುಗ್ಗಳೆಯ ಹೆಸರನ್ನೂ ಹೇಳಿದೆ."

(*e*) ವೃಷಭೇಂದ್ರ ವಿಜಯದ ೪೦ನೇ ಆಶ್ವಾಸದಲ್ಲಿ ಬಸವಣ್ಣನವರೊಡನೆ ವಾದಕ್ಕೆ ಹೋದವರ ಹೆಸರುಗಳನ್ನು ಈ ರೀತಿ ಹೇಳಿದೆ. "ಉತ್ತಮಾಂಗದ ಕೇಶಿ ಜೇಡರದಾಸಿಯುಂ ಶಂಕರದಾಸಯ್ಯಂ ಸಂಕದ ಬಂಕಯ್ಯಂ."

(*f*) ಪ್ರಸಾದ ಸೇವನೆ ಮಾಡುತ್ತಿದ್ದಾಗ ಸುಗ್ಗಳೆ ಮತ್ತು ದುಗ್ಗಳೆಯರಿದ್ದಂತೆ ಹೇಳಿದೆ.

(*g*) ಪ್ರಸಾದ ಸೇವನೆ ಮಾಡಿದವರಲ್ಲಿ "ಬಿನದಂಗೆಯ್ಯುತ್ತೆ ಪೊಣ್ದಂತಿರೆ ಸವಿದಪನೀ ಢಕ್ಕೆಯ ಮಾರಂ" ಎಂದು ಢಕ್ಕೆಯ ಮಾರಯ್ಯನ ಹೆಸರನ್ನು ವೃಷಭೇಂದ್ರ ವಿಜಯದಲ್ಲಿ ಹೇಳಿದೆ. ಈ ಢಕ್ಕೆಯ ಮಾರಯ್ಯನು ಶಂಕರದಾಸಯ್ಯನ ಗರ್ವಭಂಗಮಾಡಿದ ಕಥೆ ವೀರಶೈವಾಮೃತ ಮಹಾ ಪುರಾಣದಲ್ಲಿಯೂ, ಪ್ರೌಢರಾಯನ ಕಾವ್ಯದಲ್ಲಿಯೂ ಇದೆ. ಶಂಕರದಾಸಯ್ಯನು ಜೇಡರದಾಸಯ್ಯನ ತವನಿಧಿಯನ್ನು ಅಪಹರಿಸಿ ಗರ್ವದಿಂದ ಬೀಗುತ್ತಿದ್ದನೆಂದೂ, ಆಗ ಢಕ್ಕೆಯ ಮಾರಿ ತಂದೆ ಶಂಕರದಾಸಯ್ಯನ ನೊಸಲ ಕಣ್ಣನ್ನು ಕಿತ್ತು ಬಾಯಿಗೆ ಹಾಕಿಕೊಂಡಂತೆಯೂ ವೀರಶೈವಾಮೃತ ಮಹಾಪುರಾಣದ ಕಾಂಡ ೮, ಸಂಧಿ ೨, ಪದ್ಯ ೩೩-೩೪ ರಲ್ಲಿದೆ. ಪ್ರೌಢರಾಯನ ಕಾವ್ಯದ ೬ ನೇ ಸಂಧಿಯಲ್ಲಿ ಢಕ್ಕೆಯ ಮಾರಯ್ಯನು ಶಂಕರದಾಸಯ್ಯನ ನೊಸಲ ಕಣ್ಣನ್ನು ಕಿತ್ತು ನುಂಗಿದಾಗ ಶಂಕರದಾಸಿಯು ಬಂದು "ಶರಣ ನಿಮ್ಮಯ ಮಹಿಮೆಯರಿಯದಾದೆವುಯೆಂದು ಬಸವೇಶನ ಸಹಿತ ನುತಿಸೆ" ಎಂದು ಹೇಳಿದೆ. ಇವುಗಳೆಲ್ಲದರಿಂದ ಶಂಕರದಾಸಯ್ಯನು ಬಸವಣ್ಣನವರ ಸಮಕಾಲೀಯನೆಂದು ಸಿದ್ಧಿಸುವುದಷ್ಟೆ. ಹೀಗೆಯೇ ದುಗ್ಗಳೆ, ಸುಗ್ಗಳೆ ಮತ್ತು ದುಗ್ಗಳೆಯ ಪತಿಯೂ, ಸುಗ್ಗಳೆಯ ಗುರುವೂ ಆದ ಜೇಡರದಾಸಯ್ಯ ಇವರೆಲ್ಲ ಬಸವಣ್ಣನವರ ಸಮಕಾಲೀನರೆಂದು ಸಿದ್ಧಿಸುವುದು.

(*ii*) ವಚನಕಾರ ದಾಸಿಮಯ್ಯನೇ ಬೇರೆ ಪುರಾಣ ಕಥಿತನಾದ ದಾಸಿಮಯ್ಯನೇ ಬೇರೆಯೆಂದು ಇಬ್ಬರು ವ್ಯಕ್ತಿಗಳನ್ನು ಹೇಳುವುದಕ್ಕೂ ಕಾರಣಗಳಿಲ್ಲ.

(*a*) ಜೇಡರದಾಸಯ್ಯನು ರಾಮನಾಥನನ್ನೇ ಇಷ್ಟ ಲಿಂಗವನ್ನಾಗಿ ಉಳ್ಳವನೆಂದು ಪುರಾಣಗಳಲ್ಲಿ ಸ್ಪಷ್ಟವಾಗಿ ಹೇಳಿದೆ. ದೇವರ ದಾಸಯ್ಯನ ವಚನಗಳಲ್ಲಿ ಬರುವ ಅಂಕಿತವೂ ಅದೇ ಆಗಿದೆ.

(*b*) ದುಗ್ಗಳೆಯನ್ನು ಮದುವೆಯಾಗುವುದಕ್ಕೆ ಮುಂಚೆ ದೇಸಿಂಗನ ಆಸ್ಥಾನದಲ್ಲಿ ಜೈನರನ್ನು ಭಂಜಿಸಿದನೆಂಬುವುದು ಪ್ರೌಢರಾಯನ ಕಾವ್ಯದ ಳನೇ ಸಂಧಿಯಲ್ಲಿ ಸ್ಪಷ್ಟವಾಗಿದೆ. (ಟಿಪ್ಪಣಿ— ಈ ದೇಸಿಂಗನ ವಿಚಾರವನ್ನೂ, ದೇವರದಾಸಿಯ ವಿಚಾರವನ್ನೂ ದೇವಾಂಗ ಪುರಾಣದಲ್ಲಿ ಕಾಣಬಹುದಾಗಿದೆ. ಡಾ॥ ಫ್ಲೀಟ್‌ರವರು ಬಸವ ಪುರಾಣದಲ್ಲಿ ಬರುವ ದೇಸಿಂಗ ಎಂಬ ಹೆಸರನ್ನು ನೋಡಿ ಈ ದೇಸಿಯು ಕಲ್ಯಾಣದ ಚಾಲುಕ್ಯರ ಇಮ್ಮಡಿ ಜಯಸಿಂಹ (ಜಗದೇಕಮಲ್ಲ) ನಾಗಿರಬೇಕೆಂದು ಹೇಳಿದ್ದರಿಂದ ದೇವರದಾಸಿ ಕ್ರಿ. ಶ. ೧೦೪೦ ರಲ್ಲಿ ಇದ್ದನೆಂದೂ ಶಂಕರ ದಾಸಿಯು ಅದೇ ಕಾಲದಲ್ಲಿ ಇದ್ದಿರಬೇಕೆಂದೂ ಕೆಲವರು ಅಭಿಪ್ರಾಯ ಪಡಲವಕಾಶವಾಗಿದೆ. ದೇವಾಂಗ ಪುರಾಣದ ಅಷ್ಟವಿಂಶಾಧ್ಯಾಯದಲ್ಲಿ ದೇವರ ದಾಸಯ್ಯನ ಕಥೆಯನ್ನು ವಿಸ್ತಾರವಾಗಿ ಹೇಳಿದೆ ...... ...... ಈ ದೇವರ ದಾಸಿಗೆ ಏಕೋರಾಮನೆಂಬ ಮಗನು ಹುಟ್ಟಿವನು. ಮೇಲಿನ ಕಥೆಯಲ್ಲಿ ಬರುವ ದೇವರದಾಸಿ ದೇಶಿಂಗರ ವೃತ್ತಾಂತಕ್ಕೂ ವೀರಶೈವ ಪುರಾಣಗಳಲ್ಲಿ ಬರುವ ದೇವರದಾಸಿ, ದೇಶಿಂಗರ ವೃತ್ತಾಂತಕ್ಕೂ ಹೋಲಿಕೆ ಇರುವದನ್ನು ನೋಡಬೇಕಾಗಿದೆ. "........ದೇವರದಾಸಯ್ಯನೆಂದೆಂಬ ಶರಣ ಹೊಟ್ಟಿಲ ಕೇರಿಯಲ್ಲಿ ಸುಗ್ಗಲ ದೇವಿಯರಿಗೆ ಗುರುವಾಗಿರುತಲಿ ಪರಮತವ ಗೆಲಿದು ಉತ್ತರನಾಥ ಲಿಂಗವನು ವರ ಸುಪ್ರತಿಷ್ಠೆಗೈದೊಡನೆ ದೇಸಿಂಗ ಭೂವರನ ಭಕ್ತನ ಮುಂದೆ ವಿರಕ್ತಿಯಿಂದೆ ದೇಶಾಂತರವ ಚಲಿಸಿ ಬಳಿಕ" ಎಂದು ಹೇಳಿ ಆ ದೇವರದಾಸಿ ಮುದೇನೂರಿಗೆ ಬಂದು ಒಂಭತ್ತು ವರ್ಷದ ದುಗ್ಗಳೆಯನ್ನು ಮದುವೆಯಾದಂತೆ ಕವಿಯು ಬರೆದಿದ್ದಾನೆ.

(*iii*) ಇನ್ನು ಶೂನ್ಯಸಂಪಾದನೆಯ ವಿಚಾರವನ್ನು ಮಾಡೋಣ. ಶ್ರೀ. ಹಳಕಟ್ಟಿಯವರು ಮುದ್ರಿಸಿರುವುದು ಗೂಳೂರು ಸಿದ್ಧವೀರಣಾಚಾರ್ಯನ ಶೂನ್ಯಸಂಪಾದನೆ. ಆದರೆ ನಾನು ಉದಾಹರಿಸಿರುವ ವಚನಗಳು ಕೆಂಚವೀರಣ್ಣೊಡೆಯಾದಿಗಳು ರಚಿಸಿದ ಇನ್ನೂ ಮುದ್ರಿತವಾಗದಿರುವ *K. A. 105* ಎಂಬ ನಂಬರುಳ್ಳ ಮೈಸೂರು ಓರಿಯಂಟಲ್

ಲೈಬ್ರೆರಿಯಲ್ಲಿ ತೆಗೆದವು. ಈ ವಿಚಾರವನ್ನು ಅಡಿ ಟಿಪ್ಪಣೆಯಲ್ಲಿ ಸೂಚಿಸಿದ್ದೇನೆ. ಶೂನ್ಯಸಂಪಾದನೆಗಳು ನಾಲ್ಕೈದು. ಈ ವಿಷಯವನ್ನು ಪ್ರಬುದ್ಧ ಕರ್ನಾಟ ಸಂ. ೧೫, ಸಂ. ೪ ರಲ್ಲಿ ನಾನು ವಿವರಿಸಿದ್ದೇನೆ. ನಾನು ಉದಾಹರಿಸಿರುವ ವಚನಗಳೂ ಕೆಂಚವೀರಣ್ಣೊಡೆಯಾದಿಗಳು ಮಾತ್ರವಲ್ಲ ಸಿದ್ಧಲಿಂಗಯತಿಯು ಶೂನ್ಯಸಂಪಾದನೆಯಲ್ಲಿಯೂ ಇವೆ. ಇವೆರಡೂ ಗೂಳೂರು ಸಿದ್ಧವೀರನ ಶೂನ್ಯಸಂಪಾದನೆಗಿಂತ ಹಿಂದೆ ರಚಿತವಾದುವು. ಆದುದರಿಂದ "ಶೂನ್ಯಸಂಪಾದನೆ ಅರ್ವಾಚೀನ ಗ್ರಂಥ. ಆ ಗ್ರಂಥಕರ್ತೃವು ಅನುಭವಮಂಟಪದಲ್ಲಿ ಶಂಕರದಾಸಿಯ ಹೆಸರನ್ನು ಭರ್ತಿಮಾಡಲಿಕ್ಕಾಗಿ ಅವನ ವಚನಗಳನ್ನು ಹಾಕಿರಬೇಕೆಂದು ನಮ್ಮ ಅಭಿಪ್ರಾಯ" ಯೆಂಬ ಶ್ರೀಯುತ ಶಾಸ್ತ್ರಿಗಳ ಅಭಿಪ್ರಾಯವು ಸಾಧುವಾಗಿಲ್ಲವೆಂದು ಹೇಳಬೇಕಾಗಿದೆ.

ಈ ವಚನಗಳಷ್ಟೇ ಅಲ್ಲ, ಚೆನ್ನಬಸವೇಶ್ವರನು ಉಳುವೆಗೆ ಗಣಗಳು ಸಹಿತ ಹೊರಟಾಗ ಜೊತೆಯಲ್ಲಿ ಶಂಕರದಾಸಿಯೂ ಇದ್ದಂತೆ ಶೂನ್ಯಸಂಪಾದನೆಗಳಲ್ಲಿ ಹೇಳಿದೆ. ಬಸವಪುರಾಣಗಳಲ್ಲಿ ನಾನು ತೆಗೆದುತೋರಿಸಿದ ಅಭಿಪ್ರಾಯವನ್ನು ನೋಡಿದರೆ ಶಂಕರದಾಸಿಯು ಬಸವಣ್ಣನವರ ಸಮಕಾಲೀನನಾಗಿದ್ದುದು. ಆದುದರಿಂದಲೇ ಉಳುವೆಗೆ ಚೆನ್ನಬಸವೇಶ್ವರನ ಸಂಗಡ ಹೋಗಿದ್ದಿರಬಹುದಾದುದು ಅಸಂಭವವಾಗಿ ಕಾಣುವುದಿಲ್ಲ. ಇದು ವರೆಗೆ ಹೇಳಿದ ಆಧಾರಗಳಿಂದ ದೇವರದಾಸಯ್ಯ ಮತ್ತು ಜೇಡರದಾಸಯ್ಯ ಇಬ್ಬರೂ ಒಂದೇ ವ್ಯಕ್ತಿಯೆಂದೂ, ಪುರಾಣಕಥಿತನೂ ದುಗ್ಗಳೆಯ ಪತಿಯೂ, ಸುಗ್ಗಳೆಯ ಗುರುವೂ ಎಲ್ಲಾ ಒಬ್ಬನೇಯೆಂದೂ ಈ ದೇವರದಾಸಿ ಅಥವಾ ಜೇಡರದಾಸಿಯೆವರು ಬಸವಣ್ಣನವರ ಸಮಕಾಲೀನನೆಂದೂ ಸಿದ್ಧಿಸುವುದರಿಂದ ಪರಿಶಿಷ್ಟದಲ್ಲಿ ಕೊಟ್ಟಿರುವುದನ್ನು ನಾನು ಬದಲಾಯಿಸಿಲ್ಲ.

## ಈ ಬಗ್ಗೆ ನನ್ನ ಸಮಾಧಾನ.

ಇದು ವರೆಗೆ ಉದಾಹರಿಸಿದ ಮ|| ರಾ|| ಶ್ರೀನಿವಾಸಮೂರ್ತಿಗಳ ವಾದಕ್ಕೆ ನಾನು ಉತ್ತರ ಕೊಡುವುದಕ್ಕೆ ಮೊದಲು ನಾನು ಒಂದೆರಡು ಮಾತುಗಳನ್ನು ಹೇಳಬೇಕಾಗಿದೆ.

ಅವರು ತಮ್ಮ ವಾದವನ್ನು ಸಮರ್ಥಿಸಲು ಪ್ರೌಢರಾಯನ ಕಾವ್ಯ, ವೀರಶೈವಮಹಾಪುರಾಣ ಬಸವ ಪುರಾಣ ಕೆಂಚವೀರಣ್ಣೊಡೆಯಾದಿ

ಗಳ ಶೂನ್ಯಸಂಪಾದನೆ, ವೃಷಭೇಂದ್ರವಿಜಯ ದೇವಾಂಗಪುರಾಣ ಇತ್ಯಾದಿ ಗ್ರಂಥಗಳನ್ನ ಆಧಾರವಾಗಿ ಕೊಟ್ಟಿದ್ದಾರೆ. ಈ ಸಂದರ್ಭದಲ್ಲಿ ನಾವೊಂದು ಮಾತನ್ನು ನೆನಪಿನಲ್ಲಿಡಬೇಕಾಗಿದೆ. ಮ॥ ರಾ॥ ಶ್ರೀನಿವಾಸಮೂರ್ತಿಗಳಂತಹ ನಾಗರಿಕರು ಪರಸ್ಪರ ವಿರೋಧವುಳ್ಳ ಈ ಪುರಾಣಗಳ ಮಾತಿಗೆ ಇದ್ದಕ್ಕಿದ್ದಂತೆಯೇ ಇತಿಹಾಸದ ಬೆಲೆಯನ್ನು ಕಟ್ಟುವುದು ಆಶ್ಚರ್ಯಕರವಾಗಿದೆ. ಇತರ ಮತದ ಪುರಾಣಗಳಲ್ಲಿರುವಂತೆ ವೀರಶೈವ ಪುರಾಣಗಳಲ್ಲಿಯೂ ಪರಸ್ಪರ ವಿರೋಧವಾದ ಚರಿತೆಗೆ ಸರಿಹೋಗದ ಸಂಗತಿಗಳೆಷ್ಟೋ ಇವೆ. ಉದಾಹರಣೆಗೆ ಚಿಕ್ಕನಂಜಾರ್ಯನು ತನ್ನ ರಾಘವಾಂಕನ ಕಾವ್ಯದಲ್ಲಿ ಹರೀಶ್ವರ, ಚಾಮರಸ, ರಾಘವಾಂಕ, ಕುಮಾರವ್ಯಾಸ ಇವರನ್ನೆಲ್ಲ ಒಂದೇ ಗದ್ದಿಗೆಯಲ್ಲಿ ಕುಳ್ಳಿರಿಸಿ ವಾದ ಮಾಡಿಸಿದ್ದಾನೆ. ಚೋರ ಬಸವಪುರಾಣದ ಶಂಕರ ಕವಿಯು ಬಸವೇಶ್ವರನ ಮಹಿಮೆಯನ್ನು ಹರೀಶ್ವರನಿಂದ ಚಾಮರಸನಿಗೆ ಹೇಳಿಸಿದ್ದಾನೆ. ರೇವಣಸಿದ್ಧ ಪುರಾಣದ ಬೊಮ್ಮರಸನು ರೇವಣಸಿದ್ಧೇಶ್ವರನನ್ನೂ ರಾಮಾಯಣದ ವಿಭೀಷಣನನ್ನೂ ಸಮಕಾಲೀನರೆಂದು ಹೇಳಿದ್ದಾನೆ. ಇದನ್ನೆಲ್ಲ ನಾವು ಚರಿತ್ರೆಯೆಂದು ನಂಬಲಾಗುತ್ತದೆಯೇ ? ಈ ಪುರಾಣಗಳೆಲ್ಲ ಮುಖ್ಯವಾಗಿ ಶಿವಶರಣರ ಮಹಿಮೆಗಳನ್ನೂ ವೀರಶೈವ ಮತತತ್ವಗಳನ್ನೂ ವಿಸ್ತರಿಸಲಿಕ್ಕೆ ಬರೆಯಲ್ಪಟ್ಟವು. ಆದರೆ ಈ ಪುರಾಣಗಳೆಲ್ಲ ಸುಳ್ಳೆಂದೂ ನನ್ನ ತಾತ್ಪರ್ಯವಲ್ಲ. ತತ್ರಾಪಿ ವೀರಶೈವ ಶರಣರ ಪುರಾಣಗಳ ಕಥಾವಸ್ತುವು ಮೂಲದಲ್ಲಿ ಚರಿತ್ರೆಯೇ ಆಗಿದೆ. ಇವುಗಳೆಲ್ಲ ಕವಿಗಳು ಮಾಡಿದ ಕಲ್ಪನಾಂಶವೂ ಉತ್ಪ್ರೇಕ್ಷೆಗಳೂ ಇವನ್ನು ಪುರಾಣಗಳನ್ನಾಗಿ ಮಾರ್ಪಡಿಸಿವೆ. ಆದುದರಿಂದ ಈ ಪುರಾಣಗಳಲ್ಲಿ ಚರಿತ್ರೆಗೆ ಸರಿಬರುವ ವಿಷಯಗಳು ಹೊರತಾಗಿ ಮಿಕ್ಕವನ್ನು ಗಮನಿಸುವುದು ಸಾಧುವಲ್ಲ.

ಇನ್ನು ಶೂನ್ಯಸಂಪಾದನೆಗಳನ್ನು ಕುರಿತು ಒಂದು ಮಾತು ಹೇಳಬೇಕಾಗಿದೆ. ಈಗ ತಿಳಿದುಬಂದಿರುವ ಐದು ಶೂನ್ಯಸಂಪಾದನೆಗಳೂ ಬಸವೇಶ್ವರನ ಕಾಲಕ್ಕಿಂತ ಬಹಳ ಈಚಿನವು. ವಚನ ಗ್ರಂಥಗಳಲ್ಲಿಯೂ ಕವಿಗಳ ಕೈವಾಡ ನಡದಿದೆ. ನಾಟಕೀಯತೆಯಿದೆ. ವಚನಗ್ರಂಥಗಳು ತತ್ವಜ್ಞಾನದಿಂದ, ಸಾಹಿತ್ಯದೃಷ್ಟಿಯಿಂದ ಪ್ರಸಿದ್ಧವೇ ಹೊರತು ಚರಿತ್ರೆಯಿಂದಲ್ಲ. ವಿಜಯನಗರದ ಕಾಲದ ಲಿಂಗವಂತ ಕವಿಗಳು ಪುರಾಣಕಥೆಗಳಲ್ಲಿ ಮಾರ್ಪಾಟು ಮಾಡಿದಂತೆಯೇ ವಚನಗ್ರಂಥಗಳಲ್ಲಿಯೂ ಮಾರ್ಪಾ

ಟುಮಾಡಿದ್ದಾರೆ. ಶೂನ್ಯಸಂಪಾದನೆ ಗ್ರಂಥಗಳಲ್ಲಿಯೂ ಬದಲಾವಣೆ ನಡೆದಿದೆ. ಅಲ್ಲಮಪ್ರಭು ಮತ್ತು ಅಕ್ಕಮಹದೇವಿಯವರ ವಿವಾಹ ವಿಷಯವನ್ನು ಪ್ರಾಚೀನನಾದ ಹರೀಶ್ವರನು ಹೇಳಿದುದನ್ನು ಈಚಿನವರಾದ ಚಾಮರಸಾದಿಗಳು ಕೈಬಿಟ್ಟು ಅದಕ್ಕೆ ಬೇರೊಂದು ರೂಪನ್ನೇ ಕೊಟ್ಟಿದ್ದಾನೆ. ಗುಮ್ಮಳಾಪುರದ ಸಿದ್ಧಲಿಂಗಯತಿಯಂತಹ ಉಗ್ರಪಕ್ಷದವರು ಕಡೆಗೆ ಹರಿಹರನನ್ನು ಶಪಿಸಿ ಅವನಿಗೆ ಭವಿತನವನ್ನು ಕೂಡ ಅನುಗ್ರಹಿಸಿದ್ದಾರೆ. ಈಚೀನ ಶೂನ್ಯಸಂಪಾದನೆಕಾರರು ತಮ್ಮ ಮನಬಂದಂತೆ ಬದಲಾವಣೆಯನ್ನು ಕೂಡ ಮಾಡಿದ್ದಾರೆ.

ಮ|| ರಾ|| ಶ್ರೀನಿವಾಸಮೂರ್ತಿಗಳು ಪ್ರಬುದ್ಧ ಕರ್ಣಾಟಕ ಸಂ. ೧೫. ಸಂ. ೪ ರಲ್ಲಿ 'ಶೂನ್ಯಸಂಪಾದನೆಗಳು' ಎಂಬ ಲೇಖನವನ್ನು ಬರೆದು ಈ ಗ್ರಂಥಗಳ ಮಾರ್ಪಾಟಿನ ವಿಚಾರವನ್ನು ಚರ್ಚಿಸಿ ಕಡೆಯಲ್ಲಿ "ಶೂನ್ಯಸಂಪಾದನೆಯ ಸಂಕಲ್ಪಗಳು ಸುಮಾರು ಐದು ಇರುವುದರಿಂದಲೂ ಅವುಗಳಲ್ಲಿ ವ್ಯತ್ಯಾಸಗಳನೇಕವಿರುವುದರಿಂದಲೂ ಇತಿಹಾಸದ ದೃಷ್ಟಿಯಿಂದ ನೋಡುವವರಿಗೆ ಈ ಬೆಳವಣಿಗೆ ಮತ್ತು ಮಾರ್ಪಾಟುಗಳು ಬಹಳ ಮುಖ್ಯವಾಗಿ ಕಾಣುವುವು. ಮೊದಲಿನ ಗ್ರಂಥಗಳಲ್ಲಿದ್ದ ಕೆಲವು ಮುಖ್ಯವಾದ ವಚನಗಳಿಗೆ ಸಿದ್ಧಲಿಂಗಯತಿಯ ಕೈಯಿಂದಲೂ ಸಿದ್ಧವೀರಣಾರ್ಯನ ಕೈಯಿಂದಲೂ ಬಹಿಷ್ಕಾರವುಂಟಾಗಿದೆ. ಆದುದರಿಂದ ಸಿದ್ಧರಾಮನ ದೀಕ್ಷೆ ವಿಚಾರ, ಅಲ್ಲಮಪ್ರಭುವಿನ ವಿಕಾರ ಮುಂತಾದುವನ್ನು ವಿಮರ್ಶೆ ಮಾಡತಕ್ಕವರು ಹಿಂದಿನ ಶೂನ್ಯಸಂಪಾದನೆ ಗ್ರಂಥಗಳನ್ನು ನೋಡುವುದಾವಶ್ಯಕ. ಸಿದ್ಧಲಿಂಗಯತಿ ಮತ್ತು ಸಿದ್ಧವೀರಣಾರ್ಯರ ಗ್ರಂಥಗಳಲ್ಲಿ ಹೊಸದಾಗಿ ಸೇರಿಸಿರುವ ವಚನಗಳನ್ನು ಒರೆಹಚ್ಚಿ ನೋಡುವುದೂ ಅವಶ್ಯಕ." ಎಂದು ಬರೆದಿದ್ದಾರೆ. ಈ ಮಾತುಗಳೆಲ್ಲವೂ ನಮ್ಮ ವಾದಕ್ಕೆ ಸಹಾಯಕವಾಗಿಯೇ ಇವೆ.

ಇತಿಹಾಸ ಸಂಶೋಧನೆಯಲ್ಲಿ ಆಧುನಿಕ ಗ್ರಂಥಗಳಿಗಿಂತಲೂ ಪ್ರಾಚೀನ ಗ್ರಂಥಗಳನ್ನೂ ಪುರಾಣಗಳಿಗಿಂತ ಶಾಸನಗಳನ್ನೂ ಹೆಚ್ಚು ಪ್ರಮಾಣಾರ್ಹವೆಂದು ನಂಬುವುದು ಎಲ್ಲರೂ ಒಪ್ಪಬೇಕಾದ ವಿಚಾರ. ಮತ್ತೊಬ್ಬರ ಪುರಾಣದಲ್ಲಿ ಒಬ್ಬ ಮಹಾತ್ಮನ ವಿಚಾರವನ್ನು ಪ್ರಾಸಂಗಿಕವಾಗಿ ತೆಗೆದುಕೊಂಡಿರುವುದಕ್ಕಿಂತಲೂ ಆ ಮಹಾತ್ಮನ ವಿಷಯವಾಗಿಯೇ ಹುಟ್ಟಿದ ಗ್ರಂಥವು ಆತನ ಚರಿತ್ರೆಗೆ ಹೆಚ್ಚು ಉಪಯುಕ್ತವಾದ ಸಾಧನ.

ಇದುವರೆಗೆ ನಾನು ಹೇಳಿದ ಸರ್ವಸಾಧಾರಣ ನಿಯಮಗಳನ್ನು ಒಪ್ಪಿದವರಿಗೆ ಮುಂದೆ ನಾನು ಹೇಳುವ ಸಮಾಧಾನಗಳು ಸಾಧುವೆನಿಸದಿರಲಾರವು.

ಈ ಮುಂದೆ ಹೇಳಿರುವ ಶಂಕರದಾಸಿ ಮತ್ತು ದೇವರದಾಸಿಯ ಕಥೆಗಳಿಂದ ಇವರಿಬ್ಬರೂ ಬಸವೇಶ್ವರನಿಗಿಂತಲೂ ಪ್ರಾಚೀನರೆಂದು ಸಿದ್ಧವಾಗುತ್ತದೆ.

ಭೀಮಕವಿ ಬಸವ ಪುರಾಣದ ಸಂಧಿ ೨೩ ಮತ್ತು ೫೭. ಷಡಕ್ಷರದೇವನ ವೃಷಭೇಂದ್ರವಿಜಯ ಆಶ್ವಾಸ ೧೩ ಮತ್ತು ೩೫. ವ್ಯಾಸೋಕ್ತ ಬಸವಪುರಾಣ ಅಧ್ಯಾಯ ೨೪ ಹಾಗೂ ೩೨. ಕಂಚಿ ಶಂಕರಾರಾಧ್ಯನ ಸಂಸ್ಕೃತ ಬಸವೇಶವಿಜಯದ ಅಧ್ಯಾಯ ೧೨ ಮತ್ತು ೩೬. ಪಾಲ್ಕುರಿಕೆ ಸೋಮನಾಥನ ಆಂಧ್ರ ಬಸವಪುರಾಣದ ಆಶ್ವಾಸ ೪ ಮತ್ತು ೬. ಕೈ॥ ಕರ್ಣಾಟಕ ಭಾಷಾರತ್ನ ಪಿ. ಆರ್. ಕರಿಬಸವಶಾಸ್ತ್ರಿಗಳ ಬಸವೇಶವಿಜಯ ಅಧ್ಯಾಯ ೧೧ ಮತ್ತು ೩೮ ಕೈ॥ ವಿದ್ವಾನ್ ಎನ್. ಆರ್. ಕರಿಬಸವಶಾಸ್ತ್ರಿಗಳ ಬಸವರಾಜವಿಜಯದ ಅಧ್ಯಾಯ ೧೭ ಮತ್ತು ೪೦ ಎಂಬೀ ಸ್ಥಳಗಳಲ್ಲಿ ದಾಸಿಮಯ್ಯಗಳ ಕಥೆ ಬಂದಿದೆ.

ಈ ಸಂದರ್ಭದಲ್ಲೆಲ್ಲ ಮಾಚಿದೇವನು ಬಸವೇಶ್ವರನಿಗೂ ಏಕಾಂತ ರಾಮಯ್ಯನು ಜಿನಭಕ್ತನಿಗೂ ಪೂರ್ವದ ಶಿವಶರಣರ ಕಥೆಗಳನ್ನು ಹೇಳುವ ದಾಟಿಯಲ್ಲಿ ಹೇಳಿದ್ದಾರೆ. ಈ ಕಥೆಗಳಲ್ಲೆಲ್ಲ ಶಂಕರದಾಸಿ, ದೇವರದಾಸಿ, ಜಯಸಿಂಹ, ಸುಗ್ಗಲಾದೇವಿ, ಪೊಟ್ಟಲಕೆರೆ ಎಂಬೀ ಹೆಸರುಗಳು ಬರುತ್ತವೆ. ಹರೀಶ್ವರನ ಶಂಕರದಾಸಿಮಯ್ಯ ರಗಳೆಯ ಕಥಾವಸ್ತುವನ್ನೇ ಬಸವೇಶ್ವರ ಷಟ್‌ಸ್ಥಲ ವಚನ ಕಥಾಸಾರ ಗ್ರಂಥಕರ್ತೃವೂ ಹೇಳಿದ್ದಾನೆ.

ಚಾಲುಕ್ಯರಾಜರಲ್ಲಿ ಕ್ರಿ ಶ. ೧೦೧೮ ರಿಂದ ೧೦೪೦ ರ ವರೆಗೆ ಜಯಸಿಂಹನೆಂಬ ರಾಜನೊಬ್ಬನಿದ್ದಾನೆಂದೂ ಇವನಿಗೆ ಸುಗ್ಗಲಾದೇವಿಯೆಂಬ ರಾಣಿಯೊಬ್ಬಳಿದ್ದಾಳೆಂದೂ, ಈ ಅರಸನು ಪೊಟ್ಟಲಕೆರೆಯಲ್ಲಿ ರಾಜ್ಯಭಾರಮಾಡುತ್ತಿದ್ದಾನೆಂದೂ ಇವನು ಆನಂತರ ರಾಜ್ಯಭಾರ ಮಾಡಿದ ಆಹವಮಲ್ಲ ಸೋಮೇಶ್ವರನು ಕ್ರಿ. ಶ. ೧೦೫೩ ರಲ್ಲಿ ಕಲ್ಯಾಣಪಟ್ಟಣವನ್ನು ಕಟ್ಟಿಸಿದನೆಂದೂ ಚರಿತ್ರೆಯು ಹೇಳುತ್ತದೆ. ಇದರಿಂದ ಕಲ್ಯಾಣಕ್ಕಿಂತ ಮೊದಲು ಪೊಟ್ಟಲಕೆರೆಯೇ ರಾಜಧಾನಿಯಾಗಿತ್ತೆಂದು ಸಿದ್ಧ

ವಾಗುತ್ತದೆ. ಪೊಟ್ಟಲಕೆರೆಗೆ ಜಯಸಿಂಹನ ಆಸ್ಥಾನಕ್ಕೆ ದೇವರದಾಸಿ, ಶಂಕರದಾಸಿಗಳು ಹೋಗಿದ್ದರೆಂಬುದನ್ನು ಕನ್ನಡ, ಸಂಸ್ಕೃತ, ತೆಲುಗು ಬಸವಪುರಾಣಗಳೆಲ್ಲವೂ ಹೇಳುತ್ತವೆ. ಒಂದೆರಡುಕಡೆ ಪೊಟ್ಟಲಕೆರೆಯನ್ನೇ ಕಲ್ಯಾಣವೆಂದು ಕವಿಗಳು ಭ್ರಮಿಸಿ ಹೇಳಿದ್ದರೂ ನಾನು ಹಿಂದೆ ಹೇಳಿದ ಚಾರಿತ್ರಿಕ ಪ್ರಮಾಣದಿಂದ ಇದು ಸ್ಪಷ್ಟವಾಗುತ್ತದೆ. ಬಸವಪುರಾಣಗಳಲ್ಲಿ ಈ ದಾಸಿಮಯ್ಯಗಳ ಕಥೆಗಳನ್ನು ಹೇಳುವ ಮಾಚಿದೇವ ಮತ್ತು ಏಕಾಂತದ ರಾಮಯ್ಯಗಳು ಈ ಕಥೆಗಳು ತಮ್ಮ ಕಾಲಕ್ಕೆ ಹಿಂದಿನವೆಂದು ಸ್ಪಷ್ಟವಾಗಿ ಹೇಳಿದ್ದಾರೆ. ಆದುದರಿಂದ ಈ ಕವಿಗಳ ಅಭಿಪ್ರಾಯದ ಪ್ರಕಾರ ದಾಸಿಮಯ್ಯಗಳು ಬಸವನಗಿಂತ ಹಿಂದಿನವರೆಂದು ಸಿದ್ಧವಾಗುತ್ತದೆ. ಈ ನಮ್ಮ ಅಭಿಪ್ರಾಯವನ್ನು ಸಂಸ್ಕೃತ ಬಸವಪುರಾಣಕಾರರು ಸಮರ್ಥಿಸಿದ್ದಾರೆ.

ಶ್ಲೋ॥ ಏವಮಾ ಭಾಷ್ಯ ಬಸವಂ ಮಾಚಾಖ್ಯೋ ಭಕ್ತ ಸತ್ತಮಃ। ಕುರ್ವಾಣಸ್ತನ್ಮತಸ್ಥೈರ್ಯಂ ವಕ್ತುಂ ಸಮುಪಚಕ್ರಮೇ ॥

ಬಸವೇಶ ಮಹಾಬುದ್ಧೇಶೃಣುಷ್ವೇಮಾಂ ಕಥಾಂ ಪರಾಂ। ಸುರವ್ಯೇ ಶಂಕರಸ್ಥಾನೇ ನಾನಾ ಮುನಿಗಣಾವೃತೇ । ಆಸೀಚ್ಛಂಕರದಾಸಾಖ್ಯ ಶಿವಭಕ್ತೋ ದೃಢವ್ರತಃ ॥

(ವ್ಯಾ. ಬ. ಪು. ಅ. ೨೪.)

ಪುರಾ ಪೊಟ್ಟಚರ ಗ್ರಾಮೋ ಚಾರ್ವಾಕೋಭೂನ್ಮಹಾ ಮತಾಂ। ಪಂಚವಿಂಶತಿಸಾಹಸ ಚಾರ್ವಾಕಪರಿವಾರಿತಃ॥

ತದ್ಗ್ರಾಮೋ ಬಲ್ಲಹೋ ನಾಮರಾಜಾ ಜೈನಕುಲೋದ್ಭವಃ। ತಸ್ಯ ರಾಜ್ಞಾಶ್ಚ ಗುರುರಭೂತ್ ಸ್ವಯಾ ಜೈನ ಶಿಖಾಮಣಿಃ॥

ಸಿಂಗಬಲ್ಲಹ ಭೂಪಸ್ಯ ಪುರಂದರಸಮ ಶ್ರಿಯಾಂ। ತಸ್ಯಾಸೀತ್ ಸುಗ್ಗಲಾದೇವೀ ಭಾರ್ಯಾತ್ರೈಲೋಕ್ಯ ಸುಂದರೀ॥ ಪಟ್ಟಣೇ ಜಯಸಿಂಹಾಖ್ಯಃ ಪೊಟ್ಟಲಚ್ಚೇರುನಾಮನಿ। ಬಭೂವ ಕೋಪಿಭೂಪಾಲೋ ಭೂಪಾಲಪುರುಷೋತ್ತಮಃ। ತಸ್ಯ ಸುಗ್ಗಲಾದೇವೇತಿಸರ್ವ ಸೌಭಾಗ್ಯ ಸುಂದರೀ। ಪ್ರಿಯಾಭವದ್ಗುಣೈಶ್ಲಾಘ್ಯಾ ಮಹಾದೇವೀಪದಂಗತಾ॥

(ಸಂ. ಬ. ಪು. ಅ. ೩೪.)

ಈ ಪುರಾಣಕಾರರ ಅಭಿಪ್ರಾಯದಂತೆ ದಾಸಿಮಯ್ಯಗಳಿಬ್ಬರೂ ಬಸವೇಶ್ವರನಗಿಂತಲೂ ಹಿಂದಿನವರೆಂದು ಸಿದ್ಧಿಸುವುದಿಲ್ಲವೇ ?

(*ii*) ದೇವರದಾಸಿ ಶಂಕರದಾಸಿಮಯ್ಯಗಳು ಶ್ರೀ ರೇಣುಕಾಚಾರ್ಯ ಶ್ರೀ ಬಸವೇಶ್ವರ ಶ್ರೀ ತೋಂಟದಾರ್ಯರಂತೆ ವೀರಶೈವ ವಿಭೂತಿಗಳಾದುದರಿಂದ ಈ ಮಹಾತ್ಮರಿಬ್ಬರ ಬಗ್ಗೆ ಲಿಂಗವಂತ ಕವಿಗಳು ದೇವರ ದಾಸಿಮಯ್ಯನ ಪುರಾಣ, ಶಂಕರದಾಸಿಮಯ್ಯ ಪುರಾಣ ಎಂಬ ಹೆಸರಿನಿಂದ ಸ್ವತಂತ್ರ ಕಾವ್ಯಗಳನ್ನೇ ಬರೆದಿದ್ದಾರೆ. ಹರೀಶ್ವರನು 'ಶಂಕರ ದಾಸಿಮಯ್ಯನ ರಗಳೆ' ಎಂಬ ಒಂದು ಕಾವ್ಯವನ್ನೇ ಬರೆದಿದ್ದಾನೆ. ಇವನು ದೇವರದಾಸಿಮಯ್ಯನ ರಗಳೆಯನ್ನೂ ಬರೆದಿರಬಹುದೆಂದು ತೋರುತ್ತದೆ. ಆದರೆ ಅದು ಇನ್ನೂ ನಮಗೆ ಸಿಕ್ಕಿಲ್ಲ.

ಶಾ. ಶ. ೧೭೬೪ ರಲ್ಲಿ ವಿರೂಪಾಕ್ಷಕವಿ ಎಂಬುವನು "ದೇವರದಾಸಿಮಯ್ಯನ ಪುರಾಣ" ಎಂಬ ಗ್ರಂಥವನ್ನು ಬರೆದಿದ್ದಾನೆ. ಇದರ ಮೂಲ ಸಂಸ್ಕೃತದಲ್ಲಿತ್ತೆಂದು ಅವನು ಹೇಳುತ್ತಾನೆ- ಈ ಸಂಸ್ಕೃತದ ಗ್ರಂಥ ನಮಗೆ ಸಿಕ್ಕಿಲ್ಲ. ಈ ಕನ್ನಡ ಪುರಾಣವು ರಾವಸಾಹೇಬ ಪಿ. ಜಿ. ಹಳಕಟ್ಟಿ ವಕೀಲರ ಕಡೆಗಿದೆ- ಈ ಗ್ರಂಥವು ಕವಿಚರಿತೆಕಾರರಿಗೆ ಸಿಕ್ಕಂತೆ ತೋರುವುದಿಲ್ಲ. ಇದು ಷಟ್ಪದೀಕಾವ್ಯ.

ಈ ಗ್ರಂಥದಲ್ಲಿ ದೇವರದಾಸಿಯ ಚರಿತ್ರೆ ವಿಸ್ತಾರವಾಗಿ ಬಂದಿದೆ. ದೇವರದಾಸಿ, ದುಗ್ಗಳೆ, ಶಂಕರದಾಸಿ, ಜಯಸಿಂಹ, ಸುಗ್ಗಲಾದೇವಿ, ಪೊಟ್ಟಲಕೆರೆ ಹೆಸರುಗಳು ಮಾತ್ರ ಬಂದಿವೆ. ಬಸವೇಶ್ವರನ ಹೆಸರಾಗಲಿ ದಾಸಿಮಯ್ಯಗಳು ಬಸವ ಯುಗದವರೆನ್ನುವ ಯಾವ ವಿಚಾರವಾಗಲಿ ಇದರಲ್ಲಿ ಬಂದಿಲ್ಲ. ಆದುದರಿಂದ ಈ ಪುರಾಣ ಕಥೆಯು ಚರಿತ್ರೆಗೆ ಹೊಂದಿಕೆಯಾಗಿದೆ.

ಹಂಪೆಯ ಹರೀಶ್ವರನು ನಾವು ಹಿಂದೆ ಹೇಳಿದ ಎಲ್ಲ ಗ್ರಂಥಕಾರರಿಗೂ ಪ್ರಾಚೀನನೆಂಬುದು ಸಿದ್ಧಾಂತವಾಗಿದೆ. ಇವನ ಶಂಕರದಾಸಿಮಯ್ಯ ರಗಳೆಯಲ್ಲಿಯೂ ಈ ಗ್ರಂಥದ ಆಧಾರದ ಮೇಲೆ ಪಂಡಿತ ಮಲ್ಲಿಕಾರ್ಜುನನಿಂದ ಕ್ರಿ. ಶ. ೧೬೮೭ ರಲ್ಲಿ ಬರೆಯಲ್ಪಟ್ಟಿರುವ ಕವಿ ಚರಿತ್ರೆಯಲ್ಲಿ ಉಕ್ತವಾಗಿರುವ ಶಂಕರದಾಸಿಮಯ್ಯನ ಪುರಾಣ ಎಂಬ ಗ್ರಂಥದಲ್ಲಿಯೂ ಶಂಕರದಾಸಿಯು ಬಸವನ ಸಮಕಾಲೀನನೆಂಬ ಅರ್ಥದ ಯಾವ ಕಥೆಯೂ ಹೇಳಲ್ಪಟ್ಟಿಲ್ಲ.

ನಾನು ಇದುವರೆಗೆ ಸೂಚಿಸಿರುವಲ್ಲಿ ಪುರಾಣಗಳ ಕಥೆಗಳೂ ಈ ದಾಸಿಮಯ್ಯಗಳು ಬಸವನಗಿಂತಲೂ ಹಿಂದಿನವರೆಂಬುದನ್ನೇ ಸಮರ್ಥಿ

ಸುತ್ತವೆ. ಹಾಗೂ ಮ॥ ರಾ॥ ಶ್ರೀನಿವಾಸಮೂರ್ತಿಗಳು ಸೂಚಿಸುವ ಕಥೆಗಳಿಗೆ ವಿರೋಧವಾಗಿವೆ.

೧. ಶಂಕರದಾಸಿಮಯ್ಯ ರಗಳೆ (ಹರೀಶ್ವರ).

೨. ಶಂಕರದಾಸಿಮಯ್ಯ ಪುರಾಣ (ಪಂಡಿತ ಮಲ್ಲಿಕಾರ್ಜುನ ಕವಿ)

೩. ದೇವರದಾಸಿಮಯ್ಯ ಪುರಾಣ. (ವಿರೂಪಾಕ್ಷ ಕವಿ.)

೪. ಬಸವೇಶ್ವರ ಷಟ್‌ಸ್ಥಲ ವಚನ ಕಥಾಸಾರ.

ಎಂಬೀ ನಾಲ್ಕು ಗ್ರಂಥಗಳಲ್ಲಿ ಬರುವ ದಾಸಿಮಯ್ಯಗಳ ಕಥೆಯೂ ಶ್ರೀಯುತ ಶ್ರೀನಿವಾಸಮೂರ್ತಿಗಳಿಗೆ ಪ್ರತಿಕೂಲವಾಗಿಯೂ ಚರಿತ್ರೆಗೆ ಸಮಂಜಸವಾಗಿಯೂ ಇವರು ಬಸವನಗಿಂತ ಹಿಂದಿನವರೆಂಬುದನ್ನು ಹೇಳತಕ್ಕುವಾಗಿಯೂ ಇವೆ.

(*iii*) ಇನ್ನು ಕೆಲವು ಇತಿಹಾಸಕಾರರ ಅಭಿಪ್ರಾಯಗಳ ಮೇಲಿನಿಂದ ಈ ದಾಸಿಮಯ್ಯಗಳು ಬಸವನಗಿಂತಲೂ ಪ್ರಾಚೀನರೆಂಬುದನ್ನು ಸಿದ್ಧಮಾಡಬೇಕಾಗಿದೆ.

## ವಿದ್ವಾಂಸರ ಅಭಿಪ್ರಾಯಗಳು.

(*a*) ಜೇಡರದಾಸಯ್ಯನು ೧೦೪೦ ಇವನು ಜೈನರನ್ನು ಜೈಸಿ ತನ್ನ ಶಿಷ್ಯೆಯಾದ ಸುಗ್ಗಲಾದೇವಿಯ ಗಂಡ ಜಯಸಿಂಹರಾಜನನ್ನು (ದೇಸಿಂಗ) ವೀರಶೈವನನ್ನಾಗಿ ಮಾಡಿದಂತೆ ತಿಳಿಯುತ್ತದೆ. ಬ್ರಹ್ಮಶಿವನು (ಸು. ೧೧೭೫) ಈ ಕವಿಯ ಹೆಸರನ್ನು ಹೇಳುವುದರಿಂದ ಇವನು ಅವನ ಕಾಲಕ್ಕೆ ಹಿಂದೆ ಇದ್ದಿರಬೇಕು. ಆದುದರಿಂದ ಈ ರಾಜನು ೧೦೧೮ ರಿಂದ ೧೦೪೨ ರ ವರೆಗೆ ರಾಜ್ಯವಾಳಿದ ಚಾಲುಕ್ಯ ರಾಜನಾದ ೧ನೇ ಜಯಸಿಂಹನಾಗಿರಬೇಕು. (ಕನ್ನಡ ಕವಿಚರಿತ್ರೆ. ೧ನೇ ಭಾಗ)

ಮೇಲೆ ಹೇಳಿರುವ ಬ್ರಹ್ಮಶಿವನು ತನ್ನ ಸಮಯ ಪರೀಕ್ಷೆಯೆಂಬ ಗ್ರಂಥದಲ್ಲಿ ಜೇಡರದಾಸಯ್ಯನ ಹೆಸರನ್ನು ಎತ್ತಿದ್ದಾನೆಂದು ಕೈ॥ ಆರ್ ನರಸಿಂಹಾಚಾರ್ಯರು ಹೇಳಿದ್ದಾರಷ್ಟೆ. ಇವರು ಈ ಕವಿ ಕ್ರಿ. ಶ. ೧೧೭೫ ಎಂದು ಹೇಳಿದ್ದಾರೆ. ಆದರೆ ಡಾ|| ವೆಂಕಟಸುಬ್ಬಯ್ಯನವರು "ಕೆಲವು ಕನ್ನಡ ಕವಿಗಳ ಜೀವನ ಕಾಲ ವಿಚಾರ" ಎಂಬ ಗ್ರಂಥದಲ್ಲಿ ಈ ಬ್ರಹ್ಮಶಿವ ಕವಿಯು ಇನ್ನೂ ಹಿಂದಿನವನೆಂದು ಹೇಳಿದ್ದಾರೆ. "ಆದುದರಿಂದ ಈ ಬ್ರಹ್ಮಶಿವನೂ ಕೂಡ ಕ್ರಿ. ಶ. ೧೦೬೦—೧೦೬೫ ಕ್ಕಿಂತ ಈಚೆಗೆ ಚಾಲುಕ್ಯ ಚಕ್ರವರ್ತಿ ತ್ರೈಲೋಕ್ಯಮಲ್ಲ ಆಹವಮಲ್ಲನ ಆಳಿಕೆಯಲ್ಲಿ

ಎಂದರೆ ಕ್ರಿ. ಶ. ೧೨೬೫---೧೦೬೮ ರಲ್ಲಿ ತನ್ನ ಗ್ರಂಥವನ್ನು ಬರದಿರಬೇಕು. (ಕೆ. ಕ. ಜೀ. ಪು. ೨೦೭) ಈ ಬ್ರಹ್ಮಶಿವನ ಪ್ರಾಚೀನತೆಯು ಜೇಡರದಾಸಿಮಯ್ಯನ ಪ್ರಾಚೀನತೆಗೆ ಸಹಾಯಕವಾಗುತ್ತದೆಯಲ್ಲವೇ ?

(*a*) ದೇವರದಾಸಿಮಯ್ಯನು ಕ್ರಿ. ಶ. ೧೦೦೮ ರಿಂದ ೧೦೫೦ ರ ವರೆಗೆ ಆಳಿದ ಚಾಳುಕ್ಯರಾಜನಾದ ಜಯಸಿಂಹನ ಕಾಲದಲ್ಲಿದ್ದನೆಂಬುದು ಈಗ ಸ್ಪಷ್ಟವಾಗಿರುತ್ತದೆ. ಪೆಫ್ಲೀಟಸಾಹೇಬರು ಇಂಡಿಯನ್ ಆಂಟಿಕ್ವಯರಿನ ೧೯ ರಲ್ಲಿ ಈತನು ಜಯಸಿಂಹನ ಕಾಲಕ್ಕಿರಬಹುದೆಂದು ಊಹಿಸಿದ್ದಾರೆ. (ದೇವರದಾಸಿಮಯ್ಯನ ವಚನಗಳ ಪೀಠಿಕೆ ರಾವಸಾಹೇಬ ಪಿ. ಜಿ. ಹಳಕಟ್ಟಿಯವರು )

(*c*) ಇನ್ನು ಸ್ವತಃ ಲಿಂಗಧಾರಿಗಳಾಗಿದ್ದು ವೀರಶೈವರ ಆಚರಣೆಯನ್ನು ಪ್ರಸಾರ ಮಾಡಲು ಹೆಣಗಾಡಿದವರಲ್ಲಿ ನಮಗೆ ಗೊತ್ತಿದ್ದ ಮಟ್ಟಿಗೆ ಜೇಡರದಾಸಿಮಯ್ಯನವರೊಬ್ಬರು. ಇವರ ಬಗ್ಗೆ ಬಸವೇಶ್ವರನ ವಚನಗಳಲ್ಲಿ ಮೇಲಿಂದಮೇಲೆ ಉಲ್ಲೇಖವಿದೆ. ಬಸವ ಪುರಾಣದಲ್ಲಿಯೂ ಇತರ ವೀರಶೈವ ಪುರಾಣಗಳಲ್ಲಿಯೂ ಇವರ ಚರಿತ್ರವು ಬಂದಿದೆ. ಅದರೊಳಗಿನ ಕೆಲವು ವಿಚಾರಗಳು ಶಿಲಾಶಾಸನದಿಂದ ಪ್ರಸ್ಥಿತವಾಗುವವು. ಕ್ರಿ. ಶ. ೧೧೪೮ ರಲ್ಲಿ ಹುಟ್ಟಿದ ಗೊಬ್ಬೂರು ಶಿಲಾಶಾಸನದಲ್ಲಿ ಜೇಡರದಾಸಿಮಯ್ಯಗಳ ಹೆಸರಿದೆ. ಡಾ॥ ಫ್ಲೀಟರಂಥ ಪಾಶ್ಚಾತ್ಯ ವಿದ್ವಾಂಸರೂ ಕೂಡ ದಾಸಿಮಯ್ಯನು ಐತಿಹಾಸಿಕ ಪುರುಷನೆಂದು ಒಪ್ಪಿಕೊಂಡಿದ್ದಾರೆ. ಕ್ರಿ. ಶ. ೧೦೦೮ ರಿಂದ ೧೦೪೨ ರ ವರೆಗೆ ಆಳಿದ ಚಾಳುಕ್ಯ ಚಕ್ರವರ್ತಿ ಜಗದೇಕಮಲ್ಲ ಜಯಸಿಂಹನ ಕಾಲದಲ್ಲಿ ದಾಸಿಮಯ್ಯಗಳಿದ್ದರೆಂದು ತೋರುವುದರಿಂದ ಇವರು ಬಸವಣ್ಣನವರಿಗಿಂತಲೂ ನೂರಾರು ವರ್ಷ ಹಿಂದಿನವರು. ನಮಗೆ ಗೊತ್ತಿದ್ದ ವೀರಶೈವ ಐತಿಹಾಸಿಕ ಪುರುಷರಲ್ಲಿ ಇವರೇ ಮೊದಲನೆಯವರೆನ್ನಬಹುದು. ಆದುದರಿಂದ ವೀರಶೈವ ಇತಿಹಾಸವನ್ನು ಇವರ ಕಾಲದಿಂದ ಅಂದರೆ ೧೧ನೇ ಶತಮಾನದಿಂದಲೇ ಆರಂಭಿಸಬೇಕಾಗುತ್ತದೆ. (ಶಿವಾನುಭವ ಸಂ. ೬ ಸಂ. ೫ ಡಾ. ಎಸ್. ಸಿ. ನಂದೀಮಠ ಎಂ. ಎ. ಪಿ. ಎಚ್. ಡಿ.).

(*d*) ಮ॥ ಫ್ಲೀಟಸಾಹೇಬರು "*Dynasties of Canarese Districts*" ಎಂಬ ಗ್ರಂಥದ ೪೫ನೇ ಪುಟದಲ್ಲಿ ಪೋಟಲಕೆರೆಯ ವಿಷಯವಾಗಿ ಬರೆದಿರುವುದೇನಂದರೆ ಕ್ರಿ. ಶ. ೧೦೧೬ ರಿಂದ ೧೦೪೦ ರ

ವರೆಗೆ ಆಳಿದ ಚಾಲುಕ್ಯ ವಂಶದ ಮೂರನೇ ಜಯಸಿಂಹನು ದೇವರ ದಾಸಿಮಯ್ಯನಿಂದ ವೀರಶೈವ ದೀಕ್ಷೆಯನ್ನು ಹೊಂದಿದನು. (ಶ್ರೀ. ಬಸವ ಚರಿತ್ರೆ ಹರ್ಡೇಕರ ಮಂಜಪ್ಪನವರು)

(*e*) ಈ ಗ್ರಂಥದಲ್ಲಿ ಪ್ರತಿಪಾದಿತರಾದ ಶಿವಶರಣರಲ್ಲಿ ಮಾಚಿದೇವ ಕಿನ್ನರೀಬ್ರಹ್ಮಯ್ಯ ಮುಸುಟೆಚೌಡಯ್ಯ ಕಲಿಕೇತಬ್ರಹ್ಮಯ್ಯ ತೆಲುಂಗು ಜೊಮ್ಮಯ್ಯ, ಸುರಗಿಚೌಡಯ್ಯ, ದಸರಯ್ಯ, ಕದಿರೆರೇಮಯ್ಯ. ಏಕಾಂತದರಾಮಯ್ಯ ಮೊದಲಾದವರು ಬಸವೇಶ್ವರನ ಕಾಲದಲ್ಲಿದ್ದವರು. ಬಾಹೂರುಬೊಮ್ಮಯ್ಯದೇವ, ಶಂಕರದಾಸಿ, ಸಿರಿಯಾಳಶೆಟ್ಟಿ, ಹಲಾಯುಧ ಮೊದಲಾದವರೆಲ್ಲರೂ ಬಸವೇಶ್ವರನಿಗಿಂತಲೂ ಮೊದಲಿಗರು. (ಬಸವರಾಜ ವಿಜಯ ಕೈ॥ ವಿದ್ವಾನ್ ಎಸ್. ಆರ್. ಕರಿಬಸವಶಾಸ್ತ್ರಿ)

(*a*) ಕೈ॥ ಎಂ. ಎಂ. ಕಲ್ಯಾಣಶೆಟ್ಟಿ ಬಿ. ಎ. ರವರು 'ವೀರಶೈವಾಚಿಸ್ಥಿತಿ' ಎಂಬ ಮರಾಠಿ ಗ್ರಂಥದಲ್ಲಿ ಈ ದಾಸಿಮಯ್ಯನು ಜಯಸಿಂಹನ ಕಾಲದವರೆಂದು ಅಭಿಪ್ರಾಯಪಟ್ಟಿದ್ದಾರೆ. ಅವರ ಮಾತುಗಳನ್ನೇ ಮುಂದೆ ಉದಾಹರಿಸಿದೆ. " **चालुक्यराजांमध्यें एक तिसऱ्या जयसिंहनामक राजाची बायको सुग्गला नामें होती. तिनें देवर दासिमय्य नावाच्या भक्ताकडून आपल्या नवऱ्यास वीरशैव दीक्षा देवविली असें फ्लीट साहेबाचे मत आहे**" ( **वीरशैवांची स्थिति पु** ? ?.)

(*g*) ವೀರಶೈವ ಇತಿಹಾಸದಲ್ಲಿ ದೇವರದಾಸಿಮಯ್ಯನು ಬಸವಣ್ಣನಿಗಿಂತ ಸುಮಾರು ೧೨೦ ವರ್ಷ ಮೊದಲೂ ಶೈವರ ಕಾಲದಿಂದ ಈಚೆಗೂ ಬರುತ್ತಾನೆ. ಈತನನ್ನು ಜನರು ದೇವರದಾಸಿಮಯ್ಯ ಜೇಡರ ದಾಸಿಮಯ್ಯನೆಂದು ತಿಳಿದುಕೊಂಡಂತೆ ತೋರುತ್ತದೆ...... ಪುರಾಣಗಳಲ್ಲಿ ದೊರೆಯುವ ದಾಸಿಮಯ್ಯನು ದೇವರದಾಸಿಯಾಗಲಿ ಜೇಡರ ದಾಸಿಯಾಗಲಿ ಆತನು ಕ್ರಿ. ಶ. ೧೦೦೮ ರಿಂದ ೧೦೪೮ ರ ವರೆಗೆ ಆಳಿದ ಚಾಲುಕ್ಯರಾಜನಾದ ಜಯಸಿಂಹನ ಹೆಂಡತಿ ಸುಗ್ಗಲೆಗೆ ಗುರುವಾಗಿದ್ದನೆಂದು ತಿಳಿದುಬರುತ್ತದೆ. ಮತ್ತು ಜೈನರನ್ನು ವಾದದಲ್ಲಿ ಸೋಲಿಸಿ ಜಯಸಿಂಹನನ್ನು ಶೈವನನ್ನಾಗಿ ಮಾಡಿದನೆಂದೂ ಬರೆದಿದೆ. ಈ ಹೇಳಿಕೆಯನ್ನು ಕ್ರಿ. ಶ. ೧೧೨೫ ರಲ್ಲಿದ್ದ ಬ್ರಹ್ಮಶಿವನು ತನ್ನ ಗ್ರಂಥದಲ್ಲಿ ಸಮ

ರ್ಥಿಸಿದ್ದಾನೆ. (ವೀರಶೈವ ಮತಾಚಾರ್ಯರ ಕಾಲನಿರ್ಣಯೂ ಮ॥ ಕರ್ಲ ಮಂಗಲಂ ಶ್ರೀಕಂಠಯ್ಯನವರು.)

(*h*) ಪಾಲ್ಕುರಿಕೆ ಸೋಮನಾಥ ಕವಿಯ ಆಂಧ್ರ ಬಸವ ಪುರಾಣವನ್ನು ತಿದ್ದಿ ಪ್ರಕಟಿಸಿದ ವಿದ್ವಾನ ವೇಟೂರು ಪ್ರಭಾಕರ ಶಾಸ್ತ್ರಿಗಳು ತಾವು ಆ ಗ್ರಂಥಕ್ಕೆ ಬರೆದಿರುವ ವಿದ್ವತ್ಪೂರ್ಣವಾದ ಪೀಠಿಕೆಯಲ್ಲಿ ದೇವರ ದಾಸಿ ಶಂಕರದಾಸಿಗಳು ಬಸವನಿಗಿಂತ ಹಿಂದಿನವರೆಂದು ಅಭಿಪ್ರಾಯ ಪಟ್ಟಿದ್ದಾರೆ. ಅವರ ಬರಹವನ್ನು ಇದ್ದಕ್ಕಿದ್ದಂತೆ ಉದ್ಧರಿಸಿದ್ದೇನೆ.

"ಪ್ರಾಚೀನ ಭಕ್ತುಲುಃ— ಪಶ್ಚಿಮ ಚಾಳುಕ್ಯರಾಜಯಿನ ಜಗದೇಕ ಮಲ್ಲುಂಡು (ಈತಂಡೆರೆಂಡುವ ಜಯಸಿಂಹವಲ್ಲಭುಂಡು ದೇಸಿಂಗುಂಡು ಸಿಂಗಬಲ್ಲಡೆಂಡು ಅನಿಪೆರ್ಕೊನಂಬಡಿನವಾಂಡು ನೀ ಕಂಡೆ) ........ ಸಿಂಗಬಲ್ಲಹುನಿ ಭಾರ್ಯೆಯೇ ಸುಗ್ಗಳದೇವಿ ಈಮೆ ಶೈವಮತಸ್ಥರಾಲು ಜೇಡರದಾಸಯ್ಯ ಈಮೆಗುರುಂಡು ತನ ಮಾಹಾತ್ಮ್ಯಮುನು ಬ್ರಕಟಿಂಚಿ ಜೇಡರದಾಸಯ್ಯ ಸಿಂಹಬಲ್ಲಹುನಿ ಶೈವನಿಂಗಾ ಜೇಸೇನು ಪೊಟ್ಲಚೆರವು ಕೋಲಿಪಾಕಯನು ಪುರಮುಲಂತನಿ ರಾಜ್ಯಸ್ಥಾನ ಮುಲುಗಾ ಶಾಸನಮುಲಂದುಂಗಲವು. ಪೊಟ್ಲಚೆರುವುಲೋನೆ ಜೇಡರದಾಸಯ್ಯ ಮಹಾತ್ಮ್ಯಮುನು ಬ್ರಕಟಿಂಚೆಯುಕ್ಕಡಿ ಜೈನಮತ ಮುಲನೆಣ್ಣೂರಿಂಟಿನಿ ಜೇಡಂಗೊಟ್ಟಿಂಚೇನು. ಅಪ್ಪಡು ರಾಜುಡೋಸಕ್ಕಡಿ ಜೈನರೆಲ್ಲರು ಗೂಡ ಶೈವಮತ ಮವಲಂಚಾಚಿರಿ ಪೊಟ್ಲಚೆರುವು ಬಳ್ಳಾರಿ ಮಂಡಲಮುಂ ದೊಗಲದು (ಆಂಧ್ರ ಬಸವ ಪುರಾಣ ಪೀಠಿಕೆ ಪುಟ ೬೧—೬೨)

ಇದುವರೆಗೆ ನಾನು ಉದಾಹರಿಸಿದ ಪುರಾಣ ಮತ್ತು ಚರಿತ್ರಾಧಾರಗಳಿಂದ ಪುರಾಣ ಪ್ರಸಿದ್ಧವಾದ ಶಂಕರದಾಸಿ, ಹೇವರದಾಸಿಮಯ್ಯಗಳು ಬಸವೇಶ್ವರನಿಗಿಂತಲೂ ಪೂರ್ವಿಕರೆಂಬುದು ಸಿದ್ಧಾಂತವಾಗುತ್ತದೆ.

## ವಚನಕಾರ ದಾಸಿಮಯ್ಯ.

(*iv*) ರಾವಸಾಹೇಬ ಹಳಕಟ್ಟಿಯವರು ಪ್ರಕಟಿಸಿರುವ "ದೇವರದಾಸಿಮಯ್ಯನ ವಚನಗಳು" ಎಂಬ ಗ್ರಂಥವು ಸ್ವತಂತ್ರವಾಗಿ ಸಿಕ್ಕಿಲ್ಲ. ರಾಮನಾಥಾ ಎಂಬ ಅಂಕಿತವುಳ್ಳ ಬೇರೆ ಬೇರೆ ಸಂಗ್ರಹ ಗ್ರಂಥಗಳಲ್ಲಿಯ ವಚನಗಳನ್ನು ಕೂಡಿಸಿ ಅವರು ಈ ಗ್ರಂಥವನ್ನು ಪ್ರಕಟಿಸಿದ್ದಾರೆ. ಈ ವಚನಕಾರ ದಾಸಿಮಯ್ಯನು ತನ್ನದೊಂದು ವಚನದಲ್ಲಿ ಡೋಹರ

ಕಕ್ಕಯ್ಯನ ಹೆಸರನ್ನು ಹೇಳಿದ್ದಾನೆ. ಕಾರಣ ಬಸವನ ಸಮಕಾಲೀನ ನಾದ ಡೋಹರಕಕ್ಕಯ್ಯನ ಹೆಸರನ್ನೆತ್ತಿದ ದಾಸಿಮಯ್ಯನು ಬಸವ ಯುಗದವನೇ ಆಗಿರಬೇಕೆಂಬುದನ್ನು ಒಪ್ಪಿಕೊಳ್ಳಲೇಬೇಕಾಗಿದೆ. ಪುರಾಣ ಪ್ರಸಿದ್ಧ ದಾಸಿಮಯ್ಯನು ರಾಮನಾಥನ ಭಕ್ತನಾದ ಮಾತ್ರಕ್ಕೇ ಆ ಅಂಕಿತ ದಿಂದ ಅವನು ವಚನಗಳನ್ನು ಹಾಡಿರುವನೆಂಬುದಕ್ಕೆ ಆಧಾರವಿಲ್ಲ. ಈ ವಿಚಾರವನ್ನೆಲ್ಲ ನಾನು ನನ್ನ ಶಿವಾನುಭವದ ಹಿಂದಿನ ಲೇಖನದಲ್ಲಿ ವಿಸ್ತರಸಿರುವೆನು.

## ವೀರಶಂಕರದಾಸಿ

ಪುರಾಣದ ದೇವರದಾಸಿಯ ಸಮಕಾಲೀನನಾದ ಮಯೂರ ಪುರದ ಶಂಕರದಾಸಿಯು ಬಸವನ ಸಮಕಾಲೀನನೆಂಬುದಕ್ಕಂತೂ ಯಾವ ಚಾರಿತ್ರಿಕ ಕಾರಣಗಳೂ ಇಲ್ಲ. ಮ॥ ರಾ॥ ಶ್ರೀನಿವಾಸಮೂರ್ತಿಗಳು ಕೊಟ್ಟಿರುವ ಪ್ರಮಾಣಗಳಿಗೆ ವಿರೋಧವಾಗಿ ಆಯಾ ಪುರಾಣಗಳಲ್ಲಿಯೇ ಕಥೆಗಳಿವೆಯಾದುದರಿಂದ ಅವು ಬಲವತ್ತರ ಪ್ರಮಾಣಗಳಲ್ಲ.

ಬಸವ ಪುರಾಣಗಳಲ್ಲಿ ವೀರಶಂಕರದಾಸಿಯೆಂಬ ಶರಣನ ಕಥೆ ಯೊಂದಿದೆ. ಇವನು ನಾವು ಇದುವರೆಗೆ ಹೇಳಿದ ನವಿಲೆಯ ಶಂಕರ ದಾಸಿಗಿಂತಲೂ ಭಿನ್ನನಾಗಿದ್ದಾನೆ. ಈ ವೀರಶಂಕರದಾಸಿಯು ಬಸವೇ ಶ್ವರನ ಸಮೀಪಕಾಲೀನನಾಗಿದ್ದರೂ ಇರಬಹುದು. ಇವನನ್ನೇ ಪ್ರಾಚೀನ ಶಂಕರದಾಸಿಯೆಂದು ಭ್ರಮಿಸಿದ್ದರೂ ಕೆಲವು ಪುರಾಣಕಾರರು ಭ್ರಮಿ ಸಿರಬಹುದು. ಇವನ ಕಥೆಯು ಮೇಲಿನಿಂದ ಇವನು ಲಿಂಗವಂತನಾಗಿ ದ್ದನೆಂದು ತೋರುತ್ತದೆ.

ನಾನು ಇದುವರೆಗೆ ಉದಾಹರಿಸಿರುವ ಆಧಾರಗಳಿಂದ ಪುರಾಣ ಪ್ರಸಿದ್ಧ ದಾಸಿಮಯ್ಯಗಳೇ ಬೇರೆ, ವಚನಕಾರ ದೇವರದಾಸಿಯೇ ಬೇರೆ ಎಂಬುದು ಸ್ಪಷ್ಟವಾಗಿದೆ. ಹಲವು ಮಂದಿ ಇತಿಹಾಸ ಪಂಡಿ ತರು ನನ್ನ ಹೇಳಿಕೆಗೆ ಬೆಂಬಲವಾಗಿದ್ದಾರೆ. ಬ್ರಹ್ಮಶಿವನು ದಾಸಿಮ ಯ್ಯನ ಹೆಸರನ್ನೆತ್ತಿರುವುದೂ ಪ್ರಾಚೀನನಾದ ಹರೀಶ್ವರನು ಶಂಕರದಾ ಸಿಮಯ್ಯನ ರಗಳೆಯಲ್ಲಿ ಇತಿಹಾಸಕಾರರಿಗೆ ಅನುಕೂಲವಾಗಿ ಹೇಳಿರು ವುದೂ ನಮ್ಮ ವಾದವನ್ನು ಸಮರ್ಥಿಸುತ್ತವೆ.

ಆದ್ದರಿಂದ ಭಕ್ತಿಭಂಡಾರಿ ಬಸವಣ್ಣನವರು ಎಂಬ ಗ್ರಂಥದ ಪುನ ರ್ಮುದ್ರಣದಲ್ಲಿಯೂ ಮ॥ ರಾ. ಶ್ರೀನಿವಾಸಮೂರ್ತಿಗಳು ತಮ್ಮ ಹಿಂದಿನ

ವಾದವನ್ನೇ ಸಮರ್ಥಿಸಿರುವುದು ಸಮಂಜಸವಾಗಿಲ್ಲವೆಂದು ನಾವು ಮತ್ತೊಮ್ಮೆ ಹೇಳಬೇಕಾಗಿದೆ.

ಪುರಾಣ ಕಥಿತ ಶಂಕರದಾಸಿ ದೇವರದಾಸಿಮಯ್ಯಗಳು ಬಸವನ ಸಮಕಾಲೀನರೆಂಬುವಲ್ಲಿ ಮತ್ತೊಂದು ಪ್ರತಿಬಂಧಕವಿದೆ. ಏನಂದರೆ ಜಯಸಿಂಹ, ಸುಗ್ಗಲಾದೇವಿ, ಶಂಕರದಾಸಿ, ದೇವರದಾಸಿ, ಪೊಟ್ಟಲಕೆರೆ ಎಂಬೀ ಹೆಸರುಗಳು ಪ್ರಾಯೇಣ ಇವರ ಕಥೆಗಳಲ್ಲೆಲ್ಲಾ ಬರುತ್ತವೆ. ಬಸವೇಶ್ವರನ ಕಾಲದಲ್ಲಿ ಪೊಟ್ಟಲಕೆರೆಯೆಂಬ ರಾಜಧಾನಿಯಿದ್ದುದಾಗಲಿ ಜಯಸಿಂಹನು ಸುಗ್ಗಲೆಯರೆಂಬ ರಾಜರಾಣಿಯಿದ್ದುದಾಗಲಿ ಚರಿತ್ರೆಯಿಂದ ಸಿದ್ಧವಾಗುವುದಿಲ್ಲ. ಆದಕಾರಣ ದಾಸಿಮಯ್ಯಗಳಿಬ್ಬರೂ ಪ್ರಾಚೀನರೆಂದು ತಾನಾಗಿಯೇ ಸಿದ್ಧವಾಗುತ್ತದೆ. ಕ್ರಿ. ಶ. ೧೦೬೫ ರಲ್ಲಿದ್ದ ಬ್ರಹ್ಮಶಿವನು ತನ್ನ ಗ್ರಂಥದಲ್ಲಿ ದೇವರ ದಾಸಿಮಯ್ಯನ ಹೆಸರನ್ನು ಹೇಳಿರುವುದರಿಂದಲೂ (ಈ ಬ್ರಹ್ಮಶಿವ ಪೊಟ್ಟಲಕೆರೆಯವನು) ಕ್ರಿ. ಶ. ೧೧೪೮ ರಲ್ಲಾದ ಗೊಬ್ಬೂರು ಶಿಲಾಶಾಸನವು ದೇವರದಾಸಿಮಯ್ಯನ ಪ್ರಾಚೀನತೆಯನ್ನು ಹೇಳುತ್ತಿರುವುದರಿಂದಲೂ ಈ ದಾಸಿಮಯ್ಯಗಳು ಪ್ರಾಚೀನರೆಂಬ ವಾದವೇ ವಿಶೇಷವಾಗಿ ಸಮರ್ಥಿಸಲ್ಪಡುತ್ತಿದೆ.

---

ಆಳಿದ ಮಹಾಪ್ರಭುಗಳಾದ ರಾಜರ್ಷಿ ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯ
ರವರ ಸ್ಮಾರಕೋತ್ಸವದ ನಿಮಿತ್ತವಾಗಿ ರಚಿಸಿದ

## ಸ್ಮಾರಕ ಪದ್ಯಾವಳಿ.

ಶಾ। ವಿ। ವೃ॥

ಶ್ರೀನಂದೀಶ್ವರ ಭೃಂಗಿವೀರ ವೃಷಭಸ್ಕಂದಾದಿ ಸಂಸೇವಿತಃ।
ಸಾನಂದಾತ್ರಿ ಪರಾಶರಾದಿ ಮುನಿಹೃತ್ಕಂಜಾತ ಸಂಶೋಭಿತಃ ॥
ಶ್ರೀನಾಗೇಂದ್ರ ವಿಭೂಷಣಾಂಚಿತತನುಶ್ರೀ ಪಾರ್ವತೀನಾಯಕಃ ।
ನಾನಾ ಶಾಸ್ತ್ರವಿನುತ್ಯಸಾರ ಮಹಿಮೋ ಭೂಪಂ ಸದಾ ರಕ್ಷತು ॥೧॥

ಕಂದ॥ ಮುಮ್ಮಡಿಯ ಕೃಷ್ಣರಾಜಂ ।
ನಮ್ಮಾ ಕರ್ಣಾಟ ರತ್ನ ಸಿಂಹಾಸನದೊಳ್ ॥
ಸಮ್ಮದದಿಂ ಶೋಭಿಸಿದಂ ।
ಬೊಮ್ಮಂ ನಿಜಪದ್ಮಪೀಠದೊಳ್ ರಾಜಿಪವೊಲ್ ॥೨॥

ಯಾದವ ವಂಶಲಲಾಮಂ ।
ಮಾಧವನಪರಾವತಾರನನುಪಮ ಶೂರಂ ॥
ಭೂಧವಲೋಕೋದ್ಧಾರಂ ।
ವೇದವಿದಂ ಕೃಷ್ಣಭೂಪನಪಹೃತತಾಪಂ ॥೩॥

ಶಾ। ವಿ। ವೃ॥

ಆವಾತಂ ವಿಬುಧಸ್ತುತಂ ಪರತರ ಶ್ರೀಕೃಷ್ಣವಂಶೋದ್ಭವಂ ।
ದೇವಾಧೀಶ ಮಹೇಶ ಭಕ್ತಿನಿರತಂ ಸನ್ಮಾರ್ಗ ಸಂಶೋಭಿತಂ ॥
ಆವಾತಂ ಘನವೇದ ಶಾಸ್ತ್ರ ಕವಿತಾ ವಿದ್ಯಾವಿನೋದಾಸ್ಪದಂ ।
ದೇವಂ ಮುಮ್ಮಡಿ ಕೃಷ್ಣರಾಜನನಿಶಂ ರಕ್ಷಿಕ್ಕೆ ಭಕ್ತಾಳಿಯಂ ॥೪॥

ಕಂದ॥ ಕನ್ನಡ ಸಂಸ್ಕೃತ ಭಾಷೆಯೊ ।
ಳುನ್ನತ ಗುಣಭರಿತಮೆನಿಪ ಪಲವು ಸತ್ಕಾವ್ಯಗಳಂ ॥
ಚೆನ್ನಿಂ ವಿರಚಿಸಿ ಬುವಿಯೊಳ್ ।
ಕನ್ನಡ ಸಾಹಿತ್ಯ ಶರಧಿಗುಡುಪತಿಯೆನಿಪಂ ॥೫॥

ಉಭಯ ಕವಿ ಲಿಂಗರಾಜಂ ।
ಪ್ರಭು ಕೃಷ್ಣೇಂದ್ರಂಗೆ ಅಳಿಯನೆನಿಪಾ ಕತದಿಂ ॥

ಅಭಯಪ್ರದನಾವಿದ್ವತ್ ।
ಪ್ರಭುತಾಂ ಧಾರಿಣಿಯೊಳಕ್ಕುಮನುಪಮಮಹಿಮಂ ॥೬॥

**ಉ। ಮಾ। ವೃ॥**

ನೋಡದ ದೈವಮಿಲ್ಲಮೆಲೆಭೂಮಿಪ ನಿನ್ನಯ ದಿವ್ಯನೇತ್ರದಿಂ ।
ಪಾಡದ ಕಾಲಮಿಲ್ಲ ಪರಮೇಶ್ವರ ಕೀರ್ತನಮಂ ಸುಜಿಹ್ವೆಯಿಂ ॥
ನೀಡದ ದಾನಮಿಲ್ಲ ನಿಜ ಹಸ್ತದೆ ಭೂಸುರಜಂಗಮಾಳಿಗಂ ।
ಕೂಡಿದೆಯಲ್ತೆ ನೀನದರ ಸತ್ಫಲದಿಂ ವರಮೋಕ್ಷಲಕ್ಷ್ಮಿಯಂ ॥೭॥

**ಚಂ। ಮಾ। ವೃ॥**

ಮನುಮುನಿಯಿಂದ್ರ ಚಂದ್ರ ದಿಗಧೀಶ ಗಿರೀಶ ನರೇಶರೆಂಬರಂ ।
ತನನಮದೆಂದು ತಾಂ ಕುಣಿಸಿ ಕಾಡಿಸಿ ಬಾಡಿಸಿ ಮೈಮೆವೆತ್ತನಂ ॥
ಮನಸಿಜನಂ ಮಹಾಬಲನನಳ್ಕಿಸಿ ಒಳ್ಕಿಸಿ ಬೂದಿಗೆಯ್ದನಂ ।
ಚಿನುಮಯನಂ ಮಹೀಶ ಮಝ! ಕಟ್ಟಿದೆ ನಿನ್ನಯ ಭಕ್ತಿಪಾಶದಿಂ ॥೮॥

**ಶಾ। ವಿ। ವೃ॥**

ಚಾಮೇಂದ್ರಾತ್ಮಜ ನಿನ್ನ ದಿವ್ಯಯಶಮಂ ಪಾಡುತ್ತಿರಲ್ ಕಿನ್ನರರ್ ।
ಶ್ರೀಮದ್ಯಾದವ ವಂಶ ವರ್ಧನರೆನಿಪ್ಪಾ ಚಿಕ್ಕದೇವಾದಿಗಳ್ ॥
ಪ್ರೇಮಂ ಮಿಕ್ಕಿರೆ ಕೇಳ್ದಪರ್ ನಯನದೊಳ್ ಸುಖ್ಯಾಶ್ರುವಂಬೀರುವರ್ ।
ಕಾಮದ್ವಿಟ್ಪದ ಭಕ್ತ ಸಗ್ಗದೆಡೆಯೊಳ್ ದೇವರ್ಕಳಾನಂದಿಪರ್ ॥೯॥

**ಮ। ವಿ। ವೃ॥**

ನರನೆಂದುಂ ವರಭೋಗಿಯೆಂದು ಕೆಲಬರ್ ಗಾಂಪರ್ದಲುದ್ಘೋಷಿಪರ್ ।
ನರನೇ ಭೂಪತಿ? ಭೋಗಿಯೇ ಶಿವಶಿವಾ ಸರ್ವಸ್ವಮಂ ಪಾರ್ವತೀ ॥
ಪರಮೇಶರ್ಕಳಿಗೊಪ್ಪಿಸಿರ್ದ ಮಹಿಮಂ ಶ್ರೀಕೃಷ್ಣಭೂಮಿಶ್ವರಂ ।
ನರನಲ್ಲಂ ವರಭೋಗಿಯಲ್ ವಿರಿಯಲ್ ಶ್ರೀಕೃಷ್ಣಯೋಗೀಶ್ವರಂ॥೧೦॥

**ಕಂದ॥** ಜಯಮಕ್ಕೆ ಕೃಷ್ಣನೃಪತಿಗೆ ।
ಜಯಮಕ್ಕೆಮ ವೀರ ಧೀರ ಯುವರಾಜಂಗಂ ॥
ಜಯಚಾಮೇಂದ್ರಂಗಂ ಮೇಣ್ ।
ಜಯಮಾಗುಗೆಯಾದವಾನ್ವಯರ್ಗೆಲ್ಲರಂ ॥೧೧॥

**ಕೀರ್ತನಕೇಸರಿ ಬಿ. ಶಿವಮೂರ್ತಿಶಾಸ್ತ್ರಿ ಹುಲಕುಂಟೆಮಠ**
**ತುಮಕೂರು.**

# ಸಮಾಜಸುಧಾರಣೆಯ ರೀತಿ.

(ಲೇ:— ಅನ್ನದಾನೀಶ್ವರ ವಿರಕ್ತಮಠ.)

ಹಿಂದೆ ವೈಭವದಲ್ಲಿದ್ದ ನಮ್ಮ ವೀರಶೈವ ಸಮಾಜವು ಇಂದು ಅಧೋಗತಿಗಿಳಿದಿದೆ. ಅಧೋಗತಿಗೆ ಕೆಲವು ಕಾರಣಗಳಿವೆ. ಅವುಗಳಲ್ಲಿ ನೈತಿಕ ಮತ್ತು ಆಧ್ಯಾತ್ಮಿಕ ಶಿಕ್ಷಣದ ಅಭಾವವೂ ಒಂದು ಕಾರಣವಾಗಿದೆ. ಜ್ಞಾನ ಮತ್ತು ಶಕ್ತಿಗಳನ್ನು ಬೆಳಿಸಿಕೊಂಡು ಶೀಲಬಲಸಂಪನ್ನರಾಗಿ ಸಮಾಜೋದ್ಧಾರ ಕಾರ್ಯಗಳಲ್ಲಿ ಉತ್ಸಾಹದಿಂದ ದುಡಿಯುವ ಸಮುದ್ದೇಶದಿಂದ ಧಾರ್ಮಿಕ ಶಿಕ್ಷಣ ಹೊಂದುವ ವಾತಾವರಣವು ನಮ್ಮ ಸಮಾಜದಲ್ಲಿ ಇಲ್ಲವೆಂದೇ ಹೇಳಬಹುದು.

ತಾನು ಜ್ಞಾನಿಯಾಗಿ ಸಮಾಜದಲ್ಲಿ ಜ್ಞಾನಪ್ರಸಾರ ಮಾಡಿ ದುಃಖಗಳನ್ನು ಕಳೆಯುವದು ಪವಿತ್ರವಾದ ಕರ್ತವ್ಯವಾಗಿದೆಯೆಂದೇ ನಮಗೆ ತಿಳಿವಳಿಕೆಯಾಗಬೇಕಾಗಿದೆ. ಈ ಪವಿತ್ರ ಕರ್ತವ್ಯದ ಅರಿವುಳ್ಳವರೊಡನೆ ಸಹಕರಿಸಿ ಕಾರ್ಯಸಾಗಿಸುವದು ಅತ್ಯಗತ್ಯವಾಗಿದೆ.

ಶಕ್ಯವಿದ್ದಲ್ಲಿ ಅಭ್ಯಾಸಮಂಡಲಗಳನ್ನು ಏರ್ಪಡಿಸಿ ತುಲನಾತ್ಮಕ ಅಭ್ಯಾಸ-ತತ್ವವಿವೇಚನೆಗಳನ್ನು ಪ್ರಾರಂಭಿಸಬೇಕಾಗಿದೆ. ಆದರೆ ಆ ತುಲನಾತ್ಮಕ ಅಭ್ಯಾಸದಿಂದ ಕೇವಲ ತಾರ್ಕಿಕ ವೃತ್ತಿಬೆಳೆದರೆ ಉಪಯೋಗವಿಲ್ಲ. ಆ ತುಲನಾತ್ಮಕ ದೃಷ್ಟಿಯಿಂದ ಬುದ್ಧಿಯು ವಿಶಾಲವಾಗಿ ಭಾವನೆಯು ಬೆಳಿಯಬೇಕು. ಧಾರ್ಮಿಕ ಸಹಿಷ್ಣುತೆಯು ಲಭ್ಯವಾಗಬೇಕು. ನಮ್ಮ ಧರ್ಮದಲ್ಲಿ ನಿಷ್ಠೆಯು ಬೆಳಿಯಬೇಕು. ಸಂಸ್ಕೃತದಲ್ಲಿಯ ಉದಾತ್ತ ತತ್ವಗಳನ್ನು ಸ್ವೀಕರಿಸಬೇಕು. ಆದರೆ ಕೇವಲ ಪ್ರಾಚೀನ ಸಂಸ್ಕೃತ ಶ್ಲೋಕ-ಮಂತ್ರ-ತಂತ್ರಾದಿಗಳಿಂದ ಸಮಾಜೋದ್ಧಾರವಾಗಲಾರದು. ಅಭ್ಯಾಸ ಮಂಡಲಗಳಿಗೆ ಅನುಭವಮಂಟಪ ಎಂದು ಕರೆದರೂ ಅಡ್ಡಿಯಿಲ್ಲ.

ಈ ಕಾಲದಲ್ಲಿ ಇಂಥ ಅನುಭವಮಂಟಪಗಳಿಂದ ಜಾತಿಭೇದದ ಬಂಧನ, ನಾನಾದೇವತೋಪಾಸನೆ, ಮೌಢ್ಯತೆ ಇತ್ಯಾದಿ ಕಲ್ಪನೆಗಳನ್ನು ದೂರಮಾಡಬಹುದು.

ಧಾರ್ಮಿಕ ಜ್ಞಾನವನ್ನೂ, ಶಿಕ್ಷಣವನ್ನೂ ಪ್ರಸಾರಗೊಳಿಸುವ ವಿದ್ಯಾಲಯಗಳೇ ಈ ಮಂಟಪಗಳು. ಧರ್ಮಾತ್ಮತೆಯ ಪ್ರದರ್ಶನಾಮಂದಿರ

ಗಳೇ ಈ ಮಂಟಪಗಳು. ಪ್ರಪಂಚವನ್ನು ಶಿವಮಯ ಅಥವಾ ಕಲ್ಯಾಣಮಯವಾಗಿ ಮಾಡುವ ಧುರೀಣರ ರಂಗಸ್ಥಳಗಳೇ ಈ ಮಂಟಪಗಳು. ಈ ಅಭ್ಯಾಸ ಮಂಡಲ ಅಥವಾ ಅನುಭವಮಂಟಪಗಳಲ್ಲಿ ಎಲ್ಲ ವಚನ ಗ್ರಂಥಗಳನ್ನು ಸಂಗ್ರಹಿಸಬೇಕು. ಬೇರೆ ಬೇರೆ ಧರ್ಮ-ಮತಗಳ ಉದಾತ್ತ ತತ್ವಗಳನ್ನು ಬೋಧಿಸತಕ್ಕ ಗ್ರಂಥಗಳನ್ನು ಶೇಖರಿಸಬೇಕು. ಪ್ರಾಚೀನ ತಾಡವಾಲಿಯ ಗ್ರಂಥಗಳನ್ನು ಸಂಗ್ರಹಿಸಬೇಕು.

ಅನುಭವಮಂಟಪವು ನಿಜವಾದ ಶಿವಯೋಗಮಂದಿರವೇ ಆಗಿದೆ. ಅನುಭವದ ಆತ್ಮನೀರರಿಂದ ಧರ್ಮದ ದಿವ್ಯತೇಜಸ್ಸು ಪ್ರಕಾಶವಾಗಿ ಸಮಾಜೋದ್ಧಾರವಾಗುವದು. ಕೇವಲ ವಿಚಾರವಾದಿಗಳಿಂದ, ತಾರ್ಕಿಕ ವಾಗ್ಮಿಗಳಿಂದ, ಮಿಥ್ಯಾಚಾರಿಗಳಿಂದ, ಡಂಭಾಚಾರಿಗಳಿಂದ ಎಂದಿಗೂ ಸಮಾಜೋದ್ಧಾರವಾಗುವದಿಲ್ಲ.

ಸ್ವಯಂಸೇವಕರನ್ನು ತಯಾರಿಸಲಿಕ್ಕೂ, ಸಮಾಜದಲ್ಲಿಯ ಅನಿಷ್ಟ ರೂಢ-ಕಲ್ಪನೆಗಳನ್ನು ತೆಗೆದುಹಾಕಲಿಕ್ಕೂ, ಸೇವಾಮಂದಿರಗಳನ್ನು ಸ್ಥಾಪಿಸುವದು ಅತ್ಯಗತ್ಯವಾಗಿದೆ. ಸಮಾಜದ ಉನ್ನತಿಗಾಗಿ ಸಕಲ ರೀತಿಗಳಿಂದ ಸದಾ ದುಡಿಯುತಕ್ಕ ಕೆಲಸಗಾರರಿಲ್ಲದೆ ಸಮಾಜ ಸುಧಾರಣೆಯಾಗುವದು ಶಕ್ಯವೇ? ಸೇವಾದಲವು ಶ್ರಮಗೌರವ ತತ್ವವನ್ನು (*Dignity of labour*) ಆಚರಣೆಯಲ್ಲಿ ತಂದು ಉದ್ಯೋಗದ ಕೀಳು-ಮೇಲು ಕಲ್ಪನೆಯನ್ನು ತೆಗೆದುಹಾಕಬೇಕು. ಒಳಪಂಗಡಗಳಲ್ಲಿ ಏಕೀಕರಣವನ್ನುಂಟುಮಾಡಬೇಕು. ವರ್ಣ, ಜಾತಿ, ಆಶ್ರಮ ಇತ್ಯಾದಿಗಳ ಕಲ್ಪನೆಗಳಿಂದ ದೂರವಿರಬೇಕು. ಅಸ್ಪೃಶ್ಯೋದ್ಧಾರ, ಶುದ್ಧಿಸಂಘಟನೆ, ಮುಂತಾದ ಕಾರ್ಯಗಳನ್ನು ಸಾಗಿಸಬೇಕು.

ಸಂಕುಚಿತ-ಮಡಿ-ಮೈಲಿಗೆಯ ಕಲ್ಪನೆಗಳನ್ನು ತೆಗೆದುಹಾಕಬೇಕು. ನಮ್ಮ ಹಿಂದಿನ ಕೆಲವು ಶರಣರಂತೆ ಶಕ್ಯವಿದ್ದರೆ ಪರದೇಶಗಳಲ್ಲಿಯೂ ನಮ್ಮ ಸಂಸ್ಕೃತಿಯನ್ನು ಹರಡಬೇಕು.

ಕನ್ನಡ ಭಾಷೆಗೂ, ಪ್ರಚಾರಕ್ಕೂ ಹೆಚ್ಚು ಮಹತ್ವಕೊಡುವದು ಕನ್ನಡಿಗರಾದ ನಮಗೆ ಭೂಷಣಾಸ್ಪದವೂ ಶ್ರೇಯಸ್ಕರವೂ ಆಗಿದೆ.

ವೀರಶೈವ ಸಮಾಜದಲ್ಲಿ ಯಾವದಾದರೊಂದು ಪಕ್ಷವನ್ನು ಎತ್ತಿ ಹಿಡಿಯುವದು ಕಲ್ಯಾಣಕ್ಕೆ ಕಂಟಕವೆಂದು ತಿಳಿದು ಅಖಿಲ ವೀರಶೈವ

ಸಮಾಜದ ಕಲ್ಯಾಣಕ್ಕಾಗಿ ದುಡಿಯುವದೇ ಸೇವಾಮಂದಿರದ ಧ್ಯೇಯ ವಾಗಿರುವದು.

ಸಮಾಜದ ಸಲುವಾಗಿ ಸತ್ತಂಥ ಸೇವಕನು ಸತ್ತರೂ ಜೀವಂತ ನಾಗಿದ್ದಂತೆಯೇ ಸರಿ. ಅಂಥವರ ಸ್ಮಾರಕಗಳನ್ನು ಮಾಡಬೇಕು. ಕೇವಲ ಸ್ವಾರ್ಥದ ಸಲುವಾಗಿ ಬದುಕಿರುವ ಮನುಷ್ಯನು ಜೀವನ್ಮೃತನೇ ಸರಿ. ಆಧುನಿಕರು ಕೇವಲ ಸರಕಾರಿ ನೌಕರಿಗಳಿಗಾಗಿ ಆಶೆಪಡುವದು, ಬಿರುದು, ಅಧಿಕಾರ, ದರ್ಜೆ, ಧನ, ಕೀರ್ತಿಗಳಿಗಾಗಿ ಡಿ. ಎಲ್. ಬಿ. ಕೌನ್ಸಿಲ ಅಸೆಂಬ್ಲಿಗಳಲ್ಲಿ ಮೆಂಬರರಾಗುವದು, ನಮ್ಮ ಸಕಲ ಸಮಾಜದ ಕಲ್ಯಾ ಣಕ್ಕೆ ಕಾರಣವಾಗಲಾರದು. ಧರ್ಮದ ಸಹಾಯವಿಲ್ಲದೆ ಸಮಾಜದಲ್ಲಿ ಚೈತನ್ಯವನ್ನುಂಟುಮಾಡಲು ಶಕ್ಯವಿಲ್ಲ. ನಾವೆಲ್ಲರೂ ಉಜ್ವಲ ಧರ್ಮಾ ಭಿಮಾನ ತಾಳಲಿಕ್ಕೆಬೇಕು. ಶ್ರೀ. ಬಸವಾದಿ ಪ್ರಮಥರಲ್ಲಿಯೂ, ರೇಣು ಕಾದ್ಯಾಚಾರ್ಯರಲ್ಲಿಯೂ, ವಚನಶಾಸ್ತ್ರದಲ್ಲಿಯೂ, ಲಿಂಗದಲ್ಲಿಯೂ, ನಾವು ವಿಶ್ವಾಸವಿಡಲಿಕ್ಕೆಬೇಕು. ಬಸವನು ಶರಣಮಾರ್ಗದ ಚಾಲಕನು. ಶರಣ ಮಾರ್ಗವು ಸರ್ವಾರ್ಪಣಯೋಗವು, ಸಮನ್ವಯಯೋಗವು ಅಥವಾ ಪೂರ್ಣಯೋಗವು. ಶರಣಮಾರ್ಗವು ಭುಕ್ತಿ-ಮುಕ್ತಿ ಪ್ರದಾಯಕವು. ವಚನಶಾಸ್ತ್ರವು ಧರ್ಮಗ್ರಂಥವು. ಲಿಂಗವು ನಮ್ಮದೈವತವು. ಶಿವಭಕ್ತರ ನೋವೇ ಲಿಂಗದ ನೋವು. ವಚನಶಾಸ್ತ್ರಕ್ಕೆ ಸಮ್ಮತವಿದ್ದ ವೇದಾ ಗಮ ಪುರಾಣಗಳಲ್ಲಿಯ ಎಲ್ಲ ಉದಾತ್ತ ವಿಚಾರ ಕಲ್ಪನೆ, ಭಾವನೆಗ ಳನ್ನು ಸಂಗ್ರಹಿಸಿ ಅಖಿಲ ವೀರಶೈವ ಸಮಾಜಕ್ಕೆ ಮಾನ್ಯವಾದ ಪ್ರಮಾಣ ಗ್ರಂಥವನ್ನು ರಚಿಸುವದು ಶಕ್ಯವಿದೆ.

ವೀರಶೈವ ವೀರರ, ಮಹಾತ್ಮರ, ಶರಣೆಯರ ಹಬ್ಬಗಳನ್ನು ಆಚ ರಣೆಯಲ್ಲಿ ತರಬೇಕು. ಜಯಂತಿಗಳನ್ನು ಮಾಡಬೇಕು. ಆ ಧರ್ಮ ವೀರರ ಪೂಜೆಯನ್ನು ಪ್ರಾರಂಭಿಸಬೇಕು. ಅವರ ಚರಿತ್ರೆಗಳನ್ನು ತಿಳಿದು ಪ್ರಸಾರಗೊಳಿಸಿ ಆ ರೀತಿಯಲ್ಲಿ ಸ್ವಲ್ಪಾದರೂ ನಾವು ತಯಾರಾಗಬೇಕು.

ಶಕ್ತಿವರ್ಧಕ ವ್ಯಾಯಾಮಗಳಿಂದ ಶಕ್ತಿಯನ್ನು ಬೆಳಸಬೇಕು. ಬಾಲ್ಯ ವಿವಾಹದ ಅನಿಷ್ಟರೂಢಿಯನ್ನು, ದುರ್ವ್ಯಸನಗಳನ್ನು ದೂರಗೊಳಿಸಬೇಕು. ವೀರಶೈವ ಅಮೌಲ್ಯವಾಙ್ಮಯವನ್ನು ಬೆಳಕಿಗೆ ತರಲು ಸಮಾಜದ ಮುದ್ರ ಣಾಲಯಗಳು ಸ್ಥಾಪನೆಯಾಗಬೇಕು. ಕ್ರಿಸ್ತೀ ಮಿಶನರಿ ಮತ್ತು ಆರ್ಯ ಸಮಾಜಗಳಂತೆ ಚಿಕ್ಕ ಚಿಕ್ಕ ಗ್ರಂಥಗಳನ್ನು ಪ್ರಸಾರಗೊಳಿಸಬೇಕು.

ಸ್ವಯಂಸೇವಕರು ಸೇವಾಮಂದಿರಗಳಿಂದ ತಂಡೋಪತಂಡವಾಗಿ ಹೊರಬಿದ್ದು ಪ್ರಚಾರ ಮಾಡುವ ಸುಂದರ ನೋಟವು ಕಣ್ಣಿಗೆ ಬೀಳಬೇಕು. ವರ್ತಮಾನಪತ್ರ, ಮಾಸಿಕಪತ್ರಗಳನ್ನು ಹೊರಡಿಸಿ ಸಂಘಟನೆಯನ್ನುಂಟುಮಾಡಬೇಕು.

ಅಲ್ಲಲ್ಲಿಯ ತರುಣಸಂಘಗಳೊಡನೆ ಸಕ್ರಿಯ ಸಹಾನುಭೂತಿಯನ್ನು ತೋರಿಸುತ್ತ ಕೆಲಸಸಾಗಿಸಬೇಕು. ಎಷ್ಟೋ ಪ್ರಸಂಗಗಳಲ್ಲಿ ಆಶ್ರಮಾದಿಗಳಿಗಿಂತಲೂ ತರುಣಸಂಘಗಳಲ್ಲಿ ಹೆಚ್ಚು ಪಾವಿತ್ರ್ಯವಿರುವ ಸಂಭವವಿದೆ.

ಸ್ವಾತಂತ್ರ್ಯ, ವಿಚಾರ ವಿಮರ್ಶೆ ಮುಂತಾದ ಗುಣಗಳಿಂದ ಯುಕ್ತವಾದ ಇಂಗ್ಲೀಷ ಭಾಷೆಯನ್ನೂ, ಹಿಂದು ಸಂಘಟನೆಗೆ ಅನುಕೂಲವಾದ ಹಿಂದಿಯನ್ನೂ ಈ ಕಾಲದಲ್ಲಿ ಕಲಿಯುವದು ಅತ್ಯಗತ್ಯವಾಗಿದೆ.

ಈ ವಿಚಾರದಲ್ಲಿ ನಾವು ಜಾಗರೂಕರಾಗಿರಬೇಕು. ಪಾಶ್ಚಾತ್ಯ ಸಂಸ್ಕೃತಿಯು ತನ್ನ ಭೌತಿಕ ಸುಖ-ಸಾಮ್ರಾಜ್ಯದಿಂದ ನಮ್ಮ ಪುರಾತನ ಹಿಂದೀ ಸಂಸ್ಕೃತಿಯ ನೈತಿಕ ಆದರ್ಶವನ್ನು ತಳ್ಳಿಹಾಕಿ ಪಾರತಂತ್ರ್ಯ, ಹೇಡಿತನಗಳನ್ನು ನಮ್ಮಲ್ಲಿ ಉತ್ಪನ್ನ ಮಾಡಲು ಬಹುಮಟ್ಟಿಗೆ ಕಾರಣವಾಗಿದೆ.

ಪ್ರಪಂಚದಲ್ಲಿ ಈಗ ಮೂರು ಶಕ್ತಿಗಳು ಅದ್ಭುತಕಾರ್ಯ ಮಾಡಹತ್ತಿವೆ. (೧) ಕೂಲಿಕಾರರ ಶಕ್ತಿ. (೨) ತರುಣರ ಶಕ್ತಿ. (೩) ಸ್ತ್ರೀಯರ ಶಕ್ತಿ. ನಮ್ಮ ಸಮಾಜದ ರೈತರ ಮತ್ತು ಕೂಲಿಕಾರರ, ತರುಣರ, ಮತ್ತು ಸ್ತ್ರೀಯರ ಶಕ್ತಿಗಳನ್ನು ಸಮಾಜೋದ್ಧಾರಕ್ಕಾಗಿ ಬೆಳಸಿ, ಹೇಗೆ ಉಪಯೋಗಿಸಬೇಕೆಂಬುದೊಂದು ಮಹತ್ವದ ಪ್ರಶ್ನೆಯೇ ಆಗಿದೆ. ಧರ್ಮಗುರುಗಳು, ಮುಂದಾಳುಗಳು, ಪಂಡಿತರು ಇತ್ತ ಲಕ್ಷ್ಯ ಪೂರೈಸಿದರೆ ಈ ಪ್ರಶ್ನೆಯು ಬಿಡಿಸಲ್ಪಡಬಹುದು. ಸಮಯಭೇದ ಮಾಡುವ ವಿರಕ್ತರಿಂದಲೂ, ಬ್ರಾಹ್ಮಣ್ಯವನ್ನು ಪ್ರತಿಪಾದಿಸುವ ಪಂಚಾಚಾರ್ಯರಿಂದಲೂ ಸಮಾಜದ ಸರ್ವಾಂಗೀಣ ಸಮುನ್ನತಿಗೆ ಬಾಧೆ ತಟ್ಟುತ್ತದೆ.

ಸೇವಾದಲವಿಲ್ಲದೇ ಮಹಾಸಭೆಯಿಂದಲೂ ಯಾವ ಕಾರ್ಯಗಳೂ ಆಗುವಂತಿಲ್ಲ. ಮಹಾಸಭೆಯವರಾಗಲೀ, ಶಿರಸಂಗಿ ಫಂಡಿನವರಾಗಲೀ, ಒಂದು ಉದ್ಯೋಗ ಮಂದಿರವನ್ನಾದರೂ ಸ್ಥಾಪಿಸಬಾರದೇ ?

ಒಟ್ಟಾಗಿ, ಅನುಭವಮಂಟಪ ಸೇವಾದಲ ಉದ್ಯೋಗ ಮಂದಿರ ಗಳಿಲ್ಲದೇ. ದುಡಿಯುವವರ ತರುಣರ ಸ್ತ್ರೀಯರ ಶಕ್ತಿತ್ರಯಗಳ ಸಹಾಯವಿಲ್ಲದೇ, ಧರ್ಮಗುರುಗಳ ಪಂಡಿತರ ಮುಂದಾಳುಗಳ ಪ್ರೋತ್ಸಾಹವಿಲ್ಲದೇ, ವೀರಶೈವ ಸಮಾಜದ ಸರ್ವಾಂಗಸುಂದರ ಪ್ರಗತಿಯಾಗುವದು ಸಾಧ್ಯವೇ ಇಲ್ಲ. ಸದ್ಯದ ಪರಿಸ್ಥಿತಿಯಲ್ಲಿ ಆಧುನಿಕ ವಿದ್ವಾಂಸರಾದ ತರುಣರ ಬಳಗವು ತಯಾರಾದರೆ ಸಮಾಜವು ಎಷ್ಟೋ ಮುಂದುವರಿಯಬಹುದು. ಆದರೆ ತರುಣರೇ, ನಾವು ಯಾವ ಪಾರ್ಟಿಯಲ್ಲಿಯೂ ಸೇರದೇ ಅಖಿಲ ಸಮಾಜದ ಕಲ್ಯಾಣವನ್ನೇ ದೃಷ್ಟಿಪಥದಲ್ಲಿಟ್ಟುಕೊಂಡು ದುಡಿಯೋಣ !

# ಶ್ರೀ ವೀರಶೈವ ಧರ್ಮಕ್ಷೇತ್ರದಲ್ಲಿ ಸ್ತ್ರೀಯರಿಗಿರತಕ್ಕ ಧಾರ್ಮಿಕ ಸ್ವಾತಂತ್ರ್ಯ.

## (ಅಕ್ಕಮಹಾದೇವಿಯ ಸೇನಾಸನಾಜದಿಂದ.)

(ಲೇಖಕರು:— ಎಮ್. ರಾಜೇಶ್ವರಿದೇವಿ ಬೆಂಗಳೂರು ಸಿಟಿ.)

ಪ್ರಪಂಚದಲ್ಲಿ ಜಗದ್ಧಿತಾರ್ಥವಾಗಿಯೂ ಮತ್ತು ಮತೋದ್ಧಾರಕ್ಕಾಗಿಯೂ ಮಹಾತ್ಮರು ಮತ್ತು ಶರಣರು ಜನಿಸುವರೆಂಬುದು ಎಲ್ಲರಿಗೂ ತಿಳಿದ ವಿಷಯವೇ ಆಗಿದೆ. ಹೀಗೆ ನಮ್ಮ ವೀರಶೈವ ಮತೋದ್ಧಾರಕ್ಕಾಗಿ ಅವತರಿಸಿದವರಲ್ಲಿ ಅಣ್ಣ ಬಸವಣ್ಣ, ಚನ್ನಬಸವಣ್ಣ, ಅಲ್ಲಮಪ್ರಭುದೇವ ಮತ್ತು ಉಡುತಡಿಯ ಶ್ರೀ ಜಗಜ್ಜ್ಯೋತಿ ಮಹದೇವಿಯಕ್ಕಗಳು ಮುಖ್ಯರಾದವರು.

ವೀರಶೈವರಲ್ಲಿ ಸ್ತ್ರೀಪುರುಷರೆಂಬ ಭೇದವಿಲ್ಲ. ಪ್ರತಿಯೊಬ್ಬ ಪುರುಷನಿಗಿರುವಂತೆಯೇ ಸ್ತ್ರೀಗೂ ಧಾರ್ಮಿಕ ವಿಚಾರದಲ್ಲಿ ಸಂಪೂರ್ಣ ಹಕ್ಕಿದೆ. ಆದರೆ ಇತರ ಮತಗಳಲ್ಲಿ ಸ್ತ್ರೀಯರಿಗೆ ಧಾರ್ಮಿಕ ವಿಚಾರದಲ್ಲಿ ವೀರಶೈವರಲ್ಲಿರುವಷ್ಟು ಸ್ವಾತಂತ್ರ್ಯವಿಲ್ಲೆಂದು ಸ್ಪಷ್ಟವಾಗಿ ಹೇಳಬಹುದು. ಉದಾಹರಣಾರ್ಥವಾಗಿ ಅದ್ವೈತಮತ ಸ್ಥಾಪಕನಾದ ಶಂಕರಾಚಾರ್ಯರು "ದ್ವಾರಂ ಕಿಮೇಕಂ ನರಕಸ್ಯ ನಾರೀ'' ಎಂದು ತಮ್ಮ ಮಣಿರತ್ನಮಾಲೆಯಲ್ಲಿ "ನರಕದ ದಾರಿ ನಾರಿ" ಎಂದು ಹೇಳಿದ್ದಾರೆ. ಆಹಾ! ಎಂತಹ ಉಪಮೆಯಿದು, ಎಂಥ ಸನ್ಮಾನವಿದರಲ್ಲಿ ! ಸ್ತ್ರೀಯರಿಗೆ ಇಂತಹ ಮಹಾಪುರುಷರಿಂದಲೇ ಇಷ್ಟೊಂದು ಸನ್ಮಾನ ದೊರೆತಿರುವಾಗ, ಮಿಕ್ಕವರ ಮಾತೇನು? ಅವಧೂತಗೀತೆಯಲ್ಲಿ ''ಕೇನೈಷಾ ನಿರ್ಮಿತಾ ನಾರೀ? " ಈ ಸ್ತ್ರೀ ಜಾತಿಯನ್ನು ನಿರ್ಮಾಣ ಮಾಡಿದವರಾರು ? ಎಂದು ಹುಟ್ಟಿಸಿದ ಬ್ರಹ್ಮನನ್ನೇ ಆಕ್ಷೇಪಿಸಿದ್ದಾರೆ. ಹೀಗೆ ಸ್ತ್ರೀಯರನ್ನು ಕಸದಂತೆ ಕಡೆಮಾಡಿರುವ ಉದಾಹರಣೆಗಳಿಗೆ ಲೆಕ್ಕವಿಲ್ಲ. ಈ ಕೀಳುಭಾವನೆಯನ್ನು ಕಿತ್ತುಹಾಕಿ ಸ್ತ್ರೀ ಸ್ವಾತಂತ್ರ್ಯವನ್ನು ಸ್ಥಾಪಿಸಿದ ಕೀರ್ತಿಯು ಬಸವಾದಿ ಶಿವಶರಣರದು. ಸ್ವಾತಂತ್ರ್ಯವೆಂದರೆ ತಾನು ಬೇಕಾದ ಹಾಗೆ ಮನೆ ಮನೆ, ಬೀದಿ ಬೀದಿ ತಿರುಗುವುದಕ್ಕಲ್ಲ; ಮನಬಂದಂತೆ ಮಾತನಾಡು

ವುದಕ್ಕಲ್ಲ; ಆತ್ಮವಿಕಾಸಕ್ಕಾಗಿ. ಅದಾಗಬೇಕಾದರೆ, ಧಾರ್ಮಿಕ ವಿಚಾರದಲ್ಲಿ ಅಂದರೆ ಆತ್ಮಸಾಧನೆಯ ವಿಷಯದಲ್ಲಿ ಮಾನವ ಜನ್ಮಕ್ಕೆಲ್ಲ ಒಂದೇ ರೀತಿಯಾದ ಸಮಾನತೆ ಮತ್ತು ಸಂಪೂರ್ಣ ಸ್ವಾತಂತ್ರ್ಯತೆ ಅತ್ಯವಶ್ಯಕ.

ವಾಚಕರೇ! ಧಾರ್ಮಿಕ ಸಮಾನತೆ ಅಂದರೆ ಏನು? ಎಂದು ನೀವು ಪ್ರಶ್ನಿಸಬಹುದು. ಅದಕ್ಕೆ ಇಷ್ಟು ಉತ್ತರ ಹೇಳಲು ನಾನು ಸಿದ್ಧಳಿದ್ದೇನೆ. ವೀರಶೈವರಲ್ಲಿ ಹೆಣ್ಣೇ ಹುಟ್ಟಲಿ, ಗಂಡೇ ಹುಟ್ಟಲಿ, ಗಂಡುಮಗುವಿಗೆ ಶ್ರೀಗುರುವಿನಿಂದ ಲಿಂಗಧಾರಣೆ (ಲಘುದೀಕ್ಷೆ) ಯನ್ನು ಮಾಡಿಸುವ ಹಾಗೆಯೇ ಹೆಣ್ಣುಮಗುವಿಗೂ ಮಾಡಿಸುತ್ತಾರೆ. ಒಂದು ವೇಳೆ ಯಾರಾದರೂ ಅಜ್ಞಾನದಿಂದ ಹೆಣ್ಣುಮಕ್ಕಳಿಗೆ ಶಿವದೀಕ್ಷೆ ಮಾಡಿಸದಿದ್ದರೆ, ಅವರು ವೀರಶೈವ ಪಥಕ್ಕೆ ಸಲ್ಲರು. ಅವರ ಭಕ್ತಿಯು ದೇವರಿಗೆ ಮುಟ್ಟದು. ಅಂಥಹವರನ್ನು ಕುರಿತು "ಗಂಡ ಶಿವಲಿಂಗ ದೇವರ ಭಕ್ತ, ಹೆಂಡತಿ ಮಾರಿ ಮಸಣೆಯ ಭಕ್ತೆ. ಗಂಡ ಕೊಂಬುದು ಪಾದೋದಕ ಪ್ರಸಾದ. ಹೆಂಡತಿ ಕೊಂಬುದು ಸುರೆ ಮಾಂಸ. ಭಾಂಡಭಾಜನ ಶುದ್ಧವಿಲ್ಲದವರ ಭಕ್ತಿ ಹೆಂಡದ ಮಡಿಕೆಯ ಹೊರಗೆ ತೊಳೆದಂತೆ ಕೂಡಲಸಂಗಮದೇವಾ." ಎಂದು ಬಸವಣ್ಣನವರು ಬಹುವಾಗಿ ಟೀಕಿಸಿದ್ದಾರೆ. ಆದರೆ ಇತರ ಮತಗಳಲ್ಲಿ ನೋಡಿ. ಗಂಡುಮಗುವಿಗೆ ಮಾತ್ರವೇ ಉಪನಯನ ಸಂಸ್ಕಾರವನ್ನು ಮಾಡುವರು; ಸ್ತ್ರೀಗೆ ಮಾಡುವದಿಲ್ಲ. ಇದರ ಉದ್ದಿಶ್ಯ ಹೆಂಗಸಿಗೆ ಮೋಕ್ಷಕ್ಕೇ ಅಧಿಕಾರವಿಲ್ಲವಂತೆ. ಇದು ಎಂತಹ ಅನ್ಯಾಯ! ಇನ್ನು ಸ್ವಾತಂತ್ರತೆಯ ವಿಷಯ. ಪ್ರತಿಯೊಬ್ಬ ವೀರಶೈವನೂ ಗುರು ಕೊಟ್ಟ ಇಷ್ಟಲಿಂಗವನ್ನು ಸದಾ ತನ್ನ ಎದೆಯ ಮೇಲೆ ಧರಿಸಿರುವುದರಿಂದ ಆ ದೇವನನ್ನು ನೋಡಬೇಕೆಂಬ ಇಚ್ಛೆಯುಂಟಾದಲ್ಲಿ ಯಾವಾಗ ಬೇಕಾದರೂ, ತಾನು ನಿಂತಿರಲಿ, ಮಲಗಿರಲಿ, ಕೂತಿರಲಿ, ನೋಡಿ, ಪಾಡಿ, ನಲಿದಾಡಿ ಹಿಗ್ಗಿ ಆನಂದಪಡಬಹುದು. ಆದರೆ ಇತರ ಮತದವರಿಗಾದರೋ ಈ ತೆರನಾದ ಅನುಕೂಲತೆ ಇಲ್ಲದ ಕಾರಣ, ಅವರು ಆ ದೇವನ ದರ್ಶನ ಮಾಡಬೇಕೆಂಬ ಇಚ್ಛೆಯುಂಟಾದಲ್ಲಿ ಸ್ನಾನ ಮಾಡಿ ದೇವಸ್ಥಾನಕ್ಕೆ ಹೋಗಿ ಅರ್ಚಕನು ಬಂದಮೇಲೆ ಅವನು ಹೇಳುವ ಮಂತ್ರಗಳಿಗೆ ಇವರು ಹೂವನ್ನು ಧರಿಸಿ ಕಟ್ಟಿನ ಪೂಜೆ ಮಾಡಿ, ನೋಡಿ, ಪಾಡಿ ಆನಂದಿಸಬೇಕು. ವಾಚಕರೇ!

ನೋಡಿ! ಇವೆರಡರಲ್ಲಿ ಯಾವುದಕ್ಕೆ ಧಾರ್ಮಿಕ ವಿಚಾರದಲ್ಲಿ ಹೆಚ್ಚು ಸ್ವಾತಂತ್ರ್ಯವಿದೆ ಎಂದು ? ಈ ಧಾರ್ಮಿಕ ಸ್ವಾತಂತ್ರ್ಯದ ವಿಷಯದಲ್ಲಿ ನಮ್ಮ ಶರಣರ ಅಭಿಪ್ರಾಯವೇನೆಂದರೆ, ''ಸ್ತ್ರೀಯಾದರೇನು ? ಪುರುಷ ನಾದರೇನು ? ಬಾಹ್ಯದಲ್ಲಿ ಭೇದವೇ ಹೊರತು ಆತ್ಮನಲ್ಲಿ ಭೇದವಿಲ್ಲ ವೆಂಬುದೇ ಅವರ ಮುಖ್ಯ ಧ್ಯೇಯವಾಗಿದ್ದಿತು. ಹೀಗೆ ವೀರಶೈವ ಸಮಾಜದಲ್ಲಿ ಸ್ತ್ರೀಯರಿಗೆ ಧಾರ್ಮಿಕ ವಿಚಾರದಲ್ಲಿ ಎಷ್ಟು ಸ್ವಾತಂತ್ರ್ಯ ವಿತ್ತೆಂಬುದನ್ನು ನಿದರ್ಶಿಸಲು ಉಡುತಡಿಯ ಶ್ರೀ ಜಗಜ್ಜ್ಯೋತಿ ಮಹದೇ ವಿಯಕ್ಕಗಳ ಜೀವನವೇ ಸಾಕ್ಷಿಯಾಗಿದೆ.

ಪರಮಪವಿತ್ರಳಾದ ಮಹದೇವಿಯಕ್ಕಗಳ ಚರಿತ್ರೆ ಮತ್ತು ವಚ ನಾಮೃತಗಳು ಎಷ್ಟೋ ಹಳೆಯ ಗ್ರಂಥಗಳಲ್ಲಡಗಿದ್ದರೂ ಬೆಂಗಳೂರಿ ನಲ್ಲಿರುವ ನಾವು ಯಾರೂ ಆ ಚರಿತ್ರೆಯನ್ನು ನೋಡಿರಲಿಲ್ಲ; ಪ್ರಚು ರಕ್ಕೆ ತಂದಿರಲಿಲ್ಲ; ಮತ್ತು ಅವಳ ವಚನಾಮೃತಗಳನ್ನು ಓದಿರಲಿಲ್ಲ. ಹಿಂದೆ ೧೨ನೇ ಶತಮಾನದಲ್ಲಿ ಸ್ತ್ರೀ ಸ್ವಾತಂತ್ರ್ಯವನ್ನು ತಂದು ಕೊಟ್ಟ ಬಸವಣ್ಣನಿಗೆ ಬಂದ ಅಗ್ರತಾಂಬೂಲವು ಇಂದು ಶ್ರೀ ಸರ್ಪಭೂಷಣ ಮಠಾಧ್ಯಕ್ಷರೂ ಮತ್ತು ಪ್ರಣವ ಸ್ವರೂಪಿಗಳೂ ಆದ ಶ್ರೀ ಮಹದೇವ ಸ್ವಾಮಿಗಳು ಬೆಂಗಳೂರಿಗೆ ದಯಮಾಡಿಸಿ, ಅಕ್ಕನ ವಚನಾಮೃತ ಮತ್ತು ಬಸವಾದಿ ಶಿವಶರಣರ ವಚನ ವಾಙ್ಮಯವನ್ನು ಎಲ್ಲರಿಗೂ ಬೋಧಿಸಿ, ಇಡೀ ಬೆಂಗಳೂರಿನ ಸ್ತ್ರೀ ಪುರುಷರನ್ನು ಉದ್ಧಾರ ಮಾಡು ವುದರ ಮೂಲಕ, ಇಂದು ಇವರಿಗೆ ಸಲ್ಲಬೇಕಾಗಿದೆ. ಇಂದು ನಮ್ಮನ್ನು ನಾವು ತಿಳಿದುಕೊಂಡು ಅಜ್ಞಾನದಿಂದ ಎಚ್ಚತ್ತಿದ್ದು ಈ ಮಹಾನುಭಾ ವರಿಂದಲೇ. ಎಚ್ಚತ್ತಿರುವುದಷ್ಟೇ ಅಲ್ಲ; ಎದ್ದು ಸಮಾಜಸಂಘಟಿತ ರಾಗಿ ಈ ಲೇಖನಪ್ರಪಂಚದಲ್ಲಿ ಕಾಲಿಡಬೇಕಾದರೂ ಆ ಮಹಾತ್ಮರ ಆಶೀರ್ವಾದ ಬಲದಿಂದಲೇ ಎಂದು ಹೇಳಲು ನಮಗೆ ಹೇರಳ ಹರ್ಷ ವೆನಿಸುತ್ತದೆ. ಇದಕ್ಕಾಗಿ ಈ ಪುಣ್ಯ ಶ್ಲೋಕಿಗಳು ನಮ್ಮೆಲ್ಲರಿಗೂ ಆವ ರ್ಶಮಹನೀಯರಾಗಿದ್ದಾರೆ.

ಅಕ್ಕನವರನ್ನು ನಿಷ್ಠೆಯಲ್ಲಿಯೂ ಮತ್ತು ದಿವ್ಯ ಜ್ಞಾನದಲ್ಲಿಯೂ ಮೀರಿದವರು ಯಾರೂ ಇರಲಿಲ್ಲ. ಇದಕ್ಕೆ ಚನ್ನಬಸವಣ್ಣನವರ ಒಂದು ವಚನ ನಿದರ್ಶನವಾಗಿದೆ. ಅದೇನೆಂದರೆ:— '' ಅಜಕೋಟಿ ವರುಷದ ವರೆಲ್ಲರೂ ಹಿರಿಯರೆ ? ಹುತ್ತೇರಿ ಬೆತ್ತ ಬೆಳೆದ ತಪಸ್ವಿಗಳೆಲ್ಲರೂ ಹಿರಿ

ಯರೆ? ನಡುಮುರಿದು, ತಲೆನಡುಗಿ, ನೆರೆ ತೆರೆ ಹೆಚ್ಚಿ, ಮತಿಗೆಟ್ಟು ಒಂದನಾಡಹೋಗಿ ಒಂಭತ್ತನಾಡುವ ಅಜ್ಞಾನಿಗಳೆಲ್ಲರೂ ಹಿರಿಯರೆ? ಅನುವರಿದು ಘನವ ಬೆರಸಿ ಕೂಡಲ ಚನ್ನಸಂಗಯ್ಯನಲ್ಲಿ ಬೆರಸಿ ಬೇರಾಗ ದಿಪ್ಪ ಹಿರಿಯತನ ನಮ್ಮ ಮಹದೇವಿಯಕ್ಕನಿಗಾಯಿತ್ತು" ಮತ್ತು ಇದೇ ವಿಷಯದಲ್ಲಿ ಶ್ರೀಮಾನ್ ಜಿ. ಸಿ. ವೀರಪ್ಪ *B. A. L. L. B.* ಇವರು ಭಾಷಾಂತರ ಮಾಡಿರುವ, " '*The Teachings of Lord Basava*" ಎಂಬಲ್ಲಿನ ಒಂದು ವಚನದಲ್ಲಿ ನಿಜವಾದ ಜ್ಞಾನಿಗಳು ಯಾರೆಂದು ಹೇಳಿರುವುದೇನೆಂದರೆ— *All that do read sacred books, all that do speak well are not wise; wise is he that believeth in God and serveth mankind* " ಅಂದರೆ ದೊಡ್ಡ ದೊಡ್ಡ ಗ್ರಂಥಗಳನ್ನು, ವೇದಪುರಾಣಗಳನ್ನು ಓದುವವರೂ ಮತ್ತು ಒಳ್ಳೆ ವಾಚಾಳಿತನದಿಂದ ಅಂದರೆ ಎಲ್ಲರ ಮನಸ್ಸನ್ನು ಒಲಿಸಿ ಕೊಳ್ಳುವಂತೆ ಮಾತನಾಡುವವರೂ ಜ್ಞಾನಿಗಳಲ್ಲ. ಆದರೆ ಯಾರು ಭಗವಂತನಲ್ಲಿ ಸಹಜವಾದ ನಂಬಿಕೆ, ಭಕ್ತಿ, ಪ್ರೇಮವನ್ನಿಡುತ್ತಾರೋ ಮತ್ತು ಯಾರು ಸಮಾಜಸೇವೆಯನ್ನು ನಿಷ್ಕಲವಾದ ಭಕ್ತಿಯಿಂದ ಮಾಡು ವರೋ ಅವರೇ ನಿಜವಾದ ಜ್ಞಾನಿಗಳು ಎಂದು ಹೇಳಿರುತ್ತಾರೆ. ಇದ ರಿಂದ ಅಕ್ಕಗಳು ತುಂಬಾ ಚಿಕ್ಕವರಾಗಿದ್ದಾಗ್ಯೂ, ದಿವ್ಯ ಜ್ಞಾನಾನುಭ ವದಲ್ಲಿ ವಯೋವೃದ್ಧರಿಗಿಂತಲೂ ಎಷ್ಟು ಹಿರಿಯರಾಗಿದ್ದಾರೆಂಬುದು ಇದ ರಿಂದ ಗೊತ್ತಾಗುತ್ತದೆ. ಆದಕಾರಣ ಹುಟ್ಟಿನಿಂದ ಹೆಣ್ಣುಗಂಡಾದರೂ ಜ್ಞಾನದಿಂದ ಹೆಣ್ಣುಗಂಡಿಲ್ಲ. ಊಟದಲ್ಲಿರುವಂತೆ ಧರ್ಮದಲ್ಲಿಯೂ ಎಲ್ಲರಿಗೂ ಸಮಾನ ಹಕ್ಕಿದೆ. ಎಲ್ಲರಲ್ಲಿರುವ ಆತ್ಮನು ಒಬ್ಬನೇ. ಆತ ನಿಗೆ ಜಾತಿರೂಪಗಳಿಲ್ಲ. ಆತನ ಉದ್ಧಾರ ಮಾಡಿಕೊಳ್ಳುವ ಮಾರ್ಗವು ಎಲ್ಲ ಸ್ತ್ರೀ ಪುರುಷರಿಗೂ ಸಮಾನವಾದುದು. ಸ್ತ್ರೀಯರಿಗೂ ಧಾರ್ಮಿಕ ದಲ್ಲಿ ಹಕ್ಕಿದೆ ಎನ್ನುವುದಕ್ಕೆ, "ಶರಣಸತಿ ಲಿಂಗಸತಿ" ಎಂಬ ನಮ್ಮ ಉಚ್ಚತತ್ವವೇ ಸಾಕ್ಷಿ. ಶಿವನ ವಿಷಯದಲ್ಲಿ ಜೀವರೆಲ್ಲರೂ ಸತಿಯರು. ಅಂದಮೇಲೆ, "ನ ಸ್ತ್ರೀ ಸ್ವಾತಂತ್ರ್ಯಮರ್ಹತಿ" ಎಂಬ ಸ್ವಾರ್ಥಿಗಳ ಮಾತು ಹೇಗೆ ನಿಲ್ಲುವುದು?"

ಅಕ್ಕಗಳ ಪ್ರತಿಯೊಂದು ವಚನವು ಅತ್ಯಂತ ಮಧುರವೂ ಮತ್ತು ಭಾವ ಗರ್ಭಿತವೂ ಆಗಿರುತ್ತವೆ. ಇದು ಚನ್ನಬಸವಣ್ಣನವರ ಒಂದು ವಚನದಿಂದ

ಗೊತ್ತಾಗುತ್ತದೆ. ಅದೇನೆಂದರೆ, "ಆದ್ಯರ ಅರವತ್ತು ವಚನಕ್ಕೆ ದಣ್ಣಾಯಕರ ಇಪ್ಪತ್ತು ವಚನ....ಕ್ಕೆ, ಪ್ರಭುದೇವರ ಹತ್ತು ವಚನ....ಕ್ಕೆ, ಅಜಗಣ್ಣನ ಐದು ವಚನ....ಕ್ಕೆ, ಕೂಡಲ ಚನ್ನಸಂಗಯ್ಯನಲ್ಲಿ ಮಹದೇವಿಯಕ್ಕಗಳ ಒಂದು ವಚನ ನಿರ್ವಚನ." ಅಂದರೆ ಆದ್ಯರ ಅರವತ್ತು ವಚನಗಳಲ್ಲಡಗಿರತಕ್ಕ ಅದೇ ಭಾವಾರ್ಥವನ್ನು, ಅಕ್ಕನು ಒಂದೇ ವಚನದಲ್ಲಿ ಹೇಳಬಲ್ಲವರಾಗಿದ್ದರು. ಸ್ತ್ರೀಯರು ಪ್ರಕೃತಿಯಿಂದ ಅಬಲೆಯರೆಂದು ಅಪವಾದ ಬಂದರೂ, ಬುದ್ಧಿಯಿಂದ ಅಬಲೆಯರಲ್ಲ; ಧಾರ್ಮಿಕ ಸ್ವಾತಂತ್ರ್ಯದಿಂದ ಅಬಲೆಯರಲ್ಲ; ಆತ್ಮೋನ್ನತಿಯಲ್ಲಿ ಅಬಲೆಯರಲ್ಲ, ಎಂಬುದು, ಈ ಅಕ್ಕನ ಮೇಲಣ ಸ್ತುತಿಯಿಂದ ಗೊತ್ತಾಗುತ್ತದೆ. ಇಲ್ಲದಿದ್ದರೆ, ಆದ್ಯರ ಅರವತ್ತು ವಚನಗಳಲ್ಲಿರುವ ಅನುಭವವನ್ನು ಒಂದೇ ಒಂದು ವಚನದಲ್ಲಿ ತುಂಬಿ ಹೇಳುವ ಅಪ್ರತಿಮಶಕ್ತಿಯು ಅಕ್ಕನವರಿಗೆ ಬರಬಾರದಾಗಿತ್ತು. ಆದ್ದರಿಂದ ಆತ್ಮೋನ್ನತಿಗಾಗಿ, ಧಾರ್ಮಿಕದಲ್ಲಿ ನಮಗೂ ಸ್ವಾತಂತ್ರ್ಯದ ಪಟ್ಟವಿದೆ.

ಅಕ್ಕಗಳಿಗೆ ಆಚಾರವಿಚಾರಾದಿಗಳಲ್ಲಿ ಶ್ರದ್ಧೆ, ಲಿಂಗಪೂಜೆಯಲ್ಲಿ ನಿಷ್ಠೆ, ಭಕ್ತಿಯಲ್ಲಿ ಉಜ್ವಲ, ಇವು ಬಾಲ್ಯದಲ್ಲಿ ಅಂಕುರ ರೂಪದಲ್ಲಿದ್ದು ದಿನದಿನವೂ, ಇಮ್ಮಡಿ ಮುಮ್ಮಡಿಯಾಗಿ ಬೆಳೆದು ಫಲಿಸಿರುತ್ತವೆ. ಪ್ರೇಮದ ಭಾವಸಮಾಧಿಯಲ್ಲಿ ಲಿಂಗನೊಡನೊಂದಾಗಿ ಕೂಟದಲ್ಲಿ ಸಂತಿಸಿ, ವಿಯೋಗದಲ್ಲಿ ದುಃಖಿಸಿ, ಕೊರಗಿ ಕಾತರಿಸುವುದು ಅಕ್ಕನಿಗೆ ಸ್ವಾಭಾವಿಕವಾಗಿತ್ತು. ಹೇಗೆಂದರೆ, "ಬಂದಹನೆಂದು ಬಟ್ಟೆಯ ನೋಡಿ ಬಾರದಿರ್ದೊಡೆ ಕರಗಿ ಕೊರಗಿದೆನವ್ವಾ! ತಡವಾದಡೆ ಬಡವಾದೆ ತಾಯೆ. ಚನ್ನಮಲ್ಲಿಕಾರ್ಜುನನ ಒಂದಿರುಳಗಲಿದೊಡೆ ತೆಕ್ಕೆ ಸಡಲಿದ ಜಕ್ಕಿವಕ್ಕಿಯಂತಾದೆನವ್ವಾ." ಇದರಿಂದ ಅಕ್ಕಗಳಿಗೆ ಪರಮಾತ್ಮನಲ್ಲಿ ಎಷ್ಟು ನಿಷ್ಠೆ ಮತ್ತು ಪ್ರೀತಿ ಇತ್ತೆಂಬುದು ಗೊತ್ತಾಗುತ್ತದೆ.

ಕೌಶಿಕರಾಜನ ಬಲವಂತದಿಂದ ಸಂಸಾರಕ್ಕೆಳೆಯಲ್ಪಟ್ಟಾಗ, ಅವರು ವಿಷಯಾಭಿಲಾಷೆಗೊಳಪಡದೆ, ಭವಬಂಧನವನ್ನು ಬಿಡಿಸಲು ಪರಮಾತ್ಮನನ್ನೇ ಮರೆಹೊಕ್ಕರು. ಹೇಗೆಂದರೆ, "ತೆರಣಿಯ ಹುಳು ತನ್ನ ಸ್ನೇಹದಲ್ಲಿ ಮನೆಯ ಮಾಡಿ ತನ್ನ ನೂಲು ತನ್ನ ಸುತ್ತಿ ಸಾವ ತೆರನಂತೆ ಮನ ಬಂದುದ ಬಯಸಿ, ಬೇವುತ್ತಿದ್ದೇನೆ. ಅಯ್ಯಾ! ಎನ್ನ ಮನದ ದುರಾಶೆಯ ಮಾಣಿಸಿ ನಿಮ್ಮತ್ತ ತೋರಾ ಚನ್ನಮಲ್ಲಿಕಾರ್ಜುನಾ." ಅಂದರೆ

ಜೇಡರಹುಳು ತನ್ನ ಅಂಟಿನಿಂದ ಬಲೆಯನ್ನು ಮಾಡಿ, ಅದಕ್ಕೆ ಸಿಕ್ಕಿ ಕೊಂಡ ಕ್ರಿಮಿಕೀಟಾದಿಗಳನ್ನು ತಿಂದು ಜೀವಿಸುತ್ತದೆ. ಕೊನೆಗೆ ಅದೇ ಬಲೆಯಲ್ಲಿ ಸಿಕ್ಕಿಕೊಂಡು ಹೇಗೆ ಪ್ರಾಣವನ್ನು ಹಾಳುಮಾಡಿಕೊಳ್ಳು ವುದೋ, ಹಾಗೆ ಸಂಸಾರದಲ್ಲಿನ ಅಲ್ಪಸುಖದ ವಿಷಯಾಭಿಲಾಷೆಗೊಳ ಪಟ್ಟು, ಕೊನೆಗೆ ಅದೇ ವಿಷಯಾಭಿಲಾಷೆಗಳಿಂದಲೇ ದುಃಖಿಗಳಾಗುವೆ ವೆಂಬುದನ್ನರಿತು ಅಕ್ಕಗಳು ಸಂಸಾರದಿಂದ ಪಾರಾಗಲು ಎಷ್ಟು ದೈನ್ಯ ದಿಂದ ಪರಮಾತ್ಮನಿಗೆ ಮೊರೆಯಿಡುತ್ತಿದ್ದರೆಂಬುದು ಇದರಿಂದ ಗೊತ್ತಾ ಗುತ್ತದೆ. ಈ ವಚನದಿಂದ ನಮಗೆ ಬೋಧೆಯಾಗುವುದೇನಂದರೆ, ನಾವು ಕೇವಲ ಜಡವಸ್ತುಗಳಂತೆ, ಪುರುಷರ ಭೋಗದ ಬೊಂಬೆಗಳಾ ಗಬಾರದು. ಕೇವಲ ಯಾವಾಗಲೂ ವಿಷಯ ವ್ಯಾಸಂಗದಲ್ಲಿಯೇ ಅಂದರೆ ೪ ಮಕ್ಕಳನ್ನು ಹಡೆದು ಸಾಕುವುದೇ ನಮ್ಮ ನಿರ್ದಿಷ್ಟ ಧ್ಯೇಯವಲ್ಲ. ಹಗಲಿರುಳು ಮನೆ ಮಡಿಕೆ ಕುಡಿಕೆ ತಿಕ್ಕುವುದೇ ನಮ್ಮ ಜೀವಿತವಲ್ಲ. ನಾವೂ ಮನುಷ್ಯರು, ನಮಗೂ ಮನುಷ್ಯತ್ವವಿದೆ. ಆದ ಕಾರಣ ನಮ್ಮ ಉದ್ಧಾರಕ್ಕಾಗಿ ಸ್ವಲ್ಪ ಕಾಲವನ್ನಾದರೂ ಲಿಂಗಪೂಜೆ, ಜಂಗಮಸೇವೆಯಲ್ಲಿ ಕಳೆಯಬೇಕು; ಮನಶ್ಶಾಂತಿಯನ್ನು ಪಡೆಯಬೇಕು.

ಶ್ರೀ ಬಸವಣ್ಣನವರ ಶಿವಾನುಭವ ಮಂಟಪದಲ್ಲಿ ಶರಣರಂತೆಯೇ ಶರಣೆಯರೂ ಪ್ರವೇಶಿಸಲು ಅಧಿಕಾರವಿತ್ತು. ಇದು ಮಾತ್ರವೇ ಅಲ್ಲದೆ ಧಾರ್ಮಿಕ ವಿಚಾರದಲ್ಲಿಯೂ ಮತ್ತು ಆತ್ಮಸಾಧನೆಯ ವಿಷಯದ ಲ್ಲಿಯೂ ಅವರವರ ಅನುಭವವನ್ನು ತಿಳಿಸಲು ಮತ್ತು ಚರ್ಚೆಮಾ ಡಲು ಸಂಪೂರ್ಣ ಅಧಿಕಾರವಿತ್ತು. ಇದಕ್ಕೆ ಸಾಕ್ಷಿ, ಶಿವಾನುಭವ ಮಂಟಪದಲ್ಲಿ ಪ್ರಭುದೇವರಿಗೂ ಮತ್ತು ನಮ್ಮ ಅಕ್ಕಗಳಿಗೂ ನಡೆದ ಸಂವಾದದಿಂದ ಅದು ಗೊತ್ತಾಗುತ್ತದೆ. ಮಹಾದೇವಿಯು ನಿರ್ವಾಣ ದಿಂದ ಶಿವಾನುಭವ ಮಂಟಪವನ್ನು ಪ್ರವೇಶಿಸಿದ್ದನ್ನು ಪ್ರಭುದೇವರು ನೋಡಿ, "ಅವ್ವಾ! ಉದಮದದ ಯೌವ್ವನವನೊಳಕೊಂಡು ಸತಿ, ನೀ ಇತ್ತಲೇತಕ್ಕೆ ಬಂದೆಯವ್ವಾ? ಸತಿ, ಎಂದರೆ ಮುನಿವರು ನಮ್ಮ ಶರ ಣರು; ನಿಮ್ಮ ಪತಿಯ ಕುರುಹು ಹೇಳಿದರೆ, ಬಂದು ಕುಳ್ಳಿರು ಅಲ್ಲ ದಿರೆ ತೊಲಗು ತಾಯೆ." ಅಂದರೆ, ನಿಮ್ಮ ನಿಜವಾದ ಪತಿಯ ಗುರು ತನ್ನು ಹೇಳಿದರೆ, ನಿಮಗೆ ಇಲ್ಲಿ ಅವಕಾಶವುಂಟು. ಅಲ್ಲವಾದರೆ, ಅಲ್ಲಿಂದ ಹೊರಟು ಹೋಗು ಎಂದರು. ಅದಕ್ಕೆ ಅಕ್ಕಗಳು, "ಹರನೇ ನೀ

ನೆನಗೆ ಗಂಡನಾಗಬೇಕೆಂದು ಅನಂತಕಾಲ ತಪಸಿದ್ದೆ ನೋಡಾ. ಹಸೆಯ ಮೇಲಣ ಮಾತ ಬೆಸಗೊಳ್ಳಲಟ್ಟಿದರೆ, ಶಶಿಧರನ ಹತ್ತಿರಕ್ಕೆ ಕಳುಹಿದ ರೆಮ್ಮವರು. ಭಸ್ಮವನೆ ಪೂಸಿ, ಕಂಕಣವನೇ ಕಟ್ಟಿದರು. ಚನ್ನಮಲ್ಲಿ ಕಾರ್ಜುನಯ್ಯ ನನಗೆ ನೀನಾಗಬೇಕೆಂದು." ಇದರಿಂದ ಅಕ್ಕಗಳು ಚಿಕ್ಕಂ ದಿನಿಂದಲೂ "ಶರಣ ಸತಿ, ಲಿಂಗಪತಿ" ಎಂಬ ತತ್ವವನ್ನು ಚನ್ನಾಗಿ ಅರಿತಿದ್ದು ಅದರಂತೆ ನಡೆಯುತ್ತಿದ್ದರೆಂಬುದು ಗೊತ್ತಾಗುತ್ತದೆ. ಆಕೆಗೂ ಪರಮಾತ್ಮನಿಗೂ ವಿವಾಹ ಸಂಬಂಧವು ಹೇಗಾಯಿತೆಂದರೆ, "ಗುರುವೇ ತೆತ್ತಿಗನಾದ, ಲಿಂಗವೇ ಮದುವಳಿಗನಾದ, ಆನು ಮದುವಳಿಗೆಯಾ ದೆನು, ವಸುಧೆಯ ಭಕ್ತರೆಲ್ಲರೂ ನಿಬ್ಬಣಿಗರಾದರು. ಕೊಟ್ಟರು ಸಾದ್ಯ ಶವಪ್ಪ ವರನ ನೋಡಿ. ಇದು ಕಾರಣ ಚನ್ನಮಲ್ಲಿಕಾರ್ಜುನ ಗಂಡ ನೆನಗೆ. ಈ ಲೋಕದ ಗಂಡಂದಿರೆನಗೆ ಸಂಬಂಧವಿಲ್ಲವಯ್ಯಾ" ಎಂದು ಹೇಳಿದ್ದಾರೆ. ಹೀಗೆ ಪ್ರಭುದೇವರು, ನಿಮ್ಮ ಪತಿಯಾರು? ಎಂದು ದಕ್ಕೆ, ಇದುವರೆವಿಗೂ ಹೇಳಿದ ಉತ್ತರಗಳಿಂದ ಚನ್ನಮಲ್ಲಿಕಾರ್ಜು ನನೇ ತನ್ನ ಪತಿ ಎಂದ ಹಾಗಾಯಿತು. ಈ ಲೋಕದ ಗಂಡಂದಿರೆ ನಗೆ ಸಂಬಂಧವಿಲ್ಲೆಂದು ಏತಕ್ಕಾಗಿ ಹೇಳಿದರೆಂದರೆ, ಅವರು, ಈ ಲೋಕದ ಮಾನವನಿಗೂ ಮತ್ತು ಪರಮಾತ್ಮನಿಗೂ ಇದ್ದ ತಾರತಮ್ಯ ವನ್ನು ಚನ್ನಾಗಿ ಅರಿತಿದ್ದರು. ಹೇಗೆಂದರೆ, "ಸಾವಿಲ್ಲದ, ಕೇಡಿಲ್ಲದ, ರೂಹಿಲ್ಲದ, ಚಲುವಂಗಾನೊಲಿದೆನವ್ವಾ! ಎಡೆ ಇಲ್ಲದ ಕಡೆ ಇಲ್ಲದ ತೆರಹಿಲ್ಲದ ಕುರುಹಿಲ್ಲದ ಚಲುವಂಗಾನೊಲಿದೆನೆಲೆ ಅವ್ವಾ! ನೀನು ಕೇಳಾ ತಾಯೆ. ಭವವಿಲ್ಲದ ಭಯವಿಲ್ಲದ ನಿರ್ಭಯ ಚಲುವಂಗೊ ಲಿದೆ ನಾನು. ಕುಲಸೀಮೆ ಇಲ್ಲದ ನಿಸ್ಸೀಮ ಚಲುವಂಗೆ ನಾನೊಲಿದೆ. ಇದು ಕಾರಣ, ಚನ್ನಮಲ್ಲಿಕಾರ್ಜುನ ಗಂಡನೆನಗೆ. ಈ ಸಾವ ಕೆಡುವ ಗಂಡರನೊಯ್ದು ಒಲೆಯೊಳಗಿಕ್ಕು." ಎಂದು ಹೇಳಿದ್ದಾರೆ. ಅಕ್ಕಗಳು ಇದರಿಂದ ನಮಗೆ ಲಿಂಗಪತಿಯೊಬ್ಬನಿರುವನು. ಆತನನ್ನು ನೀವೆಲ್ಲರೂ ಮರೆತಿರುವಿರಿ. ಆತನ ಉಪಚಾರಕ್ಕಾಗಿ ಸ್ವಲ್ಪ ಕಾಲವನ್ನಾದರೂ ಕಳೆ ಯುವುದಿಲ್ಲ. ಆತನೇ ನಮಗೆ ನಿಜವಾದ ಸುಖವನ್ನು ಕೊಡಬಲ್ಲನು. ಈ ಲೋಕದ ಪತಿಗಳು ಸ್ವಾರ್ಥಿಗಳು. ಸಾವುಳ್ಳವರು. ಆತನು ಮೃತ್ಯುಂ ಜಯನು. ಆತನನ್ನು ಪಡೆಯುವುದೇ ನಮ್ಮ ಧ್ಯೇಯವೆಂದು ತಿಳಿ ಹೇಳಿದ್ದಾರೆ.

ಹೀಗೆ ಆ ಪರಮಾತ್ಮನನ್ನೇ ಪತಿಯನ್ನಾಗಿ ಆರಿಸಿಕೊಂಡ ಮೇಲೆ ತಮ್ಮ ಸರ್ವ ಸುಖ ದುಃಖಗಳೆಲ್ಲವನ್ನೂ ಆ ಪರಮಾತ್ಮನಿಗೆ ಅರ್ಪಿಸಿದರು. "ನಚ್ಚುಗೆ ಮನ ನಿಮ್ಮಲ್ಲಿ. ಮಚ್ಚುಗೆ ಮನ ನಿಮ್ಮಲ್ಲಿ. ಸಲುಗೆಗೆ ಮನ ನಿಮ್ಮಲ್ಲಿ. ಸೋಲುಗೆ ಮನ ನಿಮ್ಮಲ್ಲಿ. ಅಳಲುಗೆ ಮನ ನಿಮ್ಮಲ್ಲಿ. ಬಳಲುಗೆ ಮನ ನಿಮ್ಮಲ್ಲಿ. ಕರಗುಗೆ ಮನ ನಿಮ್ಮಲ್ಲಿ. ಕೊರಗುಗೆ ಮನ ನಿಮ್ಮಲ್ಲಿ. ಎನ್ನ ಪಂಚೇಂದ್ರಿಯಂಗಳು ಕಬ್ಬಿಣ ಉಂಡ ನೀರಿನಂತೆ ನಿಮ್ಮಲ್ಲಿ ಬೆರಸುಗೆ ಚನ್ನಮಲ್ಲಿಕಾರ್ಜುನಾ." ಹೀಗೆ ತಮ್ಮ ಸರ್ವ ಸುಖದುಃಖಗಳೆಲ್ಲವನ್ನೂ ಪರಮಾತ್ಮನಿಗೆ ಅರ್ಪಿಸಿದರು. ಇನ್ನು ಪಂಚೇಂದ್ರಿಯುಗಳು, ಕಣ್ಣು, ಮೂಗು, ಕಿವಿ, ನಾಲಿಗೆ, ಚರ್ಮ ಇವುಗಳ ಯಾವತ್ತೂ ಕ್ರಿಯೆಗಳು, ರೂಪು, ರಸ, ಗಂಧ, ಸ್ಪರ್ಶ, ಶಬ್ದ ಈ ಯಾವತ್ತು ಪರಮಾತ್ಮನಿಗೆ ಅರ್ಪಿಸಿದ ಪಂಚವಿಷಯುಗಳು, ಬಿಸಿಯಾದ ಕಬ್ಬಿಣವನ್ನು ನೀರಲ್ಲಿ ಅದ್ದಿ ತೆಗೆದರೆ ಅದಕ್ಕೆ ಅಂಟಿಕೊಂಡಿದ್ದ ನೀರು ಹೇಗೆ ಅದರಲ್ಲಿಯೇ ಅದೃಶ್ಯವಾಗುವುದೋ ಹಾಗೆ ಪರಮಾತ್ಮನಲ್ಲಿಯೇ ಲಯವಾಗುವುವು, ಎಂಬುದೇ ಆಕೆಯ ಭಾವವು. ನಮ್ಮ ಭಾವವು ಇಂದ್ರಿಯ ಸುಖಕ್ಕಾಗಿ ಧಾವಿಸುತ್ತದೆ. ಜನನ ಮರಣಗಳನ್ನು ಉಡಿಯಲ್ಲಿ ಕಟ್ಟಿಕೊಳ್ಳಲು ಹೆಣಗುತ್ತದೆ. ಮನಸ್ಸನ್ನು ಕೇವಲ ಸಂಸಾರದಲ್ಲಿರಿಸಿ ಪರ್ವತ ಪ್ರಾಯವಾದ ದುಃಖವನ್ನು ಹೊತ್ತು ನಿಲ್ಲಲು ಸಾಹಸ ಮಾಡುತ್ತೇವೆ. ಇದೆಲ್ಲವೂ ನಮ್ಮ ಮನೋದೌರ್ಬಲ್ಯವು; ನಾವು ಪುರುಷರ ಪರತಂತ್ರವಾದ ಫಲವು. ಅದಕ್ಕಾಗಿ ನಾವಿನ್ನು ನಮ್ಮಿಂದ್ರಿಯುಗಳನ್ನು ಮನಸ್ಸನ್ನು, ಲಿಂಗಪತಿಗಾಗಿ, ಕೊಂಚ ಕಾಲವಾದರೂ ಮಾಡಿಕೊಳ್ಳಬೇಕು. ಅದೇ ಶಾಶ್ವತ.

ಹೀಗೆ ಪಂಚೇಂದ್ರಿಯುಗಳು ಪರಮಾತ್ಮನಲ್ಲಿ ಬೆರೆದ ಬಳಿಕ ಇನ್ನು ಭವವೆಲ್ಲಿಯದು? ಹೇಗೆಂದರೆ, "ಲೋಕದ ಚೇಷ್ಟೆಗೆ ರವಿ ಬೀಜವಾದಂತೆ ಕರಣಂಗಳ ಚೇಷ್ಟೆಗೆ ಮನವೇ ಬೀಜ. ಎನಗುಳ್ಳದೊಂದು ಮನ. ಆ ಮನ ನಿಮ್ಮಲ್ಲಿ ಒಡವೆರೆದ ಬಳಿಕ ಎನಗೆ ಭವವುಂಟೇ ಚನ್ನಮಲ್ಲಿಕಾರ್ಜುನಾ." ಯಾವತ್ತು ಮಾನವ ಮೊದಲಾಗಿ ಸಕಲ ಜೀವಿತ ಪ್ರಾಣಿ ಕ್ರಿಮಿಕೀಟಾದಿಗಳ ಪ್ರಾಪಂಚಿಕ ವ್ಯವಹಾರವೆಲ್ಲ ಸೂರ್ಯಾಸ್ತಮಾನವನ್ನೇ ಅನುಸರಿಸುತ್ತವೆ. ಅಂದರೆ ಎಲ್ಲವೂ ಸೂರ್ಯೋದಯದಿಂದ, ಅಸ್ತಮಾನದ ವರೆಗೂ ವ್ಯವಹಾರ ನಡೆಸಿ ದಣಿದು, ಸೂರ್ಯಾ

ಸ್ತಮಾನದಲ್ಲಿ ವಿಶ್ರಾಂತಿ ಹೊಂದುವುವು. ಇದರಿಂದ ಪ್ರಾಪಂಚಿಕ ವ್ಯವಹಾರಕ್ಕೆಲ್ಲ ಸೂರ್ಯನೇ ಹೇಗೆ ಮೂಲನೋ, ಹಾಗೆ ಇಂದ್ರಿಯಗಳ ಚೇಷ್ಟೆಗೆ ಮನವೇ ಮೂಲ. ಇರತಕ್ಕ ಒಂದು ಮನ, ಬೇರೆ ಬೇರೆ ಇಂದ್ರಿಯಗಳಲ್ಲಿ ಸೇರಿ, ಬೇರೆ, ಬೇರೆ ಕ್ರಿಯೆಯನ್ನು ಮಾಡುತ್ತಿರುತ್ತದೆ. ಇನ್ನು ಈ ಮನ ಪರಮಾತ್ಮನಲ್ಲಿ ಲೀನವಾದ ಮೇಲೆ ಇನ್ನು ಭವವೆಲ್ಲಿಯದು? ಇಲ್ಲ. ಏಕೆಂದರೆ, "ಮನಯೇವ ಮನುಷ್ಯಾಣಾಂ, ಕಾರಣಂ, ಬಂಧಮೋಕ್ಷಯೋಃ" ಅಂದರೆ ಮನಸ್ಸು ಪಾರಮಾರ್ಥಿಕದಲ್ಲಿದ್ದರೆ ಮೋಕ್ಷವುಂಟಾಗುವುದು; ಅದಲ್ಲದೆ ಲೌಕಿಕದಲ್ಲಿದ್ದರೆ ಭವವುಂಟಾಗುವುದು. ನಮ್ಮ ಪ್ರಕೃತಿಯು ಪುರುಷತಂತ್ರವಾದರೂ ಮನಸ್ಸು ಮಹಾದೇವನ ಮಂತ್ರಧ್ಯಾನದಲ್ಲಿರಬೇಕು. ಇಂದ್ರಿಯಗಳಲ್ಲಿ ಮನವೇ ಮುಖ್ಯವಾದುದರಿಂದ, ಅದೊಂದನ್ನು ಆತನಿಗೆ ಕೊಟ್ಟರಾಯಿತು. ಆಗ ನಮ್ಮ ಸಂಸಾರವೆಲ್ಲ ಸಸಾರವಾಗುವುದು; ನಮ್ಮ ಜೀವಿತವು ಸಫಲವಾಗುವುದು. ನಾವಲ್ಲದೆ ನಮ್ಮ ಕುಲವೂ ಉದ್ಧಾರವಾಗುವುದು.

ಹೀಗೆ ಮನಸ್ಸು ಪರಮಾತ್ಮನಲ್ಲಿ ಲೀನವಾದ ಮೇಲೆ ಭವವೆಲ್ಲಿಯದು? ಇಲ್ಲ. ಇನ್ನು ಅದೇ ಮನ ಇನ್ನಾವ ತುಚ್ಛಪ್ರಾಪಂಚಿಕ ಭೋಗಕ್ಕೆಳಸುವುದು? ಯಾವುದಕ್ಕೂ ಎಳಸುವುದಿಲ್ಲ. ಹೇಗೆಂದರೆ, "ಗಿರಿಯಲ್ಲದೆ ಹುಲ್ಲು ಮೊರಡಿಯಲ್ಲಾಡುವುದೇ ನವಿಲು? ಕೊಳನಲ್ಲದೆ ಕಿರಿವಳ್ಳಕ್ಕೆಳಸುವುದೇ ಹಂಸೆ? ಮಾಮರ ತಳಿತಲ್ಲದೆ ಸ್ವರಗೈಯ್ಯುವದೆ ಕೋಗಿಲೆ? ಪರಿಮಳವಿಲ್ಲದ ಪುಷ್ಪಕ್ಕೆಳಸುವುದೇ ಭ್ರಮರ? ಎನ್ನ ದೇವ ಚನ್ನಮಲ್ಲಿಕಾರ್ಜುನನಲ್ಲದೆ ಅನ್ಯಕ್ಕೆಳಸುವುದೇ ಎನ್ನ ಮನ? ಹೀಗೆ ಚನ್ನಮಲ್ಲಿಕಾರ್ಜುನನಲ್ಲಿ ಬೆರೆಯುವುದೇ ಆಕೆಗೆ ಸ್ವಾಭಾವಿಕ. ಅದನ್ನು ಬಿಟ್ಟು, ಆಕೆಯ ಮನ ಪರಮಾತ್ಮನನ್ನಲ್ಲದೆ ಅನ್ಯಕ್ಕೆಳಸದು, ಎಂದುದಕ್ಕೆ ಪ್ರಭುದೇವರು ಆಕೆಯನ್ನು ಪರೀಕ್ಷಿಸಬೇಕೆಂಬ ಉದ್ದೇಶದಿಂದ ಇಷ್ಟಾದರೆ ಸಾಲದು; ನಿನಗೆ ಪುರುಷನ ಧೈರ್ಯ ಸಾಹಸವಿದ್ದರೆ ಮಾತ್ರವೇ ಶಿವನು ನಿನಗೆ ಒಲಿಯುವನು ಎಂದುದಕ್ಕೆ ಅಕ್ಕಗಳು, "ಕಾಮನ ಗೆಲಿದೆನು ಬಸವಾ ನಿಮ್ಮ ದಯದಿಂದ. ಸೋಮಧರನ ಹಿಡಿತಪ್ಪೆನು ಬಸವಾ ನಿಮ್ಮ ಕೃಪೆಯಿಂದ. ನಾಮದಲ್ಲಿ ಹೆಂಗುಸೆಂಬ ಹೆಸರಾದರೇನು? ಭಾವಿಸಲು ಗಂಡು ರೂಪು. ಬಸವಾ ನಿಮ್ಮ ದಯದಿಂದ ಅತಿ ಕಾಮಿ ಚನ್ನಮಲ್ಲಿಕಾರ್ಜುನಯ್ಯಂಗೆ ತೊಡರಸಿಕ್ಕಿ ಎರಡು

ವರಿಯದೆ ಕೂಡಿದೆನು ಬಸವಾ ನಿಮ್ಮ ಕೃಪೆಯಿಂದ." ಇದು ಅಕ್ಕಗಳ ದಿವ್ಯ ಆತ್ಮ ತೇಜಸ್ಸನ್ನೂ ಮತ್ತು ನಾನೆಂಬುದಿಲ್ಲದ ನಿರಹಂಕಾರತ್ವ ವನ್ನೂ ತೋರಿಸುತ್ತದೆ. ವಾಚಕರೇ! ಹೀಗೆ ಇಷ್ಟು ಧೀರುತನದ ಮತ್ತು ಸಮಂಜಸವಾದ ಉತ್ತರ ಹೇಳಬೇಕಾದರೆ, ನಮ್ಮ ಶರಣರು ಧಾರ್ಮಿಕ ವಿಚಾರದಲ್ಲಿ, ಅವರಿಗಿನ್ನೆಷ್ಟು ಸ್ವಾತಂತ್ರ್ಯ ಕೊಟ್ಟಿರಬೇಕೆಂಬುದನ್ನು ನೀವೇ ಊಹಿಸಿ. ಆದ್ದರಿಂದ ನಾವು ಕೇಳುವುದು ಸಮಾಜ ಸ್ವಾತಂತ್ರ್ಯವಲ್ಲ. ಅದು ಬೇಕಾಗಿಯೂ ಇಲ್ಲ. ನಮಗೆ ಬೇಕಾದುದು ಅಕ್ಕನ ಶಿವಾನು ಭವ ಮಂಟಪದಲ್ಲಿ ಪಡೆದ ಧರ್ಮ ಸ್ವಾತಂತ್ರ್ಯ. ಅದಕ್ಕಾಗಿ ನಮ್ಮ ಜೀವನವು ಇನ್ನೂ ಮುಂದೆ ಧಾವಿಸಬೇಕು.

ಹೀಗೆ ಯಾವ ಅಸಾಧಾರಣ ಪುರುಷನಿಗೂ ಸುಲಭಸಾಧ್ಯವಲ್ಲದ ನಿಜೈಕ್ಯವನ್ನು ಮಹಾದೇವಿಯಕ್ಕಗಳು ಸುಲಭ ಸಾಧ್ಯಪಡಿಸಿಕೊಂಡರು. ಇದೇ ರೀತಿಯಲ್ಲಿಯೇ, ಲಿಂಗಮ್ಮ, ನೀಲಮ್ಮ, ನಾಗಮ್ಮ ಮೊದ ಲಾದ ಶಿವಶರಣೆಯರು ಭಕ್ತಿ, ಜ್ಞಾನ, ವೈರಾಗ್ಯಗಳಲ್ಲಿ ಪುರುಷರನ್ನು ಸಹ ಮೀರಿಸಿ ಮುಂದುವರೆದಿದ್ದಾರೆ. ಇದನ್ನೆಲ್ಲ ಅರಿತೇ ನಮ್ಮ ಶರ ಣರು ಧಾರ್ಮಿಕ ವಿಚಾರದಲ್ಲಿ ಸ್ತ್ರೀಯರಿಗೆ ಸಂಪೂರ್ಣ ಸ್ವಾತಂತ್ರ್ಯ ವನ್ನು ಕೊಟ್ಟಿದ್ದರು. ಲೋಕದಲ್ಲಿ, ಬೀಜದಲ್ಲಿ ಮರವಾಗುವ ಶಕ್ತಿ ಹೇಗಿದೆಯೋ ಹಾಗೆಯೇ ಮಾನವ ಜನ್ಮಕ್ಕೆಲ್ಲ ತಾನು ಶಿವನಾಗುವ ಶಕ್ತಿ ಇದೆಯೆಂದು ಶಾಸ್ತ್ರಗಳು ಕೂಡ ಹೇಳುತ್ತಿದ್ದರೂ, ಇತ್ತೀಚೆಗೆ ಪುರುಷರು ಹಲವು ಸ್ವಾರ್ಥಗಳ ಮೂಲಕ, ಆ ಹಕ್ಕನ್ನು ತಾವೇ ಇಟ್ಟು ಕೊಂಡು, ಸ್ತ್ರೀ ಜನ್ಮವು ಇದಕ್ಕೆ ಅನರ್ಹವಾದುದೆಂದು ಹೇಳುವಲ್ಲಿ ಯಾವದೋ ಒಂದು ಬೇರೆ ಉದ್ದೇಶವಿದ್ದಂತೆ ತೋರುತ್ತದೆ. ತಾನೇ ನಾದರೂ ಪಾಪಕಾರ್ಯವನ್ನು ಮಾಡಿ ಯಾವುದೋ ಒಂದು ವ್ಯಕ್ತಿ ಯಿಂದ ಅವಮಾನ ಅನರ್ಥಗಳನ್ನು ಪಡೆದಿದ್ದಿರಬಹುದು. ಅದಕ್ಕಾಗಿ ಇಡೀ ಸ್ತ್ರೀ ಸಮಾಜವನ್ನೇ ನಿಂದಿಸುವುದೆಂದರೆ, ಧರ್ಮದೂರರನ್ನು ಮಾಡುವುದೆಂದರೆ, ಎಂತಹ ಅನ್ಯಾಯ ? ತಾನು ಕೆಟ್ಟಾದರೆ ಜನಾಂ ಗವೇ ಕೆಟ್ಟಾಗಬಹುದು. ಹೀಗೆ ಹರಿಹಾಯುವುದು ತೀರ ಅಸಮಂಜ ಸವಾದುದು.

ಇದಕ್ಕೆಲ್ಲಾ ಸ್ತ್ರೀಯರಲ್ಲಿನ ಮನೋ ದುರ್ಬಲತೆಯೇ ಮೂಲ. ಆದುದರಿಂದ ತಾಯಿಗಳೇ! ತಂಗಿಗಳೇ! ಮತ್ತು ಸರ್ವ ಸ್ತ್ರೀ

ಸಮುದಾಯವೇ ತಮಗೆಲ್ಲ, ನಾನು ಒತ್ತಿ ಒತ್ತಿ ಹೇಳುವುದೇನೆಂದರೆ, ನಮ್ಮಲ್ಲಿ ಆತ್ಮ ಬಲವು ಸಂಪೂರ್ಣವಾಗಿ ಲೋಪವಾಗಿರುವುದರಿಂದಲೇ ಸಮಾಜದಲ್ಲಿ ನಾವು ಯಾವ ರೀತಿಯಿಂದಲೂ ತಲೆಯೆತ್ತುವಂತಿಲ್ಲ. ಇದರಿಂದಲೇ ಹಿಂದೂ ಸ್ತ್ರೀಯರ ರೋಮ ರೋಮಗಳೂ ಪರಾಧೀನತೆಯ ಶೃಂಕಲೆಯಿಂದ ಬಂಧಿಸಲ್ಪಟ್ಟಿವೆ. ಇದಕ್ಕಾಗಿ ಮನೋ ದುರ್ಬಲತೆಯೇ ಮೂಲವಾದುದರಿಂದ, ನಾವೆಲ್ಲರೂ ವೀರ ನಾರಿಯರಾಗಿ ಲೋಕದಲ್ಲಿ ಬಾಳಬೇಕು. ಅಂದರೆ ಅಕ್ಕಗಳಂತೆ ನಿರ್ವಾಣಹೊಂದಿ ಕೇವಲ ಪಾರಮಾರ್ಥಿಕವನ್ನು ಸಾಧಿಸಬೇಕೆಂದಲ್ಲ. ಆದರೆ ಸಂಸಾರದಲ್ಲಿಯೇ ಇದ್ದು ಅಕ್ಕಗಳಂತೆ, ಆಚಾರ ವಿಚಾರಾದಿಗಳಲ್ಲಿ ಶ್ರದ್ಧೆ, ಲಿಂಗಪೂಜೆಯಲ್ಲಿ ನಿಷ್ಠೆ, ಭಕ್ತಿಯಲ್ಲಿ ಉಜ್ವಲ, ಪ್ರಾಣಿದಯೆ, ಜಂಗಮದಾಸೋಹ, ಗುರುಹಿರಿಯರ ಸೇವೆ,ಇವುಗಳನ್ನು ದಿನದಿನವೂ ಬೆಳೆಸುತ್ತಾ ಹೋಗಿ, ಮನೋ ನಿಗ್ರಹ ಮಾಡಿಕೊಂಡು ಲೌಕಿಕ ಪಾರಮಾರ್ಥಿಕವನ್ನು ಸಾಧಿಸಿ, ವೀರನಾರಿಯರಾಗಿ, ಜಗತ್ತಿನಲ್ಲಿ ಬಾಳಿ, ಈ ಲೇಖನವನ್ನು ಸಾರ್ಥಕ ಗೊಳಿಸುವಿರೆಂದು, ಲೇಖಕಿಯಾದ ನಾನು ತಮ್ಮೆಲ್ಲರನ್ನೂ ಹೃತ್ಪೂರ್ವಕವಾಗಿ ಪ್ರಾರ್ಥಿಸಿ ನನ್ನೀ ಚಿಕ್ಕ ಲೇಖನವನ್ನು ಮುಗಿಸುತ್ತೇನೆ.

---

## ಪ್ರಮಥರ ಪೂಜೆ.

---

ಶಿವಲಿಂಗ ಪೂಜೆಯಿಂದ ಭಕ್ತಿದೊರಕೊಂಬುದು; ಮುಕ್ತಿದೊರಕೊಂಬುದು. ' ಶಿವಲಿಂಗಪೂಜೆಗೆ ಸರಿಯೊಂದಿಲ್ಲ ' ವೆಂದು ಪುರಾತನರು ಶಿವಲಿಂಗಪೂಜೆಯ ಮಾಡಿ ಶಿವನೊಳಗಾದರು. ಇದನರಿತು ಮತ್ತೇಕೆ ಮರೆವಿರಿ ಮರುಳ ಮಾನವರುಗಳಿರಾ ! ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರನ ಪೂಜೆಯ ಮಾಡಿರಣ್ಣಾ !

ಲಿಂಗಪೂಜೆಯಿಂದ ಭಕ್ತಿ<br>
ಲಿಂಗಪೂಜೆಯಿಂದ ಮುಕ್ತಿ<br>
ಲಿಂಗಪೂಜೆಗೊಂದು ಸಾಟಿಯಿಲ್ಲ ಜಗದೊಳು ॥ ೧॥

ಶಿವನ ಪೂಜೆಗೆಂದು ಸಕಲ ।
ನವನವಪ್ರಸೂನಗಳನು ।
ಜವದಲಾಯ್ದುಕೊಯ್ದು ಭಕ್ತಿಯಿಂದತರುವರು ॥೨॥
ಪುಷ್ಪಧರಿಸಿ ಬೆಳಗನೆತ್ತಿ ।
ಧೂಪವಿಕ್ಕಿ ರುಚಿಯನಿತ್ತು ।
ಪಾಪವುರುಳಿಹರುಷವೇರಿ ಮೀರಿನಲಿದರು ॥೩॥
ಪೂಜೆಮಾಡಿ ನೋಡಿ ನಲಿದು ।
ತೇಜಗೊಂಡು ಕೂಡಿ ಶಿವನ ।
ಓಜೆಯಿಂದಲಾಡಿ ಪಾಡಿ ಹರಿಸಿ ಹರುಷದಿಂ ॥೪॥
ಶಿವನೆ, ಶಿವನೆ, ಶಿವನೆ, ಎನುತ ।
ಭವನೆ, ಭರ್ಗ, ಭೀಮನೆನುತ ।
ಶಿವನ ಸವಿಯ ನಾಮದಿಂದ ಹಿಗ್ಗಿಹೆಚ್ಚಿದರ್ ॥೫॥
ಇಂದುಶೇಖರಂಗೆ ನಮಿಸಿ ।
ತಂದೆ, ತಾಯೆ, ಬಂಧು ನೀನು ।
ಎಂದು ನೇಹದಿಂದ ನಲಿದು ನಚ್ಚಿ ನುಡಿದರು ॥೬॥
ಸೊಂಪುಸೊಗಸಿ ಲೀಲೆಯಿಂದ ।
ಕಂಪುಬೀರಿ ಯೋಗದಿಂದ ।
ತಂಪುದೋರಿ ಶಾಂತಿಯಿಂದ ಶಿವನ ಯಜಿಸಿದರ್ ॥೭॥
ಭಕ್ತಿಭಾವದಿಂದ ನಿರುತ ।
ಯುಕ್ತಕಾಯ ಕಂಗಳಿಂದ ।
ಮುಕ್ತಿಮಾರ್ಗವರಿದು ಭರದಿ ಶಿವನ ಭಜಿಸಿದರ್ ॥೮॥
ಕಾಮ ಕೋಪಗಳನು ಹುರಿದು
ಪ್ರೇಮ ಪಾಶಗಳನು ಹರಿದು ।
ಸೋಮಪೂಜೆಯಲ್ಲಿ ಬೆರೆದು ಮೃಡನ ತಣಿಸಿದರ್ ॥೯॥
ನಿತ್ಯನೇಮಯುಕ್ತರೆನಿಸಿ ।
ಸತ್ಯಮನದಧನದರೆನಿಸಿ ।
ಸ್ತುತ್ಯವಾದ ಶಿವನ ಪೂಜೆ ಸತತ ಮಾಡಿದರ್ ॥೧೦॥
ಇಂತು ಶಿವನ ಪೂಜೆ ಮಾಡಿ ।
ಕಂತು ಹರನ ಜವದಿ ಕೂಡಿ ।
ಶಾಂತಿರಸದ ಸವಿಯ ಸವಿದು ಸತತ ಸುಖಿಸಿದರ್ ॥೧೧॥

ಅರಿದಿದನ್ನು ಮತ್ತದೇಕೆ ।
ಮರೆವೆರಯ್ಯ ಮರುಳ ಜನರೆ ।
ನೆರೆ ಸ್ವತಂತ್ರ ಸಿದ್ಧಲಿಂಗ ಪೂಜೆ ಮಾಡಿರೈ ॥೧೨॥
**ಶ್ರೀ ಚಂದ್ರಶೇಖರ ದೇವರು ಆಡ್ನೂರ.**

---

# ರಾಘವಾಂಕನ ಪಾತ್ರಸೃಷ್ಟಿ.

**(ವೇ. ಎಂ. ಶರಭಯ್ಯಾ ಕನ್ನಡ ಪಂಡಿತ ಬೋರ್ಡ ಹೈಸ್ಕೂಲ
ಮು. ಎಮ್ಮಿಗನೂರು ತಾ. ಬಳ್ಳಾರಿ)**

(ಹಿಂದಿನಿಂದ ಮುಂದೆ ಸಾಗಿದ್ದು)

**ವಿಶ್ವಾಮಿತ್ರ**— ಮಹಾಋಷಿ, ಬ್ರಹ್ಮಋಷಿ. ವಸಿಷ್ಠನ ಮೇಲಣ ದ್ವೇಷ ಬುದ್ಧಿಯಿಂದ ಹರಿಶ್ಚಂದ್ರನಿಗೆ ಅನಿಮಿತ್ತ ವೈರಿಯಾಗಿ ಸತ್ಯಭಕ್ತನಾದ ಅರಸನನ್ನು ಕಷ್ಟಕ್ಕಿಡಲು ಪರಿಪರಿಯಾದ ಕುಟಿಲ ತಂತ್ರಗಳನ್ನು ಹೂಡುವನು. ಈ ಚಂಡ ಕರ್ಮದಿಂದ ಬ್ರಹ್ಮಋಷಿ ಪದವಿಯಿಂದ ಕ್ರೂರ ಮಾನವ ಪದವಿಗೆ ಇಳಿಯುವನು. ಧೀರೋದಾತ್ತನಾದವನು ಅಸೂಯ ಅಸಹನೆಗಳಿಂದ, ಚಂಡ ವೃತ್ತಿಯಿಂದ, ಆತ್ಮಶ್ಲಾಘಾಪರತ್ವದಿಂದ, ಮಂತ್ರಾದಿ ಬಲಗಳ ಮೋಸಗಳಿಂದ, ಸುಲಭ ಕ್ರೋಧಾದಿ ಗುಣ ಸಮುದಾಯಗಳಿಂದ ಧೀರೋದ್ಧತನಾಗುವನು. ಈ ಕಾವ್ಯದಲ್ಲಿ ಕವಿಯು ರುದ್ರನಾಯಕನ ಚಿತ್ರವನ್ನು ಭಾಷೆಯಿಂದ, ವೃತ್ತಿಯಿಂದ ಉನ್ನತಿಯ ತುದಿಗೇರುವಂತೆ ಚಿತ್ರಿಸಿದ್ದಾನೆ.

ಇಂದ್ರನು "ಇಕ್ಷ್ವಾಕು ವಂಶದಲ್ಲಿ ಸತ್ಯವಂತರಾರೆಂದು ವಸಿಷ್ಠರನ್ನು ಕೇಳುವನು. "ಹರಿಶ್ಚಂದ್ರನು ಮಹಾ ಸತ್ಯಶಾಲಿಯೆಂದು" ಋಷಿಯ ಉತ್ತರ. ಅಲ್ಲೇಯಿದ್ದ ವಿಶ್ವಾಮಿತ್ರನು 'ತೀವಿದೊಡ್ಡೋಲಗದ ನಡುವೆ ತನ್ನಂ ಮೊದಲೊ। ಳೋವಿ ನುಡಿಸದ ಕೋಪವೊಂದಾ ವಸಿಷ್ಠಮುನಿ। ಯಾವುದಂ ಪೇಳ್ದದನಲ್ಲೆಂಬ ಭಾಷೆಯೊರಡಖಿಳ ಜೀವಾವಳಿಯುಲಿ॥

ಭಾವಿಪಡೆ ಕುಂದನಲ್ಲದೆ ಲೇಸ ಕಾಣದಿಹ। ಭಾವ ಮುಪ್ಪುರಿಗೊಂಡು ಕುಡಿವರಿದು ಕಡುಗೋಪ। ಪಾವರಿಸಿ ಕೌಸಿಕಂ ನಿಂದು ನಿಲ್ ನುಡಿಯಬೇಡೆಂದು ಜರೆದಿಂತೆಂದನು।

ಮತ್ತು

'ಬೇಸರವೆ ಕೇಳ್ವ ದೇವೇಂದ್ರನುಂಟೆಂದು ಅಕಟಕಟ ಇಂತು ಬೇಸರದೆ ಸೊರಹುವರೆ ವಾಸಿಷ್ಠ' 'ರಾಶಿ ಹೊನ್ನುಂಟು ಅಧಿಕನಹನ್' 'ಸತ್ಯಲೇಶವಂತವನಾಳ್ವ ದೇಶದೊಳ್ ಕೇಳ್ದರಿಯೆ' 'ಆನಿನ್ನ ಹರಿಶ್ಚಂದ್ರನು ವರುಣನಿಗೆ ಮಗನನ್ನು ಬಲಿಕೊಡುವುದಾಗಿ ಮಾತು ಕೊಟ್ಟು ತಪ್ಪಿ ಶುನಸ್ಸೇಫನನ್ನು ತಂದು ನರಮೇಧಯಾಗ ಮಾಡಿದ ಕೊಟ್ಟ ಮಾತಿಗೆ ತಪ್ಪಿದ ಭ್ರಷ್ಟ'ಎಂದು **ಅಸೂಯೆ ಅಸಹನೆಗಳ ಚಂಡವೃತ್ತಿಯಿಂದ** ಹರಿಶ್ಚಂದ್ರ ವಶಿಷ್ಠರನ್ನು ಕೊರಚಾಡುವನು.

ವಸಿಷ್ಠನ ಪ್ರತಿ ಮಾತುಗಳಿಗೆ ವಿಶ್ವಾಮಿತ್ರನು ಮನದೊಳತಿ ಮುಳಿದು– "ನಿಲ್ಲು ಆಡದಿರು ಬಾಯಿ ಹರಿದುದೆಂದು" 'ವನಧಿ ಪರಿಯಂತ ಧರೆಗರಸುತ. ಅದರೊಳಂ ಧನವುಳ್ಳ ಶಿಷ್ಯನಾಗಿಹನು. ನಿನ್ನ ಗತಿ ವಿಪುಳ ಧನವಾರಾಧಿಸುವಂತವನ್. ಅಂತಲ್ಲದಾತ ನಾರಯ್ಯೆಯೊಳಗಿರ್ಪೆ. ನೀನೆ ಎನಿತಾಗಲಿಸಿ ಬಣ್ಣಿಸಲ್ ಒಪ್ಪದಯ್ಯ' ಮುನಿಯ ಬೇಡ! ಆತ ಹುಸಿವನಾದಡೆ ನಿನ್ನನೇಗೆಯ್ಯಬಹುದು' ಎನ್ನುವನು.

ವಿಶ್ವಾಮಿತ್ರನ ಆತ್ಮ ಶ್ಲಾಘನೆ––ಸಿಡಿಲು ಹೊಡೆವಡೆ ಹಿಡಿದ ಕೊಡೆ ಕಾವುದೇ ಮುನಿದು। ಪೊಡವಿ ಸುಂಗುವೊಡೆ ಮನೆ ತಾಂಗುವುದೆ ಕವಿದುಹೆ। ಗ್ಗಡಲುಕ್ಕಿ ಜಗವ ಮೊಗೆವಡೆ ಮೆಳೆಗಳಡ್ಡ ಬಹವೇ ಹೇಳು ಮುನಿಪ ನಿನ್ನ॥ ಬಡಬೋಧೆ ಗೀಧೆಗಳು ರಕ್ಷಿಸುವುವಲ್ಲನಾಂ। ಕಡುಮುಳಿದ ಬಳಿಕಲೇಗುವವು ನೀಹೇಳದಿ। ರ್ದಡೆ ಮದನ ಹರನಾಣೆ ಹೋಗೆಂದು ಕೌಶಿಕಂ ಜರೆದನು ವಸಿಷ್ಠಮುನಿಯ॥" ಪ್ರಕುತಿಯು ಭೀಕರವಾಗಿ ಧಾವಿಸಿವರೆ ಆದರ ಮುಂದೆ ಕೃತ್ರಿಮ ದಾಟವೇ? ನಾನು ಪ್ರಕುತಿಯಂತೆ ಉತ್ಕೃಷ್ಟ, ನಿನ್ನ ಬೋಧೆಗಳು ಕೃತ್ರಿಮದಂತೆ ನಿಕೃಷ್ಟವೆಂದು ವಿಶ್ವಾಮಿತ್ರನ ಅಹಂಕಾರದ ಧ್ವನಿ. (ಪದ್ಯವಾದರೂ ಸಂದರ್ಭೋಚಿತವಾದ ಶಬ್ದ ಜಾಲಗಳಿಂದ ಸುಂದರವಾಗಿ ಹೆಣೆಯಲ್ಪಟ್ಟಿದೆ.) ಕೌಶಿಕನು ಅರಸನನ್ನು ಸತ್ಯಭ್ರಷ್ಟನನ್ನಾಗಿ ಮಾಡಲು ಮೋಸ ಮಾಯೆಗಳಿಗೆ ಕೈ ನೀಡುವನು. ಆತನಿಂದ ಪ್ರೇರಿತರಾದ ಋಷಿಗಳು ಹರಿಶ್ಚಂದ್ರನಲ್ಲಿಗೆ ಬಂದು ಸುವರ್ಣಯಾಗ ಮಾಡಿಸುತ್ತಿರುವರು. ವಿಶ್ವಾಮಿತ್ರನು ಯಜ್ಞಕ್ಕೆ ಬಹು ಧನದ ರಾಶಿಯನೀಯಿಸಿಕೊಂಡು ಅದನ್ನು ಅರಸನ ಭಂಡಾರದಲ್ಲಿಟ್ಟು ಹೋಗುವನು. ತನ್ನ ಮನಸ್ಸಿನಲ್ಲಿ ತಾನಿರುವ ಆಶ್ರಮಕ್ಕೆ ಬರಮಾಡಿಕೊಂಡು

ಅರಸನ ಸತ್ಯದ ಬಲುಹ ನೋಡಬೇಕೆಂಬ ಕುಹಕೋಪಾಯವನ್ನು ನೆನೆದು ತನ್ನನ್ನು ತಾನೇ ಮೆಚ್ಚಿ ತಲೆದೂಗುವನು.

ಆ ಕುಟಿಲೋಪಾಯ ಈ ಐಂದ್ರಜಾಲದ ನಾಟಕ.

... ... ... ... ... ...

.., ... ... ... ಕಣ್ಮುಚ್ಚುತಂ
ಮನದೊಳುತ್ಪತ್ತಿ ಮಂತ್ರವ ಮಂತ್ರಿಸಿದ ಜಲವನೊಸೆದು ದೆಸೆ ದೆಸೆಗೆ ತಳಿದು ।
ವಿನಯದಿಂ ನೋಡ ನೋಡಲು ದಿಕ್ಕು ಧರಣಿತೆ ।
ಕ್ಕನೆತೀವಿ ನಿಂದ ನಾನಾ ಪಕ್ಷಿ ಮೃಗಕುಲಕೆ
ಕೊನೆವೆರಳನಲುಗಿ ತಲೆದೂಗಿ ಕೈವೀಸಿದಂ ದೇಶಮಂ ಗೊಳಿಡಿಸಲು।

ಇನ್ನು ಕೇಳಬೇಕಾದುದೇನು? ಹರಿಶ್ಚಂದ್ರನ ರಾಜ್ಯದಲ್ಲಿ ಎಲ್ಲಿ ನೋಡಿ ದರೂ ಖಗಮೃಗಗಳ ಹಾವಳಿಯೋ ಹಾವಳಿ.

ವಿಶ್ವಾಮಿತ್ರನು ಹರಿಶ್ಚಂದ್ರನ ಹೊಡತದಿಂದ ನೊಂದ ತನ್ನ ಘೋರ ಮಾಯಾ ಭೀಕರ ವರಾಹನನ್ನು ನೋಡಿ—'ಹಂದಿಯಂ ಕಾಣುಹ ತಡಂ ಕೋಪಗಿಚ್ಚು ಭುಗಿ । ಲೆಂದು ಜಪ ಜಾರಿ ತಪತಗ್ಗಿ ಮತಿಗತ ವಾಗಿ ಸಂವ ಯೋಗಂ ಹಿಂಗಿ ದಯೆದಾಂಟಿ ನೀತಿ ಬೀತಾನಂದವಱತು ಹೋಗಿ ॥ ಹಿಂದೆ ನೆನೆದುರಿದೆದ್ದು ಸಿಕ್ಕಿಪನಲಾ ಭೂಪನಿಂದು ನಾನಾಯ್ತು ತಾನಾಯ್ತು ... ... ... ಎಂದು ಹೂಂಕಾರ ಮಾಡಲು ಯತಿಗೆ ಹೊಲೆಯಾದ ಕೋಪದಿಂದ ಹೊಲತಿಯರು ಜನ್ಮ ತಾಳುವರು. ದುರ್ಮಂತ್ರ ಬಲವಂತನು ಅವರಿಗೆ 'ಜನಪತಿ ಹರಿಶ್ಚಂದ್ರ ಬಂದು ನಮ್ಮಯ ತಪೋವನದೊಳೈದನೆ? ನೀವು ಸರ್ವ ಬುದ್ಧಿ ಗಳೊಳಾತನ ಮರುಳು ಮಾಡುತಿರಿ ಹೋಗಿ ಎಂದು ಅಪ್ಪಣೆ ಕೊಡುವನು.

ಗಾಣತಿಯರು ರಾಜನಿಂದ ಒದಿಸಿಕೊಂಡು ವಿಶ್ವಾಮಿತ್ರನಲ್ಲಿಗೆ ಬಂದು ಗೋಳಿಡುವರು. ಆಗ ವಿಶ್ವಾಮಿತ್ರನು—'ವಡಬಾಗ್ನಿ ಜಡೆ ವೆತ್ತುದೋ ಸಿಡಿಲು ಹೊಸ ಭಸಿತ । ಎಡಕಲಿತುದೋ ಕಾಡಕಿಚ್ಚು ಕೃಷ್ಣಾಜಿನವ । ನುಡಕಲಿತುದೋ ಪ್ರಳಯವಹ್ನಿ ತಪ ಮಿರ್ದುದೋ ಭಾಳಲೋಚನಕೋಪ ॥ ಕಡುಗಿ ಮುನೆಯಾಯ್ತೋ! ಹೇಳೆನೆ ಕಣ್ಣಕಡೆ ತೋರ । ಗಿಡಿಗೆದರೆ ಮೀಸೆಗೂದಲು ಹೊತ್ತಿ ಹೊಗೆಯೆ ಬಿಱು । ನುಡಿ ಗಳುರಿಯುಗುಳೆ ವಿಶ್ವಾಮಿತ್ರನುರವಣಿಸಿ ಬಂದನವನೀಶನೆಡೆಗೆ" (ಎಂತಹ

ಭೀಷಣ ದೃಶ್ಯ? ಶಬ್ದಗಳಿಂದಲೇ ರುದ್ರಮೂರ್ತಿಯ ಉಗ್ರ ರೂಪವನ್ನು ವಾಚಕರ ಮನಸ್ಸಿನ ಮೇಲೆ ಸ್ಥಾಯಿಯಾಗಿ ನಿಲ್ಲುವಂತೆ ಕೊರೆದ ಕವಿಯ ಚಾತುರ್ಯ ಸ್ತುತ್ಯವಾದುದು.) ಎಲೋ ಹರಿಶ್ಚಂದ್ರ ! ಪಂಚ ಭೂತಗಳು ಸೂರ್ಯ ಚಂದ್ರಾದಿಗಳು ನನ್ನ ಭಯದಿಂದ ಗಡಗಡನೆ ನಡುಗಿ ಮೇರೆ ಮೀರದಂತೆ ನಡೆಯುತ್ತಾರೆ . ಇಂದ್ರನು ಕೂಡ ಅತಿ ಅನಾವೃಷ್ಟಿಯಿಲ್ಲದೆ ಮಳೆ ಸುರಿಸುವನು. ನೀನು ಸೊಕ್ಕಿನಿಂದ ವನ ಪ್ರವೇಶ ಮಾಡಿ ಅದನ್ನು ಕೆಡಿಸಿ, ಖಗಮೃಗಗಳನ್ನು ನಾಶಮಾಡಿದೆಯೆನ್ನುತ್ತ ವಿಶ್ವಾಮಿತ್ರನು ಕರಾಳನಾಗುವನು. ಸಜ್ಜನರಲ್ಲಿ ಇಲ್ಲದುದನ್ನಾರೋಪಿಸಿ ಪೀಡಿಸುವುದು ದುಷ್ಟರ ನೈಸರ್ಗಿಕ ಸ್ವಭಾವ. ದುಷ್ಟರಲ್ಲಿ ಇಲ್ಲದ ಡಂಭ, ಜಂಭ, ಅಹಂಕಾರಗಳು ನೆಲೆನಿಂತಿರುವವೆಂಬುದಕ್ಕೆ ವಿಶ್ವಾಮಿತ್ರನೇ ಸಾಕ್ಷಿ. ದರ್ಪ ಭೂಯಿಷ್ಟವಾದ ವಿಶ್ವಾಮಿತ್ರನ ಆಡಂಬರದ, ಭೀಮ ಪರಾಕ್ರಮದ, ತಪಶ್ಶಕ್ತಿಯ, ಮಾತುಗಾರಿಕೆಯ ಕಠೋರತೆ ನೋಡಿರಿ.—

‘ ಹಿಂದೆ ಸಂಪದದೊಳುರೆಗರ್ವದಿಂ ಮೆರೆದ ಸಂಕ್ರಂದನ ಸಿರಿಯ ನೀರೊಳಗೆ ನೆರಹಿದ ಮುನಿಪನಂದವಂ ಮಾಡುವೆನು ’ ‘ ಹರನ ಹಣೆಗಣ್ಣ ಹಗ್ಗಿಯನು ಹಗೆಗೊಂಬಂದದಿಂ ಇಂದೆನ್ನ ಹಗೆಗೊಂಡೆ ’ ‘ ಬಿಟ್ಟೆ ಬೀಡೆಲ್ಲಮಂ ಕೊಂದು ಕೂಗಿಡಿಸಿ ನೆರೆಸುಟ್ಟು ಬೊಟ್ಟಿಡುವೆನ್ ಆರೆಂದಿರ್ದೆ. ’ ‘ ನಿನ್ನ ಗುರು ಹೇಳನೇ ತನ್ನ ಸುತರಳಲತಿಣ್ಣವನು’ ‘ ಎನ್ನ ಬಸುರಿಂ ಮೂಡಿರ್ದ ಕನ್ನೆಯರ ಚನ್ನೆಯರನಬಲೆಯರ ಗಾಣಗಾತಿಯರಂ ಆರಿದರಿದಿಂತು ಸಾಯಸದೆ ಬಡಿವರೆ ? ’ ‘ ಅವದಿರಂ ಹೊಡೆದ ಕೈಗಳಂ ಕಡಿವೆ. ’ ‘ ನಿನ್ನಂ ನಚ್ಚಿ ಮಲೆತ ದೇಶವನುರುಹಿ ಸುಡುವೆನ್ ’ ‘ ಆ ದೇಶಕ್ಕೆ ಹಿತವಾಗಿ ಬಂದ ಮುನಿಯುಂ ಮುರಿವೆನ್ ’ ‘ ಮುನಿಯನು ಹಿಡಿದು ಕದನಕ್ಕೆ ಬಂದಮರರಂ ಕೆಡಹಿ ಹುಡುಕು ನೀರಪ್ಪುವೆನ್ ’ ‘ ಎನ್ನಳವನರಿಯಾ ’ ‘ಎಲವೋ ನಿನ್ನ ಕೋಡು ಕೊರೆಯದೆ ಬರಿದೆ ಬಿಟ್ಟಪೆನೆ ? ’ ಎನ್ನುತ್ತ ಕೆರಳುವನು. ಹರಿಶ್ಚಂದ್ರನು ಬೇಡಿಕೊಳ್ಳಲು ‘ಎನ್ನ ಕುಮಾರಿಯರ ಮದುವೆಯಾಗು. ಎಲ್ಲಾ ನಿರೋಧಮಂ ಬಿಡುವೆನ್ ’ ಎನ್ನುವನು. ಚಕ್ರವರ್ತಿಯು ಋಷಿಯ ಕಾಟಕ್ಕೆ ತಾಳದೆ ರಾಜ್ಯವನ್ನೇ ಬಿಟ್ಟು ಕೊಡುವನು. ಮತ್ತು ಮರಳಿ ಕಾಟಕ್ಕಾರಂಭ. “ ನನ್ನ ದಕ್ಷಿಣೆ ದ್ರವ್ಯ ಕೊಡು. ” “ ನನ್ನ ರಾಜ್ಯದಲ್ಲಿರ

ಬೇಡ" ವೆಂದು. ರಾಜನು ತನ್ನ ನಿಷ್ಠೆ ಬಿಡದಿರಲು--ಚಿಂತೆಗೊಳಗಾಗುವನು. ಚಡಪಡಿಸುವನು. ಮೂಗಿನ ಮೇಲೆ ಬೆರಳಿಟ್ಟು ತಲೆಯನೊರೆವನು. ತಲೆ ಕ-ಟ್ಟಿಕೊಳ್ಳುವನು. ತಪಸ್ಸಿನ ಅರ್ಧಭಾಗ ಹೋಗುವದು. ವಸಿಷ್ಠನಿಗೆ ಗೆಲುವಾಗುವದು. ದೇವಲೋಕದ ಮನ್ನಣೆ ನನ್ನಿಂದ ದೂರ ಸಾರುವುದೆಂದು ತಳಮಳಗೊಳ್ಳುವನು. "ಇವನನ್ನು ಇಲ್ಲಿಗೇ ಬಿಡುವನೇ" ಎಂದು ಉತ್ಸಾಹಗೊಳ್ಳುವನು. ನಿನ್ನ ರಾಜ್ಯ ಸಂಪತ್ತಿಯನ್ನೊಪ್ಪಿಸು ಬಾರೆಂದು ಅರಸನನ್ನು ಪಟ್ಟಣಕ್ಕೆ ಕರೆತಂದು ಸಮಸ್ತ ರಾಜ್ಯ ಸಂಪತ್ತಿಯನ್ನು ಒಂದೊಂದಾಗಿ ವಿವರಿಸಿ ಅರಸನಿಗೆ ಲೋಭವುಂಟುಮಾಡಲಿಚ್ಛಿಸುವನು. ಅವನು ಸತ್ಯಚ್ಯುತನಾಗದಿರಲು ಮುನಿಯ ಮೋಸ ಮಾಯೆಗಳೆಲ್ಲಾ ಮಾಯವಾಗಿಯೇ ಹೋಗುವವು.

ತೆಱಕಾರನಾದ ನಕ್ಷತ್ರಕನಿಗೆ ಕೌಶಿಕನು ಬೋಧಿಸುವ ನೀತಿ ಹೇಗಿದೆಯೋ ನೋಡುವ--

"ಕೊಡುವೊಡವೆ ಬರಲಿ ಬಾರದೆ ಕೆಡಲಿ ಕಾನನದ। ನಡುವೆತ ಗಹನಲಿರಿಸಿ ಕೆಲವು ದಿನವುಪವಾಸ। ಬಡಿಸಿದುರ್ ಕೆಲವು ದಿನ ದೇಹವನುವಲ್ಲೆಂದು ನೆವವೊಡ್ಡಿ ಕೆಲವು ದಿವಸ॥ ನಡೆವಾಗ ದಾರಿ ತಪ್ಪಿಸಿ ತಿರಿಪಿ ಕೆಲವು ದಿನ। ಪಡಿಯುಬೀಯಕ್ಕಾಣೆಯಿಟ್ಟಂತು ಕೆಲವು ದಿನ। ಕೆಡಿಸಿ ನುಡಿದವಧಿಯಾಯ್ತೆಂದು ಧರೆಯುರಿಯೆ ನೃಪನಂ ಹುಸಿಕನೆನಿಸೆಂದನು"॥ ಮತ್ತು "ಕರುಣಿಸದಿರನುಗೊಡದಿರಗಲದಿರು ಅನುಸರಿಸ। ದಿರು ಬಟ್ಟೆಯೂರಲೆಡೆಗೆಯ್ಯದಿರು ಕಡೆಗಾವ। ಪರಿಯೊಳಾವಾವನಿಗ್ರಹ ನಿರೋಧಾಯಾಸವಡಸುವಂದದಿ ಮಾಳ್ಪುದು॥ ಗುರುಭಕ್ತನಾದಡತಿ ಬುದ್ಧಿಯುಳ್ಳವನಾದ। ಡರಸನಂ ಕೆಡಿಸಿಹುಸಿತೋರ್ + (ಎಂದಡೆ)

ನ--ಎನಗವಂ ಕರಗುವನೆ ದೇವ (ಎನೆ)

ನಿ--ನೇಮಕ್ಕೆ ನೀನಿರ್. ಆನ್ ಬಂದು ಕಾಡುವೆನ್ + (ಎಂದನು)

ಹೇಗಿದೆ, ಕುಟಿಲೋಪದೇಶ-- ಮಹೇಂದ್ರಜಾಲದ ಚರಮಸೀಮೆ--

"ಬಿಸಿಲಾಗಿ, ಬಿರುಗಾಳಿಯಾಗಿ, ಕಲುಸೆಲನಾಗಿ, ವಿಷವಾಗ್ನಿಯಾಗಿ ನಾನಾ ಕ್ರೂರ ಮೃಗವಾಗಿಮಸಗಿ? ಘೋರಾರಣ್ಯವಾಗಿ ಕವಿವ ಭೂತ ಭೇತಾಳರಾಗಿ ಗರ್ಜಿಸಿ" "ಹಸಿವು ನೀರಡಿಕೆ ನಿದ್ರಾಲಸ್ಯವಾಗಿ ಸಂದಿಸಿ" ಹೊಕ್ಕಲ್ಲಿ ಹೊಕ್ಕು ಮುನಿಯು ಅರಸನನ್ನು ಕಷ್ಟ ಪಡಿಸುವನು. ಅರಸನು ಈ ಎಲ್ಲ ಕುತ್ತಗಳಿಂದ ನಿವಾರಕನಾಗಿ ಕಾಶಿಯನ್ನು ಸೇರುವನು. ವಿಶ್ವಾಮಿತ್ರನಿಂದ ಪ್ರೇರಿತರಾದ ಅಗ್ನಿ-ಯಮರು, ವಿಪ್ರ

ಚಾಂಡಾಲ ವೇಷಧಾರಿಗಳಾಗಿ ಮಾರಿಕೊಳ್ಳುವ ಅರಸನ ಸತಿ ಪುತ್ರರನ್ನೂ—ಅರಸನನ್ನೂ ಕೊಂಡು ಕೊಳ್ಳುವರು. ಅವರು ಕೊಡುವ ಕೋಟಲೆಗೆ ಮಿತಿಯಿಲ್ಲ ಮೇರೆಯಿಲ್ಲ.

ಮುನಿಯು ಮೋಸ ಮಾಯೆಗಳ ಬಲೆಬೀಸಿ ಅರಸು ಸಿಂಹವನ್ನು ಕೆಡಹಲು ನೋಡುವನು. ಕುಟಿಲ ಮಾಯೆಗಳನ್ನು ಹೂಡಿ ನನ್ನ ಉದ್ದೇಶವು ನೆರವೇರುವುದೆಂಬ ಭರವಶದಲ್ಲಿ ಚಲ್ಲಾಟವಾಡುತ್ತಿರುವಾಗ ಅರಸನು ದೃಢಮನಸ್ಸಿನವನಾಗಿ ಮಾಯೆಯಿಂದ ನಿವೃತ್ತನಾಗಲು ಸಖೇದಾಶ್ಚರ್ಯದಿಂದ ಸ್ವಲ್ಪಕಾಲ ಸುಮ್ಮನಿದ್ದು ಕೂಡಲೇ ಮತ್ತೊಂದು ರೀತಿಯಿಂದ ವಿಜೃಂಭಿಸಿ ಮೇಲೆ ಬೀಳುವನು. ಉಪಾಯವು ಕುದುರದೆ ಕೆಳಗುರುಳುವನು. ಒಂದು ಬಗೆಯಿಂದ ರಾಘವಾಂಕನು ಅತಿ ಚಮತ್ಕಾರವಾದ ಜಟ್ಟಿಕಾಳಗವನ್ನೇ ತನ್ನ ಗ್ರಂಥದಲ್ಲಿ ಚಿತ್ರಿಸಿದ್ದಾನೆನ್ನುವಂತೆ ಕಾಣುತ್ತದೆ.

ಲೋಹಿತಾಶ್ವನಿಗೆ ಮರಣವನ್ನುಂಟುಮಾಡಿ ಅರಸ ಅರಸಿಯರ ಹೃದಯವನ್ನು ಚುಚ್ಚುವನು. ಅವರದರಿಂದ ಪರಿತಪಿತರಾಗುವರು. ಆ ದುಃಖಕ್ಕೆ ಕಡೆಯೇ ಇಲ್ಲದಂತಿರಲು, ರಾಜನು ಮಿಂಚಿನ ವೇಗದಿಂದ ತನ್ನ ಕರ್ತವ್ಯದ ಕಡೆಗೆ ಹಾರುವನು. ದುಡ್ಡು ತರಲು ಚಂದ್ರಮತಿಯು ಒಡೆಯನ ಮನೆಗೆ ತೆರಳುತ್ತಿರಲು ಋಷಿ, ತನ್ನ ಮಾಯಾಶಕ್ತಿಯಿಂದ ಕಾಶೀ ರಾಜಪುತ್ರನನ್ನು ಚೋರರಿಂದ ಕೊಲ್ಲಿಸಿ ಯಾವ ಪಾಪವನ್ನರಿಯದ ಚಂದ್ರಮತಿಯ ಉಡಿಲಲ್ಲಿ ಪುತ್ರಹತ್ಯಾ ( ಕಾಶೀ ರಾಜಪುತ್ರ ಹತ್ಯಾ ) ದೋಷವನ್ನು ಕಟ್ಟುವನು. ಇವಳ ತಲೆ ಹೊಡೆಸುವುದಾಗಿ ರಾಜನ ಅಪ್ಪಣೆ. ಭಟರು ವಧಸ್ಥಾನಕ್ಕೆ ದೇವಿಯನ್ನು ತರುವರು. ಈ ಕಾರ್ಯ ಹರಿಶ್ಚಂದ್ರನ ಪಾಲಿಗೆ ಬೀಳುವುದು. ಅವನು ಅದಕ್ಕೆ ಸಿದ್ಧನಾಗೇ ನಿಂತ. "ನನ್ನ ಪುತ್ರಿಯರನ್ನು ವಿವಾಹವಾಗು ನಿನಗೆ ಮಂಗಳವನುಂಟುಮಾಡುವೆನೆ" ಂಬ ಸೊಲ್ಲು ಋಷಿ ಬಾಯಿಯಿಂದ ದೂರಾಗಲಿಲ್ಲ. ದೂರಾದರೇನು ದೂರಾಗದಿದ್ದರೇನು. ಕೌಶಿಕನು ಸೋತನು. ತನ್ನ ತಪಸ್ಸಿನ ಅರ್ಧ ಫಲವನ್ನು ಕಳಕೊಂಡನು- ಸತ್ಯದ ಮುಂದೆ ಮಿಥ್ಯದ ಹೆಮ್ಮೆಯೆ ?

ವಸಿಷ್ಠ— ಬ್ರಹ್ಮಋಷಿ. ಬ್ರಹ್ಮಋಷಿಗೆ ತಕ್ಕ ಗುಣಸಂಪತ್ತಿಗೆ ವಸಿಷ್ಠನ ಚಾರಿತ್ರ್ಯವೇ ಉದಾಹರಣೆಯಾಗಿದೆ, ಎಂದರೆ ಅತ್ಯುಕ್ತಿಯಲ್ಲ.

ವಸಿಷ್ಠನಿಗೆ ಕಾವ್ಯರಂಗದಲ್ಲಿ ಸ್ಥಳ ಸ್ವಲ್ಪ. ಅಷ್ಟರಲ್ಲೇ ಅವನ ಗುರುತ್ವಕ್ಕೆ ತಕ್ಕ ಸ್ಥಾನವು ನಿರ್ಮಿಸಲ್ಪಟ್ಟಿದೆ. ಅದು ಬಹು ಮನೋಜ್ಞವಾಗಿದೆ. ರಾಘವಾಂಕನ ವಸಿಷ್ಠನು ಒಂದು ಬಗೆಯ ಧೀರ, ಶಾಂತ ಪ್ರಕೃತಿಗೆ ಯೋಗ್ಯವಾಗುವ ಶ್ರಮಪ್ರಧಾನ ಪುರುಷ. ಪ್ರಸನ್ನಾತ್ಮ, ಕ್ಲೇಶಸಹಿಷ್ಣು, ದ್ವಿಜೋತ್ತಮ.

ವಿಶ್ವಾಮಿತ್ರನು ಇಂದ್ರಸಭೆಯಲ್ಲಿ ಕಠೋರ ವಾಕ್ಯಗಳನ್ನಾಡಿದರೆ ವಸಿಷ್ಠನು 'ನಾ ಸೊರಹಿಪಾತನೆ' 'ಅವನಧಿಕನಲ್ಲವೆ' 'ಹೊನ್ನಮಾತೀ ಸಭೆಯೊಳೇಕೆ, ಸತ್ಯನೆ ಹೇಳ್' ಎನ್ನುವನು. ಬ್ರಹ್ಮತೇಜಸ್ಸಿನಲ್ಲಿ ತಪಸ್ಸಿನಲ್ಲಿ ಕಡಿಮೆಯಿಲ್ಲದವನಾದರೂ ಕೌಶಿಕನ ಬಿರುಮಾತಿನಿಂದಾದ ಮನಃಕ್ಲೇಶವನ್ನು ದೂರತಳ್ಳಿ ಧೀರತನದಿಂದ ಶಾಂತರೀತಿಯಿಂದ ಉತ್ತರಕೊಡುವನು. ವಸಿಷ್ಠನ ಮಾತುಗಳು ತಂಪಿಡಿದು ಬೀಸುವ ಮನೋಜ್ಞ ಮಾರುತನಂತೆ. ಮೇಘದಬ್ಬರದಿಂದ ಸಿಡಿಲು ಮಿಂಚುಗಳಿಂದ ಕೂಡಿ ಬೀಸುವ ಬಿರುಗಾಳಿಯಂತೆ ಕೌಶಿಕನ ಮಾತುಗಳು.

ವಾದವು ಅಧಿಕವಾಗಲು— "ಶ್ರುತಿಮತಕುಲಾಚಾರ ಧರ್ಮಮಾರ್ಗಂ ಮಹಾ। ವ್ರತವನುಷ್ಠಾನ ಗುರುವಾಜ್ಞೆ ಲಿಂಗಾರ್ಚನೋ। ನ್ನತತಪಂ ಬ್ರಹ್ಮಂ ಕರ್ಮಂ ಬೆಳೆದ ಪುಣ್ಯವೊಳಗಾದವಂ ತೊಱೆದು ಕಳೆದು॥ ಸತಿಯನುಳಿದ ದಿಗಂಬರನಾಗಿ ಮುಕ್ತಕೇ। ಶಿತನಾಗಿ ನರಕಪಾಲದೊಳು ಸುರೆಯೆರೆದು ಕುಡಿ। ಯುತ ತೆಂಕಮುಖನಾಗಿ ಹೋಹೆಂ ಹರಿಶ್ಚಂದ್ರ ಮಱೆದು ಹುಸಿಯಂ ನುಡಿದಡೆ॥

ಇದು ವಸಿಷ್ಠನ ಪ್ರತಿಜ್ಞಾ ವಾಕ್ಯ. ಶ್ರುತಿ ಮತ, ಕುಲಾಚಾರ ಧರ್ಮಾದಿಗಳಲ್ಲಿ ಶ್ರದ್ಧೆ, ನಿಷ್ಠೆ, ಅನುರಾಗ, ಮುಂತಾದವು ವಸಿಷ್ಠನಲ್ಲಿ ಉಜ್ವಲಿಸುತ್ತವೆ. ಇಷ್ಟು ಸಾಕು ಈತನು ಪರಮಪಾವನಚರಿತನೆನ್ನುವುದಕ್ಕೆ. ವಸಿಷ್ಠ ವಿಶ್ವಾಮಿತ್ರರ ಪ್ರತಿಜ್ಞೆಗಳ ಬಹಳ ಅಂತರವಿದೆ. ನಾನು ಸೋತರೆ ತಪೋಫಲದರ್ಧವನ್ನು ಹರಿಶ್ಚಂದ್ರನಿಗೆ ಕೊಡುವೆನು. ಇಂದ್ರ ಈರೇಳ್ವಾರಿ ಹುಟ್ಟಿ ಹುಟ್ಟಿ ಬರುವ ವರಿಗೂ ಸ್ವರ್ಗಕ್ಕೆ ಹೋಗದಿರೆನೆಂದು ವಿಶ್ವಾಮಿತ್ರನ ಪ್ರತಿಜ್ಞೆ. ಈ ಜಿದ್ದಿನಲ್ಲಿ ಮಹತ್ವ ಕಡಿಮೆ. ಇಂದ್ರಲೋಕಕ್ಕೆ ಹೋದರೂ ಬಂದೀತು, ಬಿಟ್ಟರೂ ಬಂದೀತು. ಮಹಾಮಹಿಮನಾದವನಿಗೆ ಸ್ವರ್ಗದ ಹಂಗೇನು? ತಪಸ್ಸಿನಲ್ಲಿ ಅರ್ಧ ಕೊಟ್ಟರೆ ಉಳಿ

ದರ್ಥದಿಂದ ಹೋದುದನ್ನು ಸಂಪಾದಿಸಿ ತಪಸ್ಸಿನ ಫಲವನ್ನು ಅಖಂಡ ವಾಗಿ ಮಾಡಬಹುದು. ಹರಿಶ್ಚಂದ್ರನು ಹುಸಿದುದಾದರೆ ವಸಿಷ್ಠನಿಗೆ ಬ್ರಹ್ಮ ಋಷಿ ಪದವಿ ಮರಳಿ ಸಿಕ್ಕುವುದಕ್ಕವಕಾಶವೇಯಿಲ್ಲ

ರಾಜನು ಸುಳ್ಳಾಡಲು ನಿನ್ನ ಋಷಿತನವೇ ಹೋಗುವುದು. ಮೊದಲೇ ಆವನಿಗೆ ಎಚ್ಚರಿಕೆ ಕೊಡು ಎಂದು ವಿಶ್ವಾಮಿತ್ರನೆನ್ನಲು,

ವ— ತರಣಿ! ತೇಜೆಂಗೆಡದಿರು. ಅಗ್ನಿ! ಬಿಸುಪಾರದಿರು.!
ಸರಸಿರುಹವೈರಿ! ತಂಪ ಬಿಡದಿರ್.+ಎಲೆಲೆ ಮಂ।
ದರವೆ! ಚಲಿಸದಿರ್+ಎಂದು ಬೋಧಿಸಲೇಕೆ? ನಿಜವಳಿ
ವವೆ? ಸುಮ್ಮನಿರಲು॥

ವರಹರಿಶ್ಚಂದ್ರ! 'ಸತ್ಯಂಗೆಡದಿರ್'+ಎಂದು ಬೋ।
ಸರಿಸುವಂತಾಗಿ ಹುಸಿಯುಂಟೆ? ಕೊಂಡೆಯುವೆ+ಎನಗೆ।
ಹಿರಿಯುತನ ಕೆಟ್ಟು+ಇಂತು ನುಡಿಯುಲಿಹುದೆ......॥

ವಿ— ನೀ ಹೇಳದಿರ್ದಡೆ ಮದಹರನಾಣೆ

ವ— ಕುಲವ ನಾಲಿಗೆಯುರುಹಿತೆಂಬ ನಾಣ್ನುಡಿಗೆ+ಇಂದು ನೆಲೆ ಯಾಯ್ತಲಾ!— ಬ್ರಹ್ಮಋಷಿಯಾದಡೆ+ಒಳಗೆ ನಿರ್ಮಳವಿಪ್ಪುದಯ್ಯ.— ನೀ ರಾಜ ಋಷಿ— ಕೋಪಿಸದೆ, ದಟ್ಟಿಸದೆ, ಕೆಡೆನುಡಿಯದೆ – ನಿಲಲೆಂತು ಬಲ್ಲೆ.......

ವಿ— ಎನ್ನ ನೀನೀಗ ಹೆಪ್ಪಳಿಸದಾಡಿದೆ.....

ವ— ಅಹುದಹುದು. ನಿನ್ನಲಿಹ ನೆಲೆಯಾಡಿತು.

ಕಂಡದ್ದಾಡಿದರೆ ಕೆಂಡದಂತಹ ಕೋಪ.–ವಿಶ್ವಾಮಿತ್ರನಿಗೆ ಮರ್ಮೋ ದ್ಘಾಟನೆಯಾದಂತಾಗಿ ರೊಚ್ಚಿಗೇಳುವನು. ಅದಿರಲಿ. ವಸಿಷ್ಠನ ಸರಳ ಮಾತಿನ ಸರಣಿ ಉಪದೇಶಕರಿಗೆ ಒಪ್ಪುವಂತಹದು.

( ಮುಂದೆ ಸಾಗುವದು. )

# ಶಿವಾನುಭವ.

ಸಂಪಾದಕ

ರಾ॥ ಸಾ॥ ಫ. ಗು. ಹಳಕಟ್ಟಿ.

ಬಿ. ಎ. ಎಲ್. ಎಲ್. ಬಿ.

ವಿಜಾಪುರ.

೧೯೩೭.

ಸಂಪುಟ ೧೨ ) ನೊವೆಂಬರ ( ಸಂಚಿಕೆ ೨

# ವಿಷಯಾನುಕ್ರಮಣಿಕೆ.



---


ಇದನ್ನು ವಿಜಾಪುರದಲ್ಲಿ ಇದರ ಸಂಪಾದಕರಾದ ರಾ॥ ಸಾ॥ ಫ. ಗು. ಹಳಕಟ್ಟಿ ಇವರು ತಮ್ಮ "ಹಿತಚಿಂತಕ ಪ್ರಿಂಟಿಂಗ ಪ್ರೆಸ್ಸಿನಲ್ಲಿ ಮುದ್ರಿಸಿದರು. ಮತ್ತು ಅವರು ವಿಜಾಪುರದಲ್ಲಿ ತಮ್ಮ ೧೬೨೦ (ಅ) ಮನೆಯಲ್ಲಿ ಪ್ರಸಿದ್ಧಿಸಿದರು.

# ಶಿವಾನುಭವ.

ವರ್ಷ ೧೨] ನವ್ಹಂಬರ ೧೯೩೭ [ಸಂಚಿಕೆ ೨

## ಶ್ರೀ ನಿಡುಮಾಮಿಡಿ ಮಠದ ಇತಿಹಾಸ.

(ಲೇಖಕ:— ಎಂ. ಜಿ ನಂಜುಂಡಾರಾಧ್ಯ 'ರಾಷ್ಟ್ರಭಾಷಾವಿಶಾರದ'
ಸಿದ್ಧಗಂಗಾ ಗುರುಕುಲ.)

ಶ್ರೀ ನಿಡುಮಾಮಿಡಿ ಮಠವು ವೀರಶೈವ ಮತಾಚಾರ್ಯರ ಮುಖ್ಯ ಪೀಠಗಳಲ್ಲೊಂದಾಗಿದೆ. ಇದು ಜಗದ್ಗುರು ಪಂಡಿತಾಚಾರ್ಯ ಸೂರ್ಯ ಸಿಂಹಾಸನದ ಪರಂಪರೆಯಲ್ಲಿ ನಡೆದು ಬಂದುದು. ಇದರ ಶಾಖೋಪಶಾಖೆಗಳು ಭರತಖಂಡದ ನಾನಾಭಾಗಗಳಲ್ಲಿರುತ್ತವೆ. ಈ ಸಿಂಹಾಸನಾಧೀರ ಕರಕಮಲ ಸಂಜಾತರಾದ ಅನೇಕ ಮೂರ್ತಿಗಳು ತಮ್ಮ ಮಹಿಮಾಪ್ರಭಾವಗಳಿಂದ ರಾಜಾಧಿರಾಜರಿಂದ ಸನ್ಮಾನಿತರಾಗಿ ವಿಖ್ಯಾತಿಯನ್ನು ಪಡೆದ ಕುರುಹುಗಳು ಇತಿಹಾಸದಲ್ಲಿ ಕಂಡುಬರುತ್ತವೆ. ಇವರಲ್ಲಿ ಅನೇಕರು ಉದ್ದಾಮಕವಿಗಳೂ, ಶಾಸ್ತ್ರಕಾರರೂ ಆಗಿಹೋಗಿದ್ದಾರೆ. ಇವರಿಂದ ರಚಿತವಾದ ಗ್ರಂಥಗಳ ಶೋಧನೆಗಳು ನಡೆಯುತ್ತಿವೆ. ಈ ಮಠದ ಇತಿಹಾಸವು, ವೀರಶೈವ ಸಮಾಜದ ಐತಿಹಾಸಿಕ ಹಾಗೂ ಸಾಮಾಜಿಕದ ಅನೇಕ ತೊಡಕುಗಳನ್ನು ಸಡಲಿಸಿ, ಬಹುಕಾಲದಿಂದಲೂ ಗುರು-ಲಿಂಗ-ಜಂಗಮರು ಹೇಗೆ ಏಕಸೂತ್ರತೆಯಿಂದ ಸಮಾಜೋದ್ಧಾರ ಕಾರ್ಯಗಳನ್ನೆಸಗುತ್ತಿದ್ದರೆಂಬುದನ್ನು ತೋರಿಸುವ ಒಂದು ಆದರ್ಶ ಚಿತ್ರವಾಗಿದೆ. ಈ ಪೀಠಾಧಿಪತಿಗಳು ಹಿಂದೆ ಮಾಡಿರುವ ಮಹತ್ಕಾರ್ಯಗಳು ಇಂದಿನ ಪೀಠಾಧಿಕಾರಿಗಳ ಹಾಗೂ ವಿರಕ್ತಮೂರ್ತಿಗಳ ಕಾರ್ಯ ಗೌರವವನ್ನು ಸೂಚಿಸಲು ಬಲವಾದ ನಿದರ್ಶನವಾಗಿವೆ. ಸಾಮಾನ್ಯ

ವಾಗಿ ವೀರಶೈವರಲ್ಲಿ ಮಠಗಳೇರ್ಪಟ್ಟುದು ಇದೇ ಉದ್ದೇಶದಿಂದಲೇ ಎಂಬುದು ಅನೇಕ ಐತಿಹಾಸಿಕ ನಿದರ್ಶನಗಳಿಂದ ಸಿದ್ಧವಾಗಿದೆ. ಅನಾದಿಕಾಲದಿಂದ ಸಾವಿರಾರು ಜನ ಮಹಾನುಭಾವರು 'ವಸುಧೈವ ಕುಟುಂಬಕಂ' ಎಂಬ ಮಹಾವಾಕ್ಯವನ್ನನುಸಂಧಾನಮಾಡಿ ವಿಶ್ವವನ್ನೇ ತಮ್ಮ ವಿಶಾಲವಾದ ಪ್ರೇಮವೆಂಬ ಬಾಹುಪಾಶದಿಂದ ತಬ್ಬಿಕೊಂಡದ್ದರಿಂದಲ್ಲವೇ ಈ ಯುಗದಲ್ಲಿ ವೀರಶೈವದ ಅಸ್ತಿತ್ವವು ಉಳಿದಿರುವುದು! ಇರಲಿ.

ಸದ್ಯದಲ್ಲಿ ಈ ಮಠದಲ್ಲಿ ಉಪಲಬ್ಧವಾಗುವ ಕೆಲವು ಆಧಾರಗಳಿಂದ ಅರಿಯಬಹುದಾದ ನಾಲಕ್ಕಾರು ವಿಷಯಗಳನ್ನು ವಾಚಕರ ಅವಗಾಹನೆಗಾಗಿ ಇಲ್ಲಿ ವಿವರಿಸುವುದು ಉಚಿತವೆನಿಸುತ್ತದೆ.

ಈ ಮಠದ ಕೇಂದ್ರಸ್ಥಾನವು[೧] ಸದ್ಯದಲ್ಲಿ ಕೋಲಾರ ಜಿಲ್ಲಾ ಬಾಗೆಪಲ್ಲಿ ತಾಲ್ಲೂಕಿಗೆ ಸೇರಿದ ಗೂಳೂರು ಗ್ರಾಮದ ಕೆರೆಯ ದಂಡೆಯಲ್ಲಿರುತ್ತದೆ. ಈ ಪೀಠದ ಮೂರನೆಯ ಪೀಠಾಧೀಶ್ವರರಾದ ಶ್ರೀ ಜಗದ್ಗುರು ಚಂದ್ರಗುಂಡ ದೇಶಿಕೇಂದ್ರ ಶಿವಾಚಾರ್ಯ ಸ್ವಾಮಿಗಳವರು ದೇಶಸಂಚಾರಾರ್ಥವಾಗಿ ದಯಮಾಡಿಸಿ, ಇತಿಹಾಸದಲ್ಲಿ ಪ್ರಸಿದ್ಧವಾದ ರಾಜೇಂದ್ರ ಚೋಳ (೧೦೧೨--೧೦೪೫) ನ ಉದ್ಯಾನವನದಲ್ಲಿ ಶಿವಾರ್ಚನೆಯನ್ನು ಮಾಡುತ್ತಿದ್ದರೆಂದೂ, ಶಿವಾರ್ಚನೆಯಾದ ನಂತರ ಶಿವನಿಗೆ ನೈವೇದ್ಯಕ್ಕಾಗಿ ಅಲ್ಲಿದ್ದ ತೆಂಗಿನ ಮರವನ್ನೇ ಭಿಕ್ಷೆ ಬೇಡಿದಾಗ ಆ ಮರವು ಬಗ್ಗಿ ಫಲಗಳನ್ನು ನೀಡಿ ಮೊದಲಿನಂತಾಯಿತೆಂದೂ ಇದನ್ನು ಚಾರರ ಮೂಲಕ ಅರಿತ ಚೋಳ ರಾಜೇಂದ್ರನು ಶ್ರೀ ಸ್ವಾಮಿಯವರ ಶಿಷ್ಯನಾಗಿ ಅವರ ಉಪದೇಶ ಪ್ರಭಾವದಿಂದ ತನಗೆ ಬಹಳ ಕಾಲದಿಂದಿದ್ದ ಬ್ರಹ್ಮಹತ್ಯ ದೋಷದಿಂದ ವಿಮುಕ್ತನಾದನೆಂದೂ, ಇದರ ಜ್ಞಾಪಕಾರ್ಥವಾಗಿ ಶ್ರೀಯವರಿಗೆ ಅಲ್ಲಿಯೇ ಒಂದು ಬೃಹನ್ಮಠವನ್ನು ಕಟ್ಟಿಸಿಕೊಟ್ಟನೆಂದೂ ಅಲ್ಲಿರುವ ಪಂಡಿತಾರಾಧ್ಯ ಚರಿತ್ರೆಯಲ್ಲಿ[೨] ವಿಶದ

---

೧ ಹಿಂದಿನ ಹೆಸರು 'ಗುಯಿಲೂರು'

೨ ಆಂಧ್ರದಲ್ಲಿ ಪ್ರಸಿದ್ಧನಾದ ಪುಲ್ಲ ಕವಿಯು ಬರೆದನೆಂದು ಈ ಗ್ರಂಥವಲ್ಲಿರುವ ಅಂಕಿತದಿಂದ ತಿಳಿಯಬಹುದಾಗಿದೆ. ಇದಲ್ಲದೆ ಕರ್ನಾಟಕಾಂಧ್ರ ಕವಿತಾವಿಶಾರದನಾದ ಇಡಗೂರು ರುದ್ರಕವಿಯೂ, ಅಪ್ಪಪ್ಪನೆಂಬವನೂ ಇದೇ ವಿಷಯವನ್ನು ಮನೋಹರವಾಗಿ ವರ್ಣಿಸಿದ್ದಾರೆ. ಇವು ಕವಿಚರಿತೆಕಾರರಿಗೆ ಸಿಕ್ಕಿರುವದಿಲ್ಲ.

ವಾಗಿ ವರ್ಣಿತವಾಗಿದೆ. ಈಗಲೂ ಸಹ ಆ ಮಠದಲ್ಲಿಯೂ ಸುತ್ತು ಮುತ್ತಿನ ಪ್ರದೇಶಗಳಲ್ಲಿಯೂ ಸಹ ಚೋಳ ಪ್ರತಿಷ್ಠಿತವಾದ ಅನೇಕ ದೇವಾಲಯುಗಳೂ ಕುರುಹುಗಳೂ ದೊರೆಯುತ್ತವೆ.

ನಿಡುಮಾಮಿಡಿ ಎಂಬುದು ಅನಂತಪುರಂ ಜಿಲ್ಲಾ ಪೆನುಗೊಂಡೆ ಈ ತಾಲೂಕಿನಲ್ಲಿ ಅರಣ್ಯ ಮಧ್ಯ ಪ್ರದೇಶದಲ್ಲಿ ಮನೋಹರಳಾದ ಪ್ರಕೃತಿದೇವಿಯಿಂದ ಪೂಜಿಸಲ್ಪಡುವುದಾಗಿ ಯೋಗಾಭ್ಯಾಸಿಗಳಿಗೆ ಯೋಗ್ಯ ಸ್ಥಾನವಾಗಿ ರಂಜಿಸುತ್ತಿದೆ. ಅದರ ಸಮೀಪದಲ್ಲಿಯೇ ಸುವರ್ಣವತೀ ಎಂಬ ಪುಣ್ಯ ನದಿಯು ಪ್ರವಹಿಸುತ್ತಿರುವುದರಿಂದ ಈ ಪ್ರದೇಶವು ಅತ್ಯಂತ ಮನೋಹರವಾಗಿದೆ. ಆದುದರಿಂದಲೇ ಈ ಸ್ಥಾನವು ಈ ಪೀಠಪರಂಪರೆಯ ಮೂರ್ತಿಗಳಾದ ಶ್ರೀ ಕರಿಬಸವದೇಶಿಕೇಂದ್ರ ಶಿವಾಚಾರ್ಯ ಸ್ವಾಮಿಗಳ ತಪೋನುಷ್ಠಾನಾದಿಗಳಿಗೆ ಉಚಿತವಾಗಿ ತೋರಿರಬಹುದು. ಅಲ್ಲಿರುವಾಗ್ಗೆ ಪೆನುಗೊಂಡೆಯ ಅರಸರು ದರ್ಶನಾರ್ಥವಾಗಿ ಬಂದರೆಂದೂ ಅವರಿಗೆ ಆಶೀರ್ವದಿಸಲು ಫಲವಿಲ್ಲದಿರಲು ಇವರು ತಮ್ಮ ಮಹಿಮಾ ಪ್ರಭಾವದಿಂದ ಒಂದು ಒಣಗಿದ ಮಾವಿನ ಮರವನ್ನು ಚಿಗುರಿಸಿ, ಕುಸುಮಿಸಿ, ಫಲಿಸುವಂತೆ ಮಾಡಿ ಅದೇ ಮಾವಿನ ಫಲಗಳನ್ನು ಆಶೀರ್ವಾದ ಮಾಡಿ ರಾಜನಿಗೂ ಅವನ ಯಾವತ್ತೂ ಪರಿವಾರಕ್ಕೂ ಕೊಟ್ಟು ತೃಪ್ತಿಪಡಿಸಿದರೆಂದೂ, ಇದರಿಂದ ಸಂತುಷ್ಟನಾದ ರಾಜನು ಒಂದು ದೊಡ್ಡ ಮಠವನ್ನು ಕಟ್ಟಿಸಿಕೊಟ್ಟು ಬೇಕಾದ ಬಿರುದಾವಳಿಗಳನ್ನೂ ಮಾನ್ಯಮಿರಾಶಿಗಳನ್ನೂ ಕೊಟ್ಟಿರುವುದಾಗಿ ಪುಲ್ಲಕವಿಯು ವರ್ಣಿಸುತ್ತಾನೆ. ಮತ್ತು ಮತ್ತೊಬ್ಬ ಕವಿವರ್ಯನು ಇದೇ ಪವಾಡವನ್ನು ಈ ರೀತಿಯಾಗಿ ವರ್ಣಿಸಿದ್ದಾನೆ.

**ಪದ**

ಒಣಗಿದಂಥಾ ಚೂತ ವೃಕ್ಷವನು
ಕ್ಷಣದೊಳಗೆ ಚಿಗುರಿಸಿ
ಘನಫಲಂಗಳ ಭಕ್ತ ಜನಗಳಿಗೆ
ಗಣನೆಯಿಲ್ಲದೆ ಕೊಟ್ಟು ಜಗದಲಿ
ಘನಮಹಿಮನೆನ್ನುತೆ ಮೆರೆದ ದೇವಗೆ.

ಮಂಗಲಂ ಮಹಮಹಿಮಜಗದಾಯುಯತಿ ಪುಂಗವರ್ಯ । ಮಂಗಲಂ॥

ಈ ರೀತಿಯಾದ ಅನೇಕ ಪವಾಡಗಳನ್ನು ವರ್ಣಿಸುವ ಕೀರ್ತನೆಗಳೂ ಹಾಡುಗಳೂ ಆ ಪ್ರದೇಶ ಜನರಲ್ಲಿ ವಾಡಿಕೆಯಲ್ಲಿರುತ್ತವೆ.

ಆ ಮಠದ ಹತ್ತಿರವಿರುವ ಒಂದು ಸ್ತಂಭದಲ್ಲಿ ಒಂದು ಶಿಲಾಶಾಸನವು ಉಪಲಬ್ಧವಾಗುತ್ತದೆ. ಇದನ್ನು ಮೇಲೆ ಹೇಳಿದ ಅರಸನೇ ಶ್ರೀ ಸ್ವಾಮಿಗಳವರಿಗೆ ಬರೆದು ಕೊಟ್ಟದ್ದಾಗಿರಬೇಕೆಂದು ಊಹಿಸಬಹುದಾಗಿದೆ. ಇದರಲ್ಲಿ ಕಾಲ ಮುಂತಾದವುಗಳು ಇದ್ದಂತೆ ಕಾಣುವುದಿಲ್ಲ. ಅದರ ಸ್ವರೂಪವು ಈ ರೀತಿಯಲ್ಲಿದೆ.

"....ಶುಭಮಸ್ತು ಕಾಳಯುಕ್ತಿ ಸಂವತ್ಸರ ಶ್ರಾವಣ ಶು. ೧೦ ಶು. ಅನುಮುದ್ರಾಯ ರಾಜಗುರು ಮಹಾನಿಡಂಬಾರ್ಯ ಆ ಚಂದ್ರಭೂಷಣದೇವವಡೆಯರ ನಿಡುಮಾಮಿಡಿ ಬಸವರಾಜದೇವರಿಗೆ ಅಣ್ಣಮ್ಮರಸರ ಮಗ ಬಾಬರಸನು ಪ್ರತಿಜ್ಞೆ ಮಾಡಿ ಬರದು ಕೊಟ್ಟ ಶಾಸನ. ಮಂಗಳಮಹಾ ... ಅ ಅ." ಎಂದಿರುತ್ತದೆ. ಇದನ್ನು ಸರಿಯಾಗಿ ಶೋಧಿಸಿದಲ್ಲಿ ಅನೇಕ ವಿಷಯಗಳು ವ್ಯಕ್ತವಾಗಬಹುದು. ಈ ಶಾಸನದಲ್ಲಿ ಈ ಪೀಠಾಧೀಶರಿಗಿರುವ 'ರಾಜಗುರು' ಎಂಬ ವಿಶೇಷಣವು ಬಹಳ ಮಹತ್ವದ್ದಾಗಿರುತ್ತದೆ. ಇದು ಚರಿತ್ರೆಯಲ್ಲಿ ಈ ಪೀಠಾಧಿಪತಿಗಳು ರಾಜಾಧಿರಾಜರಿಂದ ಸನ್ಮಾನಿಸಲ್ಪಟ್ಟಿರುವರೆಂಬ ಪುಷ್ಕಳವಿಯ ಉಕ್ತಿಗಳಿಗೆ ಒಂದು ಬಲವಾದ ಆಧಾರವಾಗಿದೆ.

ಈ ಮಠದ ಸಭಾಂಗಣದಲ್ಲಿರುವ ಒಂದು ಸ್ತಂಭದಲ್ಲಿ ಶ್ರೀ ಚಂದ್ರಗುಂಡದೇಶಿಕೇಂದ್ರರು ತೆಂಗಿನಮರವನ್ನು ಭಿಕ್ಷೆ ಬೇಡಿದಾಗ ಅದು ಅಂಬಿನಂತೆ ಬಗ್ಗಿ ಫಲಗಳನ್ನು ನೀಡಿದಂತೆ ಇರುವ ಒಂದು ಪ್ರತಿಮೆಯು ಕೆತ್ತಲ್ಪಟ್ಟಿದೆ. ಇದು ವಿರೂಪಾಕ್ಷ ಪಂಡಿತಾರಾಧ್ಯನ[೧]

---

೧ ಈ ಪದ್ಯದಲ್ಲಿ ಕರಿಬಸವ ದೇಶಿಕೇಂದ್ರರು ತೆಂಗಿನಮರವನ್ನು ಭಿಕ್ಷೆ ಬೇಡಿದರೆಂಬುದು ಹದಿನೈದನೆಯ ಶತಮಾನದ ವಿರೂಪಾಕ್ಷ ಪಂಡಿತಾರಾಧ್ಯನು ಬರೆದಿರುವುದು ಸಂಭವೇ ಸರಿ. ಏಕೆಂದರೆ ಈ ಪವಾಡವು ಶ್ರೀ ಚಂದ್ರಗುಂಡ ದೇಶಿಕೇಂದ್ರರಿಂದ ನಡೆಯಿಸಲ್ಪಟ್ಟಂತೆ ಇತಿಹಾಸವಿದೆ. ನಿಡುಮಾಮಿಡಿ ಎಂಬುದು ಮಾತ್ರ ಶ್ರೀ ಕರಿಬಸವ ದೇಶಿಕೇಂದ್ರರ ಕಾಲಕ್ಕೆ ನಡೆಯಿಸಿದ ಮಹಿಮೆಯಿಂದ ಲಬ್ಧವಾದುದು. ಹಿಂದಿನ ಪ್ರಸಿದ್ಧ ವಿಷಯಗಳು ವ್ಯಕ್ತವಾಗಿ ಇಲ್ಲಿ ವರ್ಣಿತವಾಗಿವೆ. ಆದರೆ ಈ ಪವಾಡಗಳು ಈ ಪೀಠಾಧೀಶರಿಂದ ನಡೆಯಿಸಲ್ಪಟ್ಟವೆಂಬುದರಲ್ಲಿ ವಾದವಿಲ್ಲ.

ನಿಡುಮಾಮಿಡಿಯು ಕರಿಬಸವೇಶನ್ಸೈತರುತಿ
ನುಡಿದು ತೆಂಗಿನಮರನ ಭಿಕ್ಷವುಂ ಬೇಡಲತಿ
ಕಡುಬಾಗಿ ನಿಂದುಫಲಗಳ ನೀಡಿ ಬಳಿಕಲಾ ಮರನು
ಮೊದಲಂತೆಸೆವುದು ॥

'ಚನ್ನ ಬಸವ. ಪ್ರ, ಕಾ. ೫. ಸಂ. ೧೦. ಪ್ರ. ೫೪'

ಎಂಬ ಪದ್ಯವನ್ನು ನೆನಪಿಗೆ ತರುತ್ತದೆ.

ಶ್ರೀ ಪೀಠದ ಚರಿತ್ರೆಯಲ್ಲಿ ಒಂದು ಪುರಾತನ ತಾಳೆ ಓಲೆಯ ಶಾಸನವಿರುತ್ತದೆ. ಇದರ ಕಾಲವು ವಿಜಯನಗರದ ಅರಸರ ಕಾಲ ವೆಂದು ತೋರುತ್ತದೆ. ವಿಜಯನಗರದ ಅರಸರ ಒಂದು ಅರಮನೆಯು ಪೆನುಗೊಂಡೆಯಲ್ಲಿ ಇಂದಿಗೂ ವಿರಾಜಿಸುತ್ತದೆ. ಅದರಲ್ಲಿನ ಉಲ್ಲೇಖಗ ಳಿಂದ ವಿಜಯನಗರದ ಅರಸರಿಂದ ಈ ಮಠಕ್ಕೆ ಕೊಟ್ಟಿರುವ ಮರ್ಯಾದೆ ಗಳೂ ಮಠಮಾನ್ಯಗಳೂ ವಿವರಿಸಲ್ಪಟ್ಟು ಎಲ್ಲಾ ಫಣಾಚಾರದ ಧಾರ್ಮಿಕ ವ್ಯವಸ್ಥೆಯ ಅಧಿಕಾರವು ಈ ಪೀಠಕ್ಕೆ ಉಂಟೆಂಬುದು ಸ್ಪಷ್ಟ ವಾಗಿ ಬರೆಯಲ್ಪಟ್ಟಿದೆ. ಕೊನೆಯಲ್ಲಿ "....ನಿಡುಮಾಮಿಡಯ್ಯ ಪಂಡಿ ತಾರಾಧ್ಯ ಸೂರ್ಯಸಿಂಹಾಸನಾನಿತಿ ಚೇರೇದಿ...." ಎಂದಿರುತ್ತದೆ. ಈ ಶಾಸನದ ಒಂದು ನಕಲನ್ನು ಈ ಪೀಠದ ಅಧಿಕಾರಿಗಳು ಬರೆದು ಚರಿತ್ರೆಯಲ್ಲಿ ಸೇರಿಸಿದ್ದಾರೆ. ಇದರಿಂದ ಶ್ರೀಶೈಲದಿಂದ ದೇಶ ಸಂಚಾ ರಾರ್ಥವಾಗಿ ದಯಮಾಡಿಸಿದ ಜಗದ್ಗುರು ಕರಕಂಜಾತರಾದ ಶ್ರೀ ವಿರೂಪಾಕ್ಷ ದೇಶಿಕೇಂದ್ರ ಶಿವಾಚಾರ್ಯಸ್ವಾಮಿಗಳ ಪರಂಪರೆಯು ಲೋಕೋದ್ಧಾರಾರ್ಥವಾಗಿ ಇಲ್ಲಿಯೇ ನೆಲೆಸಿತೆಂದು ಊಹಿಸಬಹುದಾಗಿದೆ.

ಶ್ರೀಶೈಲದಲ್ಲಿ ಆಗಮಪ್ರಸಿದ್ಧವಾದ ಶ್ರೀ ಧೇನುಕರ್ಣ (ಗೋಕರ್ಣ) ಶಿವಾಚಾರ್ಯರಿಂದ ಸ್ಥಾಪಿಸಲ್ಪಟ್ಟ ಪೀಠವೂ ಮಠವೂ ಸಹ ಈ ನಿಡು ಮಾಮಿಡಿ ಮಠಕ್ಕೆ ಸೇರಿರುತ್ತವೆ. ಈ ಗೋಕರ್ಣೇಶ್ವರ ಪೀಠದ ಮೇಲ್ವಿ ಚಾರಣೆಯನ್ನು ಈ ಪೀಠಾಧೀಶರಾದ ಮರಿಕರಿಬಸವರಾಜ ದೇಶಿಕೇಂದ್ರ ಸ್ವಾಮಿಗಳವರು ಮಾದುಲವೀರಯ್ಯನವರೆಂಬ ಗಣಾಧೀಶರ ವಶಕ್ಕೆ ಕೊಟ್ಟಿರುವರೆಂಬ ಒಂದು ತಾಮ್ರಶಾಸನವು ಈ ಮಠದಲ್ಲಿರುತ್ತದೆ. ಅದರಲ್ಲಿ:—

"ಸ್ವಸ್ತಿಶ್ರೀ ವಿಜಯಾಭ್ಯುದಯ ಶಾಲೀವಾಹನ ಶಕ ಸಂ. ೧೭೪೧ ಪ್ರಮಾದಿ ಸಂವತ್ಸರಂ ವೈಶಾಖ ಶು|| ೬ ಶುಕ್ರವಾರಂ ಶ್ರೀಶೈಲದಿಗ್ಭಾಗ

ಮುನ ಪಂಚವನ್ನಿಗಿ ಬಳಿಯ ಶ್ರೀ ಗೋಕರ್ಣ ಸಿಂಹಾಸನಾಧ್ಯಕ್ಷುಲೈನ ಶ್ರೀ ಮರಿಕರಿಬಸವ ಸ್ವಾಮುಲವಾರು ಮಾದುಲವೀರಯ್ಯಕು ವ್ರಾಯಿಂಚಿ ಇಚ್ಚಿನಶಾಸನಂ......" (ಸನ್ ೧೪೪೯ ಆಗುತ್ತೆ) "ಮಜುಕೂರಿಲೋ ಶ್ರೀ ಗೋಕರ್ಣೇಶ್ವರ ಸ್ವಾಮುಲ ವಾರಿಕಿವುಂಡು ಕೊನ್ನಿಯಿನಾಂ ಸ್ಥಳ ಮೂಲಲೋ......." ಎಂದು ಈ ಶಾಸನದಲ್ಲಿರುವದರಿಂದ ಶ್ರೀ ಗೋಕರ್ಣೇಶ್ವರ ಸ್ವಾಮಿಗಳೇ ಈ ಸಿಂಹಾಸನದ ಮೂಲ ಕರ್ತೃ ಗಳೆಂಬದು ಸ್ಪಷ್ಟವಾಗುತ್ತದೆ. ಶ್ರೀಶೈಲದ ಇತಿಹಾಸವನ್ನು ಸಂಕ್ಷೇಪ ವಾಗಿ ಆಂಧ್ರದಲ್ಲಿ ಬರೆದಿರುವ ಮ॥ ರಾ॥ ಶ್ರೀ ಪಿ. ರಾಮಯ್ಯ ಪ್ರೆಸಿ ಡೆಂಟ ಶ್ರೀ ಶೈಲಂ ಮ್ಯಾನೇಜಿಂಗ ಕಮಿಟಿಯವರು "ಶ್ರೀ ಗೊಕರ್ಣೇ ಶ್ವರ ಸ್ವಾಮಿಯವರು ನವನಾಥಸಿದ್ಧರು ಅನಾದಿ ಕಾಲದಲ್ಲಿ ಈ ಪರ್ವತ ವಲ್ಲಿ ನೆಲಸಿದ್ದರೆಂಬುದಕ್ಕೆ ಕೆಲವು ಗಾಥೆಗಳಿವೆ." ಎಂದು ಬರೆದಿರುತ್ತಾರೆ. ಆದುದರಿಂದ ಈ ಮಠದ ಮೂಲಸ್ಥಾನವು ಶ್ರೀ ಧೇನುಕರ್ಣ (ಗೋಕರ್ಣ) ಶಿವಾಚಾರ್ಯರಿಂದ ಸ್ಥಾಪಿಸಲ್ಪಟ್ಟ ಶ್ರೀಗಿರಿರಾಜಸೂರ್ಯ ಸಿಂಹಾಸನ ವೆಂಬುದು ವ್ಯಕ್ತವಾಗುತ್ತದೆ. ಧೇನುಕರ್ಣ ಗಣಾಧೀಶರೇ ಕಲಿಯುಗ ದಲ್ಲಿ ಪಂಡಿತಾರಾಧ್ಯರೆಂದು ಕರೆಯಲ್ಪಟ್ಟಿರುವರೆಂಬುದು ಆಗಮ ಪ್ರಸಿದ್ಧ ವಾಗಿಯೇ ಇದೆ.

ವೇದ ತೀರ್ಥೇತ್ಯಾದಿ ಬಿರುದಾಂಕಿತರಾದ ವೇ॥ ಚಿದರೆಮಠದ ವೀರಭದ್ರ ಶಾಸ್ತ್ರಿಗಳವರು "ಆಂಧ್ರದ ವೀರಶೈವರು"(೧) ಎಂಬ ಲೇಖನ ದಲ್ಲಿ ಆಂಧ್ರದೇಶದಲ್ಲಿರುವ ಪ್ರಸಿದ್ಧ ವೀರಶೈವ ಮಠಗಳಲ್ಲಿ 'ನಿಡು ಮಾಮಿಡಿ' ಮಠವು ಮುಖ್ಯವಾದುದೆಂದು ಉಲ್ಲೇಖಿಸಿದ್ದಾರೆ.

ವೇ॥ ಬುದ್ಧಯ್ಯಸ್ವಾಮಿ ಪುರಾಣಿಕ ಎಂಬುವರು "ಪ್ರಭುದೇವರ ಕಾಲನಿರ್ಣಯ(೨) ಎಂಬ ಶಿರೋನಾಮೆಯ ಲೇಖನಮಾಲೆಯಲ್ಲಿ ಶ್ರೀ ಪ್ರಭುದೇವರು ರೇಣುಕಾದಿಗಳಂತೆ ಹತ್ತನೇ ಶತಮಾನಕ್ಕಿಂತಲೂ ಹಿಂದಿನ ವರೆಂಬುದನ್ನು ಸಿದ್ಧ ಮಾಡುತ್ತಾ " ಪ್ರಭುದೇವರು ನಿಡುಮಾಮಿಡಿಯಲ್ಲಿ ಕರಿಬಸವದೇಶಿಕೇಂದ್ರರನ್ನು ಮಠಾಧಿಕಾರಿಗಳನ್ನಾಗಿ ಮಾಡಿದರು"

---

(೧) ಶಿವಾನುಭವ ೧೯೨೯ ಮೇ.

(೨) ಶಿವಾನುಭವ ೧೯೪೫ ಅಕ್ಟೋಬರ

ಎಂದು ಬರೆದಿರುತ್ತಾರೆ. ಆದರೆ ಇದಕ್ಕೆ ಯಾವ ಐತಿಹಾಸಿಕದ ಆಧಾರವೂ ಇದ್ದಂತೆ ಕಂಡುಬರುವುದಿಲ್ಲವಾದರೂ ಈ ನಿಡುಮಾಮಿಡಿ ಕರಿಬಸವ ಸ್ವಾಮಿಗಳ ಕಾಲ ನಿರ್ಣಯಕ್ಕೆ ಕೆಲಮಟ್ಟಿಗೆ ಸಹಾಯಕವಾಗಬಹುದೆಂದು ಹೇಳಬಹುದು.

[೧] "ಕೊಟ್ಟೂರು ಬಸವರಾಜನೆಂಬ ವೀರಮಾಹೇಶ್ವರನು ದ್ವಿತೀಯಧನ್ವಂತರಿಯಂತೆ ಪ್ರಖ್ಯಾತನಾದನು. ಇವನ 'ಬಸವರಾಜೀಯ' ವೈದ್ಯಗ್ರಂಥರಾಜವು ಆಂಧ್ರದೇಶದಲ್ಲಿ ಪ್ರಖ್ಯಾತವಾಗಿದೆ." ಎಂದು ವೇ॥ ಚಿದರೆಮಠದ ವೀರಭದ್ರ ಶಾಸ್ತ್ರಿಗಳು ಅವನನ್ನು ಬಹಳವಾಗಿ ಕೊಂಡಾಡಿದ್ದಾರೆ. ಈ ಬಸವರಾಜನು ಶ್ರೀ ನಿಡುಮಾಮಿಡಿಯ ಸಂಪ್ರದಾಯದವನೆಂಬುದು 'ಬಸವರಾಜೀಯ' ಗ್ರಂಥದ ಒಕ್ಕಣಿಕೆಯಿಂದ ಸ್ಪಷ್ಟವಾಗುತ್ತದೆ.

"ಇತಿ ಶ್ರೀ ನೀಲಕಂಠಚರಣಾರವಿಂದ ತೀರ್ಥಪ್ರಸಾದ ಪಾರಾವಾರ ಭೋಗ ವಿಹಾರಣ ಪಾರೀಣ ನಿಡುಮಾಮಿಡಿ ಬಗೆ ಸತ್ಸಂಪ್ರದಾಯ ಕಾರಾಧ್ಯರಾಮ ದೇಶಿಕಶಿಷ್ಯೋತ್ತಮ. . . . " ಎಂದಿರುತ್ತದೆ. ಇದರಂತೆ ಅನೇಕ ಶಾಸ್ತ್ರಕಾರರೂ ಉದ್ದಾಮಕವಿಗಳೂ ಈ ಸಂಪ್ರದಾಯದವರಿದ್ದರೆಂಬುದು ಅನೇಕ ಕುರುಹುಗಳಿಂದ ಸಿದ್ಧವಾಗಿದೆ.

(ಸಶೇಷ.)

---

(೧) ಶಿವಾನುಭವ ೧೯೨೯ ಎಪ್ರಿಲ್

# ಸ್ತ್ರೀ ಶಿಕ್ಷಣ.

(ಲೇಖಕಿ:— ಶ್ರೀಮತಿ ಬಿ. ಬಸವರಾಜದೇವಿ. ಬೆಂಗಳೂರು.)
— ಅಕ್ಕಮಹಾದೇವಿಯ ಸೇವಾಸಮಾಜದಿಂದ—

ಒಮ್ಮೆ ದೇಶ ವಿದೇಶಿಯರಿಂದ "ಪುಣ್ಯಭೂಮಿ" ಯೆಂದು ಕೀರ್ತಿ ಪಡೆದಿದ್ದ ಈ ನಮ್ಮ ಭರತಖಂಡವು ಈಗ ಅನೇಕ ರೀತಿಯಲ್ಲಿ ಅಧೋಗತಿಗೆ ಬರುತ್ತಿರುವ ವಿಷಯವು ನಮ್ಮೆಲ್ಲರ ಕಣ್ಣಿಗೂ ಪ್ರತ್ಯಕ್ಷವಾಗಿ ಕಾಣುತ್ತಿರುವುದಾಗಿದೆ. ಅದರಲ್ಲೂ ನಮ್ಮ ಮಹಿಳಾ ವರ್ಗವು ಹೊಂದುತ್ತಿರುವ ಅಧೋಗತಿಯ ವಿಷಯದಲ್ಲಿ ಬರೆಯತಕ್ಕ ಅಗತ್ಯವೇ ಇಲ್ಲ. ಸ್ತ್ರೀ ಶಿಕ್ಷಣವು ಬಹುಮಟ್ಟಿಗೆ ಹೆಚ್ಚಿದ್ದರೂ ಶಿಕ್ಷಣವು ಕೆಲವರಿಗೆ ದೊರತಿದೆ. ಇಲ್ಲದವರಿಗೆ ಇಲ್ಲ. ಆಧುನಿಕ ಕಾಲದಲ್ಲಿಯೇ ಈ ರೀತಿ ಸ್ತ್ರೀ ವಿದ್ಯಾಭ್ಯಾಸವು ಅಭಿವೃದ್ಧಿಗೆ ಬರುತ್ತಿರುವಲ್ಲಿ ಪುರಾತನ ಕಾಲದಲ್ಲಿ ಸ್ತ್ರೀ ಶಿಕ್ಷಣವು ಇರಲಿಲ್ಲವೇ? ಆಗಿನ ಕಾಲದಲ್ಲಿ ಈಗಿನಂತೆ ಕವಿತೆಗಳು ಇರಲಿಲ್ಲವೇ? ಎಂಬ ನೂರಾರು ಪ್ರಶ್ನೆಗಳು ತಲೆದೋರುವವು. ಆದರೆ ಪೂರ್ವ ಕಾಲದಲ್ಲಿಯೂ ಅನೇಕವರ ಕವಯಿತ್ರಿಯರಿದ್ದರೂ ಶಿಕ್ಷಣವನ್ನು ಪಡೆದಿರಲಿಲ್ಲ. ಆಗಿನ ಕಾಲದಲ್ಲಿ ಹುಡುಗಿಯರಿಗೆ ವಿದ್ಯೆ ಕಲಿಸಿದರೆ ಅವರು ಕೆಟ್ಟು ಹೋಗುವರೆಂಬ ಭಾವನೆಯು ಭಾರತೀಯರಿಗೆ ಇದ್ದಿತಲ್ಲದೆ ಗಂಡು ಹುಡುಗರಂತೆ ಹೆಣ್ಣು ಹುಡುಗಿಯರಿಗೂ ಸಹ ವಿದ್ಯೆಯನ್ನು ಕಲಿಸಿ ವಿದ್ಯಾವತಿಯರನ್ನಾಗಿ ಮಾಡಬೇಕೆಂಬ ಭಾವನೆಯು ಇರಲಿಲ್ಲ. ಅವರನ್ನು ಚಿಕ್ಕಂದಿನಲ್ಲಿಯೇ ಸಂಸಾರವೆಂಬ ಬಂಧನದಲ್ಲಿ ಸಿಲುಕಿಸುತ್ತಿದ್ದರು. ಸ್ತ್ರೀಯರಿಗೆ ಶಿಕ್ಷಣವಿಲ್ಲದಿರುವುದರಿಂದ "ಎತ್ತು ಏರಿಗೆ ಎಳೆದರೆ ಕೋಣವು ನೀರಿಗೆ ಎಳೆಯುವುದು" ಎಂಬ ಗಾದೆಯಂತೆ ಆ ಕುಟುಂಬದ ಗತಿಯಾಗುತ್ತದೆ. ನಮ್ಮ ಹಿಂದುಸ್ಥಾನದಲ್ಲಿಯಾದರೋ ಮಹಿಳೆಯರ ಸಂಖ್ಯೆಯು ಸುಮಾರು ೧೭ ಕೋಟಿ ೬೦ ಲಕ್ಷ ೬೩ ಸಾವಿರಕ್ಕೆ ಹೆಚ್ಚಾಗಿದೆ. ಇದರಲ್ಲಿ ಕೂಲಿಗಾರರನ್ನು ಬಿಟ್ಟರೆ ಕೂತುಣ್ಣುವವರೇ ಹೆಚ್ಚು ಮಂದಿ. ಇದಕ್ಕೆ ಕಾರಣವೇನೆಂದರೆ ಸರಿಯಾದ ಶಿಕ್ಷಣವು ಮಹಿಳೆಯರಿಗೆ ಇಲ್ಲದಿರುವುದೇ. ಕೈಕಾಲು ಗಟ್ಟಿಯಾಗಿದ್ದು ಕೆಲಸ ಮಾಡಲು ಶಕ್ತಿಯುಳ್ಳ ಇಷ್ಟೊಂದು ಮಹಿಳೆಯರ ಶಕ್ತಿಯು ವ್ಯರ್ಥ

ವಾಗಿ ಹೋಗುತ್ತಿರುವಾಗ ಈ ನಮ್ಮ ಮಾತೃಭೂಮಿಯು ಅಭಿವೃದ್ಧಿಗೆ ಬರುವುದು ಹೇಗೆ? ಸಂಸಾರವೆಂಬ ರಥದಲ್ಲಿ ಗಂಡಹೆಂಡತಿಯರೆಂಬ ಎರಡು ಚಕ್ರಗಳು ಸರಿಯಾಗಿ ಉರುಳಿದರೇ ಆ ರಥವು ಸರಿಯಾಗಿ ನಡಿಯುವುದು. ಅದು ಬಿಟ್ಟು ಒಂದು ಚಕ್ರವು ಮುಂದಕ್ಕೆ ಬಂದು ಇನ್ನೊಂದು ಚಕ್ರವು ಹಿಂದೆಯೇ ಇದ್ದರೆ ರಥವು ಸರಿಯಾಗಿ ನಡಿಯಲವಕಾಶವಿಲ್ಲ. ಆದ್ದರಿಂದ ಸಂಸಾರದಲ್ಲಿ ಗಂಡಹೇಡತಿಯರಿಬ್ಬರೂ ವಿದ್ಯಾವಂತರಾಗಿದ್ದಗೇ ಆ ಸಂಸಾರವು ಸುಖಮಯವಾಗಿರುವುದು. ದಂಪತಿಗಳು ವಿದ್ಯಾವಂತರಾಗಿರುವ ಒಂದು ಸಂಸಾರವನ್ನೂ ಅವಿದ್ಯಾವಂತರಾಗಿರುವ ದಂಪತಿಗಳ ಒಂದು ಸಂಸಾರವನ್ನೂ ಹೋಲಿಸಿದರೆ ಅವರಲ್ಲಿರುವ ಮುಖ್ಯ ವ್ಯತ್ಯಾಸಗಳನ್ನು ನಾವೇ ನೋಡಬಹುದು. ಎರಡು ಸಂಸಾರಗಳಲ್ಲಿ ಹೊರಗಿನ ಆಕಾರವು ಒಂದೇ ಆಗಿದ್ದರೂ ಅವರ ಅವರ ಮನಸ್ಸಿನ ಭಾವಗಳು ಮಾತ್ರ ವ್ಯತ್ಯಸ್ತವಾಗಿರುವವು. ಪಾಶ್ಚಾತ್ಯ ದೇಶಗಳಲ್ಲಿ ಪ್ರತಿಯೊಬ್ಬ ಹೆಂಗಸೂ ವಿದ್ಯಾವತಿಯಾಗಿದ್ದು ತನ್ನ ಜೀವನೋಪಾಯಗಳನ್ನು ತಾನು ನೋಡಿಕೊಳ್ಳುವುದರಿಂದಲೇ ಆ ದೇಶಗಳು ಅಷ್ಟು ಅಭಿವೃದ್ಧಿಗೆ ಬಂದಿರುವುವು. ಮಹಿಳೆಯರು ಶಿಕ್ಷಣ ಹೊಂದಿ ತಮ್ಮ ತಮ್ಮ ಶಕ್ತಿಗಳಿಗನುಸಾರವಾಗಿ ಯಾವುದಾದರೂ ಒಂದು ಕೆಲಸವನ್ನು ಮಾಡುವುದರಿಂದ ಮಹಿಳೋನ್ನತಿ ದೇಶೋನ್ನತಿಯಾಗುವದು ಮಾತ್ರವಲ್ಲದೆ ಪುರುಷರಿಗೂ ಇದರಿಂದೆಷ್ಟೋ ಸಹಾಯವೂ ಪ್ರಯೋಜವೂ ಉಂಟು. ಈ ರೀತಿಯಾಗಿ ಭಾರತೀಯರು ಸ್ತ್ರೀ ಶಿಕ್ಷಣವನ್ನು ನಿಲ್ಲಿಸಿ ಬಿಟ್ಟಿರುವುದರಿಂದ ಅದರ ಶಿಕ್ಷೆಯೋ ಎಂಬಂತೆ ಭಾರತ ವರ್ಷವು ಇಂದು ಇಷ್ಟೊಂದು ದುಃಖವನ್ನನುಭವಿಸುತ್ತಿರುವುದು.

ಶಿಕ್ಷಣವೆಂದರೇನು? ಎಲ್ಲಿಯ ವರೆಗೆ ಸ್ತ್ರೀಯರಿಗೆ ಶಿಕ್ಷಣವನ್ನು ಕೊಡಿಸಬೇಕು? ಸ್ತ್ರೀಯರನ್ನು ಬ್ಯಾರಿಸ್ಟರ್, ವಕೀಲ ಮುಂತಾದ ಹುದ್ದೆಗಳಿಗೆ ಓದಿಸಬಹುದೇ? ಸ್ತ್ರೀಯರಿಗೆ ಕಾಲೇಜು ಶಿಕ್ಷಣವನ್ನು ಕೊಡಿಸಬಹುದೇ? ಎಂಬ ನೂರಾರು ಪ್ರಶ್ನೆಗಳನ್ನು ನೀವು ಕೇಳಬಹುದು. ಆದರೆ ಸ್ತ್ರೀಯರಿಗೆ ಶಿಕ್ಷಣವನ್ನು ಕೊಡುವುದೆಂದರೆ, ಬರಿಯ ಓದು ಬರಹವನ್ನು ಕಲಿಸುವುದು ಮಾತ್ರವೇ ಅಲ್ಲ. ಸುಖಶಾಂತಿಗಳಿಂದ ಜೀವನವನ್ನು ಸಾಗಿಸಲು ಬೇಕಾದ ಎಲ್ಲಾ ಗುಣ ವಿಶೇಷಗಳನ್ನೂ ಸಾಧನ ಸಾಮಗ್ರಿಗಳನ್ನೂ ಪಡೆದು ಜ್ಞಾನಾರ್ಜನೆಯನ್ನು ಮಾಡಿ ವಿದ್ಯೆಯನ್ನು

ಸರಿಯಾದ ರೀತಿಯಲ್ಲಿ ಕಲಿಯತಕ್ಕದ್ದೇ ಸರಿಯಾದ ಶಿಕ್ಷಣವೆನಿಸುವುದು.

ಆದರೆ ಎಲ್ಲಾ ಕಾಲದಲ್ಲಿಯೂ, ಎಲ್ಲಾ ದೇಶಗಳಲ್ಲಿಯೂ ಒಂದೇ ತರಹವಾದ ಶಿಕ್ಷಣವು ಅನ್ವಯಿಸುವುದಿಲ್ಲ. ಆಯಾ ದೇಶಗಳಲ್ಲಿ ಯಾವ ಯಾವ ತೊಡಕುಗಳಿವೆಯೋ ಅವುಗಳನ್ನು ಬಿಡಿಸಬಲ್ಲ ದೇಶದೇಳಿಗೆಗೆ ಯಾವ ಯಾವ ಕುಂದು ಕೊರತೆಗಳನ್ನು ನೀಗಿಸಬಹುದೋ ಅಂತಹ ಶಿಕ್ಷಣವೇ ಸರಿಯಾದ ಶಿಕ್ಷಣವೆನಿಸುವುದು.

ಶಿಕ್ಷಣವನ್ನು ಪಡೆದ ಸ್ತ್ರೀಯರು ಸ್ವಾವಲಂಬನವನ್ನು ಚೆನ್ನಾಗಿ ಕಲಿತುಕೊಳ್ಳಬೇಕು. ಹಾಗೆಯೇ ಅವಳು ಹೆಚ್ಚು, ನಾನು ಕಡಿಮೆ, ಅವಳು ಮೇಲು, ನಾನು ಕೀಳು ಎಂಬ ಭಾವನೆಯನ್ನು ಬಿಡಬೇಕು. ಇಲ್ಲದಿದ್ದರೆ ನಮ್ಮ ಮಹಿಳಾ ವರ್ಗಕ್ಕೆ ನೆಮ್ಮದಿ ಇಲ್ಲ, ಶಾಂತಿ ಇಲ್ಲ, ಸುಖವಿಲ್ಲ. ಈ ರೀತಿಯಾದ ಶಿಕ್ಷಣವನ್ನು ಪ್ರತಿಯೊಬ್ಬ ಮಹಿಳೆಯೂ ಕಲಿತುಕೊಂಡು ತಮ್ಮ ಜೀವನವು ತಾವು ಪರಿಷ್ಕರಿಸಿದರೆ, ದೇಶಕ್ಕೇ ಉಪಕಾರ ಮಾಡಿದಂತೆಯೇ ಸರಿ. ಮಹಿಳೆಯರು ಸರಳ ಜೀವಿಗಳಾಗಿ, ಹರ್ಷಮುಖರಾಗಿ ಕರ್ತವ್ಯ ಪರರಾಗಿ ಸತ್ಯ ನಿಷ್ಠರಾಗಿದ್ದರೆ ಭರತ ಖಂಡವು ಉನ್ನತ ಸ್ಥಿತಿಗೆ ಬರುವುದರಲ್ಲಿ ಸಂದೇಹವೇ ಇಲ್ಲ.

ಸಾಮಾನ್ಯವಾಗಿ ಸ್ತ್ರೀಯರಿಗೆ ಮಾಧ್ಯಮಿಕ ತರಗತಿಗಳ ತನಕ ಶಿಕ್ಷಣವನ್ನು ಕೊಡಿಸಿದರೆ ಸದ್ಯಕ್ಕೆ ಅಂದರೆ ೨೦ನೆಯ ಶತಮಾನಕ್ಕೆ ಸಾಕೆನಿಸುವುದು. ಸ್ತ್ರೀಯರನ್ನು ಬ್ಯಾರಿಸ್ಟರ, ವಕೀಲ ಮುಂತಾದ ಹುದ್ದೆಗಳಿಗೆ ಓದಿಸುವುದು ಪಾಶ್ಚಾತ್ಯ ದೇಶಗಳಲ್ಲಿ ವಿಶೇಷವಾಗಿ ಪ್ರಚಾರಕ್ಕೆ ಬಂದಿರುವುದೇ ಹೊರತು ಇಂಡಿಯಾದಲ್ಲಿ ಅಷ್ಟು ಪ್ರಚಾರಕ್ಕೆ ಬಂದಿಲ್ಲ. ಕಾಲೇಜು ಶಿಕ್ಷಣವು ಈಗೀಗ ಪ್ರಚಾರಕ್ಕೆ ಬರುತ್ತಲಿರುವುದು. ಈ ರೀತಿಯಲ್ಲಿ ಸ್ತ್ರೀ ಶಿಕ್ಷಣವು ಈಗೀಗ ಪ್ರಚಾರಕ್ಕೆ ಬರುತ್ತಿರುವುದು ಹೆಚ್ಚು ಸಂತೋಷಕರವಾಗಿದೆ. ಈ ರೀತಿ ಮಹಿಳೆಯರು ಉತ್ತಮ ಶಿಕ್ಷಣ ಹೊಂದಿದ್ದರೂ ಇಂಡಿಯಾದ ಸ್ತ್ರೀಯರಿಗೆಲ್ಲಾ ಸಾಮಾನ್ಯವಾಗಿ ಅಬಲೆಯರೆಂಬ ಹೆಸರು ರೂಢಿಯಲ್ಲಿದೆ. ನಮ್ಮ ದೇಶದ ಮಹಿಳೆಯರು ಉತ್ಸಾಹ, ಸಾಹಸ, ಬುದ್ಧಿ, ಮಂತ್ರಸಾಧನೆ ಕಾರ್ಯಸಾಧನೆ ಮುಂತಾದುವುಗಳಲ್ಲಿ ಪುರುಷರನ್ನು ಮೀರಿರುವರು. ಅಕ್ಕಮಹಾದೇವಿ, ಕಮಲಾದೇವಿ

ಲಿಂಗಮ್ಮ, ಲಕ್ಕಮ್ಮ ಇವರೇ ಇದಕ್ಕೆ ನಿದರ್ಶನರಾಗಿದ್ದಾರೆ. ಈಗಲೂ ಭಾರತ ಮಹಿಳೆಯರು ಕಷ್ಟನಷ್ಟಗಳನ್ನು ಧೈರ್ಯದಿಂದ ಸಹಿಸುತ್ತಿರುವ ಸಮಾಚಾರಗಳನ್ನು ಕೇಳುತ್ತಲೂ ಪ್ರತ್ಯಕ್ಷವಾಗಿ ನೋಡುತ್ತಲೂ ಇದ್ದೇವೆ. ಈ ಕಾರಣಗಳಿಂದ ಧೈರ್ಯ, ಸ್ಥೈರ್ಯಗಳಲ್ಲಿ ಇವರನ್ನು ಅಬಲೆಯರೆನ್ನಬಹುದೋ? ಅಲ್ಲ. ಹಿಂದೂಸ್ಥಾನದಲ್ಲಿ ನಮಗೆ ದಾಸ ವೃತ್ತಿಯನ್ನು ಗಂಟು ಹಾಕಿ ಅಜ್ಞಾನಾಂಧಕಾರದಲ್ಲಿ ಮುಳುಗಿಸಿ ಪಾತಾಳಕ್ಕೆ ತುಳಿದು ಬಿಟ್ಟಿದ್ದರಿಂದ ನಮಗೆ ಅಬಲೆಯರೆಂಬ ಹೆಸರು ಕೊಡಲ್ಪಟ್ಟದ್ದು ಸಾರ್ಥಕವಾಯಿತು ಎಂದು ಘಂಟಾಘೋಷವಾಗಿ ಹೇಳಬಹುದು.

ಈ ದೇಶದಲ್ಲಿ ಸ್ತ್ರೀ ಶಿಕ್ಷಣವು ಪ್ರಬಲಿಸುತ್ತಾ ಬಂದರೆ ಸ್ತ್ರೀಯರು ಜ್ಞಾನವತಿಯರಾಗಿ ಅಬಲೆಯರೆಂಬ ನಾಮವನ್ನು ಕಳೆದುಕೊಳ್ಳುತ್ತಾರೆಂದು ಸಂದೇಹವಿಲ್ಲದೆ ಹೇಳಬಹುದು. ಈ ರೀತಿ ಪುರುಷರಂತೆಯೇ ಸ್ತ್ರೀಯರೂ ಸಹ ಕಲೆ, ಜ್ಞಾನ, ಪಾಂಡಿತ್ಯವುಳ್ಳವರಾಗಿ ವೈಜ್ಞಾನಿಕ ಪರಿಶೋಧನೆಗಳಲ್ಲಿಯೂ ಅವರು ಹೆಸರು ಪಡೆಯಬಹುದು. ಭಾರತದ ವಿಜ್ಞಾನ ಮಂದಿರದ ಮಹಾದ್ವಾರಗಳು ಸ್ತ್ರೀ ಪರಿಶೋಧಕರಿಗೆ ಸರ್ವದಾ ತೆಗೆದಿರುವುವು. ಶಿಕ್ಷಣ ಪಡೆಯಲು ಪುರುಷನಿಗೆ ಎಷ್ಟು ಅಧಿಕಾರವಿದೆಯೋ ಅಷ್ಟೇ ಅಧಿಕಾರವು ಸ್ತ್ರೀಯರಿಗೆ ಇದೆಯೆನ್ನುವುದನ್ನು ಎಲ್ಲರೂ ಒಪ್ಪಿಕೊಳ್ಳುವರು. ಆದರೆ ಶಿಕ್ಷಣವು ಇಬ್ಬರಿಗೂ ಒಂದೇ ವಿಧವಾಗಿರಬೇಕೆ? ಬೇರೆ ಬೇರೆಯಾಗಿರಬೇಕೆ? ಎಂಬುದೇ ಇಂದಿನ ಪ್ರಶ್ನೆ. ಶಿಕ್ಷಣದ ಅವಶ್ಯಕತೆಯಲ್ಲಿ, ದೇಹ ದಾರ್ಢ್ಯದಲ್ಲಿ, ಕರ್ತವ್ಯ ಕರ್ಮಗಳಲ್ಲಿ ಸ್ತ್ರೀಯರಿಗೂ ಪುರುಷರಿಗೂ ಇರುವ ಭೇದಗಳನ್ನು ನಾವು ತಿಳಿಯಬೇಕು. ಪಾಶ್ಚಿಮಾತ್ಯನಾಗರೀಕತೆಯಲ್ಲಿ ಸ್ತ್ರೀ ಪುರುಷ ವ್ಯಕ್ತಿಗಳ ಸ್ವಾತಂತ್ರ್ಯವು ತಾಂಡವಾಡುತ್ತಲಿದೆ. ಆದರೆ ಆ ರೀತಿ ಅಂದರೆ ಪಾಶ್ಚಾತ್ಯ ಜೀವನದಂತೆ ಇರುವುದು ನಮ್ಮ ಗೃಹಸ್ಥ ಜೀವನಕ್ಕೆ ಧ್ವಂಸವಾಗುವುದು. ಅದು ಹಿಂದೂ ಮಾನವ ಮತ್ತು ಮಹಿಳೆಯರಿಗಿಲ್ಲ. ತಲೆತಲಾಂತರದಿಂದ ಬಂದ ನಮ್ಮ ಪದ್ಧತಿಗಳು ವ್ಯಕ್ತಿ ಜೀವನಕ್ಕೆ ತಕ್ಕಂತೆ ಕಲ್ಪಿಸಲ್ಪಟ್ಟಿರುತ್ತವೆ. ಗೃಹಸ್ಥ ಜೀವನವು ಹೇಗಿರಬೇಕೆಂಬುದು ಆಗಲೇ ನಿರ್ಮಾಣ ಮಾಡಲ್ಪಟ್ಟಿದೆ. ಅದು ಬೇಡವೆಂದರೂ ನಮಗೆ ತಪ್ಪುವ ಹಾಗಿಲ್ಲ. ಆದರೆ ನಮ್ಮ ಪ್ರಾಚೀನ ಜೀವನವು ಆದರ್ಶವು. ಭಾವನೆಗಳು ಇವುಗಳಿಗೆ ಸರಿಹೋಗತಕ್ಕ ಶಿಕ್ಷಣವು ಇಂದು ನಮ್ಮ ಮಹಿಳೆ

ಯರಿಗೆ ಬೇಕಾಗಿದೆ. ಕೆಲವರು ಶಿಕ್ಷಣದಿಂದ ಗೃಹಸ್ಥ ಜೀವನಕ್ಕೆ ಎಳ್ಳಷ್ಟೂ ಪ್ರಯೋಜನವಿಲ್ಲ. ಆದರೆ ಇದರಿಂದ ಪಾಶ್ಚಾತ್ಯರನ್ನು ಮೀರಿಸುವ ಸ್ಪರ್ಧೆಗಳಿಗೆ ಅವಕಾಶವು ಹೆಚ್ಚಾಗುತ್ತದೆ ಎಂದು ಹೇಳುತ್ತಾರೆ. ಆದರೆ ಶಿಕ್ಷಣದ ವ್ಯವಸ್ಥೆಯು ಸರಿಯಾಗಿ ಮಾಡಲ್ಪಟ್ಟರೆ ಅವರ ಸಹಾಯದಿಂದ ಮಹಿಳೆಯರು ದೇಹ, ದೇವ, ದೇಶ ಸೇವೆಗಳನ್ನು ಮಾಡಬಲ್ಲರೆಂಬುದನ್ನು ನಾವು ಸಂದೇಹವಿಲ್ಲದೆ ಹೇಳಬಹುದು ಶಿಕ್ಷಣಕ್ಕೂ, ಜನಜೀವನಕ್ಕೂ, ಸಮೀಪ ಬಾಂಧವ್ಯವಿದೆ ಎಂದು ಹೇಳಬಹುದು. ಜೀವನದಲ್ಲಿ ಪುರುಷನಿಗೆ ಎಂತಹ ಸ್ಥಾನವಿದೆಯೋ, ಸ್ತ್ರೀಯರಿಗೂ ಅಂತಹ ಸ್ಥಾನವನ್ನು ಪಡೆದಿದ್ದಾರೆ. ಶಿಕ್ಷಣದಲ್ಲಿಯೂ ಹಾಗೆಯೇ. ವಿದ್ಯಾಪೀಠದಲ್ಲಿ ಪ್ರಥಮಸ್ಥಾನವನ್ನು ಸ್ತ್ರೀಯರಿಗಿತ್ತವರು ಹಿಂದೂಗಳೇ. ಲೀಲಾವತಿ, ಮೀರಾಬಾಯಿ, ಜೆಬುನ್ನಿಸಾ, ಸಂಚಿಯ ಹೊನ್ನಮ್ಮ, ಮಹಾದೇವಿಯಕ್ಕ, ಇಂದಿನ ತೋರದತ್ತ, ಮತ್ತು ಶ್ರೀಮತಿ ಸರೋಜನಿದೇವಿಯವರೇ ನಿದರ್ಶನರಾಗಿದ್ದಾರೆ. ಪಾಶ್ಚಾತ್ಯ ಶಿಕ್ಷಣವು ನಮ್ಮಲ್ಲಿ ಪ್ರಚಾರಕ್ಕೆ ಬಂದ ನಂತರವೇ ನಮ್ಮ ಸ್ತ್ರೀಯರಲ್ಲಿ ಶಿಕ್ಷಣವೂ ಸಾಹಿತ್ಯಾಭಿರುಚಿಯೂ ಉಂಟಾಯಿತೆಂದು ಅನೇಕರು ಈ ವಿಧವಾದ ತಪ್ಪು ತಿಳುವಳಿಕೆಯುನ್ನಿಟ್ಟುಕೊಂಡಿದ್ದಾರೆ. ಬುದ್ಧದೇವನು ಅವತಾರ ಮಾಡಿದ ಕಾಲದಲ್ಲಿ ಪಾಶ್ಚಾತ್ಯರ ಜೀವನವು ಹುಟ್ಟಿತೆಂದು ಹೇಳಬಹುದು. ಆದರೆ ಅದಕ್ಕೆ ಮೊದಲೇ ಭಾರತದ ಜೀವನವು ಪೂರ್ಣತೆ ಯಾಗಿತ್ತೆನ್ನುವುದಕ್ಕೆ ಬೇಕಾದಷ್ಟು ಆಧಾರಗಳಿವೆ. ಅಶೋಕ ಮತ್ತು ಹರ್ಷವರ್ಧನ ಚಕ್ರವರ್ತಿಗಳ ಆಸ್ಥಾನಗಳಲ್ಲಿ ಕಲೆ ಸಾಹಿತ್ಯಗಳಲ್ಲಿ ನುರಿತ ವಿದುಷಿಯರನೇಕರಿದ್ದರು. ಈಚೆಗೆ ಗ್ರೀಕ್ ಜನರ ಸಂಬಂಧವು ಭಾರತೀಯರಿಗೆ ಆದ ನಂತರ ಭಾರತದ ಸಂಸ್ಕೃತ ಜೀವನವು ಗ್ರೀಕ್ ದೇಶಕ್ಕೂ ಗ್ರೀಕರ ಸಂಸ್ಕೃತಿಗಳು ಭಾರತಕ್ಕೂ ಬರತೊಡಗಿದುವು. ಉದಾಹರಣೆಗಾಗಿ ಮಿಹಿರಾಚಾರ್ಯನ ಪತ್ನಿಯಾದ ಖನಾ ಎಂಬ ಗ್ರೀಕ್ ದೇಶದ ಸ್ತ್ರೀಯು ಪಾಶ್ಚಾತ್ಯ ಮತ್ತು ಪೌರ್ವಾತ್ಯ ಜ್ಯೋತಿಷ್ಯ ಶಾಸ್ತ್ರದಲ್ಲಿ ಪಂಡಿತಳಾಗಿದ್ದು "ಖನಾ ವಾಕ್ಯ" ವೇ ಮೊದಲಾದ ಗ್ರಂಥಗಳನ್ನು ರಚಿಸಿ ಪ್ರಸಿದ್ಧಿಗೆ ಬಂದಳು ಅಲ್ಲದೆ ಇದಕ್ಕೀ ಮೊದಲೇ ಜೀವಿಸಿದ್ದ ಜಗದ್ವಿಖ್ಯಾತನಾದ ಆರ್ಯಭಟ್ಟನ ಮಗಳಾದ ಲೀಲಾವತಿಯು ಅಂಕಗಣಿತ, ರೇಖಾಗಣಿತ, ಬೀಜಗಣಿತ, ದಶಮಾಂಶ, ರೀತಿಯ ಗಣಿತ ಮುಂತಾದ ಗ್ರಂಥಗಳನ್ನು ರಚಿಸಿ ಪ್ರಸಿದ್ಧಳಾಗಿರುವಳು. ಮೇಲ್ಕಂಡ

ಉದಾಹರಣೆಗಳಿಂದ ಪುರಾತನ ಕಾಲದಲ್ಲಿ ಸ್ತ್ರೀ ಶಿಕ್ಷಣವು ಎಷ್ಟು ಅಭಿವೃದ್ಧಿಗೆ ಬಂದಿತ್ತೆಂದು ತಿಳಿದುಕೊಳ್ಳಬಹುದು.

ಇನ್ನು ಹಳ್ಳಿಗಳಲ್ಲಿ ಸ್ತ್ರೀ ಶಿಕ್ಷಣ ಸ್ಥಿತಿ ಗತಿಯೇನೆಂಬುದನ್ನು ಸ್ವಲ್ಪ ಮಟ್ಟಿಗೆ ತಿಳಿಯೋಣ. ಹಳ್ಳಿಗಳು ಎಷ್ಟು ಹಿಂದುಳಿದಿವೆ ಎಂಬುದನ್ನು ಹೇಳುವುದು ಆಗದ ಮಾತು. ಹಳ್ಳಿಯನ್ನು ಸುಧಾರಿಸಲಿಕ್ಕೆ ಏನು ಮಾಡಬೇಕು? ಯಾರ ಸ್ಥಿತಿ ಹೇಗಿದೆ? ಯಾರು ಏನು ಮಾಡಬೇಕು? ಎಂಬ ಸಂಗತಿಗಳನ್ನು ಕುರಿತು ವಿಚಾರಿಸಲೇ ಬೇಕು. ಹಳ್ಳಿಯಲ್ಲಿ ವಿದ್ಯೆಯ ರುಚಿಯು ಮೊದಲೇ ಕಡಿಮೆ. ಪ್ರೇಮದಿಂದ ಕಲಿಸುವವರು ೧೦೦ಕ್ಕೆ ಒಬ್ಬಿಬ್ಬರು. ಇದು ಗಂಡು ಹುಡುಗರ ಸ್ಥಿತಿಯಾಯಿತು. ಹೆಣ್ಣು ಮಕ್ಕಳನ್ನು ಹೇಳಲಸದಳ. ಹೆಣ್ಣುಮಕ್ಕಳು ಮೊದಲಿನ ಸ್ತ್ರೀಯರು ಇದ್ದಂತೆ ಇರಬೇಕು. ಅದರಲ್ಲಿ ಯಾವ ಅಂತರವು ಆಗಬಾರದು. ನೆಟ್ಟಗೆ ಇಲ್ಲವಾದರೆ ಹಾಗೆ ಹೀಗೆ ಎಂದು ಟೀಕು ಮಾಡುತ್ತಾರೆ. ಇದಕ್ಕೆ ಅವಿದ್ಯೆಯೇ ಕಾರಣವಲ್ಲವೇ? ೩-೪ ಸಾವಿರ ಜನಸಂಖ್ಯೆ ಇರುವ ಊರಿನಲ್ಲಿ ೩೦-೪೦ ಹೆಣ್ಣು ಹುಡುಗರು ಶಾಲೆಯಲ್ಲಿ ಇದ್ದರೆ ಬಹಳವಾಯಿತು. ತಾಯಿಗಾದರೋ, ಆರಾಮು ಬೇಕು. ಹುಡುಗರಿಗೆ ಕೆಲಸ ಕೊಟ್ಟು ತಾನು ವಿಶ್ರಾಂತಿ ಹೊಂದಬಯಸುವಳು. ಹೆಣ್ಣು ಮಕ್ಕಳಿಗೇಕೆ ವಿದ್ಯೆ? ಅವರಿಗಾಗಿ ಖರ್ಚನ್ನೇಕೆ ಮಾಡಬೇಕು? ಎಂದು ಯಾವಾಗಲೂ ವಾದ ಮಾಡುವರೇ ಬಹಳ. ಎಲ್ಲರೂ ಕಲಿಯುವದೆಂದರೆ ನೌಕರಿಗೆ ಹೋಗುವದೆಂದು ತಿಳಿದುಕೊಂಡಿದ್ದಾರೆ. ಹೀಗಾಗಲಿಕ್ಕೆ ಈಗಿನ ಶಿಕ್ಷಣವೇ ಕಾರಣವಾಗಿರುವುದು. ಸ್ತ್ರೀ ಶಿಕ್ಷಣದ ಕೊರತೆಗಾಗಿ ಅವರಿಗೆ ಅನೇಕ ಸಂಕಟಗಳೇ ಬರುವುವು. ಶಾಲೆಗೆ ಹೆಸರು ಹಚ್ಚಿದ್ದರೂ ಹುಡಿಗಿಯರನ್ನು ಮೇಲಿಂದ ಮೇಲೆ ಕೆಲಸಕ್ಕೆಂದು ತಾಯಿಯು ಮನೆಗೆ ಕರೆದುಕೊಂಡು ಹೋಗುವಳು. ಹೀಗಾಗಿ ಗೈರು ಹಾಜರಿ ಉಳಿದು ಕ್ಲಾಸಿನ ಗೂಡ ವಿಷಯಗಳೂ ಸಹ ಅವರಿಗೆ ತಿಳಿಯುವದಿಲ್ಲ. ಆದ್ದರಿಂದ ಒಟ್ಟಿನಲ್ಲಿ ಹೀಗಾಗಿ ಸ್ತ್ರೀ ಶಿಕ್ಷಣವು ಕ್ಷಯರೋಗದಿಂದ ಬಳಕಾಡುತ್ತಾ ತಿರುಗುವುದು. ಇದಕ್ಕೆ ಒತ್ತಾಯ ಶಿಕ್ಷಣದ ಕಾಯದೆಯ ಹೊರತು ಈ ರೋಗ ಹೋಗುವುದಿಲ್ಲ. ಸ್ತ್ರೀ ಶಿಕ್ಷಣದ ಹೊರತು ಯಾವ ದೇಶವೂ ಮುಂದೆ ಬಂದಿಲ್ಲ ಮುಂದೆ ಬರುವುದೂ ಇಲ್ಲ. ಭಾರತ ವರ್ಷದ ಧರ್ಮವು ಭಾರತ ಪುತ್ರರಿಂದಲ್ಲ, ಪುತ್ರಿಯರ ಪ್ರತಾಪದಿಂದಲೇ ಸ್ಥಿರವಾಗಿದೆ. ಆದ್ದರಿಂದ ಸ್ತ್ರೀಯರೇ ದೇಶದ ಆಧಾರ ಸ್ತಂಭಗಳು. ಸ್ತ್ರೀಯರೇ

ದೇಶದ ಸೂತ್ರವನ್ನು ಹಿಡಿಯತಕ್ಕವರು. ಸ್ತ್ರೀಯರೇ ದೇಶದ ಜೀವಾಳ ಗಳಾಗಿರುವರು. ಸ್ತ್ರೀಯೇ ಸಾಕ್ಷಾತ್ ದಯೆ, ಕ್ಷಮೆ, ಸ್ನೇಹಗಳ ಮೂರ್ತಿ ಮಂತ ದೇವಿಯಾಗಿದ್ದಾಳೆ. ಆದ್ದರಿಂದ ಸ್ತ್ರೀಯರಿಗೆ ವಿದ್ಯೆಯು ಸ್ವಲ್ಪ ವಾಗಿದ್ದರೂ ಜ್ಞಾನಾರ್ಜನೆ, ಕುಶಲತೆ ಹೆಚ್ಚಾಗಿರಬೇಕು. ಜನಸೇವೆ ಮಾಡಬೇಕು. ವಿದ್ಯಾವತಿಯರಾಗಿ ನಾನು ವಿದ್ಯಾವಂತೆ ಎಂಬ ತೃಪ್ತಿ ಯಿಂದ ಸುಮ್ಮನೆ ಕುಳಿತರೆ ಪ್ರಯೋಜನವಿಲ್ಲ. ತನ್ನ ವಿದ್ಯೆಯಿಂದ ಜತೆಗಾರರಾದ ಅಧೋಗತಿಯಲ್ಲಿರುವ ಮಹಿಳೆಯರ ಗುಂಪನ್ನು ಮೇಲಕ್ಕೆ ತ್ತಲೂ ಪ್ರತಿಯೊಬ್ಬ ಮಹಿಳೆಯೂ ಪ್ರಯತ್ನಪಟ್ಟರೆ ಭರತಖಂಡವು ಮುಂದೆ ಬರುವುದರಲ್ಲಿ ಲೇಶ ಮಾತ್ರವೂ ಸಂಶಯವಿಲ್ಲ.

---

## ಸ್ಥಾವರಲಿಂಗ ಮತ್ತು ಇಷ್ಟಲಿಂಗ.

(ಲೇಖಕ:— ಎಸ್. ಬಿ. ಮಸಳಿ.
ಹೆಡ್ ಮಾಸ್ತರ ಆಹೇರಿ, ತಾಲೂಕ ವಿಜಾಪುರ.)

ಎಲ್ಲರೂ, ಎಲ್ಲ ಜಾತಿಯವರೂ, ಎಲ್ಲ ಧರ್ಮದವರೂ, ಮೂರ್ತಿ ಪೂಜೆಯನ್ನು ಮಾಡುವದುಂಟು. ಆದರೆ ಮೂರ್ತಿಗಳಲ್ಲಿ ಅನೇಕ ಪ್ರಕಾರಗಳುಂಟು. ಅವುಗಳಲ್ಲಿ ಕೆಲವು ಮನುಷ್ಯನಂತೆ, ಕೆಲವು ಪಶುಗಳಂತೆ, ಕೆಲವು ಪಕ್ಷಿಗಳಂತೆ, ಕೆಲವು ಪೃಥ್ವಿ ಸೂರ್ಯ ಚಂದ್ರ ಆಕಾಶಗಳಂತೆ, ಮತ್ತೂ ಕೆಲವು ಕಾಡುಗಲ್ಲುಗಳದ ಕಿದ್ದಂತೆ ಹೀಗೆ ಅನೇಕ ಪ್ರಕಾರದಿಂದ ಈ ಜಗತ್ತಿನ ಜನರೆಲ್ಲ ಮೂರ್ತಿಗಳನ್ನು ಪೂಜಿಸುತ್ತ ಬಂದಿರುವರು. ಇದಲ್ಲದೆ ಮೂರ್ತಿಗಳನ್ನು ಕೆಲವರು ಬಂಗಾರದಿಂದ, ಕೆಲವರು ಬೆಳ್ಳಿಯಿಂದ, ಬೇರೆ ಕೆಲವರು ಕಲ್ಲಿನಿಂದ, ಮತ್ತೆ ಕೆಲವರು ಮಣ್ಣಿನಿಂದ, ಉಳಿದ ಕೆಲವರು ಕಟ್ಟಿಗೆಯಿಂದ, ಮತ್ತೂ ಕೆಲವರು ಹಿತ್ತಾಳಿ ತಾಮ್ರ ಮೊದಲಾದ ಧಾತುಗಳಿಂದ ಮಾಡಿಕೊಂಡು ಜಗುಲಿಯ ಮೇಲಾಗಲೀ

ಗುಡಿಯಲ್ಲಾಗಲೀ ಇಟ್ಟು ಪೂಜಿಸುವರು. ಇವೆಲ್ಲವು ಅವರವರ ವಿಚಾರ, ಅವರವರ ಬುದ್ಧಿ, ತರ್ಕಜ್ಞಾನಗಳ ಮೇಲಿಂದಲೇ ಹುಟ್ಟಿದಂಥವುಗಳು. ಇವೆಲ್ಲವುಗಳೂ ಅವರವರ ಮತದಂತೆ ಅವರವರಿಗೆ ಶ್ರೇಷ್ಠವೆನ್ನ ಬೇಕಾಗಿದೆ.

ಬೆಳ್ಳಿ, ಬಂಗಾರ, ತಾಮ್ರ, ಹಿತ್ತಾಳಿ ಮೊದಲಾದ ಬೆಲೆಯುಳ್ಳ ಧಾತುಗಳಿಂದ ಮೂರ್ತಿಗಳನ್ನು ಮಾಡಿದರೆ ಹೊಟ್ಟೆಗಿಲ್ಲದಾಗ ಮಾರಿ ತಿನ್ನುವ ವಿಚಾರವೇ ಬರಬಹುದು. ತುಡುಗರು ಅವುಗಳನ್ನು ಎತ್ತಬಹುದು. ಹೀಗಾಗಿ ಭಕ್ತಿಯು ಕೆಡುವದು. ಯಾವಾಗಲೂ ಅವುಗಳ ಜೋಪಾನದ ಚಿಂತೆಯಾಗುವದು. ದೇವರ ಮೂರ್ತಿ ಎಂಬ ಭಾವ ನೆಯುಳಿದು ಜಗುಲಿಯ ಮೇಲಿಡುವ ವಸ್ತು ಒಡವೆಗಳೆಂಬ ಭಾವವು ಬರುವದು. ಅದಕ್ಕಾಗಿಯೇ ಮಹಾತ್ಮರಾದ ಬಸವಣ್ಣನವರು "ಅರಗು ತಿಂದು ಕರಗುವ ದೈವವ, ಉರಿಯ ಕಂಡರೆ, ಮುರುಟುವ ದೈವವ ನೆಂತು ಸರಿ ಎಂಬೆನಯ್ಯಾ? ಅವಸರ ಬಂದರೆ ಮಾರುವ ದೈವವನೆಂತು ಸರಿ ಎಂಬೆನಯ್ಯಾ? ಅಂಜಿಕೆ ಬಂದರೆ ಹೂಳುವ ದೈವವನೆಂತು ಸರಿ ಎಂಬೆನಯ್ಯಾ? ಸಹಜ ಭಾವ ನಿಜೈಕ್ಯ ಕೂಡಲಸಂಗಮದೇವನೊಬ್ಬನೇ ದೇವ" "ಮಾರಿಕವ್ವೆಯನೆಂತು ಕೊರಳಲ್ಲಿ ಕಟ್ಟಿಕೊಂಬರು? ಸಾಲ ಬಟ್ಟರೆ ಮಾರಿಕೊಂಡು ತಿಂಬರು. ಸಾಲ ಬಟ್ಟರೆ ಒತ್ತೆಯ ನಿಟ್ಟು ಕೊಂಬ ರಯ್ಯಾ. ಮಾರು ಹೋಗ, ಒತ್ತೆ ಹೋಗ ನಮ್ಮ ಕೂಡಲಸಂಗಮ ದೇವ" ಈ ಪ್ರಕಾರ ಒಳ್ಳೇ ಸರಸಾಗಿ ಹಾಡಿದ್ದಾರೆ. ಇದರ ಮೇಲಿಂದ ಮೂರ್ತಿಗಳನ್ನು ಏತರಿಂದ ಮಾಡಬೇಕೆಂಬದು ಹೊಳೆಯುವದು. ಆದರೆ ಮೂರ್ತಿ ಬೇಡೆಂದು ಅವನು ಹೇಳೇ ಇಲ್ಲ. ಮೂರ್ತಿಗಳು ಕಲ್ಲಿ ನಿಂದ ಮಾಡಿದರೆ ಬಹಳೇ ಒಳ್ಳೇದಲ್ಲವೇ? ನೀರು ಹಾಕಿದರೆ ನೆನೆದು ಒಡೆಯುವದಿಲ್ಲ, ಕೊಳೆಯುವದಿಲ್ಲ, ಕೆಡುವದಿಲ್ಲ. ಕಟ್ಟಿಗೆಯ ಮೂರ್ತಿ ಗಳು ತೀವ್ರ ಕೆಡುವವು. ಅಲ್ಲದೆ ನೀರು ಹಾಕಿದರೆ ನೆನೆಯುವವು, ಹುಳ ಹತ್ತುವವು, ಕೊಳೆಯುವವು. ಇದರ ಮೇಲಿಂದ ಕಲ್ಲಿನ ಮೂರ್ತಿ ಗಳು ಒಳ್ಳೇ ಸುರಕ್ಷಿತವೆಂದು ಗೊತ್ತಾಗುವದು. ಇವುಗಳಿಗೆ ಯಾರದೂ ಯಾವ ತರದ್ದೂ ಅಂಜಿಕೆಯಿಲ್ಲ.

ಸಿಕ್ಕ ಸಿಕ್ಕ ಆಕೃತಿಯ ಮೂರ್ತಿಗಳನ್ನು ಮಾಡುವದುಂಟು. ಅವುಗಳೂ ಕೂಡ ಸರಿದೋರುವದಿಲ್ಲ. ಮನುಷ್ಯನ ಆಕೃತಿಯನ್ನು ಮಾಡಿ

ದ್ದಾದರೆ ಕೈಕಾಲು ಮೊದಲಾದ ಅವಯವಗಳು ಮುರಿದು ಭಿನ್ನವಾ ಗುವ ಅಂಜಿಕೆ ಬಹಳೇ ಇರುವದು. ದೇವರ ಮೂರ್ತಿಗಳು ಮುರಿ ಯಬಾರದೆಂದು ನಾವು ಎಚ್ಚರು ಪಡಬೇಕಾಗುವದು. ಮುರಿದರೆ ನೆಟ್ಟಗೆ ಮಾಡಿಸಬೇಕು. ಆಗದಿದ್ದರೆ ಹೊಸದನ್ನೇ ಸ್ಥಾಪಿಸಬೇಕು. ಹೀಗಾಗಿ ಭಕ್ತಿ ಮಾಡಲಿಕ್ಕೆ ಅವೂ ಸರಿಯಾದ ಸಾಧನೆಯೆಂದು ತೋರುವದಿಲ್ಲ. ಮೇಲಿಂದಮೇಲೆ ಹೊಸ ಮೂರ್ತಿಗಳನ್ನು ಇಡುವದರಿಂದ ಮೊದಲಿನ ಮೂರ್ತಿಯು ಸತ್ತಿತೆಂದು ಸಹ ಕಲ್ಪನೆ ಬರುವದು. ಹೊಸದರ ಮೇಲೆ ಅಷ್ಟೊಂದು ಭಕ್ತಿ ಕೂಡ್ರಲಿಕ್ಕಿಲ್ಲ. ಹೀಗಾಗಿ ಪೂಜೆ ಧ್ಯಾನಗಳಲ್ಲಿ ಕೊರ ತೆಯಾಗುವದು ಸಹಜ. ಕಾರಣ ಮನುಷ್ಯನ ಆಕೃತಿ, ಪಶುಪಕ್ಷಿಗಳ ಆಕೃತಿಯ ಮೂರ್ತಿಗಳು ಸುರಕ್ಷತೆಗೆ ಯೋಗ್ಯ ಕಾಣುವದಿಲ್ಲ. ಇದೂ ಅಲ್ಲದೆ ಮನುಷ್ಯ, ಪಶು, ಪಕ್ಷಿ ಮೊದಲಾದವುಗಳ ಶಕ್ತಿ ಬುದ್ಧಿ ಯೋಗ್ಯ ತೆಗಳು ನಮಗೆ ತಿಳಿದವುಗಳಾಗಿರುವವು. ಪಶು ಪಕ್ಷಿಯಾಕೃತಿಯ ಮೂರ್ತಿಗಳನ್ನು ಪೂಜಿಸಿದರೆ ದೇವರಲ್ಲಿ ಸರ್ವಜ್ಞತ್ವ, ಸರ್ವಶಕ್ತಿತ್ವ, ಸರ್ವವ್ಯಾಪಕತ್ವ, ಸಚ್ಚಿದಾನಂದತ್ವ, ಸರ್ವಾಂತರ್ಯಾಮಿತ್ವ ಮೊದಲಾದ ವುಗಳು ಮನಸ್ಸಿನಲ್ಲಿ ಬರುವದಿಲ್ಲ. ಯಾಕಂದರೆ ಪಶುಪಕ್ಷಿಗಳನ್ನು ನಾವು ನಿತ್ಯ ನೋಡುತ್ತೇವೆ. ಅವುಗಳ ಶಕ್ತಿಯು ನಮಗೆ ಗೊತ್ತು. ಆದಕಾರಣ ಮೇಲಿನ ಆ ಗುಣಗಳು ಇವುಗಳಲ್ಲಿ ಬರುವದಿಲ್ಲ. ಇವು ಗಳು ಬರದಿದ್ದರೆ ಭಕ್ತಿಗೆ ಪೂರ್ಣತ್ವ ಬರುವದಿಲ್ಲ. ಅದೇ ಪ್ರಕಾರ ಮನುಷ್ಯನ ಸ್ಥಿತಿಯಾದರೂ ಉಂಟು. ಇವನಲ್ಲಿಯೂ ಆ ಮೇಲಿನ ಗುಣಗಳನ್ನು ಕಲ್ಪಿಸಲಿಕ್ಕೆ ಬರುವದಿಲ್ಲ. ಯಾಕಂದರೆ ಇವನು ಅಲ್ಪಜ್ಞ, ಅಲ್ಪ ಶಕ್ತ, ಅಲ್ಪ ವ್ಯಾಪಕನಾಗಿರುವನು. ಆ ಗುಣಗಳು ಅವನಲ್ಲಿಯೂ ಕಲ್ಪಿಸಲಾಗುವದಿಲ್ಲ. ಕಲ್ಪಿಸಿದರೂ ಅದು ತಪ್ಪಾಗುವದು. ಆದಕಾರಣ ಮನುಷ್ಯ, ಪಶು, ಪಕ್ಷಿಗಳ ಆಕೃತಿಯ ಮೂರ್ತಿಗಳು ಕ್ಷೇಮಕರವಲ್ಲ, ಭಕ್ತಿ ಮಾಡಲು ಯೋಗ್ಯವೂ ಅಲ್ಲೆಂದು ತಿಳಿಯುತ್ತದೆ.

ಕೆಲವು ಮೂರ್ತಿಗಳು ಪೂಜೆಗೆ ಹಿತಕಾರಿಯಲ್ಲೆಂದು ಮೇಲೆ ವಿಶ ದವಾಗಿ ಹೇಳಿದ್ದಾಯಿತು. ಇನ್ನು ಸ್ಥಾವರಲಿಂಗ ಇಷ್ಟಲಿಂಗಗಳೆರಡು ಮಾತ್ರ ಉಳಿದಿವೆ. ಇವುಗಳಲ್ಲಿ ಯಾವದು ಒಳಿತೆಂಬುದನ್ನು ವಿಚಾರ ಮಾಡುವದು ಅತ್ಯವಶ್ಯಕವಾಗಿದೆ. ಲಿಂಗತತ್ವವು ಸ್ವಾಭಾವಿಕವಾದ ಭೂಮಿ ಸೂರ್ಯ ಚಂದ್ರ ಮೊದಲಾದ ದುಂಡಗಿನ, ಶಕ್ತಿಯುಳ್ಳ ಪದಾ

ರ್ಥಗಳ ಮೇಲಿಂದ ಹುಟ್ಟಿದ ಹಾಗೆ ತೋರುತ್ತವೆ. ಸ್ಥಾವರಲಿಂಗವು ಬಹು ಪೂರ್ವ ಕಾಲದ್ದು. ಮೊದಲು ಇಂದ್ರ, ವರುಣ, ಸೂರ್ಯ, ವಾಯು, ಚಂದ್ರ, ಭೂಮಿ ಮೊದಲಾದ ಸಾಧನೆಗಳ ಪೂಜೆಯು ಹೆಚ್ಚಾಗಿತ್ತು. ಮುಂದೆ ಬರಬರುತ್ತ ಈ ಸ್ಥಾವರಗಳನ್ನು ಮೇಲಿನ ತತ್ವದಂತೆ ಕಲ್ಪಿಸಿ ದೇವರೆಂದು ಪೂಜಿಸಹತ್ತಿದರು. ಭೂಮಿಯೇ ಈ ಸ್ಥಾವರಲಿಂಗದ ಉತ್ಪತ್ತಿಗೆ ಕಾರಣವಾದದ್ದು. ದೊಡ್ಡ ದೊಡ್ಡ ಭವ್ಯವಾದ ಸುಂದರವಾದ ಮಂದಿರಗಳನ್ನು ಕಟ್ಟಿಸಿ ಈ ಲಿಂಗಗಳನ್ನು ಸ್ಥಾಪಿಸಿದರು. ಆಗ ಅವುಗಳ ಪೂಜೆಗೆ ಜನರು ಮುಗಿ ಬೀಳಹತ್ತಿದರು. ಅದಕ್ಕಾಗಿ ಪೂಜಾರಿಗಳನ್ನು ನಿಯಮಿಸಿದರು· ಉತ್ಪನ್ನ ಹೆಚ್ಚಾಗಿ ಬೆಳೆಯಿತು. ಭಕ್ತಿಯನ್ನು ಮಾರುವ ಅಂಗಡಿಗಳಂತೆ ಈ ಗುಡಿಗಳು ಆದವು. ದೇವರಿಗೆ ನೈವೇದ್ಯ ಪೂಜೆ. ಧೂಪ, ದೀಪ, ತೆಂಗುಗಳನ್ನು ಅರ್ಪಿಸಬೇಕಾದರೆ ಕೆಲವು ದರ ( *Charges* ) ಗಳನ್ನು ಇಟ್ಟರು. ಪೂಜಾರಿಗಳು ಲಾಭ ಪಡೆಯುಹತ್ತಿ ಲಕ್ಷಾಧೀಶರಾಗಹತ್ತಿದರು. ಜನರು ಅವರ ಪಾದದ ಮೇಲೆ ಸಾಮು ಧೋಮು ಉದ್ದಕೆ ಬೀಳಹತ್ತಿದರು. ದೇವರಿಗಿಂತ ಪೂಜಾರಿಯ ಬಲವೇ ಬಲವಾಯಿತು. ಯಾವದನ್ನಾದರೂ ದೇವರಿಗರ್ಪಿಸಬೇಕಾದರೆ ಅವನ ತೃಪ್ತಿಯನ್ನು ಮೊದಲು ಮಾಡಿಯೇ ಮುಂದಿನ ಕಾರ್ಯ. ಅವರಿಗೆ ರಾಜರಿಗಿಂತಲೂ ಮಹತ್ವ ಬಂದಿತು. ಅವರ ಮೆರವಣಿಗೆ ಹೆಚ್ಚಾಯಿತು. ಇದಕ್ಕಾಗಿ ಸರಕಾರದವರು ಆಯಾ ಗುಡಿಗಳ ಉತ್ಪನ್ನದ ಮೇಲೆ ಕರ ( *Taxes* ) ಗಳನ್ನೂ ಸಹ ಕೂಡ್ರಿಸಿ ಲಾಭ ಪಡೆಯುವರು. ಹಿಂದೀ ಕಟ್ಟಿಗಳನ್ನು ಮಕ್ತೆ ಕೊಡುವಂತೆ ಕೆಲವು-ಗುಡಿಗಳನ್ನು ಮಕ್ತೆ ಕರಾರಿನಿಂದ ಮತ್ತೊಬ್ಬರಿಗೆ ಸಹ ಕೊಟ್ಟು ಲಾಭ ಪಡೆಯುವರು. ಇದೊಂದು ವ್ಯಾಪಾರದ ಕಂಪನಿಯೇ ಆಗಿ ಬಿಟ್ಟಿದೆ. ಭಕ್ತಿ ಜ್ಞಾನಗಳ ಲೇಶವೂ ಈ ಸ್ಥಾವರ ದೇವಸ್ಥಾನಗಳಲ್ಲಿ ಉಳಿದಿಲ್ಲೆಂದರೂ ಅಡ್ಡಿ ಇಲ್ಲ. ದೇವರೂ, ಗುಡಿಗಳೂ ಸಹ ಪಾರತಂತ್ರ್ಯದುರಿಯೊಳು ಸುಡುತ್ತಲಿವೆ. ಅವುಗಳನ್ನು ಬಲವಾದ ಕೀಲಿಗಳಲ್ಲೇ ಇಡಹತ್ತಿದರು. ಇದರ ಮೇಲಿಂದ ದೇವರುಗಳಿಗೂ ಸೆರೆಮನೆಯ ವಾಸವಾಯಿತೆಂದೆನಿಸುವದು. ಯಾವದಕ್ಕೂ ಯಾರಿಗೂ ರೊಕ್ಕವಿಲ್ಲದೆ ಒಳಗೆ ಬಿಡರು. ದೇವರ ಹತ್ತಿರ ಒಂದು ನಿಮಿಷ ಸಹ ಹೆಚ್ಚಿಗೆ ನಿಲ್ಲಗೊಡುವದಿಲ್ಲ. ಕತ್ತನ್ನು ಹಿಡಿದು ಒತ್ತಿಬಿಡುವರು. ಜಾತ್ರೆ ಕೇತ್ರೆಗಳನ್ನೂ ಮಾಡಿಸಹತ್ತಿದರು. ಪೂಜಾರಿಗಳು ಉತ್ಪನ್ನಿಗಾಗಿ ೩—೪ ಜಾತ್ರೆಗ

ಳನ್ನು ಒಂದೊಂದು ದೇವರಿಗೆ ಒಂದೇ ವರ್ಷದಲ್ಲಿ ಮಾಡಿಸಹತ್ತಿದರು. ಹೀಗಾಗಿ ಗುಡಿಗಳು ಭಕ್ತಿಯ ಸ್ಥಾನವೆನ್ನುವದು ಲೋಪವಾಗಿ ಸಂತೆ, ಬಜಾರಗಳಂತೆ ಪರಿಣಮಿಸಿ ಹೋಗಿರುವವು. ಇದರಿಂದ ಮತ್ತಷ್ಟು ಅನಾಚಾರಗಳಾದವು. ರೋಗದ ಬೀಜಗಳು ಇವುಗಳಿಂದಲೂ ಹುಟ್ಟಿ ಜನರನ್ನು ಕೊಲೆ ಮಾಡಹತ್ತಿದವು. ಇಂಥ ಸ್ಥಾವರ ದೇವರುಗಳಿಂದ ಜನರಿಗೆ ಯಾವ ಉಪಯೋಗವಿದೆ ಎಂಬುದನ್ನು ಯಾರಾದರೂ ಹೇಳ ಬಲ್ಲಿರಾ? ಗುಡಿಗಳಲ್ಲಿ ರೊಕ್ಕ, ನೈವೇದ್ಯ, ಮೊದಲಾದವುಗಳ ಸಲು ವಾಗಿ ಯಾವಾಗಲೂ ಬಡಿದಾಟಗಳೇ ಇರುವವು. ಈ ಗುಡಿಗಳಿಂದ ಅನಾಚಾರ, ರೋಗದ ಬೀಜ, ಜಗಳ, ಸಂತೆ, ದುಶ್ಚಟ, ದುಂದುಗಾರಿಕೆ ಮೊದಲಾದವುಗಳನ್ನೇ ಜನರು ತೆಗೆದುಕೊಳ್ಳಹತ್ತಿದರು. ದೇವರ ಉದ್ದೇ ಶವು ಭಕ್ತಿ ಜ್ಞಾನಗಳ ಸಲುವಾಗಿಯಲ್ಲವೇ? ಅದೆಲ್ಲ ಇವುಗಳಲ್ಲಿ ಸಿಗುವ ಶಕ್ಯವಿದೆಯೆ? ಹೀಗಿದೆ ಈ ಸ್ಥಾವರಗಳ ಗತಿ! ಪೂಜೆ ಧ್ಯಾನಗಳು ಮನಸ್ಸಿನ ಏಕಾಗ್ರತೆಗಾಗಿ, ಮನಸ್ಸಿನ ನಿರ್ಮಲತೆಗಾಗಿಯೇ ಇರುವವು. ಇದು ಮಾತ್ರ ಈ ಸ್ಥಾವರಗಳಲ್ಲಿ ಎಂದೂ ಸಿಗುವದಿಲ್ಲ. ಮತ್ತು ಈ ಸ್ಥಾವರಲಿಂಗ ತತ್ವವು ಅಷ್ಟೊಂದು ಪೂರ್ಣಾವಸ್ಥೆಗೆ ಒಂದೂ ಇಲ್ಲ.

ಇದಕ್ಕಾಗಿಯೇ ಬಸವಮಹಾನುಭಾವಿಯು ಇಷ್ಟಲಿಂಗದ ತತ್ವ ವನ್ನು ಸಮರ್ಥಿಸಿದ್ದಾನೆ. ಎರಡೂ ಲಿಂಗಗಳೂ ಆಕಾರದಲ್ಲಿ ಒಂದೇ ಇವೆ. ಆದರೆ ಇಷ್ಟಲಿಂಗದಲ್ಲಿ ಹೆಚ್ಚಿನ ತತ್ವಗಳು ಸಮಾವೇಶವಾಗಿವೆ. ಪೃಥ್ವಿಗೆ ಆಕಾಶವೇ ಹೊದಿಕೆಯಾಗಿರುವಂತೆ ಲಿಂಗಕ್ಕೆ ಕಂತೆಯನ್ನು ಕೂಡ್ರಿಸಿ ದ್ದಾರೆ. ಆಕಾಶದ ಬಣ್ಣ ಕರೇಮಸಕು ಕಾಣುವಂತೆ ಲಿಂಗದ ಬಣ್ಣವೂ ಕರೇದು ಇದೆ. ಕರೇಬಣ್ಣಗಳು ನೋಡಲಿಕ್ಕೆ ಬಹಳೇ ಹಿತವಾದವುಗಳು. ನೋಡಲು ಬೇಸರವೂ ಆಗುವದಿಲ್ಲ. ಏಕಾಂತದಲ್ಲಿ ಪದ್ಮಾಸನ ಹಾಕಿ ಕೊಂಡು ಸೂರ್ಯಚಂದ್ರರೆಂಬ ಕಣ್ಣುಗಳ ದೃಷ್ಟಿಯನ್ನು ಏಕೀಕರಿಸಿ ಮುಂದಿನ ಇಷ್ಟಲಿಂಗದ ಮೇಲೆ ಆ ನೋಟವನ್ನು ಹಾಕಿ ನೋಡುತ್ತ ಸಚ್ಚಿದಾನಂದನಾದ ಪರಮಾತ್ಮನ ಧ್ಯಾನವನ್ನು ಮಾಡಲು ಬಹು ಅನು ಕೂಲವು. ಆದರೆ ಇಷ್ಟಲಿಂಗವು ಸಾಕ್ಷಾತ್ ದೇವರಲ್ಲ. ಅದು ನಮ್ಮ ಆತ್ಮ ಲಿಂಗದ ಕುರುಹು ಮಾತ್ರ. ಆತ್ಮಲಿಂಗದ ಧ್ಯಾನ ಮಾಡಲಿಕ್ಕೆ ಬರಲಾರ ದ್ದಕ್ಕಾಗಿ ಈ ಇಷ್ಟಲಿಂಗವನ್ನು ಕಲ್ಪಿಸಿದ್ದಾಗಿದೆ. ಬರೇ ನೀರುಹಾಕಿ ತೊಳೆದು ವಿಭೂತಿ ಹಚ್ಚಿ, ಅದರ ತುಂಬ ಪತ್ರಿಗಳನ್ನು ಏರಿಸಿ ರುದ್ರಾಕ್ಷಿ

ಮಾಲೆಗಳನ್ನು ಹಾಕಿ ಕಣ್ಣುಮುಚ್ಚಿ ಶಿವ! ಶಿವ!! ಎಂದು ಗುಣು ಗುಟ್ಟುವದು ಇಷ್ಟಲಿಂಗ ಪೂಜೆಯ ಉದ್ದೇಶವಲ್ಲ. ಕುರುಡನಿಗೆ ಕೋಲು ಯಾವಪ್ರಕಾರ ನಡೆಯಲಿಕ್ಕೆ ಒಂದು ಸಾಧನವಾಗಿರುವದೋ ಅದೇ ಪ್ರಕಾರ ಆತ್ಮಲಿಂಗದ ಕಡೆಗೆ ಹೋಗಲು ನಮಗೆ ಈ ಲಿಂಗವು ನಿಜವಾದ ಸಾಧನವೇ ಹೊರತು ಬೇರೆ ಇಲ್ಲ. ನಮ್ಮ ಆತ್ಮಲಿಂಗವು ಹೃದಯಸ್ಥಾನದಲ್ಲಿದ್ದು ಈ ಪ್ರಕಾರ ವ್ಯಾಪ್ತವಾಗಿದೆ ಎಂದು ತಿಳಿಸುವ ಕುರುಹು ಇದಾಗಿದ. ಆದರೆ ಇದೇ ಆತ್ಮಲಿಂಗವಲ್ಲ.

ಆಧಾರ ಸ್ವಾಧಿಷ್ಠಾನ ಮಣಿಪೂರಕ ಅನಾಹತ ವಿಶುದ್ಧಿ ಆಜ್ಞೆ ಎಂದು ಆರುಚಕ್ರಗಳು ಈ ನಮ್ಮ ಬೆನ್ನು ಹುರಿಯಲ್ಲಿ ಇವೆ. ಅವುಗಳಲ್ಲಿ ನಾಗರಹಾವಿನಂತೆ ಒಂದು ನಾಡಿಯಿದೆ. ಅದು ನಿದ್ರೆಹೋಗಿದೆ. ಅದನ್ನು ಎಚ್ಚರಿಸಿದರೆ ನಮಗೆ ನಿಜವಾದ ಜ್ಞಾನವಾಗುತ್ತದೆ. ಅದಕ್ಕಾಗಿ ನಾವು ಪದ್ಮಾಸನವನ್ನು ಹಾಕಿಕೊಂಡು ಕರಿಯ ವಸ್ತುಗಳನ್ನು ಮೇಲೆ ಹೇಳಿದ ಪ್ರಕಾರ ನೋಡುತ್ತ ಏಕಾಗ್ರತೆಯಿಂದ ಕುಳಿತರೆ ಆ ಸುಷುಮ್ನಾ ನಾಡಿಯು ಎಚ್ಚತ್ತು ತಲೆಯಲ್ಲಿ ಇರುವ ಬ್ರಹ್ಮರಂಧ್ರದಲ್ಲಿ ಸೇರಹತ್ತಲು ಕೋಟಿ ಸೂರ್ಯರು ಉದಿಸಿದಷ್ಟು ಪ್ರಕಾಶ ಬೀಳುವದಂತೆ. ಆವಾಗ್ಗೆ ಆದ ಆನಂದ ಸುಖಗಳಿಗೆ ಪಾರಾವಾರ ಅಂತಗಳೇ ಇರುವದಿಲ್ಲವಂತೆ ಪ್ರತಿಯೊಬ್ಬನು ಪಡೆಯಬೇಕೆನ್ನುವ ಹಿರಿದಾದ ಸುಖವೆಂದರೆ ಇದೇ. ಅಂತೆಯೇ ಇದಕ್ಕೇ ಕೆಲವರು ಅರಿವು ಎನ್ನುವರು. ಕೆಲವರು ಅನುಭವವೆನ್ನುವರು. ಕೆಲವರು ಆತ್ಮಜ್ಞಾನವೆನ್ನುವರು. ಕೆಲವರು ಶಿವ-ಜೀವೈಕ್ಯವೆನ್ನುವರು. ಕೆಲವರು ಜೀವಾತ್ಮ- ಪರಮಾತ್ಮರ ಸಂಯೋಗವೆನ್ನುವರು. ಮೋಕ್ಷವೆನ್ನುವರು. ಆದರೆ ಇವೆಲ್ಲವುಗಳೂ ಒಂದೇ. ಅಷ್ಟೇ ಸುಖಗಳನ್ನು ಕೊಡುವಂಥವುಗಳು. ಶಬ್ದಗಳೇ ಬೇರೆಯಲ್ಲದೆ ಮತ್ತೇನೂ ಇಲ್ಲ. ಇದೇ ಇಷ್ಟಲಿಂಗದಿಂದ ಸ್ಥಾಪಿಸಲ್ಪಡುವ ಉಚ್ಚಧ್ಯೇಯವು.

ಏಕಾಂತ ವಾಸವು ಪ್ರತಿಯೊಬ್ಬನಿಗೆ ಅವಶ್ಯವು. ಇಷ್ಟಲಿಂಗ ಪೂಜೆಯಿಂದ ಏಕಾಂತ ವಾಸವು ಲಭಿಸುವದು. ತಾನು ಹೋದಲ್ಲಿ ಈ ಲಿಂಗವನ್ನು ತೆಗೆದುಕೊಂಡು ಹೋಗಿ ನಿತ್ಯ ಸಾಧನೆಗಳನ್ನು ಮಾಡಲು ಬರುವದು. ಇದರಿಂದ ನೇಮವು ಕೆಡುವದಿಲ್ಲ. ಕೆಲ ಪರದೇಶೀಯರು ಸುಣ್ಣದ ಗೋಡೆಯ ಮೇಲೆ ಕರೇ ಬಣ್ಣದಿಂದ ದುಂಡಗಿನ ಗುರ್ತನ್ನು ಮಾಡಿ ಪದ್ಮಾಸನ ಹಾಕಿಕೊಂಡು ನೋಡುತ್ತ ಕೂಡ್ರುವರಂತೆ. ಆದರೆ ಹೋದಲ್ಲಿ

ಬಂದಲ್ಲಿ ಸುಣ್ಣದ ಗೋಡೆ ಕರೇ ಗುರ್ತಗಳಿಲ್ಲಿ ಬರಬೇಕು? ಆದರೆ ಹೋದಲ್ಲಿ ಬಂದಲ್ಲಿ ಇಷ್ಟ ಲಿಂಗವನ್ನು ಧರಿಸಿ ಮೇಲೆ ಹೇಳಿದಂತೆ ಧ್ಯಾನಾದಿಗಳನ್ನು ಮಾಡಲಿಕ್ಕೆ ಬರುವದಲ್ಲವೇ? ಅದಿರಲಿ. ಆದರೆ ನಮ್ಮ ವೀರಶೈವರ ಇಷ್ಟಲಿಂಗದ ತತ್ವ ವಿಷಯವು ಬಹಳ ಉದಾತ್ತವಾದುದೂ, ಉಚ್ಚವಾದುದೂ, ಯೋಗ್ಯವಾದುದೂ, ಸುಲಭವಾದುದೂ, ಗೊಂದಲ-ಜಗಳಗಳಿಲ್ಲದೂ, ಮನಸ್ಸನ್ನು ನಿರ್ಮಲಗೊಳಿಸುವಂಥದೂ, ಯಾವ ಅನಾಚಾರ ದುಷ್ಟಟಗಳಿಗೆ ಆಸ್ಪದಕೊಡಲಾರದಂಥದೂ, ಭಕ್ತಿ-ಜ್ಞಾನಗಳ ಸಮನ್ವಯುವನ್ನು ಮಾಡುವಂಥದೂ ಆಗಿದೆಂಬುದು ನಿಃಸಂದೇಹವಾದದ್ದು.

ಆದರೆ ಈಗಿನ ನಮ್ಮವರು ಇದರ ಅರ್ಥ ತಿಳಿಯುವದಕ್ಕಾಗಿ ಸಿಕ್ಕಂತೆ ತೊಳಲಾಡುವರು. ಕೆಲವರು ಈ ಇಷ್ಟಲಿಂಗ ಹೋದರೆ ಜೀವವು ಈ ಶರೀರ ಬಿಡುವದೆಂದು ಅನೇಕ ಪೌರಾಣಿಕ ಕಥೆಗಳನ್ನು ಹೇಳುವರು. ಅಪ್ಪಿ ತಪ್ಪಿ ಈ ಲಿಂಗವು ಕಳೆದರೆ, ಇಲ್ಲವೆ ನಾಶವಾದರೆ ತೀರಿಹೋಯಿತು. ಕೆಲವರು ಉಪವಾಸ ಕೂಡ್ರುವರು. ಕೆಲವರು ಪ್ರಾಣಗಳನ್ನು ಕಳಕೊಳ್ಳಲಿಕ್ಕೂ ಯತ್ನಿಸುವರು. ಹೀಗೆ ಮಾಡುವದರಿಂದ ಆತ್ಮಲಿಂಗದ ಹತ್ಯಮಾಡಿದಂತಾಗುವದಿಲ್ಲವೇ? ನಾವು ಕಟ್ಟಿಕೊಂಡ ಲಿಂಗ ಕಳೆದರೆ ಮತ್ತೊಂದನ್ನು ಕಟ್ಟಿಕೊಂಡು ಸಾಧನೆಗಳನ್ನು ಮಾಡಬೇಕೆಂಬ ವಿಚಾರವೂ ಕೂಡ ಕೆಲವರ ತಲೆಯುಲ್ಲಿ ಬರಬಾರದೆಂದರೆ ಇದೆಂಥ ಹೆಡ್ಡತನ? ವಿಚಾರಿಸಿರಿ. ಕುರುಡನ ಕೈಯಲ್ಲಿರುವ ಕೋಲು ಮುರಿದರೆ ಅವನು ಸತ್ತೇ ಬಿಡುವನೇ? ಇದರಂತೆ ಇಂಥವರ ವಿಚಾರವಿರುವದು. ಅವನು ಕೋಲು ಮುರಿದರೆ ಹೊಸದೊಂದು ಕೋಲನ್ನು ತೆಗೆದುಕೊಂಡು ತನ್ನ ಕಾರ್ಯವನ್ನು ಮಾಡುವದಿಲ್ಲವೇ? ಅದರಂತೆ ಅಪ್ಪಿ ತಪ್ಪಿ ಲಿಂಗನಾಶವಾದರೆ ಬೇರೊಂದು ಲಿಂಗವನ್ನು ಪಡೆದು ಸಾಧನೆಯುನ್ನು ಮಾಡಿ ಈ ಶ್ರೇಷ್ಠ ಜನ್ಮದ ಸಾರ್ಥಕವನ್ನು ಮಾಡಿಕೊಳ್ಳದೆ ಸಾಯುವದೆಂದರೆ ಎಂಥ ಅಜ್ಞತನವು ವಿಚಾರಿಸಿರಿ?

“ಶ್ರೀಗುರುಲಿಂಗ ದೇವನು ತನ್ನ (೧) ಕರಸ್ಥಲದಲ್ಲಿ ಮಹಾಲಿಂಗವನೆನ್ನ ಕರಸ್ಥಲದಲ್ಲಿ ಮೂರ್ತಿಗೊಳಿಸಿದ. ಎನ್ನ ಕರಸ್ಥಲದಲ್ಲಿದ್ದ ಮಹಾಲಿಂಗವನು ಎನ್ನ (೨) ಮನಸ್ಥಲದಲ್ಲಿ ಮೂರ್ತಿಗೊಳಿಸಿದ. ಎನ್ನ ಮನಸ್ಥಲದಲ್ಲಿದ್ದ ಮಹಾಲಿಂಗವನು ಎನ್ನ (೩) ಭಾವಸ್ಥಲದಲ್ಲಿ ಮೂರ್ತಿ

ಗೊಳಿಸಿದ. ಎನ್ನ ಭಾವಸ್ಥಲದಲ್ಲಿದ್ದ ಮಹಾಲಿಂಗವನು ಎನ್ನ (೪) ಜ್ಞಾನಸ್ಥಲದಲ್ಲಿ ಮೂರ್ತಿಗೊಳಿಸಿದ. ಎನ್ನ ಜ್ಞಾನಸ್ಥಲದಲ್ಲಿದ್ದ ಮಹಾ ಲಿಂಗವನು ಎನ್ನ (೫) ಸರ್ವಾಂಗದೊಳ ಹೊರಗೆ ತೆರಹಿಲ್ಲದಳವಡಿ ಸಿದ ನಮ್ಮ ಶ್ರೀಗುರು ಲಿಂಗದೇವ ಚನ್ನಮಲ್ಲಿಕಾರ್ಜುನಾ" ಎಂದು ಶಿವ ಶರಣೆಯಾದ ಮಹಾದೇವಿಯಕ್ಕನು ಲಿಂಗಗಳಲ್ಲಿ ಪ್ರಕಾರಗಳನ್ನು ಹೇಳಿದ್ದಾಳೆ. ಒಂದು ಲಿಂಗದಿಂದ ಮತ್ತೊಂದು ಲಿಂಗಕ್ಕೆ ಏರುವ ಗತಿಯನ್ನು ತಿಳಿಸಿದ್ದಾಳೆ. (೧) ಇಷ್ಟಲಿಂಗ (೨) ಪ್ರಾಣಲಿಂಗ. (೩) ಭಾವ ಲಿಂಗ. (೪) ಆತ್ಮಲಿಂಗ, (೫) ಪರಮಾತ್ಮಲಿಂಗಗಳೆಂದು ಅನುಕ್ರಮವಾಗಿ ವಚನದಲ್ಲಿಯ ಲಿಂಗಗಳಾಗುವವು. ಹೊರಗೆ ಕಟ್ಟಿಕೊಳ್ಳುವದೇ ಇಷ್ಟ ಲಿಂಗ, ಇದರ ಸಹಾಯದಿಂದಲೇ ಪ್ರಾಣಲಿಂಗ, ಪ್ರಾಣಲಿಂಗದಿಂದಲೇ ಭಾವಲಿಂಗ, ಭಾವಲಿಂಗದಿಂದಲೇ ಆತ್ಮಲಿಂಗ, ಆತ್ಮಲಿಂಗದಿಂದಲೇ ಪರಮಾತ್ಮಲಿಂಗಕ್ಕೆ ಏರುತ್ತೇರುತ್ತ ಹೋಗುವದಾಗಿದೆ. ಪರಮಾತ್ಮ ಲಿಂಗಕ್ಕೆ ಹೋಗುವದೆಂದರೆ ಶಿವನೊಡನೆ ಐಕ್ಯನಾಗುವದೇ ಆಗಿದೆ. ಆದಕ್ಕೆ ಮೋಕ್ಷವೆಂದೆನ್ನುವರು. ಹೀಗದೆ ವೀರಶೈವರ ಲಿಂಗಾಂಗ ಸಾಮ ರಸ್ಯವು! ಬಹು ಸೂಕ್ಷ್ಮವಾಗಿ ಒಳ್ಳೇ ಸ್ವಾರಸ್ಯವಾಗಿ ಮಹಾದೇವಿ ಯಕ್ಕನವರು ಬಣ್ಣಿಸಿದ್ದಾರೆ. ಲಿಂಗ ಶಬ್ದವು ಒಳ್ಳೇ ವ್ಯಾಪಕವಾದದ್ದಾ ಗಿದೆ. ಅದು ಇಡೀ ಬ್ರಹ್ಮಾಂಡವನ್ನೇ ಸುತ್ತಿ ಬಿಟ್ಟಿದೆ ಆದಕ್ಕಾಗಿ ಲಿಂಗದ ಮಹತ್ವವು ವೀರಶೈವರಿಗೆ ಬಹಳೇ ಇದೆ. ಈ ಇಷ್ಟಲಿಂಗದಿಂದ ಎಲ್ಲಿಯ ವರೆಗೆ ಏರಲು ಬರುವದೆಂಬದು ತಿಳಿಯುವಂತೆ ಇದೆ.

ಸಾರಾಂಶವೇನಂದರೆ, ಮೂರ್ತಿಗಳು ಆವಶ್ಯಕ. ಆದರೆ ಎಲ್ಲ ಮೂರ್ತಿಗಳಲ್ಲಿ ಇಷ್ಟಲಿಂಗದ ಮೂರ್ತಿಯು ಉದಾತ್ತ ತತ್ವದ್ದೂ, ಉಚ್ಚ ಧ್ಯೇಯದ್ದೂ ಸುಲಭವಾದದ್ದೂ, ಯೋಗ್ಯವಾದದ್ದೂ, ಕ್ಷೇಮಕರವಾ ದದ್ದೂ, ದುರಾಚಾರ ದುಶ್ಚಟಗಳಿಂದ ದೂರವಾದದ್ದೂ, ಸ್ವತಂತ್ರವಾ ದದ್ದೂ, ಏಕಾಂತವಾಸವನ್ನು ಲಭಿಸಿ ಕೊಡುವಂಥಾದ್ದೂ, ಮನಸ್ಸಿನ ಏಕಾಗ್ರತೆಗೆ ಆಸ್ಪದವಾದದ್ದೂ ಈ ಎಲ್ಲ ಗುಣಗಳುಳ್ಳದ್ದೂ ಇದೆ. ಅಂದ ಮೇಲೆ ಸ್ಥಾವರಲಿಂಗಕ್ಕಿಂತಲೂ ಇಷ್ಟ ಲಿಂಗದ ವಿಚಾರಗಳು ಮೇಲಿನ ವೆಂದು ಏಕೆ ಹೇಳಬಾರದು?)

# ರಾಘವಾಂಕನ ಪಾತ್ರಸೃಷ್ಟಿ.

(ವೇ. ಮೂ. ಎಂ. ಶರಭಯ್ಯ ಕನ್ನಡ ಪಂಡಿತ ಬೋರ್ಡ್ ಹೈಸ್ಕೂಲು.
ಮು. ಎಮ್ಮಿಗನೂರು ಜಿ॥ ಬಳ್ಳಾರಿ)

ಹಿಂದಿನಿಂದ ಸಾಗಿ ಮುಗಿದುದು.

---

ಹರಿಶ್ಚಂದ್ರನು ಮೃಗಯಾ ಪ್ರಸಂಗದಿಂದ ಗುರು ವಶಿಷ್ಠರಾಶ್ರಮಕ್ಕೆ ಬಂದಾಗ,

ತಿಳಿಗೊಳನಬಳಸಿ ನಳನಳಿಸಿ ಬೆಳೆವೆಳವಮಾವು ।
ಗಳತಳದ ಮಲ್ಲಿಕಾಮಂಟಪದ ತಣ್ಣೆಳಲ ।
ತೆಳುಗಾಳಿಯೊಳು ಪುಣ್ಯವಪ್ಪ ಪುಳಿನಸ್ಥಳದ ಮೇಲಶೋಕೆಯ ತರುವಿನ॥
ತಳಿರ ಪೊಂಗಲ ಗದ್ದುಗೆಯೊಳೋಲಗಂಗೊಟ್ಟು
ಬಳಸಿಬಂದೆಡಬಲದೊಳಿಪ್ಪ ಮುನಿಗಳ ಕೂಡೆ
ನಲವಿನಿಂ ನುಡಿವ ಪಶುಪತಿಯಂತಿರ್ದ ಮುನಿನಾಥ ಕಣ್ಗೆಸೆದಿರ್ದನು॥

ಕಂಡಕಂಡ ಕಡೆ ಹರಡಿದ ಪ್ರಕೃತಿಯ ಸಹಜ ಸೌಂದರ್ಯವನ್ನು ಸೂರೆಗೊಂಡು ಕ್ರಮವಾಗಿ ಸೇರಿಸಿ ವಾಚಕರ ಮನಸ್ಸನ್ನು ಪುಣ್ಯಮಪ್ಪ ಅರಣ್ಯದ ತಣ್ಣನ ವಾತಾವರಣದಲ್ಲಿ ಸಂಚಾರ ಮಾಡಿಸಿ ಪಶುಪತಿಯಂತಿರ್ದ ಮುನಿನಾಥನನ್ನು ನೋಡಿಸಿದ ರಾಘವಾಂಕನ ಪ್ರತಿಭೆಯನ್ನು ಕೊಂಡಾಡತಕ್ಕದ್ದು.

ನೀತಿ ಬಲಿದುದೊ ಶಾಂತಿ ರೂಪಾಯ್ತೊ ಸದ್ಗುಣ ।
ವ್ರಾತವೇ ಮುನಿಯಾಯ್ತೊ ಮುಕ್ತಿ ಜಡೆವೊತ್ತುದೋ ।
ಭೂತದಯೆ ವಲ್ಕಲಾಂಚವಾಂತುದೋ ಪುಣ್ಯವೆಳಸಿಭಸಿತವಸಿಟ್ಟುದೋ ।
ನೂತನಶ್ರುತ್ಯರ್ಥನುಡಿಗಲಿತುದೋ ಘನ ।
ಸ್ವಾತಂತ್ರವೃತ್ತಿ ಗೋಚರಿಸಿತೋ ಎಂಬ ।
ಚಾತುರ್ಯದಿಂದಿರ್ದ ಮುನಿನಾಥನಂ ಕಂಡ ಹರುಷದಿಂ ಭೂನಾಥನು॥

ರಾಘವಾಂಕನ ಪುಣ್ಯ ಮೂರ್ತಿ ವಸಿಷ್ಠನ ಭಾವಚಿತ್ರವಿದು. ನಾವು ಹುಡುಕಲೆಳಿಸುವ ಸಮಸ್ತ ಸದ್ಗುಣಗಳಿಗೆ ಗನಿ ಈ ಬ್ರಹ್ಮಋಷಿ. ಇನ್ನು

ಆವನನ್ನು ವರ್ಣನೆಗೊಳಪಡಿಸುವುದೆಂದರೆ ಆಕಾಶದ ಹೂವಿಗೆ ಕೈ ನೀಡಿದಂತೆ.

ಹರಿಶ್ಚಂದ್ರನು ನುತಿಸಲು ಪ್ರಸನ್ನಾತ್ಮನು.

ವ---ನೀನೆತ್ತಲ್! ಈ ವಿಪಿನವೆತ್ತಲ್! ಈ ವನಕೆ ನೀನೇನು ಕಾರಣ ಬಂದೆ ಮಗನೆ! ಹೇಳ್.

ಹ---ಖಗಮೃಗದ ಕಾಟಕ್ಕವನೀಜನಂ ಸೈರಿಸಲಾರದೆ ಮೊರೆಯಿಡೆ ಕೇಳ್ದು ಬೇಂಟೆಯ ಸುಮ್ಮಾನಕ್ಕೆ ಬಂದೆನ್.

ತ್ರಿಕಾಲೋಚಿತ ಜ್ಞಾನಿಯು, ಕೌಶಿಕನು ಕಾಡಲಿಕ್ಕಾರಂಭಮಾಡಿದುದನ್ನೂ ಅರಸನಿಗೆ ಮುಂದೆ ಬರಲಿರುವ ಕೇಡುಗಳನ್ನೂ ಧ್ಯಾನದಿಂದ ತಿಳಿದು ಚಿಂತಿಸಿ.

ವ---ಮಗನೆ! ಎನ್ನನೊಲುವಡೆ, ಕುಲಾಚಾರವುಂ ಬಿಡದಿರ್ಪಡುನ್ನತಿಕೆ ಬೇಹಡೆ, ಉತ್ತಮ ಕೀರ್ತಿ ಕೆಡದಿಹಡೆ, ನನ್ನಿ ಉಳಿವಡೆ ವಿಶ್ವಾಮಿತ್ರನಾಶ್ರಮಕ್ಕೆ ಮರೆದು ಪೋಗದಿರು. ಗನ್ನದಿಂ ಮರಹಿಕ್ಕಿ ಕೊಂಡೊಯ್ದು ಬಳಿಕ ಮುನಿ ಬನ್ನಬಡಿಸಿಯೆ ಕಾಡಿದಪನ್. ಅರಿದಿರ್.

ಉಪದೇಶವು ಬಹು ಸಂಗ್ರಹವಾಗಿದೆ. ಅದರಲ್ಲಿ ಉಪದೇಶದ ಸಾರವೆಲ್ಲಾಯಿದೆ. ಹರಿಶ್ಚಂದ್ರನಂತಿರಲಿ ಸಾಮಾನ್ಯನೀತಿಜ್ಞರಿಗೂ ಇದಕ್ಕೂ ಹೆಚ್ಚು ಬೇಡ. 'ವಿಶ್ವಾಮಿತ್ರನಾಶ್ರಮಕ್ಕೆ ಮರೆದಾದೊಡಂ ಪೋಗದಿರು' ಕಟ್ಟಪ್ಪಣೆ. 'ಮರೆದು' ಇದರಲ್ಲಿ ತಿರುಳಿದೆ. ಸ್ವಾರಸ್ಯವಿದೆ. ವಿಷಯ ಸಂಗ್ರಹವಿದೆ. ಗುರುವಿನ ಕಟ್ಟಪ್ಪಣೆಯ, ಗುರುವಿನ ಅವ್ಯಾಜ ಪ್ರೇಮದ, ಮುಂದುಂಟಾಗುವ ವಿಪತ್ತಿನ ಘೋರ ಪರಿಣಾಮದ, ವಿಶ್ವಾಮಿತ್ರನ ಕಠಿಣ ಸ್ವಭಾವದ ಸೂಚನೆಯು 'ಮರೆದು' ಎಂಬುದರಲ್ಲಡಗಿದೆ. ಶಿಷ್ಯರಹಿತ ಚಿಂತನೆಯೇ ಗುರುಗಳಾದವರ ಮುಖ್ಯ ಕರ್ತವ್ಯವೆಂದು ವಸಿಷ್ಠರು ತಮ್ಮ ವರದ ವಾಣಿಯಿಂದ ಈಗಿನ ಶಿಷ್ಯವಿತ್ತಾಪಹಾರಕರಾದ ಗುರುವರ್ಗದವರಿಗೆ, (ಶಿಷ್ಯವಿತ್ತಾಪಹಾರಕ ಗುರುಗಳಿರುವಂತೆ ಗುರುಸ್ವತ್ತಾಪಹಾರಕ ಶಿಷ್ಯರಿಗೆ ಈ ಜಗತ್ತಿನಲ್ಲಿ ವಿಶಾಲವಾದ ಸ್ಥಳವಿದೆ.) ಕೂಗಿ ಹೇಳುವಂತಿದೆ. ಅವರ ದಿವ್ಯೋಪದೇಶವಾಕ್ಯ. ವಸಿಷ್ಠರು ಹರಿಶ್ಚಂದ್ರನ ಮಡಲಲ್ಲಿ ಶ್ರೀಪಂಪಾಂಬಿಕಾಪತಿಯ ದರ್ಶನದ ಪುಣ್ಯವನ್ನು ಹಾಕಿ ಶಿಷ್ಯನನ್ನು ಕಳಿಸುವರು.

ಚಂದ್ರಮತಿ--ಕಥಾನಾಯಿಕೆ. ಚಕ್ರವರ್ತಿನಿ. ದೇವೀಪಟ್ಟಕ್ಕೇರಿದ ಮಹಾಸತಿವ್ರತೆ. ಕ್ಷತ್ರಿಯ ರಮಣಿಗೆ ಯೋಗ್ಯವಾದ ಧೈರ್ಯ ಸಾಹಸಗಳುಳ್ಳವಳೆನ್ನುವುದಕ್ಕೆ ತಕ್ಕಷ್ಟು ಉದಾಹರಣೆಗಳನ್ನು ಈ ಕಾವ್ಯದಲ್ಲಿ ಕಣ್ಣಾಣಬಹುದು.

ವರರೂಪಿನೊಳು ರತಿಗೆ ಹೊಣಕೆ ಸೌಭಾಗ್ಯದೊಳು। ಸಿರಿಗೆ ಹೊಯಿಕೈ ಜಾಣಿನೊಳು ವಾಣಿಗೆಕ್ಕೆ ಸ। ಚ್ಚರಿತದೊಳು ಸುರನದಿಗೆ ಸಾವ್ಯ ಪತಿಭಕ್ತಿಯೊಳರುಂಧತಿಗೆ ಸರಿ ಜಸದೊಳು॥ ಪರಮ ರೋಹಿಣಿಗೆ ಹೆಗಲಿಣೆ ಪುಣದೊಳ್ ಸ್ವಧಾ। ತರುಣಿಗೋರಗೆ ವಂದ್ಯತೆಯೊಳುಗಾಯತ್ರಿಗೊರೆ। ದೊರೆಯೆನಿಸಿ ಮೆರೆವಳು ಹರಿಶ್ಚಂದ್ರನೃಪನರಸಿ ಭೂತಳದೊಳು॥

ಈ ವರ್ಣನೆಯಲ್ಲಿ ಸತ್ಯವಿದೆ. ಸೌಂದರ್ಯವಿದೆ. ಕೇಶಪಾಶಹೀಗಿತ್ತು ಮುಖಹಾಗಿತ್ತು ಎಂದು ಒಂದೊಂದೇ ಅಂಗೋಪಾಂಗಗಳನ್ನು ವಿಸ್ತಾರವಾಗಿ ವರ್ಣಿಸುವುದಕ್ಕಿಂತ ಹೀಗೆ ವರ್ಣಿಸುವುದರಲ್ಲಿ ರೂಪಗುಣ ಸಂಪತ್ತಿ, ಸಹಜ ಸೌಂದರ್ಯ, ಕವಿಯ ಸಂಗ್ರಾಹಕ ಶಕ್ತಿ, ವರ್ಣಿತ ವ್ಯಕ್ತಿಯ ಸತ್ಯಪರಿಚಯ, ವಾಚಕರ ಮನಸ್ಸಿನ ಮೇಲೆ ಪ್ರತಿಬಿಂಬಿಸುತ್ತವೆ.

ವಿಶ್ವಾಮಿತ್ರನ ವನದಲ್ಲಿ ಹರಿಶ್ಚಂದ್ರನು ಹೆಂಡತಿಯ ತೊಡೆಯ ಮೇಲೆ ತಲೆಯಿಟ್ಟು ಮಲಗಿ ಭೀಕರ ಕನಸು ಕಂಡು ಬೆದರಿ ಎದ್ದ ಗಂಡನನ್ನು ಕಂಡು ಚಂದ್ರಮತಿಯು,—

'ಧುರದೊಳಂ ಭೂಭುಜರನಂಜಿಸುವ ನಡುಗಿಸುವಿ। ಕೊರಗಿಸುವ ಕೋಡಿಸುವ ಬಳುಕಿಸುವ ಜಳಕಿಸುವ। ಬಿರುದಂಕಮಲ್ಲ ನೀನಡುಗಲೇ ತಕ್ಕೆ ಹೇಳ್ . . . . " ಎಂದು ಮೆಲ್ಲನೆ ನುಡಿವಳಂತೆ.— ಬಿರುದಂಕಮಲ್ಲನಾದ ಗಂಡನು ಕನಸಿಗೆ ಹೆದರಿದನೆಂದರೆ ತನ್ನ ಗೌರವಕ್ಕೆ ಕಡಿಮೆಯೆಂದು ಅವಳ ಅಭಿಪ್ರಾಯ. ಪತಿಯು ಲೋಕೋತ್ತರ ಗುಣವುಳ್ಳವನಾಗಿ ಕುಂದದ ಉಜ್ವಲ ಕಾಂತಿಯಿಂದ, ಸಾಹಸದಿಂದ ಮೆರೆಯಬೇಕೆಂಬೇ ಆ ವೀರನಾರೀ ರತ್ನದ ಆಶೆ. ಯುದ್ಧವೀರರ ಹೃದಯಗಳು ಉಬ್ಬಿ ಮುಂದಿನ ಕದನದ ರೌದ್ರ ಪರಿಣಾಮವನ್ನು ಸಡ್ಡೆಮಾಡದಿರಬೇಕಾದರೆ ಭೇರಿಪಟಹಾದಿಗಳ ಶಬ್ದ, ಭಟ್ಟಂಗಿಗಳ ಉತ್ಸಾಹವಾಕ್ಯ ಕೆಲವು ಮಟ್ಟಿಗಾದರೂ ಸಹಾಯಕಾರಿಗಳಾಗುವವೆಂದಲ್ಲಿ 'ಬಿರುದಂಕಮಲ್ಲ' 'ನೀನಡುಗುವರೆ ಹೇಳ್' ಮುಂತಾದ ಪ್ರಿಯ ವೀರಪತ್ನಿಯ ಪೀರಾಲಾಪದ ನುಡಿಯಿಂದ ಭಯಗೊಂಡ ಹರಿಶ್ಚಂದ್ರನ ಹೃದಯದಲ್ಲಿ ದುಶ್ಶಕುನದ

ಭಯವು ಸ್ವಲ್ಪವಾದರೂ ಕಡಿಮೆಯಾಗಲಿಕ್ಕೆ ಸಾಕು. 'ಬಿರುದಂಕಮಲ್ಲ' 'ಮೆಲ್ಲನೆ' ಇವು ಅರ್ಥಪುಷ್ಟಿಯುಳ್ಳ ಮಂಜುಲ ಶಬ್ದಗಳು. ಒಂದರಲ್ಲಿ ಹರಿಶ್ಚಂದ್ರನ ಅಗ್ಗಳಿಗೆ ಚಕ್ರವರ್ತಿತ್ವದ ಸೂಚನೆ; ಮತ್ತೊಂದರಲ್ಲಿ ಚಂದ್ರಮತಿಯ ಪತಿಭಕ್ತಿ ಶೀಲವೂ ಸ್ತ್ರೀಯರ ಮೃದುತ್ವ, ವಿಧೇಯತೆ, ಸೌಜನ್ಯ ಮುಂತಾದ ಸುಗುಣಗಳೂ ಬೋಧೆಯಾಗುತ್ತವೆ.

ಮತ್ತು—'ಬಗೆವೊಡೀ ಕನಸು ಗುರುವಾಜ್ಞೆಯಂ ಮೀರಿತ। ಕ್ಕೊಗೆವಕೇಡಿಂಗೆ ಸೂಚನೆ ಮುನಿಯ ಬೇಡ ಮಂ। ತ್ರಿಗೆ ಮಗಂಗೆನಗೆ ರಾಜ್ಯಕ್ಕೆ ಚತುರಂಗ ಸೇನೆಗೆ ಸಕಲ ಭಂಡಾರಕೆ। ನಗರಕ್ಕೆ ಸರ್ವ ಪರಿವಾರಕ್ಕೆ ತೇಜ ದೇ। ಳ್ಗೆಗೆ ನಿನ್ನ ಹರಣಕ್ಕೆ ಕೇಡು ಬಂದಡೆ ಬರಲಿ। ಮಿಗೆ ಸತ್ಯಮಂ ಬಿಟ್ಟು ಕೆಡದಿರವನೀಶ ಕೈಮುಗಿದು ಬೇಡಿದೆನೆಂದಳು" ॥ ಚಂದ್ರಮತಿಯನ್ನು ಕೈಹಿಡಿದ ಅರಸನೇ (ಹರಿಶ್ಚಂದ್ರನೇ) ಭಾಗ್ಯಶಾಲಿ.

ಅರಣ್ಯದಲ್ಲಿ ವಿಶ್ವಾಮಿತ್ರನ ಮಾಯದ ಬೆಂಕಿಯು ಎಲ್ಲರನ್ನು ಸುಡ ಬರುತ್ತಿರಲು—

"ಮುಳಿದು ಮೊಗೆದೆಲ್ಲರಂ ಕೊಲ್ಲದಿಂದೆನ್ನನೊ। ಬ್ಬಳನೆ ಕೊಂದಪುದೆ ಭೂಭುಜ ನಿಮ್ಮ ಕೂಡೆ ಸಾ। ಯೊಳು ಜೀವಮಂ ಬಿಡುವುದುಚಿತವಲ್ಲಂ ಬಳಿಕ ಬಿಡುವುದತ್ಯಧಮತನವು ॥ ಎಳಸಿ ಮುತ್ತೈದೆತನದಲಿ ಮುಂದೆ ಹೋದಪೆಂ। ಕಳಿಸಿಕೊಡಬೇಕೆಂದು ವೈಯಿಕ್ಕಿ ಬೇಡಿಕೊಂಡಳು ಗಂಡನಂ ಚಂದ್ರಮತಿ ಪತಿವ್ರತೆಯರಾನಂದನಿಧಿ ಲಲ್ಲೆಗಱೆದು" ॥ 'ಪತಿವ್ರತೆಯರಾನಂದನಿಧಿ'—ಚಂದ್ರಮತಿಗೆ ಒಪ್ಪುವ ಹೆಸರು. ಬೆಂಕಿಯಲ್ಲಿ ಹಾರಿಕೊಳ್ಳುವ ಮೊದಲು ದೆಶೆಗಳಿಗೆ ದೈವಕ್ಕೆ ಕೈಮುಗಿವಳು. 'ಹರಿಶ್ಚಂದ್ರನೇ ಗಂಡನಾಗಲಿ; ಲೋಹಿತಾಶ್ವನೇ ಮಗನಾಗಲಿ; ನಮ್ಮಳಿಯ ಪಾಲಿಸುವ ವಿಶ್ವಾಮಿತ್ರ ನಿತ್ಯಗಲಿ' ಎಂದು ಮನಸ್ಸಿನ ಸಂಕಲ್ಪ. ಆಕೆಯ ಪವಿತ್ರ ಹೃದಯದಿಂದೂರೆಗೆ ಚಿಮ್ಮಿದ ಮಹಾ ಸಂಕಲ್ಪಕ್ಕೆ ಬೆಲೆ ಕಟ್ಟಲು ಸಾಧ್ಯವೇ? ಗಂಡ ಮಕ್ಕಳೆಂದರೆ ಮಧ್ಯಮ ವರ್ಗದ ಸ್ತ್ರೀಯರಲ್ಲಿ ತಕ್ಕಷ್ಟು ಪ್ರೇಮ ವಾತ್ಸಲ್ಯಗಳಿರುತ್ತವೆ. ಉತ್ತಮ ವರ್ಗದವರಲ್ಲಿ ಇದಕ್ಕೂ ಉತ್ಕೃಷ್ಟ. ಪತಿವ್ರತೆಯರಲ್ಲಿ ಅತ್ಯುತ್ಕೃಷ್ಟವಾದ ಪ್ರೇಮ ವಾತ್ಸಲ್ಯಗಳಿರುವವೆಂದು ಯಾರು ಹೇಳಬೇಕಾದುದೇ ಅನವಸರ. ಒಂದು ಮಾತಿನಿಂದ ಚಂದ್ರಮತಿಯು ಪತಿವ್ರತೆಯರಿಗಿಂತ ಮಿಗಿಲಾಗಿ 'ದೇವಿ' ಪದವಿ ಪಡೆಯುತ್ತಾಳೆ. ಆ ಮಾತು 'ನಮ್ಮಳಿಯ ಪಾಲಿಸುವ ವಿಶ್ವಾಮಿತ್ರ

ನಿತ್ಯನಾಗಲಿ' ಎಂಬುದು. ಇದು ದೇವಿ ಬಾಯಿಂದ ಬಂದ ಕೂಡಲೇ ವಾಚಕರು ಸಾನಂದಾಶ್ಚರ್ಯಗಳಿಂದ ಸ್ವೈಮರೆತಂತಾಗಿ 'ಅಮ್ಮಾ, ನೀ ನಿದ್ದ ನಾಡು ಪುಣ್ಯದ ಬೀಡು' ಎಂದು ಉದ್ಗಾರ ಮಾಡಲು ಹಿಂದೆ ಗೆಯುವರೇನು ?

ಯಾರೇ ಆಗಲಿ ಬಾಯಿಯಿಂದ ಬೇಕಾದಷ್ಟು ವೇದಾಂತವನ್ನು ಹೇಳಬಹುದು. ಉಪದೇಶ ಮಾಡಬಹುದು. ತಾವು ನುಡಿದಂತೆ ನಡೆದು ತೋರಿಸುವುದು ಅತ್ಯಂತ ಕಠಿಣ. ಉತ್ತಮ ನಡೆತೆಯಿಲ್ಲದ ಬಾಯ ಬ್ರಹ್ಮಿಗಳು ವಿದ್ಯುದ್ವೇಗದಿಂದ ಅಧಃಪತನ ಹೊಂದುವರು. ಮಹಾ ರಾಜ್ಞಿಯಲ್ಲಿ ಪವಿತ್ರ ನುಡಿ, ಅದಕ್ಕೆ ತಕ್ಕ ನಡೆಗಳು ಅನ್ಯೋನ್ಯ ಮೈತ್ರಿಭಾವ ದಿಂದ ರಂಜಿಸುತ್ತನೆಂಬುದನ್ನು ಮುಂದಿನ ಪದ್ಯದಲ್ಲಿ ನೋಡಬಹುದು.

"ಪ್ರೊಡವೀಶ ಕೇಳುಭಯ ಕುಲಶುದ್ಧಿಯಲ್ಲದಿ । ರ್ದಡೆ, ನಿನ್ನ ನಲ್ಲ ದನ್ಯರನು ಲೆಕ್ಕಿಸಿದೆನಾ । ದಡೆ, ಹಿಂದೆ ನಿನಗೊಂದ ನಿಕ್ಕಿ ನಾನೊಂದ ಸುಂಡಡೆ ಮೂರುಕರಣವರಿಯೆ ॥ ಮ್ಮಡನಬ್ದದನ್ಯ ದೈವಕ್ಕೆ ನಮಿಸಿದ ಡೆನ್ನ । ಹೊಡೆದು ಮುಕ್ಕುವುದು ದಾವಾಗ್ನಿಯೇಣಲ್ಲದಿ।ರ್ದಡೆ ಬಟ್ಟೆಗೊಟ್ಟ ಪುದು ಕೇಳೆಂದು ಬೊಬ್ಬೆಗೊಡುವಾ ಪೊತ್ತನೇ ಪೊಗಳ್ವೆನು ॥ ತರುಣಿಯ ಮನಂ ಬೆದರಬೇಕೆಂದು ನೆಗೆದುದ। ಳ್ಳುರಿಗಗನಮಂ ತೀವಿ ಸುತ್ತಿ ಮು ತ್ತಿರೆ ಕಂಡು । ಹರಿದು ಹೊಕ್ಕಳು ಹೊಕ್ಕಳೆಲೆಲೆ ಶಿವಶಿವ ಮಹಾದೇವ ಒಗೆಯದೆ ಹೊಕ್ಕಡೆ ॥ ತರುಣ ಸೂರ್ಯಂ ಕತ್ತಲೆಯನೆ ಹೊಕ್ಕಂ ತಾಯ್ತು । ನೆರೆದ ಕೌಶಿಕನ ಕೃತಕಾಗ್ನಿ ಹರಿದೋಡಿಭಾ । ಪುರೆ ಬಟ್ಟೆ ಗೊಟ್ಟುದು .... ॥"

(ತರುಣಸೂರ್ಯನು ಕತ್ತಲೆಯನ್ನು ಹೊಗುವುದಸಂಭವ. ಆದರೆ ಹೊಗುವುದು ನಿಜವಾದರೆ ಕತ್ತಲೆಯು ಹೇಳ ಹೆಸರಿಲ್ಲದಂತಾಗಬಹು ದಮ ನಿಶ್ಚಯವಲ್ಲವೆ ?) ಬೆಂಕಿಯು ನಂದಿತು. ಸುರರು ಹೂ ಮಳೆ ಗರೆದುದರಿಂದ ಭೂಮಿ ತಂಪಾಯ್ತಂತೆ. ಆಗಲೆ ಬೆಂಕಿಯ ಬೇಗೆ ಯಿಂದ ಬೆಂದ ನೆಲವು ತಂಪಿಡಿಯಬೇಕಾದರೆ ಅದೆಷ್ಟು ಹೂ ಮಳೆ ಯನ್ನು ಕರೆದಿರಬೇಕು ? ಚಂದ್ರಮತಿಯ ಪಾತಿವ್ರತ್ಯಕ್ಕೆ ಬೆರಗಾಗಿ ಮಹದಾನಂದದಿಂದ ದೊಡ್ಡ ಅರಳ ಮಳೆ ಸುರಿಸಿರಬಹುದಲ್ಲವೆ ಸುಮನ ಸರು? ಮುಖ್ಯವಾಗಿ ಸುರರ ಮೆಚ್ಚುಗೆಗೆ ಪಾತ್ರಳಾಗುವಷ್ಟು 'ಚಂದ್ರ ಮತಿ ಉತ್ತಮ ಪತಿ ಶೀಲೆ' ಎಂಬುದು ಅತಿಶಯೋಕ್ತಿಯಲ್ಲದ ಮಾತು.

ವಿಶ್ವಾಮಿತ್ರನ ಸಾಲ ಹರಿಸುವುದರಲ್ಲಿ ಅರಸನು ದಿಙ್ಮೂಢನಾಗಿರಲು –

'ಸಾಲದಲಿ ಪೋದನಿತು ಪೋಗಲೆಮ್ಮಿಬ್ಬರಂ ಮಾರಿ ಬಳಿಕುಳಿದುದಂ ಕಾಣು ನಡೆ ನಡೆ' ಎಂದು ಧೈರ್ಯಗೊಟ್ಟು ಗಂಡನ ಬೆನ್ನು ಚಪ್ಪರಿಸುವಳು. 'ಮರುಳೆ ಸರ್ವಕ್ಕೆ ಮೊದಲು ಸತಿಸುತರು ತನ್ನೊಡಲು ಕಡೆ; ಸತ್ಯಕ್ಕೆ, ನೇಮಕ್ಕೆ ಬಂಧನಕ್ಕೆ ಲಜ್ಜೆಗೆಡದೆಮ್ಮ ಮಾರು ಮತ್ತಾದುದಾಗಲಿ' ಎಂದು ಉಪದೇಶ ಮಾಡುವಳು. ಚಂದ್ರಮತಿಯಲ್ಲಿ ವೀರಧೈರ್ಯ, ಧರ್ಮಪರಿಜ್ಞಾನ, ನಿಶ್ಚಲಬುದ್ಧಿ, ಸಮಯೋಚಿತ ಚಾತುರ್ಯಗಳಿಗೆ ಕೊರತೆಯಿಲ್ಲ.

ವಿಪ್ರನು ರಾಣಿಯನ್ನು ಕೊಳ್ಳುವನು. ಪರಿಪರಿಯ ಕಷ್ಟಗಳನ್ನೊಡ್ಡಿದರೂ ರಾಣಿಯು ಮನವೆರಡಿಲ್ಲದೆ ಮೇಲೆ ಬಿದ್ದ ಕಾರ್ಯವನ್ನು ಮಾಡಿ ಮುಗಿಸುವಳು. ರಾಣಿಯಾಗಿದ್ದು ದಾಸಿಯ ಸ್ಥಿತಿಗಿಳಿದರೂ ವಿಶ್ವಾಮಿತ್ರನ ಕಾಟತಪ್ಪುವುದಿಲ್ಲ. ಮೆಲ್ಲನೆ ಮಗನ ದುಃಖವನ್ನು ತಂದೊಡ್ಡುವನು.

ಮಗನು ಅಡವಿಗೆ ಹೋಗಿಬಾರದಿರಲು ಚಕ್ರವರ್ತಿನಿಯು—ಮಗನು ಬರಲಿಲ್ಲವೆಂದು ಸುಯ್ಯುವಳು. ಒರಲುವಳು. ಬಸಿರೊಸೆದು ಕೊಳ್ಳಳು. ಹೊರಗೆ ಬಂದು ನೋಡುವಳು. ಮನೆಯೊಡತಿಗಳುಜಿ ಒಳಗೆ ಸುಳಿವಳು. ಕವಿಯನ್ನುತ್ತಾನೆ:— ಅವಳ ದುಃಖವು 'ಸೀಗೆಯೊಳಗಣ ಬಾಳೆಗೆಣೆಯಾಯಿತಂತೆ. ಕತ್ತಲೆಯಾದಂತೆಲ್ಲಾ ಅರಸಿಯ ಹೃದಯದಲ್ಲಿ ಶೋಕಾಗ್ನಿ ಪ್ರಜ್ವಲಿಸುವುದು. ಆ ಕತ್ತಲೆಯಲ್ಲಿ ಬರ ವವರು ಹೋಗುವವರು; ಮಾತಾಡುವವರೆಲ್ಲರೂ ಲೋಹಿತಾಶ್ವರಾಗಿ ಮೊದಲು ಕಾಣುವರು ಆಕೆಯ ದುಃಖದ ಕಣ್ಣಿಗೆ. ಸಮೀಪಕ್ಕೆ ಬರಲು ಅವಳ ಆಶೆಯು ನಿರಾಶೆಯಾಗಿ ಒರಲುವಳು. ಮತ್ತು 'ಬಂದರಂ ಲೋಹಿತಾಶ್ವಾಯೆಂದು ಬಟ್ಟೆಯೊಳು। ನಿಂದರಂ ಲೋಹಿತಾಶ್ವಾಯೆಂದು ಗಾಳಿ ಗರಿಕೆಂದಡಂ ಲೋಹಿತಾಶ್ವಾಯೆಂದು ಕರೆಕರೆದು ಬಿಡೆ ಬೀದಿಗರುವಿನಂತೆ ॥ ತನ್ಮಯಂ ವಿಶ್ವಮೇತತ್.

ಸರ್ಪದಷ್ಟನಾಗಿ ಮಗನು ಸತ್ತನೆಂದು ಕೇಳಿ, ಹೇಳಲುಬಾರದಷ್ಟು ಮೇರೆ ಮೀರುವ ದುಃಖವನ್ನು ಒದಿಗಿಟ್ಟುಕೊಂಡು ಬಂದು ಒಡೆಯನ ಅಡಿಗಳ ಮೇಲೆ ಕೆಡೆದು ಬಾಯ್ಬಿಡುತ.

ಚಂ— ಅರಣ್ಯದೊಳೆನ್ನ ಮಗನು ಉಗ ಕಾಳೋರಗಂ ಕಚ್ಚಿ ಮಡಿದನ್.

ವಿಪ್ರ—ಲೇಸಾಯ್ತು. ಮಡಿದರೆ ಮಡಿದನ್. (ಎಂದು ಕೆಡೆನುಡಿವನು).

ಚಂ—ಬಂಟರನು ಕೊಟ್ಟರಸಿ ಸೈತಂದೆ

ವಿ—ನಡುವಿರುಳು ಬಂಟರುಂಟೆ? ನಿದ್ದೆಗೆಯ್ಯಬೇಕೇಳು ಕಾಡದಿರು.

ಚಂ—ನರಿಗಳೆಯುದ ಮುನ್ನ ದಹಿಸಬೇಡವೆ? ತಂದೆ ಕರುಣಿಸು.

ವಿ—ದುರ್ಮರಣಪಟ್ಟ ಶೂದ್ರನನು ಸಂಸ್ಕರಿಸುವವರಾವಲ್ಲ.

ಚಂ—ಆನಾದಡಂ ಹೋಗಿ ಕಂಡು ಮಗನ ಉರಿಗಿತ್ತು ಬಪ್ಪೆನೆ.

ವಿ—ಕೆಲಸಮಂ ಬಿಟ್ಟೊ! ಹರಿಯದಿರ್ದದನೆಯ್ದೆಗೆಯ್ದು ಹೋಗು.

ಮಗನನ್ನು ಕಂಡು ದೇವಿಪಡುವ ದುಃಖವನ್ನು ವರ್ಣಿಸುವಲ್ಲಿ ಕವಿಯ ಜಾಣ್ಮೆ ಅಸಾಧಾರಣವಾಗಿ ಪ್ರಜ್ವಲಿಸುವುದು. ಲೋಹಿತಾಶ್ವನ ಮೈ ಹಸುರಾಗಿ ಶಟೆದು ಬಿಟ್ಟಿದ್ದರೂ ಅವಳಿಗಿನ್ನು ಸಂಶಯ ದೂರಾಗಿಲ್ಲ. ಪಾಪ! ಪುತ್ರದುಃಖವೇ ಅಂತಹುದು. ಅವಳಾದರೂ ಏನು ಮಾಡಿಯಾಳು. ವೈದ್ಯನಂತೆ ಮೂಗಿನಲ್ಲಿ ಉಸಿರು; ಅಳ್ಳೆಯ ಹೊಯ್ಲು; ಎದೆಯೊಳಲ್ಲಾಟ; ಕೈ ತುದಿ ನಾಡಿ ಹೊಡತ; ಅಕ್ಷಿಯಲ್ಲಿ ಬೆಳ್ಪು; ಹಣೆಯಲ್ಲಿ ಬೆವರು; ಕಂಠದೊಳುಲುಕು; ಪಾದದಲ್ಲಿ ಬಿಸಿ; ಹೆಬ್ಬಟ್ಟಿನಲ್ಲಿ ರಕ್ತ; ನಾಲಗೆಯ ಲಿಂಪು; ರೋಮದಲ್ಲಿ ಬಲ್ಪು ಕಾಣದೆ ನೋಯುವಳು. ತಾಯಂದಿರಿಗೆ ಮಕ್ಕಳಲ್ಲಿರುವ ಪ್ರೇಮಕ್ಕೆ ಪಾರವೇ ಇಲ್ಲವೆಂಬುದನ್ನು ಚಂದ್ರಮತಿಯ ಪಾತ್ರ ಸೃಷ್ಟಿಯಿಂದ ಜಗತ್ತಿಗೆ ತೋರಿಸಿದ್ದಾನೆ. ಮಕ್ಕಳ ಬಗ್ಗೆ ತಾಯಂದಿರಿಗಿರುವ ಈ ಗಾಢ ಪ್ರೇಮಕ್ಕೆ ಕಾರಣವೇನೆಂಬುದು ದೊಡ್ಡ ಸಮಸ್ಯೆ. ಚಂದ್ರಮತಿಯು ಪುತ್ರಪ್ರೇಮದಲ್ಲಿ ಮೊದಲಿನವಳೆಂಬುದನ್ನು ಅವಳ ದುಃಖ ವಿಶೇಷದಿಂದ ಕಾಣುವಂತೆ ಚಿತ್ರಿಸಲ್ಪಟ್ಟಿದೆ.

ಮಗನ ಶವವನ್ನು ಕಾಡಿಗೆ ತಂದು ಸುಡುತ್ತಿರಲು ಕಾವಲುಗಾರನಾದ ಹರಿಶ್ಚಂದ್ರನು ಶವರ ಕಾಲಿಡಿದು ಬಿಸುಡುವನು. ಆಗ ಚಂದ್ರಮತಿಯು— "ಬಿಸುಡದಿರು. ಬಿಸುಡದಿರು. ಬೇಡ! ಬೇಡ! ಅಕಟಕಟ! ಹಸುಳೆ ನೊಂದಪನೆಂದು ಬೀಳ್ವನ ನೆತ್ತಿಕೊಂಡು. 'ಇವನು ನಿನ್ನ ಶಿಶುವಿನೋಪಾದಿ ಸುಡಲನುಮತಿಕೊಡೆ' ನ್ನವಳು. (ಇಲ್ಲಿನ ದುಃಖಕ್ಕೆ ತುದಿ ಮೊದಲಿಲ್ಲ. ವಾಚಕರನ್ನು ಮನಸಾರೆ ಓದಿ ತಣಿಯಬೇಕು.) ಅಪ್ಪಣೆ ಸಿಕ್ಕದಿರಲು, ತಮ್ಮ ವಂಶದ ಪವಿತ್ರಾತ್ಮರನ್ನು ನೆನೆಸುತ್ತ ಗಂಡ

ನನ್ನೂ ಸ್ಮರಿಸುವಳು. ಹೊಲೆಯ ವೇಷಧಾರಿಯಾದ ಹರಿಶ್ಚಂದ್ರನು ನೊಂದು 'ಪಾತಕನಾದ ಹರಿಶ್ಚಂದ್ರನನ್ನು ಏತಕೆ ನೆನೆದಪೆ' ಎನ್ನಲು ಚಂದ್ರಮತಿಯು—"ಜಡೆವೊತ್ತಡಂಹಸಿಯ ತೊವಲುಟ್ಟೊಡಂ ನಾಡ। ಸುಡುಗಾಡಿನೊಳಗಿರ್ದಡಂ ನರಕಪಾಲಮಂ। ಪಿಡಿದಿರ್ದಡಂ ತಿರಿದು ವಿಷವುಂಡಡಂ ಶವಶಿರೋಮಾಲೆಗಟ್ಟಿರ್ದಡಂ ‖ ಕಡು ಮರುಳ್ ಪಡೆಯ ಸಂಗಡ ಬತ್ತಲಿರ್ದಡಂ । ಮೃಡನಲ್ಲದಖಿಳಲೋಕಕ್ಕೊಡೆಯನಿಲ್ಲೆಂಬ। ನುಡಿಯಂತಿರೆನಗಾ ಹರಿಶ್ಚಂದ್ರನಲ್ಲದಿನ್ನಾರುಗತಿಮತಿಯೆಂದಳು" ‖ ಹೀಗೆ ಉತ್ತರಕೊಟ್ಟ ರಾಜ್ಞಿಯ ಶ್ರೀಪಾದಗಳಿಗೆ ಮನಸ್ಸು ತಾನಾಗಿಯೇ ಅಗಣಿತ ಸಾಷ್ಟಾಂಗವನ್ನರ್ಪಿಸುತ್ತದೆ.

ಹಣ ತರಲು ಚಂದ್ರಮತಿಯು ಬರುತ್ತಿರುವಳು. ವಿಶ್ವಾಮಿತ್ರನ ಮಾಯಾಚೋರರು ಕಾಶೀರಾಜ ಪುತ್ರನನ್ನು ತಂದು ದೇವಿಯು ಹೋಗುವ ದಾರಿಯಲ್ಲಿ ಶಿಶುವಿನ ಕುತ್ತಿಗೆ ಕೊಯ್ಯುತ್ತಿರಲು ಕೂಸು ಕಿರುಚುವುದು. ಆ ಶಬ್ದ ದೇವಿಯು ಕೇಳಿ ತನ್ನ ಮಗನ ಶಬ್ದವೆಂದು ಕೊಂಡು ಹೋಗಿ ಶವದ ಬಳಿಯಲ್ಲಿ ಅಳುತ್ತ ಕೂಡ್ರುವಳು. ಅಷ್ಟರಲ್ಲೇ ರಾಜಭಟರು ಬಂದು ರಾಣಿಯನ್ನಿಡಿದು ಎಳೆದೊಯ್ದು ಕಾಶೀರಾಜನ ಮುಂದೆ ನಿಲ್ಲಿಸುವರು. ರಾಜನು ವಿಚಾರಿಸುವನು. ರಾಣಿಯು ಚಂದ್ರಮತಿಯು 'ಕೂಸನ್ನು ಕೊಂದುದು ಸಹಜ' ವೆನ್ನುವಳು. "ಈ ಹುಸಿಯಿಂದ ಪವಿತ್ರಾತ್ಮಳಾದ ಚಂದ್ರಮತಿದೇವಿಯ ಸತ್ಯಕ್ಕೆ ಹುಳುಹಿಡಿಯಿತಲ್ಲಾ, ದೇವಿಯು ಆ ಮಾತನ್ನು ಏಕೆ ಆಡಿರಬಹುದು." ಎಂದು ನಮಗೆ (ವಾಚಕರಿಗೆ) ವಿಷಾದವಾಗುತ್ತದೆ. ಆದರೆ ಅವಳ ಪರಿಸ್ಥಿತಿಯನ್ನು ಸ್ವಲ್ಪ ಉದಾರ ಹೃದಯದಿಂದ ಪರೀಕ್ಷಿಸಿ ತಿಳಿಯಬೇಕು. ಮಗನು ಸತ್ತದ್ದರಿಂದ ಅವಳಿಗೆ ಜಗತ್ತೇ ಶೂನ್ಯವಾದಂತಾಗಿತ್ತು. ಏಕಮಾತ್ರ ಪುತ್ರ. ಸೂರ್ಯವಂಶ ವೃಕ್ಷಕ್ಕೆ ಅದೊಂದೇ ಬೀಜ. ಇಂತಹ ಪುತ್ರಹೀನಳಾಗಿ ಅವಳಿಗೆ ಬದುಕುವ ಇಷ್ಟವಿಲ್ಲ. ಆದರೆ ತಾನೇ ಹತ್ಯ ಮಾಡಿಕೊಂಡು ಆತ್ಮಹತ್ಯಾದೋಷ ಕಟ್ಟಿಕೊಳ್ಳಬಾರದು. ಆಕಳಿಕೆ ಬಂದವರಿಗೆ ಹಾಸಿಕೊಟ್ಟಂತೆ ದೇವರ ನೆವವೆನ್ನುವಂತೆ ಪ್ರತಿಕೂಲವಾದ ವಿಧಿಯು ತನಗೆ ಬೇಕಾದ ಮರಣಕ್ಕೆ ಅನುಕೂಲ ಮಾಡಿಕೊಟ್ಟಿತು. ಪ್ರಕೃತ ಕಂಡಿತ ಹೇಳಿದರೂ ಹತ್ಯಾಪವಾದ ದೂರವಾಗುವಂತಿಲ್ಲವೆಂದು ಬಗೆದು ಹುಸಿ ನುಡಿದಿರಬಹುದು. ಅಲ್ಲದೆ ದುಃಖಾವೃತರಾದವರಲ್ಲಿ ಪರಿಶೀಲನಾ

ಶಕ್ತಿ ಕಡಿಮೆ. ದುಃಖದ ಭರಭರಾಟೆಯಲ್ಲಿ ಧರ್ಮಕರ್ಮ, ವಿಚಾರ, ಸಚಾರಗಳು ಸ್ವಲ್ಪ ಮರೆಯಾಗಿರುತ್ತವೆ. ಆಗ ದುಃಖದಿಂದ ಪೀಡಿತವಾದ ಮನಸ್ಸು ಶೀಲದ ಮೆಟ್ಟಿಲಿಂದ ಜಾರುತ್ತದೆ. ನಡೆಯುವವರೆಡಹಲಿಕ್ಕೆ ಬೇಕು. ಹುಷಾರ್ (ಎಚ್ಚರ) ವಿದ್ದವರೇ ಎಡಹುವರೆನ್ನುವಲ್ಲಿ ದುಃಖಿಗಳ ವಿಷಯದಲ್ಲಿ ಕೇಳಬೇಕಾದುದೇನು. ಚಂದ್ರಮತಿಗಾದರೋ ಒಂದಲ್ಲ ಎರಡಲ್ಲ. ದುಃಖದ ಮೇಲೆ ದುಃಖ. ಕಷ್ಟದ ಮೇಲೆ ಕಷ್ಟ. ಕುರುವಿನ ಮೇಲೆ ಬರೆಯಿಟ್ಟಂತೆ. ಆದರೂ ಇಲ್ಲಿಯವರಿಗೂ ಸಹಿಸಿದ್ದಾಯಿತು. ದುಃಖದಾಯಕ ವಿಧಿಯ ಮೇಲೆ ದಂಡೆತ್ತಿ ಹೋಗುವುದಕ್ಕೆ ಕಾಲ್ಕೆದರಿ ಜಗಳ ತೆಗೆಯಲು ಹುಸಿನುಡಿದು, ಅದರ ಭೀಕರ ಪರಿಣಾಮದ ಗುರಿಯಾದ ಮರಣಕ್ಕೆ ಸಿದ್ಧಳಾಗುವಳು. ಹುಸಿ ನುಡಿದುದಕ್ಕೆ ಪ್ರಾಯಶ್ಚಿತ್ತವೆಂದರೆ ಮರಣದಂಡನೆ. ವಧ ಸ್ಥಾನದಲ್ಲಿ ಕುಳಿತು- 'ಸುಖದುಃಖಗಳ ಲಕ್ಷವಿಲ್ಲದ, ನಶ್ವರ ದೇಹಾಭಿಮಾನವಿಲ್ಲದ ಪರಮ ಯೋಗಿಯಂತೆ' ಗುರು, ದೇವರು, ಪತಿಗಳನ್ನು ಭಕ್ತಿಯಿಂದ ವಂದಿಸಿ ಮೃತುವಿಗೆ ಕತ್ತು ಚಾಚುವಳು. ಮೃತ್ಯುವಿನ ದರ್ಶನವ ಬದಲು ಮೃತ್ಯುಂಜಯನ ದರ್ಶನವಾಗುವುದು. ಪತಿವ್ರತೆಯರಿಗೆ ಇದಕ್ಕಿಂತ ಹೆಚ್ಚಿನ ಮೇಲ್ಮೆಯೇನು ?

ಪರಿಸಮಾಪ್ತಿ—ರಾಘವಾಂಕನ ಪಾತ್ರ ಸೃಷ್ಟಿಯ ವಿಚಾರವಾಗಿ ಸ್ವಲ್ಪಮಟ್ಟಿಗೆ ಚರ್ಚಿಸಿದ್ದಾಯಿತು. ಅದರಲ್ಲಿ ಇನ್ನೂ ವಿಮರ್ಶಿಸತಕ್ಕ ಅಂಶಗಳೆಷ್ಟು ಉಳಿದಿವೆ ಸಹಜ. ಆತನ ಸೃಷ್ಟಿಯಲ್ಲಿ ನಯವಿದೆ, ನುಣ್ಪಿದೆ, ಉಚಿತವಿದೆ, ವ್ಯಕ್ತಿತ್ವವಿದೆ. ಲಕ್ಷಣ ಶಾಸ್ತ್ರದ ನಿಬಂಧನೆಗಳನ್ನು ಮೀರದಂತೆ ಧೀರೋದಾತ್ತ, ಧಿರೋದ್ಧತ, ಧೀರಶಾಂತರ ಚಿತ್ರಗಳನ್ನು ಸುಹೃದಯರಿಗೆ ಅಂದವಾಗುವಂತೆ ನಿರ್ಮಿಸಿದ್ದಾನೆ. ಆಯಾನಾಯಕರ ವೇಷ, ಅದಕ್ಕೆ ತಕ್ಕ ಭಾಷೆಗಳು ಬಹು ಸುಂದರವಾಗಿವೆ. ವರ್ಣನೆ, ಶೈಲಿ ಮುಂತಾದವುಗಳು, ಮತ್ತು ಮಹಾ ಕಾವ್ಯಕ್ಕೆ ತಕ್ಕ ಲಕ್ಷಣಗಳು ಈ ಕಾವ್ಯದಲ್ಲಿ ಪರಿಶೋಭಿಸುತ್ತವೆ. ಹರಿಶ್ಚಂದ್ರ ಕಾವ್ಯವು ಮಹಾ ಕಾವ್ಯಗಳಲ್ಲಿ ಎರಡನೆಯದೆನ್ನಿಸಿಕೊಳ್ಳದಂತೆ ಉತ್ತಮ ಕಾವ್ಯಗಳ ಸಾಲಿನಲ್ಲಿ ಇದಕ್ಕೆ ತೆರವುಂಟು. 'ಕವಿಶರಭ ಬೇರುಂಡ' 'ಉಭಯ ಕವಿಕಮಲ ರವಿಯ' ಪುಣ್ಯದಾಕೃತಿಯಾದ ಹರಿಶ್ಚಂದ್ರ ಕಾವ್ಯವನ್ನು ಪಠಿಸಿ ಆನಂದ ಸಾಗರದಲ್ಲಿ ಓಲಾಡುವ ಭಾಗ್ಯ ವಾಚಕರದು.

—

# ಶ್ರೀಕರಭಾಷ್ಯ ವಿಮರ್ಶವು.

(ಲೇ:— ಸಿದ್ಧರಾಮಪ್ಪ ದುಂಡಪ್ಪ ಪಾವಟೆ ಬಿ. ಎ ಎಲ್. ಎಲ್. ಬಿ. ಹುಬ್ಬಳ್ಳಿ.)

ಹಿಂದಿನಿಂದ ಮುಂದೆಸಾಗಿದ್ದು.

## ಲಿಂಗಧಾರಣರಾದ್ಧಾಂತವು.

ಇಂತು ಪೂರ್ವಪಕ್ಷವೆನ್ನು ಇಟ್ಟು ಶ್ರೀಪಂಡಿತಾಚಾರ್ಯನು ಲಿಂಗ ಧಾರಣ ರಾದ್ಧಾಂತವನ್ನು ನೆಲೆಗೊಳಿಸಲೇಳುವನು. "ಸಮೌಸಿದ್ಧಾಂತರಾದ್ಧಾಂತೌ" ಎಂದು ಅಮರನಿಂದ ರಾದ್ಧಾಂತವೆಂದರೆ ಸಿದ್ಧಾಂತವೆಂದಾಗಿ, ಲಿಂಗಧಾರಣ ಸಿದ್ಧಾಂತವೆ ಲಿಂಗಧಾರಣ ರಾದ್ಧಾಂತವಾದರು ಎರಡು ಶಬ್ದಾರ್ಥಗಳಲ್ಲಿ ಅಣುವು (ಕಿಂಚಿತ್) ಅಂತರವಿಹುದು. "ಸಂಶಯ್ಯ ವಾದಿದರ್ಶಿತಪಕ್ಷನಿರಾಕರಣ ಪೂರ್ವಕ ಯಥಾರ್ಥ ಪಕ್ಷ ಪ್ರತಿಪಾದಕಂ ವಾಕ್ಯಂ ರಾದ್ಧಾಂತಃ" ತಾರಾನಾಥತರ್ಕ ವಾಚಸ್ಪತಿ ಮಿಶ್ರರು. ಶ್ರೀಪತಿ ಪಂಡಿತಾಚಾರ್ಯನು ರಾದ್ಧಾಂತ ಪದ ಪ್ರಯೋಗದಲ್ಲಿ ತನ್ನದೊಂದು ದರ್ಪವನ್ನೂ ವಾದಿವಾಕ್ಯಭಂಗನೈಪುಣಿಯ ಕುಶಲತೆಯನ್ನೂ ಒಂದು ಭಂಗಿಯಿಂದ ತೋರಿಸಲು ಹವಣಿಸಿರುವನು. ಸೂತ್ರವನ್ನು ಒಂದು ದೆಸೆಗೆ ಎಳೆದೊಯ್ವ ಈ ಸಿದ್ಧಾಂತವು ರಾದ್ಧಾಂತವಲ್ಲ. ಸಿದ್ಧಾಂತವೂ ಅಲ್ಲ ಎಂದು ತೋರಿಸುವ ನಾವು ಆಕ್ಷೇಪಗಳಿಂಬಾಗುವಂತೆ ಅದನ್ನು ಕನ್ನಡಕ್ಕೆ ತಿರುವುವಲ್ಲಿ ಈ ಸಂಪಾದಕರ ಮತ್ತು ಓದುವರ ಸೈರಣೆಯನ್ನು ಬಯಸುತಲಿಹೆವು.

## ರಾದ್ಧಾಂತಭಾಷ್ಯಾನುವಾದವು.

ಲಿಂಗಧಾರಣವು ಪ್ರತ್ಯಕ್ಷನಾದ ಶ್ರುತಿಸ್ಮೃತೀತಿಹಾಸಾಗಮ ಪುರಾಣಗಳಿಂದ ವಿಹಿತವಾಗಿದೆಯಾಗಿ ಅದು ಅಗ್ನಿ ಹೋತ್ರದಂತೆ ವೈದಿಕವೆಂದು ಸಿದ್ಧವು.

"ಯಚ್ಛಂದಸಾಮೃಷಭೋ ವಿಶ್ವರೂಪ" ಎಂಬಲ್ಲಿ ಭಕ್ತರ ಉಪಾಸನಾರ್ಥವಾಗಿ ಶಿವನು ಪರಿಚ್ಛಿನ್ನನಹನೆನ್ನುವುದುಚಿತವು. ನಾರಾಯಣದಲ್ಲಿ "ನಿಧನಪತಯೇ ನಮಃ" ಎಂದು ಮುಂತಾಗಿ ಲಿಂಗವು ಸರ್ವಾತ್ಮಕವಹುದೆಂದು ಹೇಳಿ "ಸರ್ವಲಿಂಗಂ ಸ್ಥಾಪಯತಿ" ಎಂದಿದರಿಂದ ಅದೇ

ಲಿಂಗದ ಪರಿಚ್ಛಿನ್ನ ಲಿಂಗ ಧಾರಣವನ್ನು ವಿಧಿಸುವಣವು ಕಂಡುಬರು ತಿಹುದು. ಶಿವನು ಸರ್ವರ ಮುಖ ಶಿರಸ್ಸುಕಂಠಗಳಲ್ಲಿ ಸರ್ವಭೂತ ಗಳ ಹೃದಯಗುಹೆಯಲ್ಲಿರುವನಾಗಿಹನು. ಸರ್ವವನ್ನು ತುಂಬಿಹನು. ಆರುಗುಣದ ಐಶ್ವರ್ಯಯುತನಹನು. ಆದುದರಿಂದ ಸರ್ವಗತನಹನು. ಪೂರ್ವಕಾಲದೇಶಗಳಲ್ಲಿಹರೂ ನಾನೆ. ಪಶ್ಚಿಮಕಾಲದೇಶಗಳಲ್ಲಿಹರೂ ನಾನೆ. ಎಂಬಿವು ಮುಂತಾದ ಶ್ವೇತಾಶ್ವತರ ಅಥರ್ವಶಿರಸ್ಸು ಉಪನಿಷ ತ್ತುಗಳಲ್ಲಿ ಉಪಾಸನಕ್ಕಾಗಿ ಶಿವಪರಿಚ್ಛಿನ್ನತ್ವವು ಕೇಳುತಿದೆ. ಪ್ರಾಣಗ ಳಲ್ಲಿ ಮನಸಿನ ಒಳಗು ಆ ಲಿಂಗವೆಂದು ಹೇಳುವರು. ಲಿಂಗದಲ್ಲಿ ಸುಷುಪ್ತಿಯು, ಲಿಂಗವು ಸನಾತನವಾದ ಬ್ರಹ್ಮವು. ಇಂತಾದ ಕಠವಲ್ಲೀ ಹಂಸೋಪನಿಷದ್ ಲಿಂಗಪುರಾಣಾದಿಗಳಲ್ಲಿ ನಿರುಪಪದ ಬ್ರಹ್ಮ ಶಬ್ದ ವನ್ನು ಹಸ್ತಕರಪಾಣಿ ಶಬ್ದಗಳಂತೆ ಲಿಂಗಶಬ್ದದ ಪರ್ಯಾಯವಾಗಿ ಹೇಳುವರು. ದೇವಧಾರಣಃ ಎಂಬಿದನ್ನು ದೇವ ಧಾರಣಃ ಎಂದು ಒಡೆದು "ದೇವ" ಪದವನ್ನು ಸಂಬೋಧನವಿಭಕ್ತ್ಯಂತವಾಗಿ ಹಿಡಿದರೆ, ಅಪರಿಮಿತಾಧಿಕರಣನ್ಯಾಯವನ್ನು ಮೀರಿ (ಅಪರಿಮಿತಾಧಿಕರಣವೆಂದು ಪೂರ್ವಮೀಮಾಂಸೆಯಲ್ಲಿಯದೊಂದು ಸೂತ್ರಾಧಿಕರಣವು. ಇದನ್ನು ನಾವು ಮುಂದೆ ತಿಳಿಸಿಹೇಳುವೆವು.) ಸಮೀಪದ ಧಾರಣ ಶಬ್ದದೊಡನೆ ಅನ್ವಯಿಸದೆ ದೂರದ "ಗೋಪಾಯ" ಪದದೊಡನೆ ಅನ್ವಯಿಸುವದು ತಕ್ಕುದಲ್ಲ. "ಬ್ರಹ್ಮಣಃ ಕೋಶೋಽಸಿ" ಎಂತಿಲ್ಲಿ ವಿಭಕ್ತಿ ಪರಿಣಾಮ ಮದಿಂದ (ವಿಭಕ್ತಿ ಪರಿಣಾಮವೆಂದರೆ) ಅರ್ಥಾನುಕೂಲವಾಗುವಂತೆ ವಿಭಕ್ತಿಯನ್ನು ತಿರುಗಿಸುವದು. ''ಇಂತೀ ಪೇಳ್ದ ವಿಭಕ್ತಿಗಳೆಂತುಂ ಪಲ್ಲ ಟಿಸುಗುಂ ಯಥೇಷ್ಟಂ ''— ಶಬ್ದ ಮಣಿದರ್ಪಣ. ಸೂ. ೧೭೪ ಉದಾ ಹರಣ—ದೇವರಂ ಪೂವಿನಿಂದರ್ಚಿಸಿದನೆಂಬಲ್ಲಿ ಪೂವನರ್ಚಿಸಿದಂ ಎಂ ದಾಯ್ತು.) ಸಮೀಪದಲ್ಲಿರುವ ಬ್ರಹ್ಮಪದದೊಡನೆಯೇ ಅನ್ವಯವು ಸಂಭ ವಿಸುತ್ತದೆ. ಧಾರಣಶಬ್ದವು ಸಂಯೋಗಾರ್ಥವಾಗಿದೆಯಾಗಿಯು, ಅಮೃತ ಪದಕ್ಕೆ ಅರ್ಥವಾದ ಮೋಕ್ಷವು ಬೇರೆ ಪರಿಯಿಂದ ದೊರಕದಾಗಿಯು ದೇವಧಾರಣ ಶಬ್ದವನ್ನು ಒಡೆಯದೆ ಲಿಂಗಧಾರಕನೆಂದು ಅರ್ಥಕಲ್ಪಿಸ ತಕ್ಕುದು. ಶಂಕರ ಸಂಹಿತೆಯ ವಾಕ್ಯವು. ಮಗನೆ ಲಿಂಗಾಂಗ ಸಂಗಿಗೆ ಮರುಹುಟ್ಟಿಲ್ಲ. ಒಮ್ಮೆಯೆ ಜ್ಞಾನವು ಸಿದ್ಧಿಪುದು ಆದರಿಂದ ಮುಕ್ತಿಯು ದೊರೆವುದು. ಎಂದು ಲಿಂಗಧಾರಣವೆ ಮೋಕ್ಷ ಹೇತುವೆಂದುಪದೇಶಿ ಸುತಿಹುದು. ''ಶರೀರಂ ಮೇ ವಿಚರ್ಷಣಂ'' ಇಂತಿದು ಮುಂತಾದು

ದರಿಂದ ಹೊರಗಣದೊಂದು ವಿಶಿಷ್ಟ ಪದಾರ್ಥವೆ ಉದ್ದೇಶ್ಯವಾಗಿ ವಿಹಿತ ವಾಗಿಹುದು— ಬಾಹ್ಯ ಶರೀರದ ಶುದ್ಧಿಯು ಹೇಳಪಡೆದುದು ಎಂಬರ್ಥ— "ಅತ್ಯಾಶ್ರಮಸ್ಥ-ಸಕಲೇಂದ್ರಿಯಾಣಿ-" "ಅತ್ಯಾಶ್ರಮೀ ಸರ್ವದಾಸಕೃದ್ವಾ ಜಪೇತ್" ವ್ರತಮೇತತ್ಪಾಶುಪತಂ ಪಶುಪಾಶವಿಮೋಕ್ಷಾಯ" ವ್ರತ ಮೇತತ್ ಶಾಂಭವಂ" "ತತ್ಸಮಾಚರೇನ್ಮುಮುಕ್ಷುರ್ನ ಪುನರ್ಭವಾಯ" ತೇಷಾ ಮೇವೈತಾಂ ಬ್ರಹ್ಮವಿದ್ಯಾಂ ವದೇತ ಶಿರೋವ್ರತಂ" ತಸ್ಯೈತೇ ಕಥಿತಾಹ್ಯರ್ಥಾಃ ಪ್ರಕಾಶಂತೇ ಮಹಾತ್ಮನಃ" ಇಂತೆಂಬ ಕೈವಲ್ಯ ಅಥರ್ವ ಶಿರಸ್ಸು ಮುಂಡಕ ಮೊದಲಾದವುಗಳಲ್ಲಿ ಪಾಶುಪತಿವ್ರತವೆ ಬ್ರಹ್ಮ ವಿದ್ಯಾಧಿಕಾರಪ್ರದವೆಂದು ಹೇಳಿಹುದು. ಇಂತಿದೆಲ್ಲರಿಂದ ಲಿಂಗ ಧಾರಣ ದೀಕ್ಷಿತನೆ ಬ್ರಹ್ಮವಿದ್ಯಾಧಿಕಾರಿಯೆಂದು ಸಿದ್ಧವಾಯ್ತು.

## ಇನಿತರ ಬಗೆ (ವಿಚಾರ).

ಶ್ರೀ ಪಂಡಿತಾಚಾರ್ಯನ ಲಿಂಗಧಾರಣ ಭಾಷ್ಯವು ಇನ್ನೂ ಎಂಟು ಪುಟಗಳನ್ನು ತುಂಬಿದೆ. ಅದನ್ನು ತೀರಿಸಿ ನಮ್ಮ ವಿಮರ್ಶವ ಮಾಡುವೆ ವೆಂದರೆ ಸಂದರ್ಭವು ದೊಡ್ಡದಾಗಿ ಓದುವರ ಲಕ್ಷದಲ್ಲಿ ಎಲ್ಲವು ಆಕಲಿತ ವಾಗುವುದು ದುಸ್ತರವು. ಇದಕ್ಕೆಂತು ಮಾಡುವೆವೆಂದು ಚಿಂತಿಸುವಾಗ ಆಚಾರ್ಯನು ತನ್ನ ಸಿದ್ಧಾಂತದ ಒಂದು ಮೆಟ್ಟನ್ನು ಮುಗಿಸಿದ ಈ ತಾಣವು ನಮಗಿಂಬುಗೊಟ್ಟಿದೆ. ಸಂಶಯ ಪೂರ್ವ ಪಕ್ಷಗಳೂ ಸಿದ್ಧಾಂ ತದ ಇನಿತು ಭಾಗವೂ ಈಗಾಗಲೆ ಶಾಸ್ತ್ರಗಳಲ್ಲಿ ಬಳಕೆಯಿಲ್ಲದ ಲೋಕಬಳಕೆಯ ಓದುಗರಿಗೆ ಭಾರವೆನಿಸಿರಬೇಕು. ಇನಿತನ್ನು ಬಗೆದು ನೋಡುವರೆ ಆಚಾರ್ಯನು ಲಿಂಗಧಾರಣ ಸಿದ್ಧಾಂತವನ್ನು ಸಾಮಾನ್ಯ ವಾಗಿ ಮುಗಿಸಿದುದು ಅನುಕೂಲವಾಗಿದೆ. ಇದನೆಸಗಿ ಮುಂದಿನ ಭಾಷ್ಯವನ್ನು ಅನಿತನಿತು ವಿಮರ್ಶಿಸುವುದು ಆವ ತೆರದಿಂದಲು ಭಾಷ್ಯ ಕಾರನಲ್ಲಿ ನಮ್ಮ ಅಪರಾಧವಾಗದು.

## ಸಂಶಯ ವಿಮರ್ಶವು.

ಶ್ರೀ ಪಂಡಿತಾಚಾರ್ಯನು "ದೇವಧಾರಣ" ಶ್ರುತಿಯು ಲಿಂಗ ಧಾರಣವನ್ನು ವಿಧಿಸುವುದೆಂಬ ತನ್ನ ಸಿದ್ಧಾಂತಕ್ಕೆ ಸಂಶಯವನ್ನು ಎಬ್ಬಿ ಸುವಲ್ಲಿ ನಿಜಪಾದ ಪ್ರತಿಪಕ್ಷಿಯು ಮುಂದಿಡಬಹುದಾದ ಕೋಟಿಗಳನ್ನು ಬಿಟ್ಟುದು ಕಾಣುತಲಿದೆ. ನೋಡಿರಿ.

ತೈತ್ತಿರೀಯೋಪನಿಷತ್ತಿನಲ್ಲಿ ಶ್ರುತಿಯು ಶೀಕ್ಷಾಧ್ಯಾಯದಲ್ಲಿ ಕೇಳು ತಿದೆ. ಶೀಕ್ಷಾಧ್ಯಾಯವೆಂದರೆ ವರ್ಣಗಳನ್ನು ತಪ್ಪದೆ ಎಡವದೆ ನುಡಿಯ ಕಲಿಸುವ ಶಾಸ್ತ್ರವು. ಇದೊಂದು ವೇದಾಂಗವು. ಆರು ಅಂಗಗಳು. ಅವುಗಳನರಿಯದೆ ವೇದಾರ್ಥವನ್ನು ತಿಳಿಯಲುಬಾರದು. ಅದರಿಂದಲೆ ಅವುಗಳನ್ನಂಗಗಳೆಂಬರು—"ಶೀಕ್ಷಾ ಘ್ರಾಣಂ ತು ವೇದಸ್ಯ ಮುಖಂ ವ್ಯಾಕರಣಂ ಸ್ಮೃತಂ" ದಾ. ಶಿ. ೪೨. ಶಿಕ್ಷೆಯು ವೇದದ ಮೂಗು ವ್ಯಾಕರಣವು ವೇದದ ಮೊಗವು ಉಪನಿಷತ್ತುಗಳು ಜ್ಞಾನಪರವಾದುವು. ಯಜ್ಞ ಕ್ರಿಯಾಪರವಲ್ಲ. ಆದುದರಿಂದ ಈ ಉಪನಿಷತ್ತಿನ ಪಾಠದಲ್ಲಿ ವರ್ಣೋಚ್ಚಾರವು ಅನಿತೊಂದು ದೊಡ್ಡಿತ್ತಲ್ಲ ಲೌಕಿಕ ಸಾಧು ಶಬ್ದಗಳಂತೆ ಇದರ ಶಬ್ದಗಳನ್ನು ನುಡಿದರೆ ಸಾಕು ಎಂದು ವರ್ಣೋಚ್ಚಾರದಲ್ಲಿ ಅನಾದರವಾಗಬಾರದೆಂದೂ ಈ ಉಪನಿಷತ್ತಿನಲ್ಲಿ ಉದಾತ್ತಾದಿ ಸ್ವರಗಳ ಜ್ಞಾನವು ಅರ್ಥ ನಿರ್ಣಯಕ್ಕೆ ಆವಶ್ಯಕವೆಂದೂ ಶಿಕ್ಷಾಧ್ಯಾಯವು ತೈತ್ತಿರೀಯದ ಮೊದಲನೆಯ ಅಧ್ಯಾಯವಾಗಿದೆ. ಈ ಅಧ್ಯಾಯದ ಮೊದಲನೆಯ ಅನುವಾಕವು (ಯಜಸ್ಸಗಳ ಸಮೂಹವು ತೈತ್ತಿರೀಯವು ಕೃಷ್ಣ ಯಜುಃ ಶಾಖೆಯದು) ಓದುವ ಶಿಷ್ಯನಿಗೂ ಓದಿಸುವ ಆಚಾರ್ಯನಿಗೂ ಶಾಂತಿಯನ್ನು ಹರಸುವ ಯಜಸ್ಸುಗಳಿವೆ. ಎರಡನೆಯ ಅನುವಾಕವಿಂತು.

ಓಂ ಶೀಕ್ಷಾಂ ವ್ಯಾಖ್ಯಾಸ್ಯಾಮಃ। ವರ್ಣಃ ಸ್ವರಃ। ಮಾತ್ರಾ ಬಲಮ್। ಸಾಮ ಸಂತಾನಃ। ಇತ್ಯುಕ್ತಃ ಶೀಕ್ಷಾಧ್ಯಾಯಃ(?) ಇತಿಃ ಶೀಕ್ಷಾಧ್ಯಾಯೋ

ದ್ವಿತೀಯೋಽನುವಾಕಃ—

ಶೀಕ್ಷಾಧ್ಯಾಯದಲ್ಲಿ ಹನ್ನೆರಡು ಅನುವಾಕಗಳಿವೆ. ಅದರಲ್ಲಿ "ಯಶ್ಛಂದಸಾಮೃಷಭೋ" ಎಂಬಿದು ನಾಲ್ಕನೆಯ ಅನುವಾದವು.

ಈ ಹನ್ನೆರಡು ಅನುವಾಕಗಳಲ್ಲಿ ಕಾಣುವ ಒಂದೊಂದು ವಿಷಯವನ್ನು ಬೇರೆ ಬೇರಾಗಿ ಬರೆವುದು ಹಬ್ಬ. ಆದುದರಿಂದ ಆ ಅಧ್ಯಾಯದ ಸಾರಾಂಶವನ್ನು ಹೇಳ್ವದೆ ಸಾಲ್ವದು. ಇದು ಆವರ್ಣೋಚ್ಚಾರವನ್ನು ಶಿಕ್ಷಾನುಸಾರವಾಗಿ ಉಚ್ಚರಿಸುವುದನ್ನು ಒತ್ತಿ ಹೇಳುತ್ತ ವರ್ಣಗಳ ಸಂಹಿತೆ (ಸಂಧಿ) ಯ ಉಪಾಸನವನ್ನು ವಿಧಿಸಿ, ವೇದದ ಮಂತ್ರ

ಗಳಲ್ಲಿ ಮುಖ್ಯವಾದ ಪ್ರಣವವನ್ನೂ ಭೂಃ ಭುವಃ ಸುವಃ ಮಹಃ ಎಂಬ ವ್ಯಾಹೃತಿ ಚತುಷ್ಟಯವನ್ನೂ ಕುರಿತು ಉಪಾಸನೆಗಳನ್ನು ಬಗೆ ಬಗೆಯಾಗಿ ಬಿತ್ತರಿಸುವುದು. ಇಂತಹ ಅಧ್ಯಾಯದಲ್ಲಿ ಅರ್ಥ ರೂಪವಾದ ಇಷ್ಟಲಿಂಗಧಾರಣ ವಿಷಯವು ಬಂದುದೆಂತು? ಎಂಬುದಾಗಿ ಪ್ರಣವ ಧಾರಣಕ್ಕೆ ಪ್ರಬಲವಾದ ಸಂಶಯ ಕೋಟಿಯನ್ನು ಎತ್ತಡೆ ಬಿಟ್ಟಿಹನಾಚಾರ್ಯನು.

## ಪೂರ್ವಪಕ್ಷ ವಿಚಾರ.

ಪೂರ್ವಪಕ್ಷದಲ್ಲಿಯೂ ಆಚಾರ್ಯನು ಪ್ರಬಲವಾದ ಯುಕ್ತಿಗಳನ್ನು ಬಿಟ್ಟಿರುವನು. ಲಿಂಗಧಾರಣವನ್ನು ವಿಧಿಸುವ ಈ ಅಧ್ಯಾಯದಲ್ಲಿ ಲಿಂಗ ಪೂಜೆಯನ್ನು ವಿವರಿಸಿಲ್ಲ. ಒಂಬತ್ತನೆಯ ಅನುವಾಕದಲ್ಲಿ ಋತಂ ಚ ಸ್ವಾಧ್ಯಾಯ ಪ್ರವಚನೇ ಚ - ಸತ್ಯಂ ಚ ಸ್ವಾಧ್ಯಾಯ ಪ್ರವಚನೇ ಚ ತಪಶ್ಚ ಸ್ವಾಧ್ಯಾಯ ಪ್ರವಚನೇ ಚ ತಪಶ್ಚ ಸ್ವಾಧ್ಯಾಯ ಪ್ರವಚನೇ ಚ. ಶಮಶ್ಚ ಸ್ವಾಧ್ಯಾಯ ಪ್ರವಚನೇ ಚ. ಅಗ್ನಯಶ್ಚ ಸ್ವಾಧ್ಯಾಯ ಪ್ರವಚನೇ ಚ. ಅಗ್ನಿಹೋತ್ರಂ ಚ ಸ್ವಾಧ್ಯಾಯ ಪ್ರವಚನೇ ಚ. ಅತಿಥಯಶ್ಚ ಸ್ವಾಧ್ಯಾಯ ಪ್ರವಚನೇ ಚ. ಮಾನುಷಂ ಚ ಸ್ವಾಧ್ಯಾಯ ಪ್ರವಚನೇ ಚ, ಪ್ರಜನಶ್ಚ ಸ್ವಾಧ್ಯಾಯ ಪ್ರವಚನೇ ಚ ಪ್ರಜಾತಿಶ್ಚ ಸ್ವಾಧ್ಯಾಯ ಪ್ರವಚನೇ ಚ, ಸತ್ಯ ಮಿಸತ್ಯವಚಾರಾಧೀತರಃ- ತಪ ಇತಿ ತಪೋ ನಿತ್ಯಃ ಪೌರುಶಿಷ್ಟಿಃ ಸ್ವಾ

ಧ್ಯಾಯ ಪ್ರವಚನೇ ಏವೇತಿ ನಾಕೋಮೌದ್ಗಲ್ಯಃ ತದ್ಧಿತಪಸ್ತದ್ಧಿ ತಪಃ(?)

''ಎಂದು ಬ್ರಹ್ಮವಿದ್ಯಾಧಿಕಾರಿಯು ಅನುಷ್ಠಿಸಲು ತಪ್ಪಬಾರದ ವಿಷಯು ಗಳನ್ನು ಶ್ರುತಿಯು ವಿಧಿಸುದು. ಸತ್ಯವೂ ಸ್ವಾಧ್ಯಾಯುವೂ, ಅಗ್ನಿಯೂ ಅಗ್ನಿಹೋತ್ರವೂ 'ಅತಿಥಿ ಪೂಜೆಯೂ ಮಾನುಷವೆಂಬ ಲೌಕಿಕ ನಿತ್ಯಾಚಾರವೂ ಪುತ್ರೋತ್ಪತ್ತಿಯೂ ಋತುಗಮನವೂ ಮೊಮ್ಮಕ್ಕಳನ್ನು ಕಾಣುವುದು ಇವೆಲ್ಲವುಗಳನ್ನು ನಡೆಯಿಸುತ್ತ ಸ್ವಾಧ್ಯಾಯ ಪ್ರವಚನದಲ್ಲಿ ಪ್ರವರ್ತನವೂ ವಿಹಿತವಾಗಿವೆ. ಇವುಗಳಲ್ಲಿ ರಾಧೀತರಾಚಾರ್ಯನು ಸತ್ಯವಚನನಾಗಿಯು ಸತ್ಯವೇ ಮುಖ್ಯವೆಂದೂ ಆಚಾರ್ಯಪೌರುಶಿಷ್ಟಿಯು ತಪೋನಿತ್ಯನಾಗಿ ತಪಸ್ಸೆ ಮಿಗಿಲೆಂದೂ, ತೋರಿಸಿದ ಅಭಿಪ್ರಾಯುವನ್ನು ಶ್ರುತಿಯು ಸ್ವಾಧ್ಯಾಯ ಪ್ರವಚನಗಳೆ ಮುಖ್ಯವೆಂಬ ಮೌದ್ಗಲ್ಯಾಚಾರ್ಯನ ಅಭಿಪ್ರಾಯುದಲ್ಲಿ ಮುಗಿಸಿ ಅದುವೆ ಸಿದ್ಧಾಂತವೆಂದು ನೆಲೆಗೊಳಿಸುವುದು. ತಪಃ ಸತ್ಯಾದಿಗಳು ಈ ಅಧ್ಯಾಯುದಲ್ಲಿ ಬಂದಿಲ್ಲವಾದರು ಅವನ್ನು ಮುಮುಕ್ಷುವಿನ ಧರ್ಮವೆಂದು ಅರುಹುತ್ತ ನಾಲ್ಕನೆಯ ಅನುವಾಕದಲ್ಲಿ ವಿಹಿತ ಲಿಂಗಧಾರಣವನ್ನು ಶ್ರುತಿಯು ಬಿಡಲಾರದು. ಆದುದರಿಂದ ದೇವಧಾರಣವೆಂದರೆ ಲಿಂಗಧಾರಣವಲ್ಲ.

ಮುಂದೆ ಹನ್ನೆರಡನೆಯ ಅನುವಾಕದಲ್ಲಿಃ—ವೇದಮನೂಚ್ಯಾಚಾರ್ಯೋಂತೇವಾಸಿನಮನು ಶಾಸ್ತಿ. ಸತ್ಯಂ ವದ. ಧರ್ಮಂ ಚರ. ಸ್ವಾಧ್ಯಾಯಾನ್ಮಾ ಪ್ರಮುದಃ ಆಚಾರ್ಯಾಯ ಪ್ರಿಯಂ ಧನಮಾಹೃತ್ಯ ಪ್ರಜಾತಂತುಂ ಮಾ ವ್ಯವಚ್ಛೇತ್ಸೀಃ ಸತ್ಯಾನ್ನ ಪ್ರಮದಿತವ್ಯಂ. ಧರ್ಮಾನ್ನ ಪ್ರಮದಿತವ್ಯಂ. ಕುಶಲಾನ್ನ ಪ್ರಮದಿತವ್ಯಂ ಭೂತ್ಯೈನ ಪ್ರಮದಿತವ್ಯಂ. ಸ್ವಾಧ್ಯಾಯಪ್ರವಚನಾಭ್ಯಾಂ ನ ಪ್ರಮದಿತವ್ಯಂ.

ದೇವ ಪಿತೃಕಾರ್ಯಾಭ್ಯಾಂ ನ ಪ್ರಮದಿತವ್ಯಂ. ಮಾತೃದೇವೋಭವ. ಪಿತೃದೇವೋ ಭವ. ಯಾನ್ಯನವದ್ಯಾನಿಕರ್ಮಾಣಿತಾನಿ ಸೇವಿತವ್ಯಾನಿ ನೋ ಇತರಾಣಿ. ಯಾನ್ಯಸ್ಮಾಕಂ ಸುಚರಿತಾನಿ ತಾನಿ ತ್ವಯೋಪಾಸ್ಯಾನಿ ನೋ ಇತರಾಣಿ.

'ಇತ್ಯಾದಿಯಾಗಿ ಮುಮುಕ್ಷುವು ಅನುಷ್ಠಿಸಬೇಕೆಂಬ ವಿಷಯಗಳನ್ನು ಸಾಂಗ ವೇದವನೋದಿಸಿ ಆಚಾರ್ಯನು ಉಪದೇಶಿಸುವನು. ಅಲ್ಲಿಯೂ ಲಿಂಗಪೂಜೆಯು ಬರುವುದಿಲ್ಲ. ಇದಕ್ಕೆ ದೇವಪಿತೃಕಾರ್ಯಾಭ್ಯಾಂ ನ ಪ್ರಮದಿತವ್ಯಂ ಎಂಬ ಯಜುಸ್ಸು ಉಂಟಲ್ಲ! ಎಂದು ಸಿದ್ಧಾಂತಿಯು ತೋರಿಸಬಹುದು. ಆದರೆ ದೇವಕಾರ್ಯ ಪಿತೃಕಾರ್ಯ ಶಬ್ದಗಳು ಧರ್ಮಶಾಸ್ತ್ರದಲ್ಲಿ ದೇವತೆಗಳನ್ನು ಉದ್ದೇಶಿಸಿ ಬೀಳುವ ಅಗ್ನಿಯಲ್ಲಿಕ್ಕುವ) ಹೋಮ ಕಾರ್ಯಕ್ಕೂ ಪಿತೃಗಳನ್ನುದ್ದೇಶಿಸಿ ಮಾಡುವ ಶ್ರಾದ್ಧಕ್ಕೂ ಹೆಸರಾಗಿವೆ.

ಋಷಯಃ ಪಿತರೋ ದೇವಾ ಭೂತಾನ್ಯತಿಥಯಸ್ತಥಾ ।
ಆಶಾಸತೇ ಕುಟುಂಬಿಭ್ಯ ತೇಭ್ಯಃ ಕಾರ್ಯಂ ವಿಜಾನತಾ ॥
ಮನು ೩—೮೦.

ಸ್ವಾಧ್ಯಾಯೇನಾರ್ಚಯೇದೃಷಿನ್ ಹೋಮೈರ್ದೇವಾನ್ಯಥಾವಿಧಿ ।
ಪಿತೃನ್ ಶ್ರಾದ್ಧೈಶ್ಚ ನಾನಾನ್ನೈರ್ಭೂತಾನಿ ಬಲಿಕರ್ಮಣಾ ॥
ಮನು. ೩—೮೧.

ದೇವಾನೃಷೀನ್ಮನುಷ್ಯಾಂಶ್ಚಪಿತೄನ್ ಗೃಹ್ಯಾಂಶ್ಚ ದೇವತಾಃ ।
ಪೂಜಯಿತ್ವಾತತಃ ಪಶ್ಚಾದ್ಗೃಹಸ್ಥಃ ಶೇಷಭುಗ್ಭವೇತ್ ॥
ಮನು. ೩—೧೧೭.

ದ್ವಾ ದೈವೇ ಪಿತೃಕಾರ್ಯೇ ತ್ರೀನೇಕೈಕಮುಭಯತ್ರವಾ ।
ಭೋಜಾಯೇತ್ಸು ಸಮೃದ್ಧೋಪಿ ನ ಪ್ರಸಜ್ಜೇತ ವಿಸ್ತರೇ ॥
ಮನು ೩—೧೨೫.

ದೇವಕಾರ್ಯಾದ್ದ್ವಿಜಾತೀನಾಂ ಪಿತೃ ಕಾರ್ಯಂ ವಿಶಿಷ್ಯತೇ ।
ದೈವಂ ಹಿ ಪಿತೃಕಾರ್ಯಸ್ಯ ಪೂರ್ವಮಾಪ್ಯಾಯನಂ ಸ್ಮೃತಂ ॥
ಮನು ೩—೨೦೩.

ಋಷಿಗಳು, ಪಿತೃಗಳು, ದೇವತೆಗಳು, ಪ್ರಾಣಿಗಳು ಅತಿಥಿಗಳು ಗೃಹಸ್ಥರಿಂದ ಹಿತನಿರೀಕ್ಷಣಂಗೆಯ್ವರು. ಬಲ್ಲವನು ಅವರಿಗಾಗಿ ಮಾಡಬೇಕು.

ದೇವತೆಗಳನ್ನು ಋಷಿಗಳನ್ನು ಮನುಷ್ಯರನ್ನು ವೇದಾಧ್ಯಯನದಿಂದ ಋಷಿಗಳನ್ನು, ಹೋಮಗಳಿಂದ ದೇವತೆಗಳನ್ನು, ಪಿತೃಗಳನ್ನು ತೆರತೆರನಾದ ಅನ್ನಗಳುಳ್ಳ ಶ್ರಾದ್ಧಗಳಿಂದ, ಪ್ರಾಣಿಗಳನ್ನು ಬಲಿದಾನದಿಂದ ಯಥಾವಿಧಿ ಅರ್ಚಿಸತಕ್ಕುದು.

ದೇವತೆಗಳನ್ನು ಋಷಿಗಳನ್ನು ಮನುಷ್ಯರನ್ನು ಪಿತೃಗಳನ್ನು ಮನೆಯ ದೇವರುಗಳನ್ನು ಪೂಜಿಸಿ ಬಳಿಕ ಗೃಹಸ್ಥನು ಉಳಿದುದನುಣ್ಣುವನಾಗಬೇಕು.

ದೇವಕಾರ್ಯ ಇಬ್ಬರನ್ನೂ (ಬ್ರಾಹ್ಮಣರನ್ನು) ಪಿತೃಕಾರ್ಯದಲ್ಲಿ ಮೂವರನ್ನೂ ಅಥವಾ ಉಭಯ ಕಾರ್ಯಗಳಲ್ಲಿಯು ಒಬ್ಬೊಬ್ಬನನ್ನು ಉಣಿಸಬೇಕು. ಒಳ್ಳೆ ದೈವುಳ್ಳವನಾದರು ಬಿತ್ತರದಲ್ಲಿ ತೊಡಗಬಾರದು.

ದ್ವಿಜರಿಗೆ ದೈವಕಾರ್ಯಕ್ಕಿಂತಲು ಪಿತೃಕಾರ್ಯವು ಮಿಗಿಲು. ದೇವಕಾರ್ಯವು ಪಿತೃಕಾರ್ಯದ ಪರಿಪೂರ್ವಕವಾಗಿದೆ.

ಎಂಬಿಂತಹ ಒಂದಲ್ಲವಾದ ಧರ್ಮಶಾಸ್ತ್ರದ ನುಡಿಗಳು ದೇವಕಾರ್ಯವೆಂದರೆ ಲಿಂಗಪೂಜೆಯಲ್ಲ, ಶಿವಪೂಜೆಯಲ್ಲವೆಂದು ತೋರಿಪುವು. ಲಿಂಗ ಪೂಜೆಗೆ ದೇವಕಾರ್ಯವೆನ್ನುವ ಬಳಿಕೆಯೂ ಇಲ್ಲ. ದೇವಕಾರ್ಯವೆಂದು ಒಂದೆ ಪದವಿಲ್ಲ. ದೇವಪಿತೃಕಾರ್ಯಾಭ್ಯಾಂ ಎಂದು ದ್ವಂದ್ವ ಸಮಾಸದ ಪದವಿದೆ. ದ್ವಂದ್ವ ಸಮಾಸವು "ಉಭಯ ಪದ ಪ್ರಧಾನೋ ದ್ವಂದ್ವಃ" ಎಂಬ ವೈಯಾಕರಣಮತದಿಂದ ಎರಡೂ ಪದಗಳು ಪ್ರಧಾ

ನವಾದುದು. ಆದುದರಿಂದ ಪಿತೃಕಾರ್ಯದೊಡನೆ ಹೇಳಿದ ದೇವ ಕಾರ್ಯವು ಸ್ಮೃತಿ ಶಾಸ್ತ್ರಗಳಲ್ಲಿ ಅದರೊಡನೆ ಬರುವ ದೇವಕಾರ್ಯವಾಗಿರಬೇಕಲ್ಲದೆ ಲಿಂಗಪೂಜೆಯಲ್ಲ. ಸಿದ್ಧಾಂತಿಯು ಆಗ್ರಹಕ್ಕಾಗಿ ದೇವ ಕಾರ್ಯ ಶಬ್ದವು ಎಂದಾದರು ಲಿಂಗಪೂಜೆಯೆಂಬರ್ಥದಲ್ಲಿ ಬಳಕೆಯಾಗಬಹುದೆಂದರು. ಈ ಶ್ರುತಿಯಲ್ಲಿ ಪಿತೃಕಾರ್ಯ ಸಾಹಚರ್ಯದಿಂದ ಸ್ಮಾರ್ತ ಧರ್ಮದ ದೇವತೆಗಳಿಗಾಗಿ ಕೊಡುವ ಹೋಮಕಾರ್ಯವಾಗಿದೆ. ಸಾಹಚರ್ಯವು ಅರ್ಥ ನಿರ್ಣಯಕ್ಕೆ ಹೇತುವೆಂಬಲ್ಲಿ—

ಸಂಯೋಗೋವಿಪ್ರಯೋಗಶ್ಚ ಸಾಹಚರ್ಯಂ ವಿರೋಧಿತಾ ।

- - - - - - - - - - - - - - - - - - - - - - - - - - - - - -

ಶಬ್ದಾರ್ಥಸ್ಯಾನವಚ್ಛೇದೇ ವಿಶೇಷ ಸ್ಮೃತಿ ಹೇತವಃ( ಕಾವ್ಯ ಪ್ರಕಾಶ) ಎಂಬುದು ಪ್ರಮಾಣವಾಗಿದೆ.

ಶ್ರೀ ಪಂಡಿತಾಚಾರ್ಯನು ಇಂತಹ ನಿಜವಾದ ಸಂಶಯ ಪೂರ್ವ ಪಕ್ಷಗಳನ್ನು ಎತ್ತದೆ ಕೆಲವಂಶದಲ್ಲಿ ತನಗೆ ಬೇಕಾದಂತೆ ಅವುಗಳನ್ನು ಒಡ್ಡಿ ಸಿದ್ಧಾಂತ ( ರಾದ್ಧಾಂತ ? ) ವನ್ನು ಹಮ್ಮಿರುವನು. ಇದೆಂತೆಂದರೆಃ-

ಶ್ರೀ ಪಂಡಿತಾಚಾರ್ಯನ ಪೂರ್ವ ಪಕ್ಷದಲ್ಲಿ, ಧರಿಸುವ ಲಿಂಗವು ಪರಿಚ್ಛಿನ್ನವಾದುದರಿಂದ ವಿಶ್ವರೂಪವೆಂಬ ಬ್ರಹ್ಮಧರ್ಮವು ಆ ಲಿಂಗವ ಅನ್ವಯಿಸಲಾರದೆಂದು ವಾದವನೆತ್ತಿದೆ. ಇದು ಬ್ರಹ್ಮಸೂತ್ರಾನುಸರಣವಾಗಿ ಏಳಬಾರದವಾದವು. "ಅರ್ಭಕೌಕಸ್ತ್ವಾತ್ತದ್ವ್ಯಪದೇಶಾಚ್ಚ ನೇತಿ ಚೇನ್ನ ನಿಚಾಯ್ಯತ್ವಾದೇವಂ ವ್ಯೋಮವಚ್ಚ" ಅ. ೧. ಪಾ. ೨. ಸೂ. ೨ ಎಂಬೀ ಸೂತ್ರದಲ್ಲಿಯು ಹೃದ್ಯಪೇಕ್ಷಯಾತು ಮನುಷ್ಯಾಧಿಕಾರತ್ವಾತ್ ಅ-೧ ಪಾ. ೩ ಸೂತ್ರ ೨೫ ಎಂಬ ಮತ್ತೊಂದು ಸೂತ್ರದಲ್ಲಿಯು ಶ್ರೀಬಾದರಾಯಣಾಚಾರ್ಯನೆ ಭಕ್ತರ ಉಪಾಸನೆಗಾಗಿ ಬ್ರಹ್ಮವು ಪರಿಚ್ಛೇದವನ್ನು ತಾಳಲಹುದೆಂದು ಹೇಳುವನಾಗಿ ಶ್ರೀಕಂಠಾಚಾರ್ಯನ ಅಥವಾ ಶ್ರೀಶಂಕರಾಚಾರ್ಯನ ಮತದ ಪೂರ್ವಪಕ್ಷದಲ್ಲಿ ಈ ವಾದವು ಹುಟ್ಟಲಾರದು ಆಚಾರ್ಯನು ತನಗೆ ಬೇಕಾದಂತ ಸುಲಭವಾದ ಪೂರ್ವಪಕ್ಷವನ್ನು ಮಾಡಿರುವನು. ಉಪಾಸನಕ್ಕಾಗಿ ಬ್ರಹ್ಮವು ಲಿಂಗವು ಪರಿಚ್ಛೇದವನ್ನು ತಾಳಬಹುದೆಂಬ ಉತ್ತರವು ಸುಕರವಾಗಿದೆ. ಅದಿರಲಿ. ದೇವಧಾರಣ ಶ್ರುತ್ಯರ್ಥವನ್ನು ವಿಚಾರಿಸುವಣ—

## ವೇದಸ್ವರವಿಚಾರವು.

ಮೊದಲು ವೇದಸ್ವರಗಳ ವಿಚಾರವು ಮಾಡತಕ್ಕುದಾಗಿದೆ. ವೇದದಲ್ಲಿ ಸ್ವರವು ಬಹು ಮಹತ್ವವನುಳ್ಳುದು. ಹದಿನಾಲ್ಕು ಸ್ವರಗಳು ಅಕಾರದಿಂದ ಔಕಾರದ ವರೆಗೆ ಉಂಟು. ಸ್ವರಗಳು ಕಂಠದಿಂದ ತುಟಿಯ ವರೆಗೆ ಬೇರೆ ಬೇರೆ ಮೆಟ್ಟುಗಳಲ್ಲಿ ನಾಲಗೆಯ ವ್ಯಾಪಾರದಿಂದ ಹುಟ್ಟುವುವು. ಅವುಗಳು ಹುಟ್ಟುವ ಮೆಟ್ಟುಗಳಲ್ಲಿ ಎಲ್ಲಕ್ಕು ಮೇಲುಗಡೆಯ ಭಾಗವನ್ನು ನಾಲಗೆಯು ಮುಟ್ಟಿ ಆದ ಉಚ್ಚಾರವು ಉದಾತ್ತವು. ಎಲ್ಲಕ್ಕು ಕೆಳಗಡೆಯನ್ನು ಮುಟ್ಟಿ ಆದ ಉಚ್ಚಾರವು ಅನುದಾತ್ತವು. ಸಮಭಾಗದಲ್ಲಿ ಆದ ಉಚ್ಚಾರವು ಸ್ವರಿತವು. ಉಚ್ಚೈರುದಾತ್ತಃ ಪಾ. ೧-೨-೨೦. ನೀಚೈರನುದಾತ್ತಃ ಪಾ. ೧-೨ ೩೦ ಸಮಾಹಾರಃ ಸ್ವರಿತಃ ಪಾ. ೧-೨-೩೧.

ಭಾಷೆಯಲ್ಲಿ ನಾವು ಈ ಸ್ವರಗಳನ್ನು ಅಷ್ಟೆ ಆಗಲಿ ವ್ಯಂಜನಗಳೊಡನೆ ಕೂಡಿ ಗುಣಿತಾಕ್ಷರಗಳಲ್ಲಿ ಆಗಲಿ ಅವು ಹುಟ್ಟುವ ಸ್ಥಾನದಲ್ಲಿ ಯಾವ ಭಾಗದಲ್ಲಿ ಆದರು ನಾಲಗೆಯನ್ನು ಹಚ್ಚಿ ಉಚ್ಚರಿಸಿದರೂ ಶಬ್ದಾರ್ಥದಲ್ಲಿ ಭೇದವಾಗದು. ವೇದದಲ್ಲಿ ಹಾಗಲ್ಲ--ಶಬ್ದವನ್ನು ಯೋಗ್ಯ ಸ್ವರದಿಂದಲೆ ಉಚ್ಚರಿಸಬೇಕು. ಸ್ವರಗಳು ಸಂಧಿ ಸಮಯದಿಂದಲು ಸಮಾಸ ನಿಯಮದಿಂದಲು ಬದಲಾಗುವುದು. ವಿಭಕ್ತ್ಯನುಸಾರದಿಂದಲು ಬದಲಾಗುವುದು. ಆದುದರಿಂದ ಅರ್ಥ ನಿರ್ಣಯದಲ್ಲಿ ಸ್ವರವು ಅತ್ಯಂತ ಮಹತ್ತ್ವದ ಅಂಶವಾಗಿದೆ. ಬ್ರಹ್ಮಚಾರಿಯು ವೇದ ಶಬ್ದಗಳ ಉಚ್ಚಾರವನ್ನು ಮತ್ತು ಅವು ಋಕ್ಕುಗಳಲ್ಲಿಯು ಯಜುಸ್ಸುಗಳಲ್ಲಿಯು ಸಾಮಗಳಲ್ಲಿಯು ಸಮುದಾಯವಾದಾಗ ಸಂಹಿತೆಯಲ್ಲಿ ಉಚ್ಚರಿಸುವ ಕ್ರಮವನ್ನು ಆಚಾರ್ಯನ ಉಚ್ಚಾರಗಳಂತೆ ಉಚ್ಚರಿಸಿ ಕಲಿವನು. ಉಚ್ಚಾರಗಳನ್ನು ಪುಸ್ತಕಗಳಲ್ಲಿ ಚಿಹ್ನಗಳಿಂದ ತಿಳಿಸುವರು.

ಉದಾತ್ತಕ್ಕೆ ಚಿಹ್ನವನ್ನು ಹಾಕುವದಿಲ್ಲ. ಅನುದಾತ್ತಕ್ಕೆ ಬುಡದಲ್ಲಿ— ಹಾಕುವರು. ಸ್ವರಿತಕ್ಕೆ ಮೇಲೆ ಹಾಕುವರು—"ಅನುದಾತ್ತಂ ಪದಮೇಕವರ್ಜಂ" ಪಾ. ೬—೧—೧೫೮. ಎಂಬ ಸೂತ್ರದಿಂದ ಒಂದು ಪದದಲ್ಲಿ ಒಂದು ಸ್ವರವು ಮಾತ್ರ ಉದಾತ್ತವಿರಬಲ್ಲುದು. ಉಳಿದುವು ಅನುದಾತ್ತ ಸ್ವರಗಳು. ಉದಾತ್ತದ ಮುಂದೆ ಬಂದ ಅನುದಾತ್ತವು ಉದಾತ್ತಾದ

ನುದಾತ್ತಸ್ಯ ಪಾ. ೮-೪-೬೬ ಸೂತ್ರದಿಂದ ಸ್ವರಿತವಾದವುವು. ಆ ಸ್ವರಿತದ ಮುಂದಿನ ಅನುದಾತ್ತಗಳು ಪ್ರಚಯವಾದವುವು. ಪ್ರಚಯಕ್ಕು ಚಿಹ್ನ ವನ್ನು ಬಳಸುವುದಿಲ್ಲ. ಸ್ವರಿತದ ಮುಂದೆ ಅಥವಾ ಪ್ರಚಯದ ಮುಂದೆ ಉದಾತ್ತ ಸ್ವರವು ಬಂದರೆ ಆ ಸ್ವರಿತವು ಅಥವಾ ಪ್ರಚಯವು ಪುನಃ ಅನುದಾತ್ತವಾದವುದು.

## ಪ್ರಕೃತೋಪಯೋಗಿ ನಿಯಮಗಳು.

"ಆಮಂತ್ರಿತಸ್ಯ ಚ" ಪಾ. ೮-೧-೧೯. ಪಾದದ ಆದಿಯಲ್ಲಿರದ ಸಂಬೋಧನ ವಿಭಕ್ತ್ಯಂತ ಪದವು ಸರ್ವಾನುದಾತ್ತವು—"ಸಮಾಸಸ್ಯ." ಪಾ. ೬-೧ ೨೨೩. ಸಮಾಸದ ಅಂತ್ಯ ಸ್ವರವು ಉದಾತ್ತವು—"ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಂ" ಪಾ. ೬-೨-೧. ಬಹುವ್ರೀಹಿ ಸಮಾಸದಲ್ಲಿ ಸಮಾಸದ ಪೂರ್ವಪದವು ತನ್ನ ಸ್ವರವನ್ನು ಬದಲಿಸುವುದಿಲ್ಲ.

## ದೇವಧಾರಣ ಶೃತಿಸ್ವರ ವಿಚಾರವು.

ಅಮೃತಸ್ಯ ದೇವ ಧಾರಣೋ ಭೂಯಾಸಮ್ । ಪಾದದ ಆದಿಯಲ್ಲಿಯ

ಅಮೃತಸ್ಯ ಪದದ ಪ್ರಾತಿಪದಿಕವಾದ ಅಮೃತ ಶಬ್ದವು. ಮೃತಂ ಅಮೃತಂ

ಮರಣವಲ್ಲದುದು ಅಮೃತವು. ಮರಣ ರಹಿತವಾದ ಸ್ಥಿತಿಯು ಇಲ್ಲಿ ಅದಕ್ಕೆ ಕಾರಣವಾದ ಬ್ರಹ್ಮಜ್ಞಾನವು. ನಞ್ ತತ್ಪುರುಷ ಸಮಾಸವು. ಸಮಾಸ್ಯ ಎಂಬ ಸೂತ್ರಕ್ಕೆ ಅಪವಾದವಾಗಿ ತತ್ಪುರುಷೇ ತುಲ್ಯಾರ್ಥ ತೃತೀಯಾ ಸಪ್ತಮ್ಯುಪಮಾನಾವ್ಯಯದ್ವಿತೀಯಾ ಕೃತ್ಯಾಃ ಪಾ. ೬-೨-೨ ಎಂಬ ಸೂತ್ರದಿಂದಲು "ನಿಷ್ಠಾ ಚದ್ವ್ಯಜನಾತ್. ಪಾ. ೬-೧-೨೦೫ ಎಂಬ ಸೂತ್ರದಿಂದಲು ಮಧ್ಯೋದಾತ್ತವಾಗಿದೆ. ಅನುದಾತ್ತೌ ಸುಪ್ಪಿತೌ ಪಾ ೩-೧-೪. ಎಂಬ ಸೂತ್ರದಿಂದ 'ಸ್ಯ' ಎಂಬ ಷಷ್ಠೀ ವಿಭಕ್ತಿ ಪ್ರತ್ಯಯವು ಅನುದಾತ್ತವು. ಮೇಲಿನ ನಿಯಮಗಳಿಂದ ಈ ಪದವನ್ನು

ಅಮೃತಸ್ಯ ಎಂದು ಸಂಹಿತೆಯಲ್ಲಿ ಬರೆದಿದೆ.

ಶ್ರೀ ಪಂಡಿತಾಚಾರ್ಯನು ದೇವಧಾರಣಃ ಎಂಬ ಪದವು ಬಹು ವ್ರೀಹಿ ಸಮಾಸವೆಂದು ಹೇಳುತ್ತ ಲಿಂಗಧಾರಣ ಸಿದ್ಧಿಯನ್ನು ಬಯಸುವನು. ಇದು ಸ್ವರ ಶಾಸ್ತ್ರದಿಂದ ಸಿದ್ಧಿಸದು. ಹೇಗೆಂದರೆ ದೇವ ಶಬ್ದವು "ದಿವು" ಧಾತುವಿಗೆ. " ನಂದಿ-ಗ್ರಹಿಪಚಾದಿಭ್ಯೋಲ್ಯುಣಿನ್ಯಚಃ' ಪಾ. ೩-೧-೧೩೪. ಎಂಬ ಸೂತ್ರದಿಂದ ಅಚ್ ಪ್ರತ್ಯಯವು ಸೇರಿ ಆಗಿದೆ. "ಚಿತಃ" ೬-೧-೬೩ ಸೂತ್ರದಿಂದಲು "ಫಿಷೋ ಅಂತ ಉದಾತ್ತಃ" ಎಂಬ ಸೂತ್ರದಿಂದಲು ಅಂತೋದಾತ್ತವಾಗಿದೆ. ಅದನ್ನು ದೇವಃ ಎಂದು ಬರೆಯಬೇಕು. ಧಾರಣ ಶಬ್ದವು ಧೃಞ್ ಧಾತುವಿಗೆ 'ಕೃತ್ಯ ಲ್ಯುಟೋ ಬಹುಲಂ' ಪಾ. ೩-೩-೧೧೩ ಸೂತ್ರದಿಂದ ಲ್ಯುಟ್ ಪ್ರತ್ಯಯವು ಸೇರಿ ಆಗಿದೆ. ಲಿತಿ ಪಾ. ೬-೧-೧೯೩ ಸೂತ್ರದಿಂದ ಆದ್ಯುದಾತ್ತವಾಗಿದೆ. ಧಾರಣಃ ಪದವನ್ನು ಧಾರಣಃ ಎಂದು ಬರೆಯಬೇಕು. "ಬಹುವ್ರೀಹೌ ಪ್ರಕೃತ್ಯಾ ಪೂರ್ವ ಪದಂ" ಸೂತ್ರದಿಂದ ಬಹುವ್ರೀಹಿ ಸಮಾಸ ಪದವನ್ನು ದೇವಧಾರಣಃ ಎಂದು ಬರೆಯಬೇಕು—'ಈ ಸಮಗ್ರ ಪಾದವನ್ನು ಶಿಕ್ಷಾಶಾಸ್ತ್ರದ ನಿಯಮದಂತೆ ಬಹುವ್ರೀಹಿ ಸಮಾಸ ಪದವೆಂದು ಹಿಡಿದರೆ ಅಮೃತಸ್ಯ ದೇವ ಧಾರಣೋ ಭೂಯಾಸಂ ಎಂದು ಬರೆಯಬೇಕು. ಆದರೆ ಹಾಗೆ ಬರೆದಿಲ್ಲ. ಅಮೃತಸ್ಯ ದೇವ ಧಾರಣೋ ಭೂಯಾಸಂ" ಎಂದು ಬರೆದಿದೆ. ಪಾದದ ಆದಿಯಲ್ಲಿ ಅಮೃತಸ್ಯ ಎಂಬ ಪದವದೆ. 'ಆಮಂತ್ರಿತಸ್ಯ ಚ" ಸೂತ್ರದಿಂದ ದೇವಶಬ್ದವು ಅನುದಾತ್ತ ಪದವಾಯ್ತು. ಅಂದರೆ ದೇವ ಎಂದು ಆಯ್ತು. ಸ್ವರಿತವಾದ ತಕಾರದ ಮುಂದೆ ಅನುದಾತ್ತಗಳೆಲ್ಲ ಪ್ರಚಯವಾದುವು. ಆದರೆ ಧಾರಣಃ ಪದದಲ್ಲಿಯ ಧಾವಿದಾತ್ತವಾದುದರಿಂದ "ವ"ದ ಸ್ವರವು ಅನುದಾತ್ತವಾಯ್ತು. ಅಂತು ಪಾದವನ್ನು

ಅವೃತಸ್ಯ ದೇವ ಧಾರಣೋ ಭೂಯಾಸಂ ಎಂದು ಬರೆದುದರಿಂದ ಬಹು

ವ್ರೀಹಿಸವಾಸವು ಸಿದ್ಧಿಸಲಿಲ್ಲ ಲಿಂಗಧಾರಣವೂ ಸಿದ್ಧಿಸಲಿಲ್ಲ— "ಶಿಕ್ಷಾ ಘ್ರಾಣಂತು ವೇದಸ್ಯ ಮುಖಂ ವ್ಯಾಕರಣಂ ಮತಂ" ಎಂಬುದನ್ನು ನೆನಸಿದರೆ, ಶ್ರೀ ಪಂಡಿತಾಚಾರ್ಯನು ವೇದದ ಮೂಗನ್ನೆ ಕೊಯ್ದಿರುವನು.

[ಮುಂದೆ]

---

# ಕಿತ್ತೂರ ಸಂಸ್ಥಾನದ ಇತಿಹಾಸ.

(ಬರೆದವ:— ಶ್ರೀಯುತ ಕಲ್ಮೇಶ್ವರ, ಚೆನ್ನಮಲ್ಲಪ್ಪ, ಶ್ರೇಷ್ಠಿ ಸಂಪಗಾಂವ ಮುಕ್ಕಾಮ ಬೈಲಹೊಂಗಲ ಜಿಲ್ಲಾ ಬೆಳಗಾಂವ.)

ಕಿತ್ತೂರ ಸಂಸ್ಥಾನದ ಇತಿಹಾಸವನ್ನು ಮೊದಲು ಹಿಸ್ಟಾರಿಕಲ್ ಅಕೌಂಟ ಆಫ್ ಬೆಳಗಾವ ಡಿಸ್ಟ್ರಿಕ್ಟ (ಮಿ॥ ಸ್ಟೋಕಕೃತ) ಮತ್ತು ಇಂಗ್ಲಿಷ ಗ್ಯಾಝಿಟಿಯರದಲ್ಲಿ ಬರೆದಿರುತ್ತಾರೆ. ಆಮೇಲೆ ಪ್ರೋಫೆಸರ ಮೋಡಕ ಇವರು ಮೇಲಿನ ಇಂಗ್ಲಿಷ ಗ್ರಂಥಗಳ ಆಧಾರದ ಮೇಲಿಂದ ಮರಾಠಿಯಲ್ಲಿ ಬರೆದಿರುತ್ತಾರೆ. ಇವರ ಮರಾಠೀ ಲೇಖದ ಅನುವಾದವನ್ನೇ ಮ. ರಾ. ರಾ. ಶಿವಾನಂದ ಯಜ್ಞೇಶ್ವರ ವಾಜಪೆ ಕನ್ನಡ ಶಾಲೆಯು ಮಾಸ್ತರ ಇವರು ಧಾರವಾಡದಲ್ಲಿ ಹೊರಡುವ ಕನ್ನಡ ಶಾಳಾ ಪತ್ರಿಕೆಯಲ್ಲಿ ಬರೆದಿರುತ್ತಾರೆ. ಮ. ರಾ. ರಾ. ವೆಂಕಟರಂಗೋ ಕಟ್ಟಿ ಧಾರವಾಡ ಇವರು ಕನ್ನಡ ಗ್ಯಾಝಿಟಿಯರದಲ್ಲಿ ಹಾಗು ಮೊದಲಿನ ಕನ್ನಡ ನಾಲ್ಕನೇ ಪುಸ್ತಕದಲ್ಲಿ ಒಂದು ಪಾಠ ಬರೆದಿರುತ್ತಾರೆ.

ಬಾಪುಗೋಖಲೆ ಮತ್ತು ಪಟವರ್ಧನ ಸರದಾರರ ಇತಿಹಾಸದಲ್ಲಿ ಅಲ್ಪಸ್ವಲ್ಪ ಕಿತ್ತೂರಕರ ಇತಿಹಾಸವು ಇರುವದು ಕಂಡುಬರುತ್ತದೆ.

ಕೈ. ಗಂಗಾಧರ ಮಡಿವಾಳೇಶ್ವರ ತುರಮರಿ ಇವರು ಕಿತ್ತೂರ ಸಂಸ್ಥಾನದ ಇತಿಹಾಸವನ್ನು ಬರೆಯಬೇಕೆಂದು ಮಾಡಿದ್ದರಂತೆ. ಆದರೆ

ಅವರ ಮೇಲಧಿಕಾರಿಗಳು ಅಪ್ಪಣೆಯನ್ನು ಕೊಡದ್ದರಿಂದ ಅದು ಹಾಗೆಯೇ ಉಳಿಯುತೆಂದು ಕೇಳುತ್ತೇನೆ.

ಮುಂದೆ ಇನ್ನುವರಿಗೆ ಅಂವರೆ ಸಂಸ್ಥಾನವು ಹಾಳಾಗಿ ೧೦೩ ವರ್ಷಗಳಾದರೂ ಕಿತ್ತೂರ ಸಂಸ್ಥಾನದ ಇತಿಹಾಸವನ್ನು ಬರೆಯಲಿಕ್ಕೆ ಯಾರೂ ಮನಸ್ಸು ಹಾಕದ್ದು ಆಶ್ಚರ್ಯಕರವಾದ ಸಂಗತಿಯಾಗಿರುತ್ತದೆ.

ಈಗ ೪—೫ ವರ್ಷಗಳ ಹಿಂದೆ ನನ್ನ ಮನಸ್ಸಿನಲ್ಲಿ ಕಿತ್ತೂರ ಇತಿಹಾಸವನ್ನು ಬರೆಯಲಿಕ್ಕೆ ಬೇಕಾಗುವ ಸಾಹಿತ್ಯಗಳನ್ನು ಕೂಡಿಸಬೇಕೆಂಬ ಆಲೋಚನೆ ಬರಲು ಈ ನನ್ನ ವಿಚಾರವನ್ನು ನನ್ನ ಸನ್ಮಾನ್ಯ ಮಿತ್ರರಾದ ಶ್ರೀಯುತ ಭಾವೆಪ್ಪ ಚೆನ್ನಬಸವಪ್ಪ ಮೂಗಿ ಮುಕ್ಕಾಮು ಬೈಲಹೊಂಗಲ ಇವರ ಮುಂದೆ ಇಟ್ಟೆನು. ಅವರಾದರೂ ಉತ್ಸಾಹದಿಂದ ಒಪ್ಪಿಕೊಂಡು ಕೂಡಲೆ ಕೆಲಸಕ್ಕೆ ಪ್ರಾರಂಭ ಮಾಡಿದರು. ಅವರು ದೇಸಗತಿಯ ಇತಿಹಾಸದ ಕಾಗದಪತ್ರಗಳು ಇವೆ ಎಂದು ಮೊದಲೇ ಗೊತ್ತಿದ್ದ ಹುನಶಿಕಟ್ಟಿ, ಗೆಜಪತಿ, ಕಿತ್ತೂರ ಮುಂತಾದ ಊರುಗಳಿಗೆ ಹೋಗಿ ಕಾಗದಪತ್ರಗಳನ್ನು ಹೇರಳವಾಗಿ ದೊರಕಿಸಿ ತಂದಿರುವರು.

ಆದರೆ ಕಿತ್ತೂರ ಸಂಸ್ಥಾನಕ್ಕೆ ಬಾದಶಹರು ಕೊಟ್ಟ ಸನದುಗಳು ಫಾರ್ಸಿ ಭಾಷೆಯಲ್ಲಿ ಇದ್ದು, ಅವು ಯಾರಿಗು ತಿಳಿಯದಂತಾಗಿವೆ. ನನ್ನ ಮಿತ್ರರಾದ ಶ್ರೀ. ಭಾವೆಪ್ಪನವರು ಬೆಳಗಾವಿಯಿಂದ ಒಬ್ಬ ಮೌಲಿವಿಯನ್ನು ಕರೆತಂದು, ಭಾಷಾಂತರ ಮಾಡಿಸುವ ಪ್ರಯತ್ನ ಮಾಡಿದರು. ಆದರೆ ಬಹಳ ಕಾಲಾವಧಿ ಮತ್ತು ದುಡ್ಡು ಬೇಕಾದ್ದರಿಂದ ಹಾಗೆ ಉಳಿದಿರುತ್ತದೆ. ಆದರೂ ಚಿಂತೆ ಇಲ್ಲ. ಕಿತ್ತೂರ ಸಂಸ್ಥಾನದ ಸಂಕ್ಷಿಪ್ತ ಇತಿಹಾಸವನ್ನು ಕರ್ನಾಟಕದ ಜನತೆಯ ಮುಂದೆ ಇಡಬೇಕೆಂಬ ಸದುದ್ದೇಶದಿಂದ ಈ ಚಿಕ್ಕ ಲೇಖವನ್ನು ಬರೆದಿರುತ್ತೇನೆ.

ಕಿತ್ತೂರ ಸಂಸ್ಥಾನದ ಇತಿಹಾಸವನ್ನು ಕೆಳಗೆ ಬೇರೆ ಸಾಧನಗಳಿಂದ ಬರೆಯಲಿಕ್ಕೆ ಬರುವಂತಿದೆ.

೧ ಆಖ್ಯಾಯಿಕೆಗಳು.
೨ ಸನದುಗಳು.
೩ ಪತ್ರಗಳು.
೪ ಪದಗಳು.

ಇವುಗಳ ಹೊರ್ತಾಗಿ ಪುಣೆಯಲ್ಲಿ ಆಲಿಯನೇಶನ್ನ (ವತನ) ರಿಕಾರ್ಡದಲ್ಲಿ ಕಿತ್ತೂರ ಸಂಸ್ಥಾನಕ್ಕೆ ಸಂಬಂಧಿಸಿದ ೧೦-೧೫ ದಪ್ತರಗಳು ಇರುವದಾಗಿಯೂ ಒಂದೊಂದು ದಪ್ತರದಲ್ಲಿ ೫೦೦ ಕಾಗದಪತ್ರಗಳು ಇರುವದಾಗಿಯೂ ಕೇಳುತ್ತೇನೆ. ಈ ದಪ್ತರಗಳನ್ನು ನೋಡುವ ಇಚ್ಛೆ ಇದ್ದವರು ಮೆ॥ ಕಮೀಶನರ ಸಾಹೇಬ ಬಹಾದ್ದೂರ ಸೆಂಟ್ರಲ ಡಿವ್ಹಿಜನ ಪುಣೆ ಇವರ ಕಡಿಗೆ ಅರ್ಜಿ ಮಾಡಬೇಕು. ಒಂದೊಂದು ದಪ್ತರಕ್ಕೆ ಹತ್ತು ರೂಪಾಯಿಗಳಂತೆ ಫೀ ಕೊಡಬೇಕು ಹೀಗೆ ನಿಯಮವಿರುತ್ತದೆಂದು ತಿಳಿಯುತ್ತದೆ. ಕಾರಣ ಇತಿಹಾಸ ಪ್ರೇಮಿಗಳಾದ ಕರ್ನಾಟಕಸ್ಥರು ಈ ದಪ್ತರಗಳ ಲಾಭವನ್ನು ಹೊಂದಿ ವಿಸ್ತೃತವಾದ ಕಿತ್ತೂರ ಇತಿಹಾಸವನ್ನು ಬರೆಯಲೆಂದು ಹಾರೈಸುತ್ತೇನೆ.

ಕಿತ್ತೂರ ಸಂಸ್ಥಾನವು ಉತ್ತರ ಕರ್ನಾಟಕದಲ್ಲಿ ಬಹು ಪ್ರಸಿದ್ಧವಾದ ದೇಸಗತಿ ಆಗಿತ್ತು.

೧೬ನೇ ಶತಕದ ಕಡೆಯಲ್ಲಿ ಈ ಕಿತ್ತೂರ ಸಂಸ್ಥಾನವನ್ನು ಹಿರೇಮಲ್ಲಶೆಟ್ಟಿ, ಚಿಕ್ಕಮಲ್ಲಶೆಟ್ಟಿ ಎಂಬ ಈರ್ವರು ಅಣ್ಣತಮ್ಮಂದಿರು ಕಲಬುರ್ಗೆಯ ಸೀಮೆಯಿಂದ ಬಂದು ವಿಜಾಪುರ ಬಾದಶಹರ ದಂಡಿನ ಕೂಡ ಚಿನಿವಾರರಾಗಿ ಸಂಪಗಾಂವಿಯಲ್ಲಿ ಇರುತ್ತಿದ್ದರು. ಹಿರೇಮಲ್ಲಶೆಟ್ಟಿಯು ವಿಜಾಪುರ ಬಾದಶಹರ ದಂಡಿನಲ್ಲಿ ಸೇರಿ ಶೌರ್ಯವನ್ನು ತೋರಿಸಿದ್ದರಿಂದ ಅವನಿಗೆ ಬಾದಶಹನು "ಸಮಶರಜಂಗಬಹಾದ್ದೂರ" ಎಂಬ ಬಿರುದು ಕೊಟ್ಟು ಹುಬ್ಬಳ್ಳಿಯ ಸರದೇಶಮುಖಿಯನ್ನು ಕೊಟ್ಟನು. ಈ ಹಿರೇ ಮಲ್ಲಶೆಟ್ಟಿಯನ್ನು ಹಿಡಿದು ೧೨ ಜನ ದೇಸಾಯರು ಕೆಳಗೆ ಬರೆದ ಪ್ರಕಾರ ರಾಜ್ಯಕಾರಭಾರ ಮಾಡಿರುತ್ತಾರೆ. ಅವರ ಹೆಸರುಗಳು ಕೆಳಗೆ ಬರೆದಂತೆ.

| ದೇಸಾಯರ ಹೆಸರುಗಳು. | ಆಳಿದ ವರ್ಷಗಳು |
|---|---|
| ೧ ಹಿರೇಮಲ್ಲಶೆಟ್ಟಿ | ೬ |
| ೨ ಹಿರೇನಾಗನಗೌಡಾ ಸರದೇಶ ಪಟ್ಟಣಶೆಟ್ಟಿ ಸುವರ್ಣ ಹಸ್ತ ಶಕೆ ೧೫೧೩ | ೪೩ |
| ೩ ಚಿಕ್ಕನಾಗನಗೌಡಾ (ಮೇಲಿನವನ ತಮ್ಮನು) | ೨೨ |
| ೪ ಚೆನ್ನಪ್ಪ ಬಿಚ್ಚಗತ್ತಿ | ೪ |

| | | |
|---|---|---|
| ೫ | ಅಲ್ಲಪ್ಪಗೌಡಾ ಸರದೇಸಾಯಿ | ೩೧ |
| ೬ | ಮುದಿಮಲ್ಲಪ್ಪ ಸರದೇಸಾಯಿ (ಗೌಡಶಬ್ದವು ಹೋಯಿತು) | ೫ |
| ೭ | ಚಿಕ್ಕಮಲ್ಲಪ್ಪ ದೇಸಾಯಿ (ಇವನು ಜುಲುಮೆಯಿಂದ ಸಿಕ್ಕಾ ತೆಗೆದುಕೊಂಡನು) | ೨೧ |
| ೮ | ಶಿವನಗೌಡಾ ಸರದೇಸಾಯಿ ಶಕೆ ೧೬೩೯ ರಿಂದ | ೧೭ |
| ೯ | ಮಲವರುದ್ರಗೌಡಾ ಶಕೆ ೧೬೫೬ ಕಾರ್ತಿಕ ಶುದ್ಧ ೧ ರಿಂದ | ೧೫ |
| ೧೦ | ವೀರಪ್ಪಗೌಡ ಸರದೇಸಾಯಿ ಶಕೆ ೧೬೭೧ | ೩೩ |
| ೧೧ | ಮಲ್ಲಪ್ಪ ಸರ್ಜ ಪ್ರತಾಪರಾವ ಶಮಶರಜಂಗ ಬಹಾದ್ದೂರ | ೩೪ |
| ೧೨ | ಶಿವಲಿಂಗರುದ್ರ ಸರ್ಜ ಸರದೇಸಾಯಿ | ೮ |

ಒಟ್ಟಿಗೆ ಹನ್ನೆರಡು ಜನರು ೨೩೯ ವರ್ಷ ಆಳಿದರು.

ಈ ಹನ್ನೆರಡು ಜನ ದೇಸಾಯರಲ್ಲಿ ೧ನೆಯವನಾದ ಹಿರೇಮಲ್ಲ ಶೆಟ್ಟಿಯು ವಿಜಾಪುರ ಬಾದಶಹರ ದಂಡಿನಲ್ಲಿ ಸೇರಿ ಎಷ್ಟೋ ಶೌರ್ಯ ಸಾಹಸದ ಪರಾಕ್ರಮಗಳನ್ನು ಮಾಡಿದ್ದರಿಂದ ಬಾದಶಹರು ಇವನ ಪರಾಕ್ರಮಕ್ಕೆ ಮೆಚ್ಚಿ ಹುಬ್ಬಳ್ಳಿ ಪ್ರಾಂತದ ಸರದೇಶಮುಖಿಯನ್ನು ಕೊಟ್ಟರು ಇಸ್ವಿ ಸನ್ ೧೫೮೫ ರಲ್ಲಿ.

೨ನೆಯವನಾದ ಹಿರೇನಾಗನಗೌಡಾ ಸರದೇಶಪಟ್ಟಣಶೆಟ್ಟಿ ಇವನು ಮಾಮಲೇದಾರ ಖವಾಸಖಾನ ಸಂಪಗಾಂವ ಈತನ ವೇಳೆಗೆ ಸರದೇಸಗತಿಯನ್ನು ಸಂಪಾದಿಸಿದನು.

೩ನೆಯವನು ಚಿಕ್ಕನಾಗನಗೌಡಾ ರಾಜ್ಯಕಾರಭಾರ ೨೨ ವರ್ಷ ಮಾಡಿದನು.

೪ನೆಯವನು ಚೆನ್ನಪ್ಪ ಬಿಚ್ಚುಗತ್ತಿ ೪ ವರ್ಷ ಮಾತ್ರ ರಾಜ್ಯಕಾರಭಾರ ಮಾಡಿದನು.

೫ನೆಯವನು ಅಲ್ಲಪ್ಪಗೌಡಾ ಸರದೇಸಾಯಿ ಇವನು ಶಕೆ ೧೫೮೨ ಮೊದಲು ೧೦ ವರ್ಷ ಆಳಿದನು. ಆನಂತರ ವಿಜಾಪೂರಕ್ಕೆ ೬ ವರ್ಷ

ಹೋದನು. ಅಲ್ಲಿಂದ ಸವಾಯಿ ಸಿಕ್ಕಾ ತೆಗೆದುಕೊಂಡು ಬಂದು ಮತ್ತೆ ೧೫ ವರ್ಷ ರಾಜ್ಯವಾಳಿದನು. ಇವನೇ ಕಿತ್ತೂರ ಕಿಲ್ಲೆಯನ್ನು ಕಟ್ಟಿಸಿದನು. ಅಂತು ೩೧ ವರ್ಷ ರಾಜ್ಯಕಾರಭಾರ ಮಾಡಿದನು.

೬ನೆಯವನು ಮುದಿಮಲ್ಲಪ್ಪ ಸರದೇಸಾಯಿ (ಶಕೆ ೧೬೧೩) ಐದು ವರ್ಷ ರಾಜ್ಯಕಾರಭಾರ ಮಾಡಿದನು. ಈತನ ಆಳಿಕೆಯಲ್ಲಿ ಔರಂಗಜೇಬ ಬಾದಶಹನು ವಿಜಾಪುರವನ್ನು ತೆಗೆದುಕೊಂಡನು. ಕಿತ್ತೂರ ಸಂಸ್ಥಾನದ ಕಾರಭಾರವು ಸವಣೂರ ನವಾಬರ ಕಡೆಗೆ ಬಂದಿತು ಶಕೆ ೧೬೧೮-೧೬೧೯.

೭ನೆಯವನಾದ ಚಿಕ್ಕ ಮಲ್ಲಪ್ಪ ದೇಸಾಯಿ ಇವನು ಜುಲುಮೆಯಿಂದ ಶಿಕ್ಕಾ ತೆಗೆದುಕೊಂಡು ೨೧ ವರ್ಷ ರಾಜ್ಯಕಾರಭಾರ ಮಾಡಿದನು.

೮ನೆಯವನಾದ ಶಿವನಗೌಡಾ ಇವನು ಔರಂಗಜೇಬ ಬಾದಶಹನಿಂದ ಅನೇಕ ಸನದುಗಳನ್ನು ಪಡೆದನು. ೧೭ ವರ್ಷ ರಾಜ್ಯಕಾರಭಾರ ಮಾಡಿದನು.

೯ನೆಯವ ಮಲಪ ರುದ್ರಗೌಡಾ ಅಥವಾ ಹುಚ್ಚ ಫಕೀರ ರುದ್ರಸರ್ಜ (ಶಕೆ ೧೬೫೬ ಕಾರ್ತಿಕ ಶುದ್ಧ ೧) ಇವನು ೧೫ ವರ್ಷ ರಾಜ್ಯಕಾರಭಾರ ಮಾಡಿದನು. ಈತನ ಆಳಿಕೆಯಲ್ಲಿ "ನಿರಂಜನಿ" ಎಂಬ ಹೆಸರಿನ ಒಬ್ಬ ಮುಸಲ್ಮಾನ ಜಾತಿಯ ಪಾತರದವಳನ್ನು ಲಿಂಗಾಯತ ಮತದ ದೀಕ್ಷೆ ಕೊಟ್ಟು ಬಹುಜನ ಸಮಾಜದ ವಿರುದ್ಧ ವೀರಶೈವ ಮತದಲ್ಲಿ ತೆಗೆದುಕೊಂಡನು. ಫಕೀರ ರುದ್ರಸರ್ಜನ ಖಾಸ ತಮ್ಮನಾದ ಮಲ್ಲಪ್ಪನು ನಿರಂಜನಿಯನ್ನು ದೀಕ್ಷೆ ಮಾಡುವದಕ್ಕೆ ವಿರುದ್ಧ ಅಭಿಪ್ರಾಯವುಳ್ಳವನಾಗಿದ್ದನು. ಅದರಿಂದ ಆತನ ಮೇಲೆ ಫಕೀರ ರುದ್ರ ಸರ್ಜನು ಸಿಟ್ಟಾಗಿ ಅವನನ್ನು ಕೊಲ್ಲಿಸಿದನು. ಆದರೆ ಫಕೀರ ರುದ್ರ ಸರ್ಜನಿಗೆ ಗಂಡು ಮಕ್ಕಳಿದ್ದಿಲ್ಲ. ಆದ್ದರಿಂದ ತಮ್ಮನ ಮಗನಾದ ವೀರಪ್ಪ ಸರ್ಜನನ್ನು ಗಾದಿಯ ಮೇಲೆ ಕೂಡ್ರಿಸಲಿಕ್ಕೆ ಸಿದ್ಧನಾದನು ಪರಂತು ವೀರಪ್ಪ ದೇಸಾಯಿಯ ತಂದೆಯಾದ ಮಲ್ಲಪ್ಪ ದೇಸಾಯಿಯನ್ನು ಫಕೀರ ರುದ್ರ ಸರ್ಜನು ಕೊಲ್ಲಿಸಿದ್ದರಿಂದ ವೀರಪ್ಪ ಸರ್ಜನ ತಾಯಿಯು ಮಗನನ್ನು ಕರೆದುಕೊಂಡು ಕಿತ್ತೂರ ಶ್ರೀಮನ್ನಿರಂಜನ ಕಲ್ಮಠ ಸ್ವಾಮಿಗಳವರ ಕಡೆಗೆ ಗುಪ್ತರೀತಿಯಿಂದ ಕೆಲವು ವರ್ಷ ಮತ್ತು ಉಪ್ಪಿನಬೆಟಗೇರಿ ಶೆಟ್ಟರ

ಮನೆಯಲ್ಲಿ ಕೆಲವು ವರ್ಷ ಗುಪ್ತರೀತಿಯಿಂದ ಇರುತ್ತಿದ್ದಳು. ಇತ್ತ ಫಕೀರ ರುದ್ರಸರ್ಜನಿಗೆ ತಮ್ಮನ ಹೆಂಡತಿ ಮತ್ತು ಆಕೆಯ ಮಗನು ಎತ್ತ ಹೋದರೆಂಬದನ್ನು ಹುಡುಕಲಿಕ್ಕೆ ಹಚ್ಚಿಸಿದನು. ಉಪ್ಪಿನಬೆಟಿಗೇರಿ ಶೆಟ್ಟರ ಮನೆಯಲ್ಲಿ ಇರುವದನ್ನು ಗುಪ್ತಚಾರರ ಮುಖದಿಂದ ಕೇಳಿ ತಾನೇ ಸ್ವತಃ ಜಂಗಮ ವೇಷದಿಂದ ಉಪ್ಪಿನಬೆಟಿಗೇರಿ ಶೆಟ್ಟರ ಮನೆಗೆ ಹೋಗಿ ಖಾತ್ರಿ ಮಾಡಿಕೊಂಡು ಕಿತ್ತೂರಿಗೆ ಬಂದು ರಾಜವೈಭವದಿಂದ ಅವರನ್ನು ಕರೆಸಿಕೊಂಡು ಏನೂ ಅಪಾಯವಿಲ್ಲೆಂದು ಅಭಯ ಕೊಟ್ಟು ಯುವರಾಜ್ಯಾಭಿಷೇಕವನ್ನು ವೀರಪ್ಪ ಸರ್ಜನಿಗೆ ಮಾಡಿದನು. ಮುಂದೆ ತಾನು ನಿಶ್ಚಿಂತೆಯಿಂದ ಸ್ವರ್ಗವಾಸಿಯಾದನು. ಈತನನ್ನೂ ನಿರಂಜನಿಯನ್ನೂ ಕೂಡಿ ದಫನ ಮಾಡಿದ ಸಮಾಧಿಗಳನ್ನು ಕಿತ್ತೂರ ಕಲ್ಮಠದಲ್ಲಿ ಇಂದಿಗೂ ಕಾಣಬಹುದು. ಕಿತ್ತೂರ ರಾಜಮನೆತನದವರನ್ನು ಸಮಾಧಿ ಮಾಡಿದ ಸ್ಥಳಗಳು ಕಿತ್ತೂರ ಕಲ್ಮಠದಲ್ಲಿಯೇ ಇರುತ್ತವೆ. ಈತನು ದೇಸನೂರು ಗುಡ್ಡದ ಮೇಲೆ ತನ್ನ ಹೆಸರಿನ ರುದ್ರಗಡವೆಂಬ ಸಣ್ಣ ಕಿಲ್ಲೆಯನ್ನು ಕಟ್ಟಿಸಿರುತ್ತಾನೆ. ಹಾಗು ಈತನು ಕಟ್ಟಿಸಿದ ನಿರಂಜನಿ ಮಹಾಲು ಎಂಬುದು ಇನ್ನೂ ದೇಸನೂರಲ್ಲಿ ಇರುತ್ತದೆ. ದೇಸನೂರು ಫಕೀರ ರುದ್ರಸರ್ಜನ ರಾಜ್ಯದ ಉತ್ತರ ಕಡೆಯ ಮೇರೆಯಾದ್ದರಿಂದ ಅಲ್ಲಿ ತನ್ನ ಹೆಸರಿನ ಕಿಲ್ಲೆ ಕಟ್ಟಿಕೊಂಡು ಇರುತ್ತಿದ್ದನೆಂದು ಊಹಿಸಲಿಕ್ಕೆ ಆಸ್ಪದವದೆ. ದೇಸನೂರಲ್ಲಿ ಕಿತ್ತೂರ ಕಲ್ಮಠದವರ ಶಾಖಾ ಮಠವು ಇರುತ್ತದೆ. ಈಗ ಆ ಮಠವು ಸ್ವತಂತ್ರವಿರುತ್ತದೆ. ಅದಕ್ಕೆ ಜಮೀನು ಇನಾಮು ಇರುತ್ತವೆ. ಇದರ ಮೇಲಿಂದ ಸಹ ದೇಸನೂರಲ್ಲಿ ರುದ್ರಸರ್ಜನು ಇರುತ್ತಿದ್ದನೆಂಬುದು ಸಿದ ವಾಗುತ್ತದೆ.

ನಿರಂಜನಿ ಪಾತರದವಳ ವಂಶಜರು ಈಗಲೂ ಕೂಡ ಸಾಂಗಲಿ ಸಂಸ್ಥಾನಕ್ಕೆ ಸೇರಿದ ತೇರದಾಳದಲ್ಲಿ ಇರುವದಾಗಿ ತಿಳಿಯುತ್ತದೆ.

೧೦ನೆಯ ವೀರಪ್ಪಗೌಡಾ ಸರದೇಸಾಯಿ (ಶಕೆ ೧೭೬೧) ಈತನು ೩೩ ವರ್ಷ ರಾಜ್ಯಕಾರಭಾರ ಮಾಡಿದನು. ಈತನು ಬಹುಪರಾಕ್ರಮಶಾಲಿಯೂ ಅತ್ಯಂತ ಧೈರ್ಯಸ್ತನೂ ಆಗಿದ್ದನು. ತನ್ನ ಭುಜಬಲದಿಂದ ಗೋಕಾವಿ, ಸವದತ್ತಿ ತಾಲೂಕುಗಳನ್ನು ಆಕ್ರಮಿಸಿದನು. ಇದು ಪುಣೆ ಪೇಶ್ವೆಯವರಿಗೆ ತಿಳಿಯಲು ಪರಶುರಾಮಭಾವು ಪಟವರ್ಧನನನ್ನು ವೀರಪ್ಪ ಸರದೇಸಾಯಿಯ ಮೇಲೆ ದಂಡೆತ್ತಿ ಕಳಿಸಿದರು. ಪರಶುರಾಮಭಾವು ಪಟ

ವರ್ಧನನು ಬಂದು ಗೋಕಾವಿಯ ಹತ್ತರ ವೀರಪ್ಪದೇಸಾಯಿಯನ್ನು ಎದುರಿಸಿದನು. ಅಲ್ಲೇ ಕಾಳಗವಾಗಿ ವೀರಪ್ಪದೇಸಾಯಿಯು ಸೋತು ಕೈಸೆರೆ ಹಿಡಿಯಲ್ಪಟ್ಟು ಮಿರಜ ಕಿಲ್ಲೆಯಲ್ಲಿ ನಜರ ಕೈದಿನಲ್ಲಿ ಇಡಲ್ಪಟ್ಟನು. ವೀರಪ್ಪದೇಸಾಯಿಯು ಮಿರಜದಲ್ಲಿ ಕೈದಿನಲ್ಲಿ ಇರುವಾಗಲೇ ಸ್ವರ್ಗವಾಸಿಯಾದನು. ಇವನನ್ನು ಮಿರ್ಜಿಯಿಂದ ಕಿತ್ತೂರಿಗೆ ತಂದು ಕಲ್ಮಠದಲ್ಲಿ ಸಮಾಧಿ ಮಾಡಿರುತ್ತಾರೆ. ಇವನ ಸಮಾಧಿಯ ಮೇಲಿನ ಗುಡಿಯನ್ನು ಕಿತ್ತೂರ ಕಲ್ಮಠದಲ್ಲಿ ಈಹೊತ್ತಿಗೂ ನೋಡಬಹುದು.

೧೧ನೆಯ ಮಲ್ಲಸರ್ಜ ಪ್ರತಾಪರಾವ ಸರದೇಸಾಯಿ ಶಮಶೇರ ಜಂಗಬಹಾದ್ದೂರ (ಶಕೆ ೧೭೦೪) ಇವನು ೩೪ ವರ್ಷ ರಾಜ್ಯಕಾರಭಾರ ಮಾಡಿದನು. ಕಿತ್ತೂರ ಸರದೇಸಾಯರಲ್ಲಿ ಒಳ್ಳೇ ಧಾರ್ಮಿಕನೂ ವೈಭವ ಸಂಪನ್ನನೂ ಆದ ರಾಜನಿವನು. ಇವನು ವೀರಶೈವ ಧರ್ಮಾಭಿಮಾನಿಯು ಇದ್ದು ತನ್ನ ರಾಜ್ಯದಲ್ಲಿಯ ಇತರ ಧರ್ಮದ ಪ್ರಜೆಗಳ ಮೇಲೆಯೂ ಕೂಡ ಪ್ರೀತಿಯುಳ್ಳವನಾಗಿದ್ದನು. ಇವನ ರಾಜಸಭೆಯಲ್ಲಿ ಕೊಳಸಿ ರಂಗಾಚಾರ್ಯ ಮೊದಲಾದ ಬ್ರಾಹ್ಮಣ ಪಂಡಿತರು ಹಾಗು ವೆಂಗಿ ಚನ್ನಬಸವಪ್ಪನವರು ಮತ್ತು ಮುಳುಗುಂದ ಜವಳಿಶೆಟ್ಟರ ಚನ್ನಬಸವಪ್ಪನವರು ಮುಂತಾದ ವೀರಶೈವ ಪಂಡಿತರು ಇದ್ದರು. ಅಲ್ಲದೆ ವರ ರುದ್ರಕವಿ ಎಂಬ ವೀರಶೈವ ಕವಿಯು ಇದ್ದು ಎಷ್ಟೋ ಪದಗಳನ್ನು ಅವನು ಮಾಡಿದ್ದು ಅವುಗಳಲ್ಲಿ ಅನೇಕ ಪದಗಳು ಇನ್ನೂ ಸಿಗುತ್ತವೆ. ಅಮೃತೇಶ್ವರನೆಂಬ ಬ್ರಾಹ್ಮಣ ಕವಿಯೂ ಇದ್ದನು. ಈತನು ಮಲತರಂಗಿಣಿ ಎಂಬ ಗ್ರಂಥವನ್ನು ಮಲ್ಲಸರ್ಜನ ಸ್ತುತಿಪರವಾಗಿ ಬರೆದಿರುವನು. ಈ ಗ್ರಂಥದ ಸ್ವಲ್ಪ ಭಾಗವು ಉಪಲಬ್ಧವಿರುವದು. ಇದರ ಮೇಲಿಂದ ನೋಡಲು ಮಲಸರ್ಜ ಧೊರೆಯು ಎಲ್ಲ ಜಾತಿಯವರಿಗೂ ಬೇಕಾದವನು ಇದ್ದನೆಂದು ಒಡೆದು ಕಾಣುತ್ತದೆ. ಜಂಗಮ ದಾಸೋಹದಲ್ಲಿ ಪ್ರಸಿದ್ಧನಿದ್ದನು. ಯಾಕಂದರೆ ಅವನ ಕಾಲದ ಕವಿಗಳು ಅವನನ್ನು ಜಂಗಮ ದಾಸೋಹ ಪ್ರಿಯನೆಂದು ಕೊಂಡಾಡಿರುವರು.

ಮಲ್ಲಸರ್ಜ ರಾಜೇಂದ್ರನಿಗೆ ರುದ್ರಮ್ಮ ಮತ್ತು ಚೆನ್ನಮ್ಮ ಎಂಬ ಇಬ್ಬರು ಧರ್ಮಪತ್ನಿಯರಿದ್ದರು. ಹಾಗು ೧ ಶಿವಲಿಂಗರುದ್ರಸರ್ಜ ಉರ್ಫ ಬಾಪುಸಾಹೇಬ ೨ ವೀರಪ್ಪಸರ್ಜ ೩ ಶಿವಲಿಂಗಸರ್ಜ ಉರ್ಫ ಬಾಳಾಸಾಹೇಬ ಎಂಬ ಮೂವರು ಗಂಡು ಮಕ್ಕಳಿದ್ದರು.

ಇವನಿಗೆ ಪೇಶ್ವೆ ಸರಕಾರದಿಂದ "ಪ್ರತಾಪರಾವ" ಎಂಬ ಬಹು ಮಾನದ ಬಿರುದು ಸಿಕ್ಕಿತ್ತು. ತನ್ನ ಸ್ಮರಣಾರ್ಥವಾಗಿ ನಂದಗಡದ ಬಳಿಯಲ್ಲಿ ಪ್ರತಾಪಗಡ ಎಂಬ ಕಿಲ್ಲೆಯನ್ನು ಕಟ್ಟಿಸಿದನು. ಇವನ ರಾಜ್ಯದಲ್ಲಿ ೧೪ ಕರ್ಯಾತಗಳು ಇದ್ದವು. ಅವು ಈಗಿನ ಸಂಪಗಾಂವ ಮತ್ತು ಖಾನಾಪೂರ ತಾಲೂಕುಗಳು ಪೂರಾ ಮತ್ತು ಬೆಳಗಾಂವ ತಾಲೂಕಿನ ಕೆಲವು ಭಾಗ ಮತ್ತು ಧಾರವಾಡ ತಾಲೂಕಿನ ಕೆಲವು ಭಾಗ ಮತ್ತು ಸವದತ್ತಿ ತಾಲೂಕದ ಕೆಲವು ಭಾಗ ಮತ್ತು ಹಳ್ಳಿಯಾಳ ತಾಲೂಕದ ಕೆಲವು ಭಾಗ ಇವುಗಳಲ್ಲಿ ಸಮಾವೇಶವಾಗಿರುತ್ತವೆ.

ಮಲ್ಲಸರ್ಜ ಸರದೇಸಾಯಿಯನ್ನು ಸಾಕ್ಷಾತ್ ಶ್ರೀ ಪರಶಿವನಿಗೆ ಹೋಲಿಸಿ ಒಬ್ಬ ಕವಿಯು ಪದ ಮಾಡಿದ್ದಾನೆ. ಪರಶಿವನು ಹದಿನಾಲ್ಕು ಲೋಕಗಳಿಗೆ ಒಡೆಯನಾಗಿದ್ದಾನೆ. ಇದರಂತೆ ಮಲ್ಲಸರ್ಜ ಧೊರೆಯು ೧೪ ಕರ್ಯಾತಗಳಿಗೆ ಒಡೆಯನಾಗಿದ್ದಾನೆ. ಪರಮೇಶ್ವರನಿಗೆ ಇಬ್ಬರು ಹೆಂಡರು ಮತ್ತು ಮೂವರು ಮಕ್ಕಳಿರುವರಂತೆ. ಮಲ್ಲಸರ್ಜನಿಗೆ ಕೂಡ ಇಬ್ಬರು ಹೆಂಡರು ಮತ್ತು ಮೂವರು ಗಂಡು ಮಕ್ಕಳು ಇರುವರೆಂದು ಕವಿಯು ವರ್ಣನೆ ಮಾಡಿರುವನು.

ಮಲ್ಲಸರ್ಜನು ತನ್ನ ರಾಜ್ಯದಲ್ಲಿ ದೇಶಪಾಂಡೆ, ಪಾಟೀಲ, ಕುಲ ಕರ್ಣಿ, ಹಿರೇಮಠ, ಜೋಶಿ, ಪೂಜಾರಿ ಮುಂತಾದವರ ವತನಗಳನ್ನು ಕಾಯ್ದಿದ್ದು ಅವರಿಗೆ ಕಾಲಕಾಲಕ್ಕೆ ಇನಾಮುಗಳನ್ನು ಹಾಕಿಕೊಟ್ಟ ಸನ ದುಗಳು ಈಗಲೂ ನೋಡಲಿಕ್ಕೆ ಸಿಗುತ್ತವೆ.

ಕಿತ್ತೂರ ರಾಜ್ಯದಲ್ಲಿ ನಂದಗಡ, ಖಾನಾಪೂರ, ಬೈಲಹೊಂಗಲ, ಕಿತ್ತೂರ, ಸಂಪಗಾಂವ, ದೇಸನೂರು ಮುಂತಾದ ವ್ಯಾಪಾರೀ ಪಟ್ಟಣ ಗಳಿದ್ದವು. ನಂದಗಡ ಪಟ್ಟಣವು ಆಗಿನ ಕಾಲಕ್ಕೆ ಪ್ರಸಿದ್ಧ ವ್ಯಾಪಾರದ ಪಡಮೂಲಿ ಪೇಟೆ ಆಗಿತ್ತು. ಕೊಂಕಣ ಪ್ರಾಂತದಿಂದ ಬರುವ ಸರಕು ಗಳು ಮೊದಲು ನಂದಗಡಕ್ಕೆ ಬಂದು ಅಲ್ಲಿಂದ ಮುಂದೆ ಹೋಗು ತ್ತಿದ್ದವು. ರೇಲ್ವೆ ಆಗುವ ವರೆಗೆ ನಂದಗಡ ಪೇಟೆಯ ವ್ಯಾಪಾರವು ಬಹು ಭರಭರಾಟಿಯ ಸ್ಥಿತಿಯಲ್ಲಿ ಇತ್ತು. ಸಂಪಗಾವಿಯಲ್ಲಿ ಮೊದಲಿನ ನಾಲ್ಕು ತಲೆ ದೇಸಾಯರು ಇದ್ದುದರಿಂದ ಅಲ್ಲಿಯ ವ್ಯಾಪಾರವಾದರೂ ತಕ್ಕಮಟ್ಟಿಗೆ ನಡೆಯುತ್ತಿತ್ತು. ಬೈಲಹೊಂಗಲದಲ್ಲಿ ಧೋತರ ಜೋಡಿಯ ವ್ಯಾಪಾ ರವು ಚೆನ್ನಾಗಿ ಇತ್ತು. ಕಿತ್ತೂರ ಪಟ್ಟಣವು ರಾಜಧಾನೀ ಪಟ್ಟಣ

ವಿನ್ನದರಿಂದ ಎಲ್ಲ ತರದ ವ್ಯಾಪಾರವು ಅಲ್ಲಿ ಬಹು ಚೆನ್ನಾಗಿ ನಡೆಯುತ್ತಿತ್ತು. ದೇಸನೂರಲ್ಲಿ ಸಣಗು ಪಂಜೆ ಮುಂತಾದ ಬಟ್ಟೆಗಳ ವ್ಯಾಪಾರವು ದೊಡ್ಡ ಪ್ರಮಾಣದಿಂದ ನಡೆಯುತ್ತಿತ್ತು. ದೇಸನೂರು ಕರೆಸನಗು ಕಾರವಾರ ಜಿಲ್ಹೆಗೆ ಬಹಳ ಹೋಗುತ್ತಿದ್ದವು. ಒಟ್ಟಿನ ಮೇಲಿಂದ ನೋಡಲು ಕಿತ್ತೂರ ರಾಜ್ಯವು ಆಗ ವ್ಯಾಪಾರದಿಂದಲೂ ಒಕ್ಕಲುತನದಿಂದಲೂ ಕೈಗಾರಿಕೆಗಳಿಂದಲೂ ಊರ್ಜಿತ ಸ್ಥಿತಿಯಲ್ಲಿ ಇದ್ದು ಸಂಪತ್ತಿನಿಂದ ತುಂಬಿಕೊಂಡು ಸುವ್ಯವಸ್ಥಿತ ರಾಜ್ಯವಾಗಿತ್ತು.

೧೨ನೆಯವನಾದ ಶಿವಲಿಂಗರುದ್ರಸರ್ಜ ಉರ್ಫ ಬಾಪುಸಾಹೇಬನು ೮ ವರ್ಷ ಮಾತ್ರ ರಾಜ್ಯಕಾರಭಾರ ಮಾಡಿದನು. ತಂದೆಯಂತೆ ಇವನಾದರೂ ವಿದ್ವಾಂಸನೂ ಶೂರನೂ ಮುತ್ಸದ್ದಿಯೂ ಆಗಿದ್ದನು. ಪೇಶ್ವೆ ಸರಕಾರವು ಮುಳುಗುವ ಧೋರಣವನ್ನು ಕಂಡು ಹಿಡಿದು ಮುಂದಾಲೋಚನೆಯಿಂದ ಸರ್. ಜಾನ ಮನ್ರೋ ಸೇನಾಪತಿಯು ಕೂಡ ಒಡಂಬಡಿಕೆಯನ್ನ ಮಾಡಿಕೊಂಡಿದ್ದನು. ಇವನು ವರ್ಷ ೧೮೨೪ನೇ ಇಸ್ವಿಯಲ್ಲಿ ಸ್ವರ್ಗವಾಸಿಯಾದನು.

ಈ ಪ್ರಕಾರ ೧೨ ಜನ ದೇಸಾಯರು ೨೩೯ ವರ್ಷ ರಾಜ್ಯದಾಡಳಿತಯನ್ನು ಉತ್ತಮ ಪ್ರಕಾರದಿಂದ ಮಾಡಿ ಕರ್ನಾಟಕದಲ್ಲಿ ಪ್ರಸಿದ್ಧಿಯನ್ನು ಹೊಂದಿರುತ್ತಾರೆ.

# ಮಹಾದೇವಿಯಕ್ಕಗಳ ಮದುವೆ.

( ಲೇ :— ಶ್ರೀ ಸ ಹಾ. ಶಿವಮೂರ್ತಿಯವರು ಶಿವಯೋಗಮಂದಿರ.)

[ಲೇಖಾಂಕ ೧]

'ಮಹಾದೇವಿಯಕ್ಕನವರ. ಮದುವೆಯಾಗಿದ್ದರೆ ? ಅವರ ಜೀವನ ವಿಚಾರ.' ಎಂಬ ಶಿರೋನಾಮದ ನನ್ನ ಉಪನ್ಯಾಸವು 'ತರುಣ ಕರ್ನಾಟಕ' ಪತ್ರಿಕೆಯಲ್ಲಿ ಪ್ರಕಟವಾಗಿತ್ತು. ಈ ಉಪನ್ಯಾಸಕ್ಕೆ ಪ್ರತಿಯಾಗಿ, ಚಂದ್ರಶೇಖರದೇವರು ಅಡ್ನೂರು ಎಂಬುವವರು ಈ ವರ್ಷದ ಜುಲೈ ತಿಂಗಳಿನ ಇದೇ 'ಶಿವಾನುಭವ' ಪತ್ರಿಕೆಯಲ್ಲಿ—'ಮಹಾದೇವಿಯಕ್ಕನವರು ಮದುವೆಯಾಗಿದ್ದರೆ ? ' ಎಂಬ ತಲೆಕಟ್ಟಿನಿಂದ ಒಂದು ಲೇಖವನ್ನು ಕೊಟ್ಟಿದ್ದರು. ಈ ಲೇಖದಲ್ಲಿಯ ಅಭಿಪ್ರಾಯಗಳು ಯಥಾರ್ಥವಿದ್ದಿದ್ದರೆ, ಮತ್ತೆ ಇಂತು ನಾನು ಬರೆಯತೊಡಗದೆ ಬಹು ಮಾನ್ಯ ಮಾಡಿ ಒಪ್ಪಿಕೊಳ್ಳಬಹುದಿತ್ತು. ಕಾರಣ ಈ ಲೇಖದಲ್ಲಿ ಯಾವುದಾದರೂ ನಿಜಸಂಗತಿಯು ದೊರಕುತ್ತಿದೆಯೆ ? ಮತ್ತು ತಮ್ಮ ವಿಚಾರಕ್ಕೇ ಸರೆಯಿಲ್ಲದಂತೆ ಏನನ್ನಾದರೂ ಬರೆದಿದ್ದಾರೆಯೇ ? ಎಂಬುದನ್ನು ವಿಚಾರಿಸಬೇಕಾಗಿದೆ.

ಈ ಲೇಖಕರು ಹರಿಹರದೇವನ ಮತ್ತು ಚಾಮರಸನ—ಕಾಲನಿರ್ಣಯಕ್ಕೆ ತೊಡಗಿ—'ಹರೀಶ್ವರ ಕವಿಯು ವೀರಶೈವ ಕವಿಗಳಲ್ಲಿ ಪ್ರಾಚೀನರು. ಆತನು ಸುಮಾರು ಕ್ರಿ. ಶ. ೧೬೬೫ ರಲ್ಲಿರತಕ್ಕವನು. ಆದರೂ ಪಂ। ಸುಬ್ರಾಯ ಶಾಸ್ತ್ರಿಗಳು, ಕನ್ನಡ ಭಾರತ ಕರ್ತನ ವಿಚಾರವಾಗಿ ಬರೆಯುತ್ತ ಚಾಮರಸ, ಹರೀಶ್ವರ, ರಾಘವಾಂಕರು ಸಮಕಾಲೀನರೆಂದು ಅಭಿಪ್ರಾಯಪಟ್ಟಿದ್ದಾರೆ. ಇದರಿಂದ ಚಾಮರಸನೂ ಒಂದು ಪಕ್ಷದಿಂದ ಪ್ರಾಚೀನನೇ ಎಂದು ಹೇಳಬೇಕಾಗುತ್ತದೆ." ಎಂದು ಬರೆದಿರುವರು

ಚಾಮರಸನೂ ಹರಿಹರದೇವನ ಸಮಕಾಲೀನನೆಂದು ಈ ಲೇಖಕರು ಸಾಧಿಸುವ ಕಾರಣವಾದರೂ ಇಷ್ಟೆ—ಅಕ್ಕಗಳು ಮದುವೆಯಾಗಿಲ್ಲವಾಗಿ ಚಾಮರಸಕವಿಯು ಹೇಳಿರುವನು. ಮದುವೆಯಾಗಿದ್ದರೆಂದು ಹರಿಹರದೇವನು ಬರೆದಿರುವನು. [ ಇವನು ಚಾಮರಸ ಕವಿ

ಗಿಂತಲೂ ಸುಮಾರು ೩೦೦ ವರ್ಷ ಮೊದಲಿಗನು.] ಮದುವೆಯಾಗಿಲ್ಲವೆಂದು ಸಾಧಿಸಲು ತಮಗೆ ಚಾಮರಸನ ಹೇಳಿಕೆಯು ಸ್ಪಷ್ಟವಾಗುವದರಿಂದ ಈ ಚಾಮರಸ ಕವಿಯನ್ನು ಹರೀಶ್ವರನ ಕಾಲದವನೆಂದು ಹೇಳಿ, ಈರ್ವರ ಕಾಲನಿರ್ಣಯುವನ್ನೂ ನಿರಾಧಾರವಾಗಿ ಬರೆದಿರುವರು.

ಹರಿಹರದೇವನ ಕಾಲವು ಸು. ಕ್ರಿ ಶ. ಹನ್ನೊಂದನೂರಾ ಅರುವತ್ತೈಯ್ದು ಎಂದು ಪಂಡಿತರ ಅಭಿಪ್ರಾಯುವಿದೆ. [ಕವಿಚರಿತೆಯ ಪ್ರ. ಸಂಪುಟದ ೨೨೪ ನೇ ಪುಟ, ನೋಡಬಹುದು.] ಚಾಮರಸ ಕವಿಯ ಕಾಲವು, ಕ್ರಿ. ಶ. ಹದಿನಾಲ್ಕುನೂರಾಮೂವತ್ತು. [ಪ್ರಭುಲೀಲೆಯ ಸಂಗ್ರಹದ ಪೀಠಿಕೆಯ ೫ ನೇ ಪುಟದಲ್ಲಿಯೂ ಮತ್ತು ಕ. ಚ. ೨ ನೆ, ಸಂ. ೫೮ ನೇ ಪುಟದಲ್ಲಿಯೂ ನೋಡಿರಿ.]

## ಚಾಮರಸನ ಹೇಳಿಕೆಯು ಮಿಥ್ಯ. ಹರಿಹರದೇವನದು ಸತ್ಯ.

ಮಹಾದೇವಿಯಕ್ಕಗಳು ಮದುವೆಯಾಗಿದ್ದರು ಅಥವಾ ಇಲ್ಲ, ಎಂದು— ನಿರ್ಣಯಿಸಿ ಹೇಳಲು ನಾವು ಯಾರೂ ಬ್ರಹ್ಮನ ಆಯುಷ್ಯಳ್ಳವರಿದ್ದು ಅಂದು ನೋಡಿಲ್ಲ. ಕಾರಣ ಯಾರಾದರೂ ಪೂರ್ವ ಕವಿಗಳ ಕಾವ್ಯಗಳನ್ನೇ ಹಿಡಿದು ಉಚಿತ ವಿಮರ್ಶೆಯಿಂದ ನಿರ್ಣಯಿಸತಕ್ಕದ್ದು. ಮಹಾದೇವಿಯಕ್ಕಗಳ ಚರಿತ್ರೆಯನ್ನು ಬರೆದವರಲ್ಲಿ ಹರಿಹರ ಮಹಾಕವಿಯೇ ಪ್ರಾಚೀನನು. ಇಷ್ಟೇ ಅಲ್ಲ; ಕನ್ನಡದಲ್ಲಿ ಅವನೇ ವೀರಶೈವರ ಪ್ರಬಲವಾದ ಆದಿಕವಿ. ಮೈಸೂರು ಓರಿಯಂಟಲ್ ಲೈಬ್ರರಿಯಲ್ಲಿರುವ ಕೆಂಚವೀರಣ್ಣೊಡೆಯಾದಿಗಳು ರಚಿಸಿದ 'ಶೂನ್ಯಸಂಪಾದನೆ' ಯಲ್ಲಿಯೂ ಮದುವೆಯಾದ ವಿಷಯುವಿದೆ. 'ಮಹಾದೇವಿಯಕ್ಕಗಳ ಪುರಾಣ' ವನ್ನು ಬರೆದ ಚೆನ್ನಬಸವಾಂಕನೂ ಹೀಗೆಯೇ ಹೇಳುವನು. ಒಟ್ಟು ಅಕ್ಕಗಳು ಮದುವೆಯಾಗಿದ್ದರೆಂದು ಹೇಳಲು ಈ ಮೂವರೇ ಸದ್ಯದಲ್ಲಿ ಕಾಣತಕ್ಕವರು. ಇನ್ನುಳಿದ ಕೆಲವರು [ಹರಿಹರದೇವನಿಗಿಂತಲೂ ಬಹುಕಾಲ ಇತ್ತೀಚಿನವರು] ಮದುವೆಯಾಗಿಲ್ಲವಾಗಿ ತಿಳಿಸುವರು ಇವರೆಲ್ಲರಿಗೂ ಚಾಮರಸ ಕವಿಯೇ ಮುಖ್ಯನು. ಚಾಮರಸ ಕವಿಯು— ಅಕ್ಕಗಳು ಮದುವೆಯಾಗಿದ್ದಿಲ್ಲೆಂದು ಹೇಳಬೇಕಾದರೆ, ಹರಿಹರದೇವನು ರಚಿಸಿದ "ಮಹಾದೇವಿಯಕ್ಕನ ರಗಳೆ" ಎಂಬ ಕಾವ್ಯವು

ಇವನಿಗೆ ಗುರುತಿಲ್ಲ. ಏಕಂದರೆ— ಇಂದಿನ ಕಾಲದಂತೆ ಅಂದು ಮುದ್ರಣ ಯಂತ್ರಗಳಿಲ್ಲದ್ದರಿಂದ ಕೈಬರಹದ ತಾಳಓಲೆಯ ಪ್ರತಿಗಳಿಂದಲೇ ತಿಳಿಯಬೇಕಾಗಿತ್ತು. ಹೀಗಾಗಿ ಅವು ದೊರಕುವದೇ ಅಂದು ಕಷ್ಟವಾಗಿತ್ತು. ಅಥವಾ ಒಂದು ಪಕ್ಷ ತನಗೆ ತಿಳಿದಿದ್ದರೂ ಇದರಿಂದ ಅಕ್ಕನ ಗೌರವಕ್ಕೆ ಕುಂದು ಬಂದೀತೆಂಬ [ಕುಂದೇನೂ ಬರುವದಿಲ್ಲ. ಆದರೆ ಚಾಮರಸ ಭಾವವು ಮಾತ್ರ ಹಾಗಾಗಿದೆ] ಸಂಶಯದಿಂದ ಮತ್ತು ಅಂದಿನ ಜನದಲ್ಲಿ ಸ್ವಾಭಾವಿಕವಾಗಿ ನೆಲೆಸಿದ್ದ ಮೂಢ ಪ್ರೇಮ (ಭಕ್ತಿ) ದಿಂದ ಹೀಗೆ ಬರೆದನು. ಪ್ರೇಮವು ಅಂಧ-ಕುರುಡ-ಎಂದು ಒಪ್ಪಿಕೊಳ್ಳಬೇಕು. ಪ್ರೇಮದ ನೈಜ ಗುಣವು ವಿಚಾರ ಸ್ವರೂಪವಾದುದಲ್ಲ;' ಅದು ಮೂಢ ಶ್ರದ್ಧೆಯನ್ನು ಆಶ್ರಯಿಸಿ ಜೀವಿಸಿರುವದು. ಈ ಪ್ರೇಮದಲ್ಲಿ ವಿಚಾರವೂ ಕೂಡ ಮೂಢವಾಗುವದು. ಹೆಚ್ಚೇನು? 'ಸರ್ವಜ್ಞ' ನಾದ ದೇವರೂ ಇದರಿಂದ ಮೂಢನಾಗುವನು. ಕಾರಣ ಇಂತಹ ಪ್ರೇಮವು (ಭಕ್ತಿಯು) ಅಕ್ಕಗಳ ಮದುವೆ ವಿಷಯದಲ್ಲಿ— ಶ್ರೀ ಚಾಮರಸ ಕವಿಯ ಕಣ್ಣನ್ನು [ವಿಚಾರವನ್ನು] ಕುರುಡಾಗಿ ಮಾಡಿತು. ಏನೇ ಹೇಳಿದರೂ ಅಕ್ಕಗಳಿಗೂ ಚಾಮರಸನಿಗೂ ಕೊಂಚ ಕಡಿಮೆ. ಮುನ್ನೂರು ವರ್ಷಗಳ ಅಂತರವಿದೆ. ಇದೊಂದು ಕಾರಣದಿಂದಲೇ ಅವನಿಗೆ ಅಕ್ಕಗಳ ಚರಿತ್ರೆಯು ಸರಿಯಾಗಿ ತಿಳಿದಿಲ್ಲವೆಂದು ಇತಿಹಾಸಜ್ಞರಾದ ವಿಮರ್ಶಕರಷ್ಟೇ ಏಕೆ ಇನ್ನಿತರರೂ ಹೇಳಬಹುದು. ಈ ಅಭಿಪ್ರಾಯಕ್ಕು ಈ ಲೇಖಕರು ಒಂದು ಆಕ್ಷೇಪವನ್ನು ತರುವರು. ಏನೆಂದರೆ—"ಒಂದು ನಾಡಿನಲ್ಲಿ ನಡೆದು ಹೋದ ಕಾರ್ಯಗಳ ನಿಜಸ್ಥಿತಿಯು ಕಾಲಾಂತರ ಮೇಲೆ ಹಬ್ಬುವದು ಸ್ವಾಭಾವಿಕ. ಆದ್ದರಿಂದ ಹರಿಹರನಿಗಿಂತಲೂ ಇನ್ನಿತರ ಕವಿಗಳಿಗೆ ಅಕ್ಕನ ವಿಷಯಕ್ಕೆ ಹೆಚ್ಚು ಗೊತ್ತಿದ್ದಿತು." ಎಂದು. ಇದಕ್ಕೆ ನಮ್ಮ ಉತ್ತರಃ— ಒಂದು ನಾಡಿನ- ವ್ಯಕ್ತಿಯ ಕಾರ್ಯಗಳು ಕಾಲಾಂತರದ ಮೇಲೆ ಪ್ರಸಾರವಾಗುವದೇನೋ ದಿಟವು. ಆದರೆ ಆ ಕಾರ್ಯವು ಕಾಲಾಂತರ ಮೇಲೆ ಹೆಚ್ಚು ಹಬ್ಬಬೇಕಾದರೆ ಮೊದಲಿಗೇ ಆ ವಿಷಯವು ಎಲ್ಲಿಯಾದರೂ, ಅಲ್ಪ ಪ್ರಮಾಣದಿಂದಲಾದರೂ ಹಬ್ಬಿಕೊಂಡಿರಬೇಕಾಗುತ್ತೆ. ಏಕೆಂದರೆ—"ಯಾವುದು ಕಾಲಾಂತರದ ಮೇಲೆ ಪ್ರಸಾರವಾಗುತ್ತದೆಯೋ ಅದು ಆ ಮೊದಲಿಗೇ ಇರಬೇಕಾಗುತ್ತೆ. ಯಾವುದು ಇರುವದಿಲ್ಲವೋ ಅದು ಪ್ರಸಾರವಾಗುವದೇ ಇಲ್ಲ. ಇದು ಸೃಷ್ಟಿಯ ನೇಮ." ಆದುದರಿಂದ ಹರಿಹರದೇವನ-ಅಥವಾ-ಅಕ್ಕನ ಕಾಲದಲ್ಲಿಯೇ ಮದುವೆಯಾಗಿದ್ದಿಲ್ಲವೆಂದು ಹೇಳಿದ ಯಾವುದಾದರೂ ಪ್ರಮಾಣವು ದೊರೆಯಬೇಕಲ್ಲವೆ?

ಅಲ್ಲದಿರೆ ಆ ಕಾರ್ಯವು ಪ್ರಸಾರವಾಗುವ ಬಗೆ ಹೇಗೆ? ಮಹಾದೇವಿ ಯಕ್ಕಗಳು ಮದುವೆಯಾಗಿದ್ದರೆಂದು ಅಕ್ಕಗಳ ತರುವಾಯವೇ ಇದ್ದು ಬರೆದ ಹರಿಹರದೇವನಿಗೆ, ಮಧ್ಯದಲ್ಲಿ ಇನ್ನೂರು ಮುನ್ನೂರು ವರ್ಷ ಗತಿಸಿ, ನಂತರ ಮಹಾದೇವಿಯಕ್ಕಗಳು ಮದುವೆಯಾಗಿಲ್ಲೆಂದು ಅದೆಂತು ಪ್ರಸಾರವಾಗುವದು? ಈ ಲೇಖಕರು ಇಂತಹ ಅಭಿಪ್ರಾಯಗಳನ್ನು ಸಾಧಿಸಬೇಕಾದರೆ ಇದಕ್ಕೆ ತಕ್ಕ ಐತಿಹಾಸಿಕ ಆಧಾರವನ್ನು ತೋರಿಸ ಕೊಡಬೇಕಲ್ಲವೇ? ಆಧಾರವಿಲ್ಲದೆ ಹೇಳಿದರೆ ನಂಬಲು ಇದು ಬೇಸರ ಕಳೆಯಲು ಕೇಳುವ ಕತೆಯಲ್ಲ. ಇಲ್ಲಿ ಬೇಕಾಗಿರುವದು ಕೇವಲ ಐತಿ ಹಾಸಿಕ ದೃಷ್ಟಿ. ಇಂತಹ ವಿಷಯಗಳನ್ನು ಚರ್ಚಿಸಲು, ಸಾಧಿಸಲು, ಸಂಸ್ಕೃತ ವ್ಯಾಕರಣದಲ್ಲಿ 'ಅಧಿಕಾರ ಸೂತ್ರ' ದಂತೆ, ಈ ಐತಿಹಾಸಿಕ ದೃಷ್ಟಿಯು ಮುಖ್ಯವಾಗಿರುವದು. ಇದನ್ನು ಅನುಸರಿಸಿಯೇ ಎಲ್ಲವೂ ನಡೆಯಬೇಕು. ಕಾರಣ ಮಹಾದೇವಿಯಕ್ಕಗಳಿಗೂ ಚಾಮರಸನಿಗೂ ಬಹು ದೂರ ಅಂತರವಿರುವದರಿಂದ ಇವನಿಗೆ ಈ ವಿಷಯವು ಚೆನ್ನಾಗಿ ತಿಳಿದೇ ಇಲ್ಲ. ಚಾಮರಸನ ಈ ಒಂದು ಹೇಳಿಕೆಯು ಸತ್ಯವಾದುದೇ ಅಲ್ಲ. ಅಕ್ಕಗಳ ಘನತೆಯೇನೋ ಸ್ವಾಭಾವಿಕವಾಗಿಯೇ ಸಾರತರವಾಗಿ ರುವದು ನಿಜ. ಆದರೆ ಇದಕ್ಕಿಂತಲೂ ಮದುವೆಯಾಗಿಲ್ಲೆಂದು ಹೇಳು ವದರಿಂದ ತನ್ನ ಕಥಾನಾಯಿಕೆಯ ಮಹತ್ವವು ಮತ್ತಷ್ಟು ಉಜ್ವಲ ವಾಗಲೆಂಬುದೇ ಚಾಮರಸನ ಪೌರಾಣಿಕ ಭಕ್ತಿಯ ಉದ್ದೇಶವಾಗಿದೆ.

ಹರಿಹರದೇವನು ಮಹಾದೇವಿಯಕ್ಕಗಳ ಕಾಲದಲ್ಲಿ ಅಥವಾ ಅವರ ತರುವಾಯವೇ ಇದ್ದವನು. ಅವನು ಅಕ್ಕಗಳ ವಿಷಯದಲ್ಲಿ ಚಾಮ ರಸನಿಗಿಂತಲೂ ಅತಿಭಕ್ತಿಯುಳ್ಳವನೆಂದು ಹೇಳಬಹುದು. ಇದನ್ನು ಆತನ 'ಮ. ರಗಳೆ' ಯನ್ನು ಓದಿದವರು ತಿಳಿಯಬಹುದು. ಹಾಗಾ ದರೆ ಚಾಮರಸನಂತೆ ಇವನೂ ಹೇಳಬೇಕಾಗಿತ್ತು. ಎಂದರೆ—'ಹರಿಹರ ದೇವನು ತಾನು ಕಂಡದ್ದನ್ನು, ಕೇಳಿದ್ದನ್ನು ಹೇಳುವದರಲ್ಲಿ ಮರೆಮಾಡಿ ಕೊಳ್ಳುವ ಸ್ವಭಾವದವನಲ್ಲ. [ರೇವಣಸಿದ್ಧೇಶ್ವರ ರಗಳೆಯಲ್ಲಿ ೬೩ನೇ ಪುಟವನ್ನು ನೋಡಿದರೆ ತಿಳಿಯುವದು.] ಹರಿಹರಕವಿಗೆ ಪ್ರತ್ಯಕ್ಷ ನೋಡಿ ದವರೇ ಹೇಳಿರಬೇಕು. ಅಥವಾ ಅಕ್ಕಗಳು ಆಗಿಹೋಗಿ ಎಂಟು ಹತ್ತು ವರ್ಷಗಳಾಗಿರುವದರಿಂದ ಮದುವೆಯಾದದ್ದು ಜನರಲ್ಲಿ ಬಹು ಪ್ರಸಿದ್ಧ ವಾಗಿರಬೇಕು. ಏಕೆಂದರೆ ಮದುವೆಯಾಗಿಲ್ಲೆಂಬುದಕ್ಕೆ ಅದೇ ಕಾಲ

ದಲ್ಲಿಯು ಗ್ರಂಥಗಳು ಇದುವರೆವಿಗೂ ಒಂದೂ ದೊರೆತಿಲ್ಲ. ಕಾರಣ ವಿವಾಹವೇ ನಡೆದು ಹೋದದ್ದು ಹರಿಹರ ಕವಿಗೆ ಚೆನ್ನಾಗಿ ಗುರುತಿದ್ದುದರಿಂದ ಈ ವಿಷಯುವನ್ನು ಚಾಮರಸನಂತೆ ಕಲ್ಪಿತ ಮಾಡಿಕೊಳ್ಳುವ ಪ್ರಸಂಗವೇ ಅವನಿಗೆ ಒದಗಿಲ್ಲ ಅಕ್ಕಗಳು ಮದುವೆಯಾಗಿರುವದರಿಂದ ಅವರ ಘನತೆಗೆ, ಗೌರವಕ್ಕೆ ಚ್ಯುತಿ ಬರುವದಿಲ್ಲೆಂಬುದನ್ನು ಈ ವರ್ಷದ ಆಗಷ್ಟು ತಿಂಗಳಿನ 'ಶಿವಾನುಭವ' ಸಂಚಿಕೆಯಲ್ಲಿ ವಿವರಿಸಿದ್ದೇನೆ.

## ಹರಿಹರದೇವನು ಮನರಂಜಿಸಲು ಇದನ್ನು ಹೇಳಿಲ್ಲ.

ಇನ್ನು ತನ್ನ ಕಾವ್ಯವು ಮನರಂಜನೆಯುಳ್ಳದ್ದಾಗಲು, ಆ ಹರಿಹರ ಕವಿಯು ಹೀಗೆ ಬರೆದಿರುವನೆಂದು ಈ ಲೇಖಕರ ಬಯಕೆಯೊಂದು ಇದ್ದಂತೆ ತೋರುತ್ತದೆ. ಮನರಂಜಿಸುವಂತೆ ಸುಳ್ಳು ಬರೆದು ತನ್ನ ಕಾವ್ಯರಚನಾ ಶಕ್ತಿಯನ್ನು ತೋರಿಸಲು ಹರಿಹರದೇವನು ಇದೊಂದೇ ಕಾವ್ಯವನ್ನೇನೂ ಅವನು ಬರೆದಿಲ್ಲ. ಈ ತೆರನಾದ ಕಾವ್ಯಗಳನ್ನು ಅವನು ಅದೆಷ್ಟೋ ಬರೆದಿರುವನು. ಅವೆಲ್ಲವೂ ಸ್ವಾಭಾವಿಕವಾಗಿಯೇ ಮನರಂಜನೆಯುಳ್ಳವುಗಳಾಗಿವೆ. ಅವನು ಹೇಗೆ ಬೇಕೋ ಹಾಗೆ ಕಲ್ಪಿಸಿಕೊಳ್ಳಲು ಕಟ್ಟು ಕತೆಗಳಾದ 'ಕಾದಂಬರಿ' ಗಳನ್ನು ಬರೆದಿಲ್ಲ. ಅವನ ಕೃತಿಗಳೆಲ್ಲವೂ ಶಿವಶರಣರ ಸತ್ಯ ಚರಿತ್ರೆಗಳು.. ಇವುಗಳನ್ನು ಧರ್ಮ ಪ್ರಸಾರಕ್ಕಾಗಿ ಮತ್ತು ತನ್ನ ಚಿತ್ತ ಶಾಂತಿಗಾಗಿ ಅವನು ಬರೆದಿರುವನು. ಮನರಂಜನೆಯಾಗುವಂತೆ ವರ್ಣಿಸಬೇಕಾದರೆ ಎಷ್ಟು ಕಾರ್ಯ ನಡೆದಿದೆಯೋ ಅಷ್ಟರಲ್ಲಿ ಬೇಕಾದಷ್ಟೇ ವರ್ಣಿಸುತ್ತಾನೆ. ಮಹಾದೇವಿಯಕ್ಕಗಳು ಮದುವೆಯಾಗಿದ್ದರೆಂದು ತಾನೇ ಕಲ್ಪಿಸಿಕೊಳ್ಳಲು ಪರಮ ವೀರಶೈವನಾದ ಆ ಹರಿಹರದೇವನಿಗಾಗುವ ಲಾಭವಾದರೂ ಏನು ? ಭವಿಯೊಡನೆ ಲಗ್ನವಾದಳೆಂದು ಸುಳ್ಳು ಬರೆಯಲು ಅವನಿಗೆ ಅಡ್ಡವಾದ ದೊಡ್ಡ ಸಂಕಟವಾದರೂ ಏನಿದೆ? ಒಂದು ಪಕ್ಷ ಹರಿಹರದೇವನ ಈ ಅಭಿಪ್ರಾಯವು ಮಿಥ್ಯವಾಗಿದ್ದರೆ ಕೆಂಚ ವೀರಣ್ಣೊಡೆಯಾದಿಗಳು (ಶೂನ್ಯ ಸಂಪಾದನಾಕಾರರು) ಎಂದಿಗೂ ಹೀಗೆ ಬರೆಯುತ್ತಿರಲಿಲ್ಲ. ಚೆನ್ನಬಸವಾಂಕನೂ ಇಂತು ಬರೆಯುತ್ತಿರಲಿಲ್ಲ.

## ಚಾಮರಸನಂತೆ ಚೆನ್ನಬಸವಾಂಕನೇಕೆ ಹೇಳಲಿಲ್ಲ ?

'ಹರೀಶ್ವರ ಕವಿಗಿಂತಲೂ ಚಾಮರಸನಿಗೆ ಹೆಚ್ಚು ಗೊತ್ತಿದ್ದಿತು. ಏಕೆಂದರೆ---ಒಂದು ನಾಡಿನಲ್ಲಿ ನಡೆದು ಹೋದ ಕಾರ್ಯಗಳು ಕಾಲಾಂ

ತರದ ಮೇಲೆ ಹೆಚ್ಚು ಪ್ರಸಾರವಾಗುವದು ಸಹಜ.' ಎಂದು ಈ ಲೇಖಕರು ಹೇಳಿದ್ದಕ್ಕೆ ಈ ಮೊದಲೇ ಉತ್ತರಿಸಿದೆವಷ್ಟೇ! ಇದಕ್ಕೆ ಮತ್ತೊಂದು ಉತ್ತರವನ್ನೂ ಕೊಡುತ್ತೇವೆ.

ಈ ಲೇಖಕರು ಹೇಳುವಂತೆ—ಅಕ್ಕಗಳು ಮದುವೆಯಾಗಿರಲಿಲ್ಲವೆಂದು, ಕ್ರಿ. ಶ. ೧೪೩೦ ರಲ್ಲಿದ್ದ ಚಾಮರಸನ ಕಾಲದಲ್ಲಿಯೇ ಹೆಚ್ಚು ಪ್ರಸಿದ್ಧಿಗೊಂಡಿದ್ದರೆ,— ಸುಮಾರು ಕ್ರಿ. ಶ. ೧೫೫೦ ರಲ್ಲಿದ್ದ 'ಮಹಾದೇವಿಯಕ್ಕಗಳ ಪುರಾಣ' ವನ್ನು ಬರೆದ ಚೆನ್ನಬಸವಾಂಕನು ಅದರಲ್ಲಿ ಮದುವೆಯಾಗಿದ್ದರೆಂದೇಕೆ ಹೇಳುತ್ತಿದ್ದ? ನಿಜವಾಗಿಯೂ ಅಕ್ಕಗಳು ಮದುವೆಯಾಗಿರಲಿಲ್ಲವೆಂದು ಪ್ರತೀತಿಯಿದ್ದರೆ ಚೆನ್ನಬಸವಾಂಕನು ಮಾತ್ರ ಹೀಗೆಂದಿಗೂ ಬರೆಯುತ್ತಿರಲಿಲ್ಲ. ಕಾರಣ ಈ ಲೇಖಕರ ಅಭಿಪ್ರಾಯದಂತೆ ಹೋದರೂ ಚಾಮರಸ ಕವಿಯ ಹೇಳಿಕೆಯೇ ಕಲ್ಪಿತವಾಗಿ ತೋರುತ್ತವೆ.

## ಹರಿಹರದೇವನ ಸಮ್ಬಂಧ, ಮತ್ತೊಂದು ಅಡ್ಡ ಪ್ರಶ್ನೆ.

ಈ ಲೇಖಕರು ಹರಿಹರ ಮಹಾಕವಿಯ ಹೇಳಿಕೆಯನ್ನೇ ಸಂಪೂರ್ಣ ತೆಗೆದೊಗೆಯಲು ಬಹು ಸಾಹಸ ಪಟ್ಟು—"ಹರೀಶ್ವರನ ಸ್ಥಿತಿಗಳನ್ನು ವಿಚಾರಿಸಬೇಕು." ಎಂಬ ಒಂದು ಅಡ್ಡ ಪ್ರಶ್ನೆಯನ್ನು ತಂದೊಡ್ಡಿ, 'ಸದ್ಧರ್ಮ ದೀಪಿಕೆಯ' ಸಂಪಾದಕರ ಅಭಿಪ್ರಾಯದ ಮೇಲೆ ಕೈಯೂರಿದ್ದಾರೆ. ಆದರೆ ಆ ಸಂಪಾದಕರವರು ಮಾತ್ರ ಅಕ್ಕಗಳು ಮದುವೆಯಾಗಿರಲಿಲ್ಲವೆಂದು ಸಾಧಿಸಲು ಬರೆದಿಲ್ಲ. ಆದರೂ ಆ ಅಭಿಪ್ರಾಯವನ್ನಿಲ್ಲಿ ನೋಡೋಣ.—

"ಇಂದಿನ ಕಾಲದಂತೆ ಪೂರ್ವದಲ್ಲಿ ಅಂಚೆ, ತಂತಿ, ವರ್ತಮಾನ ಪತ್ರಗಳಿಲ್ಲದುದರಿಂದ ರಾಜರು ಮಾತ್ರ ತಮಗೆ ಬೇಕಾದ ವರ್ತಮಾನಗಳನ್ನು ತಮ್ಮ ಚಾರರಿಂದ ತಿಳಿದುಕೊಳ್ಳುತ್ತಿದ್ದರು. ರಾಜರಿಲ್ಲದ ಊರಿನಲ್ಲಿ ಮಾತ್ರ ಬಂದ ಸುದ್ದಿಗಳು ಕೆಲವು ಕಾಲ್ಪನಿಕಗಳಾದರೂ ಆಗಬಹುದು. ಏಕೆಂದರೆ— ಮಹಾದೇವಿಯಕ್ಕಗಳ ತಂದೆ ತಾಯಿಗಳಾರು ಎಂಬುದನ್ನು ವಿಚಾರಿಸುವದೂ ಕೂಡಾ ಹರೀಶ್ವರನಿಗೆ ಅನುಕೂಲವಾಗಲಿಲ್ಲ. (ಈಗ ತಕ್ಕ ಪುಸ್ತಕ ಭಂಡಾರವಿಲ್ಲದಿರುವ ಊರಿನಲ್ಲಿ ಸಂಗ್ರಹ

ಗ್ರಂಥಗಳನ್ನು ಬರೆವವರಂತೆ ಆತನ ಗತಿಯೂ ಆಗಿರಬೇಕು. ) " ಇದರಲ್ಲಿಯ ಒಟ್ಟು ಆ ಸಂಪಾದಕರವರ ಅಭಿಪ್ರಾಯವೇನೆಂದರೆ— ಅಕ್ಕಗಳ ತಂದೆ ತಾಯಿಗಳ ಹೆಸರು 'ಶಿವಭಕ್ತ' 'ಶಿವಭಕ್ತೆ' ಎಂದು ಹರಿಹರ ಕವಿಯು ಬರೆದಿರುವನು. ಆದರೆ ಇಂತಹ ಹೆಸರುಗಳನ್ನು ಯಾರೂ ಇಡುವದಿಲ್ಲ. ಆದುದರಿಂದ ಇವು ಕಾಲ್ಪನಿಕವಾಗಿ ಬಂದ ಸುದ್ದಿ ಇರಬೇಕು, ಎಂಬುದಿಷ್ಟೆ. ಆದರೆ ಮದುವೆಯಾಗಿರಲಿಲ್ಲವೆಂದು ಸಾಧಿಸಿದ ಅಭಿಪ್ರಾಯವಲ್ಲ.

## ಇದಕ್ಕೆ ನಮ್ಮ ಉತ್ತರ.

ರಾಜರಿಲ್ಲದ ಊರಿನಲ್ಲಿ ಬಂದ ಸುದ್ದಿಗಳು ಕೆಲವು ಕಾಲ್ಪನಿಕಗಳಾಗಬೇಕಾದರೆ, ಅವು ರಾಜತಂತ್ರದಂತೆ 'ರಾಜಕೀಯ' ಎಂದರೆ ಯುದ್ಧ ವೊದಲಾದ ವೋಸದ ಕೃತ್ಯಗಳೇ ಇರಬೇಕು. ಆದರೆ ಸಾಧು ಶರಣರ-ಶರಣೆಯರ ಚರಿತ್ರೆಗಳು ಮಾತ್ರ ಇಂತು ಕಾಲ್ಪನಿಕಗಳಾಗಲಾರವು. ಏಕೆಂದರೆ ಇದರಿಂದ ಯಾರಿಗಾದರೂ ಪ್ರಯೋಜನವಿರಬೇಕಲ್ಲವೇ ? ಇದರಿಂದ ಅಕ್ಕಗಳ ತಂದೆ ತಾಯಿಗಳ ಹೆಸರು ಶಿವಭಕ್ತ-ಶಿವಭಕ್ತೆಯೆಂಬುದಾಗಿಯೇ ಇದ್ದಿತೆಂದು ನಮ್ಮ ಅಭಿಪ್ರಾಯವಲ್ಲ; ಅವರ ಹೆಸರು 'ಶಿವಭಕ್ತ-ಶಿವಭಕ್ತೆ' ಎಂದು ಹರಿಹರದೇವನಿಗೆ ಸುದ್ದಿಯೇ ಬಂದಿಲ್ಲ. ಮತ್ತು ಅವರ ಹೆಸರನ್ನೇ ತಿಳಿಯಲು ಅವನು ಅಪೇಕ್ಷೆ ಪಟ್ಟೂ ಇಲ್ಲ. ಅದು ಅವನಿಗೆ ಮುಖ್ಯವೂ ಅಲ್ಲ. ಇದು ಕಾರಣವೇ ಆ ರೀತಿ ಹೇಳಿರುವನು.

ಇನ್ನುಳಿದ ಕವಿಗಳಾದರೂ ಅಕ್ಕಗಳ ತಂದೆತಾಯಿಗಳಿಗೆ 'ನಿರ್ಮಲ' 'ಸುಮತಿ' ಎಂದು ಕರೆದಿರುವರು. ಹಾಗಾದರೆ ಇಂತಹ ಹೆಸರನ್ನು ಯಾರಾದರೂ ಇಡುವ ರೂಢಿಯಿದೆಯೋ ? ಬೇಡ. ಒಂದು ಪಕ್ಷ ನಿರ್ಮಲನೆಂಬ ಹೆಸರುಳ್ಳವನಿಗೇ ಸುಮತಿಯೆಂಬ ಹೆಸರುಳ್ಳ ಸತಿಯೂ ದೊರಕಿಯೇ ಬಿಟ್ಟಳೆ ? ಎಂಬ ಪ್ರಶ್ನೆಯೂ ಬಾರದಿರದು. ಇಂತು ವಿಚಾರಿಸಿದರೆ ಅಕ್ಕಗಳ ತಂದೆ ತಾಯಿಗಳ ಹೆಸರು ಯಾರಿಗೂ ತಿಳಿದು ಬಂದಿಲ್ಲ. ಅವರ ನಾಮಾಂಕಿತವು ಆ ಆ ಕವಿಗಳ ಐಚ್ಛಿಕವಾಗಿಯೇ ಸಾಗಿದೆ ಎಂದು ನಿರ್ವಿವಾದವಾಗಿ ಹೇಳಲೇಬೇಕು. ಆದುದರಿಂದ ಇದರ ನಿರ್ಣಯದ

ಚರ್ಚೆಯು ಅಂದಿನ ಕವಿಗಳಿಗೆ ಹೇಗೆ ಅವಶ್ಯವಿದ್ದಿಲ್ಲವೋ ಹಾಗೆಯೇ ಇಂದಿನ ನಮಗೂ ಅವಶ್ಯವೇ ಆಗಿಲ್ಲ. ಅದು ಅಷ್ಟು ಪ್ರಧಾನವೂ ಅಲ್ಲ.

## ಮತ್ತೊಂದು ಪ್ರಶ್ನೆಯು.

ಈ ಲೇಖಕರು ಮತ್ತೊಂದು ಪ್ರಶ್ನೆಯನ್ನು ತಂದಿರುವರು. ಏನೆಂವರೆ—"ಇದಲ್ಲದೆ ಆಗ್ಯೆ ಹಳೇಬೀಡಿನಲ್ಲಿದ್ದ ಹೊಯಿಸಳ ರಾಜರಿಗೂ, ಕಲ್ಯಾಣದ ಬಿಜ್ಜಳ ರಾಜನಿಗೂ ಸ್ನೇಹವಿದ್ದಂತೆ ತೋರಲಿಲ್ಲ. ಈ ವಿಷಯವು ಹರೀಶ್ವರನ ರಗಳೆಯಿಂದಲೇ ವ್ಯಕ್ತಪಡುತ್ತದೆ. ಬಸವೇಶ್ವರನ ಕಾಲದ ಅನುಭವಮಂಟಪ, ವೀರಶೈವ ವಿಚಾರಗಳು ಇವುಗಳ ಗಂಧವೇ ಆ ದೇಶಕ್ಕೆ ಉಂಟಾಗಿರುವದಿಲ್ಲ. . . ." (ಮ. ರ. ಮುಮ್ಮುಖ ಪು. ೪.) ಎಂದು ಮ। ರಾ। ಸದ್ಧರ್ಮ ದೀಪಿಕೆಯ ಸಂಪಾದಕರವರ ಈ ಅಭಿಪ್ರಾಯವನ್ನೂ ಎತ್ತಿರುವರು.

## ಇದಕ್ಕೆ ನಮ್ಮ ಉತ್ತರವು.

ಪರಸ್ಪರ ರಾಜರಲ್ಲಿ ದ್ವೇಷವಿತ್ತೆಂದು ಬೇರೆ ಬೇರೆ ಕಾರಣಗಳು ದೊರೆತಿದ್ದರೆ ಹೇಳಬಹುದಲ್ಲದೆ, ಹರಿಹರದೇವನ—'ಮಹಾದೇವಿಯಕ್ಕನ ರಗಳೆ' ಯಿಂದ ಮಾತ್ರ ಊಹಿಸಲಾಗದು. ಆಗ ಪರಸ್ಪರ ರಾಜರಲ್ಲಿ ವೈರವಿದ್ದರೂ ಭಗವಾನ್ ಶ್ರೀ ಬಸವೇಶ್ವರನ ಅನುಭವಮಂಟಪದ ವಿಚಾರಗಳಿಗೆ ಆ ವೈರವು ತಡೆಯಾಗಲಿಲ್ಲ. ಏಕೆಂದರೆ ಕರ್ನಾಟಕದಲ್ಲಿಯ ವೀರಶೈವ ಸಂಖ್ಯೆಯು ಆಗಲೂ ಬಹಳವಿದ್ದಿತು. ಆದಕಾರಣ ರಾಜರಾಜರ ದ್ವೇಷವಿದ್ದರೂ, ಎಲ್ಲೆಡೆಯಲ್ಲಿಯೂ ವೀರಶೈವರು ಭಗವಾನ್ ಬಸವರಾಜನ ತತ್ವಗಳಿಗೆ ಅಂದು ತಲೆಬಾಗಿ ಬಹು ಗೌರವಿಸಿದರು. ಕರ್ನಾಟಕದ ಸಂದಿಗೊಂದಿಗಳಲ್ಲಿಯೂ ಆತನ ತತ್ವವು ನುಗ್ಗಿ ಉನ್ನತ ಸ್ಥಾನವನ್ನು ಆಕ್ರಮಿಸಿತ್ತು. ಇದನ್ನು ನೋಡಿದ ಚೆನ್ನಬಸವಣ್ಣನವರು—"ಬಸವಣ್ಣಾ! ನೀವು ಮರ್ತ್ಯಕ್ಕೆ ಅವತರಿಸಿದರೆ ಭಕ್ತಿಯು ಬೆಳವಿಗೆ ದೆಸೆದೆಸೆಗೆ ಪಸರಿಸಿತಲ್ಲ...." ಒಂದು ಉದ್ಗಾರ ತೆಗೆದದ್ದನ್ನು ನೋಡಬಹುದು. ಅಷ್ಟೇಕೆ ? ಹರಿಹರ ಮಹಾಕವಿಯೇ ಬಸವಣ್ಣನವರ ವಚನಗಳ ಸಮ್ಮಂಧವಾಗಿ "ಬಸವನ ಗೀತವಂಬುಧಿ. . . ." ಎಂಬ ಪದ್ಯದಲ್ಲಿ ತನ್ನ ಬಸವರಾಜದೇವರ ರಗಳೆ-ಯ ಹತ್ತನೆಯ ಸ್ಥಲದಾದಿಯಲ್ಲಿ ಬಣ್ಣಿ

ಸಿರುವದನ್ನು ಕಣ್ಣಿಟ್ಟಿ ನೋಡಿದರೆ, ಬಸವಣ್ಣನವರ ವಚನಗಳು ಹರಿಹರ ದೇವನಿಗೆ ತಿಳಿದಷ್ಟು ಮತ್ತಾರಿಗೂ ತಿಳಿದಿಲ್ಲವೆಂದೇ ಹೇಳಬೇಕು. ಮತ್ತು ಅದೇ ರಗಳೆಯ ಹನ್ನೆರಡನೆಯ ಸ್ಥಲದ ೬ದಿಯಲ್ಲಿ—

"ಬಸವನ ಪುಣ್ಯ ಕೀರ್ತಿಲತೆ, ಜೀರ್ವರಿಯುತ್ತುರಗೇಂದ್ರ ಲೋಕದೊಳ್
ದೆಸೆಗಳನಗ್ಗಳಂ ಮುಸುಕಿ, ಪರ್ವಿಗೆಯಾಯ್ತು, ನರೇಂದ್ರ
ಲೋಕದೊಳ್
ಕುಸುಮಿತವಾಗಿ, ಸೌರಭದಿ, ಹೊಂಪುಳಿಯಾಯ್ತುಮರೇಂದ್ರ
ಲೋಕದೊಳ್
ಪಸರಿಸಿ ಪೂರಿತಾಮಳ ಸುಧಾಫಳವಾದುದು ರುದ್ರ
ಲೋಕದೊಳ್ ॥೧॥

ಇಂತು ಭಗವಾನ್ ಬಸವರಾಜನ 'ಕೀರ್ತಿಲತೆ' ಯು ಪಸರಿಸಿತೆಂದು ಹರಿಹರದೇವನೇ ಬಗೆದುಂಬಿ ಭಾವಿಸಿ ಬಣ್ಣಿಸಬೇಕಾದರೆ, ಇವನಿದ್ದ ರಾಜ್ಯದಲ್ಲಿ ಬಸವೇಶ್ವರನ ಕಾಲದ ಅನುಭವಮಂಟಪವ, ವೀರಶೈವ ವಿಚಾರಗಳ ಗಂಧವೇ ಉಂಟಾಗಿಲ್ಲವೆಂದು ಹೇಗೆ ಹೇಳುತ್ತಾರೆ? ಅಹುದು; ಹಾಗಾದರೆ ಲಿಂಗವಂತರಾದ ಮಹಾದೇವಿಯಕ್ಕಗಳ ಮಾತಾಪಿತರು, ಸ್ಥಾವರ ಲಿಂಗಕ್ಕೆ ಹೋಗಿ ಬೇಡಿಕೊಂಡರೆಂದು ಹರಿಹರ ದೇವನೇ ಏಕೆ ಹೇಳಿದ? ಎಂದು ಪ್ರಶ್ನೆ ಮಾಡಿದರೆ, ಇದಕ್ಕೆ ಉತ್ತರ ವಿಷ್ಟು.— ಸದ್ಯದ ಕಾಲದಲ್ಲಿ ಬಸವಣ್ಣನವರ ತತ್ವವು ಮತಮತಾಂತರದವರಿಗೂ ತಿಳಿದಿದೆಯಲ್ಲವೇ? ಆದರೂ ಎಷ್ಟೋ ತಿಳಿದ ವೀರಶೈವರೇ 'ಸಂಪ್ರದಾಯ ಶರಣರಾ' ಗಿ ಗುಡಿಗಳಿಗೆ ಹೋಗಿ ಆರಾಧಿಸುವುದನ್ನು ನಾವೇ ನೋಡುತ್ತೇವೆ. ಕಾರಣ ಈಗಲೂ ಬಸವಣ್ಣನವರ ತತ್ವ ವಿಚಾರಗಳ ಗಂಧವೇ ಇಲ್ಲವೆಂದು ಹೇಳಲು ಬರುತ್ತದೆಯೋ? ಎಂದಿಗೂ ಸಾಧ್ಯವಿಲ್ಲ. ಒಟ್ಟಿನಲ್ಲಿ—'ಗುಡಿಗಳಿಗೆ ಪೂಜಾರ್ಥವಾಗಿ ವೀರಶೈವನು ಹೋಗಬಾರದು' ಎಂಬ ನಿಯಮವಿದ್ದರೂ ಇಂದಿನ ಕಾಲದಂತೆ ಅಂದಿನವರೂ ಕೆಲವು ಸ್ಥಾವರ ಲಿಂಗಾರ್ಚನೆಗೆ ಹೋಗುತ್ತಿದ್ದರು. [ಟಿ- ಆಗ ವೀರಶೈವರು ವಿಶೇಷವಾಗಿ ಶೈವ ಮಾರ್ಗದ ಕೆಲವು ಆಚರಣೆಗಳನ್ನು ಅನುಸರಿಸುತ್ತಿದ್ದರೆಂಬುದು ಇತಿಹಾಸದಿಂದಲೂ, ಕೆಲವು

ವೀರಶೈವ ಕಾವ್ಯಗಳಿಂದಲೂ ತಿಳಿದೇ ಇದೆ. ಆಗ ಬಸವಣ್ಣನವರು ಸಾರಿದ-ತೋರಿದ ತತ್ವಗಳು ಜನಮನಕ್ಕೆ ಒಪ್ಪಿಗೆಯಾಗಿದ್ದರೂ, ಅವುಗಳನ್ನು ನೂತನವಾದವುಗಳಂತೆ ಭಾವಿಸಿದ್ದುದರಿಂದ,—ಬಹು ದಿನಗಳಿಂದ ಹಿಡಿದು ನಡೆದು ಬಂದ ತಮ್ಮ ಶೈವ ಮಾರ್ಗವನ್ನು ಬಿಟ್ಟಿರಲಿಲ್ಲ ] ಇದನ್ನು ಕಂಡ ಹರಿಹರದೇವನು, ತಾನು ನೋಡಿದದನ್ನು ಮರೆಮಾಡುವ ಸ್ವಭಾವದವನಾಗದಿರುವದರಿಂದ, ಆಗಿನ ಲಿಂಗವಂತರ ವರ್ತನೆಯನ್ನೇ ಕಂಡಂತೆ ಚಿತ್ರಿಸಿರುವನು * ಇಂತು ವಿಚಾರ ಮಾಡಿದಾಗ-'ಹರಿಹರನಿಗೆ ಶಿವಾನುಭವ ಮಂಟಪದ ವಿಚಾರಗಳು ತಿಳಿದಿಲ್ಲ' ವೆಂಬ ವಾಕ್ಯವನ್ನು ಹೇಳಿದ್ದೆ—"ಈ ಅಕ್ಕಗಳ ರಗಳೆಯಿಂದ, ಅಂದಿನ ವೀರಶೈವದ ಇತಿಹಾಸವು ವರ್ತನೆಯು ಮತ್ತಷ್ಟು ದಿಟವಾಗಿ, ಸ್ಫುಟವಾಗಿ ತೋರುತ್ತದೆ" ಎನ್ನಬಹುದು.

## ಇನ್ನೊಂದು ಪ್ರಶ್ನೆ.

'ಶತ್ರುರಾಜರಲ್ಲಿ-ಅದರಲ್ಲಿ ಬೇಹುಗಾರರಿಲ್ಲದ ಸ್ಥಳಗಳಲ್ಲಿ ಬರತಕ್ಕ ಸುದ್ದಿಗಳಾದರೂ ಎಂತಹವು ? ವಿರೋಧದ ಸುದ್ದಿಗಳೆ. ಶತ್ರುರಾಜರನ್ನು ಜರಿಯುವ ಸುದ್ದಿಗಳೆ. ಅಕ್ಕಗಳು ಕಲ್ಯಾಣಕ್ಕೆ ಬಂದ ಸುದ್ದಿಯನ್ನು ಹರೀಶ್ವರನೇಕೆ ಬರೆಯುವದನ್ನು ಬಿಟ್ಟನು ? ಇದು ಇನ್ನೂ ವಿಚಾರ ಮಾಡತಕ್ಕ ಅಂಶವೇ ಆಗಿದೆ." ಎಂಬ ವಾಕ್ಯವನ್ನೂ 'ಸದ್ಧರ್ಮದೀಪಿಕೆ' ಯ ಸಂಪಾದಕರವರೇ ಬರೆದಿರುವರು. ಇದನ್ನೂ ಈ ಲೇಖಕರು 'ಮದುವೆಯಾಗಿಲ್ಲ' ವೆಂದು ಸಾಧಿಸುವವರಲ್ಲಿ ಸಮರ್ಪಿಸಿಕೊಂಡಿರುವರು.

## ನಮ್ಮ ಉತ್ತರ.

ಬೇಹುಗಾರರಿಲ್ಲದ ಶತ್ರುರಾಜರಿಗೆ-ಸ್ಥಳಗಳಿಗೆ-ವಿರೋಧದ, ತಮ್ಮನ್ನು ಜರೆಯುವ ವಾರ್ತೆಗಳು ಬರುತ್ತವೆ; ಬರಲಿ. ಆದರೆ ಕೌಶಿಕರಾಜನು

---

* ಇದರಿಂದ ಹರಿಹರದೇವನೂ ಸ್ಥಾವರ ಲಿಂಗಾರ್ಚನೆಗೆ ಹೋಗುತ್ತಿದ್ದನೆಂದು ತಿಳಿಯಬಾರದು. ಏಕೆಂದರೆ— ಭೈರವೇಶ್ವರ ಕಾವ್ಯದ ಕಥಾಸೂತ್ರ ರತ್ನಾಕರದಲ್ಲಿ— "ವಿಷ್ಣು ಮೊದಲಾದ ಅನ್ಯದೈವಕ್ಕೆ ಪೊಡಮಡಲೊಲ್ಲನು; ಗುಡಿಯ ಹೊಗಲೊಲ್ಲನು" ಎಂಬುದಾಗಿ ಆ ಹರಿಹರದೇವನ 'ಪ್ರತಿಜ್ಞೆ' ಇದ್ದಿತೆಂದು ಉಲ್ಲೇಖವಿದೆ. ಈ ವಿಷಯವನ್ನು ಮುಂದೆ ವಿವರಿಸುವ ಪ್ರಸಂಗವೊದಗಿದರೆ ಇನ್ನೂ ಹೆಚ್ಚು ವಿಶದಪಡಿಸುವದರಲ್ಲಿ ಬರಬಹುದು.

ಮಹಾದೇವಿಯಕ್ಕಗಳನ್ನು ಮದುವೆಯಾದನೆಂದು ಸುದ್ದಿಬಂದರೆ ಇದ ರಿಂದ ಅನ್ಯರಾಜರನ್ನು ಜರೆದಂತಾಗುವದೇ ? ಇರಿದಂತಾಗುವದೇ ? ಮತ್ತು ಈ ಸಂಗತಿಯು ಪರಸ್ಪರ ರಾಜರ ವಿರೋಧಕ್ಕೆ, ವಿಕೋಪಕ್ಕೆ, ವೈಮನಸ್ಸಿಗೆ ಕಾರಣವಾಗುತ್ತದೆಯೆ ? ಕೆಡಿಯಾಗುತ್ತದೆಯೆ ? ಈ ವಿವಾ ಹಕ್ಕೂ ಆ ವಿರೋಧಕ್ಕೂ ಎತ್ತಣಿಂದಲೂ ಸಂಬಂಧವೇ ಇಲ್ಲ. §

(ಮುಂದೆವರಿಯುವದು.)

---

§ ಇನ್ನು ,ಅಕ್ಕಗಳು ಕಲ್ಯಾಣಕ್ಕೆ ಬಂದ ಸುದ್ದಿಯನ್ನು ಹರೀಶ್ವರನೇಕೆ ಬರೆಯು ವದನ್ನು ಬಿಟ್ಟನು ?—' ಎಂಬ ಪ್ರಶ್ನೆಗೆ, ಇದೇ ವರ್ಷದ ಆಗಸ್ಟ ತಿಂಗಳಿನ 'ಶಿವಾನುಭವ' ಪತ್ರಿಕೆಯಲ್ಲಿ "ಮಹಾದೇವಿಯಕ್ಕಗಳ ಜೀವನ ಮತ್ತು ಸಾಹಿತ್ಯ" ಎಂಬ ಲೇಖದ [illegible] ಮತ್ತು [illegible] ನೇ ಪುಟವಲ್ಲಿ ವಿವರಿಸಿದ್ದೇನೆ.

# ಶ್ರೀ. ಹಾನಗಲ್ಲ ಸ್ವಾಮಿಗಳವರು ರಚಿಸಿದ

# ಹಾಡುಗಬ್ಬಗಳು.

---

## ಪದ್ಯ ೧.

(ರಾಗ-ಪಹಡಿ)

ಪಾಹಿ ಶಿವ ನೀ ಪಾಹಿ ಶಿವ।
ನಾ ಮರೆಹೊಕ್ಕೆ ದೇವ ॥ಪ॥

೧

ಪುರಹರ ನಿನ್ನಯ ಕರುಣವಿಲ್ಲದೆ।
ಮರಳಿ ಮರಳಿ ಭವದೊಳು ತಿರುಗಿ॥
ಘೋರ ಕಷ್ಟದೊಳು ಪಾರುಗಾಣೆ ನಾ।
ಪರಮೇಶ! ಪರಿತೋಷ!! ವರಕೋಶ!!! ॥

೨

ಮಲಮಾಯದಿ ಬಲು ಕಳವಳಗೊಳ್ಳುವೆ।
ಬಲವಂತನೆ ಸಲಹುವದೆನ್ನಂ ॥
ಬಲುಮೆಯುಳ್ಳ ಬಹು ಕಲುಷದ ಕಾಟವು॥
ಬಲುಶಾಂತ! ಕಲೆಯಾಂತ!! ಛಲವಂತ!!! ॥

೩

ಶಿವನರ್ಚನೆಯೊಳು ತನು, ಮನ, ಧನವನು।
ಸವೆಸುವ ತವೆ ಸಾಧನವಿರಿಸಿ॥
ಜೀವಭಾವವನು ಕಳೆಯುತ ಕೃಪೆಯಿಂ।
ಶಿವಯೋಗಿ! ಸುವಿರಾಗಿ!! ಭವತ್ಯಾಗಿ!!! ॥

---

## ಪದ್ಯ ೨.

(ಜೀವನ್ ಪುರಿರಾಗ.)

ದೇವ, ದೇವ! ಜೀವಗುಣವ ಜವದಿ।
ನಾಶಗೊಳಿಸಿ ಕಾಯೋ ॥ಪ॥

೧

ಘನಪಾಶವು ಮುಸುಕಿ।
ನಿರ್ನಾಮನಾದೆ।
ಮನುಮುನಿ ವಂದ್ಯಾ ॥

೨

ಮಮತಾ ವಿಷಯದೊಡನೆ।
ಪ್ರಮಾದಗೊಳುವೆ।
ಸುಮನವ ನಿತ್ತು ॥

೩

ಶಿವಯೋಗದೊಳಿರಿಸಿ।
ನಿರ್ವಾಣ ಸುಖವ।
ತವೆ ಪಾಲಿಸುತೆ ॥

---

## ಪದ್ಯ ೩.

(ರಾಗ-ಸಿಂಧುರ)

ದೇವ ಪೊರೆಯೊ! ಭವಮಾಲೆಯುಜಿತ।
ಭಾವಜಮದಹತ ಈ ವಸುಜಾತ ॥ಪ॥

೧

ಚಿತ್ತದ ರಾಗ। ಭ್ರಾಂತಿಯು ಪೂಗ।
ಗುಹೇಶ್ವರ।
ಜೊತೆಗೂಡಿ ಅತಿ ಬೇಗ ॥

(ಮುಂದೆ ಸಾಗುವದು.)

R. N. B. 2554.

# ಶಿವಾನುಭವ.

ಸಂಪಾದಕ

ರಾ. ಸಾ. ಫ. ಗು. ಹಳಕಟ್ಟಿ.
ಬಿ. ಎ. ಎಲ್. ಎಲ್. ಬಿ.
ವಿಜಾಪುರ.

೧೯೩೭.

ಸಂಪುಟ ೧೨ ) ಡಿಸೆಂಬರ. ( ಸಂಚಿಕೆ ೩

# ವಿಷಯಾನುಕ್ರಮಣಿಕೆ.



---


ಇದನ್ನು ವಿಜಾಪುರದಲ್ಲಿ ಇದರ ಸಂಪಾದಕರಾದ ರಾ. ಸಾ. ಫ. ಗು. ಹಳಕಟ್ಟಿ ಇವರು ತಮ್ಮ "ಹಿತಚಿಂತಕ ಪ್ರಿಂಟಿಂಗ ಪ್ರೆಸ್" ನಲ್ಲಿ ಮುದ್ರಿಸಿದರು. ಮತ್ತು ಅವರು ವಿಜಾಪುರದಲ್ಲಿ ತಮ್ಮ ೧೬೨೦ (ಅ) ಮನೆಯಲ್ಲಿ ಪ್ರಸಿದ್ಧಿಸಿದರು.

# ಶಿವಾನುಭವ.

ವರ್ಷ ೧೨] ಡಿಶಂಬರ ೧೯೩೭ [ಸಂಚಿಕೆ ೩


## ಅಕ್ಕಮಹಾದೇವಿಯ ಜೀವನ ರಹಸ್ಯ.


(ಲೇಖಕ:-- ಪ್ರೊ|| ಎಸ್. ಎಸ್. ಮಾಳವಾಡ, ಎಮ್. ಎ. ಪ್ರೊಫೆಸರ

ಕರ್ನಾಟಕ ಕಾಲೇಜ— ಧಾರವಾಡ.)


ಅಕ್ಕನ ವ್ಯಕ್ತಸ್ವರೂಪವನ್ನು ಶೂನ್ಯಸಂಪಾದನೆಕಾರರು ಹೀಗೆ ಕೊಟ್ಟಿದ್ದಾರೆ:--

ಭಕ್ತಿಯ ಭಾಗ್ಯವೆನಿಪ, ಮುಕ್ತಿಯ ತವರ್ಮನೆ ಎನಿಪ, ಶಿವ ಭಾವಸಂಪನ್ನೆ, ಪ್ರಸಾದದ ಮೇರುವೆ, ತತ್ವ ಶಿಖಾಮಣಿ, ಪುಣ್ಯದ ಪುಂಜೆ, ನೈಷ್ಠೆಯ ಕಣಿ, ಸತ್ಯದ ಸದನ, ಶಾಂತಿಯ ನಿಧಿ, ಚಿದಂಬರ ಸಂಯುತೆ, ಸ್ವಾನುಭವದ ಸಾಗರ, ನಿತ್ಯದ ನಿವಾಸೆ-- ಎನಿಪ ಮಹಾ ದೇವಿಯಕ್ಕಂಗಳ್--

ಈ ವ್ಯಕ್ತಿಸ್ವರೂಪವನ್ನು ಅನುಸರಿಸಿ ಅಕ್ಕನ ಮೂರ್ತಿಯನ್ನು ನಾವು ಕಲ್ಪಿಸಿಕೊಳ್ಳಬಹುದಾಗಿದೆ. ಅಲ್ಲದೆ ನಮಗೆ ಉಪಲಬ್ಧವಿರುವ ಪುರಾಣ ಗಳ ಕಥಾಂಶಗಳಲ್ಲಿಯ ವ್ಯತ್ಯಾಸವನ್ನು ಬಿಟ್ಟುಗೊಟ್ಟು ಅಕ್ಕನ ಜೀವನದ ರಹಸ್ಯವನ್ನು ತಿಳಿದುಕೊಳ್ಳುವದಾದರೆ ಅದನ್ನು 'ಧ್ಯೇಯಕ್ಕಾಗಿ ಆತ್ಮಾ ರ್ಪಣ' ಎಂಬ ಒಂದೇ ಮಾತಿನಲ್ಲಿ ಹೇಳಲು ಸಾಧ್ಯವಿದೆ. ಕನ್ನಡ ನಾಡಿನ ಜೀವಜ್ಯೋತಿಗಳಲ್ಲಿ ಶ್ರೇಷ್ಠಸ್ಥಾನದಲ್ಲಿರುವ ಅಕ್ಕನ ಪೌರಾ ಣಿಕ ವ್ಯಕ್ತಿತ್ವದ ಸುತ್ತಲೂ ಅನೇಕ ಘಟನೆಗಳು ಹೆಣೆಯಲ್ಪಟ್ಟಿವೆ. ಅವಳ ವ್ಯಕ್ತಿತ್ವವನ್ನು ಉಜ್ವಲಗೊಳಿಸಬೇಕೆಂಬ ಭರದಲ್ಲಿ ಅನೇಕರು ಅನೇಕ ರೀತಿಯಿಂದ ಅವಳನ್ನು ಬಣ್ಣಿಸಲು ಯತ್ನಿಸಿರುವದರಿಂದ ಅಕ್ಕನ

ಬಗೆಗೆ ಇರುವ ಪ್ರಾಚೀನ ಸಾಹಿತ್ಯದಲ್ಲಿ ಭಿನ್ನಾಭಿಪ್ರಾಯಗಳು ಇರುವುದು ಸ್ವಾಭಾವಿಕವಾಗಿದೆ. ಅಕ್ಕನ ಬಗೆಗೆ ಇದುವರೆಗೆ ನಮಗೆ ಕಂಡು ಬಂದಿರುವ ಪ್ರಾಚೀನ ಸಾಹಿತ್ಯವು ಇಷ್ಟು:—

(೧) ಹರಿಹರಕೃತ ಮಹಾದೇವಿಯಕ್ಕನ ರಗಳೆ.
(೨) ಚೆನ್ನಬಸವಾಂಕನ ಮಹಾದೇವಿಯಕ್ಕನ ಪುರಾಣ.
(೩) ಮಹಾದೇವಿಯಕ್ಕನ ಸಾಂಗತ್ಯ.
(೪) ಚಾಮರಸನ ಪ್ರಭುಲಿಂಗಲೀಲೆ.
(೫) ಶೂನ್ಯಸಂಪಾದನೆ.
(೬) ಚೆನ್ನಬಸವ ಪುರಾಣ. ಮುಂತಾದ ವೀರಶೈವ ಪುರಾಣಗಳಲ್ಲಿಯ ಸಂದರ್ಭಗಳು.

ಈ ಮೇಲಿನ ಸಾಹಿತ್ಯದಲ್ಲಿ ಅಡಕವಾಗಿರುವ ಚರಿತ್ರೆಯಲ್ಲಿಯ ಭಿನ್ನಾಭಿಪ್ರಾಯಗಳನ್ನು ಬಿಟ್ಟುಕೊಟ್ಟರೆ ಅಕ್ಕನ ಚರಿತ್ರೆಯನ್ನು ಹೀಗೆ ಸಂಗ್ರಹಿಸಬಹುದು.

ದಕ್ಷಿಣ ದೇಶದ ಉಡುತಡಿಯಲ್ಲಿ ಒಂದು ಸಾಮಾನ್ಯ ಶೈವ ಮನೆತನದಲ್ಲಿ ಮಹಾದೇವಿಯಕ್ಕನ ಜನ್ಮವಾಯಿತು. ಅವಳು ರೂಪವತಿಯಾಗಿದ್ದಳು. ಶಿವಭಕ್ತಳಾಗಿದ್ದಳು ಅವಳು ಯೌವನಾವಸ್ಥೆಗೆ ಬಂದ ಕಾಲಕ್ಕೆ ಆ ಭಾಗದ ಅರಸನಾದ ಕೌಶಿಕನು ಆಕೆಯನ್ನು ಮೋಹಿಸಿದನು. ಆತನು ಶಿವಭಕ್ತನಲ್ಲದುದರಿಂದ ಅಕ್ಕನು ಅವನನ್ನು ತಿರಸ್ಕರಿಸಿ ಮನೆಯನ್ನು ಬಿಟ್ಟು ಹೊರಟುಹೋದಳು. ಬಾಲ್ಯದಿಂದಲೂ ತನಗೆ ಶಿವನೇ ಗಂಡನಾಗಬೇಕೆಂಬ ಹಂಬಲವನ್ನಿಟ್ಟುಕೊಂಡಿದ್ದು ಅದನ್ನು ಸಾಧಿಸುವದಕ್ಕಾಗಿ ವೀರ ವಿರಕ್ತವ್ರತವನ್ನು ತಳೆದು, ಜ್ಞಾನವನ್ನು ಸಂಗ್ರಹಿಸಿ, ಅರಣ್ಯದಲ್ಲಿ ಅನೇಕ ದಿನಗಳ ವರೆಗೆ ತೊಳಲಿ, ಬಳಲಿ, ಆಧ್ಯಾತ್ಮಿಕ ವಿರಹದಿಂದ ಬೆಂಡಾಗಿ ಕೊನೆಗೊಮ್ಮೆ ನಿಸರ್ಗರಮ್ಯ ಕದಳಿಯ ಬನದಲ್ಲಿ ತನ್ನ ಬಾಲ್ಯದ ಕನಸನ್ನು ನನಸಾಗಿ ಕಂಡಳು. ಅಂದರೆ ಯೌವನದಲ್ಲಿಯೇ ಮನೆ, ತಾಯಿತಂದೆ ದಾಂಪತ್ಯ ಸುಖಗಳನ್ನು ತೊರೆದು ಜ್ಞಾನಕ್ಕಾಗಿ ಹಂಬಲಿಸಿ, ತನ್ನ ಧ್ಯೇಯಕ್ಕಾಗಿ ಆತ್ಮಾರ್ಪಣ ಮಾಡಿದಳು. ಈ ನಿರ್ವಿವಾದವಾದ ಅಕ್ಕನ ಚರಿತ್ರೆಯಲ್ಲಿ ಅಕ್ಕನ ವೀರ ವಿರಕ್ತಿ, ಶ್ರೇಷ್ಠ ಅನುಭಾವ, ಅನುಪಮವಾದ ಸಾಹಸ, ಧೈರ್ಯ, ಧ್ಯೇಯನಿಷ್ಠೆ ಇವುಗಳು ಮೂರ್ತಿಮತ್ತಾಗಿ ಕಂಡುಬರುತ್ತವೆ.

ಇನ್ನು ಅಕ್ಕನ ಚರಿತ್ರೆಯಲ್ಲಿ ಕಂಡುಬರುವ ಭಿನ್ನಾಂಶಗಳನ್ನು ಚರ್ಚಿಸುವಾಗ ತೀರ ಮೊದಲಿಗನಾದ ಹರಿಹರನ ಕಥಾಂಶವನ್ನು ಇಂದು ಜನಪ್ರಿಯವಾಗಿರುವ ಚಾಮರಸನ ಕಥಾಂಶವನ್ನು ನಾವು ತುಲನಾತ್ಮಕದೃಷ್ಟಿಯಿಂದ ನೋಡಬೇಕಾಗುತ್ತದೆ.

ಹರಿಹರನ ರಗಳೆಯಲ್ಲಿ ಅಕ್ಕನ ಅವತಾರದ ಕಾರಣ, ಅಕ್ಕನ ತಾಯಿತಂದೆಗಳ ಹೆಸರು ಬೇರೆಯಾಗಿದ್ದರೂ ಅವು ಮುಖ್ಯ ವಿಷಯವಲ್ಲ. ಗುಪ್ತಗಣನಾಥನು ಕಾಲು ಸೋಂಕಿದ ಕಾಲಕ್ಕೆ ರುದ್ರಕನ್ನಿಕೆಯು ಆವನನ್ನು ಭವಿಯೆಂದು ಕೋಪದಿಂದ ಜರಿದಳು, ಅದಕ್ಕಾಗಿ

ಭಕ್ತರುದರಂಬೊಕ್ಕು ನಿಜನಾಮವಂ ತಳೆದು
ಭಕ್ತನಂ ಭವಿಯೆಂದು ದೂಸರಿಂದಪ್ಪುದಿದು
ಭವಿಗೆ ಹೆಂಡತಿಯಾಗಿ ಭಕ್ತರ್ಗೆ ಶರಣೆಂದು
ಭವವಾರ್ಧಿಯಂ ದಾಂಟಿ ಶ್ರೀಗಿರಿಗೆ ನಡೆತಂದು
ಬಳಿಕ ಬಪ್ಪುದು.

ಎಂಬ ಶಾಸವನ್ನು ಪಾರ್ವತಿಯಿಂದ ಪಡೆಯುತ್ತಾಳೆ. ಚಾಮರಸನ ಪ್ರಭುಲಿಂಗಲೀಲೆಯಲ್ಲಿ ಅಕ್ಕನ ಅವತರಣ ಕಾರಣವು ಹೀಗೆ ಇದೆ:—

ಪಾರ್ವತಿಯು ಅಲ್ಲಮನ ವಿರಕ್ತಿಯನ್ನು ಪರಿಕಿಸಲು ತನ್ನ ತಾಮಸ ಕಳೆಯನ್ನು ಭೂಲೋಕಕ್ಕೆ ಕಳಿಸಿರಲು ಆ ಪ್ರಯತ್ನವು ವಿಫಲವಾಯಿತು. ಆದುದರಿಂದ ಆಕೆಯು ತನ್ನ ಸಾತ್ವಿಕ ಕಳೆಯನ್ನು ಕಳಿಸಿದಳು. ಆಗ

ಇಳೆಯೊಳುಡುತಡಿಯೆಂಬ ಪಟ್ಟಣ
ದೊಳಗೆ ವೀರ ಶಿವಾಗಮಿಕ ನಿ
ರ್ಮಳನ ವಲ್ಲಭೆಯೆನಿಪ ಸುಮತಿಯ ಗರ್ಭಶುಕ್ತಿಯಲಿ
ಚೆಲುವೆಯಾದ ಕುಮಾರಿಯೆಂಬ
ಗ್ಗಳದ ಮುತ್ತುದಯಿಸಿತು ಧರಣೀ
ತಳದೊಳಗೆ ಪಾರ್ವತಿಯ ಸಾತ್ವಿಕ ಗುಣವೆ ರೂಪಾಗಿ.

ಅಕ್ಕಮಹಾದೇವಿಯ ತಾಯಿತಂದೆಗಳ ಹೆಸರು ಪ್ರಭುಲಿಂಗಲೀಲೆಯಲ್ಲಿ ನಿರ್ಮಳ, ಸುಮತಿ ಎಂದಿದ್ದರೆ ಹರಿಹರನ ರಗಳೆಯಲ್ಲಿ ಶಿವಭಕ್ತ, ಶಿವಭಕ್ತೆ ಎಂಬದಾಗಿ ಇದೆ.

ಹರಿಹರನ ಶಿವಶರಣರ ರಗಳೆಯಲ್ಲಿ ಶರಣರ ಅವತಾರದ ಕಾರಣಗಳು ಒಂದೇ ರೀತಿಯಾಗಿವೆ. ಶಿವನ ಓಲಗದಲ್ಲಿ ಆವುದೊಂದು ತಪ್ಪನ್ನು ಗೈದವರಿಗೆ ಭೂಲೋಕದಲ್ಲಿ ಜನ್ಮ ತಳೆಯಲು ಶಾಪಕೊಡುವದೇ ಸರ್ವಸಾಮಾನ್ಯ ಕಾರಣ. ಅದಕ್ಕನುಸರಿಸಿ ಅಕ್ಕನ ಅವತಾರವಾಗಿದೆ. ಭವಿಯೆಂದು ಶಿವಭಕ್ತನನ್ನು ದೂಷಿಸಿದ್ದರಿಂದ ಭವಿಗೆ ಹೆಂಡತಿಯಾಗುವ ಶಾಪವನ್ನು ಪಾರ್ವತಿಯು ಆಕೆಗೆ ಕೊಟ್ಟದ್ದರಿಂದ ಹರಿಹರನ ಪ್ರಕಾರ ಅಕ್ಕನ ಮದುವೆಯು ಕೌಶಿಕನೊಡನೆ ಆಗುತ್ತದೆ. ಆದರೆ ಚಾಮರಸನ ಅಭಿಪ್ರಾಯದ ಪ್ರಕಾರ ಮದುವೆ ನಡೆಯುವದಿಲ್ಲ. ಕೌಶಿಕನು "ನಮಗೆ ಶಿವಭಕ್ತಿಯನು ಮಾಡುವ ಸಮಯವಳವಡದೆನಲು ನೃಪತಿಗೆ ರಮಣಿ ನುಡಿದಳು ನಮಗೆ ನಿಮ್ಮಯ ಸಂಗವಳವಡದು."

ಅಕ್ಕನ ಜೀವನದಲ್ಲಿಯ ಈ ಘಟನೆಯು ಇಂದು ಬಹು ಜನರ ಲಕ್ಷವನ್ನೆಳೆದು ಅನೇಕ ವಾದಗಳಿಗೆ ಎಡೆಗೊಟ್ಟಿದೆ. ಅಕ್ಕನು ಮದುವೆ ಮಾಡಿದ್ದರಿಂದ ಹರಿಹರನನ್ನು ಅಲ್ಲಗಳೆಯುವ ಪ್ರಯತ್ನವೂ ಕೂಡ ಕೆಲವು ಲೇಖಗಳಲ್ಲಿ ಕಂಡುಬರುತ್ತಿದೆ. ಹರಿಹರನನ್ನು ಸಮರ್ಥಿಸುವ ಹಟವು ಕೆಲವರಲ್ಲಿದೆ. ಆದುದರಿಂದ ಈ ಮಾತಿನ ಬಗೆಗೆ ಸ್ವಲ್ಪ ವಿಶದವಾದ ಚರ್ಚೆಯು ಆವಶ್ಯಕವಾಗಿದೆ. ಹರಿಹರನು ಉಳಿದ ಎಲ್ಲ ಕವಿಗಳಿಗಿಂತ ಮೊದಲಿಗನಾದುದರಿಂದ ಆತನ ಹೇಳಿಕೆಯೇ ಸರಿಯೆಂದು ಒಂದು ಪಕ್ಷ. ಹರಿಹರನು ಕಲ್ಯಾಣ ಪ್ರಾಂತದಿಂದ ದೂರವಿದ್ದುದರಿಂದ ಆ ನಾಡಿನ ಚಟುವಟಿಕೆಗಳ ಪರಿಚಯವು ಅವನಿಗಿರಲಿಲ್ಲ. ಅಲ್ಲದೆ ಆತನು ಹಳೇಬೀಡಿನಿಂದ ಹೊರದೂಡಲ್ಪಟ್ಟು ಹಂಪೆಯಲ್ಲಿ ಇರುವ ಸಂದರ್ಭವಿದ್ದುದರಿಂದ ಮಹಾದೇವಿಯಕ್ಕನ ಜೀವನದ ಅಂಶಗಳನ್ನು ಕೂಡ ಅರಿತುಕೊಳ್ಳಲಿಕ್ಕೆ ಆಗಿನ ಕಾಲಕ್ಕೆ ಅನುಕೂಲವಿರಲಿಲ್ಲ. ಆದುದರಿಂದ ಆತನ ಹೇಳಿಕೆಯನ್ನು ನಂಬಬೇಕಾಗಿಲ್ಲ ಎಂದು ವಾದಿಸುವ ಪಕ್ಷವು ಎರಡನೆಯದು. ಹೀಗೆ ವಾದಿಸುವವರಿಗೆ ಶೈವಭಕ್ತಿ ಸಾಮ್ರಾಜ್ಞಿಯು ಭವಿಯೊಡನೆ ಮದುವೆಯಾಗುವ ಕಲ್ಪನೆ ಸಹ್ಯವಾಗಿ ತೋರುವದಿಲ್ಲ.

(೧) ಅಕ್ಕನು ಮದುವೆಯಾಗಿ ಕೌಶಿಕನ ಸಹವಾಸ ಸುಖದಲ್ಲಿದ್ದು ಆತನಿಂದ ಮೂರು ತಪ್ಪು ನಡೆದ ಮೇಲೆ ಆತನನ್ನು ತ್ಯಜಿಸಿದಳೆಂಬುದು ಹರಿಹರನ ಅಭಿಪ್ರಾಯ.

(೨) 'ನೃಪತಿಗೆ ರಮಣಿ ನುಡಿದಳು ನಮಗೆ ನಿಮ್ಮಯ ಸಂಗ ವಳವಡದು' ಎಂಬ ಅಭಿಪ್ರಾಯವು ಚಾಮರಸನದು. ಅದುವೇ ಇನ್ನು ಳಿದ ವೀರಶೈವ ಪುರಾಣಗಳಲ್ಲಿ ಇದೆ.

'ವಿರಕ್ತಿ ಬಂದುದು ಮೀಸಲಳಿಯದ ಕನ್ನೆತನದಲಿ' ಎಂಬ ಚಾಮ ರಸನ ಅಭಿಪ್ರಾಯಕ್ಕೂ ಕೌಶಿಕನ ಸಹವಾಸದಲ್ಲಿ ಅಕ್ಕನು ಇದ್ದಳು ಎಂಬ ಹರಿಹರನ ಅಭಿಪ್ರಾಯಕ್ಕೂ ಮಧ್ಯವರ್ತಿಯಾಗಿರುವ ಇನ್ನೂ ಒಂದು ಕಲ್ಪನೆಯು ಇದೆ. ಅದೆಂದರೆ ಅಕ್ಕನ ಮದುವೆಯಾಯಿತು. 'ಹೀಗೆ ಮದುವೆಯಾದರೂ ಅಂಗಸಂಗ ಸುಖವು ಒದಗಲಿಲ್ಲ.' (ಮ. ರ. ಮುಮ್ಮುಖ ಪು. ೨). ಇದರಿಂದ ಅಕ್ಕನು ಭವಿಯ ಸಂಗದಲ್ಲಿದ್ದುದು ಕೆಲವರಿಗೆ ಸೇರುವದಿಲ್ಲವೆಂದು ಸ್ಪಷ್ಟವಾಗಿ ಕಂಡುಬ ರುತ್ತದೆ. ಆದರೆ ಅಕ್ಕನು ಕೌಶಿಕನ ಸಂದರ್ಶನ ಮಾಡಿದಳೆಂಬುದ ರಲ್ಲಿ ಭಿನ್ನಾಭಿಪ್ರಾಯಗಳಿಲ್ಲ. ಹಾಗೆ ಕೌಶಿಕನಲ್ಲಿಗೆ ಹೋದುದೇ ವಿವಾ ಹವಾಗಿ ಆತನಲ್ಲಿದ್ದಳೆಂದು ತಿಳಿಯುವದಕ್ಕೆ ಅವಕಾಶ ಕೊಟ್ಟಿದೆಯೆಂದು ಕೆಲವರು ಊಹಿಸುತ್ತಾರೆ. "ಮಿಕ್ಕಿನ ಲೋಕದ ಗಂಡರ ಸಂಬಂಧವೆ ನಗಿಲ್ಲವಯ್ಯ" ಎಂಬ ಮಾತನ್ನು ಮದುವೆಯಾಗಲಿಲ್ಲವೆಂದು ಹೇಳು ವವರು ಉದಾಹರಿಸುತ್ತಿದ್ದಾರೆ. ಆದರೆ ಅದೇ ಉಕ್ತಿಯಿಂದ ಮದುವೆ ಯಾಗಿದ್ದರೂ ಲೋಕದ ಗಂಡರ ಸಂಬಂಧವನ್ನು ತಡೆದುಹಾಕಿದ್ದಾ ಳೆಂಬ ಅಭಿಪ್ರಾಯವನ್ನೂ ಕೂಡ ನಾವು ಪಡೆಯಬಹುದಾಗಿದೆ. ಲೋಕದ ಗಂಡನನ್ನು ಪಡೆದಿದ್ದರೂ ಅವನು 'ಸಾವು ಕೊಡುವ' ಗಂಡನಾದುದ ರಿಂದ ಅವನನ್ನು ಒಲೆಯೊಳಗಿಕ್ಕು' ಎಂದು ಹೇಳಿ ಬಾಲ್ಯದ ತನ್ನ ಕನ ಸಿನ 'ಹೊಳೆವ ಕೆಂಜೆಡೆಗಳ...... ಕಾಂತಿಯಿಂ ಈರೇಳು ಭುವನವುಂ ಬೆಳಗುವ ದಿವ್ಯ ಸ್ವರೂಪ' ನನ್ನು ಕಾಣುವ ಬಯಕೆಯಿಂದ ಹೊರಟು ಹೋಗಿರಬೇಕೆಂದು ಊಹಿಸುವದು ತಪ್ಪಾಗಲಾರದು. ಭವಿಯ ಸಂಗವು ಅಕ್ಕನಿಗೆ ಗೌರವವನ್ನು ತರುವದಿಲ್ಲವೆಂಬ ಭಾವನೆಗೆ ಒಳಪಟ್ಟು ಹರಿ ಹರ ಕವಿಯನ್ನು ತೀಕ್ಷ್ಣವಾಗಿ ನಿಂದಿಸುವುದು ಸರಿಯಲ್ಲ. ಅಕ್ಕನ ಬಗೆಗೆ ಉಪಲಬ್ಧವಿರುವ ಪ್ರಾಚೀನ ಸಾಹಿತ್ಯದಲ್ಲಿ

(೧) ಹರಿಹರನ ರಗಳೆ.
(೨) ಚೆನ್ನಬಸವಾಂಕನ ಪುರಾಣ.
(೩) ಕೆಂಚವೀರಣ್ಣೊಡೆಯರ ಶೂನ್ಯಸಂಪಾದನೆ.

ಇವುಗಳು ಅಕ್ಕನ ಮದುವೆಯನ್ನು ಸಮರ್ಥಿಸುತ್ತಿವೆ. ಚಾಮರಸನ ಪ್ರಭುಲಿಂಗಲೀಲೆ ಸಿದ್ಧವೀರಣ್ಣೊಡೆಯನ ಸಂಪಾದನೆಯಲ್ಲಿ ಮಾತ್ರ ಈ ವಿವಾಹವಾಗಿಲ್ಲವೆಂದು ಹೇಳಿದೆ. ಹರಿಹರನು ಹೇಳಿದ ಮಾತು ಸತ್ಯವಾಗಿ ತೋರದ್ದರಿಂದ ಎರಡುನೂರು ವರುಷ ನಂತರ ಚಾಮರಸನು ಅದನ್ನು ಮಾರ್ಪಡಿಸಲು ಪ್ರಯತ್ನಿಸಬೇಕೆಂಬ ಊಹೆ ತಪ್ಪಾಗಲಿಕ್ಕಿಲ್ಲ. ಹರಿಹರನ ಮಾತು ಅಧಿಕೃತವಲ್ಲವೆಂದು ಹೇಳುವವರು ಕೆಳಗಿನ ಕಾರಣಗಳನ್ನು ಕೊಡುತ್ತಾರೆ.

(೧) ಹರಿಹರನಿಗೆ ಅಕ್ಕನ ತಾಯಿತಂದೆಗಳ ಹೆಸರು ಸರಿಯಾಗಿ ಗೊತ್ತಿಲ್ಲ.

(೨) ಶೈವ ಸಾಮ್ರಾಜ್ಞಿಯನ್ನು ಭವಿಯ ಸಂಗ ಮಾಡಿಸುವ ಮುಂತಾದ ಸಲ್ಲದ ಚರಿತ್ರೆಯನ್ನು ಹೇಳಿದ್ದಾನೆ. ಆದ್ದರಿಂದ ಕವಿ ಹರೀಶ್ವರನಿಗೆ ಅಕ್ಕನ ಚರಿತ್ರೆ ಗೊತ್ತಿಲ್ಲ.

(೩) ಅಕ್ಕನ ಜೀವನದ ಉಜ್ವಲ ಭಾಗವಾದ ಶಿವಾನುಭವ ಮಂಟಪದ ಸಂದರ್ಶನವನ್ನು ಹರಿಹರನು ಉಲ್ಲೇಖಿಸಿಲ್ಲ.

(೪) ಅಕ್ಕನು ಅರಣ್ಯಕ್ಕೆ ಬಂದ ನಂತರ ಹರಿಹರನು ಹೇಳುವ ಚರಿತ್ರಾಂಶವು ಅಕ್ಕನ ಚರಿತ್ರಕ್ಕೆ, ತತ್ತ್ವಕ್ಕೆ ಒಪ್ಪವಂತಹದಿಲ್ಲ.

(೫) ಹರಿಹರನು ತೀರ ಮೊದಲಿನ ಕವಿಯಾದರೂ ಆತನಿಗೆ ನಿಜಸ್ಥಿತಿಗಳು ಗೊತ್ತಿರಲಿಲ್ಲ.

ಹರಿಹರನ ಕಾವ್ಯೋದ್ದೇಶವನ್ನು ಆತನು ಚಿತ್ರಿಸಿರುವ ಶರಣರ ಮೂರ್ತಿ ಸ್ವರೂಪವನ್ನು ಸೂಕ್ಷ್ಮವಾಗಿ ಪರೀಕ್ಷಿಸಿದರೆ ಮೇಲಿನ ಆಕ್ಷೇಪಣೆಗಳಲ್ಲಿ ಸಾಕಷ್ಟು ತಥ್ಯವಿಲ್ಲವೆಂದು ತಿಳಿಯುವುದು.

(೧) ಅಕ್ಕನ ತಾಯಿತಂದೆಗಳ ಹೆಸರು ನಿರ್ಮಳ ಸುಮತಿ ಎಂಬುದಾಗಿದ್ದು ಹರಿಹರನು ಅವರನ್ನು ಶಿವಭಕ್ತ, ಶಿವಭಕ್ತೆ ಎಂದು ಕರೆದಿರುವನು ಎಂದು ಹೇಳುವದಾದರೆ ನಿಜವಾದ ಹೆಸರು ನಿರ್ಮಳ, ಸುಮತಿ ಎಂಬದಾಗಿಯೇ ಇರಬೇಕೆಂದು ಹೇಳಲಿಕ್ಕೆ ಆಧಾರವೇನು? ಅಲ್ಲದೆ ನಿರ್ಮಳ ಸುಮತಿ ಇವುಗಳಾದರೂ ಶಿವಭಕ್ತ, ಶಿವಭಕ್ತೆಯಂತೆ ಗುಣವಾಚಕ ವಿಶೇಷಣಗಳಂತೆಯೇ ತೋರುವದಿಲ್ಲವೇ? 'ಶಿವಭಕ್ತರುದರಂ ಬೊಕ್ಕು' ಎಂಬ ಶಾಪವಿರುವದರಿಂದ ಅದಕ್ಕೆ ಹೆಚ್ಚಾಗಿ ಅನ್ವಯಿಸು

ವಂತೆ ಹೆಸರುಗಳನ್ನು ಆರಿಸಿದ್ದರೆ ತಪ್ಪೇನು? ಮುಂದೆ ಚಾಮರಸನು ಅಕ್ಕನ ಚರಿತ್ರಾಂಶವನ್ನು ಮಾರ್ಪಡಿಸುವಾಗ ಹೆಸರುಗಳನ್ನೂ ಮಾರ್ಪಡಿಸಿರಬಹುದೆಂದು ಊಹಿಸಬಹುದಲ್ಲವೇ ?

(೨) ಶಿವಭಕ್ತನನ್ನು ಭವಿಯೆಂದು ಹೇಳಿದ ಕಾರಣದಿಂದಲೇ ಅಕ್ಕನಿಗೆ ಭವಿಸಂಗವಾಗಬೇಕಾಯಿತೆಂದು ಹರಿಹರನ ಅಭಿಪ್ರಾಯವಿದೆ! ಶಿವನ ಓಲಗದಲ್ಲಿಯ ಸಂದರ್ಭಕ್ಕೆ ಅನುಸರಿಸಿ ಕಥಾರಚನೆಯಿದೆ. ಅಥವಾ ಚರಿತ್ರವನ್ನು ಅನುಸರಿಸಿಯೇ ಓಲಗದಲ್ಲಿಯ ಶಾಪರಚನೆಯಿದೆ ಎಂದು ಹೇಳಿದರೆ ತಪ್ಪೇನು ? ಕೌಶಿಕನೊಡನೆ ಮದುವೆಯಾಗುವದರಿಂದ ಅಕ್ಕನ ಮೂರ್ತಿ ಸ್ವರೂಪಕ್ಕೆ ಗೌರವವಿಲ್ಲವೆಂದು ಏಕೆ ನಂಬಬೇಕು ? 'ಕಾರಿಕಾಲಮ್ಮೆ ತಾಂ ಭವಿಯೊಡನೆ ಬಾಳಳೇ? ಹೇರೂರ ಹೆಂಗೂಸು ಭವಿಗೆ ಸತಿಯಾಗಳೇ' ? ಎಂಬ ಹರಿಹರನ ವಾದವು ಸಮಂಜಸವೆಂದು ಏಕೆ ಹೇಳಬಾರದು? ಅಕ್ಕನ ಜೀವನವನ್ನು ಹರಿಹರನು ಉಜ್ವಲವಾಗಿಯೇ ಚಿತ್ರಿಸಿದ್ದಾನವೋ? "ಏನಾಗಿತ್ತಾದೊಡಂ ಭಕ್ತರಂ ರಕ್ಷಿಪುದು, ನಾನಾವಿಧಂ ಬಂದು ಶರಣರಂ ಸಲಹುವುದು" ಎಂಬ ಅವಳ ಧ್ಯೇಯವು ಉನ್ನತವಾಗಿಯೇ ಇದೆ. ಹರಿಹರನು ಅಕ್ಕನಿಗೆ ಅಗೌರವವನ್ನೇನೂ ತಂದಿಲ್ಲ. ಭವಿಯೊಡನೆ ಮದುವೆ ಸರಿಯೆಂದು ಆತನು ತಿಳಿದಿಲ್ಲ ; ಅನಿವಾರ್ಯವೆಂದು ಮಾತ್ರ ಅದನ್ನು ಚಿತ್ರಿಸಿದ್ದಾನೆ. 'ಅಯ್ಯೋ ಭವಿಗೆ ಕುಡುವದ ಮಾಣಿಸುವರಿಲ್ಲೆಂದು ಬೆರಲಂ ಕಚ್ಚಿ ಬೇಡಿಕೊಂಬಂತೆ ಶರಣರ್ಗೆ ಕೈಮುಗಿದು' ಎಂಬ ಕಳವಳವು ಹರಿಹರನಿಗೂ ಇದೆ. 'ಶಿವನೇ, ಭವನೇ, ಶಂಕರಾ, ಶಶಿಧರಾ ಭವಿಗೊಪ್ಪಿಸಿ ಕೊಟ್ಟೊಡೇನಪ್ಪೆನೆಂತಪ್ಪೆ ನಿನ್ನೆತ್ತ ಸಾರ್ವೆನಾರುಂಟಯ್ಯೋ ಶಿವಧೋ, ಶಿವಧೋ ಎಂದು ಮನದೊಳ್ ಮಹೇಶ್ವರಂಗೆ ಮೊರೆಯಿಟ್ಟು ಭವಿಗಳತ್ತಂ ಸೋರ್ಗೆ ಭಕ್ತರೆನ್ನತ್ತಂ ಸಾರ್ಗೆ ಲಗ್ನಂ ದೂರವಕ್ಕೆ" ಎಂಬುದಾಗಿ ಹರಿಹರನ ಮಹಾದೇವಿಯಕ್ಕನೂ ಕಳವಳಿಸುತ್ತಾಳೆ. ಇದರಿಂದ ಹರಿಹರನು ಅಕ್ಕನಿಗೆ ಅಗೌರವವನ್ನುಂಟುಮಾಡಿದನೆಂದು ಹೇಗೆ ಹೇಳಬೇಕು? ಏನಾಗಿಯಾದೊಡಂ ಶಿವಭಕ್ತರಂ ರಕ್ಷಿಸುವದಕ್ಕಾಗಿ,

ಎನ್ನಿಚ್ಚೆಯೊಳು ಶಿವನ ಪೂಜೆಯೊಳು ನಲಿದಿಪ್ಪೆ
ಎನ್ನಿಚ್ಚೆಯೊಳು ಮಹೇಶ್ವರರ ಗೋಷ್ಠಿಯೊಳಿಪ್ಪೆ
ಎನ್ನಿಚ್ಚೆಯೊಳು ಗುರುವಿನಂಘ್ರಿ ಸೇವೆಯೊಳಿರ್ಪೆ
ಎನ್ನಿಚ್ಚೆಯೊಳು ನಿಮ್ಮ ನೃಪನ ಸಂಗದೊಳಿರ್ಪೆ

ಇಲ್ಲಿ ಮೂರುಂ ತಪ್ಪನೇ ಸೈರಿಸುವೆನರಿದು
ಅಲ್ಲಿಂದ ಬಳಿಕ ಒಲಿದಂತಿಪ್ಪೆ—

ಎಂಬ ನಿಷ್ಠುರ ನಿಯಮಗಳನ್ನು ಒಪ್ಪಿಸಿಕೊಂಡೇ ವಿವಾಹಕ್ಕೆ ಸಮ್ಮತಿಸುತ್ತಾಳೆ. ತನ್ನ ಧ್ಯೇಯ ಸಾಧನಕ್ಕೆ ಅನುಕೂಲವಾಗುವದಕ್ಕೆ ಶಿವಭಕ್ತರಾದ ತಾಯಿತಂದೆಗಳನ್ನು ರಕ್ಷಿಸಲಿಕ್ಕೆ ತನ್ನ ಆತ್ಮದ ಉಜ್ವಲತೆಯನ್ನು ತಾನು ಕಾಯ್ದುಕೊಳ್ಳಬಲ್ಲೆನೆಂಬ ಆತ್ಮವಿಶ್ವಾಸದಿಂದ ಪಾರ್ವತಿಯ ಸಂಕೇತಕ್ಕಾಗಿ ಹರಿಹರನ ಮಹಾದೇವಿಯು ಮದುವೆಯಾದುದು ಅಯೋಗ್ಯವಲ್ಲ. ಹೀಗಿರಲು ಹರಿಹರನ ಹೇಳಿಕೆಯನ್ನೇಕೆ ನಾವು ಅಲ್ಲಗಳೆಯಬೇಕು?

(೩) ಅಕ್ಕನ ಚರಿತ್ರೆಯಲ್ಲಿ ಹರಿಹರನು ಶಿವಾನುಭವ ಮಂಟಪದ ಪ್ರಸ್ತಾಪ ತರದೆ ಇರುವದು ಒಂದು ಕುಂದೆಂದು ಒಪ್ಪಿದರೂ ಅದರಿಂದ ಅಕ್ಕನ ಜೀವನದ ಪರಿಚಯವೇ ಆವನಿಗೆ ಇದ್ದಿಲ್ಲವೆಂದು ಊಹಿಸುವುದು ಮಾತ್ರ ಸರಿಯಲ್ಲ. ಅಕ್ಕನ ಮೂರ್ತಿಸ್ವರೂಪವನ್ನು ಚಿಕ್ಕದೊಂದು ರಗಳೆಯಲ್ಲಿ ಮುಗಿಸಬೇಕಾದುದರಿಂದ ಅಕ್ಕನ ಕಾವ್ಯಮಯ ಜೀವನವನ್ನು ಚಿತ್ರಿಸುವಾಗ ಒಂದು ಅಂಶವನ್ನು ಹರಿಹರನು ಬಿಟ್ಟಿರಲೂ ಬಹುದು. ಬಸವದೇವರಾಜ ರಗಳೆಯಲ್ಲಾದರೂ ಬಸವನ ಜೀವನದ ಎಲ್ಲ ಘಟನೆಗಳ ಪ್ರಸ್ತಾಪವಿಲ್ಲ. ತನ್ನ ಉದ್ದೇಶಕ್ಕೆ ಅವಶ್ಯವೆಂದು ಕಂಡುದುದನ್ನೇ ಹರಿಹರನು ಆರಿಸಿಕೊಂಡಿರಬಹುದು. 'ಭವಿಗೆ ಹೆಂಡತಿಯಾಗಿ ಭಕ್ತಗೆ ಶರಣೆಂದು ಭವವಾರ್ಧಿಯಂ ದಾಂಟಿ ಶ್ರೀಗಿರಿಗೆ ನಡೆತಂದು ಬಳಿಕ ಬಪ್ಪುದು' ಎಂಬ ಚರಿತ್ರಾಂಶವನ್ನು ಮಾತ್ರ ಆತನು ಆರಿಸಿಕೊಂಡಿದ್ದಾನೆ. ಅಕ್ಕನ ಜೀವನ ಗುರಿಯ ಸಾಧನದಲ್ಲಿ ಶಿವಾನುಭವ ಮಂಟಪದ ಸಂದರ್ಶನವೂ ಒಂದು ಮೆಟ್ಟಲು ಮಾತ್ರ. ಅದುವೇ ಅಂತಿಮ ಧ್ಯೇಯವಲ್ಲ. ಅಂತಿಮಧ್ಯೇಯದ ಒಂದು ಸಾಧನವನ್ನು ಆ ತನ್ನ ಕಾವ್ಯದಲ್ಲಿ ಆರಿಸಿಕೊಂಡಿಲ್ಲವೆಂಬ ಕಾರಣದಿಂದ ಹರಿಹರನಿಗೆ ಅಕ್ಕನ ಚರಿತ್ರಾಂಶಗಳೇ ಗೊತ್ತಿಲ್ಲವೆಂದು ಹೇಳಲಾಗದು. ಅಕ್ಕನ ಮೂರ್ತಿ ಸ್ವರೂಪವನ್ನು ಹರಿಹರನು ಅದೆಷ್ಟು ಸುಂದರವಾಗಿ ಚಿತ್ರಿಸಿದ್ದಾನೆ. 'ಭಕ್ತಕುಲ ಚಿಂತಾಮಣಿ, ಶಿವಜ್ಞಾನಸಂಪನ್ನೆ, ವೈರಾಗ್ಯನಿಧಿಯೆನಿಪುಡುತಡಿಯ ಮಹಾದೇವಿ' ಯ ಶಿವಪೂಜಾ ಸಂಭ್ರಮವನ್ನು ಹರಿಹರನು ವರ್ಣಿಸಿದ ರೀತಿಯು ರೋಮಾಂಚಕಾರಿಯಾಗಿದೆ.

ಭಕ್ತಿರಸದ ನಡುವೆ ಗೀತವುಣ್ಮಿಪೊಣ್ಮಿ ಪಾಡಿ
ಭಕ್ತಿಯೊಳು ವಿರಕ್ತಿನೆಲಿಸಿ ಮುಕ್ತಿ ಮುಂದುದೋರೆ ಪಾಡಿ
ಒಲಿದುಪಾಡಿ ಉಲಿದುಪಾಡಿ ಮರೆದುಪಾಡಿ ಬಲಿದುಪಾಡಿ
ಸಲುಗೆಯಿಂದ ಗೆಲಿದುಪಾಡಿ ಪುಳಕವಡರೆ ನೋಡಿ ಪಾಡಿ
ದೇವ ಎನಗೆ ಭವಿಯ ಸಂಗವೆಂದು ಮಾಣ್ಬುದೆನ್ನ ತಂದೆ

... ... ... ... ... ... ... ... ... ...

... ... ... ... ... ... ... ... ...

ಎನುತಲರ್ಚಿಸುತ್ತಲಲ್ಲಿ ... ... ... ... ... ...

... ... ... ... ... ... ... ... ... ...

ಒಪ್ಪುತಿರ್ದಳಮಮ ಹರನ ಪೂಜೆಯೊಳಗೆ ಮಹಾದೇವಿ
ಸರ್ಪಭೂಷನಾಸೆಗೆಯ್ವ ಪರಮ ಭಕ್ತಿಯೋಗತೀವಿ

ಎಂಬುದಾಗಿ ಹರಿಹರನು ಅಕ್ಕನನ್ನು ಬಣ್ಣಿಸಿದ್ದಾನೆ. ತಕ್ಕ ಕಾವ್ಯೋದ್ದೇಶಕ್ಕೆ ಅನುಭವ ಮಂಟಪದ ಪ್ರಸ್ತಾಪವು ಆತನಿಗೆ ಅವಶ್ಯ ವೆನಿಸಿರಲಿಕ್ಕಿಲ್ಲ. ಇದರಿಂದ ಆ ಅಕ್ಕನ ಬಗೆಗೆ ಹರಿಹರನ ಅಜ್ಞಾನವು ಸೂಚಿತವಾಗುವದಿಲ್ಲ. ಆದರೂ ಅನುಭವ ಮಂಟಪದ ಸಂದರ್ಭವು ಅಕ್ಕನ ಜೀವನದಲ್ಲಿ ಉಜ್ವಲವಾದುದು ಎಂಬ ಅಭಿಪ್ರಾಯಕ್ಕೆ ಮಾತ್ರ ಭಿನ್ನಾಭಿಪ್ರಾಯವಿರಲಾರದು.

(೪) ಅಕ್ಕನು ಅರಣ್ಯಕ್ಕೆ ಬಂದ ನಂತರ ಕೌಶಿಕನು ಆಕೆಯನ್ನು ಪಡೆಯಲು ಹವಣಿಸುವ ಪ್ರಯತ್ನ ಇತ್ಯಾದಿ ಸಂಗತಿಗಳನ್ನು ಹೇಳು ವಲ್ಲಿ ಹರಿಹರನು ಅಕ್ಕನ ಗೌರವಕ್ಕೆ ಕುಂದು ತಂದಿರುವನೆಂಬ ವಾದ ಕ್ಕಾದರೂ ಆಸ್ಪದವಿಲ್ಲ. ಕೌಶಿಕನ ಪ್ರಯತ್ನಗಳಿಗೆ, ಮಠದ ಗುರುಗಳ ಮೋಹಕ್ಕೆ ಅಕ್ಕನು ಪಕ್ಕಾಗಲಿಲ್ಲವೆಂಬುದು ಅಕ್ಕನ ಘನತೆಯನ್ನೇ ಸೂಚಿಸುತ್ತದೆ. ಅಕ್ಕನ ತ್ಯಾಗವನ್ನು, ಧೈರ್ಯವನ್ನು, ನಿಷ್ಠೆಯನ್ನು ಸೂಚಿಸುವ ಉದ್ದೇಶವು ಹರಿಹರಿನ ಕಾವ್ಯದಲ್ಲೆಲ್ಲ ಸ್ಫುಟವಾಗಿ ಕಂಡು ಬರುತ್ತದೆ. ಕಲುಮಠದ ಹುಲುಮಠದ ಗುರುಗಳ ಪ್ರಸ್ತಾಪವು ಆಗಿನ ಸಾಮಾಜಿಕ ಜೀವನದ ಪ್ರತಿಬಿಂಬವಾಗಿರಬೇಕು. ಅಕ್ಕನು ಲಂಚಗು ಳಿಗಳಾದ ಗುರುಗಳನ್ನೂ ಬೆಕ್ಕಸ ಬೆರಗುಗೊಳಿಸಿದಳು, ತನ್ನ ಶಿವ ಪೂಜಾ ಸಂಭ್ರಮದಿಂದ. ಆಗ ಶರಣರೆಲ್ಲರೂ

ನಿನ್ನಂತೆ ಗುರುಕರುಣವಾರ್ಗುಂಟು ಮಹಾದೇವಿ
ನಿನ್ನಂತೆ ಭಯಭಕ್ತಿ ಇನ್ನುಂಟೆ ಮಹಾದೇವಿ
ಮಲ್ಲಿನಾಥನ ಪರಮಕೀರ್ತಿಲತೆ ನೀನವ್ವ
ಮಲ್ಲಿನಾಥನ ಸರಳ ಸುಖಮೂರ್ತಿ ನೀನವ್ವ
ಎಲೆ ನಿತ್ಯ ಮುಕುತೆ ನಿತ್ಯ ಪ್ರಕಾಶಿತೆ ನೀನೆ
ಎಲೆಸಂದ ನಿರುಪಮ ಜ್ಞಾನಸಂಪದೆ ನೀನೆ

ಎಂಬುದಾಗಿ ಅಕ್ಕನನ್ನು ಬಣ್ಣಿಸಲು ಹರಿಹರನು ಅವಕಾಶ ಕಲ್ಪಿಸಿದ್ದಾನೆ.

(ಆ) ಹರಿಹರನು ಮೊದಲಿನ ಕವಿಯಾದರೂ ಆತನಿಗಿಂತ ಚಾಮರಸನ ವೃತ್ತಾಂತವೇ ನಂಬಲರ್ಹವೆಂದು ತಿಳಿಯಲಿಕ್ಕೆ ಕಾರಣಗಳು ಎರಡು ಇವೆ.

[೧] ಚಾಮರಸನ ಕಾವ್ಯವೇ ಬಹು ಜನರಿಗೆ ಓದಲು ಮೊದಲು ದೊರೆತಿದೆ. ಹರಿಹರನ ರಗಳೆಯು ನಂತರ ಉಪಲಬ್ಧವಾಗಿದೆ.

[೨] ಚಾಮರಸನ ಚರಿತ್ರೆಯು ಭಾವನಾವಶ ಭಕ್ತರಿಗೆ ಒಗ್ಗುವ ರೀತಿಯಲ್ಲಿದ್ದು ಅದುವೇ ನಿಜವಾಗಿರಬೇಕೆಂಬ ಕಲ್ಪನೆ ನಮ್ಮಲ್ಲಿ ಬಹು ದಿವಸದಿಂದ ಬೆಳೆದು ಬಂದಿದೆ. ಆಕಸ್ಮಿಕ ಕಾರಣಗಳಿಂದ ಬೆಳೆದು ಬಂದ ನಂಬಿಗೆಗೇ ವಿಶೇಷ ಮಹತ್ವ ಕೊಡುವ ಅವಶ್ಯಕತೆಯೇನೂ ಇಲ್ಲ.

ಅಂತು ಹರಿಹರನ ಅಭಿಪ್ರಾಯವನ್ನು ಅಲ್ಲಗಳೆಯಲಿಕ್ಕೆ ಕಾರಣವಿಲ್ಲದುದರಿಂದ ಆತನ ಹೇಳಿಕೆಯಲ್ಲಿ ಅಸಮಂಜಸವಾದ ಅಥವಾ ಅಕ್ಕನ ಮೂರ್ತಿ ಸ್ವರೂಪಕ್ಕೆ ಗೌರವವನ್ನು ತರುವಂತಹ ಸಂಗತಿಯು ಇಲ್ಲದುದರಿಂದ, ಆತನೇ ಮೊದಲಿಗನಾದುದರಿಂದ ಅಕ್ಕನ ವಿವಾಹವಾಗಿತ್ತೆಂದು ನಾನು ಅಭಿಪ್ರಾಯ ಪಡುತ್ತೇನೆ.

ಆದರೆ ಅಕ್ಕನ ವಿವಾಹವಾಗಿರಲಿ, ಆಗದೆ ಇರಲಿ, ನಾನು ಚಿತ್ರಿಸಬೇಕೆಂದಿರುವ ಅಕ್ಕನ ಮೂರ್ತಿಸ್ವರೂಪಕ್ಕೆ ಅದರಿಂದ ಯಾವ ಬಾಧೆಯೂ ಇಲ್ಲ. ಅಕ್ಕನ ಜೀವನವೆಂದರೆ ಧ್ಯೇಯಕ್ಕಾಗಿ ಆತ್ಮಾರ್ಪಣವೆಂಬ ತತ್ವದ ಉದಾಹರಣೆಯೇ ಸರಿ. ಬಾಲ್ಯದ ಆಟ-ಪಾಟಗಳಲ್ಲಿ ಯೌವನದ ಶೃಂಗಾರದಲ್ಲಿ ಸಾಧಕತೆ ಪ್ರೌಢಾವಸ್ಥೆಯಲ್ಲಿ ಅಕ್ಕನು ಚನ್ನಮಲ್ಲಿಕಾರ್ಜುನನನು ಹೊಂದಬೇಕೆಂದೇ ಹಂಬಲಿಸುತ್ತಾಳೆ. ಆ ಧ್ಯೇಯ ಸಾಧ

ನೆಯ ಉದ್ದೇಶದಿಂದ ರಾಜನ ಮೋಹದ ಮಡದಿಯಾಗಿ ರಾಜ್ಯ ಸುಖ ವನ್ನು ಅನುಭವಿಸುವ ಅವಕಾಶವನ್ನು ಅಲ್ಲಗಳೆಯುತ್ತಾಳೆ. ಅನುಪಮ ವಾದ ಸಾಹಸವನ್ನು, ವಿರಕ್ತಿಯನ್ನು, ನಿಷ್ಠೆಯನ್ನು, ಜ್ಞಾನವನ್ನು ಮರೆದು ಮಹಿಳಾ ಪ್ರಪಂಚಕ್ಕೊಂದು ಸ್ಮರಣೀಯ ಆದರ್ಶವಾಗಿ ಉಳಿ ದಿದ್ದಾಳೆ. ಅವಳು ಕಿರಿಯಳಾಗಿದ್ದು ಹಿರಿಯ ಸ್ಥಾನವನ್ನು ಪಡೆದುದ ರಿಂದ ಕಿರಿಯರಿಗೂ ಹಿರಿಯರಿಗೂ ಆದರ್ಶಳಾಗಿದ್ದಾಳೆ. ಅಂತೆಯೇ ಚಿಕ್ಕದಣ್ಣಾಯಕರು

'ಅಜಕೋಟಿ ವರುಷದವರೆಲ್ಲರು ಹಿರಿಯರೇ? ಹುತ್ತೇರಿ ಬೆತ್ತ ಬೆಳೆದ ತಪಸ್ವಿಗಳೆಲ್ಲರೂ ಹಿರಿಯರೇ? ನಡುಮುರಿದು ಗುಡಗೂರಿ, ತಲೆ ನಡುಗಿ ನರೆತೆರೆ ಹೆಚ್ಚಿ, ಮತಿಗೆಟ್ಟು ಒಂದನಾಡ ಹೋಗಿ ಒಂಬತ್ತ ನಾಡುವ ಅಜ್ಞಾನಿಗಳೆಲ್ಲರೂ ಹಿರಿಯರೇ? ಅನುವರಿದು, ಘನವ ಬೆರಸಿ ಹಿರಿದು ಕಿರಿದೆಂಬ ಭೇದವ ಮರೆದು ಕೂಡಲಚನ್ನಸಂಗಯ್ಯನಲ್ಲಿ ಬೆರಸಿ ಬೇರಿಲ್ಲದಿಪ್ಪ ಹಿರಿಯತನ ನಮ್ಮ ಮಹಾದೇವಿಯಕ್ಕಂಗಾಯಿತ್ತು.'

ಎಂದು ಹರುಷದಿಂದ ಹಾಡಿದ್ದಾರೆ. ಅಕ್ಕನ ಜೀವನದಲ್ಲಿ ಸನ್ಯಾಸ ಹಾಗೂ ಸಂಸಾರಗಳ ಸುಂದರ ಸಮನ್ವಯವಿದೆ. ಸಂಸಾರಿಯಾಗಿದ್ದ ಳೆಂದು ಊಹಿಸಿದರೂ ಅವಳು ನಿರ್ಲಿಪ್ತಳಾಗಿದ್ದಳು. ಅವಳು ಕೇವಲ ಸನ್ಯಾಸಿಯೆಂದರೂ ಉಚ್ಚ ಧ್ಯೇಯಸಾಧನೆಗಾಗಿ ಸನ್ಯಾಸವನ್ನು ಸ್ವೀಕ ರಿಸಿ ಆ ಧ್ಯೇಯವನ್ನು ಕೊನೆಗಾಣಿಸಿ ಕೃತಕೃತ್ಯಳಾಗಿದ್ದಾಳೆ. ಅಂತೆಯೇ ಆಕೆಯು ಸಂಸಾರಿಗಳಿಗೂ ಸನ್ಯಾಸಿಗಳಿಗೂ ಆದರ್ಶಳಾಗಿದ್ದಾಳೆ.

"ನಾಮದಲ್ಲಿ ಹೆಣ್ಣು ರೂಪಲ್ಲದೆ ಭಾವಿಸಲು ಗಂಡುರೂಪು ನೋಡಾ ಬಸವಣ್ಣ":— ಎಂದು ಆಕೆ ಹೇಳಿರುವದರಿಂದ ಆಕೆ ಸ್ತ್ರೀ ಪುರುಷ ರಿಗೂ ಆದರ್ಶಳಾಗಿದ್ದಾಳೆ. ಅಕ್ಕನಲ್ಲಿ ಗಂಡಸಿನ ಕೆಚ್ಚೆದೆಯು ಇದ್ದರೂ ಹೆಂಗಸಿನ ಹೃದಯವೂ ಇದೆ.

ಅಳಿಸಂಕುಳವೇ, ಮಾಮರನೇ, ಬೆಳುದಿಂಗಳೇ, ಕೋಗಿಲೆಯೇ, ನಿಮ್ಮನೆಲ್ಲರನು ಒಂದು ಬೇಡುವೆನು. ಎನ್ನೊಡೆಯ ಚನ್ನಮಲ್ಲಿಕಾ ರ್ಜುನ ದೇವರ ಕಂಡರೆ ಕರೆದು ತೋರಿರೆ — ಎಂಬ ನುಡಿಯಲ್ಲಿಯ ಕಳವಳವನ್ನು ಪರಿಕಿಸಬೇಕು.

'ಬಸವಣ್ಣ ಮೆಚ್ಚಲೊಗೆತನವ ಮಾಡುವೆ. ಚನ್ನಮಲ್ಲಿಕಾರ್ಜುನನ ಕೈವಿಡಿದು ನಿಮ್ಮ ತಲೆಗೆ ಹುವ್ವ ತಾಹೆನಲ್ಲದೆ ಹುಲ್ಲ ತಾರೆನು.' ಎಂಬ ಮಾತಿನಲ್ಲಿಯು ಸ್ತ್ರೀ ಸಹಜವಾದ ಶಾಲೀನತೆಯುನ್ನು ಗಮನಿಸಬೇಕು. ಅದರಲ್ಲಿ ಸ್ತ್ರೀಯರಿಗೆ ಅವಶ್ಯವಾದ ವ್ಯವಹಾರ ಜ್ಞಾನವಿದೆ. ಒಗೆತನವ ಮಾಡಿ ತವರು ಮನೆಯುವರ ತಲೆಗೆ ಹೂವ ತರುವಂತೆ ವರ್ತಿಸುವುದು ಸ್ತ್ರೀಯರ ಕರ್ತವ್ಯವಾಗಿದೆ. ಅಂತಹ ಕರ್ತವ್ಯದ ಅರಿವು ಅಕ್ಕನಿಗಿದೆ. ವಿರಕ್ತಿ, ಸಾಹಸ, ನಿಷ್ಠೆ ಇವುಗಳ ಜೊತೆಗೆ ಅಕ್ಕನಲ್ಲಿ ಹೆಣ್ತನವೂ ಇದೆ.

ಅಕ್ಕನ ಜೀವನವನ್ನು ನಾಲ್ಕು ಭಾಗವಾಗಿ ವಿಭಾಗಿಸಬಹುದು.

[೧] ಬಾಲ್ಯ - ಕೌಶಿಕನಿಂದ ನೋಡಲ್ಪಡುವ ವರೆಗೆ

[೨] ಕೌಶಿಕನನ್ನು ತೊರೆದು ಹೋಗುವ ವರೆಗೆ

[೩] ಕಲ್ಯಾಣದ ಅನುಭವ ಮಂಟಪದಲ್ಲಿ

[೪] ಕೊನೆಗೆ ಶ್ರೀಶೈಲದಲ್ಲಿ

ಈ ನಾಲ್ಕೂ ವಿಭಾಗಗಳು ರಮ್ಯವಾಗಿವೆ; ಘನವಾಗಿವೆ. ಇಡೀ ಅಕ್ಕನ ಜೀವನವೇ ಕಾವ್ಯಮಯವಾಗಿದೆ.

(೧) ಅದರಂತೆ ಈ ಮೊದಲನೆಯ ಭಾಗವೂ ಕೂಡ ಇದೆ. ಪಾರ್ವತಿಯ ಸಾತ್ವಿಕ ಕಳೆಯೇ ರೂಪುವೆತ್ತದ್ದರಿಂದ ಈಕೆಯು 'ತನುವಿನಲತಿ ಮಹತ್ತರ ದೇವತಾ ಕಳೆಯಿರಲು ಮಹದೇವಿಯೆಂದೀ ಹೆಸರನಿಟ್ಟುದು' ಆಕೆಗೆ ಎಂದು ಚಾಮರಸನು ಬಣ್ಣಿಸಿದ್ದಾನೆ. ಹಾಗೂ 'ಈಕೆ ಭಕ್ತಿಯ ಬಳ್ಳಿಯಂತೆಯನೇಕ ಪರಿಯಲಿ ಬಳೆವುತಿರ್ದಳು' ಎಂದು ಹೇಳಿದ್ದಾನೆ. ಹರಿಹರನು ಅಕ್ಕನ ಜನನವನ್ನು ಹೀಗೆ ಬಣ್ಣಿಸುತ್ತಾನೆಃ—

"ಚಂದ್ರನಿಂ ಬೆಳುದಿಂಗಳು, ಪರುಷದಿಂ ಬಣ್ಣ, ಚಿಂತಾಮಣಿಯಿಂ ಕಾಂತಿ, ಸುರಭಿಯಿಂ ಸುಧಾರಸಂ ಕಲ್ಪತರುವಿಂ ಸಣ್ಣ ನನೆ ಪುಟ್ಟುವಂತೆ ಪುಣ್ಯೋದರದಿಂ ಘಳಿಲನುದಯವಾಗೆ, ಕಂಡು ಕಂಡು, ಕೊಂಡುಕೊನೆದು ಸಿಂಗರದ ಶಿಸುವಿಂಗೆ ಭಕ್ತಿಯ ಭಾವಕ್ಕೆ, ಅರಿವಿನವಯವಕ್ಕೆ, ಮುಕ್ತಿಯ ಮರೆಗೆ ತಾತಂ......... ಮಹಾದೇವಿಗೆ ಶಿವಲಿಂಗ ಪ್ರಸಾದಮಂ ಭಕ್ತಿವೆರಸಿ ಬಾಯ್ವಿಣ್ಣೆಯನಿಕ್ಕಿ ನಲಿನಲಿದು ಸಲಹುತಿರೆ......"

ಅಕ್ಕನು ತನ್ನ ವಚನಗಳಲ್ಲಿ 'ಹರನೆ ನೀನೆನಗೆ ಗಂಡನಾಗಬೇಕೆಂದು ಅನಂತಕಾಲ ತಪಸಿದ್ದೆ ನೋಡಾ!'—ಎಂದು ಹೇಳುತ್ತಾಳೆ. ಬಾಲಕರು ಗಂಡ ಹೆಂಡಿರ ಆಟವನ್ನು ಆಡುತ್ತಿರುವಂತೆ ಅಕ್ಕನು ತನಗೆ ಚನ್ನಮಲ್ಲಿಕಾರ್ಜುನನೇ ಗಂಡನಾಗಿರಬೇಕೆಂದು ಆಡಿರಬೇಕು.

(೨) ಎರಡನೆಯ ಭಾಗವು ಅಕ್ಕನ ಸಮಯೋಚಿತ ಜ್ಞಾನ, ಸಾಹಸ ಇವುಗಳಿಗೆ ನಿದರ್ಶನವಾಗಿದೆ. ಅರಸನಿಂದ ತಂದೆ ತಾಯಿಗಳಿಗೆ ತೊಂದರೆಯಾಗುವದೆಂದು ತಿಳಿದಾಗ ತಾನೇ ಮುಂದೆಬಂದು ಅರಸನನ್ನು ಸಂದರ್ಶಿಸಿ ತನಗೆ ಅನುಕೂಲವಾಗುವ ರೀತಿಯಲ್ಲಿ ಅರಸನ ಭಾಷೆ ಪಡೆಯುವುದು, ಕೇವಲ ರಾಣಿವಾಸದ ಸುಖಕ್ಕೆ ಮೆಚ್ಚದೆ ಇರುವುದು ಅವಳ ಸ್ತ್ರೀತ್ವಕ್ಕೆ ಅಲಂಕಾರವಾಗಿವೆ. ಭಾರತದ ಮಹಿಳೆಯರು ಎಂದಿಗೂ ಮುಖ ಹೀನರೆಂಬ ಅಪವಾದವನ್ನು ಅಕ್ಕನು ಅಲ್ಲಗಳೆದಿದ್ದಾಳೆ. ಅಕ್ಕನ ಬುದ್ಧಿಮತ್ತೆ, ಆಕೆ ತನಗಾಗಿ ಸಮಾಜದಲ್ಲಿ ಕಲ್ಪಿಸಿಕೊಂಡಿದ್ದ ಶ್ರೇಷ್ಠ ಸ್ಥಾನ, ಇವು ಎಂದಿಗೂ ಸ್ತ್ರೀಯರ ಆದರ್ಶನಗಳಾಗಬಲ್ಲವು. 'ಪುಟವ ನಿಕ್ಕಿದ ಮಿಸುನಿಯಂದದಲಿ ಜವ್ವನದ ಕಳೆವೆತ್ತು' ಆಕೆ ಬೆಳೆಯುತ್ತಿದ್ದಾಗ ಅರಸನೂ ಕೂಡ ಆಕೆಯನ್ನ ಮೋಹಿಸಿದನು. ಆದರೆ ಅರಸನ ರಾಣಿಯಾಗಬೇಕೆಂಬ ಅಲ್ಪಾಶೆ ಅಕ್ಕನಲ್ಲಿ ಬರಲಿಲ್ಲ. ಆದರೂ 'ಜನಪನಿಳುಪಿಗೆ ಹರಿವ ಮಾಡುವೆನೆನುತಲಾ ಮಹದೇವಿ ಜಾಣನ ವಿನಯದಲಿ' ಅರಸನನ್ನು ತನ್ನಿಚ್ಛೆಯಂತೆ ವರ್ತಿಸಲು ಒಪ್ಪಿಸಿದಳು. ಮದುವೆಯಾಗಲಿ, ಆಗದಿರಲಿ, ಎಂತಹ ವಿಷಮಸ್ಥಿತಿಯಲ್ಲಿಯೂ ಕೂಡ ಅಕ್ಕನು ತನ್ನ ಧ್ಯೇಯಕ್ಕಾಗಿ ಹೆಣಗಿದಳು ಅರಸನ ಸಂದರ್ಶನವನ್ನು ತನ್ನ ಆತ್ಮೋನ್ನತಿಯ ಒಂದು ಸಾಧನವನ್ನಾಗಿ ಮಾರ್ಪಡಿಸಿಕೊಂಡಳು ಎಂಬುದು ಮಹತ್ವದ ಮಾತಾಗಿದೆ. ಅಕ್ಕನ ಮದುವೆಗಿಂತ, ಮದುವೆಯ ಘಟನೆಯ ಹಿಂದೆ ಅಡಗಿರುವ ಅಕ್ಕನ ಜೀವನದ ರಹಸ್ಯವನ್ನೇ ನಾವೀಗ ಗಮನಿಸಬೇಕಾಗಿದೆ. "ಕಾಮಿಯಾಗಿ ನಿಃಕಾಮಿಯಾದಳು. ಸೀಮೆಯಲ್ಲಿರ್ದು ನಿಸ್ಸೀಮೆಯಾದಳು. ಭವಿಯ ಸಂಗವ ತೊರೆದು ಭವ ಬಾಧೆಯ ಹರಿದಳು." ಎಂಬ ಮಡಿವಾಳ ತಂದೆಯ ವಚನವನ್ನು ಇಲ್ಲಿ ನಾವು ಲಕ್ಷ್ಯಕ್ಕೆ ತಂದುಕೊಳ್ಳಬೇಕು. ಮಹಾತ್ಮನಾದ ಬಸವಣ್ಣನೂ ಕೂಡ ಅಕ್ಕನನ್ನು ಹೀಗೆ ಹೊಗಳುತ್ತಾನೆ. "ಹೆಂಗುಸಿನಂಗವ ನೋಡಿದರೆ ಪುರಾತನರು. ಬಾಲತನದಂಗವ ನೋಡಿದರೆ ಪುರಾತನರು. ಬ್ರಹ್ಮ

ವನಾಚರಿಸಿ ತನ್ನ ಮರೆದಿಪ್ಪುದ ನೋಡಿದರೆ ಲಿಂಗವಂತರು. ತನ್ನಲ್ಲಿ ತಾನು ನಿಶ್ಚಯವಾಗಿ ಭಾಷೆ ಬೀಸರುವೋಗದೆ ಇಪ್ಪ ಇರವು ಕೂಡಲ ಸಂಗಮದೇವರಲ್ಲಿ ನಮ್ಮ ಮಹಾದೇವಿಯಕ್ಕಂಗಾಯಿತ್ತು. ”

ಯೌವನದಲ್ಲಿ ತಾನಾಗಿಯೇ ಅರಸನನ್ನು ಸಂದರ್ಶಿಸಿ, ಅರಮನೆಯನ್ನು ಸೇರುವದು, ನಂತರ ಅರಸನನ್ನು ತೊರೆಯುವುದು, ಮನೆಮಾರುಗಳನ್ನು ತೊರೆಯುವುದು, ಸ್ತ್ರೀಗೆ ಎಂತಹ ಸಾಹಸದ ಮಾತೆಂಬದನ್ನು ಯೋಚಿಸಬೇಕು. ಧ್ಯೇಯಸಾಧನೆಗೆ ಹೆಣಗುವಾಗ ಅಕ್ಕನು ಅರ್ಥವಿಲ್ಲದ ಜನರ ನಿಂದಾ-ಸ್ತುತಿಗೆ ಬೆದರಲಿಲ್ಲ, ಬಾಗಲಿಲ್ಲ. ಆಗ ಹೇಳಿದ ಅಕ್ಕನ ವಚನವು ಮನನೀಯವಾಗಿದೆ. ‘ಬೆಟ್ಟದ ಮೇಲೆ ಮನೆಯ ಮಾಡಿದ ಮೇಲೆ ಮೃಗಂಗಳಿಗಂಜಿದೊಡೆಂತವ್ವ - - - - ಲೋಕದೊಳಗೆ ಹುಟ್ಟಿದ ಬಳಿಕ ಸ್ತುತಿನಿಂದೆಗಳು ಬಂದರೆ ಕೋಪವ ತಾಳದೆ ಸಮಾಧಾನಿಯಾಗಿರಬೇಕು.’ ಅಕ್ಕನ ಈ ಧೈರ್ಯವನ್ನು ಅದೆಷ್ಟು ಜನ ಪುರುಷರು ತೋರಿಸಿದ್ದಾರೆ. ಸಿದ್ಧಾರ್ಥನ ಗೃಹತ್ಯಾಗದೊಡನೆ ಅಕ್ಕನದನ್ನು ಹೋಲಿಸಿ ನೋಡಬಹುದು. ಬುದ್ಧನಾದರೋ ಗಂಡಸು, ಪ್ರಬುದ್ಧನು, ಸಂಸಾರದ ಸುಖವನ್ನು ಸವಿದು ನೋಡಿದವನು. ಅಕ್ಕನ ತ್ಯಾಗವು ಬುದ್ಧನ ತ್ಯಾಗವನ್ನು ಮೀರಿಸಿದೆಯೆಂದು ಹೇಳಬಹುದೋ? ಹೀಗಿದ್ದರೂ ಅಕ್ಕನ ಚರಿತ್ರೆಯ ಪರಿಚಯವು ಕನ್ನಡಿಗರಲ್ಲದವರಿಗೆ ಅದೆಷ್ಟು ಜನರಿಗೆ ಪರಿಚಿತವಿದೆ!

(೩) ಅಕ್ಕನು ಸಂಸಾರದ ಯಾವ ಪ್ರಯೋಜನಕ್ಕೂ ಪಕ್ಕಾಗದೆ ಗೃಹತ್ಯಾಗ ಮಾಡಿ ತನ್ನ ಧ್ಯೇಯ ಸಾಧನೆಯಲ್ಲಿ ಇನ್ನೊಂದು ಅಡಿ ಮುಂದಿಟ್ಟಳು. ಶಿವಶರಣರ, ತತ್ವಜ್ಞಾನಿಗಳ ಆಗರವಾದ ಕಲ್ಯಾಣ ಕ್ಷೇತ್ರಕ್ಕೆ ನಡೆತಂದಳು. ಈ ಭಾಗವನ್ನು ಹರಿಹರನು ಚಿತ್ರಿಸಿಲ್ಲವಾದರೂ ಶೂನ್ಯಸಂಪಾದನೆ ಮುಂತಾದ ಗ್ರಂಥಗಳಲ್ಲಿ ಈ ಉಜ್ವಲ ಜೀವನದ ಸುಂದರ ಚಿತ್ರವಿದೆ. ತನ್ನ ತ್ಯಾಗದಿಂದ, ವೀರ ವಿರಕ್ತಿಯಿಂದ, ಜನತೆಯನ್ನು ಬೆರಗುಗೊಳಿಸಿದ ಅಕ್ಕನು ಇದೀಗ ತನ್ನ ಅನುಪಮ ಬುದ್ಧಿಮತ್ತೆಯಿಂದ ಆ ಕಾಲದ ಶ್ರೇಷ್ಠ ಜ್ಞಾನಿಗಳನ್ನು ಮೆಚ್ಚಿಸಿದಳು. ಬಸವಣ್ಣನಿಗೂ ಕೂಡ ಬುದ್ಧಿ ಹೇಳುತ್ತಿದ್ದ ಜ್ಞಾನಜ್ಯೋತಿ ಅಲ್ಲಮನಿಂದಲೂ ಅಕ್ಕನು ಹೊಗಳಲ್ಪಟ್ಟಿದ್ದಾಳೆ.

'ಮುಡಿಗೆಡೆಗುಡದ ಘನವ ಹಿಡಿದ ಪಡಬಂದಿರ್ದಾದಳು. ಎಡೆಯಿಲ್ಲದ ಪರಿಪೂರ್ಣದೊಳಗೆ ಮುಡಿಗೆಟ್ಟಳು. ತನ್ನ ನಿಲುಕಡೆಯ ನಿಜವ ತಾನರಿಯದಂತೆ ತನ್ನಿಂದ ಕೇಳಿ ಸ್ವಯವಾದಳು. ಗುಹೇಶ್ವರ ಸಾಕ್ಷಿಯಾಗಿ ಮಹದೇವಿಯಕ್ಕನ ನಿಲವ ಕೊಂಡಾಡುವದಕ್ಕೆ ತೆರಹಿಲ್ಲ ಕಾಣಾ ಮಡಿವಾಳಯ್ಯ.'

ಪ್ರಭುವಿನಿಂದಲೂ ಕೂಡ 'ಮಹದೇವಿಯಕ್ಕನ ನಿಲವ ಕೊಂಡಾಡುವದಕ್ಕೆ ತೆರಹಿಲ್ಲ ಕಾಣಾ' ಎಂದು ಹೊಗಳಿಕೊಂಡ ಅಕ್ಕನು ಧನ್ಯಳೇ ಸರಿ. ಇಂತಹ ಮಹಿಳಾರತ್ನವನ್ನು ಪಡೆದ ವೀರಶೈವ ಸಮಾಜವೂ ಕನ್ನಡ ನಾಡೂ ಇನ್ನಿಷ್ಟು ಧನ್ಯವೆಂದು ಹೇಳಬೇಕು.

ಅಕ್ಕನು ಕಲ್ಯಾಣ ಪ್ರವೇಶ ಮಾಡಿದುದು ಸಮಯೋಚಿತವಾಗಿದೆ. ಏಕೆಂದರೆ ಅವಳೇ ಹೀಗೆ ಹೇಳುತ್ತಾಳೆ.

"ಎಲೆ ದೇವ ಸಕಲಗಣಂಗಳ ಉಪಟಳಕ್ಕಂಜಿ ನಿಮ್ಮ ಶರಣರ ಮರೆಹೊಕ್ಕೆ. ಅವರ ಕಾರುಣ್ಯವಂ ಪಡೆದು ಬಂದು ನಿಮ್ಮ ಶ್ರೀಮೂರ್ತಿಯಂ ಕಂಡೆ." ಇದರಿಂದ ಅಕ್ಕನ ಧ್ಯೇಯಸಾಧನೆಗೆ ಕಲ್ಯಾಣ ಪ್ರವೇಶವು ಒಂದು ಉತ್ತಮ ಸಾಧನವಾಗಿ ಪರಿಣಮಿಸಿತೆಂದು ಹೇಳಬಹುದು. ಅಕ್ಕನೇ ಹೀಗೆ ಹೇಳಿದ್ದಾಳೆ.

"ನಿನ್ನ ಅಂಗದ ಆಚಾರವ ಕಂಡು, ಎನಗೆ ಲಿಂಗಸಂಗವಾಯಿತ್ತು. ಅಯ್ಯ ಬಸವಣ್ಣ ನಿಮ್ಮ ಮನದ ಸುಜ್ಞಾನವ ಕಂಡು ಎನಗೆ ಜಂಗಮ ಸಂಬಂಧವಾಯಿತ್ತಯ್ಯ ಬಸವಣ್ಣಾ. ನಿನ್ನ ಸದ್ಭಕ್ತಿಯ ತಿಳಿದು ಎನ್ನ ನಿಜ ಸಾಧ್ಯವಾಯಿತ್ತಯ್ಯ ಬಸವಣ್ಣ" ಇದರಿಂದ ಅಕ್ಕನ ಜೀವನದಲ್ಲಿ ಬಸವಣ್ಣನ ಪ್ರಭಾವವು ವ್ಯಕ್ತವಾಗುತ್ತದೆ. ಅಕ್ಕನು 'ಕಾಮನ ಗೆಲಿದೆನಯ್ಯ ಬಸವಣ್ಣ ನಿಮ್ಮ ದಯದಿಂದ' ಎಂದೇ ಒಪ್ಪಿದ್ದಾಳೆ. ಅಲ್ಲದೆ ಕಲ್ಯಾಣ ಪ್ರವೇಶಕ್ಕೆ ಮೊದಲು ಅದಕ್ಕೆ ಬೇಕಾದ ಅರ್ಹತೆಯನ್ನೂ ಆಕೆ ಪಡೆದಿದ್ದಳು. ಎಲ್ಲರಿಗೂ ಕಲ್ಯಾಣವನ್ನು ಪ್ರವೇಶಿಸುವುದು ಸಾಧ್ಯವಿಲ್ಲ. ಅಕ್ಕನು-

'ಕಲ್ಯಾಣವೆಂಬುದಿನ್ನಾರಿಗು ಹೊಗಬಾರದು. ಅಸಾಧ್ಯವಯ್ಯ. ಆಸೆ ಆಮಿಷವಳಿದವಂಗಲ್ಲದೆ ಕಲ್ಯಾಣದತ್ತಲಡಿ ಇಡಬಾರದು. ಒಳಹೊರಗೆ ಶುದ್ಧವಾದವರಿಗಲ್ಲದೆ ಕಲ್ಯಾಣವ ಹೊಗಬಾರದು. ನಾನೆಂಬುದ ಹರಿದವಂಗಲ್ಲದೆ ಕಲ್ಯಾಣವ ಹೊಗಬಾರದು. ಒಳಗೆ ತಿಳಿದು ಚನ್ನಮಲ್ಲಿಕಾರ್ಜುನಂಗೊಲಿದು ಉಭಯ ಲಜ್ಜೆಯನಳಿದೆನಾಗಿ ಕಲ್ಯಾಣವ

ಕಂಡು ನಮೋ ನಮೋ ಎನುತಿರ್ದೆನು'– ಎಂದು ಹೇಳಿದ್ದಾರೆ. ಇದರಿಂದ ಅಕ್ಕನ ಅಂತರಂಗವು ಈ ಮೊದಲೇ ಶುದ್ಧವಾಗಿ ಶಿವಶರಣರ ತತ್ವಜ್ಞಾನವನ್ನು ಗ್ರಹಿಸುವದಕ್ಕೆ ತಕ್ಕ ಭೂಮಿ ಈ ಮೊದಲೇ ಸಿದ್ಧವಾಗಿತ್ತೆಂದು ತಿಳಿದುಬರುತ್ತದೆ.

ಅನುಭವ ಮಂಟಪವನ್ನು ಅಕ್ಕನು ಪ್ರವೇಶಿಸುತ್ತಿರುವಾಗ ಪ್ರಭುದೇವನು ಆಕೆಯನ್ನು ಪರೀಕ್ಷಿಸಲೆಂದು ಬಹು ವಿಧದ ಪ್ರಶ್ನೆಗಳಿಂದ ಅಕ್ಕನನ್ನು ಸುಮ್ಮನಾಗಿಸಬೇಕೆಂಬ ಪ್ರಯತ್ನವು ಫಲಕಾರಿಯಾಗಿರಲಿಲ್ಲ. ಈ ವಾದದಲ್ಲಿ ಅಕ್ಕನ ಕೊಡುವ ಉತ್ತರಗಳು ಮನನೀಯುವಾಗಿವೆ. ಪ್ರಭುದೇವನನ್ನು ಕೂಡ ವಾದದಲ್ಲಿ ಸೋಲಿಸಬಲ್ಲ ಸಾಹಸ ಬುದ್ಧಿ ಅಕ್ಕನಿಗಿದೆ. ಅಕ್ಕ–ಪ್ರಭುದೇವರ ಸಂಭಾಷಣೆಯು ಶೂನ್ಯಸಂಪಾದನೆಯ ಭಾಗವು ಸುಂದರವಾಗಿದೆ. 'ಉದಮುದದ ಯೌವನವನೊಳಕೊಂಡು ಸತಿ ನೀನು ಇತ್ತಲೇತಕ್ಕೆ ಬಂದೆಯವ್ವ? ಸತಿ ಎಂದರೆ ಮುನಿವರು ಎಮ್ಮ ಶರಣರು' ಎಂದು ಅಕ್ಕನನ್ನು ಬೆದರಿಸಲು ಪ್ರಯತ್ನಿಸಿದ ಪ್ರಭುದೇವನೇ ಕೊನೆಗೆ ಅಕ್ಕನ ಪ್ರತಿವಾದಕ್ಕೆ ಮನಮೆಚ್ಚಿ "ಇದು ಲೇಸಾಯಿತ್ತು" ಎಂದು ಒಪ್ಪುತ್ತಾನೆ. "ಅಂಗನೆ ಅಂಗನೆಯ ರೂಪಲ್ಲದೆ ಮನ ವಸ್ತು ಭಾವದಲ್ಲಿ ಬೆಚ್ಚಂತೆ ಇಪ್ಪುದು. ಬಂದ ಕಥನದಲ್ಲಿ ಬಂದು ಹಿಂಗಿದೆಯಲ್ಲ. ಅಕ್ಕ ಗುಹೇಶ್ವರ ಲಿಂಗದಲ್ಲಿ ಉಭಯ ನಾಸ್ತಿ ಮನವಳಿದೆ ಎನ್ನಕ್ಕಾ'' ಎಂದು ಕೊಂಡಾಡುತ್ತಾನೆ.

ಶಿವಾನುಭವಮಂಟಪದ ಸಂದರ್ಶನದಿಂದ ಅಕ್ಕನ ಧ್ಯೇಯುವು ಇನ್ನು ಸಮೀಪಗತವಾಯಿತು. ಬಸವನ ಭಕ್ತಿ, ಪ್ರಭುವಿನ ಜ್ಞಾನ, ಚೆನ್ನಬಸವನ ಧರ್ಮಗಳ ತ್ರಿವೇಣಿಯ ಹೊನಲು, ಅಕ್ಕನಲ್ಲಿ ನೆಲೆಸಿದುವು.

(೪) ಬಾಲ್ಯದ ಕನಸನ್ನು ನನಸುಮಾಡಿಕೊಂಡ ಅಕ್ಕನ ಜೀವನದ ನಾಲ್ಕನೆಯ ಭಾಗವೂ ಕೂಡ ಕಾವ್ಯಮಯುವಾಗಿದೆ. ಒಳಗು ಹೊರಗು ಶುದ್ಧವಾಗಿ ಕಲ್ಯಾಣವ ಸೇರಿದಳು. ಅಲ್ಲಿ ಶಿವಶರಣರ ಕಾರುಣ್ಯದಿಂ ಜ್ಞಾನವನ್ನು ಪಡೆದಳು. ಅಂಗವಿಕಾರವ ಗೆಲಿದು ಸರ್ವಾಂಗದೊಳು ಲಿಂಗವನು ಧೃಡಮಾಡಿಕೊಂಡು ನಿಜಗಲಿಯಾದಳು. ಈ ಕೊನೆಯ ಭಾಗದಲ್ಲಿ ಅಕ್ಕನ ಆಧ್ಯಾತ್ಮಿಕ ವಿರಹದ ವರ್ಣನೆಯಿದೆ. ತನ್ನ ಹೃದಯ ಸ್ವಾಮಿಯನ್ನು ಅಕ್ಕನು ಆರಸುತ್ತಿರುವದನ್ನು ಚಾಮರಸನು ಹೀಗೆ ಬಣ್ಣಿಸಿದ್ದಾನೆ.

ಎಲ್ಲಿ ಸಜ್ಜನವೆಲ್ಲಿ ನಿರ್ಜನ
ತೆಲ್ಲಿ ಗಿಡು ಮಡುವೆಲ್ಲಿ ತರು ಗಿರಿ
ಯೆಲ್ಲಿ ಗಂಹರವೆಲ್ಲಿ ಪೂಗೊಳವೆಲ್ಲಿ ಲತೆ ಪುಳಿನ
ಎಲ್ಲ ಎದೆಯಲಿ ಹಾಡುತಾಡುತ
ಮೆಲ್ಲ ಮೆಲ್ಲನೆಯರಸುರ್ತಿದಳು
........................... ಮಹಾದೇವಿ.

ಚನ್ನಮಲ್ಲಿಕಾರ್ಜುನನನ್ನು ಕಾಣಬೇಕೆಂಬ ಹಂಬಲವು ಇದೀಗ ಅಕ್ಕನಲ್ಲಿ ಹೆಚ್ಚಾಗಿತ್ತು. ಅವಳ ಮನದ ಉತ್ಕಟೇಚ್ಛೆಯು ಫಲವನ್ನು ಪಡೆಯುವ ಸ್ಥಿತಿಗೆ ಬಂದಿತ್ತು. ವನಾಂತರದಲ್ಲಿ ಅಳಿಸಂಕುಳ, ಮಾಮರ, ಬೆಳುದಿಂಗಳು, ಕೋಗಿಲೆಗಳನ್ನು 'ಎನ್ನೊಡೆಯ ಚನ್ನಮಲ್ಲಿಕಾರ್ಜುನ ದೇವರ ಕಂಡರೆ ಕರೆದು ತೋರಿರೆ' ಎಂದು ಬೇಡುತ್ತಾಳೆ. ಆಧ್ಯಾತ್ಮಿಕ ವಿರಹದಿಂದ ನೊಂದು ಗಿಳಿ, ಕೋಗಿಲೆ, ತುಂಬಿಗಳನ್ನು ಮೊರೆ ಹೋಗುತ್ತಾಳೆ. ಕೊನೆಗೆ ವನದಲ್ಲಿ ಎಲ್ಲ ಕಡೆಗೂ ದೇವನ ರೂಪವನ್ನು ಕಾಣುತ್ತಾಳೆ.

'ವನವೆಲ್ಲ ನೀವೆ. ವನದೊಳಗಣ ದೇವತರುವೆಲ್ಲ ನೀವೆ. ತರುವಿನೊಳಗಾಡುವ ಖಗ ಮೃಗವೆಲ್ಲ ನೀವೆ. ಚನ್ನಮಲ್ಲಿಕಾರ್ಜುನ ಸರ್ವಭರಿತನಾಗಿ, ಎನಗೆ ಮುಖದೋರೆ'—ಎಂದು ಹಂಬಲಿಸಿ ಬೇಡಿಕೊಳ್ಳುತ್ತಾಳೆ. ಕೊನೆಗೊಮ್ಮೆ 'ಹೊಳೆವ ಕೆಂಜೆಡೆಗಳ, ಮಣಿ ಮುಕುಟದ ಒಪ್ಪುವ ಸುಲಿಪಲ್ಲ, ನಗೆ ಮೊಗದ ಕಂಗಳ ಕಾಂತಿಯಿಂ ಈರೇಳು ಭುವನಮುಂ ಬೆಳಗುವ ದಿವ್ಯ ಸ್ವರೂಪನ'ನ್ನು ಕಂಡು ತನ್ನ ಕಂಗಳ ಬರವನ್ನು ಹಿಂಗಿಸಿಕೊಳ್ಳುತ್ತಾಳೆ. ಈ ಐಕ್ಯ ಸ್ಥಾನದಲ್ಲಿ ಅನುಪಮ ಆನಂದವನ್ನು ಪಡೆಯುತ್ತಾಳೆ. ಕೊನೆಗೆ ಚನ್ನಮಲ್ಲಿಕಾರ್ಜುನನ ಹೃದಯ ಕಮಲದಲ್ಲಿ ಅಡಗಿ ಆತ್ಮಾರ್ಪಣೆ ಮಾಡಿ ತನ್ನ ಧ್ಯೇಯವನ್ನು ಕೊನೆಗಾಣಿಸುತ್ತಾಳೆ.

ಇಂತಿದು ಅಕ್ಕನ ಜೀವನ ಚಿತ್ರ. ನಮಗೆ ದೊರೆಯುವ ಸಾಹಿತ್ಯದಲ್ಲಿರುವ ಸ್ಥೂಲ ಭಿನ್ನಾಂಶಗಳನ್ನು ಬಿಟ್ಟುಕೊಟ್ಟರೆ, ಉಜ್ವಲವಾದ ಅಕ್ಕನ ಜೀವನದ ತಿರುಳು ಒಂದೇ ಇರುವದನ್ನು ನಾವು ಕಾಣುತ್ತೇವೆ. ಅಕ್ಕನ ಮೂರ್ತಿ ಸ್ವರೂಪವು ಘನವಾಗಿದೆ. ಹರಿಹರನು ತನ್ನ ರಗಳೆಯಲ್ಲಿ ಅದನ್ನು ಸಂಕ್ಷಿಪ್ತವಾಗಿ

ಒದೆದು ಸಮಸ್ತ ರಾಜ್ಯ ಸುಖಮಂ ಸುಖದಿಂ
ಬಿಸುಟ್ಟಲ್ಪಭೋಗ ಸಂ।
ಪದವನೆ ನೂಂಕಿ ಸಂಸೃತಿಯ ದಂದುಗಮಂ
ಬಿದಿರ್ದಾಸೆಯೆಂಬಿಭಮಂ ॥
ಬಿದಳಿಸಿ ಕಾಮ ಮತ್ತ ಗಜ ಮಸ್ತಕದಾ
ಮದಮಂ ಸಡಿಲ್ಚಿದಾ ।
ನಡೆ ಮಹಾದೇವಿ ... ... ... ... ... ...
... ... ... ... ... ... ... ... ...
... ... ... ... ... ... ... ... ...
ಅನುಪಮ ಮಲ್ಲಿಕಾರ್ಜುನನ ಭಕ್ತಿಯ ಭಾವಕಿ ಚನ್ನಮಲ್ಲಿಕಾ
ರ್ಜುನನ ಸುಖಂ ಬರುತ್ತಲಿಸೆದಳ್ ಮಹಾದೇವಿ ...
... ... ...
ಹೀಗೆ ಬಣ್ಣಿಸುತ್ತಾನೆ.

ಕೊನೆಗೆ ಅಕ್ಕನ ಮೂರ್ತಿ ಸ್ವರೂಪವನ್ನು ಶೂನ್ಯಸಂಪಾದನೆಕಾರರ ಉಕ್ತಿಯಲ್ಲಿಯೇ ಹೇಳಿ ಈ ಅಲ್ಪ ಲೇಖನವನ್ನು ಮುಗಿಸುತ್ತೇನೆ.

ತನುವಿನೊಳಗೆ ಇದ್ದು ತನುವ ಗೆದ್ದಳು. ಮನದೊಳಗೆ ಇದ್ದು ಮನವ ಗೆದ್ದಳು. ವಿಷಯದೊಳಗೆ ಇದ್ದು ವಿಷಯಂಗಳ ಗೆದ್ದಳು. ಅಂಗ ಸಂಗವ ತೊರೆದು ಭವವ ಗೆದ್ದಳು. ಕೂಡಲ ಚನ್ನಸಂಗಯ್ಯನ ಹೃದಯ ಕಮಲವ ಬಗೆದು ಹೊಕ್ಕು ನಿಜಪದವನೈದಿದ ಮಹಾದೇವಿಯಕ್ಕನ ಶ್ರೀ ಪಾದಕ್ಕೆ ನಮೋ ನಮೋ ಎಂಬೆನು.

# . ಇದಕಾಗಿ ಇರಲಿ.

(ಲೇಃ-- ಶ್ರೀ ಚಂದ್ರಶೇಖರದೇವರು ಅಡ್ನೂರ, ಮುಕ್ಕಾಂ ಸರ್ವಭೂಷಣ
ಮಠ ಬೆಂಗಳೂರನಗರ.)

೧

ಧನವಿರಲಿ ದಾನಕ್ಕೆ
ಮನವಿರಲಿ ಧ್ಯಾನಕ್ಕೆ
ತನುವಿರಲಿ ಜಗದೊಳಗೆ ಧರ್ಮಕ್ಕೆ ತಾ-
ನೆನುತಿರುವ ಅಹಮಿಕೆಯುದಮನಕ್ಕೆ ತಾ ॥

೨

ಸತಿಯಿರಲಿ ಸೇವಿಸಲು
ಸುತನಿರಲಿ ಪಾಲಿಸಲು
ಹಿತರಿರಲಿ ಹಗಲಿರುಳು ಹರುಷಿಸುತ ಸ-
ತ್ಪಥವ ತೋರಿ ಸಂಸೃತಿ ಸಂಗವಳಿಸೆ ॥

೩

ನಯವಿರಲಿ ನುಡಿಯಲ್ಲಿ
ಭಯವಿರಲಿ ನಡೆಯಲ್ಲಿ
ಜಯವಿರಲಿ ದುಷ್ಟಗುಣಮನದಲ್ಲಿ
ದಯುಯಿರಲಿ ಸಕಲ ಜೀವಂಗಳಲ್ಲಿ ॥

೪

ಶಿರವಿರಲಿ ವಂದಿಸಲು
ಕರವಿರಲಿ ಪೂಜಿಸಲು
ಅರಿವಿರಲಿ ಧರೆಯೊಳಗೆ ಹರನಿಗಿಂತ
ಪರದೈವವಿಲ್ಲೆಂದು ತಿಳಿಯುವಂತೆ ॥

# ಶೂನ್ಯಸಂಪಾದನೆಯ ರಹಸ್ಯ.

(ಪ್ರಭುದೇವರ ಶೂನ್ಯಪೀಠ ಮೂರ್ತಿ ಸಂಪಾದನೆ.)

## ಅಷ್ಟಾದಶೋಪದೇಶ.

ಪ್ರಭು ಶೂನ್ಯವಿಷ್ಟರದೊಳತಿ
ವಿಭವದಿ ಮಂಡಿಸಿ ಸಮಸ್ತ ಶರಣರ ಕರದಿಂ ।
ಶುಭದಿಂದರ್ಚಿಸಿಕೊಂಡುದ
ತ್ರಿಭುವನ ಮರಿಯಲ್ಕೆ ಪೇಳ್ವೆನತಿ ಕೌತುಕದಿಂ ॥

ಈ ಸಂಪಾದನೆಯಲ್ಲಿ ಬಸವರಾಜದೇವರು ನಿರ್ಮಿಸಿದ ಶೂನ್ಯ ಪೀಠದ ಮೇಲೆ ಪ್ರಭುದೇವರು ಮಂಡಿಸಿದುದನ್ನೂ ಅವರ ಪಾದವನ್ನು ಶಿವಶರಣರೆಲ್ಲರೂ ಒಳ್ಳೆ ಭಕ್ತಿಯಿಂದ ಪೂಜಿಸಿದುದನ್ನೂ ವರ್ಣಿಸಲಾ ಗಿದೆ. ಆದರೆ ತಾತ್ವಿಕ ದೃಷ್ಟಿಯಿಂದ ವಿವೇಚಿಸಲಾಗಿ ಬಸವೇಶನ ಭಕ್ತಿಯೆಂಬ ಪೀಠದ ಮೇಲೆ ಪ್ರಭುವೆಂಬ ಜ್ಞಾನವು ಮಂಡಿಸಿತೆಂಬರ್ಥ. ಅಂದರೆ ಬಸವನ ಭಕ್ತಿಯು ಜ್ಞಾನ ಜ್ಯೋತಿಯನ್ನು ಪಡೆದು ಪ್ರಫು ಲ್ಲಿತವಾಯಿತು. ಬಸವನೇ ಅಂಗ ಪ್ರಭುವೇ ಲಿಂಗವಾಗಿದ್ದು ಇಲ್ಲಿ ಅಂಗದ ಮೇಲೆ ಲಿಂಗವು ಅಳವಟ್ಟಿದೆ. ಅರ್ಥಾತ್ ಅಂಗಲಿಂಗಸಂಗ ವಾಗಿದೆ. ಅವ್ಯಕ್ತವಾದ ಪರವಸ್ತುವು ಸೇವ್ಯಸೇವಕ ಭಾವದಿಂದ ಭೂಮಿಯ ಮೇಲೆ ಪ್ರಭು-ಬಸವರ ರೂಪದಿಂದ ಅವತರಿಸಿ, ಸಾಧಕರೂಪವಾದ ಬಸವನ ಭಕ್ತಿಯು ಸಿದ್ಧರೂಪವಾದ ಪ್ರಭುವಿನ ಜ್ಞಾನದಲ್ಲಿ ಕೊನೆ ಗಂಡಿದೆ. ದ್ವೈತವಾದ ಬಸವನ ಭಕ್ತಿಯು ಸಾಧನದಿಂದ ಅದ್ವೈತ ವಾದ ಪ್ರಭುಜ್ಞಾನವನ್ನು ಪಡೆದು ನಿತ್ಯಸುಖಿಯಾಗಿದೆ. ಈ ಉದಾತ್ತ ತತ್ವವನ್ನೇ ಶೂನ್ಯ ಸಂಪಾದನಾ ಕರ್ತರು ಸುಗಮವಾದ ಕಥಾರೂಪ ದಿಂದ ಚಿತ್ರಿಸಿರುವರು.

ಈ ಸಂಪಾದನೆಯ ಕಥಾಸಾರವಿಷ್ಟೇ. ಬಸವರಾಜನು ನಿರ್ಮಿ ಸಿದ ಶೂನ್ಯಸಿಂಹಾಸನದ ಮೇಲೆ ಪ್ರಭುದೇವರು ಮೂರ್ತಿಗೊಳ್ಳಲು ಮಡಿವಾಳ, ಅಪ್ಪಣ್ಣ, ಬಾಚರಸ ಮೊದಲಾದ ಶರಣರು ಅವರ ನಿಲ ವನ್ನು ಬಹು ವಿಧವಾಗಿ ಕೊಂಡಾಡಿದರು. ಬಸವನಾನಂದ ಶರಧಿಯು ಮೇರೆದಪ್ಪಿ ಹರಿಯಿತು. ಬಸವನು ೧೨ ವರ್ಷ ಮಾಡಿದ ಲಿಂಗಪೂಜೆಯ

ಫಲವೇ ಪ್ರಭುವೆಂಬ ಜಂಗಮರೂಪವಾಗಿ ಪರಿಣಮಿಸಿತು. ಹೀಗೆ ಪ್ರಭುದೇವರು ಶೂನ್ಯಪೀಠವನ್ನಲಂಕರಿಸಿರಲು, ಬಸವಣ್ಣನವರು ಆನಂದ ಶರಧಿಯಲ್ಲಿ ಓಲಾಡುತ್ತಿರಲು, ಇತ್ತ ಪ್ರತಿನಿತ್ಯದಂತೆ ಆರೋಗಣೆಗೆ ಬಂದು ಕುಳಿತ ಲಕ್ಷದ ಮೇಲೆ ತೊಂಭತ್ತಾರು ಸಾವಿರ ಜಂಗಮರೆಲ್ಲರು ಬಸವನು ನಮ್ಮ ಕಡೆಗೆ ಲಕ್ಷ್ಯಕೊಡಲೊಲ್ಲನು, ವ್ರತಗೇಡಿಯೆಂದು ಅವ ನನ್ನು ಜರಿದರು. ಪ್ರಭುವನ್ನು ಮಹೇಂದ್ರ ಜಾಲಿಗನೆಂದು ಹೀಯಾ ಳಿಸಿ ಹೊರಟು ಹೋದರು. ಆಮೇಲೆ ಪ್ರಭುದೇವರು "ಅಶನಕ್ಕೆ ಬಂದ ಜಂಗಮರು ಗುಹೇಶ್ವರನ ನಿಲವನೆತ್ತ ಬಲ್ಲರು?" ಎಂದು ವಿಡಂಬಿಸಿ ನುಡಿದರು.

ಚನ್ನಬಸವಣ್ಣನು "ಲಿಂಗದಲ್ಲಿ ಸ್ವಯವಾಗಿ ಬಂದು ನಿಂದಾತನೇ ಜಂಗಮ. ಅಂಥ ಜಂಗಮವೇ ಪ್ರಭುವು. ಉಳಿದ ಬರಿಯ ಬೋಳು ಗಳೆಲ್ಲ ಜಂಗಮರೇ? ಅವರು ಕೇವಲ ಲಾಂಛನಧಾರಿಗಳು. ಅವ ರಿಗೆ ಪರವಸ್ತುವು ಬೇಡವಾಗಿದ್ದರೆ ಹೋಗಲಿ" ಎಂದು ಜರಿದು ಮಾತ ನಾಡಿದರು. ಸೊಡ್ಡಳ ಬಾಚರಸರು "ಅಡವಿಯಲ್ಲಿ ಆನೆಯ ಹಿಂಡು ಆನಂದ ಲೀಲೆಯೊಳಾಡುವಾಗ ಕೇಸರಿಯು ಬರಲು ಆ ಮದಕರಿಗಳೆಲ್ಲ ಓಡುವ ತೆರನಂತೆ ಪ್ರಭುದೇವರು ಬರಲೊಡನೆ ನೆರೆದ ಗಣಂಗಳೆಲ್ಲ ಹರಿದರಯ್ಯ" ಎಂದು ಹಾಸ್ಯಮಾಡಿದರು. ಆದರೆ ಬಸವಣ್ಣನವರು ಜಂಗ ಮರೆಲ್ಲ ಮುಳಿದು ಹೋಗಲು ಬಹಳೇ ಪಶ್ಚಾತ್ತಾಪದಿಂದ "ಜಂಗಮವು ಮುನಿದರೆ ನಾನಂತು ಬದುಕುವ ಕೂಡಲ ಸಂಗಮದೇವಾ" ಎಂದು ನುಡಿಯಲು ಪ್ರಭುದೇವರು ಯುಕ್ತಿಯಿಂದ ಅವರನ್ನು ಸಂತೈಸಿದರು.

ಆಮೇಲೆ ಬಸವಣ್ಣನವರು ಪ್ರಭುವಿಗೆ ಬಿನ್ನವಿಸಿದ್ದೇನಂದರೆ "ಪ್ರಭುವೇ ಜಂಗಮರು ಹೋದರು. ತಾವು ಬೇಡುವದನ್ನು ದಯವಿಟ್ಟು ತಿಳಿ ಸಯ್ಯಾ. ಕಾಮಿಸದೆ ಕಲ್ಪಿಸದೆ ಭ್ರಮಿಸದೆ ನಿಮ್ಮ ಪರಿಯಾಣಕ್ಕೆ ನೀಡು ವೆನು." ಇದಕ್ಕೆ ಪ್ರಭುವು "ಗುಹೇಶ್ವರನು ಹಸಿದಿಹನು ಪದಾರ್ಥವ ನೀಡಯ್ಯಾ ಸಂಗನಬಸವಣ್ಣಾ" ಎಂದು ಅಪ್ಪಣೆ ಕೊಡಿಸಲು ಬಸವಣ್ಣ ನವರು ಸ್ವತಃ ಪ್ರಭುವಿನ ಸೇವೆಗೆ ಅನುವಾದರು. ಮಡಿವಾಳ ತಂದೆ ಗಳು ಅಕ್ಕನಾಗಮ್ಮನು ಪ್ರಭುವಿಗೆ ಆರತಿಯನ್ನೆತ್ತಿದರು.

(ಬಸವಣ್ಣನ ಅರಮನೆ:— **ಶೂನ್ಯಪೀಠಾರೋಹಣ**)

ಬಸವೇಶ್ವರನ ಹೆಮ್ಮನೆಯನ್ನು ಗ್ರಂಥಕಾರನು ಬಹು ಸೊಗಸಾಗಿ ವರ್ಣಿಸಿರುವನು. ಆ ಮನೆಯ ಮಂಟಪಗಳು ಸುವರ್ಣ ಭಿತ್ತಿಗಳಿಂದಲೂ ರತ್ನದೆನೆಗಳಿಂದಲೂ ಪರಿಶೋಭಿತವಾಗಿದ್ದವು. ನೀಲವರ್ಣದ ಉಪ್ಪರಿಗೆಗಳೂ ಮಾಣಿಕ್ಯದ ಕಲಶಗಳಿಂದೊಪ್ಪುವ ಗೋಪುರಗಳೂ ವಿರಾಜಿಸುತ್ತಿದ್ದವು. ಪಚ್ಚೆಯ ಕಂಬಗಳಿಂದಲೂ ನವರತ್ನದ ರಂಗಮಂಟಪದಿಂದಲೂ ಬಣ್ಣದ ಲೋವೆಗಳಿಂದಲೂ ನೀಲರತ್ನದ ನೆಲಗಟ್ಟಿನ ಕನ್ನಡಿಗಳ ಸಾಲ್ಗಳಿಂದಲೂ ಅದು ಅಂದವಾಗಿತ್ತು. ಇದಲ್ಲದೆ ಅಲ್ಲಲ್ಲಿ ಗಂಧದ ಬಟ್ಟಲಗಳೂ ಭಸಿತದ ಭರಣಿಗಳೂ ರುದ್ರಾಕ್ಷಿಯ ಸರಗಳೂ ಶರಣರ ಪ್ರತಿಬಿಂಬಗಳೂ ಅಲ್ಲಲ್ಲಿ ಕಂಗೊಳಿಸುತ್ತಿದ್ದವು. ಕನ್ನಿಕೆಯರು ಆರತಿಯನ್ನು ಹಿಡಿದೆತ್ತುತ್ತಿದ್ದರು. ಕೆಲವರು ಮಧ್ಯಮಂಟಪದಲ್ಲಿ ಶಿವಾರ್ಚನೆ ಮಾಡುತ್ತಿದ್ದರು. ಕೆಲವೆಡೆಯಲ್ಲಿ ಪ್ರವಚನ ಶಿವಗೋಷ್ಠಿಗಳು ನಡೆದಿದ್ದವು. ಬೇರೆಡೆಯಲ್ಲಿ ಗಾಯನ, ನಾಟ್ಯ, ಭಟ್ಟಂಗಿಗಳ ಕೊಂಡಾಟಗಳು ಸಾಗಿದ್ದವು. ಆ ಸಮಯದಲ್ಲಿ ಪ್ರಭುದೇವರು ಸ್ತುತಿ, ಆರತಿ, ಜಯಘೋಷಗಳೊಂದಿಗೆ ಶೂನ್ಯಸಿಂಹಾಸನದ ಮೇಲೆ ಮೂರ್ತಗೊಳಿಸಿದರು.

## ಶರಣರು ಪ್ರಭುವನ್ನು ಸ್ತುತಿಸಿದ್ದು.

(೧) ಮಡಿವಳ— ಮಲಿವುತ್ತ ಮೆಟ್ಟುತ್ತ ತನುವನೊಲೆವುತ್ತ ತಲೆದೂಗಿ ಮನವನಲ್ಲಾಡಿ ಬಸವನ ಹಿಂದು ಮುಂದೆ ನೋಡುತ್ತೆ ನಗುತ್ತೆ ಮುತ್ತಿನ ತೋರಣಕ್ಕೆ ಹಾರೈಸಿ ಬಸವನ ಮನೆಯ ಹೊಕ್ಕನು ಕಲಿದೇವರ ದೇವನು.

(೨) ಬಸವಣ್ಣ— ಅಂತರಂಗವಿಲ್ಲದ ಒಳಗು ಅವಲಂಬವಿಲ್ಲದ ಹೊರಗು ನೋಡಲಳವಲ್ಲದ ಕುಸುಮದ ಗದ್ದುಗೆಯಲ್ಲಿ ಒಡಲಿಲ್ಲದ ಘನವು ಮೂರ್ತಿಗೊಂಡರೆ ವಿಚಿತ್ರವಾಯಿತ್ತು ಜಗವೆಲ್ಲ. ಕೂಡಲಸಂಗಮದೇವರ ಶರಣ ಪ್ರಭುದೇವರ ಶ್ರೀಪಾದಕ್ಕೆ ನಮೋನಮೋ ಎಂಬೆನು.

(೩) ಹಡಪದಪ್ಪಣ್ಣ— ನೆಲನ ಹೊದ್ದದು, ಆಕಾಶ ಮುಟ್ಟದು, ಎಡೆಯಲೊಂದು ರೂಪಿಲ್ಲ. ನಿಜವೆಂಬ ವಿಸ್ತಾರದಲ್ಲಿ ನಿತ್ಯನಿರಾಳವೆಂಬ ಮಹಾಘನವು ಬಂದು ಮೂರ್ತಿಗೊಳ್ಳಲು ಕಾಯದ ಕಣ್ಗೆ ಕಾಣಬಾರದು. ಮನದ ಮುಂದೆ ಅಳವಡದು. ಭಾವದ ಬಗೆಗೆ ವೈದೋರದು.

ಬಸವ ಪ್ರಿಯ ಕೂಡಲ ಚನ್ನಸಂಗಯ್ಯನಲ್ಲಿ ಪ್ರಭುದೇವರ ಶ್ರೀಪಾದಕ್ಕೆ ನಮೋನಮೋ ಎಂಬೆನು.

(೪) ಸೊಡ್ಡಳಬಾಚರಸ— ಆಕಾರವಿಲ್ಲದ ನಿರಾಕಾರ ನಿರಾಳವೆಂಬ ಗದ್ದುಗೆಯ ಮೇಲೆ ಕುಳ್ಳಿರ್ದುದ ಕಂಡು ಆನು ಪ್ರಭುದೇವರೆಂದರಿದು ಆತನ ನಿಜಪಾದಕ್ಕೆರಗಿ ಎನ್ನ ಭವವ ಹರಿದೆನು. ಮಹಾದಾನಿ ಸೊಡ್ಡಳನ ಕಂಡ ಕಡು ಸುಖವನು ಉಪಮಿಸಬಾರದು.

## ಬಸವರಾಜದೇವರ ಆನಂದ.

ಎನ್ನ ಗಂಡ ಬರಬೇಕೆಂದು ಅಂತರಂಗವೆಂಬ ಮನೆಯ ತೆರಹು ಮಾಡಿ ಅಷ್ಟದಲವೆಂಬ ಓವರಿಯೊಳಗೆ ನಿಜನಿವಾಸವೆಂಬ ಹಾಸಿಗೆಯ ಹಾಸಿ ಧ್ಯಾನವೆಂಬ ಮೇಲ್ಕಟ್ಟು ಕಟ್ಟಿ ಜ್ಞಾನವೆಂಬ ದೀಪಮಂ ಬೆಳಗಿಸಿ ಕ್ರಿಯೆಯೆಂಬ ಉಪಚಾರಂಗಳಂ ಹರಹಿಕೊಂಡು ಪಶ್ಚಿಮ ದ್ವಾರವೆಂಬ ಬಾಗಿಲತೆರೆದು ಕಂಗಳೇ ಪ್ರಾಣವಾಗಿ ಹಾರೈಸುತ್ತಿದ್ದೆನು. ನಾನು ಬಾರೆನೆಂದು ತಾನೇ ಬಂದು ಹೃದಯ ಸಿಂಹಾಸನವೇರಿದನು. ಎನ್ನ ಮನದ ಬಯಕೆ ಸ್ವಯವಾಯಿತ್ತು. ಹಿಂದೆ ಹನ್ನೆರಡು ವರ್ಷದಿಂದಿದ್ದ ಚಿಂತೆ ಇಂದು ನಿಶ್ಚಿಂತವಾಯಿತ್ತು. ಪ್ರಭುವೇ, ನಿಮ್ಮ ಪಾದಾರ್ಚನೆಗೆ ನನ್ನ ಪರಮಾನಂದ ಜಲವನೆರೆಯುವೆನಯ್ಯ, ಪೂಜೆಗೆ ನನ್ನ ಹೃದಯ ಕಮಲವನಿರಿಸುವೆನಯ್ಯ, ಆರತಿಯಿಂದ ಆರತಿಯನ್ನೆತ್ತುವೆನಯ್ಯ, ಎನ್ನ ಮಹಾ ಪ್ರಕಾಶವ ದೀಪವಾಗಿ ಬೆಳಗುವೆನಯ್ಯ. ಈ ತೆರನಲ್ಲದೆ ಅಷ್ಟವಿಧಾರ್ಚನೆ ಷೋಡಶೋಪಚಾರವೆಂಬುದಕ್ಕೆ ಬೇರೆ ತೆರನ ಕಾಣೆನಯ್ಯ. ಪ್ರಭುವೆನ್ನ ಪ್ರಾಣಲಿಂಗವೆಂದು ಇಂದೆನಗೆ ಕಾಣಬಂದಿತಯ್ಯ. ಪ್ರಭುವೇ, ನಿಮ್ಮ ನೋಟವನಂತ ಸುಖವು. ನಿಮ್ಮ ಕೂಟ ಪರಮ ಸುಖವು. ಅಷ್ಟಕೋಟಿ ರೋಮಂಗಳೆಲ್ಲ ಕಂಗಳಾಗಿ ನೋಡುತ್ತಿದ್ದೇನೆ. ನಿಮ್ಮ ನೋಡಿ ನೋಡಿ ಎನ್ನ ಮನದಲ್ಲಿ ರತಿ ಹುಟ್ಟಿ ನಿಮಿರ್ದವೆನ್ನ ಕಂಗಳು. ಎನ್ನ ವಚನದಲ್ಲಿ ನಿಮ್ಮ ನಾಮಾಮೃತ ತುಂಬಿದೆ. ಎನ್ನ ನಯನದಲ್ಲಿ ನಿಮ್ಮ ಮೂರುತಿ ತುಂಬಿದೆ. ಎನ್ನ ಮನದಲ್ಲಿ ನಿಮ್ಮ ನೆನಹು ತುಂಬಿದೆ. ಎನ್ನ ಕಿವಿಯಲ್ಲಿ ನಿಮ್ಮ ಕೀರ್ತಿ ತುಂಬಿದೆ. ನಿಮ್ಮ ಚರಣ ಕಮಲದಲ್ಲಿ ನಾನು ತುಂಬಿಯಾಗಿದ್ದೇನೆ. ಬಿಡಲಾರದ ನಿಧಾನವ ಕಂಡೆನಯ್ಯ. ಆನಂದದಿಂದ ಆಡುವೆ, ಹಾಡುವೆ, ಕಣ್ಣ ತುಂಬ ನೋಡುವೆ.

ಮನವೊಲಿದು ಭಕ್ತಿಯ ಮಾಡುವೆ. ಆಡಿ ಕಾಲು ದಣಿಯವು. ನೋಡಿ ಕಣ್ಣು ದಣಿಯವು. ಹಾಡಿ ಮನ ದಣಿಯದು. ಇನ್ನೇವೆ ನಿನ್ನೇವೆನಯ್ಯ?

## ಜಂಗಮರು ಬಸವನನ್ನು ಜರೆದದ್ದು.

ಪ್ರಭುವನ್ನು ಲಕ್ಷಿಸಿ ತಮ್ಮನ್ನುಪೇಕ್ಷಿಸಿದ ಬಸವನನ್ನು ಜಂಗಮರು ಈ ರೀತಿಯಾಗಿ ಆಕ್ಷೇಪಿಸಿದರು. "ಅರಳು ಕಂಗಳುಳ್ಳವರಿಗೆ ಹರಳುಕಂಗಳುಳ್ಳವರು ಸೇರದಂತೆ, ತುರುಬುಳ್ಳವರಿಗೆ ಬರಿಮುಂಡೆಯವರು ಸೈರಿಸದಂತೆ, ಮಾಡಿದನೀ ವ್ರತಗೇಡಿ ಬಸವನು. ಮಹೇಂದ್ರ ಜಾಲಿಗನೊಬ್ಬನ ಕುಳ್ಳಿರಿಸಿಕೊಂಡು ತನ್ನ ಪ್ರಾಣಲಿಂಗವೆಂದು ನಮ್ಮತ್ತ ತಿರುಗಿ ನೋಡಲೊಲ್ಲ. ಆತನಲ್ಲಿ ಏನು ಲೇಸ ಕಂಡನು? ನಮ್ಮಲ್ಲಿ ಏನು ಹೊಲ್ಲೆಯುವ ಕಂಡನು? ಕಾಂಚನವನೊಲ್ಲದೆ ಬಿಟ್ಟು ಹಂಚನ್ನು ಹಿಡಿದನು. ಪ್ರಭುವೊಬ್ಬ ಅನಾಚಾರಿ. ಬಸವನೊಬ್ಬ ವ್ರತಗೇಡಿ. ಇವರಿಬ್ಬರು ದೇವಲೋಕ ಮರ್ತ್ಯಲೋಕಕ್ಕೆ ಹೊರಗು, ಇವರ ಮುಖ ನೋಡಲಾಗದು" ಹೀಗೆನ್ನುತ್ತ ಹೊರಟು ಹೋದರು.

## ಜಂಗಮರ ವಿಡಂಬನೆ.

(೧) ಪ್ರಭು— ಬಸವಾ, ಸಾತ್ವಿಕ ಶರಣರ ನುಡಿ ಹುಸಿಯೆ? ಅದು ದಿಟ. ಒಳಗೆಂಬುದೇ ದೇವಲೋಕ ಹೊರಗೆಂಬುದೇ ಮರ್ತ್ಯಲೋಕ. ಈ ಎರಡೂ ಲೋಕಕ್ಕೆ ಹೊರಗಾಗಿ ನಾವಿರಲು ಈ ಎರಡೂ ಲೋಕದೊಳಗೆ ತಾವಿರಲಿ. ಈ ಅಂಗಜ ಜಂಗುಳಿಗಳೆಲ್ಲ ಅಶನಕ್ಕೆ ನೆರೆದಿದ್ದು, ಲಿಂಗದ ಹವಣ ನಿವರೆತ್ತ ಬಲ್ಲರು? ಕಳವಳದ ಕಾಯಜೀವಿಗಳು ದೇವರ ಸುದ್ದಿಯ ನೆತ್ತಬಲ್ಲರು? ಮದ್ಯಪಾನವ ಮಾಡಿ ಮದವೆದ್ದ ಜೋಗಿಗಳಂತೆ ನುಡಿವರು. ಗುಹೇಶ್ವರನ ನಿಲವನಿವರೆತ್ತ ಬಲ್ಲರು?

(೨) ಚನ್ನಬಸವಣ್ಣ— ಪಥವನರಿಯದೆ ಮುಂಡೆಯ ಬೋಳಿಸಿಕೊಂಡಾತ ಜಂಗಮನಲ್ಲ. ಸತ್ತೊಡೆ ತೆಗೆಯುವರಿಲ್ಲೆಂದು ಕಟ್ಟಿಕೊಂಡಾತ ಭಕ್ತನಲ್ಲ. ತನುಮನ ಧನವೆನ್ನದಲ್ಲ, ಲಿಂಗದ ಒಡವೆ ಲಿಂಗಕ್ಕೆಂದು ಮಾಡುವಾತ ಭಕ್ತ. ತನುಗುಣವಿರಹಿತನಾಗಿ ಲಿಂಗದಲ್ಲಿ ಸ್ವಯವಾಗಿ ಬಂದುನಿಂದಾತ ಜಂಗಮ. ಲಾಂಛನ ಧಾರಿಗಳೆಲ್ಲ ಜಂಗಮರೇ? ಜಡಜೀವಿಗಳೆಲ್ಲ ಜಂಗಮರೇ? ಕೂಡಲ ಚನ್ನ ಸಂಗಯ್ಯನೊಲ್ಲದಿದ್ದರೆ ಅವರು ಹೋಗಲಿ.

(೩) ಸೊಡ್ಡಳ ಬಾಚರಸ— ವಿಪಿನದೊಳು ಮದಕರಿಯ ಹಿಂಡು ಆನಂದ ಲೀಲೆಯೊಳಾಡುತ್ತಿರಲು, ಕೇಸರಿ ಬರಲು ಮದಕರಿಗಳೆಲ್ಲ ಕೆದರಿ ಓಡುವ ತೆರನಂತೆ ನಿಮ್ಮ ಶರಣ ಪ್ರಭುದೇವರು ಬರಲೊಡನೆ ಹರಿದುದಯ್ಯ ನೆರೆದ ಗಣಂಗಳು.

## ಬಸವಣ್ಣನವರ ಕಳವಳ

ಜಂಗಮರು ತನ್ನ ಮನೆ ಬಿಟ್ಟು ಹೋದದ್ದು ತಿಳಿದ ಕೂಡಲೆ ಬಸವಣ್ಣನವರ ಹೊಟ್ಟೆಯಲ್ಲಿ ಬಹಳ ಕಳವಳವುಂಟಾಯಿತು. ಅವರು ಪ್ರಭುದೇವರನ್ನು ಕುರಿತು "ಅಯ್ಯಾ ನಿಮ್ಮ ಶರಣರ ಸಂಗವೆನಗೆ ಪರಮ ಸುಖವಯ್ಯಾ. ಅಯ್ಯಾ ನಿಮ್ಮ ಶರಣರ ಅಗಲಿಕೆ ಪ್ರಾಣವಿಯೋಗವಯ್ಯಾ. ಶಿವಶಿವಾ ಸಂತವಿಡುವೆನು ಇನ್ನೆಂತಯ್ಯಾ? ಎನಗೇನು ಗತಿ? ಶರಣರ ಮುನಿಸು ಬಿಡಿಸಬಾರದ ತೊಡಕು. ಗುರು ಮುನಿದರೆ ಒಂದು ದಿನ ತಾಳುವೆ. ಲಿಂಗ ಮುನಿದರೆ ಅರೆ ದಿನ ತಾಳುವೆ. ಜಂಗಮ ಮುನಿದರೆ ಕ್ಷಣಮಾತ್ರ ತಾಳಿದರೆ ನನ್ನ ಪ್ರಾಣ ಹೋಕು. ಅರಸು ಮುನಿದರೆ ಆ ನಾಡೊಳಗಿರಬಾರದು. ಪತಿ ಮುನಿದರೆ ಸತಿ ಇರಬಾರದು. ಜಂಗಮ ಮುನಿದರೆ ನಾನೆಂತು ಬದಕುವೆನು ಕೂಡಲ ಸಂಗಮದೇವಾ" ಎಂದು ಪಶ್ಚಾತ್ತಾಪದಿಂದ ಅರಿಕೆ ಮಾಡಿಕೊಂಡರು.

## ಪ್ರಭುವು ಬಸವನನ್ನು ಸಮಾಧಾನ ಮಾಡಿದ್ದು.

ಪ್ರಭುದೇವರು ಬಸವನನ್ನು ಕುರಿತು "ಅಂಜಬೇಡ. ಅಳುಕಬೇಡ. ಹೋದವರಾರು? ಇದ್ದವರಾರು? ಹಲವರ ಮುಖದಲ್ಲಿಪ್ಪ ದೇವನೊಬ್ಬನೆ. ನಾವು ಹಲವಲ್ಲದೆ ಕಾರ್ಯವೊಂದೇ ನೋಡಾ. ಮನದೊಳಗಣ ಘನವು ತನುವನಗಲುವದೇ? ಗುಹೇಶ್ವರ ಲಿಂಗದ ವಿಯೋಗಕ್ಕೆ ತೆರಹಿಲ್ಲ ಕೇಳಾ ಸಂಗನಬಸವಣ್ಣಾ" ಎಂದರು. ಅದಕ್ಕೆ ಬಸವಣ್ಣನವರು "ಅದ್ವೈತವ ಅಂತರಂಗದಲ್ಲಿ ಅರಿದು ಹೊರಗೆ ದಾಸೋಹ ಮಾಡದಿರ್ದರೆಂತಯ್ಯ? ಕೂಡಲಸಂಗಮದೇವಾ, ಹಾವು ಸಾಯದಂತೆ ಕೋಲು ನೋಯದಂತೆ ಮಾಡಾ ನಿಮ್ಮ ಧರ್ಮ" ಎಂದು ಬೇಡಿಕೊಂಡರು. ಆಗ ಪ್ರಭುದೇವರು "ಕೆಳಗೇಳು ಲೋಕಂಗಳಿಲ್ಲದ ಮುನ್ನ, ಮೇಲೇಳು ಲೋಕಂಗಳಿಲ್ಲದ ಮುನ್ನ, ಸಮಸ್ತ ಬ್ರಹ್ಮಾಂಡಗಳಿಲ್ಲದ ಮುನ್ನ, ಬಸವಣ್ಣಾ ನೀನು ಲಿಂಗ ಭಕ್ತ, ಜಂಗಮ ಪ್ರಾಣಿಯೆಂಬವನ್ನು ನಾನು

ಅರಿದಿಹೆನಯ್ಯ. ಮಾಡುವ ನೀಡುವ ನಿಜಭಕ್ತರಿಲ್ಲದ ಕಾರಣ ಬಾಯ್ದೆರೆಯದೆ ಇದ್ದೆನು. ಮಾಡಿ ನೀಡಿಹೆನೆಂಬ ಸಂತೋಷದಾಪ್ಯಾಯನ ಹಿರಿದಾಯಿತ್ತು. ನೀಡಯ್ಯ ಗುಹೇಶ್ವರಂಗೆ ಸಂಗನ ಬಸವಣ್ಣಾ" ಎಂದು ಅಪ್ಪಣೆ ಕೊಡಿಸಲು ಬಸವಣ್ಣನವರು "ರೂಹಿಲ್ಲದ ಸುಯಿಧಾನವ ನೀಡುವೆ. ರುಚಿಯಿಲ್ಲದ ಪದಾರ್ಥವ ನೀಡುವೆ. ಲಿಂಗಪದಾರ್ಥವ ಲಿಂಗಮುಖಕ್ಕೆ ನೀಡುವೆ. ಕಾಮಿಸದೆ ಕಲ್ಪಿಸದೆ ಭಾವಿಸದೆ ಭ್ರಮಿಸದೆ ನಿಮ್ಮ ಪರಿಯಾಣಕ್ಕೆ ನೀಡುವೆನು. ಸಮಾಧಾನದಿಂ ಅವಧರಿಸಬೇಕಯ್ಯ. ಪ್ರಭುವೆ" ಎಂದು ಬೆಸಗೊಳ್ಳಲು ಪ್ರಭುವು "ಗುಹೇಶ್ವರ ಹಸಿದಿಹನು ಪದಾರ್ಥವ ನೀಡಯ್ಯ ಸಂಗನಬಸವಣ್ಣಾ" ಎಂದು ಅಪ್ಪಣೆ ಕೊಡಿಸಿದರು.

ಆಮೇಲೆ ಬಸವರಾಜದೇವರು ಸ್ವತಃ ಪ್ರಭುವಿನ ಸೇವೆಗೆ ಸನ್ನದ್ಧರಾದರು. ಮಡಿವಾಳತಂದೆಗಳೂ ಅಕ್ಕನಾಗಮ್ಮನವರೂ ಪ್ರಭುವಿಗೆ ಮಂಗಳಾರತಿಯ ಮಾಡಿದರು. ಇಲ್ಲಿಗೆ ಕಥೆಯು ಮುಗಿಯಿತು.

ಮಹಾಶರಣರಿಂದ ಪೂಜೆಗೊಂಡ ಪ್ರಭುವಿನ ಯೋಗ್ಯತೆಯು ಎಷ್ಟಿದ್ದಿತೆಂಬದನ್ನು ವಾಚಕರೇ ಊಹಿಸಬೇಕು. ಪ್ರಭುವು ಸಾಕ್ಷಾತ್ ಪರಶಿವನ ಮೂರ್ತಿಯೆಂದೇ ಶರಣರೆಲ್ಲರು ಭಾವಿಸಿದ್ದರು.

# ಶ್ರೀ. ನಿಡುಮಾಮಿಡಿ ಮಠದ ಇತಿಹಾಸ.

## ಲೇಖಾಂಕ ೨.

(ಲೇಖಕ:— ಪಂ. ಜಿ. ಸಂಜುಂಡಾರಾಧ್ಯ, 'ರಾಷ್ಟ್ರಭಾಷಾ ವಿಶಾರದ'
ಸಿದ್ಧಗಂಗಾ ಗುರುಕುಲ.)

---

ನಮ್ಮ ಹಿಂದಿನ ಲೇಖಾಂಕದಿಂದ ಮೇಲ್ಕಂಡ ಮಠದ ಕೆಲವು ಚಾರಿತ್ರಕ ವಿಚಾರಗಳು ವಾಚಕರ ಗಮನಕ್ಕೆ ಬಾರದಿರವು. ಈ ಲೇಖದಲ್ಲಿ ಮತ್ತೆ ಕೆಲವು ಸಂಗತಿಗಳು ಉದಾಹರಿಸಲ್ಪಡುತ್ತವೆ.

ಶ್ರೀ ನಿಡುಮಾಮಿಡಿ ಮಠದ ಕೇಂದ್ರಸ್ಥಾನವು ಸದ್ಯದಲ್ಲಿ ಬಾಗೇಪಲ್ಲಿ ತಾಲ್ಲೂಕಿಗೆ ಸೇರಿದ ಗೂಳೂರು ಗ್ರಾಮದ ಬಳಿಯಿರುತ್ತದೆಯೆಂದು ಹೇಳಿದೆಯಷ್ಟೆ! ಈ ಗ್ರಾಮವು ಹಿಂದೆ ಇತಿಹಾಸದಲ್ಲಿ ಪ್ರಸಿದ್ಧನಾದ ರಾಜೇಂದ್ರ ಚೋಳಭೂಪಾಲನ (೧೦೧೨—೧೦೪೫) ರಾಜಧಾನಿಯಾಗಿತ್ತೆಂಬುದಕ್ಕೆ ಅನೇಕ ಪ್ರಮಾಣಗಳಿವೆ. ಜಗದ್ಗುರು ಚಂದ್ರಗುಂಡ ದೇಶಿಕೇಂದ್ರ ಶಿವಾಚಾರ್ಯರ ದಿವ್ಯ ಮಂತ್ರೋಪದೇಶ ಪ್ರಭಾವದಿಂದ ಅವನ ಆಜನ್ಮಗತವಾಗಿ ಪೀಡಿಸುತ್ತಿದ್ದ ಬ್ರಹ್ಮಹತ್ಯಾಪಾತಕವು 'ಗುಯ್' ಎಂದು ಶಬ್ದ ಮಾಡುತ್ತ ಕರ್ಣದಿಂದ ಹೊರಹೊರಟಿತೆಂದೂ, ಅಂದಿನಿಂದ ಆ ನಗರಕ್ಕೆ 'ಗುಯಿಲೂರು' ಎಂಬಭಿಧಾನವು ಇಡಲ್ಪಟ್ಟಿತೆಂದೂ ಹೇಳುವ ಫುಲ್ಲಕವಿಯ ಅಭಿಪ್ರಾಯವನ್ನೇ 'ಅಪ್ಪಪ್ಪ' ಮತ್ತು 'ಇಡಗೂರು ರುದ್ರಕವಿ' ಗಳು ಸಮರ್ಥಿಸುತ್ತಾರೆ. ಅದು ರಾಜಧಾನಿಯಾಗಿದ್ದುದಕ್ಕೆ ಬೇಕಾದ ಅನೇಕ ಪಾಚೀನ ಶಿಲಾಶಿಲ್ಪ ಕೌಶಲವನ್ನು ಸೂಚಿಸುವ ಕಟ್ಟಡಗಳೂ, ಕುರುಹುಗಳೂ ಸಹ ಈಗಲೂ ಅಲ್ಲಿ ಉಪಲಬ್ಧವಾಗುತ್ತವೆ.

ಆ ಗ್ರಾಮಕ್ಕೆ ಸಮೀಪದಲ್ಲಿರುವ ದಿಣ್ಣೆಯಲ್ಲಿ ಒಂದು ಪ್ರಾಚೀನ ಸ್ತಂಭವಿದೆ. ಅದು ಚೋಳರಾಜನ ಗಜಶಾಲೆಯಾಗಿದ್ದು ಅದಕ್ಕೆ ಪಟ್ಟದಾನೆಯನ್ನು ಬಂಧಿಸುತ್ತಿದ್ದರೆಂಬ ಪ್ರತೀತಿಯಿದೆ. ಆ ಕಂಭದ ಬುಡವು ಸರಪಣಿಯಿಂದ ಸವೆದು ಕೃಶವಾಗಿರುವುದನ್ನು ನಾವಿಂದು ಕಾಣಬಹುದು. ಮತ್ತು ಈ 'ಗುಯಿಲೂರು' ಎಂಬುದು ಸು. ೧೫ನೆಯ ಶತ

ಮಾನದ ವರೆಗೂ ವಿಜಯನಗರದ ಪ್ರಸಿದ್ಧಿ ಸೀಮೆಯೆಂದು ಕರೆಯಲ್ಪಡುತ್ತಿದ್ದಿತೆಂಬುದಕ್ಕೆ ಕೆಲವು ಶಿಲಾಶಾಸನಗಳು ಉಪಲಬ್ಧವಾಗುತ್ತವೆ.

ಅನಂತಪುರಂ ಜಿಲ್ಲಾ ಹಿಂದೂಪುರದ ತಾಲ್ಲೂಕಿಗೆ ಸೇರಿದ ಗೊರವನಹಳ್ಳಿ ಗ್ರಾಮದ ಸಮೀಪದಲ್ಲಿ ಒಂದು ಮಹಾಲಕ್ಷ್ಮೀ ದೇವಾಲಯವಿದೆ. ಅದನ್ನು ಕಟ್ಟಿಸಿದವನು ಕಲಾ ಸೌಂದರ್ಯದಲ್ಲಿ ಜಗತ್ಪ್ರಸಿದ್ಧವಾದ ಲೇಪಾಕ್ಷಿ ಮತ್ತು ನಂದಿ ದೇವಾಲಯಗಳನ್ನು ಕಟ್ಟಿಸಿದ ಪೆನುಗೊಂಡೆಯ ವಿರುಪಣ್ಣನೆಂಬವನು. ಆ ಸಮಯದಲ್ಲಿ ವಿಜಯನಗರದ ಐತಿಹಾಸಿಕ ಪ್ರಭುವಾದ ಅಚ್ಯುತರಾಯನು ಪೆನುಗೊಂಡೆಯಲ್ಲಿದ್ದು ರಾಜ್ಯಭಾರ ಮಾಡುತ್ತಿದ್ದನೆಂದು ಈ ಶಿಲಾಲಿಪಿಯಿಂದ ವ್ಯಕ್ತವಾಗುತ್ತದೆ. ಆ ದೇವಾಲಯದ ಶಿಲಾಭಿತ್ತಿಯ ಮೇಲೆ ೭ ದೊಡ್ಡ ಶಾಸನಗಳಿವೆ. ಅವುಗಳ ಒಂದರ ಮಾದರಿಯು ಹೀಗಿದೆ.

"ಸ್ವಸ್ತಿ ಶ್ರೀ ವಿಜಯಾಭ್ಯುದಯ ಶಾಲಿವಾನಶಕ ವರ್ಷಂಗಳು ೧೪೫೮ (ಕ್ರಿ. ಶ. ೧೫೩೬) ನೆಯ ದುರ್ಮುಖಿ ಸಂ. ಮಾಘ ಶು. ೭ ಬುಧವಾರ ಪುಣ್ಯಕಾಲದಲ್ಲೂ ಶ್ರೀಮನ್ ಮಹಾರಾಜಾಧಿರಾಜ ರಾಜಪರಮೇಶ್ವರ ಶ್ರೀವೀರ ಪ್ರತಾಪ ಶ್ರೀ ಅಚ್ಯುತದೇವ ಮಹಾರಾಯರು ಪೃಥ್ವೀರಾಜ್ಯಂಗೈಯುತ್ತಿರಲು ಸಾಣಿ ಚನ್ನಪ್ಪನಾಯಕನ ಕುಮಾರ ... ... ನಾಯಕರು ಶ್ರೀ ಅಚ್ಯುತರಾಯ ಮಹಾರಾಯರು ತಮಗೆ ಮೊಗಣಿ ನಾಯಕತನಕೆ ಪಾಲಿಸಿದ ಪೆನುಗೊಂಡೆ ರಾಜ್ಯ ಗುಯ್ಯಲೂರು ಸೀಮೆವೊಳಗಣ ಅತ್ತಯ್ಯನ ಕೊಡಗೇನಹಳ್ಳಿ ಸ್ಥಳದ ...... " ಇತ್ಯಾದಿ ಆ ದೇವಾಲಯದ ಚಕ್ಕುಬಂದಿ, ದೇವಿಯ ಪೂಜಾದಿಗಳಿಗೆ ಕೊಟ್ಟಿರುವ ಮಾನ್ಯಗಳ ಉಲ್ಲೇಖವಿದೆ.

ಮತ್ತು ಅದರ ಸಮೀಪದಲ್ಲಿರುವ ಕೊಡಿಗೇನಹಳ್ಳಿ ಎಂಬ ಗ್ರಾಮದಲ್ಲಿನ ಮಾರುತಿಯ ದೇವಾಲಯದಲ್ಲಿ ಮೂರು ಶಾಸನಗಳಿವೆ. ಅವುಗಳಲ್ಲಿ ಒಂದು ಮಾತ್ರ ಶಾಲಿವಾಹನ ೧೨೫೦ (ಕ್ರಿ. ಶ. ೧೩೨೮) ರದು. ಅದರಲ್ಲಿಯೂ 'ಗುಯಲೂರು ನಾಡ ಸೀಮೆ' ಎಂಬ ಉಲ್ಲೇಖವಿದೆ. ಇದರಿಂದ ಗುಯಲೂರು ಸೀಮೆಯು ಸು. ೧೨-೧೩ನೆಯ ಶತಮಾನಗಳಿಂದಲೂ ಪ್ರಸಿದ್ಧಿವಡೆದಿತ್ತೆಂಬುದು ಸಿದ್ಧವಾಗುತ್ತದೆ. ಮತ್ತು ಈಗಗೂಳೂರಿನ ಸಮೀಪದಲ್ಲಿ ಒಂದು ಹೊಲದಲ್ಲಿ ಮುರಿದು ಬಿದ್ದಿರುವ

ಶಿಲಾಲಿಪಿಯಲ್ಲಿಯೂ ಸಹ ಈ ಹೆಸರಿನ ಉಲ್ಲೇಖವಿದ್ದು ಶಕೆ ೧೪೬೬ (೧೫೪೪) ವರ್ಷದ್ದಾಗಿದೆ. ಇದರಿಂದ ಆ ಗುಯಲೂರು ಇಂದಿನ ಗೂಳೂರಾಗಿದೆ ಎಂಬ ಶೋಧಕರ ಅಭಿಪ್ರಾಯವು ನಿಜವೆಂದು ಸ್ಪಷ್ಟವಾಗುತ್ತದೆ.

ಆದುದರಿಂದ ಗುಯಲೂರು ಸೀಮೆಯು ಅಚ್ಯುತರಾಯನ ಪ್ರಭುತ್ವಕ್ಕೆ ಒಳಪಟ್ಟಿದ್ದಿತೆಂಬುದು ದೃಢವಾಗುತ್ತದೆ. ಪೆನುಗೊಂಡೆಯಲ್ಲಿ ವಿಜಯನಗರದ ಸಂಸ್ಥಾಪಕನಾದ ಬುಕ್ಕರಾಯನು ಕಟ್ಟಿಸಿದ ಅರಮನೆಯು ಇಂದಿಗೂ ರಾರಾಜಿಸುತ್ತಿದೆಯೆಂದು ವಿದ್ವಾನ್ ಸೋಮನ್ನಪಂತಲು ಎಂ. ಎ. ಎಲ್. ಟಿ. § ಅವರು ಬರೆಯುತ್ತಾರೆ. ವಿಜಯನಗರದ ಅರಸರು ಪೆನುಗೊಂಡೆಯಲ್ಲಿ ಬಂದಿರುತ್ತಿದ್ದರೆಂಬುದಕ್ಕೆ ಬಲವಾದ ನಿದರ್ಶನಗಳಿವೆ. ಅಚ್ಯುತರಾಯನು ಅಲ್ಲಿಗೆ ಸಮೀಪದಲ್ಲಿರುವ ನಿಡುಮಾಮಿಡಿ ಎಂಬ ಮಹಾಕ್ಷೇತ್ರದಲ್ಲಿ ಮಹಿಮಾಶಾಲಿಗಳಾದ ಶ್ರೀ ಕರಿಬಸವ ದೇಶಿಕೇಂದ್ರರನ್ನು ಸಂದರ್ಶಿಸಿ ಗೌರವಿಸಿದುದಕ್ಕೆ ಚಾರಿತ್ರಕ ನಿದರ್ಶನಗಳಿವೆ. ಆದುದರಿಂದ ಪುಲ್ಲಕವಿಯು ಹೇಳುವ ಇಮ್ಮಡಿ ಕರಿಬಸವೇಂದ್ರರು ೧೫ನೆಯ ಶತಮಾನದ ಕಡೆಯ ಭಾಗದಲ್ಲಿದ್ದರೆಂದು ಹೇಳಬಹುದಾಗಿದೆ. ಆದುದರಿಂದಲೇ ಇವರ ಉಲ್ಲೇಖವನ್ನು ಮಾಡಿದ ವಿರೂಪಾಕ್ಷ ಪಂಡಿತಾರಾಧ್ಯನಿಗೆ ಈ ವಿಷಯವು ತಿಳಿದಿದ್ದಿತೆಂದು ಕಾಣುತ್ತದೆ.

ನಾವು ಐತಿಹಾಸಿಕ ದೃಷ್ಟಿಯಿಂದ ಪುಲ್ಲಕವಿಯ ಪಂಡಿತಾರಾಧ್ಯ ಚರಿತ್ರೆಯನ್ನು ಅವಲೋಕಿಸಿದಲ್ಲಿ ಅವನು ಕೊಟ್ಟಿರುವ ಈ ಪೀಠದ ಸ್ವಾಮಿಗಳ ಪರಂಪರೆಯಲ್ಲಿ ಅನೇಕ ಬಿರುಕುಗಳು ಕಂಡುಬರುತ್ತವೆ. ಅವನು ಚರಿತ್ರೆಯಲ್ಲಿ ಸೂಚಿಸದೆ ಇರುವ ಅನೇಕ ಮಹಿಮಾ ಮೂರ್ತಿಗಳು ಈ ಪೀಠಾಧೀಶರಾಗಿ ಈ ಮಠಕ್ಕೆ ಸೇರಿದ ಶಾಖಾಮಠಗಳಲ್ಲಿ ಲಿಂಗೈಕ್ಯರಾಗಿರುವುದು ಶೋಧನಗಳಿಂದ ಕಂಡುಬರುತ್ತಿರುವುದರಿಂದ ಅದು ಅಸಂಪೂರ್ಣವಾದುದೆಂದೂ ಮತ್ತು ಆತನು ಚಾರಿತ್ರಕ ವಿವೇಚನೆಯಿಲ್ಲದೆ ಎಲ್ಲ ಪುರಾಣಕಾರರಂತೆ ಸಾಮಾನ್ಯವಾಗಿ ವಾಙ್ಮೂಲಕವಾಗಿದ್ದ ಕೆಲವು ಸಂಗತಿಗಳನ್ನು ಬರೆದಿರಬೇಕೆಂದೂ ವ್ಯಕ್ತವಾಗುತ್ತದೆ. ಅಸ್ತು.

ಮೇಲ್ಕಂಡ ಗೊರವನಹಳ್ಳಿಯಲ್ಲಿ ಉಲ್ಲೇಖಿತನಾದ ವಿರುಪಣ್ಣನು ಈ ನಿಡುಮಾಮಿಡಿ ಪೀಠದ ಮುಖ್ಯ ಶಿಷ್ಯವೃಂದಕ್ಕೆ ಸೇರಿದ ಬಳ್ಳಾರಿಯ

---

§ ಅನಂತಪುರಂ ಜಿಲ್ಲಾ ಭೂಗೋಳ ಪು॥ ೧೯೩೮.

ವರ ಪಂಗಡದ ದೇಶಮುದ್ರೆ ಶೆಟ್ಟರ ವಂಶೀಯನಿರಬಹುದೆಂದು ಈ ಶಾಸನಗಳಲ್ಲಿ ಕಂಡುಬರುವ ವಿಶೇಷಣಗಳಿಂದ ಊಹಿಸಬಹುದಾಗಿದೆ.

೭ನೆಯ ಶಾಸನದಲ್ಲಿ " .. ವಿರುಪಣ್ಣಯ್ಯನವರ ತಮ್ಮಂದಿರು ವೀರಣ್ಣನಾಮಾಂಕರು, ಸ್ವಸ್ತಿ ಸಮಸ್ತ ನಿಜನಾಮಾಂಕ ಮಾಲಿಕಾ ಪ್ರಶಸ್ತ ಸಹಿತರಾದ ಶ್ರೀಮದ್ಗಣೇಶ್ವರ ಗೌರೀಶ್ವರ ದೇವರ ದಿವ್ಯಪಾದ ಪದ್ಮಾರಾಧಕರಾದ ಉಭಯ ನಾನಾ ದೇಶ ಅಯ್ಯಾಚಾರ ಮುಖ್ಯರಾದ...... ಸ್ವಾಮಿಗಳ ಕೈಯ್ಯಲ್ಲು......" ಎಂದಿದೆ.

೮ನೆಯ ಶಾಸನದಲ್ಲಿ "......ಅಚ್ಯುತರಾಯರು ರಾಜಂ ಗೈಯುತ್ತಿರಲು ಲೇಪಾಕ್ಷಿ ನಂದಿ ಲಕಿ ಶೆಟ್ಟಿ ಮುದ್ರೆ.........ವರಕುಮಾರ ವೀರಣ್ಣಯ್ಯ........." ಇತ್ಯಾದಿಯಾಗಿದೆ. ಕ್ರಿ. ಶ. ೧೭೭೧ ರಲ್ಲಿ ಶ್ರೀ ನಿಡುಮಾಮಿಡಿ ಪೀಠಾಧೀಶರಾಗಿದ್ದ ಮರಿಕರಿಬಸವರಾಜದೇಶಿಕೇಂದ್ರ ಸ್ವಾಮಿಗಳವರು ಕಂಚಿಯಲ್ಲಿರುವ ತಮ್ಮ ಮಠಕ್ಕೆ ದಯಮಾಡಿಸಿದ್ದಾಗ ವಾಲಾಜಾ ನಗರದ ಗುಂಡಪ್ಪಶೆಟ್ಟಿ ಕೊಮಾರ ಸಂಗಪ್ಪಶೆಟ್ಟಿ ಮೊದಲಾದವರು ಶ್ರೀ ಸ್ವಾಮಿಯವರಿಗೆ ಬರೆದುಕೊಟ್ಟ ತಾಳಪತ್ರದ ದಾನಶಾಸನದಲ್ಲಿ ಈ ಶಾಸನದಲ್ಲಿ ಕಾಣುವ ವಕ್ಕಣಿಕೆಯು ಅಕ್ಷರಶಃ ಕಂಡುಬರುತ್ತೆ. ಇದರಿಂದ ಈ ಪೆನುಗೊಂಡೆ ವಿರುಪಣ್ಣನೂ ಶ್ರೀ ಮಠದ ಮುಖ್ಯ ಶಿಷ್ಯನಾಗಿದ್ದು ಇಂತಹ ಮಹಾ ದೇವಾಲಯಗಳನ್ನು ಕಟ್ಟಿಸಿದ್ದನೆಂಬುದು ಆನಂದ ಜನಕವಾದ ವಿಷಯವಾಗಿದೆ.

ಕಡಪಾ ಡಿಸ್ಟ್ರಿಕ್ಟಿನಲ್ಲಿ ಜಗತ್ಪ್ರಸಿದ್ಧವಾದ ರಾಯಚೋಟಿ ವೀರಭದ್ರದೇವರ ಪ್ರತಿಷ್ಠೆಯನ್ನು ಈ ಪೀಠಾಧಿಕಾರಿಗಳಾಗಿದ್ದ ಚಂದ್ರಗುಂಡ ದೇಶಿಕೇಂದ್ರರು ಮಾಡಿಸಿದರೆಂಬುದಕ್ಕೆ ಬಲವಾದ ಆಧಾರಗಳಿವೆ. ಇವರು ದೇಶಸಂಚಾರದಲ್ಲಿರುವಾಗ್ಗೆ ಆ ಸ್ಥಳಕ್ಕೆ ದಯಮಾಡಿಸಿ ಅಲ್ಲಿ ತಮ್ಮ ಶಿಷ್ಯರಲ್ಲಗ್ರೇಸರನಾದ ಶ್ರೀ ವೀರಭದ್ರನ ಪ್ರತಿಷ್ಠೆಯನ್ನು ಮಾಡಿಸಿ ಒಂದು ಮಠವನ್ನು ಕಟ್ಟಿಸಿ ಇದರ ಮೇಲ್ವಿಚಾರಣೆಯನ್ನು ಓರ್ವ ಮೂರ್ತಿಗಳಿಗೆ ಒಪ್ಪಿಸಿರುವಂತೆ ಇತಿಹಾಸವಿದೆ. ಅದರಂತೆಯೇ ಈಗಲೂ ಆ ದೇವಾಲಯದ ಮೇಲ್ವಿಚಾರಣೆಯು ವೀರಶೈವ ಪಟ್ಟಾಧಿಕಾರಿಗಳ ಅಧೀನದಲ್ಲಿದ್ದುದರ ದಾಖಲೆಗಳು ಈ ನಿಡುಮಾಮಿಡಿ ಮಠದಲ್ಲಿರುತ್ತವೆ. ಈ ವಿಷಯವನ್ನು ಸಮರ್ಥಿಸುವ ಅನೇಕ ವಿಷಯಗಳನ್ನು ರಾ॥ ಸಾ॥ ಫ ಗು.

ಹಳಕಟ್ಟಿಯವರು ಪ್ರಕಟಿಸಿರುತ್ತಾರೆ. † ಆದ್ದರಿಂದ ಈ ದೇವಾಲಯ್ಯ ಮತ್ತು ಮಠ ಇವು ನಿಡುಮಾಮಿಡಿ ಮಠದ ಶಾಖಾಕ್ಕೆ ಸೇರಿದುದೆಂದು ಈ ಮುಂದಿನ ಉಲ್ಲೇಖದಿಂದ ಸಿದ್ಧವಾಗುತ್ತದೆ.

"ಈ ದೇವಸ್ಥಾನದ ಆಧಿಪತ್ಯವು ಓರ್ವ ವೀರಶೈವ ಮಠಾಧಿಕಾರಿಗಳ ಕಡೆಗೆ ಇದ್ದು ಅವರಿಗೆ ಸಪ್ಪಡಿ ಸಿದ್ಧಮಲ್ಲಿಕಾರ್ಜುನ ಸ್ವಾಮಿಗಳೆಂದು ಬಹು ಪುರಾತನಕಾಲದಿಂದಲೂ ಹೆಸರಿದ್ದುದು ಕಂಡುಬರುತ್ತದೆ. ಈ ಮಠಾಧೀಶ್ವರರಲ್ಲಿ ಅನೇಕರು ವಿದ್ವಾಂಸರೂ ಕವಿಗಳೂ ಆಗಿಹೋಗಿರುವರು. ಸಪ್ಪಡಿ ಸಿದ್ಧಮಲ್ಲಿಕಾರ್ಜುನ ಸ್ವಾಮಿ ಈ ಹೆಸರಿನ ಬದಲು ಸಪ್ಪಿ ಸಿದ್ಧಮಲ್ಲಿಕಾರ್ಜುನ ಸ್ವಾಮಿ ಅಥವಾ ಸೊಪ್ಪೆ ಸಿದ್ಧಮಲ್ಲಿಕಾರ್ಜುನ ಸ್ವಾಮಿ ಇಲ್ಲವೆ 'ಸೊಪ್ಪೆಯ ಸ್ವಾಮಿಗಳು' ಎಂದೂ ರೂಢಿಯಲ್ಲಿ ಜನರು ಅನ್ನುವುದುಂಟು. ಇವರಂತೆಯೇ ರಾಯಚೂಟಿ ದೇವರು 'ರಾಯಚೋಟಿ ಪಟ್ಟಾಧ್ಯಕ್ಷರು' ಎಂದೂ ಹೆಸರುಗಳಿವೆ. ಸೊಪ್ಪೆ ಸಿದ್ಧಮಲ್ಲಿಕಾರ್ಜುನ ಎಂಬ ಹೆಸರು ಇವರಿಗೆ ಏಕೆ ಬಂದಿತೆಂಬುದಕ್ಕೆ ಒಂದು ಆಖ್ಯಾಯಿಕೆಯಿದೆ. ಈ ದೇವಾಲಯದ ಮುಂದೆ ಒಂದು ಬಸವಣ್ಣನ ಗುಡಿಯಿದ್ದು ಅದರಲ್ಲಿ ಒಂದು ದೊಡ್ಡ ನೀರಿನ ದೋಣಿಯಿದೆ. ಈ ದೇವಾಲಯದ ವಿಷಯಕ್ಕೆ ಈ ಮಠದ ಗುರುಗಳಿಗೂ ವೈಷ್ಣವ ಬ್ರಾಹ್ಮಣ ಸ್ವಾಮಿಗಳಿಗೂ ವಾದ ನಡೆದು— 'ನೀವು ಈ ದೇವಸ್ಥಾನದ ನಿಜವಾದ ಗುರುಗಳಾಗಿದ್ದರೆ ಈ ಶಿಲಾಮೂರ್ತಿಯಾದ ಬಸವಣ್ಣನಿಗೆ ಸೊಪ್ಪೆ ಮತ್ತು ನೀರು ಕುಡಿಸಿದರೆ ನೀವೇ ಈ ದೇವಸ್ಥಾನಕ್ಕೆ ಬಾಧ್ಯರು'' ಎಂದು ಬ್ರಾಹ್ಮಣ ಸ್ವಾಮಿಗಳು ಪಣವನ್ನು ಹಾಕಿದರಂತೆ. ಇದನ್ನು ಸಿದ್ಧಮಾಡಲೋಸುಗ ಸ್ವಾಮಿಗಳು ತಮ್ಮ ಮಹಿಮಾ ಪ್ರಭಾವದಿಂದ ಆ ಬಸವನಿಗೆ ಜೀವ ಚೈತನ್ಯವಿತ್ತು ಸೊಪ್ಪೆ ನೀರುಗಳನ್ನುಣಿಸಿದರಂತೆ. ಅಂದಿನಿಂದ ಸ್ವಾಮಿಗಳಿಗೆ ಸೊಪ್ಪೆ ಸ್ವಾಮಿಗಳು ಎಂಬ ಅಭಿದಾನವು ಬಂದಿತಂತೆ.

ಈ ಮಠದ ಶಾಖಾಮಠವು ವಿಜಾಪುರದಲ್ಲೊಂದಿರುತ್ತದೆ. ಅದಕ್ಕೆ 'ಸೊಪ್ಪಯ್ಯನ ಮಠ'ವೆಂಬ ಹೆಸರು ಇಂದಿಗೂ ಇರುತ್ತದೆ. ಅಲ್ಲಿದ್ದ ಕಾಗದ ಪತ್ರಗಳನ್ನು ಶೋಧನೆ ಮಾಡಿದಾಗ ಈಗಿನ ಆ ಮಠದ ಯಜಮಾನರು ಅನೇಕ ಕಾಗದ ಪತ್ರಗಳನ್ನು ನನಗೆ ತೋರಿಸಿದರು. ಈ

---

† ಶಿವಾನುಭವ ೧೯೩೨ ಆಗಸ್ಟ.

ಮಠದ ಹಿಂದಿನವರೊಬ್ಬರು ರಾಚವಟ್ಟಿ ಮಠದ ಪಟ್ಟಾಧ್ಯಕ್ಷರಾಗಿದ್ದುದು ತೋರಿಬರುತ್ತದೆ. ಇವುಗಳಲ್ಲಿ ಪುಣೆ ಪೇಶ್ವೆ ಮಾಧವರಾವ ಬಲ್ಲಾಳನು ರಾಚವಟ್ಟಿ ಸ್ವಾಮಿಗಳಿಗೆ ಹಾಕಿಕೊಟ್ಟ ಮೂಲ ಸನ್ನದು ಇರುತ್ತದೆ. (ಅದು ಮರಾಠಿಯಲ್ಲಿದೆ. ಶಕೆ ೧೬೯೨) ಅಲ್ಲಿದ್ದ ಕೆಲವು ಪತ್ರಗಳ ವಕ್ಕಣಿಕೆಯ ಕ್ರಮವು ಹೀಗಿದೆ:—

"ರಾಜಾಧಿ ರಾಜಮಾನ್ಯ ರಾಜಶ್ರೀ ಆದಿ ಸಾಂಗೊಲಿ ಮಠ ವೊದಲಾದ ಸಮಸ್ತ ದೇಶದ ಮಠಕ್ಕೆ ಕರ್ತೃಗಳಾದ ರಾಯಚೋಟಿ ದೇವರ ಚರಣಾರವಿಂದಕ್ಕೆ" "ಪರತರ ಪರಂಜ್ಯೋತಿ ಪಂಡಿತಾರಾಧ್ಯಸ್ಥಲ ಪಟ್ಟದ ಕಂಥೆ ಪರಮಮೂರ್ತಿ ಆದಿ ಸಾಂಗೋಲಿ ಮಠ ಮುಂತಾದ ಸಮಸ್ತ ದೇಶದ ಮಠಕ್ಕೆ ಕರ್ತೃಗಳಾದ ರಾಯಚೋಟಿ ದೇವರ" "ವೇದ ವೇದಾಂತ ಸಿದ್ಧಾಂತ ಪುರಾಣಾಗಮೇತಿಹಾಸ ಶಾಸ್ತ್ರಪ್ರಸಿದ್ಧ ಶ್ರೀಮದ್ವೀರಶೈವ ಮತಸ್ಥಾಪನಾಚಾರ್ಯವರ್ಯ ಶ್ರೀಮನ್ನಿರಾಭಾರಿ ದೇಶಿಕವರೇಣ್ಯ ರಾಯಚೋಟಿ ಪಟ್ಟಾಧ್ಯಕ್ಷ ಸಪ್ಪಡಿ ಸಿದ್ಧಮಲ್ಲಿಕಾರ್ಜುನ ಸ್ವಾಮಿ ಸನ್ನಿಧಿಗೆ"

ರಾಚವಟ್ಟಿ ಸ್ವಾಮಿಗಳ ಶಿಖಾಮುದ್ರೆ (ಮೊಹರು) ಯ ವಿವರ:— ತಾಮ್ರದಿಂದ ಮಾಡಿದ್ದು .....ಎಡಮಗ್ಗಲು "ಶ್ರೀ ರಾಯಚೋಟಿ ಶ್ರೀವೀರ ಸೂರ್ಯ ಸಿಂಹಾಸನಕ್ಕೆ ಸಪ್ಪಿಸಿದ್ಧಮಲ್ಲಿಕಾರ್ಜುನ ಸ್ವಾಮಿಯವರು" ಎಂದಿದೆ.

ಈ ಸೊಪ್ಪೆಯ ಮಠದಲ್ಲಿನ ಕೈಬರಹದ ಪತ್ರಗಳನ್ನು ನೋಡಲಾಗಿ ಕೆಲವು ಪತ್ರಗಳು ವಿಜಯನಗರದಲ್ಲಿದ್ದ ಒಂದು ಮಠದಿಂದ ಬಂದಂತೆ ತೋರುತ್ತದೆ. ಬರೆದವರ ವಕ್ಕಣಿಕೆಯು ಹೀಗಿದೆ. "ಶ್ರೀಮನ್ ಚತುರ್ದಿಕ್ಕು ಐವತ್ತಾರು ದೇಶ ನವಖಂಡ ಪೃಥ್ವಿಯೊಳೊಪ್ಪುವ ಶ್ರೀ ಜಂಬೂದ್ವೀಪ ಸ್ವಯಂಭು ಭೂಕೈಲಾಸ ಪಂಪಾಕ್ಷೇತ್ರ ಮಾತಂಗಮಾನ್ಯವಂತ ಋಷ್ಯಶೃಂಗ ಕಿಷ್ಕಿಂಧ ಹೇಮಕೂಟ ಮಣಿಖಚಿತ ಕನಕಸಿಂಹಾಸನಾರೂಢರಾದ ಶ್ರೀ ಸಿಂಹಾಸನ ಶಿಖಾಮುದ್ರೆಗೆ ಕಾರಣಕರ್ತರಾದ ಭೂಸನೂರು ಚರಮೂರ್ತಿ ಹುಚ್ಚಪ್ಪಯ್ಯನವರು" ಎಂದಿದೆ. ಶಕ ವರ್ಷ ತೋರಿಸಲ್ಪಟ್ಟಿಲ್ಲ. ಕೆಲವು ಪತ್ರಗಳು ವಿಜಾಪುರದ ದೈವದವರಿಗೆ ಬರೆದಂತಿವೆ. ಅವುಗಳ ವಕ್ಕಣಿಕೆಯು ವಿಲಕ್ಷಣವಾಗಿದೆ. "... ಶೈವಮತ

ಸಜ್ಜನ ಸಿದ್ಧ ಶಿವಾಚಾರ ಸಂಪನ್ನ ಗುರುಲಿಂಗ ಜಂಗಮ ಪ್ರೇಮಿಗಳಾದ ..'' ಇತ್ಯಾದಿ.

ಇವೆಲ್ಲ ವಿಶೇಷಣಗಳೂ ಸಹ ಶ್ರೀ ನಿಡುಮಾಮಿಡಿ ಮಠಕ್ಕೆ ಸಂಬಂಧಿಸಿದ ವಿಚಾರಗಳನ್ನು ಸಮರ್ಥಿಸುತ್ತವೆ. ರಾಯಚೋಟಿ ಮಠಾಧ್ಯಕ್ಷರಿಗೆ ಬರೆದ ಒಕ್ಕಣಿಕೆಗಳಲ್ಲಿ ಕಂಡುಬರುವ 'ರಾಜಾಧಿರಾಜಮಾನ್ಯ' 'ಪರತರ ಪರಂಜ್ಯೋತಿ ಪಂಡಿತಾರಾಧ್ಯ' 'ವೇದವೇದಾಂತ .. ಶ್ರೀಮದ್ವೀರಶೈವ ಮತಸ್ಥಾಪನಾಚಾರ್ಯ... ಪಟ್ಟಾಧ್ಯಕ್ಷ' ತಾಮ್ರದ ಮೊಹರಿನಲ್ಲಿರುವ 'ಶ್ರೀವೀರ ಸೂರ್ಯ ಸಿಂಹಾಸನ' 'ಮಣಿಖಚಿತ ಕನಕ ಸಿಂಹಾಸನಾರೂಢ' ಇವೆಲ್ಲವೂ ಸಹ 'ಶ್ರೀ ನಿಡುಮಾಮಿಡ ಮಠಕ್ಕೆ ಅನಾದಿಯಿಂದ ನಡೆದುಬಂದಿರುವ "ಶ್ರೀಮದ್ವೀರಶೈವ ಮಹಾಮತ ಸ್ಥಾಪನಾಚಾರ್ಯವರ್ಯ ಶ್ರೀ ೧೦೮ ಜಗದ್ಗುರು ಪಂಡಿತಾರಾಧ್ಯ ಪರಂಪರಾಗತ ಶ್ರೀ ಗಿರಿರಾಜ ಮಣಿಖಚಿತ ಕನಕ ಗೋಕರ್ಣ ಸೂರ್ಯಸಿಂಹಾಸನಾಸೀನ ಪಟ್ಟಾಧ್ಯಕ್ಷ ಶ್ರೀ ನಿಡುಮಾಮಿಡ ಸ್ವಾಮಿಗಳು" ಎಂಬ ವಕ್ಕಣಿಕೆಯಲ್ಲಿರುವ ಅಭಿಪ್ರಾಯದ ಅಂಶಗಳನ್ನು ಅಕ್ಷರಶಃ ಅನುಕರಿಸುತ್ತವೆ. ಅಲ್ಲದೆ 'ಶೈವಮತ ಸಜ್ಜನ ಸಿದ್ಧ ಶಿವಾಚಾರ ..' ಎಂದು ಶಿಷ್ಯರಿಗೆ ಸಂಬೋಧಿಸಿರುವುದೂ ಯಥಾರ್ಥವಾದ ವಿಷಯವಾಗಿದೆ. ಏಕೆಂದರೆ ಶ್ರೀ ಚಂದ್ರಗುಂಡ ದೇಶಿಕೇಂದ್ರ ಸ್ವಾಮಿಗಳು ಕಾರ್ತವೀರ್ಯಾರ್ಜುನನ ವಂಶೀಯರಿಗೆ ಲಿಂಗಧಾರಣೆಯನ್ನು ಮಾಡಿ ಅವರಿಗೆ 'ಸಜ್ಜಶಿವಾಚಾರಸ್ಥ'ರೆಂದು ನಾಮಕರಣ ಮಾಡಿದ್ದಾರೆ. ಅದರಂತೆ ತದ್ವಂಶೀಯರಾದ ''ಸಜ್ಜನ ಶಿವಾಚಾರ' ಜನಾಂಗದವರು ಈ ಪೀಠದ ಮುಖ್ಯ ಶಿಷ್ಯರಾಗಿ ನಡೆದುಕೊಳ್ಳುತ್ತಿದ್ದಾರೆ. ಆದ್ದರಿಂದಲೇ ಈ ಪೀಠದ ಶಾಖಾಮಠಗಳಿಗೂ ಅವರು ಶಿಷ್ಯರಾಗಿ ನಡೆದುಕೊಳ್ಳುತ್ತಲೂ ಇದ್ದಾರೆ. ಈ ಜನಾಂಗದವರು ದಕ್ಷಿಣ ಭಾರತದ ಎಲ್ಲ ಭಾಗಗಳಲ್ಲಿಯೂ ಇದ್ದಾರೆ. ಮತ್ತು ಚಂದ್ರಗುಂಡ ದೇಶಿಕೇಂದ್ರರು ಮೇಲೆ ಉಲ್ಲೇಖಿತರಾದ ಸಪ್ಪಡಿ ಸಿದ್ಧಮಲ್ಲಿಕಾರ್ಜುನ ಸ್ವಾಮಿಗಳಿಗೆ ಆ ಮಠದ ಅಧಿಕಾರವನ್ನು ಕೊಟ್ಟಿದ್ದರೆಂಬುದು ಈ ವಿವೇಚನೆಯಿಂದಲೂ ಮತ್ತು ತಾಮ್ರದ ಮೊಹರಿನಲ್ಲಿ "ಶ್ರೀ ವೀರ ಸೂರ್ಯ ಸಿಂಹಾಸನಕ್ಕೆ ಸಪ್ಪಿ ಸಿದ್ಧಮಲ್ಲಿಕಾರ್ಜುನ ಸ್ವಾಮಿಯವರು" ಎಂದು ನಿಯಮ ಮಾಡಿದುದನ್ನೆ ಸೂಚಿಸುವುದರಿಂದಲೂ ಹಾಗೂ 'ಸೂರ್ಯ ಸಿಂಹಾಸನ' ಎಂಬ ಹೆಸರು ಪರ್ವತ ಸಿಂಹಾಸನಕ್ಕೆ ಮಾತ್ರ ವಾಡಿಕೆ

ಯಾಗಿಯೂ ಶಾಸ್ತ್ರಸಿದ್ಧವಾಗಿಯೂ ಇರುವುದರಿಂದ ಈ ಮಠವು ಶ್ರೀಶೈಲ ಪರ್ವತದ ಮೂಲ ಪೀಠವಾದ ಈ ನಿಡುಮಾಮಿಡಿ ಮಠಕ್ಕೆ ಸೇರಿದ ಶಾಖಾ ಮಠವೆಂಬುದರಲ್ಲಿ ಸಂದೇಹ ಬರಲಾರದು. ಈ ಮಠವು ಹೇಗೆ ಶ್ರೀಶೈಲ ಮೂಲ ಪೀಠವೆಂಬುದರ ಬಗ್ಗೆ ಐತಿಹಾಸಿಕ ಪ್ರಮಾಣಗಳಿಂದ ಕ್ರಮವಾಗಿ ಬರೆಯಲಾಗುವುದು. ಮತ್ತು ಈ ಮಠದ ಶಾಖಾಮಠಗಳು ಹೈದರಾಬಾದು ಮುಂತಾದ ಪ್ರಾಂತ್ಯಗಳಲ್ಲಿ ಹೇರಳವಾಗಿರುತ್ತವೆ. ಇದರ ಬಗ್ಗೆ ಅನೇಕ ಆಧಾರಗಳು ಈ ಮಠದಲ್ಲಿವೆ. ‘ಕೇಶಂಪ್ಯಾಟಿ, ನಿಡದಪಳ್ಳಿ, ಬಳಗಾನೂರು, ಗುಂಜದಹಳ್ಳಿ, ಬಿದರೆ, ಕೊಂಟಿ ಮುಂತಾದ ಪ್ರಸಿದ್ಧ ಮಠಗಳ ಮೂರ್ತಿಗಳಿಗೂ ಈ ಮಠಕ್ಕೂ ಅನೇಕ ವ್ಯವಹಾರಗಳು ಇಂದಿಗೂ ನಡೆಯುತ್ತಿವೆ. ಅವುಗಳ ವಿವೇಚನೆಯನ್ನು ಮುಂದುವರಿಸುವುದಾಗುತ್ತದೆ. (ಕ್ರಮಶಃ)

---

# ಶಿವದೀಕ್ಷೆಯೂ ಅಯ್ಯಾಚಾರವೂ.

(ಬರೆದವ:-- ಬಸವಪ್ಪ ಚೆನ್ನಪ್ಪ ಪಟ್ಟೇದ ವಂಟಮುರಿ.)

## ಕಂದಪದ್ಯ.

ಶಿವದೀಕ್ಷಾ ಸಂಸ್ಕಾರಂ ।
ಭವಪರಿಹಾರಕ್ಕೆ ವೀರಶೈವರಿಗೆಲ್ಲ-॥
ಗವಶ್ಯಮಿಹುದದನುಳಿಯು- ।
ಲ್ಕವಕಾಶಮುದಾವುದುದ್ಧರಣ ಕುಳಿದತ್ತೈ ॥೧॥

ಅಯ್ಯಾಚಾರಂ ತನ್ನೊಳ್ ।
ವೈಯ್ಯಕ್ತಿಕ ದೀಕ್ಷೆಯೊಡನೆ ಸಾಮಾಜಿಕದ ॥
ರಯ್ಯ ಸುಧಾರಣೆ ಹೊಣೆಯಿಂ ।
ದೊಯ್ಯನೆ ಬೆರೆದಯ್ಯನವರ ಶಿರದೊಳ್ ಮೆರೆಗುಂ ॥೨॥

ಶಿವದೀಕ್ಷೆಯೆ ತಾನಖಿಲರ ।
ಸವಬಾಧ್ಯತೆಯಪ್ಪ ಮೊದಲನೆಯ ಸಂಸ್ಕಾರಂ ॥
ಸವನಿಪುದು ಗುರುತೆ ಜೋಳಿಗೆ ।
ಶಿವದೀಕ್ಷೆಗದೆಂತು ಜನ್ಮಸಿದ್ಧತೆ ಯುಕ್ಕುಂ ॥೩॥

ನರಜನ್ಮೋದ್ಧಾರಕೆ ಗಡ ।
ತೊರೆಯುದ ಸಾಧನಮುದಾವದಾಗಿರ್ಪುದು ಮೇಣ್ ॥
ಪರರಾವ ಬಾಧ್ಯತೆಯುನಪ ।
ಹರಿಸದು ಕಾಣದುವೆ ಜನ್ಮಸಿದ್ಧಂ ಸೊತ್ತು ॥೪॥

ಗುರುತನ ಭಿಕ್ಷಾಟನಗಳ ।
ನೆರವೇತಕೆ ಬೇಕು ಸ್ವಂತದುದ್ಧಾರಕ್ಕೆ ॥
ಪರರುನ್ನತಿಗೆಯ್ವ ಮಹಾ- ।
ತ್ಮರಿಗವು ಸಾಧನಮೆನುತ್ತೆ ಗುರುಕರುಣಿಸಿಹಂ ॥೫॥

ಗದ್ದುಗೆಗೊಂಡುರೆ ಜನರಿಂ ।
ಪೊದ್ದುವುದುರುಮನ್ನಣೆಯನು ಭಿಕ್ಷಾಶನಮಂ ॥

ಮೆದ್ದತಿ ಸುಖದಿಂ ಜೀವಿಸಿ।
ನಿದ್ದಿಪುದಿವು ಜನ್ಮಸಿದ್ಧಮಪ್ಪುದಶಕ್ಯಂ ॥೬॥

ಗದ್ದುಗೆಯುಂ ಭೂಷಿಸಿ ಭ-।
ಕ್ತೋದ್ಧಾರಂಗೆಯ್ವುದಕಟ ಸಾಧಾರಣಮೇ? ॥
ಪೊದ್ದದೆ ಸಚ್ಛೀಲಜ್ಞಾ-।
ನೋದ್ದೀಪನವೆಂತು ತಾನೆ ಪೂಜ್ಯತೆ ಲಭಿಕುಂ? ॥೭॥

ಭಕ್ತರನೆಂತೈ ಮಾಳ್ಪುದು।
ಮುಕ್ತರ, ಪಾದೋದಕ ಪ್ರಸಾದಗಳೆರೆದು ॥
ಯುಕ್ತರ್ ಗುರುಪದಕೈಸಲೆ।
ಸಕ್ತರ್ ಲಿಂಗಾನುಭವದೊಳಾಗದಿರಲ್ ತಾವ್ ॥೮॥

ಸಿರಿವಂತನನಾರಿಸಿ ತಂ।
ದುರೆ ಭೂಷಿಸೆ ವಿಭವದಿಂದಮನುದಿನಮಿರ್ಪಂ ॥
ಸಿರಿಹೀನನ ಸಿಂಗರಿಸಲ್।
ಸಿರಿತನದಿಂ ಕೊನೆಯ ವರೆಗೆ ಬಾಳ್ವೆನದೆಂತೈ ॥೯॥

ವಿದ್ಯಾವಂತನ ಶೋಧಿಸಿ।
ಯಧ್ಯಕ್ಷನನೆಸಗೆ ಸಭೆಗೆ ಮಂಗಲಮಕ್ಕುಂ ॥
ವಿದ್ಯಾಹೀನಂಗೀಯಲ್।
ಬುದ್ಧ್ಯಾಸಂಕಟಕೆ ಕರೆಯನಿತ್ತಂತಲ್ತೇ? ॥೧೦॥

ಅದರಿಂದಯ್ಯಾಚಾರಕೆ।
ಸದಮಲ ವಟುಗಳನೆ ಶೋಧಿಸೀಕ್ಷಿಸಿಯೊಲವಂ ॥
ಮುದದಿಂ ಸಂಸ್ಕಾರವನವ-।
ರ್ಗೊದವಿಪುದೆ ಸುಯೋಗ್ಯಮುಭಯ ಹಿತಕರಮಕ್ಕುಂ ॥೧೧॥

ತಕ್ಕರಿಗಯ್ಯಾಚಾರಂ।
ಮಿಕ್ಕರಿಗಲ್ಲವರ್ಗೆ ಬರಿಯ ಶಿವದೀಕ್ಷೆಯೆ ತಾಂ ॥
ತಕ್ಕುದೆನೆಲ್ಕಯ್ಯನವರಿ।
ಗುಕ್ಕುವ ಸಿಟ್ಟೇಕೆ ಬರ್ಪುದಿದು ಸೋಜಿಗವೈ ॥೧೨॥

ನಿಮಗೇನಿದರಿಂ ಸಂಕಟ।
ಸಮನಿಪುದುರು ಪಾರಮಾರ್ಥಿಕಕೆ ತಡೆಯಹುದೇ? ॥

ಸಮಾಜದಿಂ ಶುಮ್ಮನೆ ಬಹ ।
ನಮನಂ ಭಿಕ್ಷಾಶನಂಗಗಳಿಗುಂ! ಮತ್ತೇಂ ? ॥೧೩॥

ಇತರರ್ ಕಾಯಕದಿಂದಂ ।
ಸತತಂ ಸುಖ ಜೀವನಂಬಡೆವುದಂ ಕಂಡುಂ ॥
ಮತಿಯುತರಹ ನೀವೇಕಿದ ।
ಕತಿ ಚಿಂತನಗೊಳ್ವುದಕಟ ನ್ಯಾಯಿಗಳಕ್ಕುಂ ॥೧೪॥

ಜೋಳಿಗೆಯುಪಯೋಗಂ ಮನೆ ।
ಹೋಳಿಗೆ ತುಪ್ಪದಲಿ ಬೀಳ್ವ ಮಟ್ಟಿಗೆಯಾಗಲ್ ॥
ಗೋಳಿಗೆ ಕಾರಣಮಕ್ಕುಂ ।
ಬಾಳುವೆಯೋ ವ್ಯರ್ಥವಾಗಿ ಬರ್ಕುಂ ನಿರಯಂ ॥೧೫॥

ಜನಪದದುದ್ಧಾರಕ್ಕಂ ।
ಧನವಾರ್ಜಿಸೆ ತೆತ್ತನಿರದೆ ನಿಮ್ಮಯ ಕರದೊಳ್ ॥
ಗುರುರಾಯಂ ಜೋಳಿಗೆಯಿಂ ।
ನೆರೆ ನೆನೆದೀಶ್ವರವನಾಂತು ವರ್ತಿಪುದದರೊಲ್ ॥೧೬॥

ಸಾಮಾನ್ಯ ವೀರಶೈವರು ।
ಸೋಮಂ ಕರುಣಿಸಿದ ಬುದ್ಧಿ ತನುಕರಣಗಳಿಂ ॥
ನೇಮದಿ ದುಡಿದು ಧನಾರ್ಜಿಸಿ ।
ಕ್ಷೇಮದಿನುಂಡುಟ್ಟು ದಾನಧರ್ಮವ ನೆಗಳ್ವರ್ ॥೧೭॥

ಇದರಿಂದಾವುದುಮಿಲ್ಲಂ ।
ಸದಮಲ ವೀರತ್ವಮಾದೊಡಂ ಲೌಕಿಕದ ॥
ಹದುಳದ ಮಾರ್ಗಂ ನೆಲಸಿ- ।
ರ್ಪುದು, ತಮ್ಮನಿತಕ್ಕೆ ತಾವೆ ರಕ್ಷಣಮಾಂಪರ್ ॥೧೮॥

ಪರಿಶೀಲಿಪುದಿನ್ನಯ್ಯನ ।
ವರ ಶಿಷ್ಟಾಚಾರಮಂ ಸಮಾಜ ಗುರುಗಳ ॥
ಪಿರಿಪಿರಿ ತಿರಿಪರ್ ಭಿಕ್ಷೆಗೆ ।
ಪರಿಪರಿಯಿಂ ಹಿಂಡಿ ಹಿಪ್ಪಿ ಮಾಳ್ಪರು ಜನಮಂ ॥೧೯॥

ನೆರವೇರಿಸದೆ ಸಮಾಜದೊ ।
ಳುರುತರದುನ್ನತಿಯನಾವುದಂ ತಿಲಮಾತ್ರಂ ॥

ನೆರೆ ಕಾಂಕ್ಷಿಸರು ಸಾಮ್ರಾಜ್ಯತೆ ।
ಪರಿತಪಿಸದೆ ಭೋಜನಾದಿ ಸುಖಗಳನೆಲ್ಲಂ ॥೨೦॥

ಅಳಿವುನದಿಂ ತಾವಾಗಿಯೆ ।
ಕಳಕೊಂಡರ್ ಮೋಕ್ಷಮನ್ನು ಸಾಮಾನ್ಯರಿಗಿಂ- ॥
ತಿಳಿದರಧೋಗತಿಗಕ್ಕಟ ।
ಸಲೆ ಕೆಟ್ಟರ್ಹೆಂದೆ ಜೀವನದ ಮುಬ್ಬಿನೊಳು ॥೨೧॥

ಇಲ್ಲೆನೆ ಬೆರಳಿಂ ತೋರಿಸ ।
ಲೆಲ್ಲಿಯೊ ವಾಸಿಪ್ಪರೊರ್ವರೊರ್ವರ್ ಮಹಿಮರ್ ॥
ಘಲ್ಲಿಪ ಕಳ್ತಲೆ ಪರಿವುದೆ? ।
ಅಲ್ಲೊಂದಿಲ್ಲೊಂದು ದೀಪಮಿನುಗಲು ಫಲಮೇಂ? ॥೨೨॥

ಕೃತಯುಗದೊಳ್ ನಾಲ್ಕಡಿಯಿಂ ।
ದ್ವಿತೀಯದೊಳ್ ತ್ರಿಪದದಿಂದಮೆಸೆಗುಂ ಧರ್ಮಂ ॥
ತೃತೀಯದೊಳ್ ದ್ವಿಚರಣದಿಂ ।
ಚತುರ್ಥಕಲಿಯುಗದೊಳೀಗಳೊಂದೆಯೆ ಕಾಲಿಂ ॥೨೩॥

ಕೃತದೊಳ್ ದಾನಿಗಳಿಲ್ಲರ್ ।
ದ್ವಿತೀಯದೊಳ್ ಕೊಂಬರಕಟ ಮನೆಗೆಯ್ದೀಯಲ್ ॥
ತೃತೀಯದೊಳ್ ಕುಡುವರ್ ಬರೆ ।
ಚತುರ್ಥದೊಳೀಯರೀಗಳೆಯ್ದಿರೆ ಮನೆಗಂ ॥೨೪॥

ಹತ್ತಿಗೆ ಬಂದಿಹುದೀಗಳ್ ।
ವ್ಯಕ್ತಿಗೆ ನೀಡುವುದು, ಸಾರ್ವಜನಿಕಕ್ಕಿರದೆ ॥
ತೆತ್ತುವ ಪರಿಪಾಠಂ ಬೀ- ।
ಳುತ್ತಿಹುದೀ ಕಲಿತಕಾಲದೊಳ್ ಸೋಜಿಗಮೋ? ॥೨೫॥

ಬಗೆವಂದಿದನೆಲ್ಲವನ- ।
ಯ್ಯಗಳೀಗೇಳ್ಚರವನಾಂತು ತಮ್ಮಯ ಕರ್ತ- ॥
ವ್ಯಗಳಂತುರಿಪದಿ ಕೆಯ್ಕೊಳಿ ।
ನಿಮಗೆ ಹಿತಕರಮಕ್ಕು ಭಕ್ತತತಿಗಂ ತಮಗಂ ॥೨೬॥

# ಹರಿಹರನ ಕಾವ್ಯಗಾನವಾದ ಆನಾಯನಾರನ ಮಂತ್ರಗಾನ!

(ಲೇಖಕರು:— ಶ್ರೀ ಚಂದ್ರಶೇಖರದೇವರು ಅಡ್ನೂರು- ಮುಕ್ಕಾಮು ಶ್ರೀ ಸರ್ಪಭೂಷಣಮಠ ಬೆಂಗಳೂರು ನಗರ.)

ದ್ರಾವಿಡ ದೇಶದಲ್ಲಿ ಪಲ್ಲವ, ಕೇರಳ (ಚೇರ), ಚೋಳ, ಪಾಂಡ್ಯ ಎಂಬೀ ರಾಜ್ಯಗಳು ಪ್ರಸಿದ್ಧವಾದವುಗಳು. ಅವುಗಳಲ್ಲಿ ಚೋಳ ರಾಜ್ಯವೂ ಒಂದು. ಅಲ್ಲಿಯ ಅರಸರು ಶೈವ ಮತಕ್ಕೆ ಹೆಚ್ಚು ಪ್ರೋತ್ಸಾಹ ಕೊಟ್ಟಿದ್ದರು. ಇದಕ್ಕೆ ಆ ದೇಶದಲ್ಲಿರುವ ಶೈವ ದೇವಾಲಯಗಳೂ ದೇಸೆವಡೆದ ೬೩ ಮಂದಿ ಪುರಾತನರೂ ಸಾಕ್ಷಿ. ಆದ್ದರಿಂದ ಆ ನಾಡು ಆಗ ಸಕಲ ಸಂಪದದ ಬೀಡಾಗಿತ್ತು. ಸೊಗಸಿನ ನಾಡಾಗಿತ್ತು.

ಅಂತಹ ಆ ಚೋಳ ನಾಡಿನಲ್ಲಿ ವನತರುಗಳಿಂದ ಹೂದೋಟಗಳಿಂದ ಶೋಭಿಸುವದೊಂದು ಮಂಗಳಪುರ. ಆ ಪುರದೊಳಗಿರುವ ನೋರ್ವ ಭಕ್ತ. ಆತನೇ ಆನಾಯನಾರ. ಆತನಿರವು ಅತಿ ವಿಚಿತ್ರ. ಆತನು ಯಾವಾಗಲೂ ಉಚ್ಚರಿಸುವದೊಂದೇ ಮಂತ್ರ. ಆತನ ಜನನವೂ ಅದರಿಂದಲೇ. ಆತನ ಪ್ರತಿಯೊಂದು ವ್ಯವಹಾರವೂ ಪಂಚಾಕ್ಷರಿಯಿಂದಲೆ.

ಇಂತು ಪಂಚಾಕ್ಷರಿಯೆ ಬಾಯ್ವಿಣ್ಣೆ ಎನೆ ಬೆಳೆದು ।
ಸಂತತಂ ಪಂಚಾಕ್ಷರಿಯೆ ನಾಲಿಗೆಗೆ ಸವಿದು ॥
ಉದಯ ಸಮಯದೊಳಿದ್ದು ದೇವಾಲಯಕೆ ಬಂದು ।
ಮದನಾರಿ ಶರಣೆನುತ ಕೆಯ್ಮುಗಿವುತುಂ ನಿಂದು ॥

ಹೀಗೆ ಮಂತ್ರವನುಚ್ಚರಿಸುತ್ತ ದೇವರೆದುರು ನಿಂದಿರಲು, ಆತನ ಮುಂದಿನ ಜೀವನೋಪಾಯಕ್ಕೆ ಊರ ಗೋಕುಲವನ್ನು ಕಾವುದೇ ಉಚಿತವೆಂಬ ಒಂದು ಉಪಾಯವು ತೋಚಿದೆ. ಅದನ್ನೇ ಆತನೂ ನಿರ್ಧರಿಸಿದ್ದಾನೆ. ಆತನ ಆ ನಿಶ್ಚಯವನ್ನು ಋಷಿಗಳೆಲ್ಲರೂ ತಿಳಿದು— ಕಾಡಿನಲ್ಲಿದ್ದು ಇಷ್ಟೊಂದು ಕಷ್ಟ ಪಡುವದಕ್ಕಿಂತಲೂ ಕೆಲವು ದಿನ ಗೋವುಗಳಿಗಾಗಿ ಆನಾಯನಾರನ ಅನುನಯದ ಪಾಲನೆಗೆ ಪಾತ್ರರಾ

ಗುವದು ಒಳಿತೆಂದು ಯೋಚಿಸಿ ಆ ಊರ ಗೋವುಗಳಿಗಾಗಿ ಹುಟ್ಟಿದ ರಂತೆ. ಅಂತಹ

ಊರದನವೆಲ್ಲವಂ ತಾನೊಂದುಗೂಡುತುಂ।
ದೂರಕ್ಕೆ ಪೊರಮಟ್ಟುಕೊಂಡು ಬಂದಾಡುತುಂ।
ಪರಿದು ಮೇಗೆಂದು ಹುಲ್ಲುಳ್ಳ ಹೊಲದೊಳ್ ಹೊಡೆದು।
ಪರಿಪರಿಯ ಹುಲ್ಲುದಂಡೆಗಳ ನಲವಿಂ ತಳಿದು॥

ಇನಿತು ಕರುಣೆಯಿಂದ ಗೋಕುಲವನ್ನು ಕಾಯಲಾರಂಭಿಸಿದ್ದಾನೆ. ಹೀಗೆ ಕಾಯುವದು ಶಿವಭಕ್ತರಿಗೆ ಉಚಿತವೆ? ಎಂದು ನೀವು ಕೇಳ ಬಹುದು. ಅದು ಉಚಿತವೆ. ಗೋವುಗಳೆಂದರೆ ಸಾಮಾನ್ಯವಲ್ಲ. ಅವು ಭಾರತೀಯರ ಪರಮದೈವವು. ಭಾರತಾಂಬೆಯ ಚೈತನ್ಯ ಸ್ವರೂಪು. ಪುಣ್ಯದ ಮೂರ್ತಿ. ಅಂತೆಯೇ ದಿಲೀಪನಂತಹ ರಾಜನು, ಕೃಷ್ಣನಂತಹ ದೇವರು ಅವನ್ನು ಕಾಯ್ದರು. ಸರ್ವಜ್ಞನಂತಹ ಗಂಡು ಗಲಿಯೂ ಸಹ—

"ತುರು ಕರಿಲ್ಲದ ಊರು ನರಕಭಾಜನಮಕ್ಕು।
ತುರು ಕರೂ ಉಂಟಾದರುಣಲುಂಟು ಲೋಕಕ್ಕೆ।
ತುರು ಕರೂ ದೈವ ಸರ್ವಜ್ಞ॥"

ಎಂದು ಭಾವುಕರಿಗೂ ವಿಜ್ಞಾನವಾದಿಗಳಿಗೂ ಒಪ್ಪುವಂತೆ ಒಂದೇ ಪದ್ಯ ದಲ್ಲಿ ಒಳ್ಳೇ ಹೃದಯಂಗಮವಾಗಿ ಹೇಳಿದ್ದಾನೆ. ಈಗಿನ ವಿಜ್ಞಾನವಾದ ದಂತೆ ಗೋವಿನ ಹಾಲಿಗೆ ಸರಿಬರುವ ಹಾಲು ಬೇರೊಂದಿಲ್ಲ. ಆ ಹಾಲಿ ನಿಂದ ಆಗುವ ಪ್ರಯೋಜನಗಳಿಗೆ ಮಿತಿಯಿಲ್ಲ. ಎಲ್ಲರೂ ಆಕಳ ಹಾಲನ್ನೇ ಕುಡಿಯಬೇಕೆಂದು ಬೋಧಿಸುತ್ತಿರುವದಾದರೂ ಇದೇ ದೃಷ್ಟಿಯಿಂದ. ಈ ಎಲ್ಲ ವಿಚಾರವನ್ನು ತಿಳದೇ ಮೊದಲಿನವರು ಆಕಳ ಹಾಲಿನ ನೇಮ ವನ್ನಿಟ್ಟುಕೊಳ್ಳುತ್ತಿದ್ದರು. ಆಕಳು ಪೂಜ್ಯವೆಂದು ಭಾವಿಸುತ್ತಿದ್ದರು. ಆಕಳಗಳಿಂದಾಗುವ ಪ್ರಯೋಜನಗಳನ್ನು ಮೈಲಾರ ಬಸಪ್ಪನವರು ತಮ್ಮ ಶಿವಾನುಭವ ದರ್ಪಣದಲ್ಲಿ—

ಗೋವಿಂದನಾದಿ ಗೋವಿಂದ ನಮ್ಮ। ಗೋವಿಂದನಾದಪಾವನ
ಪಾಂಡುರಂಗ ಪ॥
ಶ್ರೀ ವಿಭೂತಿಯು ಪಂಚಗೋವಿಂದ। ವೀರಶೈವಾಗಮೋಕ್ತವು
ಗೋವಿಂದ॥
ಜೀವ ಪಂಚಾಮೃತಗೋವಿಂದ। ಜಗಜ್ಜೀವ ಸಂತೃಪ್ತಿ ಗೋವಿಂದ ॥೧॥

ಹವ್ಯಕವ್ಯಗಳೆಲ್ಲ ಗೋವಿಂದ । ಷಡುಗವ್ಯಸಮ್ಮಾರ್ಜನೆ ಗೋವಿಂದ ||
ದ್ರವ್ಯಸಂಗಳಿಕೆಯು ಗೋವಿಂದ । ಮಹದಿವ್ಯಪ್ರಕಾಶವು ಗೋವಿಂದ||೨||
ಗೋತ್ರ ಹೋತ್ರವು ನಮ್ಮ ಗೋವಿಂದ । ಪುಣ್ಯಕ್ಷೇತ್ರಯಾತ್ರೆಗಳೆಲ್ಲ
ಗೋವಿಂದ ||
ಧಾತ್ರಿ ಪಾವನ ಗಾತ್ರ ಗೋವಿಂದ । ಸುಪವಿತ್ರಚರಿತ್ರವು ಗೋವಿಂದ||೩||
ಅಭವ ವಾಹನವು ತಾ ಗೋವಿಂದ । ಬಹು ಶುಭಮಂಗಳೆಯ ಜಾತ
ಗೋವಿಂದ ।
ವಿಬುಧಗಮನಸ್ತೀತ ಗೋವಿಂದ । ಕೃಷ್ಣನುಭಯಾಂಬಕ ವ್ರತ
ಗೋವಿಂದ ||೪||
ಮೂರು ತಾಪವಿನಾಶ ಗೋವಿಂದ । ಸುವಿಚಾರಮೋಕ್ಷ ವಿಲಾಸ
ಗೋವಿಂದ ।
ಸಾರಸುಖವಿಶೇಷಗೋವಿಂದ । ಚನ್ನವೀರಮುದ್ಗುರುವಾಸ
ಗೋವಿಂದ ||೫||

ಎಂದು ಸಾರಭೂತನಾಗಿ ಸಂಗ್ರಹರೂಪಾಗಿ ಹಾಡಿದ್ದಾರೆ. ಇವೆಲ್ಲ ಕಾರಣಗಳಿಂದ ತುರುಹಿಂಡನ್ನು ರಕ್ಷಣೆ ಮಾಡುವುದು ವಿಹಿತವಾದುದು. ಅದರಂತೆ ಅನಾಯನಾರನು ಹಸುಗಳನ್ನು ಹಚ್ಚಗೆ ಹಸುರಾದ ಹುಲ್ಲುಳ್ಳ ಪ್ರದೇಶದಲ್ಲಿ ಮೇಯಲು ಬಿಟ್ಟು ತಾನು ತಂದ ಕಟ್ಟೋಗರವನುಂಡು † ಕಾವೇರಿಯಲ್ಲಿ ಕೈತೊಳೆದು ಬಂದೊಂದು ತಣ್ಣೆಳಲುಳ್ಳ ಹೆಮ್ಮರದ ಬುಡದಲ್ಲಿ ತಪ್ಪಗಾಲಿಕ್ಕಿ ತ್ರಿಭಂಗಿಯಲ್ಲಿ ನಿಂದು, ಅಂದವಾದೊಂದು ಪೊಸ ಕೊಳಲ ತಂದು ಅದರಲ್ಲಿ ಪಂಚಾಕ್ಷರಿಯನ್ನೆ ಪಂಚಸ್ವರಗಳನ್ನು ಮಾಡಿ ಪಂಚವಕ್ತ್ರನ ಕಿವಿಗೆ ಸವಿಯಹುಗುವಂತೆ ಬಾಜಿಸಿದ ಮಂತ್ರಗಾನದ ಮಾಧುರ್ಯವನ್ನು ಹರಿಹರದೇವನ ಕಾವ್ಯ ಗಾನದಲ್ಲಿ ಕೇಳೋಣ ಬನ್ನಿ.

ಅಧರದೊಳ್ ತಂವಿಳುಪಿವಂ ಕೊಳಲನೊಪ್ಪದಿಂ ।
ಮಧುರಾಕ್ಷರಂಗಳಂ ಸವಿಪ ಸಮರಾಗದಿಂ ||
ಭಕ್ತಿಯಿಂ ಮರೆದೂದುತಲೆ ಸುಗತಿಗಳುಮಾಗೆ ।
ಯುಕ್ತಿಯಿಂ ಭರತಶಾಸ್ತ್ರಕ್ಕೆ ದಿಕ್ಕುಗಳಾಗೆ ||

† ಕಾವೇರಿ ತೀರದಲ್ಲಿ ಒಂದು ದೇವಾಲಯವಿತ್ತೆಂದೂ ಅಲ್ಲಿಗೆ ಬಂದು ಆ ಶಿವಲಿಂಗ ಪೂಜೆಯ ಮಾಡಿ ತಂದ ಬುತ್ತಿಯ ನೈವೇದ್ಯವ ಮಾಡಿ ಆಮೇಲೆ ತಾನುಣ್ಣುತ್ತಿದ್ದನೆಂದೂ ಕವಿಚಕ್ರವರ್ತಿಯಾದ ಸುಗಂಗಕವಿಯು ವರ್ಣಿಸುತ್ತಾನೆ.

ಕೊಳಲನ್ನು ಕೆಳದುಟಿಯಲ್ಲಿಳುವಿ ಪಂಚಾಕ್ಷರಿಯ ಮಧುರಾಕ್ಷರಗಳ ಮಾಧುರ್ಯವನ್ನು ಸವಿವ ಇಚ್ಛೆಯಿಂದ ಭಕ್ತಿ ಉತ್ಕಟವಾಗಿ ಐದಕ್ಕರ ಗಳನ್ನೆ ಐದು ಸ್ವರಗಳನ್ನು ಮಾಡಿ ಉತ್ಸಾಹದಿಂದ ಊದುತ್ತಿರಲು ಸಂಗೀತ ಶಾಸ್ತ್ರದಲ್ಲಿ ಹೇಳುವ ಸುಗತಿ, ಸರಸಗತಿ, ಸಾಂದ್ರಗತಿಗಳೂ ನುಣ್ಗತಿ,ನವೀನಗತಿಗಳೂ, ಮಧುರಗತಿ, ಮನೋಹರಗತಿಗಳೂ, ಜಣ್ಗತಿ, ಗಂಭೀರಗತಿಗಳೂ ಉಂಟಾಗಿವೆ. ಸಪ್ತಸ್ವರದಿಂದ ಇವನ್ನೆಲ್ಲ ಹುಟ್ಟಿ ಸುವ ಭರತ ಶಾಸ್ತ್ರಕ್ಕೆ ಅಲ್ಲಿ ನಿಲ್ಲಲು ನಾಚಿಕೆಯಂತೆ.

ಇಲ್ಲಿ ಭರತ ಶಾಸ್ತ್ರದ ವಿಚಾರವನ್ನು ಕೊಂಚ ಮಾಡುವದು ಸಯುಕ್ತಿಕವಾಗಿದೆ. ಭರತಶಾಸ್ತ್ರ-ಭರತಮುನಿ, ಭರತಖಂಡ-ಭರತರಾಜ ಎಂಬೀ ಪದಗಳು ನಮಗೆ ಸಿಕ್ಕುತ್ತವೆ. ಇವುಗಳಲ್ಲಿ ಭರತಮುನಿಯ ಹೆಸರೇ ಭರತಶಾಸ್ತ್ರಕ್ಕೆ ಬಂದಿತೆಂತಲೂ ಭರತರಾಜನ ಹೆಸರೇ ಭರತಖಂಡಕ್ಕೆ ಬಂದಿತೆಂತಲೂ ಹಲವರು ಹೇಳುವರು. ಇದು ಅಷ್ಟು ಸಮಂಜಸವಾಗದು. ಏಕಂದರೆ—ಹರದತ್ತ ಶಿವಾಚಾರ್ಯರು—"ತ್ವಾಮಾಮನಂತಿ ಭರತಂ ನಟನಾಭಿಯೋಗಾತ್" ಎಂಬ ಶ್ಲೋಕದಲ್ಲಿ ನಾಟ್ಯನಿಮಿತ್ತ ದಿಂದ ಶಿವನಿಗೆ ಭರತನೆಂದು ಮೊದಲೆ ಹೆಸರು ಬಂದಿದೆ ಎಂದು ಹೇಳುತ್ತಾರೆ. ಶಿವನು ನಾಟ್ಯವನ್ನು ಮಾಡಿರುವನೆಂದು ಹೇಳಲು ಹೇರಳ ಪ್ರಮಾಣಗಳುಂಟು. ಉದಾಹರಣೆಗಾಗಿ— ಕಾಳಿದಾಸನು ಮಾಲವಿಕಾಗ್ನಿ ಮಿತ್ರನಾಟಕದಲ್ಲಿ—"....ರುದ್ರೇಣೇದಮುಮಾಕೃತವ್ಯತಿಕರೇ ಸ್ವಾಂಗೇ ವಿಭಕ್ತಂ ದ್ವಿಧಾ...." ಅಂದರೆ ಅರ್ಧನಾರೀಶ್ವರನಾದ ಶಿವನು ಸ್ವಾಂಗ ದಲ್ಲಿ ನಾಟ್ಯವನ್ನು ಲಾಸ್ಯ-ತಾಂಡವವೆಂಬದಾಗಿ ಎರಡು ವಿಧ ಮಾಡಿದ ನೆಂದು ಹೇಳಿಕೊಂಡಿರುವನು. ಮತ್ತು ಸಂಗೀತ ವಿದ್ಯಾವಿನೋದದಲ್ಲಿ"..... ವಿಭುರಾದಿ ನಟಃ ಸುರಾಣಾಂ" ಅಂದರೆ ದೇವತೆಗಳಿಗೆಲ್ಲ ಶಿವನು ಆದಿ ನಟನೆಂದೆ ಸಂಬೋಧಿಸುತ್ತಾನೆ. ಇದೂ ಅಲ್ಲದೆ ನಂದಿಕೇಶ್ವರ ಶಿವಾ ಚಾರ್ಯರು ತಮ್ಮ ಕಾಶಿಕಾರಂಭದಲ್ಲಿ—"ನೃತ್ತಾವಸಾನೇ ನಟರಾಜ ರಾಜೋನನಾದಢಕ್ಕಾಂ ನವಪಂಚವಾರಂ" ಎಂದು ವರ್ಣಿಸಿದ್ದಾನೆ. ಅಮರಸಿಂಹನು 'ಮಹಾನಟ' ನೆಂದು ಕರೆದಿದ್ದಾನೆ. ಆದ್ದರಿಂದ ಭರ ತನು (ಶಿವನು) ನಾಟ್ಯ ಮಾಡಿದ ಭೂಮಿಗೆ ಭರತಖಂಡವೆಂತಲೂ ಆದಿನಟ ಮಹಾನಟ ಶಿವನಾಗಿರುವದರಿಂದ ನಾಟ್ಯಶಾಸ್ತ್ರಕ್ಕೆ ಭರತಶಾಸ್ತ್ರ ವೆಂತಲೂ ಬಂದಿತೆಂದು ಹೇಳಿದರೆ ಹೆಚ್ಚು ಸಮಂಜಸವಾಗುವದು.

ಹಾಗು ಶಿವನ ಹೆಸರುಗಳಾದ ಶಿವ, ಶಂಕರ, ಚಂದ್ರಶೇಖರ, ನೀಲಕಂಠ ಎಂಬ ಹೆಸರುಗಳನ್ನೇ ಜನರಿಗಿಡುವಂತೆ ಭರತರಾಜನಿಗೂ ಭರತಮುನಿಗೂ ಇಟ್ಟಿರಲಿಕ್ಕೆ ಸಾಕು.

ಹೀಗೆ ಭರತಶಾಸ್ತ್ರಕ್ಕೆ ಆದಿಕರ್ತೃವಾದ' ಶಿವನೇ ಆನಾಯುನಾರನ ಗಾನಕ್ಕೆ ಮನ ಸೋತಿರುವಾಗ ಭರತಶಾಸ್ತ್ರದ ಅವಸ್ಥೆಯನ್ನೇನು ಹೇಳಬೇಕು? ಈ ತೆರನಾಗಿ ಊದಲಾರಂಭಿಸಿದ ಆತನ ಕೊಳಲಗಾನದಲ್ಲಿ ಯಾವ ಶ್ರುತಿಲಯಕ್ಕೆ ಕೊರತೆಯಿದ್ದಿಲ್ಲ. ಯಾವ ತಾಳಮೇಳಕ್ಕೆ ಕಡಿಮೆಯಿದ್ದಿಲ್ಲ. ಯಾವ ಅಣಕ ಗಮಕಗಳಿಗೆ ಹಿಂಜರಿಯುತ್ತಿರಲಿಲ್ಲ. ಯಾವ ನಯ ಸೊಂಪು ಇಂಪುಗಳಿಗೆ ಹೊರಗಾಗಿರಲಿಲ್ಲ. ಹೆಚ್ಚೇನು? ಆತನ ಆ ಗಾನದಲ್ಲಿ ಇವೆಲ್ಲವೂ ಒಡಮೂಡುತ್ತಿದ್ದವು.

ಹೊಳೆವ ಹಣೆಯೊಳ್ ಬೆರಸಿ ವಹಣೆ ತಿರುವಿನೊಳಳಿಯೆ। ಸುಳಿಸುಳಿದು
ತಿರುಪು ಪೊಂಪುಳಿಯೊಳಡಗುತೆ ಹೊಳೆಯೆ ॥

ಬಣಿತೆ ಗಮಕಮನುಗುಳೆ ಗಮಕವರಿದಂತೊಡರೆ । ಅಣಕನಯನ
ದೊಳ್ಳೊಳೆಯೆ ನಯವಿಂಪಿನೊಳಗಡರೆ ||

ಅವು ಬೆಡಂಗಂಬೆರೆಯೆ ಬೆಡಗುಕಾಲಂ ಕೊನರೆ। ನವರೀತಿಯೊಡ್ಡಯಿಸೆ
ಯೊಡ್ಡವಣೆ ಮೇಲಡರೆ ||

ಪೊಸದೇಶಿ ಪಜ್ಜಳಿಸೆ ಪಜ್ಜಳಂ ಪಲ್ಲವಿಸೆ । ಮಿಸುಕುತಿರಲನುಜಾಯಿ
ಹೂಂಕಾರ ಒತ್ತರಿಸೆ ॥

ನುಣ್ಪು ನುಸುಳದೆ ಸೊಕ್ಕೈಕಮ್ಮವಣೆಗೆಡೆಗುಡಲು । ತಣ್ಪು ಸೊಂಪಿ
ನೊಳೊಂದಿ ಕಾಳಾಸಕೆಡೆಗುಡಲು ॥

ಕಾಂತಿಕವಲೇರಿ ಸರಿಯೊಳ್ಪಂಜಳಮನುಗುಳೆ । ಶಾಂತಿರಾಗಂ ರಸದ
ಸೋಪಾನದೊಳ್ನಿಗಳೆ ॥

ರಾಗರಸದೊಳಗೆ ಪಂಚಾಕ್ಷರಿಗಳೇಳುತಿರೆ। ನಾಗಾಭರಣನೆಲ್ಲವಂ
ಒರೆದು ಕೇಳುತಿರೆ ।

ವದನದೊಳ್ ವೇಣುವಿನೊಳ್ ಐವಕ್ಕರಂಗಳಿರೆ । ಹೃದಯದೊಳ
ಗುಸುರೊಳಗೆ ಶಂಕರಂ ಸಿಲ್ಕುತಿರೆ ॥

ಪಂಚಮುಖದೊಳಗೆಲ್ಲ ಕೊಳವನಿತೊಳಗುತಿರೆ । ಪಂಚಾಕ್ಷರಿಗೆ ನಾದ
ಮೂರ್ತಿಮಿಗೆ ಸೋಲುತಿರೆ ॥

ಆಶ್ಚರ್ಯ! ಆನಂದ!! ಆ ಆನಾಯನಾರನ ಕೈಬೆರಳುಗಳು ಆ ಕೊಳಲ ಮೇಲೆ ಕುಣಿಯುವಾಗ ಇನಿತೊಂದು ಮಂಜುಳವಾಗಿ ಮನೋಹರವಾಗಿ ರಾಗ ರಸವು ಹರಿಯುತೊಡಗಿವೆ. ಆ ಹರಿವ ರಸದಲ್ಲಿ ಐದಕ್ಕರಗಳು ಹೊರಹೊಮ್ಮುತ್ತೊಡಗಿವೆ. ಹೊಮ್ಮುವ ಮಂತ್ರದಲ್ಲಿ ಶಿವನು ಸಿಲ್ಕಿದ್ದಾನೆ. ನಾದ ಮೂರ್ತಿಯಾದ ನಟರಾಜ ರಾಜನಾದ ಶಿವನು ಆತನ ಕೈಬೆರಳ ಕುಣಿತಕ್ಕೆ ರಾಗರಂಜನೆಗೆ ಮಂತ್ರ ಪ್ರೇಮಕ್ಕೆ ಮನಸೋತು ನಿಂತಿದ್ದಾನೆ ಆ ಆನಾಯನಾರನ ಕೊಳಲಕ್ಕೆ ಸರಸತಿಯವೀಣೆ, ತುಂಬುರನ ತಂಬೂರಿ, ಕೃಷ್ಣನ ಕೊಳಲು, ಮೃಡನ ಡಮರುಗಗಳೂ ಸಹ ನಾಚಿ ನಿಂತಿವೆ. ಸಾಮವೇದವೂ ಶರಣು ಬರುವಂತಾಗಿದೆ. ಆತನ ಆ ಗಾನದ ಇನಿದನಿಯು ಶಂಕರನ ಐದು ಮೊಗಗಳಲ್ಲಿಯೂ ತುಂಬಿ, ಹತ್ತು ತುಟಿಗಳನ್ನೂ ತೆರಿಸಿ ಬಿಟ್ಟಿದೆ. ಹೃದಯವನ್ನು ಅರಳಿಸಿ ಬಿಟ್ಟಿದೆ ಭಾವವನ್ನು ತಲ್ಲೀನ ಮಾಡಿ ಬಿಟ್ಟಿದೆ. ಸಾಕ್ಷಾತ್ ಪರಮಾತ್ಮನಿಗೇನೆ ಇನಿತೊಂದವಸ್ಥೆಯನ್ನು ತಂದು ಕೊಡುವಂತೆ ಆನಾಯನಾರನು —

ಬಾರಿಸುವಕೊಳಲದನಿಗೆಯ್ತಂದು ಗೋಕುಲಂ। ಮೇರೆಗೆಟ್ಟಿರಿವುಗೆಟ್ಟಂ<br>ಸಲೆಸುರಾಕುಲಂ ॥<br>
ಎಳಲ್ವಕಿವಿ ಮುಗಿದ ಕಣ್ಣೆತ್ತಿದ ಮುಖಂ ಮೆರೆಯೆ। ಇಳಿದ ಕಟವಾಯ<br>ಜೊಸನೊರೆಗರುಂಕೆಗಳೆಸೆಯೆ ॥<br>
ಜೊಮ್ಮಿಸುತೆ ಜೋಲುತ್ತೆಯೊಂದನೊಂದಂ ನೆಮ್ಮಿ। ಸುಮ್ಮಾನವೇರಿ<br>ಮೆಯ್ಮಿಮಿರಿ ಸುಖಮಂ ಹೊಮ್ಮಿ॥<br>
ಆನಾಯನಾರ ಹೆಗಲೊಳ್ಮೃಗವನಿಟ್ಟಕೆಲ। ಆನಾಯನಾರತೋ<br>ಳೊಳ್ಮೃಗವನಿಟ್ಟ ಕೆಲ ॥<br>
ಇಂತು ಗೋಕುಲವೆಲ್ಲ ಮರೆದು ಕೇಳುತ್ತಮಿರೆ। ಮುಂತೆ ಬಗೆಗೆಟ್ಟು<br>ಪಗೆಗೆಟ್ಟ ಮೃಗನಿಚಯಮಿರೆ ॥<br>
ಪುಲಿಯಕೊರಲೊಳುಕೊಟ್ಟನಿಟ್ಟ ಕಣ್ಣಂ ಮುಚ್ಚಿ। ನಲಿದು ಕೇಳ್ಪುವು<br>ಮರೆದು ಪುಲ್ಲೆದನಿಯಂ ಮೆಚ್ಚಿ ॥<br>
ಮುಂಗುಲಿಯ ಮೇಲೆ ಹೆಡೆಯಿಟ್ಟ ಕೇಳ್ಪಹಿಗಳಿಂ। ಸಂಗಡಿಸುವಹಿಯ<br>ಹೆಡೆಗೆಡೆಗುಡುವ ಶಿಖಿಗಳಿಂ ॥<br>
ಗಿಳಿಯಂಚೆ ಕೋಕಿಲೆಗಳೆಳಸಿ ಕೇಳ್ಪವುನೋಡ। ಅಳಿಕುಳಂ ತರು<br>ಗಿರಿಗಳೆಳಸಿ ಕೇಳ್ಪವು ನೋಡ॥<br>
ಇಂತು ಸಚರಾಚರಂಗಳ್ಮರೆಯೆ ಕೊಳಲೂದಿ। ಸಂತತಂ ಪುಳಕದಿಂ<br>ಪಲ್ಲವಿಸಿ ಕೊಳಲೂದಿ ॥

ಹೀಗೆ ಒಗ್ಗುವಂತೆ ಎಲ್ಲರ ಎದೆದಾಣಗಳಲ್ಲಿ ರಸ ಭಾವಗಳನ್ನು ಒಡಮೂಡಿಸುವದೇ ಸಂಗೀತದ ಮುಖ್ಯ ಧ್ಯೇಯ. ಕಾವ್ಯಕ್ಕೆ ಛಂದಸ್ಸು ಹೇಗೋ ಸಂಗೀತಕ್ಕೆ ತಾಳ-ಲಯಗಳು ಹಾಗೆ. ಉಳಿದ ಕಲೆಗಳು ಹಲವರನ್ನು ಮಾತ್ರ ಆಕರ್ಷಿಸುತ್ತಿದ್ದರೆ ಸಂಗೀತವು ಮಾತ್ರ ಸಕಲರನ್ನು ಮೋಹಿಸುತ್ತದೆ. ಚರಾಚರ ಪ್ರಾಣಿಗಳನ್ನೂ ಆಕರ್ಷಿಸುತ್ತದೆ. ಜಗತ್ತಿನಲ್ಲಿ ಸಂಗೀತದ ರುಚಿಗೆ ಇಂಪಿಗೆ ಸೋಲದ ಶಿಶುವಿಲ್ಲ, ಪಶುವಿಲ್ಲ. ಅದರಲ್ಲಿಯೂ ಭರತ ಭೂಮಿಯಲ್ಲಿ ವಿಶೇಷ. ಇವರಿಗೂ ಸಂಗಿತಕ್ಕೂ ಒಂದು ಬಿಡಲಾರದಂಥ ಸಂಬಂಧವಿದೆ ಇವರ ಪ್ರತಿಯೊಂದು ಕಾರ್ಯವೂ ಸಂಗೀತದಲ್ಲಿಯೇ ಜರಗುವದು. ಹುಡುಗರನ್ನು ಆಡಿಸುವಾಗ-ಹಂತಿಯನ್ನು ಹೊಡೆಯುವಾಗ-ಬೀಸುವಾಗ-ಬಿತ್ತುವಾಗ, ಭಜನೆ ಮಾಡುವಾಗ, ಭಿಕ್ಷೆ ಬೇಡುವಾಗ, ಓದುವಾಗ, ನೀತಿ ಹೇಳುವಾಗ, ಇವರು ಹಾಡದಿದ್ದರೆ ಗತಿಯಿಲ್ಲ. ಎಲ್ಲ ಕಾರ್ಯಗಳಲ್ಲಿಯೂ ರಸ-ರಂಜನೆಗಳನ್ನು ತರತಕ್ಕವು ಹಾಡು. ರಸವೂ ರಸವಾಗುತ್ತಿ ರಾಗದಲ್ಲಿ. ಆದ್ದರಿಂದಲೇ ಸಕಲ ಚರಾಚರ ಪ್ರಾಣಿಗಳು ತಮ್ಮ ತಮ್ಮ ಉದ್ಯೋಗವನ್ನು ಬಿಟ್ಟು ಸಂತಸಂಬಟ್ಟು ಆ ಆನಾಯನಾರನ ಇಂಪಾದ ಗಾನಕ್ಕೆ ಮೊಗವೆತ್ತಿ ನಿಂತಿವೆ. ತಮ್ಮ ತಮ್ಮೊಳಗಿರುವ ಜಾತಿ ವೈರತ್ವವನ್ನೂ ಸಹ ಬಿಟ್ಟು ಬಿಟ್ಟಿವೆ. ಎಲ್ಲವೂ ಸೇರಿ ಏಕ ಭಾವದಿಂದ ಕೇಳತೊಡಗಿವೆ. ಹೀಗೆ ಸಕಲ ಪ್ರಾಣಿಗಳು ಸಂತೋಷಪಡುವ ಆತನ ಸಂಗೀತಕ್ಕೆ ಸೂರ್ಯನೂ ಸಹ ಮೈಮರೆತು ನಿದ್ದೆ ಹೋಗುವನು ಸುತ್ತಲೂ ಮನಸು ಆಕರಿಸುವದು. ಆ ಗೋಧೂಳಿ ಸಮಯಕ್ಕೆ ಗೋಕುಲವನ್ನೆಲ್ಲ ಕಾವೇರಿಯಲ್ಲಿ ಮೈದೊಳೆದು ಮನೆಗೆ ಹೊಡತರುವನು. ಇಂತು

ತನ್ನ ಗೋವಂ ಕಾವ ಇದಿರಗೋವಂ ಸೋವ । ಉನ್ನತಯಶಂ
ಜಿತೇಂದ್ರಿಯನಾಗುತುಂ ಕಾವ ॥
ಅವರಿಚ್ಛೆತಾನಲ್ಲ ತನ್ನಿಚ್ಛೆಗೋವಾಗಿ । ಭವನಿಚ್ಛೆತಾನಾಗಿ ತನ್ನಿಚ್ಛೆ
ಭವನಾಗಿ ॥

ಗೋವುಗಳನ್ನು ಕಾಯುವದೂ ಒಂದು ವಿದ್ಯೆ. ಅದರಲ್ಲಿಯ ಒಂದು ಜಾಣ್ಮೆಯಿರಬೇಕು. ಅವುಗಳಿಗೆ ಒಗ್ಗುವಂತಹ ಹಸರು ಮೇಯಿಸಬೇಕು. ಒಲಿಯುವಂತೆ ಕೊಳಲೂದಬೇಕು. ವೇಳೆಗೆ ಸರಿಯಾಗಿ ತಿಳಿನೀರು ಗುಡಿಸಬೇಕು. ಮೈತೊಳೆದು ಮೈಯ್ದಡವಬೇಕು. ವಿಶ್ವಾಸವು ಹುಟ್ಟುವಂತೆ ಸಂತೋಷವು ಜನಿಸುವಂತೆ ಯಾವಾಗಲೂ ನೋಡಿಕೊಳ್ಳಬೇಕು.

ಅನಾಯನಾರನು ಈ ಎಲ್ಲ ಜಾಣ್ಮೆಯಿಂದ ಕೂಡಿದ್ದನು. ಅಂತೆಯೇ ಆ ಗೋವುಗಳು ಅವನಿಚ್ಛೆಯಂತಿದ್ದವು. ಹಿಂದಕ್ಕೆ ದಿಲಿಪನೇನೋ ಗೋವನ್ನು ಕಾಯ್ದ. ಆದರೆ ಆತನ ಇಚ್ಛೆಯಂತೆ ಅದಿರಲಿಲ್ಲ. ಆತನೇ ಅದಿ ಚ್ಛೆಯಂತೆ ವರ್ತಿಸಿದನು. ಎಷ್ಟಾದರೂ ಆತನಲ್ಲಿದ್ದುದು ಪುತ್ರಕಾಮನೆಯ ರಾಜಪ್ರೇಮ. ಈತನಲ್ಲಿದ್ದುದು ನಿರ್ಹೇತುಕ ಹೃದಯ ಪ್ರೇಮ.

ಹೀಗೆ ಗಾನ ಲೀನನಾಗಿ ಗೋವುಗಳನ್ನು ಕಾಯುವಲ್ಲಿ ಹಲವು ಸಂವತ್ಸರಗಳು ಕಳೆದು ಹೋಗಿವೆ. ಈತನ ಈ ಅನನ್ಯವಾದ ಸಂಗೀತದ ಸವಿಗೆ ಮನಸೋತ ಶಿವನು ಈತನನ್ನು ಉದ್ಧರಿಸಬೇಕೆಂದು ಒಂದು ಕಕ್ಕೆಯ ಗಿಡದ ಮೇಲೆ ನಿಂತಿದ್ದಾನೆ. ಇತ್ತ ಆನಾಯನಾರನು ಎಂದಿನಂದದಿ ತುರುವಿಂಡನ್ನು ಹೊಡೆದುಕೊಂಡು ಬಂದು ಹೆಮ್ಮರದ ತಣ್ಣೆಳಲಲ್ಲಿ ನಿಂದು ಕೊಳಲು ಊದವನು. ಊದುತ್ತಲೆ ಎದುರಿಗೆ ಹೂತ ಹೊಂಬಣ್ಣದ ಕಕ್ಕೆಯ ಗಿಡವನ್ನು ಕಂಡು ಅದರ ಬಳಿಸಾರಿದ್ದಾನೆ.

ಮರದಮುಂದಡ್ಡಮುಂ ತಿಗಟಮುಂ ಪರಿದಾಡಿ। ಹರಿಸದಿಂ
ಪಂಚಾಕ್ಷರಿಯನೂದಿ ಕೂಗಾಡಿ ॥
ತಾನೆ ಕೊಳಲೂದಿ ತಾನೆ ಹಿಗ್ಗಿ ಹೆಚ್ಚುತುಂ। ನಾನಾರಸಂಗಳಂ
ಸವಿಸವಿದು ಪೊಂಗುತುಂ ॥
ಕೊರಗನಾಲಿಸದೆಯುರಿದೊಲಿದಂತೆಯಾಡುತುಂ। ತೆರಹುಗಾಣದೆ
ಜಾಸಿಸುತ್ತ ಕೊಳಲೂದುತುಂ ॥

ಇನಿತು ಆ ಕಕ್ಕೆಯ ಸುತ್ತಲೂ ಸುತ್ತುತ್ತ ಊದಲಾರಂಭಿಸಿದ್ದಾನೆ. ಊದಿ ಊದಿದಂತೆ ಆತನ ಆನಂದವು ಎಲ್ಲೆ ಮೀರಿ ನಿಂತಿದೆ. ಸ್ನೇಹ, ಸಲುಗೆ, ಆತ್ಮೀಯತೆ, ತನ್ಮಯತೆಗಳು ಮಿತಿ ಮೀರಿವೆ. ತೃಷೆ-ತೃಷ್ಣೆಗಳು ತಗ್ಗಿ ಕುಗ್ಗಿ ಹೋಗಿವೆ. ಜೀವನದ ಭಾನವು ಹಿಂಗಿ ಹೋಗಿದೆ. ಮನೆ-ಮಕ್ಕಳ ಚಿಂತೆಯು ನಿಂತು ಹೋಗಿದೆ. ಎಲ್ಲವನ್ನೂ ವೈಮರೆತು ಬಿಟ್ಟಿದ್ದಾನೆ. ಅಖಂಡವಾದ ಲಯ, ಅನನ್ಯವಾದ ಮನೋವಿಲಯಗಳಿಂದ ಬಾಜಿಸ ಹತ್ತಿದ್ದಾನೆ. ಆ ರಾಗದಲ್ಲಿ ಹುಟ್ಟುವ ಕೋಮಲತೆ ಮಧುರತೆಗಳಿಗೆ ಮಿತಿಯಿಲ್ಲ. ಪ್ರೇಮ ಆನಂದಗಳಿಂದ ಬೆರತ ನಯರಾಗಕ್ಕೆ ಕೊರತೆಯಿಲ್ಲ. ಅನಂತವಾದ-ಅಮೇಯವಾದ ಅನುಭವಾನಂದದಿಂದ ಬೆರ್ರನೆ ಬೀಗಿ ಹೋಗಿದ್ದಾನೆ. ಪಂಚಾಕ್ಷರಿ ಪರಮಾತ್ಮನ ಹೊರತು ಏನೊಂದೂ ಆತ

ನಿಗೆ ತೋಚದಾಗಿದೆ. ಯಾವದೋ ಒಂದು ಅವಾಚ್ಯವಾದ ಆನಂದ ದಲ್ಲಿ ಕಣ್ಮುಚ್ಚಿ ತಲ್ಲೀನನಾಗಿ ನಿಂತು ಬಿಟ್ಟಿದ್ದಾನೆ. ಇನಿತೊಂದು ನಿಬ್ಬೆರಗ ಸ್ಥಿತಿಯಲ್ಲಿ ಬಾಜಿಸುವದನ್ನು ಕಂಡು ಪರಮಾತ್ಮನು ಪರಮಾರ್ಥ ರೂಪನ್ನು ತೊಟ್ಟು— ನುಡ್ಡಾನಿಗಳಿಂದ 'ಇತ್ತ ಬಾ ಮಗನೆ' ಎಂದು ಕರೆ ಯಲು ಆನಾಯನಾರನು ಕಣ್ದೆರೆದು ಕಂಡು ತನುವಾರೆ ಸೊಂಕಿ, ಕಯ್ಯಾರೆ ಬಿಗಿದಪ್ಪಿ

ದೇವ ಇಂತೀ ಅಡವಿಗೇಕೆ ಬಂದ್ಯೆ ತಂದೆ। ದೇವ ಹುಲಿ, ಕರಡಿ<br>ಮೊದಲಾದವುಂಟಿಲೆತಂದೆ॥

ಕೈಲಾಸಮಂ ಬಿಟ್ಟು ಕರುಣಮಂ ಮುಂದಿಟ್ಟು। ಶೈಲಜೆಯನಿರಸಿ<br>ತನುವಂ ಮನಕ್ಕೆಡೆಗೊಟ್ಟು॥

ಎನಗೋಸುಗಂ ಮರದ ಮೇಲೆ ನಿಂದ್ಯೆ ತಂದೆ। ಎನಗೋಸುಗಂ<br>ವಿಂಧ್ಯದೊಳಗೆ ಬಂದ್ಯೆತಂದೆ॥

ನಿನಗಿನಿತವಸ್ಥೆಯಂ ಮಾಡಿತೆನ್ನಯಭಕ್ತಿ। ನಿನಗಿನಿತು ಬೆಟ್ಟಿತಂ<br>ಮಾಡಿ ತೆನ್ನಯ ಭಕ್ತಿ॥

ಎಂದು ಶಂಕರನ ಪದಯುಗಳಮಂ ಪಿಡಿದಿರಲ್। ಇಂದು ಧರನೆತ್ತಿ<br>ತಳ್ಕೈಸಿ ಹಿಗ್ಗುತಿರಲ್॥

ಎಂದು ಕರುಳಿನಿಂದ ಕೇಳಿ ವೃಡನ ಅಡಿದಾವರೆಗಳನ್ನು ಬಿಡದೆ ಬಿಗಿದ ಪ್ಪುವನು. ಶಿವನು ಕೈಹಿಡಿದೆತ್ತಿ ತಳ್ಕೈಸಿ ಹಿಗ್ಗುವನು. ಅನಿತರಲ್ಲಿ ಪೂಮಳೆಗಳೆರಗುವವು. ದುಂದುಭಿಗಳುಣ್ಮುವವು. ಶಿವನ ಬಿರುದಿನ ಕಹಳೆಗಳು ಮೊಳಗುವವು. ಪ್ರಮಥಗಣವೆಲ್ಲ ಮುತ್ತುವದು. ಆ ಸಮಯ ದಲ್ಲಿಯೇ ಆನಾಯನಾರನ ಗೋವುಗಳೆಲ್ಲ ಗೋಜನ್ಮವಬಿಟ್ಟು, ಋಷಿ ವೇಷವ ತೊಟ್ಟು—

ವೇದವರಿಯದ ನಿಮ್ಮನರಿದೆವ್ಯೆ ಭಕ್ತನಿಂ। ವಾದವರಿಯದ ನಿಮ್ಮ<br>ನೆಯ್ದಿದೆವು ಭಕ್ತನಿಂ॥

ಗೋಜನ್ಮಮಂ ಕಳೆದೆವೀ ನಿಮ್ಮ ಭಕ್ತನಿಂ। ಗೋಜಾತಮುಂ<br>ಮಾಣ್ದುದಭವ ನಿಜಭಕ್ತನಿಂ॥

ಎಂದುರೆ ಪೊಗಳ್ವ ರುಷಿಜನಕ್ಕಭಯಮಂ ಕೊಟ್ಟು । ಮುಂದೆ ನಿಂದಾ
ನಾಯನಾರ್ಗೆ ಹರುಷಂ ಒಟ್ಟು ॥
ಇಂತೆಲ್ಲವಂ ಮರೆದು ಕೊಳಲೂದಿದವರುಂಟೆ ? ಸಂತತಂ ;
ಪಂಚಾಕ್ಷರಿಯ ಸವಿದರಿಂತುಂಟೆ ? ॥

ಎಂದು ಆತನ ಅನನ್ಯ ಭಕ್ತಿಯನ್ನೂ, ಗಾನ ವಿಲಕ್ಷಣತೆಯನ್ನೂ, ಗೋರಕ್ಷಣ ದಕ್ಷತೆಯನ್ನೂ ಸಕಲ ಗಣರಿಗೆ ಬೋಧಿಸಿ ಆನಾಯನಾರನನ್ನು ಹೂದೇರಿನಲ್ಲಿ ಕುಳ್ಳಿರಿಸಿಕೊಂಡು ಕೈಲಾಸಕ್ಕೆ ಬಂದು ಅರಮನೆಯ ಪೊಕ್ಕು ಸಿಂಗರದ ಸಿಂಹಾಸನವನೇರಿ ಹರುಷದಿಂ ತುಳ್ಳಾಡಿ ಪಾರ್ವತೀ ದೇವಿಯನ್ನೂ ಪ್ರಮಥಗಣರನ್ನೂ ಕುರಿತು —

ಕೊಳಲೊಳಗೆ ಸಿಲ್ಕಿಕೊಂಡಿರ್ದೆನಾನಿನ್ನೆಗಂ । ಕೊಳಲದನಿಗೆಳಸಿ
ಕೊಂಡಿರ್ದೆನಾನಿನ್ನೆಗಂ ॥
ಹೊಸಪರಿಯಭಕ್ತಿಯಂ ಕಂಡೆವಾವೆಂದೆನುತೆ । ಹಸನಾದ ಸುಖಮಂ
ಕಂಡೆವೆಂದೆನುತೆ ॥
ಆನಾಯನಾರ್ಗೆಗಣಪದವಿಯಂ ಸಲಿಸುತುಂ । ನಾನಾಗಣವ್ರಾತ
ದೊಡನೆ ಕೂಡಿರಿಸುತುಂ ॥
ನೆನೆವರ ನಿಧಾನನೊಪ್ಪಿದನೀಶನೊಪ್ಪಿನಂ । ನೆನೆವರಮನೋರಥ ಸುಧಾ
ವರುಷನೊಪ್ಪಿದಂ ॥
ನೋಳ್ಪಭಕ್ತರ ಕಣ್ಣ ಪುಣ್ಯನಿಧಿಯೊಪ್ಪಿದಂ । ಬೇಳ್ಪ ಶರಣರ ಸುಖದ
ಸುರಧೇನು ವೊಪ್ಪಿದಂ ॥
ಭಕ್ತಜನವನಕಮಲವಿಮಲಾರ್ಕನೊಪ್ಪಿದಂ । ಭಕ್ತನಿಧಿ ಹಂಪೆಯ
ವಿರೂಪಾಕ್ಷನೊಪ್ಪಿದಂ ॥

ನಮ್ಮಲ್ಲಿ ಯಕ್ಷಗಾನ-ಕಾವ್ಯಗಾನ ಮೊದಲಾದವುಗಳುಂಟು. ಮಂತ್ರಗಾನವು ಮಾತ್ರ ಅಪರೂಪ. ಆ ಮಂತ್ರಗಾನಮಾಡಿ ಮಹಾದೇವನನ್ನೊಲಿಸಿಗೊಂಡವನು ಆನಾಯನಾರನು. ಆದ್ದರಿಂದ ಈತನು ಮಂತ್ರಗಾನದ ಸೃಷ್ಟಿಕರ್ತನೆಂದು ಹೇಳಿದರೆ ಏನೂ ತಪ್ಪಾಗದು. ರಾವಣಾದಿಗಳು ಗಾನ ಮಾಡಿದರು. ಆದರೆ ಆ ಗಾನಕ್ಕೆ ಶಿವನೊಲಿಯಲಿಲ್ಲ. ಆ ಗಾನವು ಕೇವಲ ಹೊರಗಿನದು. ಸ್ವಾರ್ಥ ಪ್ರೇಮದ್ದು. ಅದಕ್ಕೆ ಶಿವನೊಲಿಯನು. ಅದಕ್ಕೇನೆ ಬಸವಣ್ಣನವರು "ನಾದಪ್ರಿಯ ಶಿವನೆಂಬರು ನಾದಪ್ರಿಯ ಶಿವನಲ್ಲವಯ್ಯ" ಎಂದ ಹಾಡಿದರು. ಆದರಿದು ಒಳಗಣ ಗಾನ.

(ಒಳನುಡಿ) ಪ್ರಣವದಲ್ಲಿ ಮೂರಕ್ಷರಗಳುಂಟು. ಅವುಗಳಲ್ಲಿ ಮೊದಲನೆ 'ಅ' ಅಕ್ಷರವು ನಾದಸ್ವರೂಪವಾದುದು. ಇದರಿಂದ ಶಿವನು ನಾದಸ್ವರೂಪನೆಂದು ಸಿದ್ಧವಾಗುವದು. ಅಂತಯೇ "ನಾದಬ್ರಹ್ಮ ಸದಾನಂದಮದ್ವಿತೀಯ ಮುಪಾಸ್ಮಹೇ" ಎಂತಲೂ "ನಾದ ಪ್ರಿಯಂ ನಾದಮಯಂ ನಾದಲಿಂಗಂ ಮಹೇಶ್ವರಂ" ಎಂತಲೂ ಶೃತಿಗಳು ಸಾರುತ್ತವೆ. ಈ ಒಳನುಡಿಯು ಅಂದರೆ ಮಂತ್ರಗಾನವು ಪರಮಾತ್ಮನಿಗೆ ಪರಮ ಪ್ರಿಯತಮವೂ ಆಗಿದೆ. 'ಮದ್ಭಕ್ತಾಯತ್ರಗಾಯಂತಿ ತತ್ರ ತಿಷ್ಠಾಮಿ ಪಾರ್ವತಿ, ಎಂಬುದು ಪರಮಾತ್ಮನ ಪ್ರೀತಿಯಮಾತು. ಒಟ್ಟಿನಲ್ಲಿ ನಾದ-ಬಿಂದು-ಕಲೆಗಳಲ್ಲಿ ನಾದವು ಮೊದಲು ಸ್ಥಾನವನ್ನು ಪಡೆದಿದೆ. ಅಕ್ಕರಗಳಲ್ಲಿ ಅಕಾರವು ನಾದಸ್ವರೂಪವಾಗಿದೆ. ಆದ್ದರಿಂದ ಆಳವಾದ ಆ ಒಳನಾದವನ್ನು ಎಲ್ಲರೂ ಅಭ್ಯಸಿಸಬೇಕು. ಅದರಿಂದ ಅನಂತವಾದ ಅಮೇಯವಾದ ಆನಂದವನ್ನು ಪಡೆಯಬೇಕು. ರಾಗವೆಂದರೆ ಪ್ರೇಮ. ಆ ಪ್ರೇಮಗಾನವೇ ಮಿಗಿಲಾದುದು. ಅದು ಭಕ್ತಿಯಲ್ಲಿ ಪರ್ಯವಸಾನವಾದಾಗ ಮಾತ್ರ.

# ದೇವರು.

(ಲೇ:— ಶ್ರೀಮತಿ ಗೌರಮ್ಮನವರು ಬೆಂಗಳೂರ ಸಿಟಿ.)

ಮಹಾದೇವಿಯಕ್ಕನ ಸೇವಾ ಸಮಾಜದಿಂದ.

---

ನಾವು ವಿಚಾರ ದೃಷ್ಟಿಯಿಂದ ಜಗತ್ತನ್ನು ನೋಡಿದರೆ ಸೂರ್ಯನು ಪ್ರತಿನಿತ್ಯವೂ ತಪ್ಪದೆ ನಮಗೆ ಬೆಳಕನ್ನು ಯಾರ ಭಯದಿಂದ ಕೊಡುವನು, ಗಾಳಿಯು ಬಿಡದೆ ಬೀಸಿ ಪ್ರಾಣಿಗಳನ್ನೆಲ್ಲ ಯಾರ ಭಯದಿಂದ ರಕ್ಷಿಸುವದು, ಅಗ್ನಿ ನೀರುಗಳು ತಮ್ಮ ಅಮೋಘ ಶಕ್ತಿಯನ್ನು ಮುಚ್ಚಿಕೊಂಡು ನಮಗೆ ನಿತ್ಯದಲ್ಲೂ ಉಪಕಾರವನ್ನು ಯಾರ ಭೀತಿಯಿಂದ ಮಾಡುವವು, ಮತ್ತು ಆಕಾಶದಲ್ಲಿ ಚಂದ್ರ ತಾರೆಗಳು ಮಿಣುಕುವದು ಯಾರಿಂದ, ಮಿಂಚು ಮಿಂಚುವದು ಯಾರಿಂದ, ಆಕಾಶವನ್ನು ಕಂಬವಿಲ್ಲದೆ ಅಂತರದಲ್ಲಿ ನಿಲ್ಲಿಸಿದವರಾರು, ಹಕ್ಕಿಗಳಿಗೆ ಹಾರುವ ಶಕ್ತಿಯನ್ನು ಕೊಟ್ಟವರಾರು, ಎಂಬ ಯೋಚನೆಯು ತಲೆಯೆತ್ತುವದು. ಇದಕ್ಕೆಲ್ಲ ಒಬ್ಬ ಕರ್ತೃವಿರಬೇಕೆಂದು ಭಾಸವಾಗುವದು. ಆತನೇ ದೇವರು. ಅದೇ ಮಹಾ ಚೈತನ್ಯ.

ದೇವರು ವಿಶ್ವವನ್ನೆಲ್ಲ ವ್ಯಾಪಿಸಿದ್ದಾನೆ. ಸರ್ವ ವಸ್ತುಗಳ ಚೈತನ್ಯರೂಪನಾಗಿದ್ದಾನೆ. ಸಣ್ಣ ವಸ್ತುವಿನಲ್ಲಿ ಸಣ್ಣರೂಪಾಗಿದ್ದಾನೆ. ದೊಡ್ಡ ವಸ್ತುವಿನಲ್ಲಿ ದೊಡ್ಡ ರೂಪಾಗಿದ್ದಾನೆ. ಕಲ್ಲು ಕಟ್ಟಿಗೆಗಳಲ್ಲಿ ಅವ್ಯಕ್ತವಾಗಿದ್ದಾನೆ. ಚೇತನ ಪ್ರಾಣಿಗಳಲ್ಲೆಲ್ಲ ವ್ಯಕ್ತವಾಗಿದ್ದಾನೆ. ಹೀಗೆ ದೇವರು ಜಗತ್ತಿನಲ್ಲಿ ಎಲ್ಲೆಲ್ಲಿಯೂ ವ್ಯಾಪಿಸಿದ್ದಾನೆ. ಇದೇ ಅಭಿಪ್ರಾಯವನ್ನು ಮಹಾನುಭಾವರಾದ ಬಸವಣ್ಣನವರು

"ಎತ್ತೆತ್ತ ನೋಡಿದತ್ತತ್ತ ನೀನೇ ದೇವ. ಸಕಲ ವಿಸ್ತಾರದ ರೂಪು ನೀನೇ ದೇವ. ವಿಶ್ವತೋ ಬಾಹು ನೀನೇ ದೇವ. ವಿಶ್ವತೋ ಚಕ್ಷು ನೀನೇ ದೇವ. ವಿಶ್ವತೋ ಮುಖ ನೀನೇ ದೇವ. ವಿಶ್ವತೋ ಪಾದ ನೀನೇ ದೇವ. ಘನಕ್ಕೆ ಘನ ನೀನೇ ದೇವ. ಅಣೋರಣೀಯಾನ್ ಮಹತೋ ಮಹೀಯಾನ್ ನೀನೇ ಕೂಡಲ ಸಂಗಮದೇವಾ."

ಎಂದು ಎಲ್ಲಿ ನೋಡಿದಡಲ್ಲಿ ದೇವರು ತುಂಬಿಕೊಂಡಿಹನೆಂದು ಎಷ್ಟು ಸೊಗಸಾಗಿ ಸರಸವಾಗಿ ಬಣ್ಣಿಸಿದ್ದಾರೆ! ಹೀಗೆ ಜಗತ್ತನ್ನೇ ವ್ಯಾಪಿಸಿ

ಕೊಂಡ ದೇವರನ್ನು ಹಲವರು ಹಲವು ವಿಧವಾಗಿ ಹುಡುಕಲು ಪ್ರಯತ್ನಪಡುತ್ತಿದ್ದಾರೆ. ಲಿಂಗವಂತರನ್ನು ಬಿಟ್ಟು ಇನ್ನುಳಿದವರು ದೇವರನ್ನು ಹುಡುಕಲು ಗುಡಿ ಗುಂಡಾರಗಳಿಗೂ ತೀರ್ಥ ಕ್ಷೇತ್ರಗಳಿಗೂ ಅಲೆದಾಡುತ್ತಾರೆ. ಅವರಿಗೆ ತಮ್ಮಲ್ಲಿಯೇ ಇರುವ ದೇವರ ಅರಿವೇ ಇಲ್ಲ. ನಾವು ಮಾತ್ರ ಹಾಗೆ ಮಾಡುವಂತಿಲ್ಲ. ನಮಗೆ ನಮ್ಮ ಗುರುಗಳು ಸದಾ ಪೂಜಿಸಲು ನಮ್ಮೆಡೆಯಲ್ಲಿಯೇ ತಂದು ಕೊಟ್ಟಿದ್ದಾರೆ. ನಮ್ಮ ಶಿರದಲ್ಲಿರುವ ಕಲೆಯನ್ನೇ ಕರದಲ್ಲಿ ಕೊಟ್ಟಿದ್ದಾರೆ. ಉಳಿದವರಂತೆ ನಾವು ದೇವರ ಸಲುವಾಗಿ ಸಿಕ್ಕ ಕಡೆ ತಿರುಗುವಂತಿಲ್ಲ, ತಿರುಗುವದೂ ಉಚಿತವಲ್ಲ.

"ಕೃತಯುಗದಲ್ಲಿ ಕೇದಾರವೆಂಬ ಮೂಲಸ್ಥಾನ. ತ್ರೇತಾಯುಗದಲ್ಲಿ ವಾರಾಣಸಿ ಎಂಬ ಮೂಲಸ್ಥಾನ. ದ್ವಾಪರ ಯುಗದಲ್ಲಿ ವಿರೂಪಾಕ್ಷನೆಂಬ ಮೂಲಸ್ಥಾನ. ಕಲಿಯುಗದಲ್ಲಿ ಪರ್ವತವೆಂಬ ಮೂಲಸ್ಥಾನ. ಇಂತೀ ನಾಲ್ಕು ಮೂಲಸ್ಥಾನ. ನಾನಾ ಸ್ಥಾನವ ಮೆಟ್ಟದೆ, ಜಂಗಮವೇ ಲಿಂಗವೆಂದು ನಂಬಿದೆ ಕೂಡಲ ಸಂಗಮದೇವಾ."

ಎಂದು ಬಸವಣ್ಣನವರೂ ಸಹ ನಮಗೆ ಬೋಧಿಸುತ್ತಾರೆ. ಬೇರೆ ಕೆಲವರು ಬೆಂಕಿಯೇ ದೇವರೆಂದು ಪೂಜಿಸುವರು. ಗಿಡಗಳೇ ದೇವರೆಂದು ಪ್ರಾರ್ಥಿಸುವರು. ಭೂಮಿಯು ಕಲ್ಲೇ ದೇವರೆಂದು ಅಡ್ಡಬೀಳುವರು. ಆದರೆ ಅವೆಲ್ಲ ನಿಜವಾದ ದೇವರುಗಳಲ್ಲ.

"ಬನ್ನಿರೇ ಅಕ್ಕಗಳು, ಹೋಗಿರೆ ಆಲದಮರಕ್ಕೆ. ಕಚ್ಚುವವೇ ನಿಮ್ಮ ಚಿಪ್ಪಿನ ಹಲ್ಲುಗಳು? ಬೆಚ್ಚಿಸುವವೇ ನಿಮ್ಮ ಬಚ್ಚಣಿಯ ರೂಹುಗಳು? ನಮ್ಮ ಕೂಡಲ ಸಂಗಮದೇವನಲ್ಲದೆ ಉಳಿದ ಪರದೈವಂಗಳು ಮನಕ್ಕೆ ಬಂದವೇ? ಬಿಕ್ಕರೆ ಬಿರಿವ ದೈವಂಗಳು?"

ಎಂದು ಅನ್ಯದೈವಂಗಳಿಗೆರಗುವದು ಉಚಿತವಲ್ಲವೆಂದು ಉಪದೇಶಿಸಿದ್ದಾರೆ. ಇದು ನಮ್ಮ ಪಂಚಾಚಾರಗಳಲ್ಲಿ ಮೊದಲನೆಯ ಆಚಾರವಾಗಿದೆ. ಇದನ್ನೆ ಚನ್ನಬಸವೇಶ್ವರ ದೇವರು

"ಅಯ್ಯಾ ಶ್ರೀಗುರು ಕರುಣಿಸಿಕೊಟ್ಟ ಲಿಂಗ ಜಂಗಮವಲ್ಲದೆ ಅನ್ಯ ದೈವಂಗಳ ತ್ರಿಕರಣದಲ್ಲಿ ಅರ್ಚಿಸದಿಪ್ಪುದೇ ಲಿಂಗಾಚಾರವೆಂಬೆನಯ್ಯ"

ಎಂದು ಚನ್ನಾಗಿ ಹೇಳಿಕೊಟ್ಟಿದ್ದಾರೆ. ಅನ್ಯ ದೇವರಿಗೆ ಹೋಗಿ ಅಡ್ಡಬೀಳದಿರುವುದೇ ವೀರಶೈವಾಚಾರ. ಲಿಂಗ ದೇವನನ್ನು ಪೂಜಿಸುವುದೇ

ನಮ್ಮ ಲಿಂಗಾಚಾರ. ಈ ಬಗೆಯಾಗಿ ದೇವರನ್ನು ಗುರ್ತಿಸುವ ಸುಗಮ ಮಾರ್ಗವನ್ನು ನಮ್ಮ ಶಿವಶರಣರ ಹೊರತು ಬೇರೆ ಯಾರೂ ಗುರ್ತಿಸಿಲ್ಲ. ನಮ್ಮಲ್ಲಿ ಏನೂ ಗೊತ್ತಿಲ್ಲದ ಎಳೆಯ ಮಕ್ಕಳೂ ಸಹ ದೇವರು ಎಲ್ಲಿರುವನೆಂದು ಕೇಳಿದರೆ ಎದೆತಟ್ಟಿ ಥಟ್ಟನೇ ತೋರಿಸಬಲ್ಲವು. ಆದರೆ ಅನ್ಯ ಮತದ ಅದ್ವಿತೀಯ ಪಂಡಿತರು ಮಾತ್ರ ಮೂಕರಾಗಿ ಕೂಡ್ರುವರು. ದೇವರನ್ನು ಕಂಡುಕೊಳ್ಳುವಷ್ಟು ಸುಲಭ ಮಾರ್ಗ ಮತ್ತೆಲ್ಲಿಯೂ ಇಲ್ಲ. ಇಂತಹ ಮತದಲ್ಲಿ ಹುಟ್ಟಿದ ನಾವೇ ಧನ್ಯ.

ಆ ದೇವರನ್ನು ಕಂಡುಕೊಳ್ಳಲು ನಮಗಿದ್ದಷ್ಟು ಸ್ವಾತಂತ್ರ್ಯ ಬೇರೆ ಯಾವ ಮತದಲ್ಲಿಯೂ ಇಲ್ಲ. ನಾವು ನಿಜವಾಗಿಯೂ ಲಿಂಗ ಸತಿಗಳಾಗಬೇಕು. ಈಗ ನಾವಾಗಿರುವದು ಕೇವಲ ಪುರುಷರ ಭೋಗದ ಬೊಂಬೆಗಳು. ನಾಲ್ಕು ಗಡಿಗೆ ಮಡಿಕೆಗಳನ್ನು ತೊಳೆದು ನಾಲ್ಕು ಮಕ್ಕಳನ್ನು ಹೆತ್ತರಾಯಿತು. ಅದೇ ನಮ್ಮ ಜೀವನದ ಗುರಿ ಎಂದು ನಾವು ಭಾವಿಸಿಗೊಂಡಿರುವೆವು. ಇದು ಶುದ್ಧ ತಪ್ಪು. ಮಹದೇವಿಯಕ್ಕನು ನಮ್ಮಂಥ ಹೇಡಿ ಜೀವಿಗಳನ್ನು ಕಂಡು ನಿಮಗೀ ಅಳಿದು ಹೋಗುವ ಪತಿ ಸುತರು ಆದರೆ ನನಗೆ

"ಗುರುವೇ ತೆತ್ತಿಗನಾದ. ಲಿಂಗವೇ ಮದುವಣಿಗನಾದ. ಆನು ಮದುವಳಿಗೆಯಾದೆನು. ವಸುಧೆಯ ಭಕ್ತರೆಲ್ಲರೂ ನಿಬ್ಬಣಿಗರಾದರು. ಕೊಟ್ಟರು ಸಾದೃಶ್ಯವಪ್ಪ ಗಂಡನ ನೋಡಿ. ಇದು ಕಾರಣ ಚನ್ನಮಲ್ಲಿಕಾರ್ಜುನಯ್ಯನೇ ಗಂಡನೆನಗೆ."

ಎಂದು ಹೇಳಿಕೊಂಡಿರುವಳು. ಅವಳ ವಂಶಜರಾದ ನಾವು ಆ ದೇವರ ರೂಪಾದ ಲಿಂಗ ಪತಿಯನ್ನು ಬಿಟ್ಟು ಅಳಿದು ಹೋಗುವ ವಿಷಯ ಸುಖಕ್ಕೆ ಮೆಚ್ಚಿ ಸಂಸಾರ ಸಾಗರದಲ್ಲಿ ಬೀಳುವದು ನಮಗುಚಿತವೇ? ಒಮ್ಮೆ ನಾವು ಸಂಸಾರದಲ್ಲಿ ಧುಮುಕಿದರೆ ತಿರುಗಿ ಏಳುವದು ಕಷ್ಟ. ಗಾಳಿ ಬಿಟ್ಟ ದೀವಿಗೆಯಂತೆ ನಾವು ಅದರಲ್ಲಿಯೇ ನಂದಿಹೋಗುವೆವು. ಅಲ್ಲದೆ ಸಂಸಾರವು ಮುಂದಿನ ಜನ್ಮಕ್ಕೂ ನಮ್ಮನ್ನು ಕೈ ಬಿಡದು. ಅದೊಂದು ನಮ್ಮ ಮಹಾಶ್ರುತವಾಗಿದೆ.

"ಸಂಸಾರವೆಂಬ ಹಗೆಯಯ್ಯಾ ತಂದೆ. ಎನ್ನ ವಂಶ ವಂಶದಪ್ಪದೆ ಅರಿಸಿಕೊಂಡು ಬರುತ್ತಿದೆಯಯ್ಯಾ! ಎನ್ನವನರಿಸಿ ಯರಸಿ ಹಿಡಿದು

ಕೊಲ್ಲುತ್ತಿದೆಯಯ್ಯ !! ನಿಮ್ಮ ಮರೆವೊಕ್ಕೆ ಕಾಯಯ್ಯ !!! ಎನ್ನ ಬಿನ್ನ-ಪವನವಧಾರು ಚನ್ನಮಲ್ಲಿಕಾರ್ಜುನಾ"

ಎಂದು ವೀರ ವಿರತೆಯಾದ ಮಹದೇವಿಯಕ್ಕಗಳೇ ಈ ತೆರವಾಗಿ ದೇವರಲ್ಲಿ ಈ ಸಂಸಾರದ ಕಷ್ಟವನ್ನು ತೋಡಿಕೊಂಡಾಗ ನಮ್ಮಂಥವರ ಪಾಡೇನು? ನಿಶ್ಚಯದಲ್ಲಿಯೂ ಅದರಲ್ಲಿ ಮುಳುಗಿ ಏಳುವ ನಾವು ಎಷ್ಟು ಜಾಗ್ರತೆಯಿಂದಿರಬೇಕಾಗುವದು? ದೇವರ ವಿಷಯಕ್ಕೆ ಎಷ್ಟೊಂದು ಭಾವ ಬಲಿಯಬೇಕು? ನಮ್ಮ ಮಕ್ಕಳು ನಮ್ಮನ್ನು ಅಗಲಿದರೆ ಅವಳಂತೆ ನಾವು ನಮ್ಮ ಲಿಂಗಪತಿಗಾಗಿ ಯಾವಾಗಲೂ ಶೋಕಿಸಬೇಕು. ನಾವೇನು ಮಾಡಿದರೂ ಆತನನ್ನು ಮರೆಯದೆ ಸ್ಮರಿಸುತ್ತಿರಬೇಕು. ಆತನ ಮೂರ್ತಿಯು ನಮ್ಮ ಕಣ್ಣಿಳ ಮುಂದೆ ಕಟ್ಟಿದಂತಾಗಬೇಕು. ಅಂದರೆ ನಮಗೆ ಆ ದೇವರ ಒಲುಮೆಯಾಗುವದು. ಈ ಸಂಸಾರದ ಬಲೆಯು ಬಿಚ್ಚಿ ಹೋಗುವದು. ಶ್ರೇಷ್ಠವಾದ ಆನಂದವು ದೊರೆಯುವದು. ಆವಾಗ ಜಗತ್ತಿನಲ್ಲಿ ಒಬ್ಬ ದೇವರಿರುವನೆಂದು ಗೊತ್ತಾಗುವದು.

ಚಾರ್ವಾಕ ಮೊದಲಾದವರು ನಾಸ್ತಿಕ ವಾದಿಗಳೆಂದು ಕೆಲವರು ಆರೋಪಿಸುವರು. ಆದರೆ ಅವರೇ ನಾಸ್ತಿಕರೆಂದು ನಾನು ಹೇಳಲಾರೆ. ಯಾರು ನಿಜವಾಗಿ ದೇವರನ್ನು ತಿಳಿದಿಲ್ಲವೋ ಅವರೆಲ್ಲರೂ ನಾಸ್ತಿಕರು. ಕೇವಲ ದೇವರಿರುವನೆಂದು ದೊಡ್ಡ ದೊಡ್ಡ ಗ್ರಂಥಗಳನ್ನು ಬರೆದವರು ಆಸ್ತಿಕರಲ್ಲ. ಉದ್ದ ಉದ್ದ ವ್ಯಾಖ್ಯಾನ ಮಾಡುವವರು ಆಸ್ತಿಕರಲ್ಲ. ತಮ್ಮ ಹೊಟ್ಟೆಗೆ ಇಲ್ಲದ ಕಾಮ್ಯ ಕರ್ಮಗಳನ್ನು ಮಾಡುತ್ತ ಮತ್ತೊಬ್ಬರಿಂದ ಮಾಡಿಸುತ್ತ ತಿರುಗುವವರು ಆಸ್ತಿಕರಲ್ಲ. ಆದರೆ ಯಾರ ಮನಸ್ಸು ಯಾವಾಗಲೂ ದೇವರ ಕಡೆಗೆ ಹರಿಯುತ್ತದೆಯೋ ಯಾರ ಆರ್ತವು ಪತಿತವಾಗುವ ಸಮಾಜದ ದುಃಸ್ಥಿತಿಗಾಗಿ ಮರುಗುತ್ತಿದೆಯೋ ಅವರೇ ಆಸ್ತಿಕರು. ಅವರೇ ನಿಜವಾದ ದೇವರ ಮಕ್ಕಳು. ಮಹಾನುಭಾವರು. ಆದ್ದರಿಂದ ಸರ್ವ ವ್ಯಾಪಕನಾದ ದೇವರನ್ನು ನಾವು ತಿಳಿಯಬೇಕಾದರೆ ನಾವು ನಿರ್ಮಲರೂ ನಿಃಸ್ವಾರ್ಥಿಗಳೂ ಆಗಬೇಕು.

ಈಗೀಗ ಸರ್ವ ವ್ಯಾಪಕನಾದ ಶಿವನ ಸಂಬಂಧವಾಗಿ ಓದದೆ, ಕೇಳದೆ, ವಿಚಾರಮಾಡದೆ, ಆದರೊಳಗೇನಿದೆ, ಇದರೊಳಗೇನಿದೆ, ಇದು ಪೊಳ್ಳು, ಅದ ಗೊಳ್ಳು, ಇದು ಹುಚ್ಚು, ಅದು ಮಬ್ಬು, ಎಂದು ಮನಬಂದಂತೆ ಪಾಶ್ಚಾತ್ಯ ಸುಧಾರಣೆಯ ಬಯಲಲ್ಲಿ ಸಿಲುಕಿ ತಮ್ಮ

ತಮ್ಮ ದೇವರನ್ನು ನಿಂದಿಸುತ್ತ, ತಮ್ಮ ತಮ್ಮ ಶೀಲಗಳನ್ನು ಹೀಯಾಳಿಸುತ್ತ ಬಿಡುತ್ತ, ಅಪಾನಪೇಯ, ಅಭಕ್ಷ್ಯಭಕ್ಷಣ ಮಾಡುತ್ತ ಸ್ವೈರ ವೃತ್ತಿಯಿಂದ ಸಂಚರಿಸುವವರ ಸಂಖ್ಯೆಯನ್ನು ನೋಡಿದರೆ ನಮ್ಮ ಹೃದಯಗಳು ತಳಮಳಿಸುತ್ತವೆ. ಮನಸ್ಸುಗಳು ಮರುಗುತ್ತವೆ. ಮೈಗಳು ನಡಗುತ್ತವೆ. ಮಾಡುವದೇನು? ಎಲ್ಲವೂ ವಾತಾವರಣದಂತೆ ಸಾಗಿ ಹೋಗಬೇಕಾಗಿದೆ. ಏನಾದರೂ ದೇವರ ವಿಷಯಕ ಅಥವಾ ಧರ್ಮದ ವಿಷಯಕ ಹಂಬಲ, ಪ್ರೇಮ, ಆಸಕ್ತಿಗಳು ಇವೆಯೆಂದರೆ ನಮ್ಮಲ್ಲಿಯೇ. ಇದೊಂದು ಇದೀಗ ನಮಗೆ ಹೆಮ್ಮೆಯ ಮಾತು. ಅದನ್ನು ನಾವು ಬಲಪಡಿಸಿಕೊಂಡು ಹೋಗುವದು ಮಹದೇವಿಯಕ್ಕಗಳಂತಹ ಶಿವಶರಣೆಯರ ವಂಶಿಕರಾದ ನಮಗೆ ಭೂಷಣಪ್ರಾಯವಾಗಿದೆ. ಅಂಥ ಬುದ್ಧಿಯನ್ನು ಆ ಮಹಾದೇವಿಯಕ್ಕನೇ ನಮಗೆಲ್ಲರಿಗೂ ದಯಪಾಲಿಸಬೇಕೆಂದು ಕೋರುವೆ.

# ವಿಶ್ವದೊಳಗಿನ ಚೈತನ್ಯವು.

(ಲೇಖಕ:— ಬಂಡೆಪ್ಪ ರೇವಣಸಿದ್ದಪ್ಪ ಝುಂಜೇ ವಕೀಲ ಸೊಲ್ಲಾಪೂರ.)

ಅಪಾರವಾದ ವಿಶ್ವದಲ್ಲಿ ಎಲ್ಲ ಕಡೆಗೆ ಚೈತನ್ಯವು ವ್ಯಾಪಿಸಿಕೊಂಡಿರುವದು. ಆದರೆ ಯಾವ ಚೈತನ್ಯವು ಸ್ವಸ್ವರೂಪವನ್ನು ಹೊಂದುವದೋ ಅದು ಮಾತ್ರ ನಿಜವಾದ ಚೈತನ್ಯವು. ಯಾವದಕ್ಕೆ ಸ್ವಸ್ವರೂಪದ ಜ್ಞಾನವಿಲ್ಲವೋ ಅದು ಜಡಚೈತನ್ಯವೆನಿಸುವದು. ಈ ಜಡಚೈತನ್ಯದಿಂದ ಕೆಲವುಟ್ಟಿಗೆ ಚಲನವಲನವು ಉಂಟಾದರೂ ಅದರಲ್ಲಿ ಜ್ಞಾನದ ನಿಜವಾದ ಪ್ರಕಾಶವು ಇಲ್ಲದಿರುವದರಿಂದ ಅದು ನಿರುಪಯೋಗವಾಗುವದು. ಮನುಷ್ಯನು ಪ್ರತಿಯೊಂದು ಕ್ಷಣದಲ್ಲಿ ಯಾವದಾದರೊಂದು ಕ್ರಿಯೆಯಲ್ಲಿ ಆಸಕ್ತನಾಗಿರುವನು. ಆದರೆ ಸ್ವಕರ್ತವ್ಯದ ತಿಳುವಳಿಕೆಯು ಇಲ್ಲದಿರುವದರಿಂದ ಆ ಕ್ರಿಯೆಯ ಪರಿಣಾಮವು ಹಿತಕರವಾಗಿ ಪರಿಣಮಿಸುವದಿಲ್ಲ. ಸಕಲ ಜಗತ್ತಿನಲ್ಲಿ ತನ್ನ ಬುದ್ಧಿಯನ್ನು ವ್ಯಾಪಿಸಿ ಯಾವನ ದೃಷ್ಟಿಯು ವಿಶ್ವರೂಪಾಗಿರುವದಿಲ್ಲವೋ ಅವನ ಹತ್ತರ ವಿಪುಲಸಂಪತ್ತು ಮತ್ತು ಅಗಾಧವಾದ ಪಾಂಡಿತ್ಯವು ಇದ್ದರೂ ಕೂಡ ಅವು ವ್ಯರ್ಥವಾಗುವವು.

ಯಾವನು ಸರ್ವವ್ಯಾಪಿಯಾದ ಮತ್ತು ಅನಂತವಾದ ಚೈತನ್ಯಸ್ವರೂಪವನ್ನು ತಿಳಿಯುವದಿಲ್ಲವೋ, ಅವನಲ್ಲಿ ಚೈತನ್ಯವಿದ್ದರೂ ಅದು ಜಡಚೈತನ್ಯವೇ ಸರಿ. ಚೈತನ್ಯವು ಅಹಂಕಾರದಲ್ಲಿ ಬೆರೆತಿರುವದು. ಅಹಂಕಾರವು ಶುದ್ಧಾಶುದ್ಧವೆಂದು ಎರಡು ಪ್ರಕಾರವಾಗಿರುವದು. ಅಹಂಕಾರದಲ್ಲಿ ಪೃಥ್ವೀ ತತ್ವವಿರುವದು. ಪೃಥ್ವೀ ತತ್ವದಲ್ಲಿ ಶುದ್ಧವಾದ ಅಹಂಕಾರವು ಕೂಡಿತೆಂದರೆ ಅದು ಜಡವಾಗುವದು. ಯಾಕಂದರೆ ಪೃಥ್ವಿಯು ಜಡವಾಗಿರುವದು. ಅಶುದ್ಧಾಹಂಕಾರವು ಅಶುದ್ಧ ಸ್ವರೂಪದ ಕಡೆಗೆ ಒಯ್ದು ಮನುಷ್ಯನನ್ನು ಪೃಥ್ವಿಯಲ್ಲಿ (ಮಣ್ಣಿನಲ್ಲಿ) ಕೂಡಿಸುವದು. ಪೃಥ್ವಿಯು ಶಬ್ದ ಸ್ಪರ್ಶ ರೂಪ ರಸ ಗಂಧಗಳಿಂದ ಕೂಡಿಕೊಂಡಿರುವದು. ಈ ರಸ ರೂಪಾದಿಗಳಿಂದ ಪೃಥ್ವಿಯು ದ್ವೇಷ ಮತ್ಸರಾದಿ ದುರ್ಗುಣಾದಿಗಳನ್ನು ತ್ಯಜಿಸಿ ದ್ವೈತ ತತ್ವವನ್ನು ಮರೆತು ಒಂದೇ ಒಂದು ಶುದ್ಧ ಅಹಂಕಾರದಲ್ಲಿ ಮಾತ್ರ ಉಳಿಯುವದರಿಂದಲೇ ಅನೇಕ ಪ್ರಾಣಿ ಮತ್ತು ವಸ್ತುಗಳನ್ನು ವಹಿಸಲಿಕ್ಕೆ ಸಮರ್ಥವಾಗುತ್ತದೆ. ನಮ್ಮ

ಲ್ಲಿರುವ ಅಧಿಕ ಶಕ್ತಿಯು ಅಹಂಕಾರವು ಪೃಥ್ವಿಗೆ ಇರುವದರಿಂದ ಅದು ಈ ಅಪಾರವಾದ ವಿಶ್ವಶಕ್ತಿಯಿಂದ ತನ್ನ ಮಸ್ತಕದ ಮೇಲೆ ಧರಿಸುತ್ತದೆ. ಇದು ತೇಜದ ತಿರಸ್ಕಾರವನ್ನಾಗಲಿ ವಾಯುವಿನ ಅವಹೇಲನವನ್ನಾಗಲಿ ಜಲದ ದ್ವೇಷವನ್ನಾಗಲಿ ಅಥವಾ ಆಕಾಶದ ಮತ್ಸರವನ್ನಾಗಲಿ ಎಂದೂ ಮಾಡುವದಿಲ್ಲವಾದ ಕಾರಣ ಇದನ್ನು ಉಳಿದ ನಾಲ್ಕು ತತ್ವಗಳು ತಮ್ಮಲ್ಲಿ ಸಮಾವೇಶ ಮಾಡಿಕೊಳ್ಳುವವು. ಅಹಂಕಾರದಿಂದಲೇ ಸೃಷ್ಟಿಯು ತನ್ನ ಅಸ್ತಿತ್ವವನ್ನು ಪ್ರಕಟಿಸುವದು. ಅಹಂಕಾರವು ಮನುಷ್ಯನಿಗೆ ಮನುಷ್ಯತ್ವದ ಮತ್ತು ತನ್ನ ಸ್ವರೂಪದ ಜ್ಞಾನವನ್ನು ಮಾಡಿಕೊಟ್ಟಾಗಳೇ ಅವನ ಆತ್ಮೋನ್ನತಿಯು ಜ್ಞಾನಕ್ಕೆ ಕಾರಣವಾಗುವದು. ಶರೀರವು ನಾನಲ್ಲ, ನಾನು ಪರಮಾತ್ಮನ ಸ್ವರೂಪನಾಗಿದ್ದೇನೆ, ಬುದ್ಧಿಯು ಆಶ್ರಯ ಮಾಡಿಕೊಂಡು ಜ್ಞಾನದಿಂದ ಆತ್ಮಸ್ವರೂಪದ ಉಚ್ಚಸ್ಥಿತಿಯನ್ನು ಹೊಂದುವದೇ ಮನುಷ್ಯನ ಧ್ಯೇಯವಿರುವದೆಂದು ಯಾವನು ತಿಳಿಯುವನೋ ಅವನಿಗೆ ಸೋಹಂ ಎಂಬ ಅಹಂಕಾರವು ಪರಮಾತ್ಮನ ಅರಿವನ್ನು ಮಾಡಿಕೊಡುವದು. ಇದಕ್ಕೆ ಶುದ್ಧಾಹಂಕಾರವೆನ್ನುವರು. ಯಾವ ಅಹಂಕಾರವು ತನ್ನ ಶರೀರ ಸುಖವನ್ನು ಶ್ರೇಷ್ಠವಾಗಿ ತಿಳಿಯುವದೋ ಅದು ವೃಥಾಭಿಮಾನದಿಂದ ಅನ್ಯರನ್ನು ತಿರಸ್ಕಾರದೃಷ್ಟಿಯಿಂದಲೂ ಮಾತ್ಸರ್ಯ ಭಾವದಿಂದಲೂ ಯಾವಾಗಲೂ ನೋಡುವದು. ಇದರ ಕಡೆಯಿಂದ ಅನೇಕ ಘಾತುಕ ಕಾರ್ಯಗಳಾಗುವವು. ಕಡೆಗೆ ಅನ್ಯರಿಗೆ ನಾಶವನ್ನುಂಟುಮಾಡಿ ತನಗೂ ಅನಿಷ್ಟವನ್ನು ತಂದುಕೊಳ್ಳುವದು. ಶುದ್ಧಾಹಂಕಾರವು ಸನ್ಮಾರ್ಗಕ್ಕೆ ಹಚ್ಚುವದು. ಅಶುದ್ಧಾಹಂಕಾರವು ದುರ್ಮಾರ್ಗದ ಕಡೆಗೆ ಒಯ್ಯುವದು.

ಜಲತತ್ವವು ಜೀವನ ರೂಪಾಗಿರುವದು, ಪೃಥ್ವಿಯ ಮೇಲಿನ ಸಮಸ್ತ ಪ್ರಾಣಿಗಳನ್ನೂ ವೃಕ್ಷಾದಿಗಳನ್ನೂ ಪಾಲನ ಮಾಡುವದು. ಜಲವಿಲ್ಲದೆ ಕ್ಷಣ ಕಾಲವಾದರೂ ಯಾವದೂ ಇರಲಾರದು. ಜಲದಲ್ಲಿ ದ್ರವ ಗುಣ ಇರುವದು. ಯಾವ ಪದಾರ್ಥದಲ್ಲಿ ದ್ರವ ಗುಣವಿರುವದಿಲ್ಲವೋ ಅದು ಶುಷ್ಕವಾಗುವದು. ಆರ್ದ್ರತ್ವವಿಲ್ಲದಿದ್ದರೆ ಯಾವ ಪದಾರ್ಥವೂ ಉಪಯೋಗಕ್ಕೆ ಬರುವದಿಲ್ಲ. ಯಾವದರಲ್ಲಿ ಸತ್ವವಿರುವದಿಲ್ಲವೋ ಅದರಲ್ಲಿ ಜಲದ ಅಂಶವಿರುವದಿಲ್ಲ. ಯಾವದರಲ್ಲಿ ಜಲವಿರುವದೋ ಅದು ರಸಭರಿತವಾಗುವದು. ನೀರಿನ ಪದಾರ್ಥಗಳನ್ನು ಕೂಡ ರಸ ಭರಿತನ್ನಾಗಿ ಮಾಡು

ವದು. ಆರ್ದ್ರತ್ವವು ಮೃದುಗುಣವನ್ನುಂಟು ಮಾಡುವದು. ಹೀಗೆ ಆರ್ದ್ರತ್ವವುಳ್ಳ ಉದಕವು ನಾಲ್ಕೂ ಕಡೆಗೆ ಪಸರಿಸಿ ಸರ್ವಕ್ಕೂ ಜೀವನ ಕಲೆಯನ್ನು ತರುವದು.

ಜೀವನ ಶಕ್ತಿಯಲ್ಲಿ ತೇಜದ ಪ್ರತಾಪವು ವಿಲಕ್ಷಣವಾಗಿರುವದು. ತೇಜದಲ್ಲಿ ಪ್ರಕಾಶ ಗುಣವಿರುತ್ತದೆ. ಅದು ಸರ್ವ ಪದಾರ್ಥಗಳನ್ನು ಪ್ರಕಾಶಮಯವನ್ನಾಗಿ ಮಾಡುತ್ತದೆ. ಪ್ರಕಾಶದಿಂದ ದೃಷ್ಟಿಯ ವ್ಯಾಪಕತೆಯು ಬೆಳೆದು ಸರ್ವ ವಸ್ತುಗಳು ಇದರ ಮೂಲಕ ಕಾಣಿಸುತ್ತವೆ. ಇದರಿಂದ ನಾವು ಇಚ್ಛಿತ ಸ್ಥಳಕ್ಕೆ ಹೋಗಿ ನಮ್ಮ ಧ್ಯೇಯವನ್ನು ಸಾಧಿಸಲಿಕ್ಕೆ ಯೋಗ್ಯವಾಗುವದು. ತೇಜವು ನಮ್ಮ ದೃಷ್ಟಿಯ ಪ್ರದೇಶವನ್ನು ವಿಸ್ತಾರ ಮಾಡುತ್ತದೆ. ಮತ್ತು ಸೃಷ್ಟಿಯೊಳಗಿನ ರಮ್ಯ ವಸ್ತುಗಳ ದರ್ಶನ ಮಾಡಿಸಿ ಆನಂದಗೊಳಿಸುತ್ತದೆ. ತೇಜವು ಜ್ಞಾನಕ್ಕೆ ಕಾರಣವಾಗುತ್ತದೆ. ಜ್ಞಾನವು ಮೋಕ್ಷಕ್ಕೆ ಕಾರಣವು. ನಮಗೊದಗಿರುವ ಸಂಕಟಗಳನ್ನು ದೂರ ಮಾಡಿಸುವ ಮಾರ್ಗವನ್ನು ತೋರಿಸುವ ಜ್ಞಾನವು ಜ್ಯೋತಿಸ್ವರೂಪವಾಗಿರುತ್ತದೆ. ಜ್ಯೋತಿಯು ಅನಂತ ಜ್ಯೋತಿಗಳೊಡನೆ ಕೂಡಿಕೊಂಡರೆ ಸರ್ವತ್ರದಲ್ಲಿಯೂ ಪ್ರಕಾಶವನ್ನುಂಟುಮಾಡುವದು. ಮತ್ತು ತೇಜವು ಕಗ್ಗತ್ತಲೆಯನ್ನು ನಾಶ ಮಾಡುವಂತೆ ದುಷ್ಟಮನೋವಿಕಾರಗಳನ್ನು ನಾಶ ಮಾಡುವದು. ಹಾಗೆಯೇ ಮನೋ ಭೂಮಿಕೆಯನ್ನೂ ಶುದ್ಧ ಮಾಡುವದು. ಈ ತರಹದ ಶುದ್ಧ ಮನೋ ಭೂಮಿಕೆಯಲ್ಲಿ ಆತ್ಮ ಸ್ವರೂಪದ ಬಿಂಬವು ಉದ್ಭವಿಸಿತೆಂದರೆ ಅದೇ ಬರಬರುತ್ತ ಆತ್ಮಸ್ವರೂಪವೇ ಆಗಿಬಿಡುವದು. ಈ ತೇಜದ ಜ್ವಾಲೆಯು ವಾಯುವಿನಲ್ಲಿ ಕೂಡಿ ಎಲ್ಲ ಕಡೆಗೆ ವ್ಯಾಪಿಸುತ್ತದೆ.

ವಾಯುವಿನಲ್ಲಿ ಅಲ್ಲಾಡುವ ಶಕ್ತಿ ಇರುತ್ತದೆ. ಈ ಅಲ್ಲಾಡುವ ಶಕ್ತಿಯು ಪಸರಿಸುವ ಕಾರ್ಯವನ್ನುಂಟು ಮಾಡುತ್ತದೆ. ಇದು ಪೃಥ್ವಿ ಜಲ ಆಕಾಶಗಳಲ್ಲಿ ಕೂಡುವದು. ವಾಯುವಿನ ಪ್ರಸರಣ, ಧಾವನ, ಚಲನ, ವಲನ, ಕ್ರಿಯೆಗಳು ಸರ್ವ ವಸ್ತುಗಳಲ್ಲಿ ಎಲ್ಲಿಯ ವರೆಗೆ ಇರುತ್ತವೋ ಅಲ್ಲಿಯ ವರೆಗೆ ಚೈತನ್ಯವಿರುವದು. ಅದರಿಂದ ಪ್ರಾಣವಾಯುವು ಮನುಷ್ಯನ ಶರೀರದಲ್ಲಿ ಇರುವ ವರೆಗೆ ಆದು ಬಾಳಲು ಸಮರ್ಥವಾಗುತ್ತದೆ. ಬುದ್ಧಿಯ ತೇಜದಿಂದ ವಿಶ್ವದೊಳಗಿನ ಅನಂತ ಕಾರ್ಯಗಳನ್ನು ನೋಡಲಿಕ್ಕೆ ಸಮರ್ಥವಾಗುವದು. ವಾಯುವು ಬುದ್ಧಿಯ ರೂಪದಿಂದ ಆಕಾ

ಶದಲ್ಲಿ ಕೂಡಿದರೆ ಸರ್ವ ವ್ಯಾಪಿಯಾಗುವದು. ಹಾಗೆ ಸರ್ವ ವ್ಯಾಪಿ ಯಾದ ಪ್ರಾಣವಾಯುವು ಮುಕ್ತವಾಗುವದು. ಮುಕ್ತಿಯೆಂದರೆ ಜೀವ ನವಿಲ್ಲದಿರುವಿಕೆಯು. ಬಂಧನವೇ ದುಃಖವು. ಬಂಧನದ ರಾಹಿತ್ಯವೇ ಆನಂದವು. ವಿಶ್ವವ್ಯಾಪಿಯಾದ ಈ ಆನಂದ ಸ್ಥಿತಿಯೇ ಮುಕ್ತ ಸ್ಥಿತಿಯು. ಅಖಂಡ ಚೈತನ್ಯವು ನಿಜಾನಂದದ ಸಲುವಾಗಿಯೇ ಪ್ರಯತ್ನಿಸುವದು. ಯಾವನು ಈ ಮಾರ್ಗವನ್ನು ಹುಡುಕಿ ಅದರಿಂದ ಗಮನ ಮಾಡು ವನೋ ಅವನೇ ಮುಕ್ತನಾದನೆಂದು ತಿಳಿಯಬೇಕು.

ಆಕಾಶವು ಆತ್ಮನ ವಸತಿಗೃಹವಾಗಿರುವದು. ಮನವು ವಾಯುರೂಪಾ ಗಿರುವುದು. ಚಿತ್ ಜಲರೂಪಾಗಿರುವುದು. ಮನ ಬುದ್ಧಿ ಚಿತ್ತ ಅಹಂಕಾರ ಗಳಿಗೆ ಅಂತಃಕರಣ ಚತುಷ್ಟಯುಗಳೆನ್ನುತ್ತಾರೆ. ಈ ಅಂತಃಕರಣ ಚತುಷ್ಟಯದೊಳಗಿಂದ ಪ್ರೇರಣೆಗಳುತ್ಪನ್ನವಾಗಿ ಶರೀರದಲ್ಲಿ ಕಾರ್ಯ ರೂಪಗಳು ತೋರಿದ್ದಾದರೆ ಅವುಗಳಿಗೆ ಆತ್ಮನು ಸಾಕ್ಷೀಭೂತನಾಗಿರು ತ್ತಾನೆ. ಆತ್ಮನು ಇದು ತನ್ನ ಶರೀರವೆಂದು ಭಾವಿಸಿದರೂ ಜೀವಾತ್ಮನು ಅಲ್ಪಜ್ಞನೆನಿಸುವನು. ಶರೀರ ಆತ್ಮರುಗಳೆರಡೂ ಭೇದಭಾವದಲ್ಲಿದ್ದು ಆತ್ಮನು ಮಾತ್ರ ಸರ್ವ ವ್ಯಾಪಕನಾಗಿರುವನೆಂಬುದನ್ನು ಬುದ್ಧಿಯ ಸಹಾಯದಿಂದ ತಿಳಿದರೆ ಜೀವನು ಆತ್ಮಸ್ವರೂಪನಾಗುವನು. ಅನಂ ತರ ದ್ವೈತವು ನಾಶವಾಗಿ ಆತ್ಮಾರಾಮನೆನಿಸುವನು. ಬುದ್ಧಿಯು ಪ್ರಪಂಚ ದೊಳಗಿನ ಬಾಹ್ಯ ಸ್ವರೂಪವನ್ನು ನೋಡಿ ಅದರಲ್ಲಿಯೇ ಆಸಕ್ತವಾ ದರೆ ಆತ್ಮನು ಅದೇ ಶರೀವನ್ನು ಧರಿಸಿಕೊಂಡು ಪುನಃ ಪುನಃ ಜನ್ಮವೆ ತ್ತುವನು. ಬುದ್ಧಿಯು ಅಂತರ್ಮುಖವಾಗಿ ಆತ್ಮ ಸ್ವರೂಪವನ್ನು ತಿಳಿಯಲು ಪ್ರವರ್ತಿಸಿದರೆ ಆ ಬುದ್ಧಿಯು ಆತ್ಮ ಸ್ವರೂಪವನ್ನು ತಿಳಿಯಪಡಿಸು ವದು. ಇನ್ನು ಆತ್ಮ ಸ್ವರೂಪದ ಜ್ಞಾನವಾದ ಮೇಲೆ ಬುದ್ಧಿಗೆ ಯಾವ ಕಾರ್ಯವೂ ತಿಳಿಯುವದಿಲ್ಲ. ಆ ಮೇಲೆ ಅಲ್ಲಿಯೇ ಲಯವಾಗಿ ಶುದ್ಧ ಆತ್ಮ ಸ್ವರೂಪವೇ ಆಗುವದು. ಇದಕ್ಕೆ ಮುಕ್ತಾವಸ್ಥೆ ಎನ್ನುವರು. ಪ್ರಪಂಚದೊಳಗಿನ ಚೈತನ್ಯವು ಪ್ರಪಂಚದ ನಿಜ ಸ್ವರೂಪವನ್ನು ತಿಳಿಯು ವದಕ್ಕಾಗಿಯೇ ಇರುತ್ತದೆ. ಇದನ್ನು ತಿಳಿಯುವದು ಮನುಷ್ಯನ ಕರ್ಮ ವಾಗಿದೆ. ನಿಜ ಸ್ವರೂಪದ ಜ್ಞಾನವನ್ನು ಮಾಡಿಕೊಂಡವನೇ ಜನ್ಮದ ಸಾರ್ಥಕತೆಯನ್ನು ಮಾಡಿಕೊಳ್ಳುವನು. ಇದರ ವಿಪರೀತವಾಗಿ ಮನು ಷ್ಯನು ಸಂಸಾರ ಚಕ್ರದಲ್ಲಿ ಸಿಲುಕಿ ತಿರುತಿರುಗಿ ಗಮನಾಗಮನ ಹೊಂದಿ

ದರೆ ದುಃಖ ಭಾಜನನಾಗುವನು. ಯಾವನಿಗೆ ಆತ್ಮ ಸ್ವರೂಪದ ಜ್ಞಾನ ವಿಲ್ಲವೋ ಆತನು ಬಂದ ಹಾಗೆ ಹೋಗುವನಲ್ಲದೆ ತಿರುಗಿ ಜನ್ಮವನ್ನು ಎತ್ತುವನು. ಮತ್ತು ಜನ್ಮವೆತ್ತಿದ ಮೇಲೆ ಈ ವಿಶ್ವದಲ್ಲಿ ತಿರುಗಿ ಆತ್ಮ ಜ್ಞಾನವನ್ನು ಮರೆತು ಬಿಡುವನು. ಈ ನಿಯಮವು ಒಂದು ವ್ಯಕ್ತಿಗೆ ಸಂಬಂಧವಿರುವಂತೆ ಸಮಸ್ತ ಸಮಾಜಕ್ಕೂ ಸಂಬಂಧಪಡುತ್ತದೆ. ಸ್ವಸ್ವರೂಪವನ್ನು ತಿಳಿಯದಿರುವ ವ್ಯಕ್ತಿಯಾಗಲೀ ರಾಷ್ಟ್ರವಾಗಲೀ ಅಥವಾ ಸಮಾಜವೇ ಆಗಲೀ ಅದು ಯಾವಾಗಲೂ ಬಂಧನದಿಂದ ಮುಕ್ತವಾಗುವದಿಲ್ಲ. ಧರ್ಮವೆಂದರೇನು? ಮನಸ್ಸಿನ ದುಷ್ಟ ವಿಕಾರಗಳನ್ನು ನಷ್ಟ ಮಾಡಿ ಶುದ್ಧ ಮನಸ್ಸನ್ನು ಸಿದ್ಧಪಡಿಸುವದೇ ಧರ್ಮವು. ಶುದ್ಧ ಮನಸ್ಸಿನಿಂದ ಸರ್ವ ಶುದ್ಧ ಕ್ರಿಯೆಗಳೇ ಉಂಟಾಗುವವು. ಹೀಗೆ ಶುದ್ಧವಾದ ಮನಸ್ಸಿನಲ್ಲಿಯೇ ಶುದ್ಧ ಸ್ವರೂಪ ಜ್ಞಾನವಾಗುವದು. ತದ್ವಿರುದ್ಧವಾದ ಮನಸ್ಸಿನಿಂದ ತದ್ವಿರುದ್ಧ ಕ್ರಿಯೆಗಳೇ ಘಟಿಸುವವು. ಅಂಧಕಾರವು ಕಾರ್ಗತ್ತಲೆಯಿಂದ ದೃಷ್ಟಿಯನ್ನು ವ್ಯಾಪಿಸುವಂತೆ ಅಜ್ಞಾನಾಂಧಕಾರವು ಜ್ಞಾನ ದೃಷ್ಟಿಯನ್ನು ವ್ಯಾಪಿಸುವದು. ಆದ್ದರಿಂದ ಶುದ್ಧಾಶುದ್ಧ ಜ್ಞಾನಗಳೇ ನಮಗೆ ಆಗುವದಿಲ್ಲಾದ್ದರಿಂದ ನಾವು ನಮ್ಮಗಳ ಪ್ರವೃತ್ತಿ ಮಾಡಿಕೊಳ್ಳಲಿಕ್ಕೆ ಸಮರ್ಥರಾಗುವದಿಲ್ಲ. ಅಜ್ಞಾನದಿಂದ ಕೂಡಿದ ಕಾರಣ ತನ್ನ ಮಾರ್ಗವು ತನಗೆ ತಿಳಿಯುವದಿಲ್ಲ. ಜ್ಞಾನವನ್ನು ನಾಶಮಾಡುವದೆಂದರೆ ಪ್ರಗತಿ ಪಥದ ಮೇಲೆ ಬರುವದೇ ಇದೆ. ಅಜ್ಞಾನವು ಪ್ರಕಾಶದಲ್ಲಿ ಸಂಚರಿಸುತ್ತದೆ. ಪ್ರಕಾಶವು ಸತ್ಯ ಮಿಥ್ಯತ್ವದ ಗುರುತುಮಾಡಿಕೊಳ್ಳುತ್ತದೆ. ಸತ್ಯದ ಆಶ್ರಯ ಮಾಡಿಯೇ ನಾವು ಸತ್ಯದಲ್ಲಿ ಕೂಡಬೇಕಾಗಿದೆ. ವಿಶ್ವದೊಳಗಿನ ಚೈತನ್ಯವು ಸತ್ಯ ಸ್ವರೂಪದಲ್ಲಿ ಲೀನವಾಗುವದಕ್ಕೆಯೇ ಜೀವಿಸುವದು. ಅದರಂತೆ ಪ್ರತಿಯೊಬ್ಬರೂ ತಮ್ಮ ಮನಸ್ಸನ್ನು ಶುದ್ಧಮಾಡಿಕೊಂಡು ಶುದ್ಧ ಸ್ವರೂಪದ ಕಡೆಗೆ ಸಾಗಬೇಕು. ಅದೇ ವೇಳೆಯಲ್ಲಿ ಅವರು ತಮ್ಮ ಸಮಾಜಕ್ಕೂ ರಾಷ್ಟ್ರಕ್ಕೂ ತಿಲಕಪ್ರಾಯರಾಗುತ್ತಾರೆ. ಯಾವದು ಸತ್ ಸ್ವರೂಪದಲ್ಲಿ ಕೂಡಿಕೊಂಡು ವ್ಯವಹರಿಸುವದಲ್ಲದೆ ಅನ್ಯರನ್ನು ಸಹ ವ್ಯವಹರಿಸುವಂತೆ ಮಾಡುವದೋ ಅದೇ ವಿಶ್ವದೊಳಗಿನ ನಿಜವಾದ ಚೈತನ್ಯವೆನಿಸಿಕೊಳ್ಳುತ್ತದೆ.

# ಸೂಚನೆ.

"ಶಿವಾನುಭವ" ಪತ್ರಿಕೆಯು ಮಾಸಿಕವಾದ ಬಳಿಕ ಒಂದು ವರ್ಷವು ಪೂರ್ತಿಯಾಗಿ ಮೇಲೆ ಮೂರು ಸಂಚಿಕೆಗಳು ಹೊರಟಿರುತ್ತವೆ. ಈ ಹಿಂದಿನ ೧೧ನೇ ಸಂಪುಟದಲ್ಲಿ ನಾವು ಮುಖ್ಯವಾಗಿ ವಿಮರ್ಶಾತ್ಮಕ ಲೇಖಗಳಿಗೆ ಇಂಬುಗೊಡುತ್ತ ಬಂದಿದ್ದೇವೆ. ಹಾಗೆಯೇ ರಗಳೆಗಳು, ಕಾವ್ಯಗಳು, ವಚನಗಳು ಇವುಗಳ ಗುಣದೋಷಗಳನ್ನರಹುವ ಅನೇಕ ಲೇಖಗಳೂ ಬಂದಿವೆ. ಈಚೆಗೆ ಅಲ್ಲಲ್ಲಿ ಚರ್ಚಾಕೂಟಗಳು ಸ್ಥಾಪಿಸಲ್ಪಡಹತ್ತಿವೆ. ಇವುಗಳಲ್ಲಿ ಅನೇಕರು ಕೂಡಿಕೊಂಡು ಶಿವಾನುಭವ ಗ್ರಂಥಗಳ ಅಭ್ಯಾಸ ಮಾಡುತ್ತಲಿರುವರು. ಇಂಥವರಲ್ಲನೇಕರು ಲೇಖಗಳನ್ನು ಬರೆದು ನಮ್ಮ ಕಡೆಗೆ ಕಳಿಸುತ್ತಲಿರುವರು. ಇವರ ಲೇಖಗಳಿಗೂ ನಾವು ಪತ್ರಿಕೆಯಲ್ಲಿ ಸ್ಥಾನವನ್ನು ಕೊಡಹತ್ತಿರುತ್ತೇವೆ. ಈ ಬಗೆಯ ಚರ್ಚಾಸಂಘಗಳು ನಾಡಿನಲ್ಲಿ ಸ್ಥಾಪಿಸಲ್ಪಡುವದು ಶುಭಚಿನ್ಹವಾಗಿದೆ. ಇದರಿಂದ ಪರಸ್ಪರ ವಿಚಾರ ವಿನಿಮಯಗಳೊದಗುವವು. ಅನೇಕ ರೀತಿಯ ಹೊಸ ತರದ ಅಭಿಪ್ರಾಯಗಳು ವ್ಯಕ್ತವಾಗುವವು. ಇದರಂತೆಯೇ ಪತ್ರಿಕೆಯಲ್ಲಿ ಸಂಶೋಧನಾತ್ಮಕ ಲೇಖಗಳೂ ಅನೇಕ ಬಂದಿರುತ್ತವೆ. ಇವಾದರೂ ಅತ್ಯಂತ ಮಹತ್ವವಾದವುಗಳು. ಇವುಗಳ ಮೂಲಕ ಸಮಾಜದ ಸಾಮಾಜಿಕ ಮತ್ತು ಐತಿಹಾಸಿಕ ನಿಜಸ್ಥಿತಿಯ ಮೇಲೆ ವಿಶೇಷ ಪ್ರಕಾಶವು ಬೀಳುವದು. ಈ ಧೋರಣಗಳಿಂದ ನಾವು ಹೋದ ವರ್ಷ ಶಿವಾನುಭವವನ್ನು ನಡಿಸುತ್ತ ಬಂದಿದ್ದು ವಾಚಕರ ತಿಳುವಳಿಕೆಗೆ ಬಂದಿರಬಹುದು. ನಮ್ಮ ಈ ಪ್ರಯತ್ನದಲ್ಲಿ ಅವರು ಮುಂದಾದರೂ ತಮಗೆ ತೋಚಿದ ಸಲಹೆಗಳನ್ನು ಕೊಟ್ಟು ನಮ್ಮ ಈ ಕಾರ್ಯದಲ್ಲಿ ಸಹಾಯವನ್ನೀಯಬೇಕೆಂದು ನಾವು ಅವರನ್ನು ಪ್ರಾರ್ಥಿಸುತ್ತೇವೆ.

ಸಂಪಾದಕ.

# ಶ್ರೀ. ಹಾನಗಲ್ಲ ಸ್ವಾಮಿಗಳವರು ರಚಿಸಿದ

# ಹಾಡುಗಬ್ಬಗಳು.

(ಸಂಗ್ರಾಹಕಃ— ಶ್ರೀ ಚಂದ್ರಶೇಖರ ದೇವರು, ಅಡ್ನೂರ)

ಹಿಂದಿನಿಂದ ಸಾಗಿದುದು.

---

೨

ವೃತ್ತಿಯು ಜಾಲ। ಚಿಂತೆಯು ಮೂಲ।
ಚರೇಶ್ವರ।
ಹತ ಮಾಡಿ ಘನಲೀಲ॥

೩

ನಿನ್ನಯು ಸಂಗ। ಬನ್ನದ ಭಂಗ।
ಪರೇಶ್ವರ।
ಅನುಗೈದು ಶಿವಯೋಗ॥

---

## ಪದ್ಯ ೪.

(ರಾಗ-ಆನಂದಭೈರವಿ)

ಭೋದೇವ ಗಿರಿಜಾಧವ!। ಮುದವಿಲಸಿತ ಮದಹತ।
ಇಂದ್ರಿಯಜಿತ। ಸಾಧು ಚರಿತ ಆ ಜಯ ॥ಪ॥

೧

ಸಂಪದಾಸುರದಿ ಚರಿಪ। ಪಾಪದಾಗರವಿಲೋಪ।
ಸುಪಥವೇ ಸುಪ್ರದೀಪ॥ ತಮರಜಗುಣವಿರಹಿತ।
ಸುಮನ ಸಹಿತ। ವಿಮಲರತ 'ಆ' ಭವ॥

೨

ಸಂತರಾಚರಣ ಸುಖವ। ಚಿಂತಿಪಾತ್ಮರ ಸುಭಾವ।
ಸಂತತಾನಂದವೀವ॥ ವರಗುರುಚರಣ ಕಮಲ।
ದಿರವೆ ಸಕಲ। ಚರಲೀಲಾ 'ಆ' ಗತ॥

೩

ಬಿಂದುನಾದ ಪರಯೋಗ- । ದಿಂದಲಾದ ಶಿವಯೋಗಾ-
ನಂದದಾಚರಿಸು ಯೋಗ ॥ ಜವದಿ ಕೊಡು ಪರಮೇಶ ।
ಭವವಿನಾಶ । ಸುವಿಲಾಸ 'ಆ' ಶಿವ ॥

---

## ಪದ್ಯ ೫.

(ರಾಗ-ಪೀಲು)

ಶಂಕರ ಕಾಯೊ ಸದಾ । ಕಿಂಕರರನು ।
ಸಂಕಟವನು ದೂರೀ ಕರಿಸುತ ॥ಪ॥

೧

ಘೋಂಕನೆ ಮನದ, ಬಿಂಕವ ಬಿಡಿಸಿ ।
ಅಂಕಿತದೊಳಗಿರಿಸಿ । ಕಿಂಕರರನು ॥

೨

ಪರತರ ಶಿವನೀ, ಗುರುಚರವೆನಿಸಿ ।
ನಿರುತದಿ ಸಂಚರಿಸಿ । ಪರಿಪಾಲಿಸಿ ॥

೩

ಸಾಭಾರಿ ಸಿರಿ, ಭಾರಿ ಗುರು ನೀನೆ ।
ಲೋಭಾದಿಗಳನಳಿದು । ಲಾಭದಿಸುಳಿದು ॥

೪

ದೀಕ್ಷ ಶಿಕ್ಷ, ಮೋಕ್ಷ ಗುರು ನೀ ।
ದಕ್ಷನೆ ಮುಮ್ಮಲವ । ಈಕ್ಷಿಸಿ ಕಳೆವ ॥

೫

ಕಾಮ ಕಾಲ ಮಾಯ, ಸೀಮೆಯ ಬಿಡಿಸಿ ।
ಕಾಮಾರಿ ಗುರುವರನೆ । ಪ್ರೇಮದಿ ನೀನೆ ॥

೬

ಇಷ್ಟ ಪ್ರಾಣ, ಶ್ರೇಷ್ಠ ಭಾವದಿ ।
ಕಷ್ಟವನತಿಗಳೆದು । ಶಿಷ್ಟತನದಿ ॥

೭

ತನು ಮೂರರಲಿ, ಜನಿಪ ದೋಷವನು ।
ಸನುಮತದಿಂ ಕಳೆದು । ತನುವಳಿದು ॥

೮

ಸ್ವಯ ಚರ ಪರವು, ಭಯಲಯದಿರವು ।
ಪಯ ಶೇಷಕರವಾಗಿ । ದಯಯುತನಾಗಿ ॥

೯

ಶಿವಯೋಗಾಲಯ । ಭುವನದಿ ಮೆರೆಯುವ ।
ತವೆ ಸಾಧನವಿರಿಸಿ । ನಿವಾಸಿಸಿ ॥

---

## ಪದ್ಯ ೬.

(ರಾಗ-ದರ್ಬಾರಿಕಾನಡಾ)

ಶಾಂತಿಸುಖವ ಕೊಡು ಬೇಗನೆ ಶಿವ ।
ವೃಥಾಬದ್ಧ ಭವ ಬಾಧೆಯ । ಲಯಮಾಡುತ ನೀ ।
ಪರತರ ಗುರುವರ ॥ಪ॥

೧

ಮಂದ ತಾಮಸವ । ಪೊಂದಿ ನಿಂದೆ ನಾನು ।
ಕುದುವಡೆಯುತ, ಸದಾ ಮೂಢತಮ ॥
ಖೇದ ಮೋದವು ದಹಿಸಲಹುದೆನ್ನಂ ।
ಭವೋತ್ತರ! ಶಿವಾಪರ! ಭುವೀಶ್ವರ!!! ॥

೨

ಕುಟಿಲ ರಾಜಸವು। ಪಟುತರವಾಗಿಹುದು।
ದಿಟವನರಿಯದೆ, ದೃಢಾಲಿಂಗನವ ॥
ಮಾಡಿ ಕೂಡಿ ಬಿಡದೆ ಕಾಡದೆನ್ನಂ ।
ಚರಾಚರ! ಪರಾತ್ಪರ!! ನಿರಂತರ!!!

೩

ವಿನಯ ದಾನತಪ । ಘನ ಶಮ ದಮಗಳನು ।
ಮನದ ಕೊನೆಯೊಳು, ಅಸಾಧಾರಣ ॥

ಧ್ಯಾನ ಮೌನ ಶಿವಯೋಗವ ಕೊಡು ನೀ।
ನಮೋಭವ! ಉಮಾಧವ!! ಸುಮೋದವ!!! ॥

---

ಪದ್ಯ ೭
(ರಾಗ ಕೇದಾರ)

ಮನವನು ಪರಿಪಾಲಿಸು ನೀ। ಜ್ಞಾನದಾನಮಾಡಿ ಶಿವ।
ಚಿನುಮಯ ಪ್ರಭು। ಮಾಯಾರಿ! ಮಾರಾರಿ!! ಕಾಲಾರಿ!!! ॥ಪ॥

೧

ನೇತ್ರದಾಟನಿಲ್ಲಿಸಿ। ಸೂತ್ರದಿಯ ಸುಮತಿಯುಗೂಡಿ।
ಗಾತ್ರತ್ರಯುವಳಿಯುತೆ। ಚಿತ್ರದ ಚಿದ್ಬಿಂದು ತೋರಿ।
ಚಿನುಮಯ ಪ್ರಭು ॥

೨

ನಾದ ಬ್ರಹ್ಮ ಭೇದವ। ಶೋಧಿಸಿ ದೃಢ ಚಿತ್ತನಾಗಿ
ಸಾಧಿಸಿ ಶಿವಕಲೆಯನ್ನು। ಮೋದಗೊಳ್ಳುವಂತೆ ಮಾಡಿ।
ಚಿನುಮಯ ಪ್ರಭು ॥

೩

ಲಿಂಗಾಂಗ ಸಂಗದ। ಇಂಗಿತದ ಬೋಧವಿತ್ತು।
ಲಿಂಗೈಕ್ಯನ ಮಾಡುತೆ। ಮಂಗಲ ಶಿವಯೋಗಿಯೆನಿಸಿ ॥
ಚಿನುಮಯ ಪ್ರಭು ॥

---

ಪದ್ಯ ೮
(ರಾಗ- ದರ್ಬಾರಿಕಾನಡಾ)

ಮಾನವ, ನೀನಾರೋ?। ಕಾಯ-
ಮನ್ನ, ಮರತ ನಿನಗಿವೇನೋ? ॥ಪ॥

೧

ಭ್ರಮಾತ್ಮಕ ಸಂಸಾರವಿದು।
ಕುಮತಿಯುತರಬಿಡದೈಸೆ।
ಮಮತೆಯಿಂ ಬಾಧಿಪುದೈಸೆ ॥

(ಮುಂದೆ ಸಾಗಿದುದು.)

ಚಾರ ಕ್ರಿಯೆಗಳ ಅಪಮೃತ್ಯು ಒಂದಾಶಟ್ಟಿ, ಪ್ರಾಣತ್ಯಾಗವ ಮಾಡಿದರೂ ಅಂಜಿ ಅಳುಕದೆ, ಪರಮಪತಿವ್ರತತ್ವದಿಂದೆ ಹಿಂದುಮುಂದಣ ಪುಣ್ಯಪಾಪ ವನೆಣಿಸದೆ, ಇಂತು ಶ್ರೀಗುರುವಾಕ್ಯ ನಿಜನೈಷ್ಠೆಯಿಂದರಿದು ನಿಜವೀರಶೈವ ಸದ್ಭಕ್ತಾಚಾರಲಿಂಗಮುಖದಿಂದ ಬಂದ ಸ್ವಪಾಕವಾದರೂ ಸರಿಯೇ. ಭಕ್ತಾಶ್ರಯದಲ್ಲಿ ಸ್ವಪಾಕವಮಾಡಿ ಸಂಬಂಧಾಚರಣೆಗಳಿಂದ ಪವಿತ್ರಸ್ವರೂಪಪಾದೋದಕ ಪ್ರಸಾದವೆನಿಸಿ, ನಿರ್ವಂಚಕತ್ವದಿಂದ ಸಂಚಲಚಿತ್ತವನುಳಿದು ಮಂತ್ರಸ್ಮರಣೆಯಿಂದ ಸರ್ವಾಚಾರ ಸಂಪತ್ತಿನಾಚರಣೆಯನ್ನೊಳಕೊಂಡು, ಸಮಸ್ತ ಲೋಕಪಾವನ ಮೂರ್ತಿ ನಿಃಕಲ ಪರಶಿವಲಿಂಗ ಜಂಗಮಕ್ಕೆ ಕೊಟ್ಟು ಕೊಂಬ ಸದ್ಭಕ್ತಜಂಗಮದ ಚರಣಕಮಲ ಧೂಳನವೇ ದ್ವಿತೀಯ ಕೈಲಾಸ ಶಿವಮಂದಿರವೆಂದು ಹಿಂದುಮುಂದಣ ಆಶೆ ಆಮಿಷದ ಭ್ರಾಂತು ಭ್ರಮೆಗಳನುಳಿದು, ಧ್ಯಾನ ಮೌನ ನೇಮ ನಿತ್ಯ ಸತ್ಯ ಸದ್ಭಾವವೆಂಬ ಷಡ್ಗುಣೈಶ್ವರ್ಯ ಸಂಪದವ ನಿಃಕಲಪರತತ್ವ ಲಿಂಗದಿಂಪಿಡೆದು ಆ ಲಿಂಗದೊಡನೆ ಭೋಗಿಸಿ ನಿಃಕಲಪರತತ್ವ ಮೂರ್ತಿತಾನಾದ ನಿಜಮೋಕ್ಷದಿರವೇ ಸದ್ಯೋನ್ಮುಕ್ತಿದೀಕ್ಷೆ ಇಂತುಟೆಂದು ಶ್ರೀಗುರು ನಿಃಕಳಂಕ ಚನ್ನಬಸವರಾಜೇಂದ್ರನು ನಿರ್ಲಜ್ಜಶಾಂತಲಿಂಗ ದೇಶಿಕೋತ್ತಮಂಗೆ ನಿರೂಪಮಂ ಕೊಡುತಿರ್ದರು ನೋಡಾ ಸಂಗನಬಸವೇಶ್ವರಾ.

೨೩. ಅಯ್ಯಾ, ಇಂತು ಅನಾದಿ ವಸ್ತುವೇ ಗುರುಶಿಷ್ಯ ಭಕ್ತಜಂಗಮ ಅಂಗಲಿಂಗ ಶರಣ ಸತಿ ಲಿಂಗಪತಿಯೆಂಬ ಸಾಕಾರಲೀಲೆಯಧರಿಸಿ, ಅವಿರಳಾನಂದ ವೇಧಾ ಮಂತ್ರ ಕ್ರಿಯಾದೀಕ್ಷೆಯುಕ್ತವಾದ ೨೧ ದೀಕ್ಷೆಯ ಭಿನ್ನವಿಲ್ಲದೆ ಸದ್ಗುರುಮುಖದಿಂದರಿದಾಚರಿಸಬಲ್ಲಡೆ ಸಹಜ ದೀಕ್ಷೆಯುಳ್ಳ ಶ್ರೀಗುರು ಲಿಂಗಜಂಗಮ ಭಕ್ತಮಹೇಶ ಪ್ರಸಾದಿ ಪ್ರಾಣಲಿಂಗಿ ಶರಣಐಕ್ಯ ನಿರವಯ ಮೂರ್ತಿ ಎಂಬೆನಯ್ಯಾ, ಕೂಡಲಚನ್ನಸಂಗನಲ್ಲಿ ಇಂತು ನಿರ್ಲಜ್ಜಶಾಂತಲಿಂಗ ದೇಶಿಕೋತ್ತಮಂಗೆ ಪರಮ ನಿರಾಭಾರಿ ವೀರಶೈವ ಷಟ್‌ಸ್ಥಲಾಚಾರ್ಯ ಚಿಕ್ಕದಂಡ ಪ್ರಮಥರು ಬೋಧಿಸಿದಂಥ ಮಹಾಪ್ರಸಾದವ ನಿನಗೆ ಹರದನಹಳ್ಳಿ ಸ್ಥಾಪನಾಚಾರ್ಯ ಶಿವಲಿಂಗಶಕ್ತಿವಲ್ಲಭನಾದ ಪರಮಾರಾಧ್ಯ ಬಸವಲಿಂಗ ಸಾಕ್ಷಿಯಾಗಿ ಅರುಹಿಸಿ ಕೊಟ್ಟೆವು ನೋಡಾ ಸಂಗನಬಸವೇಶ್ವರಾ.

೨೪ ಅಯ್ಯಾ ಪ್ರಮಥ ಗಣಂಗಳಿಲ್ಲಿ ಷಡ್ವಿಧ ಭಕ್ತಿಯೆಂಬ ಪರಮಾ
ಮೃತವ ಸೇವಿಸಿ ಪ್ರವೃತ್ತಿ ಮಾರ್ಗದಲ್ಲಿ ಚರಿಸುವ ಅರಿವೈರಿಗಳ ಸಂಗವ
ತ್ಯಜಿಸಿ, ನಿವೃತ್ತಿ ಮಾರ್ಗದಲ್ಲಿ ಚರಿಸುವ ಷಡ್ಗುಣಗಳ ಸಂಗವ ಸಾಧಿಸಿ,
ಜಂಗಮದಾಚಾರದ ವಿಚಾರವ ತಿಳಿದು ಷಟ್‌ಸ್ಥಲ ಮಾರ್ಗದಲ್ಲಿ ನಿಂದು
ಭಕ್ತಿ ಜ್ಞಾನ ವೈರಾಗ್ಯದಲ್ಲಿ ಆಚರಿಸಿದ ವಿಚಾರವೆಂತೆಂದೊಡೆ, ಅನಾದಿ
ನಿರಂಜನ ಅಕಾಯ ಚರಿತ್ರ ನಿರಾಲಂಬ ಪರಶಿವ ಮೂರ್ತಿ ಸಾಕ್ಷಾತ್ ಶ್ರೀ
ಗುರು ದೇವನಿಂದ ಏಕವಿಂಶತಿ ವೇಧಾಮಂತ್ರ ಕ್ರಿಯಾದೀಕ್ಷೆಯ ಪಡೆದು
ತನ್ನ ತಾನರ್ಚಿಸಿ ಆ ಶ್ರೀ ಗುರುದೇವನ ಲಿಂಗ ಜಂಗಮದ ಲೀಲೆ
ಹೇಗುಂಟೋ ಹಾಗೆ ಭಕ್ತಿಯಮಾಡಿ, ಶ್ರೀಗುರು ಲಿಂಗ ಜಂಗಮದ
ಅಂತಃಕರಣವೆಂಬ ಪರಮಾಮೃತ ಸುಧೆಯೊಳಗೆ ಲೋಲುಪ್ತರಾಗಿ ನಿರ
ವಯ ಸಮಾಧಿಯಲ್ಲಿ ಬಯಲಾದರು ನೋಡಾ, ಅದರ ವಿಚಾರ
ವೆಂತೆಂದೊಡೆ ಭಕ್ತಿ ಸ್ಥಲಕ್ಕೆ ಕಾರಣವಾದ ಬಸವಣ್ಣನೆ ಲಿಂಗಲಾಂಛನಂಗಳ
ನೋಡಿ ತನುಮನ ಧನವನೊಪ್ಪಿಸಿ ಶರಣೆಂದರಯ್ಯಾ; ಮಹೇಶ್ವರ ಸ್ಥಲಕ್ಕೆ
ಕಾರಣವಾದ ಮಡಿವಾಳ ದೇಶಿಕೇಂದ್ರನೇ ಲಿಂಗಲಾಂಛನ ವಿಭೂತಿ
ರುದ್ರಾಕ್ಷಿ ಪಂಚಾಚಾರವ ನೋಡಿ ತನುಮನಧನವ ನೊಪ್ಪಿಸಿ ಶರಣೆಂದ
ರಯ್ಯ. ಪ್ರಸಾದಿ ಸ್ಥಲಕ್ಕೆ ಕಾರಣವಾದ ಮರುಳ ಶಂಕರ ದೇವನೇ ಲಿಂಗ
ಲಾಂಛನ ವಿಭೂತಿ ರುದ್ರಾಕ್ಷಿ ಮಂತ್ರ ಪಂಚಾಚಾರದಾಚರಣೆ ಸಪ್ತಾಚಾ
ರವ ಸಂಬಂಧದ ನಡೆನುಡಿಯ ವಿಚಾರಿಸಿ ತನುಮನ ಧನವನೊಪ್ಪಿಸಿ ಶರ
ಣೆಂದರಯ್ಯ. ಪ್ರಾಣಲಿಂಗಿ ಸ್ಥಲಕ್ಕೆ ಕಾರಣವಾದ ಸಿದ್ಧರಾಮೇಶ್ವರನೇ
ಲಿಂಗಲಾಂಛನ ಶ್ರೀ ವಿಭೂತಿ ರುದ್ರಾಕ್ಷಿ ಮಂತ್ರ ದ್ವಾದಶಾಚಾರ ಮೊದ
ಲಾದ ಸರ್ವಾಚಾರ ಸಂಪತ್ತಿನಾಚರಣೆಯ ಸರ್ವಾಂಗದಲ್ಲಿ ನ್ಯೂನಗಳಿಲ್ಲದೆ
ನಡೆನುಡಿಗಳು ಹೊದ್ದದೆ ನಿರಾಭಾರಿ. ವೀರಶೈವ ನೋಡಿ ಇದೇ ಪರವಸ್ತು
ವೆಂದು ತನುಮನ ಧನವನೊಪ್ಪಿಸಿ ಶರಣೆಂದರಯ್ಯ.. ಶರಣ ಸ್ಥಲಕ್ಕೆ ಕಾರ
ಣವಾದ ಚನ್ನಬಸವ ರಾಜೇಂದ್ರನೇ ಇಂತು ಚತುರ್ವಿಧ ಮೂರ್ತಿಗಳ
ವಿಚಾರಿಸಿ ಆಚರಣೆಯ ನೋಡಿ ಗುರು ಸೂತ್ರ ಗೋತ್ರ ದೀಕ್ಷೆಯ ವಿಚಾ
ರಿಸಿ ಲಿಂಗಾಂಗ ಷಟ್‌ಸ್ಥಾನಂಗಳ ನೋಡಿ ಗುರುಮಾರ್ಗಾಚಾರ ನಡೆನುಡಿ
ಗಳ ವಿಚಾರಿಸಿ ಸ್ವಾನುಭವ ಸಕೀಲದ ಗೊತ್ತು ತಿಳಿದು ಲಾಂಛನವ ನೋಡಿ
ಮನ್ನಿಸಿ ತನುಮನ ಧನವನೊಪ್ಪಿಸಿ ಶರಣೆಂದರಯ್ಯ. ಐಕ್ಯ ಸ್ಥಲಕ್ಕೆ ಕಾರಣ
ವಾದ ಅಜಗಣ್ಣಗಂಳೇ ಬಸವ ಮಡಿವಾಳ ಮರುಳಶಂಕರ ಸಿದ್ಧರಾಮ

ಜನವರಿ 1938

ಸಂಪುಟ.12 ವಿಷಯಾನುಕ್ರಮಣಿಕೆ ಸಂಚಿಕೆ 4

# ಶಿವಾನುಭವ.

ವರ್ಷ ೧೨]　　　ಜಾನೇವಾರಿ ೧೯೩೮.　　　[ಸಂಚಿಕೆ ೪

## ಹರಿಹರನು ಹೊಗಳಿದ ದಾನವೀರ ಇಳೆಯಾಂಡ ಗುಡಿಮಾರ

(ಲೇ:— ಶ್ರೀ ಚಂದ್ರಶೇಖರ ದೇವರು ಅಡ್ನೂರ, ಮುಕ್ಕಾಂ ಶ್ರೀ ಸರ್ವಭೂಷಣಮಠ ಬೆಂಗಳೂರ.)

ಕವಿ ಹರಿಹರ. ಕಾವ್ಯ ಇಳೆಯಾಂಡ ಗುಡಿಮಾರರ ಮಹಾತ್ಮ್ಯೆ ಕೇಳುವದೇನು? ಸಾಹಿತ್ಯದ ಸುಗ್ಗಿಯೇ ಸುಗ್ಗಿ. ಅದರಲ್ಲಿ ಕಾವ್ಯ ಸಾಹಿತ್ಯವೂ ಉಂಟು. ಭಕ್ತಿ ಸಾಹಿತ್ಯವೂ ಉಂಟು. ಅದಿರಲಿ. ಆ ಕಥಾನಾಯಕನ ಹೆಸರಿನಲ್ಲಿಯೇ ಒಂದು ಬಗೆಯ ಅವ್ಯಕ್ತ ಮಾಧುರ್ಯವಿದೆ. ಅನುಪಮ ಸೌಂದರ್ಯವಿದೆ. ಆ ಹೆಸರಿನಲ್ಲಿರುವ ಹ್ರಸ್ವ-ದೀರ್ಘಾಕ್ಷರಗಳು, ಕವಿಯು ಕಾವ್ಯದಲ್ಲಿ ಹೆಣದಂತೆ, ಆ ಹೆಸರಿಗೆ ಹೆಚ್ಚು ಶೋಭೆ ತಂದಿವೆ. ಇನ್ನೊಮ್ಮೆ ಅಂದು ನೋಡಿ! ಇಳೆ-ಯಾಂಡ-ಗುಡಿ-ಮಾರ! ಆಹಾ! ಇಳೆಗೆಲ್ಲ ಪ್ರಿಯಕರ; ಒಳಗೆಲ್ಲ ಮೃದು ಮಧುರ +

ಸಾಧಾರಣವಾಗಿ ಒಂದೊಂದನ್ನು ದಾನಮಾಡಿ ಜಗತ್ತಿನ ಜನರ ಅನುರಾಗಕ್ಕೆ ಕಾರಣರಾಗುವದನ್ನು ನಾವು ಕಣ್ಣಾರೆ ಕಾಣುವೆವು. ತಮ್ಮ ಜೀವಿತವನ್ನು ಹಾಳುಮಾಡಿಕೊಳ್ಳದೆ ಧನ ದಾನಮಾಡಿದ ತ್ಯಾಗ

---

\+ ಕರ್ನಾಟಕ ಕವಿಚಕ್ರವರ್ತಿಯಾದ ಸುರಂಗ ಕವಿಯು (ಸು. ೧೭೦೦) ತನ್ನ ತ್ರಿಷಷ್ಠಿ ಪುರಾತನ ವಿಲಾಸದಲ್ಲಿ—ಎಳೆಯಾರ ಗುಡಿಯುಂಬುದೊಂದು ಊರು. ಆ ಊರಲ್ಲಿ ಈತನಿರುವದರಿಂದ ಇವನಿಗೆ 'ಎಳೆಯಾಂಡ ಗುಡಿಮಾರ' ನೆಂದು ಹೆಸರು ಬಂದಿತು. ಈತನ ಶೂದ್ರ ಕುಲದವನು. ಎಂದು ತಿಳಿಸುತ್ತಾನೆ.

ರಾಜ-ಲಿಂಗರಾಜರು, ಧರ್ಮವೀರ ವೀರಸಂಗಪ್ಪನವರು, ದಾನಶೀಲ ಶಂಕರೆಣ್ಣನವರು ಯಾರಿಗೆ ಅಪ್ರಿಯರು? ಭಕ್ತಿಭಾಂಡಾರ-ಸಾಹಿತ್ಯ ಸಂಪತ್ತುಗಳನ್ನು ಸೂರೆ ಮಾಡಿದ ಬಸವಣ್ಣನು ಯಾರಿಗೆ ಬೇಸರ? ವೈರಾಗ್ಯ-ಸೌಭಾಗ್ಯ ಜ್ಞಾನ ಧನಗಳನ್ನು ನೀಡಿದ ಪ್ರಭು-ಚನ್ನಬಸವಣ್ಣರು ಯಾರಿಗೆ ನಿಂದ್ಯರು? ಎಲ್ಲರಿಗೂ ಪ್ರಿಯರು. ಎಲ್ಲರಿಗೂ ಪೂಜ್ಯರು. ಅಂದಮೇಲೆ ಬೇಡಿದವರಿಗೆ ಬೇಡಿದುದನ್ನು ಕಡು ನೇಹದಿಕೊಡು ವದಲ್ಲದೆ ಪ್ರಸಂಗ ಬಂದರೆ ಪಂಚಪ್ರಾಣಗಳನ್ನು ಈಡಾಡಿ ಬಿಡುವವರು ಯಾರಿಗೆ ತಾನೆ ಅಪ್ರಿಯರಾಗಬಲ್ಲರು? ಆದ್ದರಿಂದಲೇ ಕವಿಯು-ಇಂತು ಬಣ್ಣಿಸುವನು.

"ಇಂದುಧರ ನಿನ್ನ ಬೆರಸಿ-।<br>
ದಂದಿನ ಇಳೆಯಾಂಡ ಗುಡಿಮಾರರ ಚರಿತೆಯ ॥<br>
ಸಂದಣಿಪ ಮಧುರ ವಚನಗ-।<br>
ಳಿಂದೊರೆವೆಂ ಕೇಳಯ್ಯ ಹಂಪೆಯ ವಿರೂಪಾಕ್ಷಾ" ॥

'ಸಂದಣಿಪ ಮಧುರ ವಚನಂಗಳಿಂದೊರೆವೆಂ' ಎಂಬ ಕವಿಯು ಈ ಮಧುರವಾದ ಮಾತೇ ನಮ್ಮ ಕಥಾನಾಯಕನ ಹೆಚ್ಚಳಿಕೆಯ ಹೆಗ್ಗುರುತು. ಏಕೆಂದರೆ ಹಿಂದೆ ಹೇಳಿದ ತಿರುನೀಲಕಂಠ, ಕಣ್ಣಪ್ಪ, ಆನಾಯನಾರ ಮೊದಲಾದವರ ಕಥೆಗಳ ಆದಿ ಕಂದ ಪದ್ಯಗಳಲ್ಲಿ ಈ ತರಹದ ನಲ್ನುಡಿಯು ಕವಿಯಿಂದ ಹೊರಬಿದ್ದಿಲ್ಲ. ತನ್ನ ಜೀವಿತದಲ್ಲಿಯೇ ತನ್ನ ಸರ್ವಸ್ವವನ್ನೆಲ್ಲ ಭಕ್ತರಿಗಿತ್ತು ಮಹಾದಾನಿಯಾದ ಶಿವ ಶರಣನಿಗೆ ಹಿಂದಿನವರಿಗಿಂತಲೂ ಹೆಚ್ಚಾಗಿ ನಾಲ್ಕು ಮೃದು ಮಧುರ ಮಾತುಗಳನ್ನಾದರೂ ದಾನಮಾಡಿ ಕೃತಾರ್ಥನಾಗುವೆನೆಂಬ ಸದ್ಭಾವ ಪೂರಿತನಾಗಿಯೇ ಕವಿಯು 'ಸಂದಣಿಪ ಮಧುರ ವಚನಂಗಳಿಂದೊರೆವೆಂ' ಎಂದು ಎದೆದುಂಬಿ-ಬಾಯ್ದುಂಬಿ ಬಣ್ಣಿಸಿರಬೇಕು. ತನ್ನಿನೀ ಸತ್ಕೃತಿಯಿಂದ ಕವಿಯು ಹೃದಯವನ್ನೇ ಆಕರ್ಷಿಸಿದ ಆ ಇಳೆಯಾಂಡ ಗುಡಿಮಾರರ ಸ್ಥಾನಮಾನಗಳಿಗಾಗಿ ನಾನು ಬೇರೆ ಬರೆಯಬೇಕಾಗಿಲ್ಲ. ನಿರಸವಾಗಿ ಬರೆಯುವ ಮನಸ್ಸೂ ಇಲ್ಲ. ಆದರೆ 'ಮೃದು ವಚನಂಗಳಿಂದೊರೆವೆಂ' ಎಂದು ಪೀಠಿಕೆಯಲ್ಲಿಯೇ ಪ್ರತಿಜ್ಞೆಮಾಡಿ ರಚಿಸಿದ ಹರಿಹರ ದೇವನ ಕೃತಿಯ ಮಾಧುರ್ಯವನ್ನು ಮನಗಾಣದೆ ಮರೆಯಲು ಬರುವಂತಿಲ್ಲ. ಆದ್ದರಿಂದ ಆ ಕಡೆಗೆ ಕ್ಷಣಹೊತ್ತು ಹೊರಳೋಣ! ಆ

ಸವಿಯನ್ನು ಸ್ವಲ್ಪ ಕಾಲ ಸವಿಯೋಣ !! ಆ ಆನಂದದಿಂದ ಒಂದರಗ ಳಿಗೆಯಾದರೂ ದಣಿಯೋಣ !!!

ದ್ರಾವಿಡ (ಚೋಳ) ದೇಶವು ಪುರಾತನರ ನೆಲವೀಡು. ಪರಮಾ ತ್ಮನ ಪರಮ ಪ್ರೀತಿಯ ನಾಡು. ಅಂತಹ ಆ ದೇಶದಲ್ಲಿ ಮೆರೆವು ದೊಂದು ಪುರ. ಆ ಪುರದಲ್ಲಿ ಇರುವನೊಬ್ಬ ಆತ್ಮ ಕೃಷಿಕಾರ; ಅತುಲ ಸಾವುಕಾರ. ಅವನೇ ನಮ್ಮ ಇಳೆಯಾಂಡ ಗುಡಿಮಾರ.

ಆ ಆತ್ಮ ಕೃಷಿಕಾರನಾದ ಇಳೆಯಾಂಡ ಗುಡಿಮಾರನಿಗೆ ಸಮ ಚಿತ್ತವೇ ಭೂಮಿ, ಶಿವನ ನೆನಹೇ ನೇಗಿಲ, ಅರಿಷಡ್ವರ್ಗವೇ ಆರೆತ್ತು ಗಳಾಗಿವೆ. ಹರಿವ ಮನವೇ ಹಿಡಿವ ಹಗ್ಗ, ಅಹಂಕಾರವೇ ಅಚ್ಚು, ಶಿವನಿಷ್ಠೆಯೇ ಬೀಜಗಳಾಗಿವೆ. ಶಿವಜ್ಞಾನವೇ ಅಂಕುರ, ಪರಮಾನಂ ದವೇ ಮಳೆ, ಸದ್ಭಕ್ತಿಯೇ ಬೆಳೆಗಳಾಗಿವೆ. ಹೀಗೆ ಅಲೌಕಿಕವಾದ ಆತ್ಮ ಕೃಷಿ (ಸದ್ಗುಣ ಸಂಪಾದನೆ-ಸತ್ಯಸುಖಾಸ್ವಾದನೆ) ಯಲ್ಲಿ ನಿರತ ನಾಗಿದ್ದನು.

ಹೆಚ್ಚಾಗಿ ಹೊರಗಿನ ಹೊಲವನ್ನೇ ಹರಗಿ ಹರನಿಗೆ ಹೊರಗಾ ಗುವ ಒಕ್ಕಲಿಗರೇ ಎಲ್ಲೆಲ್ಲಿಯೂ ಸಿಕ್ಕುವದು ಬಹಳ. ತಮ್ಮ ಶರೀರ ವೆಂಬ ಹೊಲ ಹಸನಮಾಡಿ ಹರನೊಳಗಾಗುವ ಮಿಕ್ಕಿದ ಒಕ್ಕಲಿಗರು ಸಿಕ್ಕುವರು ವಿರಳ. ಈ ಹೊರಗಣ ಹರಗಣೆಯಿಂದ ಶರೀರೋನ್ನತಿ ಯಾದೀತೆ ಹೊರತು ಆತ್ಮೋನ್ನತಿಯಾಗದು. ಪ್ರತಿಯೊಬ್ಬನಿಗೂ ಎರಡು ಅಂಗಗಳುಂಟು. ಒಂದು ಅಂತರಂಗ, ಇನ್ನೊಂದು ಬಹಿರಂಗ. ಈ ಎರಡೂ ಅಂಗಗಳನ್ನು ಉನ್ನತಿಗೊಳಿಸುವದೇ ಪ್ರತಿಯೊಬ್ಬರ ಮುಖ್ಯ ಕರ್ತವ್ಯ. ಆದರಿದನ್ನು ಮರೆತು ಕೇವಲ ಬಹಿರಂಗ ಬೆಳವಣಿಗೆಯ ಬಲವಾದ ಬಲೆಗೆ ಬಿದ್ದು ಬಾಹ್ಯ ಕೃಷಿಕರ್ಮಕ್ಕೇನೆ ತಮ್ಮ ಅಮೌಲ್ಯ ವಾದ ಇಡೀ ಜೀವನವನ್ನೇ ತೆತ್ತುವರು. ಕೊನೆಗೆ ಮೃತ್ಯುದೇವತೆಯ ತುತ್ತಾಗುವರು. ಅವರಿಗೆ ಲಿಂಗಕಲೆ-ಲಿಂಗಸುಖಗಳೆಂಬುವು ಎತ್ತೋ ಉಳಿಯುವವು. ಇಷ್ಟೇ ಅಲ್ಲ. ಭೂರಂಗದ ಬಲೆಗೆ ಬಿದ್ದು ಬಹಿರಂ ಗವನ್ನು ಹಾಳುಮಾಡಿಕೊಳ್ಳುವ ಎಷ್ಟೋ ಜನರಿರುವರು. ಹೀಗಾಗು ವದು ಸಾಮಾನ್ಯ ಮಾತ್ರರಿಗಲ್ಲ. ಶರಣ ಶ್ರೇಷ್ಠನಾದ ಗೊಗ್ಗಯ್ಯನೂ ಕೂಡೆ ಒಮ್ಮೆ ಭ್ರಾಂತಿಗೊಂಡು ಬಾಹ್ಯ ತೋಟ ಪಟ್ಟಿಯಲ್ಲಿ ಆಸಕ್ತನಾ ಗಿರುವಾಗ ಅದನ್ನು ನೋಡಿ ಅಲ್ಲಮಪ್ರಭುವು—

"ತನುವ ತೋಟವಮಾಡಿ, ಮನವ ಗುದ್ದಲಿಯಮಾಡಿ, ಅಗಿದು ಕಳೆದನಯ್ಯ ಭ್ರಾಂತಿಯ ಬೇರು. ಒಡೆದು ಸಂಸಾರದ ಹೆಂಟೆಯ ಬಗೆದು ಬಿತ್ತಿದನಯ್ಯ ಬ್ರಹ್ಮಬೀಜವ. ಅಖಂಡ ಮಂಡಲವೆಂಬ ಬಾವಿ, ಪವನವೆ ರಾಟಾಳ, ಸುಷುಮ್ನದಿಂದುದಕವ ತಿದ್ದಿ, ಬಸವಗಳೈವರು ಹಸಗೆಡಿಸಿಹವೆಂದು-ಸಮತೆ-ಸೈರಣೆಯೆಂಬ ಬೇಲಿಯನಿಕ್ಕಿ, ಆವಾಗಳೂ ಆ ತೋಂಟದಲ್ಲಿ ಜಾಗರವಿದ್ದು ಸಸಿಯ ಸಲಹಿದನು ಕಾಣಾ ಗುಹೇಶ್ವರಾ."

ಎಂದು ಸಂಬೋಧಿಸಿ, ಒಳ ತಿರುಳನ್ನು ತಿಳಿಸಿ, ಕೇವಲ ಬಾಹ್ಯ ಕೃಷಿ ಕರ್ಮದಲ್ಲಿ ನಿರತರಾದ ಗೊಗ್ಗಯ್ಯಗಳನ್ನು ಆತ್ಮ ಕೃಷಿಗಳನ್ನಾಗಿ ಮಾಡಿ, ಪ್ರಮಾಣಮಾಡುತ್ತ ಬರಲು, ಇತ್ತ ಸೊನ್ನಲಾಪುರದಲ್ಲಿ ಶ್ರೇಷ್ಠ ಶಿವಯೋಗಿಯಾದ ಸಿದ್ಧರಾಮನು ಕೆರೆಕಾಲುವೆ-ಗುಡಿಗೋಪುರಗಳನ್ನು ಕಟ್ಟಿಸುವ ಬಾಹ್ಯ ಕರ್ಮವನ್ನು ಕಂಡು ಕನಿಕರಬಟ್ಟು—

"ತನುವೆಂಬ ಏರಿಗೆ ಮನವೆಂಬ ಕಟ್ಟೆ, ಆಚಾರವೆಂಬ ಸೋಪಾನ, ಪರಮಾನಂದವೆಂಬ ಜಲವ ತುಂಬಿ, ಕೆರೆಯ ಕಟ್ಟ ಬಲ್ಲವರನಾರನೂ ಕಾಣೆ. ನಾನು ಕಟ್ಟಿದ ಕೆರೆ ಸ್ಥಿರವಾಯಿತ್ತು ಗುಹೇಶ್ವರಾ ನಿಮ್ಮಾಣೆ." ಈ ತೆರೆದ ಕೆರೆಯ ಕಟ್ಟುವದನ್ನು ಬಿಟ್ಟು—

"ಈ ಬಾಹ್ಯ ಕೆರೆಯ ಕಟ್ಟಿಸುವ ಒಡ್ಡನ ಪ್ರತಾಪವೇನೆಂಬೆನಯ್ಯಾ? ನೆಲವನಗಿದು ಜಲವ ತೆಗೆದೆನೆಂಬ ಬಳಲಿಕೆಯ ನೋಡಾ! ಒಂದ ಕಲ್ಲು ಕಡಿದು ಮತ್ತೊಂದು ಕಲ್ಲಿಗೆ ಭೋಗವ ಕೊಟ್ಟೆಹೆನೆಂಬ ಅಜ್ಞಾನವಿದೇನೊ ಗುಹೇಶ್ವರಾ! ಈ ಇರವಿನ ಪರಿಗೆ ಬೆರಗಾದೆನು."

ಎಂದು ಆತ್ಮ ಕಳಕಳಿಯಿಂದ ಹೇಳುತ್ತ ಎಲೊ ಸಿದ್ಧರಾಮಾ!

"(ಇಂತು) ಅನ್ನವನಿಕ್ಕಿ ನನ್ನಿಯ ನುಡಿದು, ಅರವಟ್ಟಿಗೆಯನಿಕ್ಕಿ ಕೆರೆಯ ಕಟ್ಟಿಸಿದರೆ, (ನಿನಗೆ) ಮರಣದಿಂದ ಮೇಲೆ ಸ್ವರ್ಗವುಂಟಲ್ಲದೆ ಶಿವನ ನಿಜವು ಸಾಧ್ಯವಾಗದು......"

ಎಂದು ವಿಧವಿಧವಾಗಿ ತಿಳಿಹೇಳಿ ಕೊನೆಗೆ ಅಂತರಂಗದ ಶುದ್ಧಿಯೂ ಶ್ರೇಷ್ಠವಾದುದು. ಅದನ್ನು ಮೊದಲು ಮಾಡಿಕೊಳ್ಳಬೇಕು. ಅದಿಲ್ಲದೆ

ಇದೆಲ್ಲ ರಸವಿಲ್ಲದ ಹಣ್ಣಿನಂತೆ, ಆತ್ಮವಿಲ್ಲದ ದೇಹದಂತೆ, ವ್ಯರ್ಥವಾದುದು ಎಂದು ಬೋಧಿಸಿ ಮನಸ್ಸನ್ನು ತಿರುಗಿಸಿರುವನು.

ಇದೆಲ್ಲ ಅಭಿಪ್ರಾಯವನ್ನು ಬೊಬ್ಬುಳಿಗೂಡಿಸಿ ಹಾಡುಗಬ್ಬ ಮಾಡಿ ಸರ್ಪಭೂಷಣ ಶಿವಯೋಗಿಗಳು ಎಷ್ಟೊಂದು ಸೊಗಸಾಗಿ-ಸರಸಾಗಿ ಹಾಡಿರುವರು ನೋಡಿ! ಇಲ್ಲಿ ಆ ಹಾಡನ್ನು ಹೇಳದೆ ಹೃದಯದ ಹುರುಪು ಹಿಂಗದು. ಹಂಬಲ ತಂಗದು.

ಶರೀರವೆಂದೆಂಬುವ ಹೊಲನ ಹಸನಮಾಡಿ। ಪರತತ್ವ ಬೆಳೆಯುನೆ ಬೆಳೆದುಣ್ಣಿರೋ ॥ಪ॥
ಶಮೆ-ದಮೆಯೆಂದೆಂಬುವೆರಡೆತ್ತುಗಳ ಹೂಡಿ। ವಿಮಲ ಮಾನಸವ ನೇಗಿಲವ ಮಾಡಿ ॥
ಮಮಕಾರವೆಂದೆಂಬ ಕರಕಿಯ ಕಳೆದಿಟ್ಟು। ಸಮತೆಯುಂತೆಂಬ ಗೊಬ್ಬರವ ಚಲ್ಲಿ ॥೧॥
ಗುರುವರನುಪದೇಶವೆಂಬ ಬೀಜವ ಬಿತ್ತಿ। ಮೆರೆವ ಸಂಸ್ಕಾರ ವೃಷ್ಟಿಯು ಬಲದಿ ॥
ಅರಿವೆಂಬ ಪೈರನೆ ಬೆಳೆಸುತೆ ಮುಸುಕಿರ್ದ। ದುರಿತ ದುರ್ಗುಣವೆಂಬ ಕಳೆಯುಕಿತ್ತು ॥೨॥
ಸ್ಥಿರ ಮುಕ್ತಿಯೆಂತೆಂಬ ಧಾನ್ಯವ ಬೆಳೆದುಂಡು। ಪರಮಾನಂದದೊಳು ದಣ್ಣನೆ ದಣಿದು ॥
ಗುರುಸಿದ್ಧನಡಿಗಳಿಗೆರಗುತ್ತ ಭವವೆಂಬ। ಬರವನು ತನ್ನ ಸೀಮೆಗೆ ಕಳುಹಿ ॥೩॥

ನೋಡಿರಿ! ನಮ್ಮವರು ಭೋಗಶಾಲಿಗಳು-ತ್ಯಾಗಶೀಲರು. ಸ್ವಾರ್ಥತ್ಯಾಗಿಗಳು-ಆತ್ಮವೀರರು. ಹತರೋಗಿಗಳು-ಜಿತರಾಗಿಗಳು. ಶುಭಭಾಗಿಗಳು-ಶಿವಯೋಗಿಗಳು. ಲೌಕಿಕ ಪಾರಮಾರ್ಥವೆರಡನ್ನು ಕೂಡಿ ನಡಿಸಿದರು. ನಡೆದಂತೆ ನುಡಿದರು. ನುಡಿದಂತೆ ನಡೆದರು. ಮನೆ ಹಿಡಿದು ಭೋಗಪಡೆಯಿರಿ. ಮನ ಹಿಡಿದು ಮೋಕ್ಷಗಳಿಸಿರಿ. ಎಂದು ಸಾರಿದರು. ಬಯಿಸಿ ಬೆಂಡು ಹೋಗಬೇಡಿರಿ. ಭಜಿಸಿ ಬರವ ಹರಿದು ಧನ್ಯ ಜೀವಿಗಳಾಗಿರಿ ಎಂದು ತಿಳಿಹೇಳಿದರು. "ಬಯಸದೆ ಭೋಗ-ಮೋಕ್ಷ ಪರರಪ್ಪುದು ಚಿತ್ರವಲಾ ಶಿವಾಧವಾ" ಎಂಬುದಾಗಿ ಮಹಾ ಮೇಧಾವಿಗಳಾದ ಮೊಗ್ಗೆಯ ಮಾಯಿದೇವರೂ ಸಹ ಅಚ್ಚರಿಗೊಂಡು

ಉದ್ಗಾರ ತೆಗೆದಿರುವರು. ಈ ತೆರನಾಗಿ ಸರ್ವಾಂಗ ಸುಂದರವಾದ ವೀರಶೈವರ ಸಿದ್ಧಾಂತ ವಿಷಯದಲ್ಲಿ ನಾವೆಷ್ಟು ಬರೆದರೂ ಸ್ವಲ್ಪವೇ.

ಇದನ್ನೆಲ್ಲವನರಿತ ನಮ್ಮಿಳೆಯಾಂಡ ಗುಡಿಮಾರರು ನಿಷ್ಕಾಮಿಗಳಾಗಿ ಒಳಗೆ ಭವನ ಭಕ್ತ್ಯಾರಂಭವನ್ನೂ ಹೊರಗೆ ಭುವನ ಕೃಷಿಕರ್ಮವನ್ನೂ ನೆರವೇರಿಸುತ್ತಿದ್ದರು. ಹೀಗಿರುವ ಇಳೆಯಾಂಡ ಗುಡಿಮಾರರು ಸಾಕಷ್ಟು ಸಾವುಕಾರರೂ ಇದ್ದರು. ವಿಪುಲವಾದ ಭೂಮಿ-ಸೀಮೆಗಳೂ ಅವರಿಗಿದ್ದವು. ದೊಡ್ಡ ಮನೆಯೂ ಇತ್ತು. ಮನೆಯಂತೆ ಮನವೂ ಹಿರಿದಾಗಿತ್ತು. ಹೀಗಿದ್ದ ಅವರ ಅಂತರಂಗ-ಬಹಿರಂಗಗಳ ಸಂಪತ್ತಿನ ಸ್ಥಿತಿಯನ್ನು ಕವಿಯು ಇಂತು ಬಣ್ಣಿಸುವನು.

ಏನೆಂಬೆನತಿ ಭಕ್ತಿ ಸಸಿಯು ಬೆಳೆಸಿರಿವಂತ। ಆನಂದದಿಂ ಶರಣತತೀ
ಗೀವ ಮತಿವಂತ ॥

ಧರೆಯೆನಿತು ಉಂಟೆನಿತು ಭೂಮಿಯಾತುಂಗುಂಟು । ಹರನ ಕರುಣಂ
ಆತನಲ್ಲಿ ಪಿರಿದಾಗುಂಟು ॥

ಅದರೊಳಾದ ಬೆಳಸನೀವ ಶರಣರ ಬಂಟ। ಮುದಮುಖಮುದೊಂದಿಲ್ಲ
ದೀವ ಭಕ್ತರನಂಟ ॥

ಹೀಗೆ ಅತುಲವಾದ ಆತನ ಉಭಯ ಸಂಪತ್ತನ್ನು ಚಿತ್ರಿಸಿ ಆ ಮೇಲೆ ಆತನು ದಾನ ಮಾಡುವ ರೀತಿಯನ್ನು ಹೇಳುವನು. ಏಕೆಂದರೆ ಧನವಿದ್ದವನಿಗೆ ದಾನ ಮಾಡುವದೆ ಭೂಷಣವಾದುದು. ತಲೆಗೆ ವಂದನವು, ಬಾಯಿಗೆ ಸತ್ಯ ಮಾತು, ಹೃದಯಕ್ಕೆ ವಿಶುದ್ಧತೆಗಳು ಭೂಷಣವಾದಂತೆ ಹಸ್ತಕೆ ದಾನಗುಣವೇ ಭೂಷಣವಾಗಿದೆ. ಒಂದ ಪಕ್ಷ ಯಾರಾದರೂ ದಾನ ಮಾಡದೆ ತನಗೆ ತನ್ನ ಮಕ್ಕಳಿಗೆ ಎಂದು ಬಯಸಿ ಬಚ್ಚಿಟ್ಟರೆ ಅದಕ್ಕೆ ಯಾವ ಪ್ರಯೋಜನವಿಲ್ಲ, ಪುಣ್ಯವೂ ಇಲ್ಲ. ಆದ ಕಾರಣ "ಕೊಟ್ಟದ್ದು ತನಗೆ, ಬಚ್ಚಿಟ್ಟದ್ದು ಪರರಿಗೆ" ಎಂದು ಗಂಡುಗವಿಯಾದ ಸರ್ವಜ್ಞನು ಬೋಧಿಸುತ್ತಾನೆ. ಕೊಟ್ಟದ್ದು ಮುಂದೆ ಕಟ್ಟಿಟ್ಟ ಬುತ್ತಿಯೆಂದು ಎಚ್ಚರಗೊಟ್ಟಿದ್ದಾನೆ. ಹಾಗು ಈಗಿನ ವಾತಾವರಣದಂತೆ ಧನವಂತರು ದರಿದ್ರರಿಗೆ ಕೊಡುವದು ವಿಶ್ವಬಂಧುತ್ವದ ಲಕ್ಷಣವೂ ಆಗಿದೆ. ಆದ್ದರಿಂದಲೇ ಕವಿಯು ಕೊನೆಯ ಸಾಲಿನಲ್ಲಿ ಕೊಡುವದರಲ್ಲಿ 'ಶರಣರ ಬಂಟ' ಕಿಂಕರತೆಯಲ್ಲಿ 'ಭಕ್ತರ ನಂಟ, ಆಗಿದ್ದನು ಇಳೆಯಾಂಡ

ಗುಡಿಮಾರನು' ಎಂದು ಹೇಳಿ ತಾನು ಮೊದಲು ಮಾಡಿದ 'ಮಧುರ ವಚನಂಗಳಿಂದೊರೆವೆಂ,' ಎಂಬ ಪ್ರತಿಜ್ಞೆಯನ್ನು ಸಾರ್ಥಕ ಮಾಡಿಕೊಂಡಿದ್ದಾನೆ. ಇದಲ್ಲದೆ

ಒಳ್ಳಿತಂ ಸೊಗಸಿತಂ ಶಿವನ ಭಕ್ತರ್ಗೀವ । ಉಳ್ಳದ್ರವ್ಯಂಗಳಂಭುವನ ಭಕ್ತರ್ಗೀವ ॥

ಎಲ್ಲ ತೇಜಂಗಳಂ ಶರಣ ತತಿಗೀವುತುಂ । ಉಳ್ಳದ್ರವ್ಯಂಗಳಂ ಭಕ್ತರ್ಗೆ ಸಾರ್ಚುತುಂ ॥

ಬಿಟ್ಟ ಬೆಸನಂ ಶಿವನ ಭಕ್ತರ್ಗೆ ಮಾಡುವಂ । ಕೊಟ್ಟು ತಣಿವಿಲ್ಲದನು ತಾಪದಿಂ ಬಾಡುವಂ ॥

ಇನಿತು ಮಾಡುವ ದಾನವನ್ನಾದರೂ ಪಾತ್ರಾಪತ್ರವನ್ನರಿತು ಮಾಡುತ್ತಿದ್ದನು. ದಾನದಲ್ಲಿಯೂ ಸಾತ್ವಿಕ, ರಾಜಸ, ತಾಮಸವೆಂದು ಮೂರು ಬಗೆ. ಇವಕ್ಕೇನೆ ವೀರಶೈವರು ಉಪಾಧಿ ಮಾಟಸ್ಥಲ (ತಾಮಸ) ನಿರುಪಾಧಿ ಮಾಟಸ್ಥಲ (ರಾಜಸ) ಸಹಜ ಮಾಟಸ್ಥಲ (ಸಾತ್ವಿಕ) ವೆಂದು ಹೇಳುವರು. ಇವುಗಳನ್ನೊಳಗೊಂಡೇ ಭಕ್ತಿಸ್ಥಲವು ಪೂರ್ತಿಗೊಳ್ಳುವದು. ಪಾತ್ರಗಳನ್ನರಿತು ಪ್ರತಿಫಲ ವಾಂಛಿಸದೆ ಕೊಡುವ ದಾನವೇ ಸಾತ್ವಿಕ ದಾನವು. ಪ್ರತ್ಯುಪಕಾರ ಪಡೆಯಬೇಕೆಂದಾಗಲಿ, ಹೇಮ-ಸೀಮೆ, ಪುತ್ರ-ಕಲತ್ರ, ಮೊದಲಾದ ಫಲಗಳ ಬಯಿಕೆಯಿಂದಾಗಲಿ ಮಾಡುವ ದಾನವೇ ರಾಜಸದಾನ. ದೇಶ ಕಾಲ-ಪಾತ್ರಗಳನ್ನರಿಯದೆ ದುಶ್ಚಟಗಳಿಗೆ ವ್ಯಯ ಮಾಡುವ ದುರ್ಜನರಿಗೆ ಕೊಡುವ ದಾನವೇ ತಾಮಸದಾನ. ಇವುಗಳಲ್ಲಿ ತಾಮಸದಾನಕ್ಕೆ ಯಾವ ಪುಣ್ಯ ಫಲವಿಲ್ಲ. ಪ್ರತಿಯಾಗಿ ಪಾಪವೇ ಅವರ ಬೆನ್ನಿಗೆ ಬೀಳುವದು. ರಾಜಸದಾನಕ್ಕೆ ಪ್ರತಿಫಲ ಸಿಗುವದಾದರೂ ಅದು ಕ್ಷಣಿಕ. ಸಾತ್ವಿಕಕ್ಕೆ ಸಿಗುವದು ಸಾರತರ ಫಲ, ಸ್ವರ್ಗದೊಳಗಾಗುವ ಸುಖ. ಆ ಸಾತ್ವಿಕ ದಾನವೇ ದಾನ. ಆದ್ದರಿಂದಲೇ ಹರಿಹರ ದೇವನು "ಒಳ್ಳಿತಂ ಸೊಗಸಿತಂ ಶಿವನ ಭಕ್ತರ್ಗೀವ" ಎಂದು ಹೇಳಿ ಇಳೆಯಾಂಡ ಗುಡಿಮಾರನು ಸಾತ್ವಿಕದಾನ (ಸಹಜ ಮಾಟಸ್ಥಲ) ವನ್ನು ಆಚರಿಸುತ್ತಿದ್ದನೆಂದು ಚನ್ನಾಗಿ ಬೋಧಿಸುತ್ತಾನೆ.

ಹೀಗೆ ಇಳಿಯಾಂಡ ಗುಡಿಮಾರರು ದಾನಿಗಳೆಂದು ಧರಣಿಯೊಳೆಲ್ಲ ಹಬ್ಬಿದೆ. ಹಬ್ಬುವದೇ ತಡ! ನಾಲ್ಕು ಕಡೆಯಿಂದಲೂ ಸಕ್ಕರೆಗೆ ಇರುವೆ

ಮುಕ್ಕುರುವಂತೆ, ಮಾವಿನ ತಳಿರಿಗೆ ಕೋಗಿಲೆಗಳೆರಗುವಂತೆ, ಹರ ಶರಣರು ಯಾಚಕರಾಗಿ ಅತಿಥಿಗಳಾಗಿ ನೆರೆಯ ತೊಡಗಿದ್ದಾರೆ. ಈ ತೆರನಾಗಿ ಮೇರೆದಪ್ಪಿ ತಂಡೋಪತಂಡವಾಗಿ ಬರುವ ಭಕ್ತರ ಪರಿಯನ್ನು ಕವಿಯ ಬಾಯಿಂದ ಕೇಳೋಣ ಬನ್ನಿ!

ನೆರೆಯತೊಡಗಿತು ಹರನ ಶರಣಕುಲವಳ್ತಿಯಿಂ। ಬರುತಮಿರ್ದುದು
ಭೂತಳದ ಭಕ್ತರೊಲ್ಮೆಯಿಂ॥
ಮೆರೆದಪ್ಪಿದ ವಾರ್ಧಿಯಂತಂತೆ ಕವಿವುತಿರೆ। ಧೀರನೋಸರಿಸದೆ ಮಹಾ
ಗಣಂ ಪೊಗಳುತಿರೆ॥

ಕಂಡಿರಾ, ಇಳೆಯಾಂಡ ಗುಡಿಮಾರರ ಮನೋವೈಶಾಲ್ಯವನ್ನು! ಮೇರೆದಪ್ಪಿದ ವಾರುಧಿಯಂತೆ ಬರುವ ಭಕ್ತರನ್ನು ನೋಡಿ ದಾನ ಪ್ರೇಮಿಯಾದ ಇಳೆಯಾಂಡ ಗುಡಿಮಾರನು ಬಲಗುಂದದೆ ಬಣ್ಣಿಸುತ್ತ ಬರಮಾಡಿಕೊಳ್ಳುವದನ್ನು ನೆನಿಸಿಗೊಂಡರೆ ಆತನಲ್ಲಿರುವ ಮಿತಿಮೀರುವ ಮನೋವೈಶಾಲ್ಯವೂ ಕರ್ಮಕೌಶಲ್ಯವೂ ಮುಂದು ಬಂದು ನಿಲ್ಲುತ್ತವೆ, ಅತ್ಯಾಶ್ಚರ್ಯವನ್ನುಂಟು ಮಾಡುತ್ತಿವೆ. ಹೀಗೆ ಅಪರಿಮಿತವಾಗಿ ಬರುವ ಭಕ್ತರಿಗೆಲ್ಲ ಕೊಟ್ಟು ಕೊಟ್ಟು ಧನ, ಧಾನ್ಯ, ಕನಕಗಳೆಲ್ಲ ತೀರಿಹೋಗಿವೆ. ಭೂಮಿಯನ್ನು ಮಾರಲು ಮೊದಲು ಮಾಡಿದ್ದಾನೆ. ಮಾರಿ ಮಾರಿ ಭೂಮಿಯೂ ಮುಗಿದಿದೆ. ಭೂಮಿ ಮುಗಿದರೂ ಆತನಲ್ಲಿರುವ ದಾನ ಪ್ರೇಮವು ಮಾತ್ರ ಮುಗಿದಿಲ್ಲ. ಚಿತ್ತದಲ್ಲಿ ಹಿಗ್ಗಿ ಹೆಚ್ಚಿದ್ದಾನೆ. ಹೊಂಗಿ ಹೊರೆಯೇರಿದ್ದಾನೆ. ಮುಂದೆ ಏನು ಕೊಡಲೆಂದು ಯೋಚನೆ. ಉಳಿದುದೊಂದು ತೋಟ. ಅದನ್ನೂ ಮಾರ ತೊಡಗಿದನು. ಅದುವೂ ಆಯಿತು. ಮತ್ತೆ ಉಳಿದುದೊಂದು ಮನೆ. ಆ ಮನೆಯ ಅರ್ಧಭಾಗವನ್ನು ಮಾರಿದ್ದಾನೆ. ಅದೂ ತೀರಿತು. ಮತ್ತೆ ಮತ್ತೆ ಶರಣರು ಬರತೊಡಗಿದ್ದಾರೆ. ಬಂದವರಿಗೆ ಉಟ್ಟುದುದನ್ನು ಹೊದೆದುದನ್ನು ಕೊಟ್ಟಿದ್ದಾನೆ. ಅವೂ ಮುಗಿದಿವೆ. ಮಗನ ಅರಿವೆಗಳನ್ನು ಕಳಚಿಕೊಟ್ಟಿದ್ದಾನೆ. ಆದರೂ ಬೇಡುವವರ ಕಾಟ ಹಿಂಗಲಿಲ್ಲ. ಅವರಿಗೆಲ್ಲ ತನ್ನರಸಿಯ ವಸ್ತ್ರಾಭರಣಗಳನ್ನೂ ಕೊಟ್ಟುದಾಯಿತು. ಕೊನೆಗೆ—

"ಸತಿಗೊಂದು ಕಪ್ಪಟಂ ತನಗೊಂದು ಕೋವಣಂ। ಸುತನೆನಿಸುವಾತಂಗೆ
ಮತ್ತೊಂದು ಕೋವಣಂ॥

ಮೂವರು ನಿಂದಿರ್ಪರನಿತುಮನೆತಮಗುಳಿಯೆ। ಈವಡಂತೇನುಮಿಲ್ಲದೆ
ನಿಜದಮನ ಉಳಿಯೆ ॥

ಓ ವಾಚಕರೇ! ಸತಿಗೊಂದು ಸುತ್ತಿಗೊಳ್ಳಲು ಸೀರೆ. ತನಗೊಂದು ಕೌಪೀನ. ತನ್ನ ಮಗನಿಗಿನ್ನೊಂದು ಕೋವಣ. ತಾವ್ ಮೂವರೇ ನಿಲ್ಲಲು ಬೇಕಾಗುವಷ್ಟು ಮನೆ. ಒಮ್ಮನ ಬೀಜ ಬಿತ್ತುವಷ್ಟು ಹೊಲ. ಇವಿಷ್ಟೇ ಇವರಿಗುಳಿದ ಸಂಪತ್ತು. ಇವಿಷ್ಟೇ ಇವರಿಗಾದ ಸುಖದ ಸೊತ್ತು. ಪರಿಸ್ಥಿತಿ ಹೀಗಾದರೂ—

"ಅದರೊಳಗೆ ಇಳೆಯಾಂಡ ಕುಡುತುಮಿರ್ದಂ ನೋಡ। ಮದನ
ಹರಭಕ್ತರ್ಗೆ ಕುಡುತುಮಿರ್ದಂ ನೋಡ ॥

ಅನಿತವಸ್ತೆಯೊಳಿರ್ದು ಸುಮನಿರ್ದನೆ ನೋಡ। ಅನುಪಮದ ಭಕ್ತಂಗೆ
ಲೀಲೆ ಮಿಕ್ಕುದು ನೋಡ ॥

ಧನವಿಲ್ಲದೊಡೇನು? ಧಾನ್ಯವಿಲ್ಲದೊಡೇನು?। ಮನೆಯಿಲ್ಲದೊಡೇನು
ವಿಲ್ಲದೊಡೇನು?

ತನುವಿರ್ದಪುದು ತನುವಿನೊಳಗರ್ಧವಿತ್ತಪೆಂ। ಮನವಿರ್ದಪುದು
ಮನದೊಳರ್ಧಮ ನಿತ್ತಪೆಂ ॥

ಹರಣವಿದೆ ಹರಣದೊಳಗರ್ಧಮಂ ಕೊಟ್ಟಪೆಂ। ಎರಡು ಕಣ್ಣಿವೆ
ರಡರೊಳಗೊಂದ ಕೊಟ್ಟಪೆಂ ॥

ಇಂತು ಶರಣರ್ಗೀವ ಚಿಂತೆಯಂ ಚಿಂತಿಸುತೆ। ಮುಂತೆ ತನಗೇನಾದುದಂ
ಕುಡಲ್ಚಿಂತಿಸುತೆ ॥

ಆ! ನೋಡಿರಿಲ್ಲಿ ದಾನವೀರನ ಧೈರ್ಯ! ದಾನಪ್ರಕಾಂತನ ಧರ್ಮ!! ಬಾಹ್ಯಸೊತ್ತು ಸಂಪತ್ತುಗಳು ತೀರಿದಷ್ಟು ಅವನ ಉತ್ಸಾಹ-ಉಲ್ಲಾಸಗಳು ನೂರ್ಮಡಿ ಸಾಸಿರಮಡಿ ಹೆಚ್ಚಿ ಹೊರಹೊಮ್ಮುವೆ. ಹೊಮ್ಮುನುಡಿಯಿಂದ ಇಂತು ಹೊರಬಿದ್ದಿವೆ. ಧನವಿಲ್ಲದಿದ್ದರೇನು ತನುವಿಲ್ಲವೇ? ಮನೆ ಮುಗಿದರೇನು ಮನವಿಲ್ಲವೇ? ಭೂಮಿ ತೀರಿದರೇನು ಭಾವವಿಲ್ಲವೇ? ಕನಕ ಮುಗಿದರೇನು ಕಣ್ಣಿಲ್ಲವೇ? ಇವನ್ನು ಕೊಟ್ಟು ಕೃತಾರ್ಥನಾಗುವೆ ಎಂದು ಯೋಚಿಸುವನು. ಲೌಕಿಕ ಸಂಪತ್ತು ತೀರಿದರೇನು? ಇಕೋ ಈ ಅಲೌಕಿಕವಾದ ಸಂಪತ್ತುಗಳಿವೆ. ಇವನ್ನು ಆತನಿಗೆ ನೀಡಿ ತಣಿ

ಯುಃಪೆನು. ಇದೇ ನನ್ನ ಹೃದಯದ ಚರಮ ಧ್ಯೇಯ. ಇದೇ ನನ್ನ ಜೀವಿತದ ಆದ್ಯ ಕರ್ತವ್ಯ ಎಂದು ಭಾವಿಸಿಕೊಳ್ಳುವನು.

ಇದಕ್ಕೇನೇ ನಮ್ಮವರು ಕಾಯಾರ್ಪಣ, ಕರಣಾರ್ಪಣ, ಭಾವಾರ್ಪಣವೆಂದು ಹೇಳಿದ್ದಾರೆ. ಕೇವಲ ಬಾಹ್ಯ ಸಂಪತ್ತನ್ನು ಪಾತ್ರವರಿದು ಕೊಡುವ ದಾನವೇ ದಾನವೆಂದು ಹೇಳುವ ಇತರರಿಗಿಂತಲೂ ನಮ್ಮವರು ಈ ವಿಷಯದಲ್ಲಿ ಎಷ್ಟೋ ಮುಂದು ಹೋಗಿರುವರು, ನಿಲುಕದಂತಹ ಸ್ಥಿತಿಯಲ್ಲಿ ನಿಂತಿರುವರು. ಹಿಂದೆ ಹೇಳಿದ ಸಾತ್ವಿಕ ದಾನದಿಂದ ಸ್ವರ್ಗ ಸಿಗಬಹುದು. ಆದರೆ ಅದಕ್ಕೂ ಮೇಲಿನ ಶಾಶ್ವತ ಸುಖ ಸಿಗದು, ಶಿವಸುಖ ಪ್ರಾಪ್ತವಾಗದು. ಅಂತೆಯೇ

> "ಅನ್ನವನಿಕ್ಕಿ ನನ್ನಿಯನುಡಿದು ಅರವಟಿಗೆಯನಿಕ್ಕಿ ಕೆರೆಯ ಕಟ್ಟಿಸಿದರೆ ಮರಣದಿಂದ ಮೇಲೆ ಸ್ವರ್ಗವುಂಟಲ್ಲದೆ ಶಿವನ ನಿಜವು ಸಾಧ್ಯವಾಗದು"

ಎಂಬ ಪ್ರಭುವಿನ ವಚನವೂ ಇದನ್ನೇ ಸಮರ್ಥಿಸುತ್ತದೆ. ಬಸವೇಶ್ವರನು ಆತ್ಮಾರ್ಪಣ ಮಾಡಿ ಪ್ರಭುವನ್ನು ಪರಿತುಷ್ಟಿ ಪಡಿಸಿದನೇ ವಿನಹ ಬೇರೆ ಪದಾರ್ಥಗಳಿಂದಲ್ಲ. ಆದ ಕಾರಣ ವೀರಶೈವನಾದವನ ದಾನ ಪರಾಕಾಷ್ಠೆಯು ತ್ರಿಕರಣಾರ್ಪಣದಲ್ಲಿಯೇ ಮುಗಿಯುತ್ತದೆ. ಈ ವಿಷಯವನ್ನು ನಮ್ಮವರು ನೂರೊಂದು ಸ್ಥಲಗಳಲ್ಲಿರುವ ಲಿಂಗಸ್ಥಲದ ಪ್ರಸಾದಿ ಸ್ಥಲದಲ್ಲಿ ಬಹು ಸೊಗಸಾಗಿ ವಿಸ್ತರಿಸಿರುವರು. ಅವನ್ನಿಲ್ಲಿ ಉದಾಹರಣೆಯ ಮುಖದಿಂದ ಕಂಡುಕೊಳ್ಳಬಹುದು.

## ಕಾಯಾರ್ಪಣ.

ದಿಟದಿಂದಂ ಖಗಸಂಕುಳಂ ವಿಟಪಿಯಂ ಸಾರ್ವಂತೆ ತತ್ಕಾಯದಿಂ ।  
ಸ್ಫುಟವಾಗುದ್ಭವ ಮಾದನೇಕ ಸುಖಮೆಲ್ಲಂ ಲಿಂಗದೊಳ್ ನಾಡೆ ಸಂ-॥  
ಘಟಿಸುತ್ತಿರ್ಪವು ಲಿಂಗ ಸೋಂಕಿನ ಮಹಾ ಸೌಖ್ಯಾದಿ ಭೋಗಂಗಳಿಂ ।  
ಪಟುವಾಗಿಂತು ವಿರಾಜಿಪಂ ಲಸದಟಂ ಶ್ರೀ ಸಿದ್ಧಲಿಂಗೇಶ್ವರಾ ॥

ಶಿವಭಕ್ತನು ಶಿವನ ಕಾರ್ಯಕ್ಕಾಗಿ ತನ್ನ ಕಾಯವನ್ನು ಸೇವೆಯ ರೂಪದಿಂದ ಅರ್ಪಿಸುವದೇ ಕಾಯಾರ್ಪಣ.

## ಕರಣಾರ್ಪಣ.

ಶಕಟಂ ದೇಹಮದಿಂತು ಬುದ್ಧಿಯೆ ನಿಜಂ ತತ್ಸಾರಥೀ ಪ್ರಗ್ರಹಂ ।
ಪ್ರಕಟಂ ಮಾನಸಮಿಂದ್ರಿಯ ಪ್ರಚಯಮೇ ತಾಂ ತದ್ಧಯಂ ನಾಡೆ ಸಂ॥
ಗಿಕದಿಂದಾತ್ಮನೆ ಭಾವಿಸಲ್ ಪಥಿಕನಿತಾರ್ಥಂಗಳಂ ಮಾನಸಾ- ।
ಧಿಕದಿಂ ಲಿಂಗ ಮುಖಕ್ಕೆ ನೀಡುವೆನಲಾ ಶ್ರೀಸಿದ್ಧಲಿಂಗೇಶ್ವರಾ ॥

ದೇಹಾರ್ಪಣವಾದ ಮೇಲೆ ತನ್ನ ಮನ, ಬುದ್ಧಿ, ಚಿತ್ತ, ಅಹಂಕಾರಗಳೆಂಬ ಅಂತಃಕರಣಗಳನ್ನರ್ಪಿಸುವದೇ ಕರಣಾರ್ಪಣ.

## ಭಾವಾರ್ಪಣ.

ತನುವಂ ಮುಟ್ಟದ ಮುನ್ನ ಸೋಂಕಿನ ಸುಖಂ ತತ್ತೃಪ್ತಿತಾನೆಯ್ದೆಯಾ-।
ಮನುಜಂ ಮುಟ್ಟದ ಮುನ್ನ ಕಲ್ಪಿತಮದುಂ ಭಾವಕ್ಕೆ ತಾನೆಯ್ದದಂ-॥
ದು ನಿಜಂ ಅಂಗಿತಲಿಂಗ ಭಾವದೆ ಮಹಾ ಲಿಂಗಕ್ಕೆ ತತ್ಸೌಖ್ಯಮಂ ।
ಬಿನದಂಗೊಂಡುರೆಮರ್ಪಿಪಾತನೆ ಶಿವಂ ಶ್ರೀ ಸಿದ್ಧಲಿಂಗೇಶ್ವರಾ ॥

ಕಾಯ ಕರಣಗಳನ್ನರ್ಪಿಸಿದನಂತರ ಒಳಗಿರುವ ಜೀವ ಭಾವವನ್ನು ಶಿವನಿಗರ್ಪಿಸಿ ಶಿವನ ಸೊತ್ತಾಗಿ ಮಾಡುವದೇ ಭಾವಾರ್ಪಣ. ಈ ರೀತಿ ಶ್ರೀ ಸಿದ್ಧಲಿಂಗೇಶ್ವರನು ವಚನಗಳ ಸಾರವನ್ನೇ ಸಂಗ್ರಹಿಸಿ ಕಾವ್ಯಮಯವಾಗಿ-ಬಹು ಸುಂದರವಾಗಿ- ಅತಿ ಮನೋಹರವಾಗಿ ಹೆಣದಿದ್ದಾನೆ. ಈತನು ರಚಿಸಿದ ಏಕೋತ್ತರ ಶತಸ್ಥಲವು ಒಂದು ಹೊಸ ತರಹದ್ದಾಗಿವೆ. ಅದನ್ನು ಓದುವದರಿಂದ ಏಕೋತ್ತರ ಶತಸ್ಥಲಗಳ ಅನುಭವವು ಶೀಘ್ರವಾಗಿ ಮನಸ್ಸಿಗೆ ಅಂಟಿಕೊಳ್ಳುತ್ತದೆ. ಅದಲ್ಲದೆ ಗ್ರಂಥಕಾರನ ಕಾವ್ಯ ಶಕ್ತಿಯೂ ವ್ಯಕ್ತವಾಗುತ್ತದೆ. ಅದಿರಲಿ.

ಈ ತೆರನಾಗಿ ದಾನ ಮಾಡಲು ಮನಸ್ಸು ಮಾಡಿದ ಇಳೆಯಾಂಡ ಗುಡಿಮಾರರಿಗೆ ತೊಂಬತ್ತೈದು ವರುಷಗಳು ಸಂದಿವೆ. ಈತನ ದಾನ ಗುಣವನ್ನು ಪರೀಕ್ಷಿಸಿ ಪರಮ ಸುಖವನ್ನೀಯಬೇಕೆಂಬ ಮನಸ್ಸು ಪರಶಿವನಿಗೆ ಬಂದಿದೆ. ಬಂದುದೇ ತಡ—

ಅಳವಡಿಸಿಕೊಂಡನೊಲ್ದಂತೊಂದು ಚೋಹಮಂ । ಇಳೆಗೆ ಮಿಗೆ
ಪೊಸತೆನಿಪ ಶತವೃದ್ಧ ಭಾವಮಂ ॥
ಶಿರದನೆರೆ, ಮೆಯ್ಯತೆರೆ, ಕರದಕೋಲಿಂದೆಸೆದು । ಸುರುಳ್ದತನು, ಕೂರ್
ಚಿನ ಜೋಲ್ದಪುರ್ಬಿಂದೆಸೆದು ॥
ಚೋಳದೇಶ ಪ್ರಾಂತಮಂ ಹರ್ಷದಿಂ ಸೊಕ್ಕು । ಶೂಲಿಭಕ್ತನಮನವ
ನೋಡಲ್ಕನಂ ಮಿಕ್ಕು ॥

ಎಂತಹ ಕನಿಕರ ರೂಪು ! ಎಷ್ಟೊಂದು ವಿಕಾರವೇಷ ! ನೂರು ವರುಷದ ಮುದುಕ. ತಲೆಯಲ್ಲೆಲ್ಲ ನೆರೆ. ಮೆಯ್ಯಲ್ಲೆಲ್ಲ ನೆರೆ, ಕೈಯಲ್ಲಿ ಕೋಲು, ಬಾಯಲ್ಲಿ ಜೊಲ್ಲು, ಸುಕ್ಕುಗಟ್ಟಿದ ಶರೀರ, ಬಾಗಿದ ಬೆನ್ನು ಈ ತರಹದ ವೇಷಿಯಾಗಿ ಕಾರಿರುಳಲ್ಲಿ ಚೋಳದೇಶವ ಹೊಕ್ಕಿದ್ದಾನೆ. ಅಷ್ಟರಲ್ಲಿಯೇ ಆಗಸದಲ್ಲಿ ಕಾರ್ಮೋಡಗಳು ತುಂಬಿಕೊಂಡಿವೆ. ಮಿಶ್ರೆಂದು ಮಿಂಚು ಮಿಂಚುತ್ತಿದೆ. ಸಿಡಿಲುಗಳು ಆರ್ಭಟಿಸಿ ಗರ್ಜಿಸಲು ಪ್ರಾರಂಭಿಸಿದ್ದಾವೆ. ಅನಿತರೊಳು ಗಗನವೇ ನೀರಾಗಿ ಬೀಳುವಂತೆ ಭೋರೆಂದು ಮಳೆಯು ಬೀಳತೊಡಗಿದೆ. ನೋಡು ನೋಡುವದರಲ್ಲಿ ನೆಲವೆಲ್ಲ ನೀರಿನಲ್ಲಿ ತೇಲುವಂತಾಗಿದೆ. ಸುತ್ತಲೂ ನೀರು. ಮೇಲೆ ಕತ್ತಲೆಯು ಕವಿದು ಕಡು ಹೆಚ್ಚಿದೆ. ದಿಙ್ಮುಖಗಳು ತೋರದಾಗಿವೆ. ಕತ್ತಲೆಯ ಕಪ್ಪಿನಿಂದ ಜಗವೆಲ್ಲ ಮುಚ್ಚಿ ಹೋಗಿದೆ. ಎತ್ತ ನೋಡಿದರೂ ಕತ್ತಲೆಯೇ ಕತ್ತಲು; ನೀರೇ ನೀರು.

ಇಂತಿಡಿದ ಕಕ್ತಲೆಯೊಳಭವನೂರಂ ಪೊಕ್ಕು। ಕಂತುಹರ ತುಂತುರೊಳ್
ನಡುಗುತೂರಂ ಪೊಕ್ಕು ॥

ಇಳೆಯಾಂಡ ಗುಡಿಮಾರನ ಮನೆಗೆ ನಡೆತಂದು । ಚಳಿಹತ್ತಿ ಮಳೆ
ಯೊಳಗೆ ಘಾಸಿಯಾಗುತೆ ಬಂದು ॥

ನಡುಗಿ ಪಲ್‌ಪರೆಗುಟ್ಟಿ ಬಾಗಿಲೊಳ್ ನಿಂದಿರಲ್ । ಕಡುಶೀತದಿಂದಳ್ಕಿ
ಬಳ್ಕುತುಂ ಬಂದಿರಲ್ ॥

ಇನಿತೊಂದವಸ್ಥೆಯಿಂದ ಇಂದುಧರನು ಹಾಗೂ ಹೀಗೂ ಬಂದು ಇಳೆಯಾಂಡ ಗುಡಿಮಾರರ ಮನೆಯ ಬಾಗಿಲಲ್ಲಿ ನಿಂತಿದ್ದಾನೆ. ಇತ್ತ ಒಳಗೆ ಇಳೆಯಾಂಡ ಗುಡಿಮಾರರು ಬಟ್ಟೆ ಬರೆಯಿಲ್ಲದೆ ಚಳಿಹತ್ತಿ ಬಳಲುತ್ತಿದ್ದಾರೆ. ಧಾನ್ಯವಿಲ್ಲದೆ ಮೂರು ನಾಲ್ಕು ದಿನಗಳಿಂದ ಉಪವಾಸ ಬಿದ್ದಿದ್ದಾರೆ. ಬೆಚ್ಚಗೆ ಮಲಗಬೇಕೆಂದರೆ ಹಾಸಲಿಲ್ಲ, ಹೊದೆಯಲಿಲ್ಲ.

ಹಾಸಲುಂ ಹೊದೆಯಲುಂ ಹರನ ನಾಮಂ ತನಗೆ । ಅಸುರದ ಚಳಿಗೆ
ಮರೆ ಈಶನಾಮವೆ ತನಗೆ ॥

ಒಳಗೆ ಭಾಳೇಕ್ಷಣನ ನಾಮ ತೀವಿರೆ ಕರಂ । ಚಳಿಹೊದ್ದದಂತಿರ್ದನ
ಭವಭಕ್ತಂ ಕರಂ ॥

ಎಂಬಂತೆ ಅವರಿಗೆ ಹಾಸಲು ಹೊದೆಯಲು ಹರನ ನಾಮವೊಂದೇ ಉಳಿದಿತ್ತು; ಅದೇ ಅವರ ಪರಮ ಸೊತ್ತು; ಶಾಶ್ವತಸಂಪತ್ತು. ಆದ್ದರಿಂದ ಅವರಿಗೆ ಚಳಿಯ ಬಾಧೆಯಿರಲಿಲ್ಲ. ಹೊರಗೆ ಸುರಿವ ಚಳಿ ಸರಿದು ಮರೆಯಾಗುತ್ತಿತ್ತು. ನೋಡಿ! ನಿಜವಾಗಿಯೂ ಮುಮುಕ್ಷುಗಳ ಜೀವನವು ಈ ತೆರನಾಗಿರಬೇಕು. ಭೋಗ ಚಿಂತೆ, ಭಾಗ್ಯ ಚಿಂತೆ, ಬಟ್ಟೆಚಿಂತೆ ಅಳಿಯಬೇಕು. ತ್ಯಾಗಚಿಂತೆ, ಯೋಗಚಿಂತೆ ಉಳಿಯಬೇಕು, ಬೆಳೆಯಬೇಕು.

> ಪರರಚಿಂತೆ ನಮಗೇಕಯ್ಯ? ನಮ್ಮ ಚಿಂತೆ ನಮಗೆ ಸಾಲದೆ? ಕೂಡಲ ಸಂಗಮದೇವ ಒಲಿವನೋ ಒಲಿಯನೋ ಎಂಬ ಚಿಂತೆ ಹಾಸಲುಂಟು ಹೊದೆಯಲುಂಟು.

ಎಂಬ ಭಾವಪೂರಿತ ಬಸವಣ್ಣನ ಬೋಧಾಮೃತದಂತೆ ನಮ್ಮಿಳೆಯಾಂಡ ಗುಡಿಮಾರರ ಸ್ಥಿತಿಯಾಗಿದ್ದಿತು. ಅವರಿಗೆ ಯಾವುದರ ಹಂಗೂ ಇದ್ದಿಲ್ಲ. ಶಿವನ ಒಲುಮೆಯ ಹೊರತು ಬೇರೆ ಯಾವ ವಿಷಯಗಳ ಹಂಬಲವಿರಲಿಲ್ಲ. ಅಂತೆಯೇ ಶಿವನು ತನ್ನ ಕೈಲಾಸ ಬಿಟ್ಟು ಮನೆಯ ಬಾಗಿಲಗೆ ಬಂದು ನಿಂತು ಕೊಂಡಿದ್ದಾನೆ. ಚಳಿಯ ಬಾಧೆಯನ್ನು ಸಹಿಸದೆ ಬಾಗಿಲಲ್ಲಿಯೇ ನಿಂತು ಶಿವಶಿವ! ಹರಹರ!! ಶಂಕರ!!! ಎಂದು ಬಾಯ್ಬಿಡತೊಡಗಿದ್ದಾನೆ. ಆ ದನಿಯನ್ನು—

> ...ಕೇಳು ತಿಳೆಯಾಂಡ ಗುಡಿಮಾರ ನಾರೆಂದು । ಕರಬಳಲ್ದಿಲೆಲೆ
> ಎನ್ನಾಳ್ದರ ಧ್ವನಿಯೆಂದು ॥
> ಕೆಟ್ಟೆ! ಕಳ್ತಲೆಯೊಳಿಯ್ತುಪ್ಪರೇ? ಎಲೆದೇವ। ನಟ್ಟಿರುಳ್ಕಳೆಯೊಳಿ
> ಯ್ತುಪ್ಪರೇ ಎಲೆದೇವ ॥
> ಎಂದು ಬಂದು ಗಳಗಳನೆ ಕದವಂ ತೆರೆದು ಕಾಣುತುಂ। ಬಂದು
> ಚರಣದ ಮೇಲೆ ಬೀಳ್ಪ ಭಯವೇರುತುಂ ॥

ಇಳೆಯಾಂಡ ಗುಡಿಮಾರನು ಎಂತಹ ಕರುಣಿ! ಎಂತಹ ಕೃಪಾಳು! ಎಂತಹ ಪರೋಪಕಾರಿ! ಪರರ ದುಃಖಕ್ಕೆ ಬಳಲುವ-ಕರಗುವ ಸ್ಥಿತಿ ದಯಾಂತಃಕರಣಿಗಳಿಗಲ್ಲದೆ ಬೇರೆ ಯಾರಿಗೆ ಬರುವದು ಹೇಳಿ! ಇಳೆಯಾಂಡ ಗುಡಿಮಾರರಂಥ ದಾನವೀರ ದಯಾರ್ದ್ರಹೃದಯಿಗಳಿಗಲ್ಲದೆ

ಕೈಬಿಚ್ಚದ ಕಲ್ಲೆದೆಯುವರಿಗೆ ಬರಲು ಶಕ್ಯವೆ? ತಾವೇ ಹೆತ್ತ ತಮ್ಮ ಮಕ್ಕಳೇ ಇಂಥ ಇರುಳಲ್ಲಿ ಇಂಥ ಪರಿಸ್ಥಿತಿಯಲ್ಲಿ ಬಂದರೆ ಬಂದು ಕದ ತೆಗೆಯದ ಕಟುಗರೆಷ್ಟೋ ಉಂಟು ವಿಧಾತೃ ಸೃಷ್ಟಿಯಲ್ಲಿ. ಅಂಥವರಿಗೆ ನಮಿಸಿ ಮುಂದೆ ಸಾಗುವೆ. ಪರಮಾತ್ಮನು ಬಾಗಿಲಲಿ ನಿಂದು ಚಳಿಯ ಬಾಧೆಯಿಂದ ನರಳುವ ಹರಹರ, ಶಿವಶಿವ ಎಂಬ ಆರ್ತಧ್ವನಿಯು ಆತನ ಹೃದಯಕ್ಕೊಂದು ಶಲ್ಯಪ್ರಾಯವಾಗಿದೆ. ಎದೆ ಕರಗಿ ನೀರಾಗಿದೆ. "ಕೆಟ್ಟೆ! ಕಳ್ತಲೆಯೊಳೆಯ್ತಪ್ಪರೇ ಎಲೆ ದೇವ" ಎಂದು ಕನಿಕರ ಬಡುತ್ತಾನೆ. ಇದು ಎನ್ನಾಳ್ದನ ದನಿಯೆಂದು ಕೂಡಲೇ ಗುರ್ತಿಸಿ ಹೇಳಬಾರದಷ್ಟು ವೇತನೆ ಪಡುತ್ತಾನೆ. ಆ ಅಪಾರವಾದ ವೇದನೆಯಿಂದ ಬೇಗ ಎದ್ದು ಬಂದು ಕೇವಲ ಮನೆಯ ಕದವೊಂದನ್ನೇ ತೆಗೆಯಲಿಲ್ಲ. ಅದರೊಡನೆ ಹೃದಯ ಕದವನ್ನೂ ತೆರೆದಿದ್ದಾನೆ. ಒನ್ಮೆಲೇ ಚರಣಗಳಿಗೆರಗಿದ್ದಾನೆ. ಭವಹರನ ಸ್ಥಿತಿಯನ್ನು ಕಂಡು ಭಯವೇರಿ ಭ್ರಾಂತನಾಗಿ ನಿಂತಿದ್ದಾನೆ. ಆಗ ಶಿವನು—

...ಕರಂ ನಡುನಡುಗಿ ಚಳಿ ಹೊಡೆದುದೆಲೆ ಮಗನೆ। ಹರಣವುಂ<br>
ಹತ್ತಿತ್ತು ಸೀತ, ಹೂ ಹೂ ಮಗನೆ॥

ನಿಲಲಾರೆನಿನ್ನೆಂತು ಕೈಕಾಲ್ಸುರುಳ್ವಪವು। ಪಲವು ಮಾತೇ ನವಯ<br>
ವಂಗಳೆಲ್ಲರಳ್ದಪವು॥

ತನು ಒಡೆದಪುದು, ಚಳಿಗೆ ಮನ ಸೀಳ್ದಪುದು ಚಳಿಗೆ। ಎನೆ ಕೇಳ್ದು<br>
ಭಯ ಭಕ್ತಿಯಿಂ ನಡುಗಿ ಬಂದೊಳಗೆ॥

ಎಂದು ಗುದುಗುಟ್ಟಿ ನಡುಗುತ್ತ ಎಲೆ ಮಗನೆ, ಶೀತವು ಬಾಧಿಪುದು. ಪ್ರಾಣವನೆ ಹೀರುವದು. ಅಯ್ಯೋ ನಿಲಲಾರೆ. ಕಾಲು ಕಳಚುವವು. ಕೈಯು ಸುರುಳುವವು. ಅವಯವಗಳು ಅದರುವವು. ದೇಹವೊಡೆದಿಹುದು. ಮನ ಸೀಳುವದು. ಹಾಯ್! ಹಾಯ್! ನಿಲಲಾರೆ ನಿಲಲಾರೆ ಎಂದು ಧೊಪ್ಪನೆ ನೆಲಕ್ಕೆ ಬೀಳುವನು. ಬಿದ್ದ ಶಿವನನೆತ್ತಿ ಒಳಗೊಯ್ದು ಏನು ಮಾಡಲೆಂದು ಯೋಚನೆಯೊಳಗಾಗದೆ ತಾವಿರುವ ಮನೆಯ ಮಾಳಿಗೆಯ ಜಂತೆಯನುಚ್ಚಿ ಬೆಂಕಿಯನ್ನು ಪಟು ಮಾಡಿದ್ದಾನೆ. ಇತ್ತ ಇವನು ಬೆಂಕಿಯನ್ನು ಪಟು ಮಾಡದಂತೆ ಅತ್ತ ಶಿವನು ಕಟುವಾಗಿ ನಡುಗ ತೊಡಗಿದ್ದಾನೆ. ನಡುಗುವ ಶಿವನ ತೊಡೆಗಳನ್ನು ತೋಳುಗಳನ್ನು

ಬೆಂಕಿಗೆ ಹಿಡಿದು ಕಾಸಿದ್ದಾನೆ. ಕಾಲನ್ನು ಕೈಯನ್ನು ಕಾಸಿದ್ದಾನೆ. ಬಾಯನ್ನು ಬೆನ್ನನ್ನು ಬೆಚ್ಚಗೆ ಮಾಡಿದ್ದಾನೆ. ಹೀಗೆ ಸಕಲೇಂದ್ರಿಯ ಗಳನ್ನು ಕಾಸಿ ಕೈಯಿಂದ ಕರುಣೆಯಿಂದ ಹಿಸುಕಿದ್ದಾನೆ. ಹೀಗೆ ಹಿಸುಕಿ ಚಳಿಯನ್ನು ಕಳೆಯುವಷ್ಟರೊಳಗೆ—

ಎನಿತನಿತು ಚಳಿಹೋಗಲನಿತನಿತು ಪಸಿವಗಸೆ।
ಅನುಮಿಸುತೆ ಪಸಿದೆ ಪಸಿದೇಂ ಎಂದುಲವಲವಿಸೆ॥

ಹಸಿವು ಹೆಚ್ಚಾಗಿ ಹರನು–ಹಸಿದೆ, ಹಸಿದೆ ಎಂದು ಲವಲವಿಸ ತೊಡಗಿದ್ದಾನೆ. ಇದನ್ನು ಕೇಳಿ ಇಳೆಯಾಂಡ ಗುಡಿಮಾರರ ಎದೆ ಯೊಡೆದು ಹೋಗಿದೆ. ಪಾಪ! ಮನೆಯಲ್ಲಿ ಒಂದು ಮುಷ್ಟಿ ಕಾಳಿಲ್ಲ. ಕೈಯಲ್ಲಿ ಒಂದು ಕಾಸೂ ಸಹ ದುಡ್ಡಿಲ್ಲ. ಅದಕ್ಕಾಗಿ ಮೂರು ನಾಲ್ಕು ಉಪವಾಸದಿಂದ್ದಾನೆ. ಇಂತಹ ಅವಸ್ಥೆಯಲ್ಲಿ ಶಿವನಿಗೆ ಹಸಿವು. ಏನು ಮಾಡಲಿ, ಎಲ್ಲಿ ತರಲಿ, ಯಾರನ್ನು ಬೇಡಲಿ. ಸಮಯವಾದರೂ ನಡು ಇರುಳು. ಹಾಯ್ ಪರಮಾತ್ಮಾ! ಭಕ್ತ ಬಂಧುವೇ!! ದೀನಕರುಣಿಯೇ!!! ಎನಗೆ ಎಂತಹ ಪ್ರಸಂಗ ತಂದೆ? ಹಸಿದು ಬಂದ ಅತಿಥಿಯನ್ನು ಹಿಂದಕ್ಕೆ ಕಳಿಸುವ ಸಮಯ ತಂದೆಯಾ? ಏನು ಮಾಡಲಿ ಎಂದು ಯೋಜನೆ ಹರಿಯದೆ ದೀನ ಹೀನ ದೃಷ್ಟಿಯಿಂದ ತನ್ನ ಹೆಂಡತಿಯ ಮೊಗವನ್ನು ನೋಡುವನು. ಪರಮಸಾಧ್ವಿಯಾದ ಆತನ ಸತಿಯು— ಓ ಪತಿಯೆ! ಏಕೆ ಯೋಚಿಸುವೆ? ಮೊನ್ನೆ ಬಿತ್ತಿದ ಭತ್ತದ ಮೊಳಕೆಗಳನ್ನು ತೆಗೆದು ಕೊಂಡು ಬನ್ನಿ. ಅವನ್ನೇ ಅಟ್ಟು ಅತಿಥಿಗೆ ಉಣಬಡಿಸೋಣ, ಎಂದು ಸಮಯಕ್ಕೆ ತಕ್ಕ ಹಂಚಿಕೆಯನ್ನು ಹೇಳಿಕೊಡುವಳು. ಆಹಾ! ಎಂಥ ಸೌಭಾಗ್ಯವತಿ! ಎಂಥ ಗುಣವತಿ! ಎಂಥ ವಿಶಾಲಮತಿ! ಇಳೆಯಾಂಡ ಗುಡಿಮಾರ ಸತಿ! ಇದ್ದುದನ್ನು ಬಚ್ಚಿಡುವ ಸತಿಯರೆಷ್ಟೋ ಪ್ರಪಂಚ ವಲ್ಲಿರುವರು. ಬಂದವರನ್ನು ಬೈದು ಕಳಿಸುವ ಉದಾರ ಹೃದಯಿಗಳೆಷ್ಟೋ ಜನರಿರುವರು. ಆದರಿವಳು ಹಾಗಿಲ್ಲ. ಪತಿಯ ವ್ರತವು ಎಂತಾದರೂ ಸಾಗಿದರೆ ಸಾಕು. ಅದೇ ಅವಳಿಗೆ ಪರಮಭಾಗ್ಯ. ಅಂತೆಯೇ ಹಾಗೆ ಹೇಳುವಳು. ಅದನ್ನು ಕೇಳಿ ಇಳೆಯಾಂಡ ಗುಡಿಮಾರರು ಅತ್ಯಂತ ಹರ್ಷನಿರ್ಭರರಾಗಿ ಬಿತ್ತಿದ ಭತ್ತದ ಮೊಳಕೆ ತರಲು ಕಾಳರಾತ್ರಿಯ ಲ್ಲಿಯೇ ಹೊರಟಿದ್ದಾನೆ. ಆ ಪರಿಯನ್ನು ಹರಿಹರದೇವನು ಹೇಳುವದನ್ನು ಕೇಳಿ—

ಅರುಪೆ ಹರುಷಂದಳೆದು ಪರಮಭಕ್ತಂ ಮೆಚ್ಚಿ । ಪೊರಮೊಟ್ಟನೊಲ್ಪು
ಮಧ್ಯರಾತ್ರಿಯೊಳ್ಪೆಚ್ಚಿ ॥
ಮತ್ತೆ ಮಳೆ ಪಿರಿದಾಗೆ, ಮತ್ತೆ ಚಳಿ ಪಿರಿದಾಗೆ । ಮತ್ತೆ ಕಳ್ತಲೆ ಸುತ್ತಿ
ಮುತ್ತಿಯುನ್ನತವಾಗೆ ॥
ಬರುತಿರ್ದನಪ್ರತಿಮ ಶಿವಭಕ್ತನುರವಣಿಸಿ । ಪುರದ ಹೊಲಗಳದಾಂಟಿ
ಕಳ್ತಲೆಯನುತ್ತರಿಸಿ ॥
ಹಳ್ಳಂಗಳಂ ಕೆರೆಗಳಂ ತೊರೆಗಳಂ ದಾಂಟಿ । ಕೊಳ್ಳಂಗಳಂ ಕೊಳಗಳಂ
ಲಂಘಿಸುತೆ ದಾಂಟಿ ॥
ಹೋಗಿಗರ್ದೆಯೊಳಿರ್ದ ನೊಳೆವಿತ್ತ ನೆತ್ತಿದಂ । ರಾಗದಿಂ ತಂದವಂ
ಗೂಡೆಯೊಳಗಿಕ್ಕಿದಂ ॥
ತಿರುಗಿ ಬರುತಿರ್ದಂ ಹರಂ ಹಸಿದನೆಂಬೆನುತೆ । ಉರವಣಿಸಿ ಬರುತುಂ
ಬಳಲ್ದನೀಶ್ವರ ನೆನುತೆ ॥

ಈ ಪರಿ ಇಳೆಯಾಂಡ ಗುಡಿಮಾರನು ಮಧ್ಯರಾತ್ರಿಯಲ್ಲಿಯೇ ಹೊಲಕ್ಕೆ ಹೊರಟಿದ್ದಾನೆ. ಮೇಲೆ ಮಳೆಯು ಸುಮ್ಮೆಂದು ಸುರಿಯುತ್ತಿದೆ. ಬರಿಮೈ. ಚಳಿಯು ಬಲಿಬಲಿದು ಬಾಧಿಸುತ್ತಿದೆ. ಕತ್ತಲೆಯು ಕವಿಕವಿದು ಮುತ್ತ ತೊಡಗಿದೆ. ಅಂತಹದರಲ್ಲಿಯೇ ಹತ್ತುವ ಹಳ್ಳ ಕೊಳ್ಳಗಳನ್ನು ದಾಟಿದ್ದಾನೆ. ಎದುರಾಗುವ ಕೆರೆ ತೊರೆಗಳನ್ನು ಮೀರಿದ್ದಾನೆ. ಹೊಲಕ್ಕೆ ಬಂದಿದ್ದಾನೆ. ನೊಳೆವಿತ್ತ ಕಾಳುಗಳನ್ನು ಕಾಳಿರುಳಲ್ಲಿಯೇ ಆಯ್ದುಕೊಂಡು ಹರನು ಹಸಿದಿರಬಹುದೆಂದು ಉರವಣಿಸುತ್ತ ಮನೆಗೆ ಬಂದು ಮಡದಿಯ ಮುಂದಿಳುಹಿದ್ದಾನೆ. ಅರಸಿಯು ಅವನ್ನು ತೆಗೆದುಕೊಂಡು ಹುರಿದು ಅಮೃತಾನ್ನದಂತೆ ಓಗರವ ಮಾಡಿದ್ದಾಳೆ. ಬಂದ ಭಕ್ತನಿಗೆ ಎಡೆ ಬಡಿಸಬೇಕೆಂದು ಮಗನನ್ನು ಬಾಳೆಯ ಎಲೆಯನ್ನು ತರಲು ಕಳುಹಿದ್ದಾರೆ. ಉಣ್ಣುವ ಬಟ್ಟಲುಗಳು ಸಹ ದಾನವಾಗಿ ಹೋಗಿವೆ. ಅತ್ತ ಬಾಳೆಯ ಎಲೆಯನ್ನು ಕೊಯ್ಯುವ ಬಾಲಕನನ್ನು ಶಿವನ ಆಜ್ಞೆಯಿಂದ ಹಾವು ಕಚ್ಚಿದೆ. ವಿಷಪೇರಿ ಮೂರ್ಛೆ ಬಂದಿದೆ. ಶಿವನ ಮಾಯೆಯಿಂದ ಶಿಶುವಿನ ಅಸುವೂ ಹೊರಟು ಹೋಗಿದೆ. ಹೀಗೆ—

ಮರೆದೊರಗಿದಂತಲ್ಲಿ ದೀರ್ಘನಿದ್ರೆಯೊಳಿರಲ್ । ಪೊರಗೆ, ಶಶಿಧರನತ್ತ
ಪಸಿದೆನೆಂದೆನುತಿರಲ್ ॥
ತಡೆದನೆಂದಿಳೆಯಾಂಡ ಗುಡಿಮಾರನೆಯ್ತಂದು । ಪಿಡಿದುರಗನಿಂ
ಮಡಿದ ಮಗನನೀಕ್ಷಿಸುತಂದು ॥

ಎಲೆ ತರಲು ಹೋದ ಹುಡುಗನು ಗಿಡಪಡಿಯಲ್ಲಿ ಗತಪ್ರಾಣನಾಗಿ ಬಿದ್ದಿದ್ದಾನೆ. ಇಲ್ಲಿ ಶಿವನು ಕಪಟದಿಂದ ಹಸಿವನ್ನು ಸಹಿಸದೆ ಹೊರಳಾಡಲಾರಂಭಿಸಿದ್ದಾನೆ. ಇದನ್ನು ನೋಡದೆ ಇಳೆಯಾಂಡ ಗುಡಿಮಾರನೇ ಹೊರಟು ಬಂದಿದ್ದಾನೆ. ಬಾಳೆಯ ಬದಿಯಲ್ಲಿ ಮಗುವಿನ ಶವ. ಮರುಗದೆ ಮುಟ್ಟದೆ ತನ್ನ ಕಾರ್ಯದಲ್ಲಿ ತತ್ಪರನಾಗಿದ್ದಾನೆ. ಹಾ ! ಎಂಥ ಎದೆ ಶಿವನದು, ಶಿವಭಕ್ತರದು ! ಎಲ್ಲಿಯ ವರೆಗೆ ತನ್ನ ನಂಬಿದವರನ್ನು ಪರೀಕ್ಷಿಸುವದು ! ಅದಕ್ಕೊಂದು ಅವಧಿಯಿಲ್ಲವೇ ?

> "ನೆಚ್ಚಿದನೆಂದರೆ, ಮೆಚ್ಚಿದನೆಂದರೆ, ಸಲೆಮಾರುವೋದನೆಂದರೆ, ತನುವನಲ್ಲಾಡಿಸಿ ನೋಡುವೆ ನೀನು. ಮನವನಲ್ಲಾಡಿಸಿ ನೋಡುವೆ ನೀನು. ಧನವನಲ್ಲಾಡಿಸಿ ನೋಡುವೆ ನೀನು. ಇವೆಲ್ಲಕ್ಕಂಜದಿದ್ದರೆ ಭಕ್ತಿಕಂಪಿತ ನಮ್ಮ ಕೂಡಲಸಂಗಮದೇವಾ"

ಎಂದು ಬಸವಣ್ಣನವರು ಅವಧಿಯನ್ನು ಹೇಳಿದುದು ಸತ್ಯವಿದೆ. ಏಕೆಂದರೆ ಇಲ್ಲಿಯ ವರೆಗೂ ಶಿವನು ಇಳೆಯಾಂಡ ಗುಡಿಮಾರನನ್ನು ದರಿದ್ರನ ಮಾಡಿ ಧನವಲ್ಲಾಡಿಸಿ ನೋಡಿದನು. ಮಳೆಯಲ್ಲಿ ಮಿಂಚಿನಲ್ಲಿ ಚಳಿಯಲ್ಲಿ ಕತ್ತಲೆಯಲ್ಲಿ ಹೊಲಕ್ಕೆ ಕಳುಹಿ ತನುವಲ್ಲಾಡಿಸಿ ನೋಡಿದನು. ಈಗ ನಡೆದಿದೆ ಮನದ ಪರೀಕ್ಷೆ. ಇದುರಿಗೆ ಮೋಹದ ಮಗುವಿನ ಶವ. ಅಲ್ಲಿ ಶಿವನು ಹಸುವಿನಿಂದ ಕನಲುವ ಕಾಟ. ಇಂತಹ ಉಭಯ ಸಂಕಟ ಸಮಯದಲ್ಲಿ ಆ ಮಹಾನುಭಾವನು ತನ್ನ ಮನದಲ್ಲಿ ಇಂತು ಯೋಚಿಸುವನು--

> ಇದನರಿದೊಡೀತನುಣಲೊಲ್ಲನೇವೇಳುವೇಂ । ಇದನರುಪದುಣಲಿಕ್ಕೆ
> ಸಂತಸಂ ಮಾಡುವೇಂ ॥

ಆಃ ! ಎಂತಹ ವಿಶಾಲವಾದ ಭಾವ ! ಎಷ್ಟೊಂದು ಶಿವಭಕ್ತರಲ್ಲಿ ಪ್ರೇಮ! ಈ ಮಗನು ಮಡಿದ ವಾರ್ತೆ ಆತನಿಗೆ ಮುಟ್ಟಿದರೆ ಉಣಲಿಕ್ಕಿಲ್ಲ. ಆದ್ದರಿಂದ ಇದನ್ನು ಆತನಿಗೆ ಅರುಪದೆ ಮೊದಲು ಉಣಲಿಕ್ಕಿ ಸಂತೋಷಪಡಿಸುವೆ ಎಂದು ಯೋಚಿಸಬೇಕಾದರೆ ಆತನ ಮನಸ್ಸು ಎಷ್ಟು ಸ್ಥೈರ್ಯಗೊಂಡಿರಬೇಕು, ಎಷ್ಟು ನಿರ್ಮೋಹವಾಗಿರಬೇಕು, ಎಂಥ ಭಕ್ತಿ ಭಾವ ಬಲಿತಿರಬೇಕು. ಈ ಪರಿ ಅಂತಹ ಆತ್ಮವೀರರಿಗಲ್ಲದೆ ಸಾಮಾನ್ಯರ ಸೊತ್ತಲ್ಲ. ಇಳೆಯಾಂಡ ಗುಡಿಮಾರನು ಅಲ್ಲಿ ಕಂದನನ್ನು ನೋಡುತ್ತ ನಿಲ್ಲದಲೆ ಎಲೆಯನ್ನು ಕೊಯ್ದು ತಂದು ಭಕ್ತನ ಮುಂದಿರಿಸಿದ್ದಾನೆ.

ತಿಳಿನೀರನಿಕ್ಕಿದ್ದಾನೆ. ತೊಳಪ ಓಗರವನೆಡೆಬಡಿಸಿದ್ದಾರೆ. ಎಲೆಬಡಿಸಿ ಒಲ್ಮೆಯಿಂದ ಓ ದೇವ! ಆರಯ್ಯುವುದು ಎಂದು ಎರಗಿ— ಶಿವನನ್ನು ಬೆಸಕೊಳ್ಳಲು ಆಗ ಶಿವನು — ಏನು ನಾವೊಬ್ಬರುಣ್ಣುವದೇ? ಆಗದು. ಭಕ್ತರ ಪಂಕ್ತಿಯಲ್ಲಿಯೇ ಉಂಬುದೆಮ್ಮ ವ್ರತ. ಆದ ಕಾರಣ ತಂದೆ ಮಕ್ಕಳೆಲ್ಲರೂ ಬಂದು ಕುಳಿತುಕೊಳ್ಳಬೇಕು ಎಂದು ಆಗ್ರಹ ಮಾಡುವನು. ಇದನ್ನು ಕೇಳಿ ಇಳೆಯಾಂಡ ಗುಡಿಮಾರನು ಕಡು ನೊಂದು— ಇತ್ತ ಮಗನು ಮಡಿದುದನ್ನು ಹೇಳಲೂ ಬಾರದು. ಅತ್ತ ಮಗನಿಲ್ಲದಿದ್ದರೆ ಉಣ್ಣುವದಿಲ್ಲೆಂಬ ವೃಡನ ದೃಢತರ ಪ್ರತಿಜ್ಞೆ. 'ಇನ್ನೇನೆನೆನುತೇಳ್ದು' ಕಂದನ ಬಳಿಗೆ ಹೋಗಿ ಕರೆದು ನೋಡುವೆನು. ಆತನೆದ್ದು ಬಾರದಿರ್ದರೆ ಇಂದು ಆಭವಂಗೆ ಶಿರವನೊಪ್ಪಿಸಿಬಿಡುವೆನು. ಉಂಬದ ಶಿವನಿಗೆ ಅರ್ಪಿಸಿ ಇಂಬಾಗಿ ಇರುವೆನು. ಎಂದು ಯೋಚಿಸಿಗೊಂಡು ಹೋಗಿ ಮಗನ ಕರೆಯಲು ನಿದ್ದೆಯಿಂದ ಎಚ್ಚರಿಯುವಂತೆ ಎದ್ದು ಬರುವನು. ಆನಂದದಿಂದ ಆತನನ್ನು ಕರೆದುಕೊಂಡು ಶಿವನನ್ನು ಉಣಿಸಬೇಕೆಂದು ಉಲ್ಲಾಸದಿಂದ ಬರುವಷ್ಟರಲ್ಲಿ —

...ಜಗಜ್ಯೋತಿರ್ಮಯಂ ಬೆಳಗುತಿರಲೊಳಗೆ। ಪುರಹರಂ ವೃದ್ಧ
ವೇಷವನಿಳುಪಿ ತೊಳ ತೊಳಗೆ ॥

ಜಡೆ ಚಂದ್ರಕಳೆ ನೊಸಲ ಕಣ್ಣಾಗ ಕುಂಡಲಂ। ತೊಡಿಗೆಯುಹಿ, ಕರಿ
ಗೊರಲ್ಮಿಸುಪ ಮುಖಮಂಡಲಂ ॥

ದಶಭುಜಂ ಡಮರುಗಂ ತ್ರಿಶೂಲಂ ಗಜಾಜಿನಂ। ದಿಸೆವೆಸೆಯೆ
ಬೆಳಿಪ ಪುಲಿದೊವಲು ಪಂಚಾನನಂ ॥

ತಾನೊಪ್ಪಿ ರವಿಕೋಟಿ ತೇಜವುಂ ಮುಸುಳಿಸುತೆ। ನಾನಾ ಸುಧಾಕರ
ಪ್ರಭೆಗಳಂ ರಂಜಿಸುತೆ ॥

ಶಿವನು ಸಾಕಿನ್ನು ಪರೀಕ್ಷಿಸುವದೆಂದು ಕಪಟದ ವೃದ್ಧಭಾವವನ್ನು ಬಿಟ್ಟು ಅಭಯವನ್ನೀಯುವ ನಿಜರೂಪಂದೊಟ್ಟು—

"ಅರೆವನಯ್ಯಾ ಸಣ್ಣನಹನ್ನಕ್ಕ. ಬರೆವನಯ್ಯಾ ಬಣ್ಣಗಾಬನ್ನಕ್ಕ. ಆರೆದರೆ ಸಣ್ಣಗಾಗಿ, ಒರೆದರೆ ಬಣ್ಣವಾದರೆ ಕೂಡಲಸಂಗಮದೇವ ನೊಲಿದು ಸಲಹುವನು"

ಎಂಬ ಬಸವಣ್ಣನು ನಿಷ್ಠಾಪೂರಿತ ವಚನಾಮೃತಕ್ಕೆ ಸತ್ಯದ ಹೊಂಗಳ ಸನ್ನಿಕ್ಕೆ ಶೃಂಗರಿಸಿದನು. ಭಕ್ತರ ಬೆಂಗಾವಲಿಗನೆಂಬ ಬಿರುದನ್ನು ಭಾವ ಪೂರಿತವನ್ನಾಗಿ ಮಾಡಿದನು. ಇದಾಗಬೇಕಾದರೆ ಭಕ್ತನಲ್ಲಿ ದೃಢತೆ ಮಾತ್ರ ಇರಬೇಕು. ಸಿರಿಬರಲಿ, ಉರಿಬರಲಿ, ಹಿಡಿದ ವ್ರತವನ್ನು ಬಿಡದೆ ನಡಿಸುವ ಛಲವಿರಬೇಕು. ಆ ನಿಷ್ಠೆ, ಆಧೈರ್ಯ, ಆಸಾಹಸಗಳು ಕದ ಲದಂತಿರಬೇಕು. ತನ್ನ ಧ್ಯೇಯ ಸಂಪಾದನೆಯಲ್ಲಿ ನಚ್ಚು ಮಚ್ಚು ಗಳು ಅಸ್ಖಲಿತವಾಗಿರಬೇಕು. ಅದ್ವಿತೀಯವಾಗಿರಬೇಕು. ಅಂದರೇನೆ ಅವನು ಕೈಕೊಂಡ ವ್ರತಸಮುದ್ರವನ್ನು ದಾಟಿ ಆ ಕಡೆಗೆ ನಿಲ್ಲುವನು. ಸಂಸಾರ ಸಂಕಟಗಳನ್ನು ನೀಗುವನು. ಜಗತ್ತಿನ ಜನರಿಗೆ ಆದರ್ಶ ಪುರುಷನಾಗುವನು. ಜಗಜ್ಜ್ಯೋತಿಯಲ್ಲಿ ಜ್ಯೋತಿ ರೂಪಾಗಿ ಲೀನವಾ ಗುವನು.

"ಮನಕ್ಕೆ ಮನ ಒಂದಾಗಿ, ಧನಕ್ಕೆ ಧನ ಒಂದಾಗಿ, ನಚ್ಚಿದ ಮಚ್ಚು ಅಚ್ಚೊತ್ತಿದಂತಿರಬೇಕು. ಪ್ರಾಣಕ್ಕೆ ಪ್ರಾಣ ಒಂದಾಗಿ ಶುಭ ಸೂಚನೆ ಒಂದಾಗಿರುನ ನಚ್ಚು ಮಚ್ಚು ಪಾಠವೈದುದೇ ? ಶಿರ ಹರಿದರೇನು ? ಕರುಳು ಕುಪ್ಪಳಿಸಿದರೇನು? ಇಂತಪ್ಪ ಸಮಸ್ತವೆಲ್ಲವೂ ಹೋದರೇನು ? ಚಿತ್ತ-ಮನ-ಬುದ್ಧಿಯೊಂದಾದ ಮಚ್ಚು ಬಿಚ್ಚಿ ಬೇರಾಗದಿದ್ದರೆ ಮಚ್ಚುವ ನಮ್ಮ ಕೂಡಲ ಸಂಗಮದೇವ"

ಎಂದು ದೃಢವ್ರತಿಗಳಾದರೆ ಮೃಡಪದ ಸಿಗುವದೆಂದು ಒಳ್ಳೇ ಸೊಗಸಾಗಿ ಹೇಳಿದ್ದಾರೆ. ದೃಢವ್ರತನಾದ–ದಾನವೀರನಾದ–ಧರ್ಮಶೀಲನಾದ ಇಳೆ ಯಾಂಡ ಗುಡಿಮಾರನು ನಿಜಸ್ವರೂಪವನ್ನು ತಳೆದು ನಿಂತ ನಾಗಾಭರ ಣನನ್ನು ನೋಡಿ ಆನಂದಬಾಷ್ಪ ಉಕ್ಕಿ ಉತ್ಸಾಹ ಮಿತಿಮಿಕ್ಕಿ ಗಳಗಳನೆ ಬಂದು ಹರನ ಚರಣಗಳಿಗೆರಗಿ ಇಂತು ಹೃತ್ಪ್ರೇಮದಿಂದ ಕರಳು ಕರಗು ವಂತೆ ನುಡಿದನು—

ದೇವಾ ! ಜರಾಜೀರ್ಣವೇಷಮಂ ಕೈಯ್ಕೊಂಡು । ದೇವಾ ! ಮಳೆಯೊಳ್<br>ಚಳಿಯೊಳೆನ್ನಮನಂಗೊಂಡು॥<br>ಬಪ್ಪುದೇ ? ಇಂತಿರಿಳು ಕರುಣಿ ಕರುಣಿಗಳರಸ । ಒಪ್ಪವಾಯ್ತೆನ್ನ<br>ಮಾಟಂ ಹೈಮವತಿಯರಸ ॥<br>ಚಳಿಹತ್ತಿತೇ ಪತ್ತಿತೇ ತಂದೆ ಹೇಳಯ್ಯ । ಮಳೆಯೊಳಗೆ ತನು ನೆನೆದು<br>ಕೊರಗಿತೇ ಹೇಳಯ್ಯ ॥

ಎಂದು ದೇವನಲ್ಲಿರುವ ಗಾಢವಾದ ಪ್ರೇಮದಿಂದ ಕರುಣೆ ಹುಟ್ಟಿ ಕೇಳು ವಾಗಲೆ ನಂದೀಶ-ಭೃಂಗೀಶ-ವೀರಭದ್ರ ಮೊದಲಾದ ಪ್ರಮಥಗಣವು ಬಂದು ಶಿವನಿಗೆರಗಿ ಆತನಪ್ಪಣೆಯಂತೆ ಇಕ್ಕೆಲದಲ್ಲಿ ಸಾಲ್ವಿಡಿದು ನಿಲ್ಲು ವರು. ಆಗ ಶಿವನು ಸಮೀಪದಲ್ಲಿಯೇ ನಿಂತ ಶಿವಭಕ್ತ ಶ್ರೇಷ್ಠನಾದ ಇಳೆ ಯಾಂಡ ಗುಡಿಮಾರನನ್ನು ಸ್ನೇಹ ದೃಷ್ಟಿಯಿಂದ ನೋಡಿ ನಲವೇರಿ—

"... ಶಿವನೆಂದನೆಲೆನಂದೀಶ ಕೇಳಯ್ಯ । ಕಂಡೆ ನಿಲ್ಲಿಂತಪ್ಪ ನೇಹನಂ
ಪೊಸತಯ್ಯ ॥

ಈ ಮಳೆಯೊಳೀ ಚಳಿಯೊಳಿಂತು ಪೋದವರುಂಟೆ? । ಏ ಮಾತೊ
ಮೊಳೆವಿತ್ತ ನೆತ್ತಿ ತಂದವರುಂಟೆ ? ॥

ಮಗನ ಸಾವಂ ನೋಡದುಣಲಿಕ್ಕಿದವರುಂಟೆ? । ಜಗದೊಳಗೆ
ವಾಂಛಿತವನುಳಿದು ಮಾಳ್ಪವರುಂಟೆ ? ॥

ಎಂದು ಕೊಂಡಾಡುತಿರೆ ಪೂಮಳೆಗಳೆರಗಿದವು । ಅಂದು ನಾಕದ
ದುಂದುಭಿಸ್ವನಂ ಮೊಳಗಿದವು ॥

ಇನಿತು ವೈಭವ ಜರಗಿರಲು ಸಾಕ್ಷಾತ್ ಶಿವನು ಒಲಿದು ಸ್ವಸ್ವರೂಪ ತೋರಿ ರಲು–ಮುಂದೆ ಮೋಕ್ಷಪದವನ್ನು ಕೊಡುವವನಿರುತಿರಲು-ಅವಕ್ಕೆಲ್ಲ ಗುಡಿಮಾರನು ಮನಸೋಲದೆ-ಆಶಿಮಾಡದೆ ಓ ದೇವ! ಕೈಲಾಸಕ್ಕೆ ಹೋಗುವದೊಂದೆಡೆಗಿರಲಿ. ಬಂದು ಬೇಡಿದುದಕ್ಕೆ ಮೊದಲು ಬೋನವ ನುಣ್ಣು. ಭಕ್ತನ ಭಕ್ತಿಯನ್ನು ಕೈಕೊಳ್ಳು. ಬಯಸಿ ಬೇಡಿದುದನ್ನು ಬಿಟ್ಟು ಪೋಗುವದೇ ? ಎಂದು ತನ್ನ ದಾನ ಪ್ರೇಮವನ್ನೇ ಮುಂದೆ ಮಾಡುವನು. ಹಸಿದು ಬಂದು ಆರೋಗಿಸದೆ ಹೊರಳಿ ಹಾಗೆಯೇ ಹೋಗು ವದೇ ? ಎಂದು ಆತ್ಮ ಕಳಕಳಿಯಿಂದ ಹೃದಯ ನಿಷ್ಠೆಯಿಂದ ಬೀಳ್ಕೊಳ್ಳು ವನು. ಇದನ್ನು ಕೇಳಿ ಶಿವನು—

"...ನಸುನಗುತೆ ಭಕ್ತನಿಚ್ಛೆಯಂ ನೆರೆ ಸಲಿಸಿ । ವನಿತೆ ಪಾರ್ವತಿದೇವಿ
ಗಣಸಂಕುಳಂ ವೆರಸಿ ॥

ಆರೈಸಿದಂಕರುಣದಿಂದ ಶಶಿಶೇಖರಂ । ಹಾರೈಸಿ ಮೊಳೆವಿತ್ತ ನೋಗರ
ವನೀಶ್ವರಂ ।

ಆಸಮಯದೊಳ್ ಗಂಡ ಹೆಂಡಿರ್ಗೆ ತನಯಂಗೆ । ಭಾಸುರದ
ಪುಷ್ಪಕಂಗಳು ಬಂದವನುವಿಂಗೆ ॥

ಹೀಗೆ ಶಿವಾ ಶಂಕರರು ಸಹಿತ ಸಕಲಗಣ ಸಂಕುಳವು ಉಣ್ಣುವದನ್ನು ನೋಡಿ ಅವರ ಆನಂದವು ಎಲ್ಲೆ ಮೀರಿದೆ. ಅಲೌಕಿಕ ಜ್ಯೋತಿಯು ನಯನಗಳಲಿ ಮೂಡಿದೆ. ಸತ್ಯ ಸೌಖ್ಯದ ಹಾದಿ ತೋರಿದೆ. ಅಷ್ಟರಲ್ಲಿಯೇ ವಿಮಾನುಗಳು ಬರುವವು. ಅವುಗಳಲ್ಲಿ ಮೂವರನ್ನು ಕುಳ್ಳಿರಿಸಿಗೊಂಡು—

ಹರುಷದಿಂ ದೇವದುಂದುಭಿಗಳಂ ಹೊಯ್ಸುತುಂ । ಕರೆದು ತುಂಬುರ
ನಾರದರನೊಲ್ದು ಪಾಡಿಸುತೆ ॥
ಬರಿಸಿ ವರಚಂಡಕೀರ್ತಿಗಳಿಂದೆ ಪೊಗಳಿಸುತೆ । ಕೈಲಾಸಪುರಕೆ ಕೊಂಡೊ
ಯ್ದನುತ್ಸಾಹದಿಂ॥
ಕೊಂಡೊಯ್ದು ಗಣಪದವಿ ಯೊಳಗವರನೊಲ್ದಿರಿಸಿ । ಖಂಡೇಂದು
ಮೌಳಿ ತನ್ನಯ ಕರುಣದೊಳಿರಿಸಿ ॥
ಸತ್ವಾದಿ ಗುಣಭರಾರ್ಜಿತರೂಪನೊಪ್ಪಿದಂ । ತತ್ವನಿಧಿ ಹಂಪೆಯ
ವಿರೂಪಾಕ್ಷನೊಪ್ಪಿದಂ ॥

ಈ ಸ್ಥಿತಿಯು ಇಂದಿನ ಜನರ ಜೀವನ ಮಾರ್ಗದಲ್ಲಿ ಬಲು ದೂರ ದಲ್ಲಿದೆ. ನಿಲುಕದಷ್ಟು ಅತಿ ಎತ್ತರವಾಗಿದೆ. ಅದನ್ನು ಸಾಧಿಸುವದು ನಮ್ಮ ಆದ್ಯ ಕರ್ತವ್ಯ! ಹಾಗೆ ದಾನವೀರರು ಧರ್ಮಪರರು ಆಗುವದು ನಮ್ಮ ಧ್ಯೇಯ !! ಜನ ಕಾರುಣ್ಯ ತೋರಿ ಜನಾರ್ದನನ ಕೂಡುವದು ನಮಗೊಂದುಪಾಯ !!! ಏಕೆಂದರೆ ದಾನದಿಂದ ನಮಗೆ ಪ್ರಾಣಿಗಳು ವಶವಾಗುತ್ತವೆ. ವೈರಿಗೂ ಸಹ ಸ್ನೇಹಿತರಾಗುವರು. ಸಕಲ ಜನತಾ ಪ್ರೇಮವು ನಮ್ಮ ಮೇಲೆ ಆಗುವದು. ಇದಲ್ಲದೆ ಬಳಸಿದಂತೆ ಭಾವಿಯ ನೀರು, ಹೆರವರಿಗೆ ಹೇಳಿದಂತೆ ವಿದ್ಯೆಯು ಹೆಚ್ಚುವಂತೆ, ದಾನ ಮಾಡಿ ದಂತೆ ಧನವು ಹೆಚ್ಚುತ್ತಿದೆ. ಇಲ್ಲವೆ ಪುಣ್ಯವು ಬಲಿಯುತ್ತದೆ. ಯಾವನು ದಾನಿಯೋ ಆತನಿಗೆ ಇಲ್ಲಿಯೂ ಪರದಲ್ಲಿಯೂ ಯಾವ ಭೀತಿಯಿಲ್ಲ. ಯಾವ ಕೊರತೆಯಿಲ್ಲ. ಆದ್ದರಿಂದ ಧನವಂತರು ಪಾತ್ರವರಿತು ಶಕ್ತಿ ಯರಿತು ದಾನಿಗಳಾಗಬೇಕು. ಧನ್ಯ ಜೀವಿಗಳಾಗಬೇಕು. ಹೀಗೆ ಹೇಳಿ ದಂತೆ ದಾನತತ್ಪರರಾಗುವದು ಎಲ್ಲರಿಗೂ ಸಾಮಾನ್ಯವಲ್ಲ. ಯಾರು ಕೊಡಗೈದೊರೆಗಳೋ ಯಾರು ಉದಾರಾಂತಃಕರಣಿಗಳೋ ಅವರಿಗೆ ಮಾತ್ರ ಸಾಧ್ಯ. ಅದೇ ಅವರಿಗೆ ಪರಮಭಾಗ್ಯ. ಅಂತೆಯೇ ಸರ್ವಜ್ಞನು —" ಗಾನ ವಿದ್ಯೆಯು ಲೇಸು । ಮಾನವತಿ ಸತಿ ಲೇಸು । ಸ್ವಾನುಭವಿಗಳ ಕಳೆ ಲೇಸು

ಎಲ್ಲಕ್ಕೂ ದಾನಿಯೇ ಲೇಸು ಸರ್ವಜ್ಞ ॥ ಎಂದು ಮುಂತಾಗಿ ಸಾರಭೂತವಾಗಿ ಸಾರಿರುವನು. ದಾನಿಗಳೂ ದಯಾಂತಃಕರಣಿಗಳೂ ದೀನರಕ್ಷಕರೂ ಆಗುವ ಸಂಯೋಗವನ್ನು ಧನವಂತರಿಗೆ ಆ ದಾನವೀರ ಇಳೆಯಾಂಡ ಗುಡಿಮಾರನು ದಯೆಯಿಂದ ದಯಪಾಲಿಸಲೆಂದು ಬೇಡುವೆನು. ಉಳಿದವರಿಗೆ ತಮ್ಮ ತನು-ಮನ-ಭಾವಗಳನ್ನಾದರೂ ವಿಷಯಗಳಿಂದ ವಿರತಿಗೊಳಿಸಿ ಸತ್ಕಾರ್ಯಕ್ಕಾಗಿ ಶಿವನಿಗಾಗಿ ಸೂರೆ ಮಾಡುವ ಸೌಭಾಗ್ಯವನ್ನು ಆತನೇ ಕೊಡಲೆಂದು ಪ್ರಾರ್ಥಿಸುವೆನು. ಓ ದಾನವೀರ ಗುಡಿಮಾರ! ಇದೋ ಭಿಕ್ಷಾರ್ಥಿ, ಇದು ಭಿಕ್ಷಾಪಾತ್ರೆ, ಬರಿದಾದ ಪಾತ್ರೆ, ನೀಡು ನಿನ್ನ ಭಾಗ್ಯದೊಳಿನಿತೊಂದು ಭಿಕ್ಷವ! ಸರ್ವಸ್ವವನ್ನೇ ದಾನ ಮಾಡಿದ ನೀನು ಇವನ್ನಾದರೂ ನೀಡದಿರಲಾರೆಯಾ?

# ಶ್ರೀ. ನಿಡುಮಾಮಿಡಿ ಮಠದ ಇತಿಹಾಸ.

ಲೇಖಾಂಕ ೩.

ಲೇಖಕ:— ಎಂ. ಜಿ. ನಂಜುಂಡಾರಾಧ್ಯ "ರಾಷ್ಟ್ರಭಾಷಾ ವಿಶಾರದ"
ಸಿದ್ಧಗಂಗಾ ಗುರುಕುಲ.

ನಮ್ಮ ಹಿಂದಿನ ಲೇಖನದಲ್ಲಿ ಈ ಪೀಠದ ಶಾಖಾ ಮಠವಾದ ರಾಯಚೋಟಿ ಮಠಕ್ಕೆ ಸಂಬಂಧಿಸಿದ ಕೆಲವು ವಿಚಾರಗಳನ್ನು ವಿವೇಚಿಸಿದುದಾಯಿತು. ಪ್ರಕೃತದಲ್ಲಿ ಅದಕ್ಕೆ ಪೋಷಕವಾದ ಒಂದೆರಡು ವಿಷಯಗಳನ್ನು ವಾಚಕರ ಮುಂದಿಡಲು ಪ್ರಯತ್ನಿಸಿದೆ.

ನಮ್ಮ ಮೊದಲನೆಯ ಲೇಖನದಲ್ಲಿ ಶ್ರೀ ನಿಡುಮಾಮಿಡಿ ಮಠದ ಮೂಲ ಪೀಠವು ಶ್ರೀಶೈಲದಲ್ಲಿರುವ ಪಂಚವಣ್ಣಿಗೆಯ ಶ್ರೀ ಗೋಕರ್ಣ ಸಿಂಹಾಸನವೆಂದೂ, ಆ ಮಠದ ಮೇಲ್ವಿಚಾರಣೆಯನ್ನು ಈ ಪೀಠಾಧೀಶ್ವರರಾಗಿದ್ದ ಶ್ರೀಮದ್ ಕರಿಬಸವ ರಾಜೇಂದ್ರ ಸ್ವಾಮಿಗಳವರು ೧೮೫೯ ರಲ್ಲಿ ವೀರಮಾಹೇಶ್ವರರಾದ ಮಾದುಲ ವೀರಯ್ಯನವರಿಗೆ ವಹಿಸಿದಂತೆಯೂ, ಅದಕ್ಕಾಗಿ ಅವರಿಗೆ ಅಲ್ಲಿ ಶ್ರೀ ಗೋಕರ್ಣ ಸ್ವಾಮಿಗಳಿಗಿರುವ ಇನಾಂ ಜಮೀನುಗಳಲ್ಲೊಂದನ್ನು ಧಾರಾಕೃತವಾಗಿ ದಾನಮಾಡಿದಂತೆ ನಮೂದಿರುವ ತಾಮ್ರ ಶಾಸನವು ಈ ಮಠದಲ್ಲಿ ಉಪಲಬ್ಧವಾಗಿದೆಯೆಂದೂ ಉಲ್ಲೇಖ ಮಾಡಿದೆಯಷ್ಟೇ! ಈ ಶಾಸನದಲ್ಲಿರುವ "ಪಂಚವಣ್ಣಿಗೆ" ಎಂಬ ವಿಶೇಷಣವು ಬಹಳ ಮಹತ್ವದ್ದಾಗಿರುತ್ತದೆ. ಇದು ಆ ಸ್ಥಳದ ಅಥವಾ ಈ ಪೀಠದವರಿಗಿದ್ದ ಒಂದು ಅಂಕಿತವಾಗಿರಬಹುದೆಂದು ಊಹಿಸಬಹುದಾಗಿದೆ. ಆದರೆ ಈ ಉಪನಾಮವು ಬರಲು ನಿಮಿತ್ತವೇನೆಂಬುದಿನ್ನೂ ಸರಿಯಾಗಿ ತಿಳಿದು ಬಂದಿಲ್ಲ. ಆದಾಗ್ಯೂ 'ಪಂಚವಣ್ಣಿಗೆ' ಎಂಬ ಉಪಾಧಿಯುಳ್ಳ ಅನೇಕ ಕವಿಗಳೂ ಮಠಾಧೀಶ್ವರರೂ ಈ ಪೀಠದ ಶಾಖಾ ಮಠಗಳಲ್ಲಿದ್ದಂತೆ ಅನೇಕ ಉಲ್ಲೇಖಗಳು ಇತಿಹಾಸದಲ್ಲಿ ನಮಗೆ ಉಪಲಬ್ಧವಾಗುತ್ತಿವೆ.

ಕ್ರಿ. ಶ. ಸು. ೧೬೫೦ ರಲ್ಲಿದ್ದ "ಸಿದ್ಧನಂಜೇಶ §" ನೆಂಬ ಕವಿವರ್ಯ ಮತ್ತು ಈತನ ಗುರು ಪರಂಪರೆಗೆ ಸೇರಿದ ನೀಲಗುಂದದ ಸಿಂಹಾಸ

§ ಕವಿಚರಿತೆ ಭಾ. ೨ ಪು ೩೮೦

ನಾಧೀಶ ಪಂಚವಣ್ಣಿಗೆಯ ಅನ್ನದಾನೇಶ್ವರ, ಅವರ ಶಿಷ್ಯ ಕುರುವೆತ್ತಿ ಪುರದ ಸಿಂಹಾಸನಾಧೀಶ ಸಿದ್ಧನಂಜೇಶ್ವರ ಇವರೆಲ್ಲರೂ ಈ ಪಂಚ ವಣ್ಣಿಗೆಯ ಗೋಕರ್ಣ ಸಿಂಹಾಸನದ ಶಾಖಾಕ್ಕೆ ಸೇರಿದವರೆಂದು ಸಿದ್ಧ ವಾಗುತ್ತದೆ. ಈ ಸಿದ್ಧನಂಜೇಶನ ಗುರುರಾಜಚರಿತ್ರೆಯ ಪ್ರತಿ ಸಂ ಧಿಯ ಅಂತ್ಯದಲ್ಲಿಯೂ:—

''ಧಾತ್ರಿಗುತ್ತಮವೆನಿಪ ಪೂವಲ್ಲಿ ಪುರಕಧಿಪ।
ಚಿತ್ರ ಗುರು ಪಂಚವಣ್ಣಿಗೆ ಸಿದ್ಧನಂಜೇಶ॥
ಪುತ್ರಸತ್ಕವಿ ಕುಲ ಸ್ತೋತ್ರ ಶ್ರೀಶೈಲ ನೈರುತ್ಯ ಭಾಗದೊಳೊಪ್ಪುವ॥
ಕ್ಷೇತ್ರ ನವನಂದಿ ಮಂಡಲದ ಸಿಂಹಾಸನಕೆ।
ಛತ್ರ ಶಿವ ಕವಿ ಸಿದ್ಧನಂಜೇಶ ಕೃತ ದಿವ್ಯ।
ಸ್ತೋತ್ರ ಗುರು ರಾಜ ಚಾರಿತ್ರದೊಳು ......... ''

ಎಂಬ ಪದ್ಯವಿದೆ. ಈತನ ಗುರುವಾದ ಪಂಚವಣ್ಣಿಗೆಯ ಸಿದ್ಧನಂಜೇ ಶನು ತನ್ನ ಪತ್ನಿಯಾದ ಚನ್ನವೀರಾಂಬೆಗೆ ಹೇಳಿದ ವಿಷಯಗಳನ್ನೇ ಅವನ ಆಜ್ಞಾನುಸಾರವಾಗಿ ತಾನು ಈ ಗ್ರಂಥದಲ್ಲಿ ವಿವರಿಸಿದಂತೆ ಹೇಳು ತ್ತಾನೆ. ಈತನು ತನ್ನ ಗುರುವಾದ ಸಿದ್ಧನಂಜೇಶ್ವರನನ್ನು ಚತುರಾ ಚಾರ್ಯರಿಗೆ ಸಮಾನನೆಂದು ಸ್ತುತಿಸಿದ್ದಾನೆ. ಈತನ ರಾಘವಾಂಕ ಚಾರಿತ್ರವು ''ಕರ್ಣಾಟಕ ಕವಿತ್ವಕೋವಿದ ಪಂಚವಣ್ಣಿಗೆಯ ಸಿದ್ಧನಂ ಜೇಶಾಂಘ್ರಿ ಕಮಲ ಮಧುಪ ರಾಚವಟ್ಟಿಯಾರಾಧ್ಯನ" ಕೃಪೆಯಿಂದ ಪೂರ್ಣವಾದಂತೆ ಈ ಕವಿಯು ಹೇಳುತ್ತಾನೆ. ಇದರಿಂದ ರಾಚವಟ್ಟಿ ಯಾರಾಧ್ಯನೂ ಪಂಚವಣ್ಣಿಗೆಯ ಸಿದ್ಧನಂಜೇಶನ ಶಿಷ್ಯನಾಗಿದ್ದನೆಂದು ತಿಳಿಯ ಬರುತ್ತದೆ. ರಾಚವಟ್ಟಿಯ ಮಠದ ಅನೇಕ ಮಹಾಧೀಶರನ್ನು ಈ ಕವಿಯು ಸೂಚಿಸಿದ್ದಾನೆ. ಗಡ್ಡದ ರಾಚವಟ್ಟಿಯಯ್ಯಾ, ಪಂಚವ ಣ್ಣಿಗೆಯ ವಿರೂಪಾಕ್ಷಯ್ಯ, ಚರಚಕ್ರವರ್ತಿ ಜಡೆಯ ಶಿವಲಿಂಗಾರ್ಯ, ಲೇಖ್ಯದ ಕವಿಯ ಸಿದ್ಧಬಸವೇಶ, ಸಪ್ಪೆಯರಾಯಯತಿ, ರಾಚವಟ್ಟಿ ಯಾರಾಧ್ಯ ಮುಂತಾದ ಈ ಪೀಠದ ಶಾಖಾ ಮಠಾಧೀಶರ ಉಲ್ಲೇಖ ವನ್ನು ಮಾಡಿದ್ದಾನೆ. ಇದಲ್ಲದೆ ತನ್ನ ಗುರುರಾಜ ಚರಿತ್ರದಲ್ಲಿ ಅನೇಕ ಪುರಾತನರ ಹಾಗೂ ನೂತನರ ಹೆಸರುಗಳು ಉಕ್ತವಾಗಿರುವುದರಿಂದ ಅನೇಕ ಕವಿಗಳ ಶೋಧನೆಗಳಿಗೆ ಬಹಳ ಅನುಕೂಲವಾಯಿತೆಂದು ಕವಿ ಚರಿತೆಕಾರರು ಅಭಿಪ್ರಾಯಪಟ್ಟಿರುತ್ತಾರೆ. ಇವರಲ್ಲಿ ಮುಖ್ಯವಾಗಿ ವೀರ

ಶೈವ ಪಂಚಾಚಾರ್ಯರಲ್ಲೊಬ್ಬನಾದ ವಿಶ್ವೇಶ್ವರಾಚಾರ್ಯನೂ ಅವನ ಶಿಷ್ಯ ಪಂಚವಣ್ಣಿಗೆಯ ಸ್ವಾಮಿ ಇವನ ಶಿಷ್ಯ ಬಯಲ ಪಂಚವಣ್ಣಿಗೆಯಾರ್ಯ,......... ಇತ್ಯಾದಿ ಇವರೆಲ್ಲ ಪ್ರಸಿದ್ಧವಾದ 'ಪಂಚವಣ್ಣಿಗೆ ಗೋಕರ್ಣ ಸೂರ್ಯ' ಸಿಂಹಾಸನದ ಶಾಖೆಯವರೆಂದು ಹೇಳಬಹುದಾಗಿದೆ. ಪಂಚವಣ್ಣಿಗೆಯ ಸ್ವಾಮಿಯು ವಿಶ್ವೇಶ್ವರಾಚಾರ್ಯನ ಸೇವೆಯಿಂದ ಅವರ ಅನುಗ್ರಹವನ್ನು ಪಡೆದುದೇನೂ ವಿಶೇಷ ಸಂಗತಿಯಾಗಿ ಕಾಣುವುದಿಲ್ಲ.

ಸಿದ್ಧನಂಜೇಶನು ಶ್ರೀಶೈಲ ನೈರುತ್ಯ ಭಾಗದೊಳೊಪ್ಪುವ ಶ್ರೀ ನಂದಿ ಮಂಡಲದ ಸಿಂಹಾಸನದ ಮಠಕ್ಕೆ ಅಧಿಪತಿಯಾಗಿದ್ದನೆಂದು ಹೇಳಿಕೊಂಡಿರುವುದರಿಂದಲೂ, ಈ ಗೋಕರ್ಣ ಪೀಠವು ಶ್ರೀಶೈಲದ ಪೂರ್ವ ಭಾಗದಲ್ಲಿದೆಯೆಂದು ತಾಮ್ರ ಶಾಸನದಿಂದ ವ್ಯಕ್ತವಾಗುವುದರಿಂದಲೂ ಈ ಪೀಠದ ಶಾಖೆಯವರೇ ಶ್ರೀ ನಂದಿ ಮಂಡಲದ ಮಠದಲ್ಲಿ ಅಧಿಪತಿಗಳಾಗಿರಬಹುದೆಂದು ಸ್ಪಷ್ಟವಾಗುತ್ತದೆ. ಮತ್ತು ಈತನ ಗುರುರಾಜ ಚರಿತ್ರದಲ್ಲಿ ಉಕ್ತವಾಗಿರುವ 'ಚಂದ್ರಗುಂಡ, ವಿರೂಪಾಕ್ಷದೇವ' ಇವರು ಈ ಪೀಠದ ಅಧಿಕಾರಿಗಳಾಗಿದ್ದು ಹಿಂದಿನ ಗುರುವರ್ಯರು ಅಥವಾ ಅವರ ನಾಮಾಂಕಿತರಾದ ಈ ಪೀಠಾಧೀಶರಾಗಿದ್ದರೆಂಬ ವಿಷಯದಲ್ಲಿ ಸಂದೇಹವಿರುವುದಿಲ್ಲ. ಇನ್ನು ಮಾಗಡಿಯ ಕವಿಯ ಬಸವೇಶ್ವರ, ಸಪ್ಪೆಯಾರ್ಯ ಮುಂತಾದವರು ಇದರ ಶಾಖಾ ಪರಂಪರೆಯವರೆಂದೇ ಸಿದ್ಧವಾಗುತ್ತದೆ.

ಶಿವಲಿಂಗ ಚಾರಿತ್ರ, ಶಿವಗಣ ಚಾರಿತ್ರ ಮುಂತಾದ ಗ್ರಂಥಕರ್ತರಾದ ಶ್ರೀ ಶಾಂತವೀರ ದೇಶಿಕೇಂದ್ರರು † ಈ ಪೀಠದಲ್ಲಿ ಸುಮಾರು ಹದಿನಾರನೆಯ ಶತಮಾನದಲ್ಲಿ ಸಿಂಹಾಸನಾಸೀನರಾಗಿದ್ದಂತೆ ತಿಳಿದುಬರುತ್ತದೆ. ಇವರು ಆಶ್ರಮ ಸ್ವೀಕಾರಕ್ಕೆ ಪೂರ್ವದಲ್ಲಿಯೇ ತಮ್ಮ ಪ್ರಪಿತಾಮಹರಾಗಿಯೂ ಶ್ರೀ ಪಂಡಿತಾರಾಧ್ಯ ವಂಶೀಯರಾಗಿಯೂ ಇದ್ದ ಶ್ರೀ ಶಿವಲಿಂಗಾರ್ಯರ ಚರಿತ್ರೆಯನ್ನು ಬರೆದಿರುತ್ತಾರೆ. ಇವರ ಜನ್ಮಸ್ಥಾನವು ಪೆನುಗೊಂಡೆಯ ದೇಶದ ಅಪ್ಪೆಯ ಕೆರೆ ಎಂದು ಹೇಳಿರುತ್ತಾರೆ. ಪೆನುಗೊಂಡೆಯ ಸುತ್ತುಮುತ್ತಲೂ ಮೇಲೆ ಹೇಳಿದ ಶಿವಲಿಂಗಾರ್ಯರ

† ಕನ್ನಡ ಕವಿಚರಿತೆ ಭಾ. ೨ ಪು. ೩೭೭

ವಂಶೀಯರಾದ ಶ್ರೀ ಪಂಡಿತಾರಾಧ್ಯ † ಮಂಡಳಿಯವರೆಂದು ಕರೆಯಲ್ಪಡುವ ಒಂದು ಪಂಗಡದವರು ಇಂದಿಗೂ ವಾಸವಾಗಿರುತ್ತಾರೆ. ಅಲ್ಲದೆ ಹೊಸ ಕೆರೆ (ಅಪ್ಪೆಕೆರೆ) ಬುಕ್ಕ ಪಟ್ಟಣ, ಕನಮುಕ್ಕಲು. ಧರ್ಮಾವರಂ, ಕಪ್ಪಲಬಂಡ, ತಲಮರಲ, ಪಾಮುದುರ್ತಿ, ಪುಲಿಪಿಂದಲ, ನಾಗಲೂಟಿ, ಕಲ್ಯಾಣದುರ್ಗಂ, ರಾಯದುರ್ಗಂ ಮುಂತಾದ ಅನೇಕ ಸ್ಥಳಗಳಲ್ಲಿನ ಈ ಪೀಠದ ಶಾಖಾ ಮಠಗಳು ಇಂದಿನ ವರೆಗೂ ಈ ಪೀಠದವರ ಅಧಿಕಾರಕ್ಕೆ ಒಳಪಟ್ಟಿರುತ್ತವೆ.

ಶ್ರೀ ಶಾಂತವೀರ ದೇಶಿಕೇಂದ್ರರು ಸಿಂಹಾಸನಾರೂಢರಾದ ನಂತರ ನಡೆಯಿಸಿದ ಮಹತ್ವಗಳನ್ನು ಶ್ರೀ ಪುಲ್ಲಕವಿ ಮುಂತಾದವರು ವರ್ಣಿಸಿರುತ್ತಾರೆ. ಇವರು ಹೊಸ ಕೆರೆಗೆ ಸಮೀಪದಲ್ಲಿರುವ ಬುಕ್ಕರಾಯ ಸಮುದ್ರಮು ಪ್ರಾಂತ್ಯದ ಅಧಿಪತಿಗಳಾಗಿದ್ದ 'ಮಹರೆಡ್ಡಿ' ಗಳೆಂಬ ಜನಾಂಗದವರಿಗೆ ಲಿಂಗಧಾರಣೆಯನ್ನು ಮಾಡಿದರು. ಅದೇ ಹೊಸಕೆರೆ (ಅಪ್ಪೆಯ ಕೆರೆ) ಯಲ್ಲಿ ಮಹರೆಡ್ಡಿಗಳು ಒಂದು ಮಠವನ್ನು ಕಟ್ಟಿಸಿಕೊಟ್ಟು ಅಮೂಲ್ಯವಾದ ರತ್ನಾಭರಣಗಳನ್ನೂ ಅಪಾರವಾದ ಭೂ ಆಸ್ತಿಯನ್ನೂ ಗುರುಗಳಿಗೆ ಅರ್ಪಿಸಿದ್ದಾರೆ. ಈ ಮಠಾಧೀಶರು ಅದನ್ನಿಂದಿಗೂ ತಮ್ಮ ಅಧೀನದಲ್ಲಿಟ್ಟುಕೊಂಡಿರುತ್ತಾರೆ. ಅನಂತರ ಪೆನುಗೊಂಡೆಗೆ ದಯಮಾಡಿಸಿ ಅನೇಕ ಪವಾಡಗಳನ್ನು ನಡೆಯಿಸಿ ಮೂಕನಾಗಿದ್ದ ಒಬ್ಬ ಬ್ರಾಹ್ಮಣನಿಗೆ ವಾಕ್ ಶಕ್ತಿಯನ್ನನುಗ್ರಹಿಸಿದರಂತೆ. ಅನಂತರ ವಿಜಾಪುರಕ್ಕೆ ದಯಮಾಡಿಸಿ ಅಲ್ಲಿನ ನವಾಬರ ಸಮ್ಮುಖದಲ್ಲಿ ಅಗ್ನಿ ಕುಂಡಲದಲ್ಲಿ ಕೆಂಡದಂತೆ ಹಾಯಿಸಿದ ಕಬ್ಬಿಣದ ಸರಪಣಿಯನ್ನು ಶ್ರೀಯರ ಅಭಯವನ್ನು ಪಡೆದ ವಟುವೊಬ್ಬನು ಲೀಲೆಯಿಂದ ಈಚೆಗೆ ತೆಗೆದುಕೊಂಡು ಬಂದನೆಂದೂ ಇದನ್ನು ನೋಡಿ ಆಶ್ಚರ್ಯಚಕಿತನಾದ ನವಾಬನು ಇವರಿಗೆ ಅನೇಕ ಖಿಲ್ಲತ್ತುಗಳನ್ನೂ ಒಂಟೆ, ಕಾಟೇಪಾಗು, ಹಸರು ಬಾವುಟ ಮುಂತಾದ ಬಿರುದಾವಳಿಗಳನ್ನರ್ಪಿಸಿದನೆಂದೂ ಪುಲ್ಲಕವಿಯು ಮನೋಹರವಾಗಿ ವರ್ಣಿಸಿರುತ್ತಾನೆ.

---

† ಈ ಪಂಗಡದವರೇ ಈ ಪೀಠಕ್ಕೆ ಅಧೀಶರಾಗುತ್ತಿದ್ದುದು ಇಂದಿನ ವರೆಗೂ ನಡೆದು ಬಂದಂತೆ ಐತಿಹಾಸಿಕ ಹಾಗೂ ಪೌರಾಣಿಕ ಉಲ್ಲೇಖಗಳು ಉಪಲಬ್ಧವಾಗಿರುತ್ತವೆ. (ಈ ಬಗೆಯ ಕೆಲವು ಖರಾರು ಕಾಪಿಗಳೂ ದೊರೆಯುತ್ತವೆ.)

ಶಿವಯೋಗಾಂಗ ಭೂಷಣ, ಸದ್ಗುರು ರಹಸ್ಯ, ಕಲ್ಯಾಣೇಶ್ವರ, ಸ್ವರೂಪಾಮೃತ, ವೃಷಭಗೀತೆ, ಅವಧೂತಗೀತೆ ಮತ್ತು ಮನೋ ವಿಜಯವೆಂಬ ಸಪ್ತ ಕಾವ್ಯಗಳನ್ನು ಬರೆದ 'ಶ್ರೀಗುರು ಬಸವೇಶ' + ನೆಂಬ ಕವೀಂದ್ರನು ಈ ಪೀಠದ ಪರಂಪರೆಗೆ ಸೇರಿದವನೆಂದು ಕೆಲ ವರು ಅಭಿಪ್ರಾಯಪಡುತ್ತಾರೆ. ಇದನ್ನು ಸಮರ್ಥಿಸಲು ಮನೋವಿಜಯ ಅವಧೂತ ಗೀತೆ ಮುಂತಾದ ಕೆಲವು ಕಾವ್ಯಗಳ ಜೀರ್ಣವಾದ ಓಲೆಯ ಪ್ರತಿಗಳು ಈ ಮಠದಲ್ಲಿ ಉಪಲಬ್ಧವಾಗುತ್ತಿವೆ. ಅವುಗಳಲ್ಲಿ ಪ್ರತಿ ಸಂಧಿಯ ಆದ್ಯಂತಗಳಲ್ಲಿ 'ಶ್ರೀ ಚಂದ್ರಗುಂಡ ಸ್ವಾಮಿನೇನಮಃ, ಶ್ರೀ ವಿರುಪಾಕ್ಷಾಯನಮಃ' ಎಂಬ ಅಂಕಿತಗಳು ಉಲ್ಲೇಖಿಸಲ್ಪಟ್ಟಿವೆ. ಕವಿ ಚರಿತೆಯನ್ನು ಸಂಗ್ರಹಿಸಿದ ಶ್ರೀ ರಾ|| ಬ|| ಆರ್. ನರಸಿಂಹಾಚಾರ್ಯರೂ ಸಹ ಮನೋವಿಜಯದ ಕಡೆಯಲ್ಲಿ "ಶ್ರೀಮತ್ಪರಮಾನಂದ......... ಯೋಗಿಜನ ಸೇವಿತ ಚರಣಾರವಿಂದ ಷಟ್‌ಸ್ಥಲ ಜ್ಞಾನ ಪ್ರಭಾಪುಂಜಿ ತಾಂತರಂಗ ವೀರಶೈವ ಮತಸ್ಥಾಪನಾಚಾರ್ಯನಪ್ಪ ಶ್ರೀಮದ್ಗುರು ಬಸ ವೇಶ್ವರಂ..." ಎಂದು ಹೇಳಿರುವುದರಿಂದಲೂ, ಚನ್ನಬಸವ ಪುರಾಣದ ೬೩ನೆಯ ಸಂಧಿ ೧೫, ೧೬, ೩೫ನೆಯ ಪದ್ಯಗಳಲ್ಲಿ ಈತನು ವಿಜಯನ ರದ ೨ನೆಯ ಪ್ರೌಢ ದೇವರಾಯನ (೧೪೧೯--೧೪೪೬) ಆಸ್ಥಾನದಲ್ಲಿ ದ್ದಂತೆ ಕಂಡುಬರುವುದರಿಂದಲೂ ಈತನು ವೀರಶೈವರಲ್ಲಿ ಬಹಳ ಪ್ರಸಿ ದ್ಧನಾದ ಗುರುವಾಗಿದ್ದಂತೆ ತೋರುತ್ತದೆ ಎಂದು ಅಭಿಪ್ರಾಯಪಟ್ಟಿರು ತ್ತಾರೆ. ಮತ್ತು ಗುರುಸಿದ್ಧ ಬಸವರಾಜೇಂದ್ರ ದೇಶಿಕೇಂದ್ರರೆಂಬಭಿಧಾ ನದ ಓರ್ವ ಮೂರ್ತಿಗಳು ಈ ಪೀಠದ ಪಟ್ಟವಲ್ಲರಿಯಲ್ಲಿ ಸೇರಿದ್ದರೂ ಕಾಲ ಮುಂತಾದವುಗಳಲ್ಲಿ ಸರಿಯಾದ ಆಧಾರಗಳು ನಮಗೆ ದೊರೆ ತಿಲ್ಲ. ಮನೋವಿಜಯದ ಕಾವ್ಯ ಭಾಗದಲ್ಲೆಲ್ಲಿಯೂ 'ಚಂದ್ರಗುಂಡ ದೇಶಿಕ' ಮುಂತಾದ ಉಲ್ಲೇಖಗಳು ದೊರೆಯದಿರುವುದರಿಂದಲೂ ಪುಲ್ಲ ಕವಿಯೂ ಈ ಪ್ರಸ್ತಾಪವನ್ನು ಮಾಡದಿರುವುದರಿಂದಲೂ ನಾವು ಈ ವಿಷಯವನ್ನು ಸದ್ಯಕ್ಕೆ ಸಂಶಯ ಕೋಟಿಯಲ್ಲಿ ಸೇರಿಸಬೇಕಾಗಿದೆ.

---

+ ಕ. ಚ. ಭಾ ೨ ಪು. ೭೪

ಇನ್ನು ಸಿದ್ಧೇಶ್ವರ ಪುರಾಣದಲ್ಲಿಯೂ ಚನ್ನಬಸವೇಶ್ವರ ಪುರಾಣದಲ್ಲಿಯೂ ಉಕ್ತವಾಗಿರುವ ಕಂಬಳಿಯದೇವ, § ಸಂಪಗೆಯ ರಾಚವಟ್ಟೆಯದೇವ, ಸಪ್ಪೆಯಾರ್ಯ, ರಾಚವಟ್ಟೆದೇವ ಮುಂತಾದವರು ಶ್ರೀ ತೋಂಟದ ಸಿದ್ಧಲಿಂಗೇಶ್ವರ ಸ್ವಾಮಿಗಳಿಗೂ ಶಿಷ್ಯರಾಗಿದ್ದಂತೆ ಉಲ್ಲೇಖಗಳಿದ್ದರೂ ಸಹ ಅವರೆಲ್ಲರೂ ಈ ಪೀಠದ ಶಾಖಾ ಮಠಗಳ ಮೂರ್ತಿಗಳೇ ಆಗಿದ್ದಾರೆಂಬುದರಲ್ಲಿ ಸಂದೇಹವಿಲ್ಲ.

ಸಾಕ್ಷಾತ್ ಶ್ರೀ ನಿಡುಮಾಮಿಡಿಯ ಮಠಾಧೀಶರೇ ಚಂದ್ರಗುಂಡ ದೇಶಿಕೇಂದ್ರ ಶಿವಾಚಾರ್ಯರಿಂದ ಈಚೆಗೆ ಇತಿಹಾಸದಲ್ಲಿ ಪ್ರಸಿದ್ಧನೂ, ಸಾಕ್ಷಾತ್ ನಂದಿಯ ಅಪರಾವತಾರಿಯೂ ಮಹಾಪುರುಷನೂ ಆಗಿದ್ದ ಶ್ರೀಮದ್ಬಸವೇಶ್ವರನ ಅಂಕಿತವನ್ನು (ಕರಿಬಸವ, ಮರಿ ಕರಿಬಸವ ಇತ್ಯಾದಿ) ತಮ್ಮ ಕರಕಂಜಾತರಿಗೆ ಇಟ್ಟಿರುವುದನ್ನು ನೋಡಿದರೆ ಪ್ರಾಚೀನ ವೀರಶೈವ ಗುರು-ವಿರಕ್ತ ವರ್ಗದಲ್ಲಿ ಎಷ್ಟರಮಟ್ಟಿಗೆ ಮೇಳನವಿದ್ದಿತೆಂದು ತಿಳಿದು ಪ್ರತಿಯೊಬ್ಬ ಸಮಾಜಾಭಿಮಾನಿಗೂ ಅತ್ಯಾನಂದವುಂಟಾಗುತ್ತದೆ. ಇದಕ್ಕೆ ಸಾವಿರಾರು ನಿದರ್ಶನಗಳು ವೀರಶೈವ ಇತಿಹಾಸದಲ್ಲಿ ರಾರಾಜಿಸುತ್ತವೆ. ಎಲ್ಲ ಮಹಾಪುರುಷರ 'ವಿಶ್ವಪ್ರೇಮದ' ಆದರ್ಶವು ವೀರಶೈವ ವರ್ಗದಲ್ಲಿದ್ದುದರಿಂದಲ್ಲವೇ ಈ ಮಠದಲ್ಲಿ ಅನೇಕಾನೇಕ ಪವಾಡ ಪುರುಷರೂ, ಶಾಸ್ತ್ರಕಾರರೂ, ಕವಿಗಳೂ, ಕವಯಿತ್ರಿಯರೂ, ಆಗಿ ಇಡೀ ವಿಶ್ವಕ್ಕೆ ಒಂದು ಉಚ್ಚವಾದ ಆದರ್ಶವನ್ನು ತೋರಿ ಅಮರರಾದರು. ಅಂತಹುದೊಂದು ಅಮೃತ ಯುಗವನ್ನು ಇಂದು ವೀರಶೈವವು ನಿರೀಕ್ಷಿಸುತ್ತಿದೆಯೆಂದು ಸಮಾಜಾಭಿಮಾನಿಗಳು ಹೇಳುತ್ತಿರುವುದು ಸಹಜವೇ ಆಗಿದೆ. ಜಗದೀಶನು ಅದನ್ನು ಶೀಘ್ರದಲ್ಲಿಯೇ ಕರುಣಿಸಿ ಈ ದಾವಾಗ್ನಿಯಿಂದ ಪಾರುಮಾಡಲೆಂದೇ ನಮ್ಮ ಬೇಡಿಕೆಯು. ಅಸ್ತು. ಮುಂದೆ ಇದಕ್ಕೆ ಸಂಬಂಧಿಸಿದ ಇನ್ನುಳಿದ ವಿಚಾರಗಳನ್ನು ವಿವರಿಸುವೆವು.

(ಸಶೇಷ.)

---

§ ಕಂಬಳಿ ದೇಶಿಕೇಂದ್ರರು ಶ್ರೀ ನಿಡುಮಾಮಿಡಿ ಸ್ವಾಮಿಗಳ ಕರಕಂಜಾತರೆಂಬುದನ್ನು ಪ್ರತಿಪಾದಿಸುವ ಒಂದು ಪ್ರಾಚೀನ ಪತ್ರವು ಕೋಲಾರದಲ್ಲಿರುವ ಕಂಬಳಿ ಮಠದಲ್ಲಿದು ೧೯೨೮ರಲ್ಲಿ ಶ್ರೀ ನಿಡುಮಾಮಿಡಿ ಸ್ವಾಮಿಗಳು ಶಿಷ್ಯ ಸಂಚಾರಕ್ಕೆ ದಯಮಾಡಿಸಿದಾಗ್ಗೆ ಉಪಲಬ್ಧವಾಗಿತ್ತೆಂಬುದು ಲೇಖಕನ ಸ್ವಂತ ಅನುಭವದ ವಿಷಯವಾಗಿದೆ.

# ಶ್ರೀಕರಭಾಷ್ಯ ವಿಮರ್ಶವು.

(ಶ್ರೀ. ಸಿದ್ಧರಾಮಪ್ಪ ದುಂಡಪ್ಪ ಪಾವಟೆ ಬಿ. ಏ. ಎಲ್. ಎಲ್. ಬಿ ಹುಬ್ಬಳ್ಳಿ.)

ಹಿಂದಿನಿಂದ ಮುಂದೆ ಸಾಗಿದ್ದು.

## ಹಾಗಾದರೆ ಈ ಪದಸಮೂಹದ ಅರ್ಥವೇನು?

ಎಲ್ಲ ಬಗೆಯಿಂದಲೂ ವಿಮರ್ಶವು ಮುಗಿದ ಬಳಿಕ ಇಡಿಯದಾದ ಯಜುಸ್ಸಿನ ಅರ್ಥವನ್ನು ಒಮ್ಮೆ ಹೇಳುವುದು ಚೆಂದವು. ಆದರೆ ಓದುಗರಿಗೆ ಈ ಸ್ವರ ವಿಚಾರದ ಫಲವೇನು? ಎಂದು ಅನ್ನಿಸಬಹುದು. ಪದವು ಆಮಂತ್ರಿತವೆಂದರೇನು? ಬಹುವ್ರೀಹಿಯು ಅಲ್ಲವೆಂದರೇನು? ಭಾಷ್ಯಕಾರರ ಮತದಿಂದ ಬಹುವ್ರೀಹಿಯಾಗದಿದ್ದರೆ ಲಿಂಗಧಾರಣವು ಈ ಮಂತ್ರದಿಂದ ಸಿದ್ಧಿಸದೆಂತು? ಎಂಬ ಪ್ರಶ್ನೆಗಳು ಅವರ ಮನದ ಮುಂಬರಿಯಬಹುದು. ಆದುದರಿಂದ ಇಲ್ಲಿ ಅನಿತಕ್ಕೆ ಅಮೃತಸ್ಯ ದೇವ ಧಾರಣವೋ ಭೂಯಾಸಮ್" ದ ಅರ್ಥವನ್ನು ವಿವರಿಸುವಣ.

"ಸಾಮಂತ್ರಿತಮ್" ೨-೩-೪೮. ಸಂಬೋಧನದಲ್ಲಿ ಬಂದ ಪ್ರಥಮೆಗೆ ಆಮಂತ್ರಿತವೆಂಬರು. ಆದುದರಿಂದ ದೇವ ಎಲೈ ಪ್ರಕಾಶಮಾನವಾದ ಪ್ರಣವವೆ (ನಾನು) ಅಮೃತಸ್ಯ ಮೋಕ್ಷಸಾಧನವಾದ ವಿದ್ಯೆಯನ್ನು (ಕರ್ತೃಕರ್ಮಣೋಃ ಕೃತಿ ೨-೩-೬೫ ಎಂದು ಕರ್ಮಣಿ ಷಷ್ಠೀ) ಧಾರಣಃ ಧರಿಯಿಸುವವನು. ಭೂಯಾಸಂ ಆಗಲಿ.

ಪದವು ಸಂಬೋಧನಾಂತವಾದುದರಿಂದ ಧಾರಣ ಪದದೊಡನೆ ಸಮಾಸವಾಗದು. ಧಾರಣ ಪದವು ಕರ್ತರಿ ಲ್ಯುಡಂತ ಪ್ರಾತಿಪದಿಕಕ್ಕೆ ಪ್ರಥಮಾ ವಿಭಕ್ತಿಪರವಾಗಿದೆ. ಈ ಕರ್ತೃವಿಗೆ ಅಮೃತಸ್ಯ ಎಂಬುದು ಕರ್ಮವಾಗಿದೆ. ಇರಲಿ. ಇನ್ನು ವಿಭಕ್ತಿ ವಿಚಾರದತ್ತ ಹೊರಳುವಣ.

## ಪ್ರಾತಿಪದಿಕ ವಿಭಕ್ತಿ ವಿಚಾರವು.

ಶಿಕ್ಷಾಶಾಸ್ತ್ರನಿಯಮಗಳಿಂದ ಅಮೃತಸ್ಯ ದೇವ ಧಾರಣವೋ ಭೂಯಾಸಂ ಎಂಬಲ್ಲಿ ಬಹುವ್ರೀಹಿ ಸಮಾಸವಿಲ್ಲ. ದೇವ ಎಂದು ಸಂಬೋಧನ ವಿಭಕ್ತಿಪದವು ಎಂಬುದನ್ನು ತೋರಿಸಿದೆವು. ಈಗ 'ಅಮೃತಸ್ಯ' ಪದದ ವಿಭಕ್ತಿ ವಿಚಾರದಿಂದ ಶ್ರೀ ಪಂಡಿತಾಚಾರ್ಯನ ಲಿಂಗಧಾರಣ ರಾದ್ಧಾಂತವನ್ನು ನೋಡುವೆವು.

ಆಚಾರ್ಯನು ಅಮೃತಸ್ಯ ಎಂದುದಕ್ಕೆ ಮೋಕ್ಷಾಯ ಎಂದು ಚತುರ್ಥೀ ವಿಭಕ್ತಿಯನ್ನಿಟ್ಟು ವಾಕ್ಯಾರ್ಥವನ್ನು ಮೋಕ್ಷಕ್ಕಾಗಿ ಶಿವಲಿಂಗ ಧಾರಣವನುಳ್ಳಾತನಾಗಲಿ ನಾನು ಎಂಬುದಾಗಿ ಹೇಳ್ವನು. ಇದು ಆಹುದೊ ಆಗದೊ ಎಂದು ಪರೀಕ್ಷಿಸಬೇಕಾಗಿದೆ.

## ಚತುರ್ಥ್ಯರ್ಥೇ ಬಹುಲಂ ಛಂದಸ್ಸಿ.

ಆಚಾರ್ಯನು ಆವ ವ್ಯಾಕರಣ ಸೂತ್ರದಿಂದ ಷಷ್ಠೀವಿಭಕ್ತಿಯನ್ನು ಚತುರ್ಥಿಗೊಯ್ದನೆಂದು ಹೇಳಿಲ್ಲ. ವಿಭಕ್ತಿಸೂತ್ರಗಳನ್ನು ನೋಡಿ ಶಕ್ಯವಾದ ಸೂತ್ರಗಳನ್ನು ಪರಾಮರ್ಶಿಪುದು ನಮ್ಮ ಕೆಲಸವೀಗಾಗಿದೆ. ಷಷ್ಠಿಯನ್ನು ಚತುರ್ಥಿಗೆ ತಿರುವಲು ಈ ೨-೩-೬೨ ಸೂತ್ರವು ಬಹಳ ಹವಣಾಗಿದೆ. ನಾವದನ್ನು ಪರಿಶೀಲಿಸುವ. "ವೇದದಲ್ಲಿ ಚತುರ್ಥಿಯ ಅರ್ಥದಲ್ಲಿ ಷಷ್ಠಿಯು ಬಹುಲದಿಂದ ಪ್ರಯೋಗವಹುದು." ಎಂದು ಈ ಸೂತ್ರವು. ಅಮೃತಸ್ಯ = ಮೋಕ್ಷದ = ಮೋಕ್ಷಕ್ಕೆ ಈ ಸೂತ್ರದಿಂದ ಸಿದ್ಧವಾಯ್ತು ಎಂದರೆ—

## ಕಾರಕೋಪಪದ ವಿಭಕ್ತಿ ವಿಚಾರ.

ಇದಾಗದು. ಪ್ರಾತಿಪದಿಕ ವಿಭಕ್ತಿಗಳು ಕಾರಕ ವಿಭಕ್ತಿಗಳಾಗಿಯೂ ಉಪಪದ ವಿಭಕ್ತಿಗಳಾಗಿಯೂ ವ್ಯವಹರಿಸುವುವು. ಕಾರಕವೆಂದರೆ 'ಕಾರಕಂ ಹೇತುರಿತಿ ನಾರ್ಥಾಂತರಂ ಕಸ್ಯ ಹೇತುಃ? ಕ್ರಿಯಾಯಾಃ ವಕ್ಷ್ಯತಿ

ಧ್ರುವಮಪಾಯೇ ಅಪಾದಾನಂ ಗ್ರಾಮಾದಾಗಚ್ಛತಿ. ಪರ್ವತಾದವರೋಹತಿ" ಕಾಶಿಕಾ. ಕ್ರಿಯೆಗೆ ಹೇತುವಾದುದು ಕಾರಕವು. ಅದರ ಉದಾಹರಣಗಳನ್ನು ಪಾಣಿನ್ಯಾಚಾರ್ಯನು ಹೇಳುವನು. ಅಗಲುವಲ್ಲಿ ಕದಲದೆ ನಿಲ್ವನೆಲೆಯು ಅಪಾದಾನವು ಊರಿಂದೆ ಬಂದಪನು. ಬೆಟ್ಟದಿಂದಿಳಿವನು. ಅಂತೆಯೆ ಕರ್ಮಣಾಯಮಭಿಪ್ರೈತಿ ಸ ಸಂಪ್ರದಾನಂ ೧-೪-೩೨ ಕರ್ತೃವು ತನ್ನ ಕರ್ಮದಿಂದ ಆರನ್ನು ಬಗೆವನೊ ಅದು ಸಂಪ್ರದಾನವು. 'ಕರ್ತುರೀಪ್ಸಿತತಮಂ ಕರ್ಮ' ೧-೪-೪೯. ಕರ್ತನ ಕ್ರಿಯೆಯಿಂದ ಆವುದು ಹೊಂದಲು ಪಡೆವಲ್ಲಿ ಮಿಗಿಲಹುದೊ—ಕರ್ತನು ಕ್ರಿಯೆಯಿಂದ ಆವುದನು ಹೊಂದಲು ಮಿಗಿಲುಬಯಸಿದಪನೊ – ಅದು ಕರ್ಮವು. ಸ್ವತಂತ್ರ ಕರ್ತಾ ೧-೪-೫೪. ಕ್ರಿಯೆಯು ಉಂಟಾಗುವಲ್ಲಿ ಸ್ವತಂತ್ರನಹನು ಕರ್ತೃವು "ಸಾಧಕತಮಂ ಕರಣಮ್" ೧-೪-೪೨ ಕ್ರಿಯೆಯುಂಟಾಗುವಲ್ಲಿ ಆವುದು ಅತ್ಯಂತವಾಗಿ ನೆರವಾದಪುದೊ ಅದು ಕರಣವು. ಆಧಾರೋ ಅಧಿಕರಣಮ್ ೧-೪-೪೫. ಕ್ರಿಯೆಗೆ ಆಶ್ರಯವಾದ ಕರ್ತೃಕರ್ಮಗಳನ್ನು ಆವುದು ಧರಿಪುದೊ ಅದು ಅಧಿಕರಣವು. ಕರ್ತೃ ಕರ್ಮ ಕರಣ ಸಂಪ್ರದಾನ, ಅಪಾದಾನ, ಅಧಿಕರಣವೆಂಬಿವು ಕಾರಕಗಳು. ಇವು ಕ್ರಿಯೆಯ ಪ್ರಸಿದ್ಧಿಗೆ ಹೇತುವಾಗಿವೆ. ಈ ಕಾರಕಗಳನ್ನು ವಾಚಿಸುವಲ್ಲಿ ಪ್ರಾತಿಪದಿಕ ವಿಭಕ್ತಿಗಳು ಬಂದಪುವು. ಅವುಗಳಿಗೆ ಪ್ರಥಮಾದಿ ಸಂಜ್ಞೆಗಳನ್ನು ವ್ಯಾಕರಣ ಸ್ಮೃತಿಕಾರರು ಕಲ್ಪಿಸಿಹರು. ಪ್ರಾತಿಪದಿಕವೆಂದರೆ ಧಾತುವಲ್ಲದ ಪ್ರತ್ಯಯವೂ ಅಲ್ಲದ ಅರ್ಥವನುಳ್ಳ ಶಬ್ದವು. ಆದುದರಿಂದ ಬಳಿಕೆಯನುಳ್ಳ ಶಬ್ದಗಳನ್ನು ಪ್ರಾತಿಪದಿಕಗಳೆಂತಲು ಧಾತುಗಳೆಂತಲು ಪ್ರತ್ಯಯಗಳೆಂತಲು ಮೂರು ಬಗೆಯಿಂದ ವಿಂಗಡಿಸಬಹುದು. ಪ್ರಾತಿಪದಿಕಗಳಿಗೆ ಹತ್ತುವ ಪ್ರತ್ಯಯಗಳಿಗೆ ಕಾರಕವಿಭಕ್ತಿಗಳೆಂಬರು. ಇವು ವಾಕ್ಯದಲ್ಲಿ ಪ್ರಾತಿಪದಿಕದ ಬಳಿಯಲ್ಲಿ ವಿಶಿಷ್ಟ ಪ್ರಾತಿಪದಿಕಗಳು ಬಂದಾಗ ಆ ಶಬ್ದಗಳ ದೆಸೆಯಿಂದಲು ಬಂದಪುವು. ಆಗ ಅವು ಉಪಪದ ವಿಭಕ್ತಿಗಳೆನಿಪುವು. ಇದರ ನಿಚ್ಚಳವಿಂತು. ಶಿವ, ಸೃಜ್‌ಸು ತಿಪ್ ಎಂಬ ಶಬ್ದಗಳನ್ನು ಕೊಳ್ವ. ಶಿವ ಪ್ರಾತಿಪದಿಕವು. ಸೃಜ ಧಾತುವು. "ಸು" "ತಿ" ಗಳು ಪ್ರತ್ಯಯಗಳು. "ಸು" ಪ್ರಾತಿಪದಿಕ ಪ್ರತ್ಯಯವು "ತಿಪ್" ಆಖ್ಯಾತ ಪ್ರತ್ಯಯವು. ಧಾತುಗಳಿಗೆ ಸೇರುವ ಪ್ರತ್ಯಯಗಳಿಗೆ ಆಖ್ಯಾತ ಪ್ರತ್ಯಯಗಳೆಂಬರು. ಇಲ್ಲಿ ಪ್ರಾತಿಪದಿಕಗಳಿಗೆ ಬರುವ ತದ್ಧಿತ ಪ್ರತ್ಯಯಗಳ ಮತ್ತು ಧಾತುಗಳಿಗೆ ಬರುವ ಕೃತ್ಪ್ರತ್ಯಯಗಳ ಗೊಡವೆಯು ಬೇಡ.

## ವಿಭಕ್ತಿವಿವರವು.

"ಶಿವಃ ಸೃಜತಿ'' ವಾಕ್ಯದಲ್ಲಿ ಶಿವಶಬ್ದಕ್ಕೆ ಪ್ರಾತಿಪದಿಕ ಪ್ರಥಮಾ ವಿಭಕ್ತಿಯ "ಸು'' ಪ್ರತ್ಯಯವೂ ಸೃಜ ಶಬ್ದಕ್ಕೆ 'ತಿಙ್' ಆಖ್ಯಾತ ಪ್ರತ್ಯಯವೂ ಸೇರಿ ಶಿವನು ಹುಟ್ಟಿಸಿದಪನು ಎಂಬ ವಾಕ್ಯವು ಪದಗಳ ಸಮನ್ವಯದಿಂದಾಗಿದೆ. ಶಿವಃ ಎಂಬುದು ಪ್ರಥಮೆಯು ಕಾರಕ ವಿಭಕ್ತಿಯಾದ ಉದಾಹರಣವು. "ಶಿವೋ ಜಗತ್ಸೃಜತಿ" ಶಿವನು ಜಗತ್ತನ್ನು ಹುಟ್ಟಿಸಿದಪನು ಎಂಬಲ್ಲಿ ಜಗತ್ ಪದವು ದ್ವಿತೀಯಾ ವಿಭಕ್ತಿಯಿಂದ ಕೂಡಿದೆ. ಈ ದ್ವಿತೀಯೆಯು ಕಾರಕವಿಭಕ್ತಿಯು. ಆದರೆ ಅನು, ಉಪ, ಅಭಿ ಎಂಬಿವು ಮುಂತಾದ ಅವ್ಯಯ ಪ್ರಾತಿಪದಿಕಗಳು ವಾಕ್ಯದಲ್ಲಿ ಮತ್ತೊಂದು ಪ್ರಾತಿಪದಿಕದ ಬಳಿಯಲ್ಲಿ ಬಂದರೆ ದ್ವಿತೀಯಾ ವಿಭಕ್ತಿಯು ಆ ಪ್ರಾತಿಪದಿಕಕ್ಕೆ ಸೇರುವುದು. ಉದಾಹರಣವು "ಕರ್ಮಪ್ರವಚನೀಯಯುಕ್ತೇ ದ್ವಿತೀಯಾ" ೨-೩-೮ ಹೀನೆ ೧-೪-೮೬ ಕರ್ಮಪ್ರವಚನೀಯವು ಯೋಗವಾಗಲು ದ್ವಿತೀಯೆಯು ಆದಪುದು. ಕರ್ಮಪ್ರವಚನೀಯವೆಂದು ವ್ಯಾಕರಣಸ್ಮೃತಿಕಾರರು ಹಲವು ಶಬ್ದಗಳಿಗೆ ಇಟ್ಟ ಸಂಜ್ಞೆಯು. ಅನು ಶಬ್ದದಿಂದ ಹೀನತ್ವವು ದ್ಯೋತಿತವಾದಾಗ ಅದು ಕರ್ಮಪ್ರವಚನೀಯವಾದಪುದು. ಆ ವರ್ಗಕ್ಕೆ ಸೇರುವುದು. ಶಿವಮನುದೇವಾಃ ದೇವತೆಗಳು ಶಿವನಿಗೆ ಹೀನರು. ಶಿವಮ್ ಎಂಬಲ್ಲಿಯ ದ್ವಿತೀಯೆಯು ಕಾರಕವಿಭಕ್ತಿಯನ್ನಿಡುವುದಾದರೆ ಶಿವಾದಧೋದೇವಾಃ ಎಂದು ಪಂಚಮಿಯು ಬರುತಲಿತ್ತು. ಇದರಂತೆಯೆ ಚತುರ್ಥಿಯೂ ಕಾರಕವಿಭಕ್ತಿಯು ಉಪಪದ ವಿಭಕ್ತಿಯಾಗಿಯು ಇದೆ. ಗುರವೇ ದಕ್ಷಿಣಾಂ ದದಾತಿ ಗುರುವಿಗೆ ದಕ್ಷಿಣೆಯನ್ನು ಕೊಡುತ್ತಾನೆ ಎಂಬಲ್ಲಿ ಕಾರಕವಿಭಕ್ತಿಯು.

"ಕ್ರಿಯಾರ್ಥೋಪಪದಸ್ಯ ಚ ಕರ್ಮಣಿಸ್ಥಾನಿನಃ'' ೨-೩-೧೦. ವಾಕ್ಯದಲ್ಲಿಯ ಕ್ರಿಯೆಗೆ ಮತ್ತೊಂದು ಕ್ರಿಯೆಯು ಫಲವಾಗಿ ಆ ಕ್ರಿಯೆಯನ್ನು ನುಡಿವ ಶಬ್ದವು ಪ್ರಯೋಗವಾಗದಾಗ ಆ ಕ್ರಿಯೆಯ ಕರ್ಮವು ದ್ವಿತೀಯೆಯಲ್ಲಿ ಬಾರದೆ ಚತುರ್ಥಿಯಲ್ಲಿ ಬರುವುದು. ಉದಾಹರಣ— ಫಲೇಭ್ಯೋಯಾತಿ ಫಲಾನ್ಯಾಹರ್ತುಂಯಾತಿ ಹಣ್ಣುಗಳಿಗೆ ಹೋಗುತ್ತಾನೆ. ಹಣ್ಣು ತರಲು ಹೋಗುತ್ತಾನೆ. ವಾಕ್ಯದಲ್ಲಿಯ ಕ್ರಿಯೆಯು ಹೋಗುವಣವು. ಆ ಹೋಗುವಣದರ ಫಲವಾದ ಕ್ರಿಯೆಯು. ಹಣ್ಣುಗಳನ್ನು ತರು

ವಣವು. ಈ ಫಲಕ್ರಿಯೆಯನ್ನು ವಚಿಸುವೆ. ''ಆಹರ್ತುಂ = ತರಲಿಕ್ಕೆ" ಶಬ್ದವು ವಾಕ್ಯದಲ್ಲಿ ಪ್ರಯೋಗವಾಗಿಲ್ಲ. ಆದರ ಕರ್ಮಫಲಾನಿ = ಹಣ್ಣು ಗಳನ್ನು ಎಂಬುದಕ್ಕೆ ಫಲೇಭ್ಯೋ ಹಣ್ಣುಗಳಿಗೆ ಎಂದು ಬಂದಿತು. ಇದು ಉಪಪದ ಚತುರ್ಥಿಯು.

## ಚತುರ್ಥ್ಯರ್ಥೇ ಸೂತ್ರ ವಿಷಯವು.

ಚತುರ್ಥ್ಯರ್ಥೇ ಬಹುಲಂ ಛಂದಸಿ. ವೇದದಲ್ಲಿ ಚತುರ್ಥಿಯರ್ಥ ದಲ್ಲಿ ಷಷ್ಠಿಯು ಬಹುಲದಿಂದ ಬರುವುದು ಎನ್ನುವುದು ಕಾರಕ ಚತು ರ್ಥಿಯನ್ನು ಹಿಡಿದು ವಿಧಿವುದೋ ? ಉಪಪದ ಚತುರ್ಥಿಯನ್ನು ಹಿಡಿದು ವಿಧಿವುದೋ ? ಅಥವಾ ಉಭಯ ಚತುರ್ಥಿಯನ್ನು ಹಿಡಿದು ವಿಧಿವುದೋ? ಆಚಾರ್ಯನು ಮೋಕ್ಷಸ್ಯ ಎಂಬದನ್ನು ಮೋಕ್ಷಾಯ ಎಂದು ಮಾಡಿದ ಚತುರ್ಥಿಯು ಮೋಕ್ಷವನ್ನು ಸಂಪಾದಿಸಲು ಎಂಬ ಉಪಪದ ಚತು ರ್ಥಿಯು. ''ಪಲೇಭ್ಯೋಯಾತಿ" ಉದಾಹರಣವನ್ನು ನೋಡಿರಿ. ಚತು ರ್ಥ್ಯರ್ಥೇ ಬಹುಲಂ ಛಂದಸಿ" ಸೂತ್ರವು ಕಾರಕ ಚತುರ್ಥಿಯನ್ನು ಹಿಡಿದು ಅದೆ ಉಪಪನ ಚತುರ್ಥಿಯನ್ನು ಹಿಡಿದು ಅಲ್ಲಿ ಚತುರ್ಥಿಯ ಅರ್ಥವು ಸಂಪ್ರದಾನವು. "ಚತುರ್ಥೀ ಸಂಪ್ರದಾನೇ" ೨-೩-೧೩ ಕರ್ಮ ವಲ್ಲ. ''ಕ್ರಿಯಾರ್ಥೋಪಪದಸ್ಯ ಚಕರ್ಮಣಿ ಸ್ಥಾನಿನಃ" ೨-೩-೧೦ ಸೂತ್ರ ವಿಹಿತ ಉಪಪದ ಚತುರ್ಥಿಯು ದ್ವಿತೀಯಾರ್ಥದಲ್ಲಿ ಉಂಟು. ಸ್ವಾರ್ಥ ದಲ್ಲಿ (ಸಂಪ್ರದಾನದಲ್ಲಿ) ಅಲ್ಲ. ಆದುದರಿಂದ ಅಮೃತಸ್ಯ= ಮೋಕ್ಷಾಯ ಎಂಬ ಉಪಪದ ಚತುರ್ಥೀ ಭಾಷ್ಯವು ವ್ಯಾಕರಣದುಷ್ಟವು.

ಆದರೆ ಆಚಾರ್ಯನಲ್ಲಿ ತಮ್ಮವನೆಂಬ ಬುದ್ಧಿಯನುಳ್ಳವರು ಚತು ರ್ಥ್ಯರ್ಥೇ ಎಂದು ಸಾಮಾನ್ಯವಾಗಿ ಸೂತ್ರವಿಹುದಾಗಿ ಚತುರ್ಥಿಯ ಸರ್ವಕಾರಕೋಪಪದಿಕಾರ್ಥಗಳಲ್ಲಿ ಷಷ್ಠಿಯು ಬರುವುದೆನಬಹುದು. ಇದಲ್ಲ, 'ನ ಸಂದೇಹಾದ ಲಕ್ಷಣಂ ವ್ಯಾಖ್ಯಾನತೋ ವಿಶೇಷ ಪ್ರತಿಪತ್ತಿಃ ಸ್ಯಾತ್' ಎಂಬ ನ್ಯಾಯದಿಂದ ಈ ಸೂತ್ರಕ್ಕೆ ವ್ಯಾಖ್ಯಾತೃಗಳ ಏನೆಂ ಬದು ನೋಡುವಣ. ಛಂದಸಿ ವಿಷಯೇ ಚತುರ್ಥ್ಯರ್ಥೇ ಷಷ್ಠೀ ವಿಭಕ್ತಿ ರ್ಭವತಿ ಬಹುಲಂ ಪುರುಷ ಮೃಗಶ್ಚಂದ್ರಮಸಃ ಪುರುಷ ಮೃಗಶ್ಚಂದ್ರ ಮಸೇ ಗೋಧಾಕಾಲಕಾದಾರ್ವಾಘಾಟಸ್ತೇ ವನಸ್ಪತೀನಾಮ್ ತೇವನ ಸ್ಪತಿಭ್ಯಃ ಕಾಶಿಕಾ ಷಷ್ಠ್ಯರ್ಥೇ ಚತುರ್ಥೀ ವಕ್ತವ್ಯಾ (ಇದು ವಾರ್ತಿ

ಕವು) ಯಾಖರ್ವೇಣಪಿಬತಿ ತಸ್ಯೈ ಖರ್ವೋ ಜಾಯತೇ ಯಾದತೋ ಧಾವತಿ ತಸ್ಯೈಶ್ಯಾವದನ್ ಯಾನಖಾನಿ ಕೃಂತತಿ ತಸ್ಯೈ ಕುನಖಃ ಯಾ ಆಂಕ್ತೇ ತಸ್ಯೈಕಾಣಃ ಯಾ ಅಭ್ಯಂಕ್ತೇ ತಸ್ಯೈ ದುಶ್ಚರ್ಮಾ ಯಾ ಕೇಶಾನ್ ಪಲಿಖತಿ ತಸ್ಯೈ ಖಲತಿಃ ಅಹಲ್ಯಾಯೈಜಾರಃ— ಕನ್ನಡದಲ್ಲಿಂತು ವೇದವು ವಿಷಯುವಾದಾಗ ಬಹುಲದಿಂದ ಚತುರ್ಥಿಯರ್ಥದಲ್ಲಿ ಷಷ್ಠಿಯು ಆದಪುದು. ಗಂಡು ಮೃಗವು ಚಂದ್ರಮುನ=ಗಂಡು ಮೃಗವು ಚಂದ್ರ ಮನಿಗೆ ಉಡು. ಒಳ್ಳೀ (ನೀರಹಾವು) ಬಡಿಗನ ಹಕ್ಕಿ ಅವು ವನಸ್ಪತಿ ಗಳ= ಅವು ವನಸ್ಪತಿಗಳಿಗೆ ಷಷ್ಠಿಯರ್ಥದಲ್ಲಿ ಚತುರ್ಥಿಯನ್ನು ಹೇಳಬೇಕು. ಆವಳು ಕುಗ್ಗಿ ಕುಡಿವಳೊ ಆಕೆಗೆ ಖರ್ವನು (ಗಿಡ್ಡನು) ಹುಟ್ಟುವನು. ಆವಳು ಹಲ್ಲುಗಳನ್ನು ತೊಳೆವಳೊ ಆಕೆಗೆ ಕಪ್ಪು ಹಲ್ಲವನು. ಆವಳು ಉಗುರುಗಳನ್ನು ಕತ್ತರಿಸುವಳೊ ಆಕೆಗೆ ಉಗುರುಗೆಟ್ಟವನು. ಆವಳು ಅಂಜನವಿಡುವಳೊ ಆಕೆಗೆ ಒಕ್ಕಣ್ಣನು. ಆವಳು ಎಣ್ಣೆ ಹೂಸುವಳೊ ಆಕೆಗೆ ತೊಗಲುಗೆಟ್ಟವನು. ಆವಾಕೆಯು ಕೂದಲು ಕೆಸೆವಳೊ ಆಕೆಗೆ ತೇಗಣಿದತಿಯುವನು. ಅಹಲ್ಯೆಗೆ ಜಾರನು.

ಈ ಉದಾಹರಣೆಗಳಿಂದ ವೈಯಾಕರಣರು ಕ್ರಿಯಾರ್ಥೋಪಪದ ಚತುರ್ಥಿಗೆ ಷಷ್ಠಿಯು ಬಾರದೆಂದೂ, ಸಂಪ್ರದಾನ ಚತುರ್ಥಿಗೆ ಮಾತ್ರ ಅದು ಸಲ್ಲುವದೆಂದೂ ತೋರಿಸಿಹರು.

## ತೃತೀಯಾರ್ಥೇ ಉದಾಹರಣವು.

ಮತ್ತೊಂದು ಸೂತ್ರವನ್ನು ಉದಾಹರಿಸಬಹುದು. ಅನು ಮುಂತಾದ ಅವ್ಯಯಗಳು ಕರ್ಮಪ್ರವಚನೀಯ ಸಂಜ್ಞೆಯನ್ನು ಅರ್ಥ ವಿಶೇಷವಾಚ ಕವಾಗಿ ವೈಯಾಕರಣರಿಂದ ಹೊಂದಿವೆ. ಅನು ಶಬ್ದವು ತೃತೀಯಾ ರ್ಥವು ದ್ಯೋತಿತವಾಗುವಾಗ ಕರ್ಮವು ವಚನೀಯುವಾಗುವುದು ಎಂದು ೧-೪-೮೫. ಸೂತ್ರವು ಉಂಟು. ಅದಕ್ಕುದಾಹರಣವು ನದೀಮನ್ವವ್ಯಾತಾ ಸೇನಾ. ಪರ್ವತಮನ್ವವಸಿತಾ ಸೇನಾ. ಪರ್ವತೇನ ಸಂಬಿದ್ಧಾ ಎಂದು ಉಂಟು. ಸೇನೆಯು ಪರ್ವತದಿಂದೇ (ಪರ್ವತದೊಡನೆ) ನದಿಯಿಂದ (ನದಿಯೊಡನೆ) ಸಂಬಂಧವಾಗಿದೆಯೆಂಬರ್ಥದಲ್ಲಿ ಮಾತ್ರ ತೃತೀಯಾರ್ಥ ವನ್ನು ಗ್ರಹಿಸಬೇಕಲ್ಲದೆ ತೃತೀಯೆಯ ಎಲ್ಲ ಅರ್ಥಗಳನ್ನು ಹಿಡಿಯಲಾ ಗದು. ಅಂದರೆ ಕುಠಾರೇಣ ಛಿನತ್ತಿ ಕೊಡಲಿಯಿಂದ ಕಡಿವನು ಎಂಬಲ್ಲಿ ಕುಠಾರಮನು ಛಿನತ್ತಿ ಎಂದಾಗದು.

## ಫಲಾಂಶವು.

ಅವ್ಯೃತಸ್ಯ ಎಂಬುದಕ್ಕೆ ಮೋಕ್ಷವು ಎನಲಾಗದು. ಆದುದರಿಂದ ದೇವಧಾರಣಃ ಎಂಬುದನ್ನು ಬಹುವ್ರೀಹಿ ಸಮಾಸವೆಂದು ಮೋಕ್ಷಕ್ಕಾಗಿ ಶಿವಲಿಂಗಧಾರಣವುಳ್ಳವನು ಎಂದು ವಿವರಿಸಲು ಸಾಧ್ಯವಲ್ಲವು.

## ಭೂಯಾಸಂ ಶಬ್ದ ವಿಚಾರವು.

ಶ್ರೀ ಪಂಡಿತಾಚಾರ್ಯನು ದೇವಧಾರಣರೋ ಭೂಯಾಸಂ ವಾಕ್ಯವಲ್ಲಿ ಭೂಯಾಸಂ ಪದವು ನಾನು ಆಗಲಿ ಎಂದು ಕೋರಿಕೆಯನ್ನು ತೋರಿಸುವುದು. ಲಿಙ ಪ್ರತ್ಯಯಾಂತ ಶಬ್ದವಾಗಿಹುದು. ವೇದದಲ್ಲಿ ಯಜೇತ ಪದವು ಲಿಙ ಪ್ರತ್ಯಯಾಂತವಾಗಿದೆ. ವೈದಿಕ ವಿಧಿಯು ಲಿಙಂತ ಕ್ರಿಯಾಪದದಿಂದ ನುಡಿಯ ಪಡೆವುದು. ಆದುದರಿಂದ ಭೂಯಾಸಂ ಪದದಿಂದ ವೇದವಿಲ್ಲಿ ಲಿಂಗಧಾರಣವನು ವಿಧಿಸುತಿಹುದು ಎಂಬನು. ಇದನೀಗ ನೋಡುವಣ.

ವಿಧಿನಿ ಮಂತ್ರಣಾಮಂತ್ರಣಾಧೀಷ್ಟ ಸಂಪ್ರಶ್ನ ಪ್ರಾರ್ಥನೇಷು ಲಿಙ ೩-೩-೧೬೧. ಸೂತ್ರವು ವಿಧ್ಯರ್ಥದಲ್ಲಿ ಲಿಙ ಪ್ರತ್ಯಯುವನ್ನು ವಿಧಿಸುವುದು. ವಿಧಿಯೆಂದರೆ ಪ್ರೇರಣವು. ಸ್ವರ್ಗಕಾಮೋ ಯಜೇತ ಎಂಬಲ್ಲಿ ಸ್ವರ್ಗವ ಬಯಸುವನು ಯಾಗವನನುಷ್ಠಿಸಬೇಕು ಎಂದು ವೇದವು ಪ್ರೇರಿಪುದು. ಈ ವಾಕ್ಯದಲ್ಲಿ ಭೂಯಾಸಂ ಪದವು ಲಿಙಂತವಾಗಿದೆ. ಆದುದರಿಂದ ಇದು ಲಿಂಗಧಾರಣ ವಿಧಿಯು, ಲಿಂಗಧಾರಣ ಪ್ರೇರಣವು ಲಿಂಗಧಾರಣದ ಅಪ್ಪಣೆಯು, ಆಜ್ಞೆಯು, ಎಂದು ರಾದ್ಧಾಂತವು. ಇದು ಆಗದು.

ಈ ಸೂತ್ರದ ತರುವಾಯಲ್ಲಿ, 'ಲೋಟ್ ಚ" ಸೂತ್ರವು ಇದೆ ಅರ್ಥಗಳಲ್ಲಿ "ಲೋಟ್" ಪ್ರತ್ಯಯುವೂ ಬರುವುದು ಎಂದು ವಿಧಿಪುದು. ಅಂದರೆ 'ಯಜೇತ" ಎಂದೂ "ಯಜತಾಮ್" ಎಂದೂ ಯಾಗವನ್ನು ವಿಧಿಸಬಹುದು. ಇಲ್ಲಿ ಚಕಾರದಿಂದ ಹಿಂದಿನ ಸೂತ್ರದಿಂದ ಹೇಳಿದ ಎಲ್ಲ ಅರ್ಥಗಳಲ್ಲಿಯು ಲೋಟ್ ಪ್ರತ್ಯಯುಗಳು ಬರುವುವು. ಲಿಙ ಪ್ರತ್ಯಯುಗಳಿಗೆ ಬೇರೆ ಅರ್ಥಗಳೂ ಇವೆ. ಲೋಟ್ ಪ್ರತ್ಯಯುಗಳಿಗೂ ಹಾಗೆ

(ಪ್ರತ್ಯಯುಗಳಿಗೆ ಎಂಬ ಬಹು ವಚನವು ಪ್ರಯೋಗವು ಹೀಗೆ — ಪ್ರಥಮ ಮಧ್ಯಮೋತ್ತಮ ಪುರುಷಗಳ ಮೂರು ಮೂರು ಪ್ರತ್ಯಯುಗಳು ಒಂಬತ್ತು ಅವೆ ) ವಿಧಿನಿಮಂತ್ರಣಾದಿಗಳು ಪ್ರವತನದ ರೂಪಗಳೆ ಆಗಿರುವುದರಿಂದ ಇವನ್ನೆಲ್ಲ ಒಂದು ಸೂತ್ರದಲ್ಲಿ ಪವಣಿಸಿಹನು. ಸಿದ್ಧಾಂತ ಕೌಮುದಿ ಕಾರನು ಹೇಳುವಂತೆ ಇವೆಲ್ಲ ಆ ಪ್ರವರ್ತನದ ಬೇರೆ ಬೇರೆ ಬಗೆಗಳ ನ್ನೊಡಗೊಂಡ ಸೂತ್ರವನು ಮಾಡಬಹುದಿತ್ತು. ಪ್ರವರ್ತನಾಯಾಂ ಲಿಜ ಇತ್ಯೇವಸುವಚವಮ್. ಚತುರ್ಣಾಂ ಪ್ರಥಗು ಪಾದಾನಂ ಪ್ರಪಂಚಾರ್ಥವಮ್

ಪ್ರವರ್ತನದಿಂದ ಭಿನ್ನವಾದ ಅರ್ಥಗಳಲ್ಲಿ ಲಿಜ ಪ್ರತ್ಯಯಗಳು ಬರುವಲ್ಲಿ ಶ್ರೀ ಪಾಣಿನ್ಯಾಚಾರ್ಯನು ಸ್ವತಂತ್ರ ಸೂತ್ರಗಳನ್ನೇ ರಚಿಸಿಹನು. ಇಂತು ಸ್ವತಂತ್ರ ಸೂತ್ರಗಳ ವಿಷಯುಗಳು ತದ್ವಾಚಕ ಪ್ರತ್ಯಯುಗಳು ಒಂದೆಯಾದರು ಪ್ರವರ್ತನದೊಡನೆ ಒಂದಾಗಿ ಹಿಡಿಯುತಕ್ಕುವಲ್ಲ. ಈ ಭಿನ್ನಾರ್ಥಗಳು. ಉತಾಪ್ಯೋಃ ಸಮರ್ಥಯೋರ್ಲಿಜ. ೩-೩-೧೫೨. ಉತಾಧೀಯೀತ ಅಪ್ಯಧೀಯೀತ ಓದಿಯೆ ಓದುವನು. ನಿಶ್ಚಯಾರ್ಥದಲ್ಲಿ ಉತ ಆದಿ ಇದ್ದಾಗ ಇದು ಲಿಜ್. 'ಕಾಮ ಪ್ರವೇದನೇಽಕಚ್ಚಿತಿ" ೩-೩-೧೫೩ ಕಚ್ಚಿತ್ ಶಬ್ದವನ್ನು ಬಳಸದೆ ತನ್ನ ಅಭಿಪ್ರಾಯುವನ್ನು ತೋರ್ಪಡಿಸುವಾಗಲು ಲಿಜ ಆಗುವದು. ಕಾಮೋ ಮೇಭಿಂ ಜೀತ ಭವಾನ್ ತಾವು ಉಣಬೇಕೆಂದು ನನ್ನ ಅಭಿಪ್ರಾಯುವು. ಬಯಕೆಯು ಸಂಭಾವನೇಽಲಮಿತಿ ಚೇತ್ಸಿದ್ಧಾಪ್ರಯೋಗೇ.' ೩-೩.೧೫೪ ಆವುದೊಂದು ಕ್ರಿಯೆಯಲ್ಲಿ ಒಬ್ಬನು ನಿರ್ವಹಣ ಸಮರ್ಥನೆಂದು ಬುದ್ಧಿಯುಂಟಾಗಿ ಆ ಸಾಮರ್ಥ್ಯ ಬೋಧಕವಾದ ಅಲಂ ಶಬ್ದವು ಪ್ರಯೋಗವಾಗದಿರುವಾಗಿ ಧಾತುವಿಗೆ ಲಿಜ ಪ್ರತ್ಯಯುಗಳಾಗುವವು. ಅಪಿ ಪರ್ವತಂಶಿರಸಾಭಿಂದ್ಯಾತ್ ಅರೆ (ಕಲ್ಲು ಬಂಡೆ) ಯನ್ನಾಗಲಿ ತಲೆಯಿಂದ ಒಡೆಯುಲಾಪನು. ಆದರೆ 'ಅಲಂ' ಪ್ರಯೋಗವಾದಾಗ ಲಿಜ ಬರುವುದಿಲ್ಲ. "ಅಲಂ ದೇವದತ್ತೋ ಹಸ್ತಿನಂ ಹನಿಷ್ಯತಿ" ದೇವದತ್ತನು ಆನೆಯನ್ನು ಕೊಲ್ಲಲು ಸಾಕು. ಇತ್ಯಾದಿ ಅಧ್ಯಾಯ ೩-ಪಾದ೩ ಸೂತ್ರಗಳು ೧೫೫ ರಿಂದ ೧೬೦ ಹಾಗು ೧೬೪-೧೬೮-೧೭೩ ಎಂಬಿವನ್ನು ನೋಡಿರಿ. ಈ ಅರ್ಥಗಳು ಒಂದಕ್ಕೊಂದು ಬೇರೆಯಾಗಿವೆ. ಅದರಂತೆಯೆ ಆಶಿರರ್ಥವು.

## ಆಶಿಷಿ ಲಿಙ ಲೋಟೌ ೩-೩-೧೭೩.

ಆಶಿರರ್ಥದಲ್ಲಿ ಲಿಙ ಬರುವಂತೆ ಲೋಟ್ ಪ್ರತ್ಯಯುವೂ ಬರುವದು. ಇದರಿಂನಲು ಆಶಿಷವು ವಿಧಿಯಿಂದ ಬೇರೆ ಎಂದು ತೋರಿ ಬರುವುದು. ಅಂದರೆ "ವಿಧಿನಿಮಂತ್ರಣಾ ಮಂತ್ರಣಾಧೀಷ್ಟ ಪ್ರಶ್ನಸಂಪ್ರಾರ್ಥನೇಷು ಲಿಙ" ಎಂದು ಸೂತ್ರಿಸಿ ಆ ಅರ್ಥಗಳಲ್ಲಿ 'ಲೋಟ್' ಪ್ರತ್ಯಯುವೂ ಆಹುದೆಂದು "ಲೋಟ್ ಚ" ೩-೩-೧೬೨ ಸೂತ್ರದಿಂದ ವಿಧಿಸಿ ಮುಂದೆ ಕ ... ಸೂತ್ರಗಳನ್ನು ಮೀರಿ ೧೭೩ ನೆಯ ಸೂತ್ರವನ್ನು ಆಶಿರರ್ಥದಲ್ಲಿ ಲಿಙ ಲೋಟ್ ಪ್ರತ್ಯಯುಗಳು ಬಂದಪವೆನ್ನುವುದರಿಂದ ಆಶಿರರ್ಥವು ವಿಧ್ಯರ್ಥವಲ್ಲೆಂದು ಒಡೆದು ತೋರುತಲಿದೆ. ಒಂದೆಯಾಗಿದ್ದರೆ ಲೋಟ್ ಚ ಸೂತ್ರದಿಂದಲೆ ಆಶಿರರ್ಥದಲ್ಲಿ ಲೋಟ್ ಬರುತ್ತಿರಲು ಆಶಿಷಿ ಲಿಙ ಲೋಟೌ ಸೂತ್ರ ವಿಧಾನವು ಬೇಡಾಗಿತ್ತು. ಆಶಿರರ್ಥವು ವಿಧ್ಯರ್ಥದ ಒಂದು ಛಾಯಾ ಮಾತ್ರವಾಗಿದ್ದರೆ ಆಶಿಷಿ ಲಿಙ ವಿಧಾನವನ್ನು ಈ ಸೂತ್ರದಿಂದ ಮಾಡಲು ಬೇಡವಾಗಿತ್ತು.

## ಆಶೀರ್ಲಿಙದ ವಿಶೇಷವು.

ಭಿನ್ನ ಸೂತ್ರಗಳಿಂದ ವಿಧಿಗೆ ಮತ್ತು ಆಶಿಷಕ್ಕೆ ಲಿಙ ಪ್ರತ್ಯಯುಗಳನ್ನು ಹೇಳಿದರೇನಾಯ್ತು? ಒಂದೆ ಪ್ರತ್ಯಯುದಿಂದ ಎರಡು ಅರ್ಥಗಳು ಬೋಧವಾಗಿರುವದರಿಂದ ಸಂದರ್ಭಾನುಗುಣ್ಯದಿಂದ ವಿಧಿಯೊ ಆಶಿಷವೊ ಈ ಪ್ರತ್ಯಯುದಿಂದ ಹೇಳವಡೆದಿದೆಂದು ಗುರುತಿಸಬಹುದೆಂದರೆ ಆಗದು. ಭೂತಕಾಲದಲ್ಲಿ ಧಾತುವಿಗೆ ಮೂರು ಪ್ರತ್ಯಯುಗಳು ಲಿಟ್ ಲಿಙ. ಲುಙ್ ವಿಹಿತವಾಗಿವೆ. ಆದರೆ ಅರ್ಥಗಳು ಒಂದೊಂದು ವಿಶೇಷದಿಂದ ಕೂಡಿವೆ. ಪರೋಕ್ಷೇ ಲಿಟ್ ೩-೨-೧೧೫ ಲಿಟ್ ಪ್ರತ್ಯಯುದಿಂದ ಒಂದು ಭೂತ ಕ್ರಿಯೆಯುನ್ನು ನುಡಿದಾಗ ಆ ಕ್ರಿಯೆಯುನ್ನು ಹೇಳುವನು ಕಂಡಿರುವುದಿಲ್ಲ. "ದಶರಥೋ ರಾಜಾ ಬಭೂವ" ದಶರಥನು ಅರಸನಾಗಿದ್ದನು. (ಇದನ್ನು ಹೇಳುವನು ಕಂಡಿಲ್ಲ) ಅನದ್ಯತನೇ ಲಿಟ್. ೩-೨-೧೧೧ ಇಂದಿನದಲ್ಲದ ಭೂತ ಕ್ರಿಯೆಯುನ್ನು ಲಙ ಪ್ರತ್ಯಯುವು ನುಡಿವುದು. "ದೇವದತ್ತಃ ಕಾಶೀಮಗಚ್ಛತ್" ದೇವದತ್ತನು ಕಾಶಿಗೆ ಹೋದನು. (ಇಂದು ಅಲ್ಲ— ಹೇಳುವನು ಕಂಡಿರಬಹುದು. ಕಂಡಿರಲಿಕ್ಕಿಲ್ಲ). ಲುಙ ೩-೨-೧೧೦ ಭೂತ ಕಾಲದಲ್ಲಿ ಲುಙ ಪ್ರತ್ಯಯುವು. "ದೇವದತ್ತಃ ಕಾಶೀ

ಮಗಮತ್" ದೇವದತ್ತನು ಕಾಶಿಗೆ ಹೋದನು. (ಇಂದು ಇರಲಿ ಅಂದು ಇರಲಿ. ಹೇಳುವನು ಕಂಡಿರಲಿ ಕಾಣದಿರಲಿ) ಅಂದರೆ ಲಿಟಂತ ಕ್ರಿಯಾಪದವು ಆದ ಕ್ರಿಯೆಯನ್ನು ಹೇಳುವನು. ನೋಡಿಲ್ಲೆಂಬಲ್ಲಿಯು ಲಟಂತ ಕ್ರಿಯಾಪದವು ಆದ ಕ್ರಿಯೆಯು ಇಂದು ಅಲ್ಲ ಎಂಬಲ್ಲಿಯು ಲುಟಂತ ಕ್ರಿಯಾಪದವು ಆದ ಕ್ರಿಯೆಯು ಇಂದು ನಿನ್ನೆ ನೋಡಿದೆ ನೋಡಿಲ್ಲ ಎಂಬಿವನ್ನು ಬಗೆಯುದರಲ್ಲಿಯು ಭಿನ್ನ ಭಿನ್ನವಾಗಿವೆ. ಒಂದೆ ಭೂತಕಾಲ ಪ್ರತ್ಯಯಗಳು ಇಷ್ಟು ಭಿನ್ನಾರ್ಥವಾಗಿಹವು. ವಿಧಿಲಿಜ ಪ್ರತ್ಯಯವು ಸಾರ್ವ ಧಾತುಕವು "ಲಿಜಶಿತ್ ಸಾರ್ವಧಾತುಕಮ್. ೩-೩-೧೧೩ ಆಶೀಲಿಜ ಆರ್ಧ ಧಾತುಕವು. ಆರ್ಧಧಾತುಕಂ ಶೇಷಃ ೩-೪-೧೧೪ "ಲಿಜಾಶಿಷಿ" ೩-೪-೧೧೬ ಆದುದರಿಂದ ಪ್ರತ್ಯಯವೂ ಬೇರೆ ಅರ್ಥವೂ ಬೇರೆ, ಒಂದೆ ಎಂದು ಸಾಧಿಸುವುದು ವ್ಯಾಕರಣ ವಿಡಂಬನವು.

## ವಾಕ್ಯ ವಿಚಾರವು

ಇದಿರಲಿ. ಈ ಯಜುಸ್ಸಿನಲ್ಲಿ ಏಳು ಕ್ರಿಯಾಪದಗಳಿವೆ. ಸ್ಪೃಣೋತು ಭೂಯಾತ್ ಭೂಯಾಸಂ ಮೊದಲಾದುವು. ಈ ಏಳು ಕ್ರಿಯಾಪದಗಳೆಂದರೆ ಸಮೇಂದ್ರೋ ಮೇಧಯಾ ಸ್ಪೃಣೋತು. ಅಮೃತಸ್ಯ ದೇವ ಧಾರಣೋ ಭೂಯಾಸಂ ಶರೀರಂ ಮೇ ವಿಚರ್ಷಣಂ (ಭೂಯಾತ್) ಜಿಹ್ವಾ ಮೇ ಮಧುಮತ್ತಮಾ (ಭೂಯಾತ್) ಕರ್ಣಾಭ್ಯಾಂಭೂರಿ ವಿಶ್ರುವಂ ಬ್ರಹ್ಮಣಃ ಕೋಶೋಽಸಿ ಮೇಧಯಾ ಪಿಹಿತಃ ಶ್ರುತಂ ಮೇ ಗೋಪಾಯ, ಕಂಸದಲ್ಲಿ ಹಾಕಿದ ಕ್ರಿಯಾಪದಗಳು ಅಧ್ಯಾಹಾರವಾಗಿವೆ. ಆಚಾರ್ಯನು ಈ ಅಧ್ಯಾಹಾರವನ್ನು ತಾನೆ ಮಾಡಿಹನು. ಆರಾದರು ಮಾಡಲೇಬೇಕಾಗಿದೆ. ಆದುದರಿಂದ ಇವು ಏಳು ವಾಕ್ಯಗಳು. ಇವುಗಳಲ್ಲಿ ಆರು ಆಶಂಸನ ಕ್ರಿಯಾಪದಗಳಿವೆ. ಒಂದೊಂದು ಕ್ರಿಯಾಪದಕ್ಕೆ ಒಂದೊಂದು ವಾಕ್ಯವಾಗುತ್ತ ಆರು ಆಶಂಸಾ ಲಿಜಂತ ಕ್ರಿಯಾಪದದಿಂದ ಕೂಡಿದ ವಾಕ್ಯಗಳು. "ಸುಪ್ತಿಙಂತಚಯೋವಾಕ್ಯಂ ಕ್ರಿಯಾ ವಾಶಾ ರಕಾನ್ವಿತಾ" ಅಮರ. ಸುಬಂತ ಲಿಜಂತ ಪದಗಳ ಗುಂಪಾಗಲಿ ಕಾರಕದೊಡಗೂಡಿದ ಕ್ರಿಯೆಯಾಗಲಿ ವಾಕ್ಯವು. ಆಚಾರ್ಯನು ನನ್ನ ಶರೀರವು ಕಿಲ್ಬಿಷರ ಹಿತವಾಗಲಿ. ನನ್ನ ನಾಲಿಗೆಯು ಸವಿಮಾತುಗಳನಾಡಲಿ. ಕಿವಿಗಳಿಂದ ನಾನು ಬಹುಲವಾಗಿ (ಶಿವಶಾಸ್ತ್ರಗಳನ್ನು) ಕೇಳಲಿ. ನನ್ನ ಶ್ರುತವನ್ನು (ಶ್ರವಣ ಪೂರ್ವಕವಾದ ಭಕ್ತಿ ಜ್ಞಾನಗಳನ್ನು ಕಾಪಾಡು ಎಂದು ಆಶಿರರ್ಥವನ್ನು ಉಳಿದುವಕ್ಕೆ ಹೇಳಿ ಅದೆ ಸಂದರ್ಭ

ದಲ್ಲಿಯೆ ಅದೆ ಆಶಿರರ್ಥ ಲಿಜಂತವಾದ “ಭೂಯಾಸಂ” ಪದವನ್ನು ಭರ್ವೇಯಂ ಎಂದು ತಿರುಗಿಸಿ ವಿಧಿಯನ್ನು ಕಲ್ಪಿಸಬಾರದು.

## ತನ್ನಲ್ಲಿ ವಿಧಿಯು ಸಂಭವಿಸದು.

ಇಲ್ಲಿಯ ತನಕ ಪ್ರತ್ಯಯುವನ್ನು ಬಿಚ್ಚಿ ಬಿಚ್ಚಿ ಬಗೆದುದು ಆಯ್ತು. ಅಂದರೆ ಶಬ್ದ ವಿಚಾರವಾಯ್ತು. ಇನ್ನು ವಿಧ್ಯರ್ಥವನ್ನು ತಿರುವಿ ನೋಡು ವಣ. ವಿಧಿಯೆಂದರೇನು? ಅದು ತನ್ನಲ್ಲಿ ಘಟಿಸುದೊ ಘಟಿಸದೊ ಎಂಬ ವಿಚಾರವೀಗ ವಿಷಯುವು.

ವಿಧಿಮಂತ್ರಣಾ ಮಂತ್ರಣಾಧೀಷ್ಟ ಸಂಪ್ರಶ್ನ ಪ್ರಾರ್ಥನೇಷು ಲಿಜ ೩-೩-೧೬೧. ಇದಕ್ಕೆ ಕಾಶಿಕಾವೃತ್ತಿ. ವಿಧಿಃ ಪ್ರೇರಣಂ ನಿಮಂತ್ರಣಂ ನಿಯೋಗಕರಣಂ ಆಮಂತ್ರಣಂ ಕಾಮಚಾರಕರಣಂ ಅಧೀಷ್ಟಃ ಸತ್ಕಾರ ಪೂರ್ವಕೋವ್ಯಾಪಾರಃ ಸಂಪ್ರಶ್ನಃ ಸಂಪ್ರಧಾರಣಂ ಪ್ರಾರ್ಥನಂ ಯಾಂಚಾ ವಿಧ್ಯಾದ್ಯರ್ಥೇಷು ಧಾತೋರ್ಲಿಙ್ ಪ್ರತ್ಯಯೋಭವತಿ ಸರ್ವಲಕಾರ ಣಾಮಪವಾದಃ ವಿಧ್ಯಾದಯಶ್ಚ ಪ್ರತ್ಯಯಾರ್ಥ ವಿಶೇಷಣಂ ವಿಧ್ಯಾದಿ ವಿಶಿಷ್ಟೇಷು ಕರ್ತ್ರಾದಿಷು ಲಿಙ್ ಪ್ರತ್ಯಯೋಭವತಿ ವಿಧೌತಾವತ್ ಕಟಂ ಕುರ್ಯಾತ್ ಗ್ರಾಮಂಭವಾನಾಗಚ್ಛೇತ್ ನಿಮಂತ್ರಣೇ ಇಹಭವಾನ್ಭುಂ ಜೀತ ಅಧೀಷ್ಟೇ ಅಧೀಚ್ಛಾವೋಭವಂತಂ ಮಾಣವಕಂ ಭವಾನು ಪನಯೇತ್ ಸಂಪ್ರಶ್ನೇ ಕಿಂ ಸುಖಲುಭೋ ವ್ಯಾಕರಣಮಧೀಮಿಯು ಪ್ರಾರ್ಥನೇ ಭವತಿಯೇ ಪ್ರಾರ್ಥನಾ ವ್ಯಾಕರಣಮಧೀಯಾಮ.

ಇದಕ್ಕೆ ಕನ್ನಡವು (ನ್ಯಾಸದ ಸಹಾಯದಿಂದ) ವಿಧಿಯೆಂದರೆ (ಸೇವ ಕಾದಿಗಳನ್ನು) ಮುಂಜರಿಸುವುದು ಪ್ರೇರಣವು. ನಿಮಂತ್ರಣವೆಂದರೆ (ಬಯಸದಿದ್ದರು ಮಾಡಬೇಕೆಂದು) ಗೊತ್ತುಪಡಿಸುವುದು ನಿಯೋಗ ಕರಣವು. ಆಮಂತ್ರಣವೆಂದರೆ ಮಾಡುವನ ಬಗೆ ಬಂದರೆ ಮಾಡಬ ಹುದೆಂಬುದು. ಕಾಮಚಾರನುಜ್ಞಾ-ಅಧೀಷ್ಟವೆಂದರೆ ದೊಡ್ಡತನಗೊಟ್ಟು ಕೆಲಸಕ್ಕೆ ಹಚ್ಚುವುದು. ಸತ್ಕಾರಪೂರ್ವಕ ವ್ಯಾಪಾರವು. ಸಂಪ್ರಶ್ನವೆಂ ದರೆ ಬಗೆಯಲ್ಲಿ ತೂಗಿ ನೋಡುವುದು ಸಂಪ್ರಧಾರಣವು. ಪ್ರಾರ್ಥನ ವೆಂದರೆ ಬೇಡುವುದು, ಯಾಂಚೆಯು. ಇದಕ್ಕೆ ಉದಾಹರಣಗಳು. ವಿಧಿಗೆ (ಆಳು) ಚಾಪೆಯನ್ನು ಮಾಡಬೇಕು. ನೀವು ಊರಿಗೆ ಬರಬೇಕು. ನಿಮಂತ್ರಣಕ್ಕೆ ಇಲ್ಲಿ ತಾವು ಉಣಬೇಕು. ಇಲ್ಲಿ ತಾವು ಕುಳ್ಳಿರ ಬೇಕು (ಮಾಡದಿದ್ದರೆ ನಿಮಗೆ ಸಂಕಟ ಬಯಸದಿದ್ದರು ಮಾಡಲೇ

ಬೇಕು) ಆಮಂತ್ರಣಕ್ಕೆ (ಮನಸು ಬಂದರೆ) ಇಲ್ಲಿ ತಾವು ಕುಳ್ಳಿರಬೇಕು. ಇಲ್ಲಿ ತಾವು ಉಣಬೇಕು (ಮನಸು ಬಾರದಿದ್ದರೆ ಇಲ್ಲ) ಅಧೀಷ್ಟಕ್ಕೆ ತಾವು ಮಾಣಕನನ್ನು ಮುಂಜಿಗಟ್ಟಬೇಕೆಂದು ಗೌರವಿಸಿ ಬೇಡುತ್ತೇವೆ. ಸಂಪ್ರಶ್ನದಲ್ಲಿ- ಎಲೈ ನಾನು ವ್ಯಾಕರಣವನ್ನು ಓದಲೇನು? ಪ್ರಾರ್ಥನ ದಲ್ಲಿ ವ್ಯಾಕರಣವನ್ನು ನಾನು ಓದಲೆಂದು ನನ್ನ ಕೋರಿಕೆಯು.

ನೋಡಲು ವಿಧಿ ನಿಮಂತ್ರಾಣಾ ಮಂತ್ರಣಾಧೀಷ್ಟಗಳಲ್ಲಿ ಸಾಮಾ ನ್ಯವಾಗಿ ಪ್ರವರ್ತನ ವ್ಯಾಪಾರವಿದೆ. ಅಂದರೆ ಒಬ್ಬನು ಮತ್ತೊಬ್ಬ ನನ್ನು ಒಂದು ಕೆಲಸವನ್ನು ಮಾಡಹಚ್ಚುವನು. ತನಗಿಂತಲೂ ಹೀನ ನನ್ನು ಪ್ರವರ್ತಿಸುವಲ್ಲಿ ವಿಧಿಯೆನಿಸುವುದು. ಮಾಡದಿದ್ದರೆ ನೀನು ಸಂ ಕಟಕ್ಕೆ ಅಥವಾ ಪಾಪಕ್ಕೆ ಗುರಿಯಾಪ್ಪೆ ಎಂಬಲ್ಲಿ ನಿಮಂತ್ರಣವು. ಮನ ಬಂದರೆ ಮಾಡು ಬಿಡು ಎಂಬಲ್ಲಿ ಆಮಂತ್ರಣವು. ಸತ್ಕರಿಸಿ ಮಾಡಹ ಚ್ಚುವುದು ಅಧೀಷ್ಟವು. ಈ ಬಗೆಯಾದ ಪ್ರವರ್ತನವು ತನ್ನಲ್ಲಿ ಘಟಿ ಸದು. ಅಂದರೆ ಲಿಙ್ ಪ್ರತ್ಯಯಾರ್ಥವಾದ ಹೀನತ್ವ, ನಿಯೋಜತ್ವ, ಕಾಮುಕರಣಾನುಜ್ಞೆ. ಸತ್ಕಾರಪೂರ್ವಕ ವ್ಯಾಪಾರಗಳು ತನಗೆ ವಿಶೇಷ ಣಗಳಾಗವು. ತಾನು ಅನ್ಯರನ್ನು ಆಜ್ಞಾಪಿಸಬಲ್ಲನು. ಮನಬಂದರೆ ಮಾಡಿರೆಂದು ಅನುಜ್ಞೆಗೊಡಬಲ್ಲನು. ಗೌರವಿಸಿ ಕಾರ್ಯಮಾಡಿಸಬಲ್ಲನು. ತನ್ನನ್ನು ತಾನು ಆಜ್ಞಾಪಿಸಲಾರನು. (ವಿಧಿ ನಿಮಂತ್ರಣಗಳು) ಅನು ಜ್ಞೆಗೊಡಲಾರನು (ಆಮಂತ್ರಣ) ಸತ್ಕರಿಸಿ ತೊಡಗಿಸಲಾರನು. (ಅಧೀಷ್ಟ) ಆದರೆ ಮಾಡಲೊ ಎಂಬ ಸಂಪ್ರಧಾರಣವೂ, ಮಾಡಲಿ ಎಂಬ ಕೋರಿ ಕೆಯೂ ತನ್ನಲ್ಲಿ ಸಂಭವಿಪುವು. ಆದುದರಿಂದ ಶ್ರೀಪತಿ ಪಂಡಿತಾಚಾ ರ್ಯನು 'ಭೂಯಾಸಂ' ಪದವನ್ನು 'ಭವೇಯುಂ' ಪದವನ್ನಾಗಿರಿಸಿದರು. ಆ ಪದವು ವಸ್ತು ಸ್ವಭಾವದಿಂದ ತನ್ನಲ್ಲಿ ಲಿಂಗಧಾರಣ ವಿಧಿಯನ್ನು ಕಲ್ಪಿಸದು. ವಿಧಿಯಿಂದ ಅಲ್ಲದೆ ಆಶಂಸನದಿಂದ ಧರ್ಮವನ್ನು ವೇದವು ವಿಧಿಸುವುದಿಲ್ಲೆಂದು ಮೀಮಾಂಸಾ ಸಿದ್ಧಾಂತವು. ಆ ಆಚಾರ್ಯನಾ ದರು ಆಶಂಸನದಿಂದ ಲಿಂಗಧಾರಣವನ್ನು ಸಾಧಿಸಹೋಗಿಲ್ಲ. ಆದರೆ ಈ ಭಾಷ್ಯ ಪಕ್ಷಪಾತಿಗಳು ಎಲ್ಲ ಬಗೆಯಿಂದಲು ಸುಮ್ಮನಾಗಲೆಂದು ಆಚಾರ್ಯನು ಮಾಡದ ಆಶಂಸನದಿಂದ ಧರ್ಮವಿಧಾನ ಪಕ್ಷವನ್ನು ಎಬ್ಬಿಸಿ, ಮಲಗಿಸುವುದು ಮುಂದೆ ಬರುವ ವಿಷಯವು.

# ಮಹಾದೇವಿಯಕ್ಕನ ಮದುವೆಯ ವಿವಾದ.

ಲೇಖಕ:— ವೇ॥ ಮೂ॥ ಚಂದ್ರಶೇಖರ ಶಾಸ್ತ್ರಿಗಳು ಅಡ್ನೂರ

---

ಜುಲೈ ತಿಂಗಳಲ್ಲಿ ಬರೆದ 'ಮಹಾದೇವಿಯಕ್ಕನವರು ಮದುವೆಯಾಗಿದ್ದರೇ?' ಎಂಬ ನನ್ನ ಲೇಖವನ್ನು ಖಂಡಿಸುವ ಸಾಹಸದಿಂದ ಶ್ರೀ ಸ. ಹಾ. ಶಿವಮೂರ್ತಿಯವರು ನವಂಬರ 'ಶಿವಾನುಭವ' ಸಂಚಿಕೆಯಲ್ಲಿ— 'ಮಹಾದೇವಿಯಕ್ಕನವರ ಮದುವೆ' ಎಂದು ನಿಶ್ಚಯಿಸಿ ಬರೆದಿರುವರು. ಇವರು ನನ್ನ ಲೇಖದ ಅಭಿಪ್ರಾಯವನ್ನು ಯಥಾರ್ಥವಾಗಿ ತಿಳಿದುಕೊಳ್ಳದೆ ಖಂಡಿಸಲು ಪ್ರಯತ್ನಪಟ್ಟಿದ್ದರಿಂದ ಪುನಃ ನಾನು ಲೇಖನಿಯನ್ನು ಎತ್ತುವ ಪ್ರಸಂಗವು ಬಂದೊದಗಿತು. ಇದಕ್ಕಾಗಿ ವಿಷಾದಿಸುತ್ತೇನೆ.

## ಮೊದಲು ಮಾತು.

ಅಕ್ಕನ ಗೌರವಕ್ಕಾಗಿ ನನ್ನ ವಾದವಿಲ್ಲ. ಹೇಗಾದರೂ ಆಕೆಯ ಗೌರವಕ್ಕೆ ಕೊರತೆಯಿಲ್ಲ. ಇನ್ನು ವಾದವು ನಿರ್ಣಯಕ್ಕೆಂದು ನಾನು ಬೇರೆ ಬರೆಯಬೇಕಿಲ್ಲ. ನಾನು ಮುಖ್ಯವಾಗಿ ಪ್ರಮಾಣವಾಗಿಟ್ಟುಕೊಂಡುದು ಅಕ್ಕನವರ ವಚನ. ಪ್ರಭುಲಿಂಗ ಲೀಲೆಯು ಅದಕ್ಕೆ ಉಪಷ್ಟಂಭಕ ಮಾತ್ರ. ಹರಿಹರದೇವನು ವೀರಶೈವ ಕವಿಗಳಿಗೆಲ್ಲ ಆದಿಯವನಾದರೂ ಶರಣರಿಗಲ್ಲ. ಅಕ್ಕನ ಲಗ್ನದ ವಿಚಾರವು ಇನ್ನೂ ಸಂಶೋಧಾತ್ಮಕವಾಗಿರುವದರಿಂದ ಹೀಗೇ ಎಂದು ನಿರ್ವಿವಾದವಾಗಿ ನಿರ್ಧರಿಸಲು ಬರುವಂತಿಲ್ಲ. ನನ್ನ ನಿಮ್ಮಗಳ ಬರಹಗಳು ಕೇವಲ ಊಹೆ ಮಾತ್ರ.

## ಕವಿ ಕಾಲ.

ಈ ಲೇಖಕರು 'ಹರಿಹರದೇವನ ಕಾಲ ಕ್ರಿ. ಶ. ೧೧೬೫ ಎಂದು ಪಂಡಿತರ ಅಭಿಪ್ರಾಯವಿದೆ. [ಹರಿಹರನು ಚಾಮರಸ ಕವಿಗಿಂತಲೂ ಸುಮಾರು ೩೦೦ ವರುಷ ಮೊದಲಿಗನು.] .. ಚಾಮರಸನು ಹರಿಹರ ಕಾಲದವನೆಂದು ಹೇಳಿ ಈರ್ವರ ಕಾಲ ನಿರ್ಣಯವನ್ನು ನಿರಾಧಾರವಾಗಿ ಬರೆದಿರುವರು.' ಎಂದು ಹೇಳಿರುವರು. ಇವರು ಹೇಳುವಂತೆ

ಹರಿಹರದೇವನ ಕಾಲ ಇನ್ನೂ ನಿರ್ಣಯಕ್ಕೆ ಬಂದಿಲ್ಲ. ಅದರಲ್ಲಿ ಮುಖ್ಯ ವಾಗಿ ಎರಡು ಭೇದಗಳುಂಟು. ಕೆಲವರು ೧೨ನೇ ಶತಮಾನವೆನ್ನು ವರು. ಬೇರೆ ಕೆಲವರು ೧೩ನೇ ಶತಮಾನವೆನ್ನುವರು. ಉದಾಹರಣೆ ಗಾಗಿ— ಕಿಟೆಲ್‌ರು ೧೨೫೦ ಎಂದು ಹೇಳುವರು. ಡಾ. ವೆಂಕಟಸುಬ್ಬ ಯ್ಯನವರದೂ ಇದೇ ಅಭಿಪ್ರಾಯವಿದೆ. ಶ್ರೀ. ಬುದ್ಧಯ್ಯ ಪುರಾಣಿಕರು ೧೨೦೦ ಬರೆದಿರುವರು. ಕವಿಚರಿತೆಕಾರರು ೧೧೬೫ ಎಂದು ಅಭಿಪ್ರಾಯ ಪಡುವರು. ಅಂದಮೇಲೆ ಯಾವುದನ್ನೂ ನಿರ್ಧಾರವಾಗಿ ಹೇಳಲು ಬರುವಂತಿಲ್ಲ. ನಾನು ಹಿಂದಿನ ಲೇಖದಲ್ಲಿ ಒಬ್ಬರ ಮತವನ್ನು ವ್ಯಕ್ತ ಮಾಡಿರುವೆನೇ ಹೊರತು, ನಿರ್ಣಯವನ್ನು ಹೇಳಿಲ್ಲ. ನಾನು ಉಪ ಯೋಗಿಸಿದ ಪಕ್ಷವೆಂಬ ಶಬ್ದವೇ ಇವರ ಲಕ್ಷಕ್ಕೆ ಬಂದಂತಿಲ್ಲ. ನೀವು ಈಗ ಬರೆದುದಾದರೂ ಒಬ್ಬರ ಹೇಳಿಕೆಯನ್ನು ಅದನ್ನಾದರೂ ನಿಶ್ಚ ಯಿಸಿ ಬರೆದಿರುವಿರಿ. ಐತಿಹಾಸಿಕದಲ್ಲಿ ಒಬ್ಬರ ಹೇಳಿಕೆಯಲ್ಲಿ ನಿಶ್ಚಯಿ ಸಲು ಬರುವಂತಿಲ್ಲ. ಒಂದು ಪಕ್ಷ ನಿಶ್ಚಯಿಸಿದರೂ ನಿರ್ವಿವಾದವಾಗ ಲಾರದು. ಅಂತಹದನ್ನು ನೀವು ಸರ್ವಸಾಮಾನ್ಯವಾಗಿ ನಿರ್ಣಯಿಸಿರು ವಿರಂಪ ಮೇಲೆ ಯಾರದು ನಿರಾಧಾರವೋ? ನೀವೇ ಊಹಿಸಿರಿ. ಇನ್ನು ನನ್ನ ಹಿಂದಿನ ಬರಹದಲ್ಲಿ ಹರಿಹರದೇವನ ಕಾಲ ಕ್ರಿ. ಶ. ೧೧೬೫ ಎಂದು ಬಿದ್ದುದು ಪ್ರಿಂಟು ಇಲ್ಲದೆ ಹಸ್ತದೋಷವಾಗಿರಬೇಕು. ಈ ದೋಷವನ್ನು ನಿಮ್ಮ ಆಗಸ್ಟ ತಿಂಗಳ ಲೇಖದಲ್ಲಿಯೂ ಕಾಣಬಹುದು.

ಮಹಾದೇವಿಯಕ್ಕನ ಕಾಲನ್ನು ಕವಿಚರಿತೆಕಾರರು ಸು. ಕ್ರಿ. ಶ. ೧೧೬೦ ಎಂದು ಹೇಳಿರುವರು. ವಿಚಾರಿಸಿದರೆ ಅಕ್ಕನವರ ಕಾಲ ಇನ್ನೂ ಕೊಂಚ ಹಿಂದಕ್ಕೆ ಹೋಗಬಹುದೋ? ಎಂದೆನಿಸುತ್ತದೆ. ಏಕೆಂದರೆ— ಉತ್ತರ ಕರ್ನಾಟಕದ ಸರಸ ಕವಿಗಳಾದ ಶ್ರೀಮಾನ್ ದ. ರಾ. ಬೇಂದ್ರೆ ಯವರು, ಧಾರವಾಡ ಕರ್ನಾಟಕ ಸಂಘದಿಂದ ಹೊರಬಿದ್ದ "ಅಭಿನವ ಪಂಪ" ಎಂಬ ಗ್ರಂಥದಲ್ಲಿ 'ನಾಗಚಂದ್ರನ ಮಲ್ಲಿನಾಥ ಪುರಾಣ' ಎಂಬ ಲೇಖವನ್ನು ಬರೆದಿರುವರು. ಅದರಲ್ಲಿ ಅವರು ನಾಗಚಂದ್ರ ಕವಿಯ ಕಾಲ-ದೇಶಗಳ ವಿಚಾರವಾಗಿ ಬರೆಯುತ್ತ ಈ ಶ್ಲೋಕವನ್ನು ಉದಹ ರಿಸಿರುವರು.

ಓವದೆ ಮೀನಮೇಷ ವೃಷಭಾದಿಗಳಂ ಕ್ರಮದಿಂ ದಿನಾಧಿಪಂ।
ಸೇವಿಸಿ ಮತ್ತೆ ಕನ್ನೆಯೊಡಗೂಡಲೊಡಂ ಕಿಡೆ ತನ್ನ ತೇಜಮಂ ॥

ನ್ನಾವುದೊ ಕಜ್ಜವೆಂದು ತೊಲೆಯಂ ಜನರಂಜನೆಗೇರಿ ತೇಜಮಂ।
ಭೂವಲಯಕ್ಕೆ ಬೀರಿದನಿದೇಂ ಪ್ರಭುಮಾಡಿದ ಮಾಯೆ ಸಲ್ಲದೆ॥"

ಇದು ಶರತ್ಪ್ರವೇಶ ಕಾಲದ ದಿನಾಧಿಪನ ವರ್ಣನೆ. ಇಲ್ಲಿ ಶ್ಲೇಷ, ಪರಿಹಾಸಗರ್ಭಿತ ಸರಣಿ, 'ಪ್ರಭು' ಎಂಬ ತೋರಿಕೆಗೆ ಅನುಚಿತವಾದ ಪದ ಪ್ರಯೋಗ, ಒಂದೊಂದೂ ಸಂಶಯವನ್ನುಂಟು ಮಾಡುವವು.... .... ಈ ಪದ್ಯವನ್ನು ಬಿಟ್ಟರೆ ಎರಡೂ ಕಾವ್ಯಗಳಿಗೂ ಬಾಧೆಯಿಲ್ಲ. ಈ ಪದ್ಯದೊಳಗಿನ ಪರಿಹಾಸಗರ್ಭ ಶ್ಲೇಷೆಗೆ ಚಾರಿತ್ರಕ ಔಚಿತ್ಯವಿದ್ದಿರಬೇಕೇ ಹೊರ್ತು, ಕಾವ್ಯ ವಸ್ತುವಿನ ರೀತಿಯಿಂದಾಗಲಿ, ವರ್ಣನಾ ರೀತಿಯಲ್ಲಾಗಲಿ ಕಾಣದು. ಇದರೊಳಗಿನ 'ಪ್ರಭು' ಹಾಗು 'ಮಾಯೆ' ಶಬ್ದಗಳು, ಮತ್ಸ್ಯೇಂದ್ರ-ಗೋರಖಪಂಥ ಸಂಸರ್ಗದಲ್ಲಿ ಬಳೆದು ಮುಂದೆ ಬಸವನೊಡನೆ ಪ್ರಸಂಗಮಾಡಿ, (ಕನ್ನೇ ಮಹಾದೇವಿಯಕ್ಕ) ಯೊಡನೆ ಶಿವಾನುಭವಗೋಷ್ಠಿ ಬೆಳಸಿ ಪವಾಡಗಳಿಂದಲೂ ಜನಪ್ರಿಯವಾಗುತಲಿದ್ದು ಮಾಯೆಯನ್ನು ಗೆದ್ದು ಪ್ರಭುವೆಂದು ಪ್ರಸಿದ್ಧಿಗೆ ಬರುತ್ತಿದ್ದ ಅಲ್ಲಮನನ್ನು ಕುರಿತು ಇರಬೇಕೆಂದು ಎತ್ತಿ ಒತ್ತಿ ಹೇಳುವಂತೆ ನನಗಂತೂ ತೋರುವದು. ಒಂದು ಹಠಯೋಗ ಗ್ರಂಥದ ಕೊನೆಗಿರುವ ನಾಥ ಸಂಪ್ರದಾಯದ ಪಟ್ಟಿಯಲ್ಲಿ ಅಲ್ಲಮಪ್ರಭುವಿನ ಹೆಸರನ್ನು ಓದಿದುದು ನನಗೆ ನೆನಪಿದೆ...... ವೃಷಭ-ಕನ್ನೆ ಶಬ್ದಗಳು ಬಸವನನ್ನೂ ಮಹಾದೇವಿಯಕ್ಕನನ್ನೂ ಸೂಚಿಸುವವು....... ಈ ಕಲ್ಪನೆಯು ಸಮಂಜಸವಾಗಿದ್ದರೆ ಕಲ್ಯಾಣ-ಬಾಗೇವಾಡಿಗಳತ್ತಲಿರುವ ವಿಜಾಪೂರ ಪ್ರಾಂತದಲ್ಲಿಯೇ ನಾಗಚಂದ್ರನು ಇರಲಿಕ್ಕೆ ಸಾಕು. ಅವನ ಕಾಲ ಪ್ರಭುವಿನ ಕಾಲ. ಪ್ರಭುವು ಬಸವನಿಗೆ ವಯಸ್ಸಿನಲ್ಲಿ ಹಿರಿಯ." ಎಂದು ಬರೆದಿರುವರು.

ಇವರು ಉದಹರಿಸಿದ ಶ್ಲೋಕವು ಜೈನಕವಿಯಾದ ನಾಗಚಂದ್ರನ ಮೊದಲನೆಯ ಕೃತಿಯಾದ ಮಲ್ಲಿನಾಥ ಪುರಾಣದೊಳಗಿನದು. ಆ ಪುರಾಣವನ್ನು ಕ್ರಿ. ಶ. ಸು. ೧೧೧೫ ರಲ್ಲಿ ರಚಿಸಿರಬೇಕೆಂದು ಶ್ರೀಮಾನ್ ಗೋವಿಂದ ಪೈ, ಮಂಜೇಶ್ವರ ಎಂಬವರು ಅಭಿಪ್ರಾಯಪಡುತ್ತಾರೆ. ಕವಿಚರಿತೆಕಾರರೂ ಈ ಕವಿಯ ಕಾಲ ಸು. ಕ್ರಿ. ಶ. ೧೧೦೦ ಎಂದು ತಿಳಿಸುವರು. ಉಳಿದವರೂ ಒಪ್ಪುವರು. ಆದ್ದರಿಂದ ಒಟ್ಟಿನ ಮೇಲೆ ಶ್ರೀಮಾನ್ ದ. ರಾ. ಬೇಂದ್ರೆ ಬಿ. ಏ. ಇವರು ಹೇಳುವ ಶ್ಲೇಷಾರ್ಥವು ಸತ್ಯಾಂಶವಾದಲ್ಲಿ ಅಲ್ಲಮ-ಅಕ್ಕಗಳ ಕಾಲ ಸುಮಾರು ಕ್ರಿ. ಶ. ೧೧೦೦ಕ್ಕೆ

ಬರುವದು. ಮತ್ತು ಹರಿಹರದೇವನಿಗಿಂತಲೂ ಪ್ರಾಚೀನನಾದ ಈ ಕವಿಯು ತನ್ನ ಪದ್ಯದಲ್ಲಿ 'ಮಾಯೆ' ಎಂಬ ಶಬ್ದವನ್ನು ಉಪಯೋಗಿಸಿರುವದರಿಂದ ಅಕ್ಕನ ತಾಮಸಾವತಾರಕ್ಕೆ ಮಾಯೆಯೆಂದು ಹೆಸರಿರಬೇಕು. ಹಾಗು ಮಾಯಾಕೋಲಾಹಲ-ಮಾಯಾಮದಮರ್ದನ ಎಂಬ ಪ್ರಭುವಿನ ಬಿರುದುಗಳಿಂದಲೂ ಇದು ವ್ಯಕ್ತವಾಗುತ್ತದೆ. ಆದಕಾರಣ ಇದೇ ಹೆಸರನ್ನು ಚಾಮರಸ ಕವಿಯು ಅಕ್ಕನ ಆದಿ ಅವತಾರಕ್ಕೆ ಉಪಯೋಗಿಸಿರುವದು ಸಾಧಾರವೂ ಸಯುಕ್ತಿಕವೂ ಆಗುವಲ್ಲಿ ಸಂದೇಹವಿಲ್ಲ. ಇನ್ನು ಹರಿಹರದೇವನು ಅದೇ ಮಾಯೆಗೆ ಪ್ರಭುವಿನ ರಗಳೆಯಲ್ಲಿ ಕಾಮಲತೆಯೆಂದು ಕರೆದುದು ಕಲ್ಪಿತವಾಗಿರಬಹುದೇ? ಎಂಬ ಸಂಶಯವು ಅದಾಗಲೇ ತಲೆದೋರುವದು. ಇದಲ್ಲದೆ ನಾಗಚಂದ್ರನು — ಪ್ರಭುವಿನ ಬಳಿಗೆ ಬಂದ ಅಕ್ಕನನ್ನು 'ಕನ್ನೆ' ಯೆಂದು ಹೇಳುವದರಿಂದ ಅಕ್ಕನು ಲಗ್ನವಾಗಿರಲಿಲ್ಲವೆಂದು ವ್ಯಕ್ತವಾಗುತ್ತದೆ.

## ಮಿಥ್ಯ-ಸತ್ಯಗಳ ನಿರ್ಣಯ.

ಕೇವಲ ಚಾಮರಸನೊಬ್ಬನೇ ಮೂಢ ಪ್ರೇಮದಿಂದ ಕಾವ್ಯವನ್ನು ಬರೆಯಲಿಲ್ಲ. ಸಾಮಾನ್ಯವಾಗಿ ಹಿಂದಿನ ಕವಿಗಳ ಕಾವ್ಯಗಳೆಲ್ಲ ಅದೇ ಮಟ್ಟಿಗಿಳಿದವುಗಳು. ಹರಿಹರದೇವನೇನೂ ವಿಜ್ಞಾನದಲ್ಲಿ-ಐತಿಹಾಸಿಕದಲ್ಲಿ ದೃಷ್ಟಿಯಿಟ್ಟು ಬರೆದಿಲ್ಲ. ಆತನದೂ ಚಾಮರಸನಿಗಿಂತಲೂ ಹೆಚ್ಚಿನ ಭಕ್ತಿಭಾವ; ಮಿಕ್ಕಿದ ಪ್ರೇಮ. ಅದ್ದರಿಂದ ಆತನ ರಗಳೆಯು ಕಾವ್ಯಗಳ ಹೊನಲು ಭಕ್ತಿಯ ಪಾತ್ರೆಯಲ್ಲಿಯೇ ಹರಿದು ನಿಂತಿದೆ. ಇದಕ್ಕೆ ಆತನ ಪಂಪಾಶತಕವೇ ಸಾಕ್ಷಿ. ಹಾಗು ರಂ. ಶ್ರೀ. ಮುಗಳಿಯವರು ಬರೆದ "ಅಕ್ಕಮಹಾದೇವಿ" ಯೆಂಬ ನಾಟಕದ ವಿಮರ್ಶಾತ್ಮಕ-ವಿಚಾರಾತ್ಮಕ (ಪುಟ ೪) ವಾದ ಮುನ್ನುಡಿಯನ್ನು ಓದಿದರೆ ವಿದಿತವಾಗುತ್ತದೆ. ಇದಲ್ಲದೆ ಹೂದೋಟ-ಲಿಂಗನೋಟ (ಪೂಜೆ) ಗಳನ್ನು ವರ್ಣಿಸುವದು ಆತನಿಗೆ ಹೆಚ್ಚು ಪ್ರಿಯವಾಗಿತ್ತು. ಆಗ ಆತನ ವಾಣಿಯು ಕುಣಿಯುತ್ತಿತ್ತು. ಉತ್ಸಾಹವು ಉಕ್ಕುತ್ತಿತ್ತು. ಪ್ರೇಮರಸವು ಇಮ್ಮಡಿ-ಮುಮ್ಮಡಿ-ನೂರ್ಮಡಿ ಹೆಚ್ಚಿ ಚಿಮ್ಮುತ್ತಿತ್ತು. ಎಂಬುದನ್ನು ಆತನ ರಗಳೆಯ ಅಭ್ಯಾಸಿಗಳಿಗೆ ಬೇರೆ ಹೇಳಬೇಕಾಗಿಲ್ಲ. ಇದಕ್ಕೂ ಆತನ ಪುಷ್ಪ-ಲಿಂಗ ರಗಳೆಗಳೇ ಪ್ರಮಾಣು. ಇದರಿಂದ ಆತನ ಕಾವ್ಯದೊಲವು ಅಂತರಂಗದಲ್ಲಿ ಹರಿದು ನಿಂತಿದೆಯೆಂದು ಕಂಡುಬರುವದು. ಎಲ್ಲಕ್ಕೂ ಮೂಲ

ವಾದ ಅಕ್ಕನವರ ವಚನ ಪರಿಚಯವಿದ್ದ ಚಾಮರಸನಿಗೆ ರಗಳೆಯ ಪರಿಚಯದಿಂದಲಾದರೂ ಏನು ಪ್ರಯೋಜನ? 'ಹಾಲಹಿಡಿದು ಬೆಣ್ಣೆಯ ಲರಸಲುಂಟೆ?' ಅಕ್ಕಗಳಿಗೂ ಚಾಮರಸನಿಗೂ ೩೦೦ ವರ್ಷ ಅಂತರವಿದ್ದರೆ, ಅಕ್ಕಗಳಿಗೂ ಹರಿಹರನಿಗೂ ೧೩೦ ವರುಷ [ಹದಿಮೂರನೇ ಶತಮಾನದ ಉತ್ತರ ಭಾಗವೆಂದು ಹೇಳುವವರ ಮತದಲ್ಲಿ] ಅಂತರವಾಗುವದು. ಒಂದು ಪಕ್ಷ ಶ್ರೀಮಾನ್ ದ. ರಾ. ಬೇಂದ್ರೆಯುವರು ಹೇಳುವಂತೆ ಅಕ್ಕನ ಕಾಲ ೧೧೦೦ಕ್ಕೆ ಹೋಗುವದು ಸತ್ಯವಾಗಿ ಪರಿಣಮಿಸಿದರೆ ಸುಮಾರು ೨೦೦ ವರುಷ ಅಂತರವಾಗುವದು. ಅಂದ ಬಳಿಕ ಈತನಾದರೂ ಕಂಡು ಅಥವಾ ಕಂಡವರಿಂದ ಕೇಳಿ ಬರೆದನೆಂಬ ಮಾತು ಆಧಾರವಿಲ್ಲದೇ ನಿಲ್ಲಬಹುದಲ್ಲವೇ? ಈ ವಿಧವಾಗಿ ವಿಚಾರಿಸುವಾಗ ಅಕ್ಕನವರ ವಚನವೇ ಉಚಿತ ಪ್ರಮಾಣವಾಗುವದು ಸರಿಯಲ್ಲವೇ? ಅವರ ವಚನದಲ್ಲಿ ಅವರ ಇಡೀ ಜೀವನ ಚರಿತ್ರೆಯು ಸಿಕ್ಕದಿದ್ದರೂ ಸಾರವು ಮಾತ್ರ ಸಿಕ್ಕುತ್ತದೆ. ಅದನ್ನೇ ಹರಿಹರ-ಚಾಮರಸರು ತಂತಮಗೆ ಒಗ್ಗುವಂತೆ ಹಿಗ್ಗಿಸಿದ್ದಾರೆ. ಆದರೂ ಹರಿಹರನ ರಗಳೆಯ ಕೆಲವಂಶಗಳು ಅಕ್ಕನ ವಚನಗಳಿಗೆ ವಿರೋಧವಾಗಿ ನಿಲ್ಲುವಂತಿವೆ. ಅವುಗಳಲ್ಲಿ ಕೆಲವನ್ನು ಹಿಂದಿನ ಬರಹದಲ್ಲಿ ಹೇಳಿದ್ದೇನೆ. ಇಲ್ಲಿಯೂ ಪ್ರಸಂಗವೊದಗಿದಲ್ಲಲ್ಲಿ ತೋರಿಸುತ್ತ ಹೋಗುವೆನು. ಕೌಶಿಕನೊಡನಾದ ವಿವಾಹ ವಿಷಯವನ್ನು ಹೇಳತಕ್ಕ ಪ್ರಸಂಗಗಳು ಅಕ್ಕನವರಿಗೆ ಘಟಿಸಿದ್ದರೂ ಹೇಳಿಲ್ಲ. ಅಕ್ಕಗಳು ಆಗಿಹೋದುದನ್ನು ವ್ಯಕ್ತಮಾಡದೆ ಬಚ್ಚಿಡುವ ಸಂಕುಚಿತ ಸ್ವಭಾವದವಳೂ ಕಲ್ಮಷ ಹೃದಯದವಳೂ ಆಗಿರಲಿಲ್ಲ. ಆದ್ದರಿಂದ ಅವಳ ವಚನದಿಂದ ಲಗ್ನವಾಗಿಲ್ಲವೆಂದು ಖಚಿತವಾಗಿಗೆ ಊಹಿಸಲು ಸಾಧ್ಯವಿದೆಯೆಂದು ತೋರುತ್ತದೆ. ಇದೇ ಅಭಿಪ್ರಾಯವನ್ನು ಅಂತರಂಗದಲ್ಲಿ ಅರಗಿಸಿಕೊಂಡು ಬರೆದ ಚಾಮರಸನೇ ಸತ್ಯವೆಂದು ಹೇಳಬಹುದು.

"ಒಂದು ನಾಡಿನಲ್ಲಿ ನಡೆದು ಹೋದ ಕಾರ್ಯಗಳ ನಿಜಸ್ಥಿತಿಯು ಕಾಲಾಂತರದ ಮೇಲೆ ಹಬ್ಬುವದು ಸ್ವಾಭಾವಿಕ" ಎಂಬ ನನ್ನ ಮಾತಿಗೆ-ಇವರು ನಮ್ಮ ಉತ್ತರವೆಂದು ಆರಂಭಿಸಿ–"ಒಂದು ನಾಡಿನ ವ್ಯಕ್ತಿಯ ಕಾರ್ಯಗಳು ಕಾಲಾಂತರದ ಮೇಲೆ ಪ್ರಸಾರನಾಗುವದೇನೋ ದಿಟವು. ಆದರೆ ಆ ಕಾರ್ಯವು ಕಾಲಾಂತರ ಮೇಲೆ ಹೆಚ್ಚು ಹಬ್ಬಬೇಕಾದರೆ ಮೊದಲಿಗೇ ಆ ವಿಷಯವು ಎಲ್ಲಿಯಾದರೂ ಅಲ್ಪ ಪ್ರಮಾಣದಿಂದ

ಲಾದರೂ ಹಬ್ಬಿಕೊಂಡಿರಬೇಕಾಗುತ್ತೆ. ಯಾವುದು ಇರುವದಿಲ್ಲವೋ ಅದು ಪ್ರಸಾರವಾಗುವದೇ ಇಲ್ಲ. ಇದು ಸೃಷ್ಟಿಯ ನೇಮ." ವಿವಾಹ ವಾಗಿಲ್ಲವೆಂದು ಹರಿಹರನ ದೇವನ ಅಥವಾ ಅಕ್ಕನ ಕಾಲಕ್ಕೆ ಸಿಕ್ಕುವ ದಿಲ್ಲ. ಇಲ್ಲುದುದು ಚಾಮರಸನ ಕಾಲಕ್ಕೆ ಹೇಗೆ ಪ್ರಸಾರವಾಯಿತು? ಈ ಲೇಖಕರು ಇಂತಹ ಅಭಿಪ್ರಾಯಗಳನ್ನು ಸಾಧಿಸಬೇಕಾದರೆ ಇದಕ್ಕೆ ತಕ್ಕ ಐತಿಹಾಸಿಕ ಆಧಾರವನ್ನು ತೋರಿಸಿ ಕೊಡಬೇಕಲ್ಲವೇ? ಆಧಾರ ವಿಲ್ಲದೆ ಹೇಳಿದರೆ ನಂಬಲು ಇದು ಬೇಸರ ಕಳೆಯಲು ಕೇಳುವ ಕತೆಯಲ್ಲ." ಎಂದು ಕೊಂಚ ಮಾರ್ದವದ ಮೆಟ್ಟಲನ್ನು ಬಿಟ್ಟು ಕಾಠಿಣ್ಯದ ಕಟ್ಟೆ ಯನ್ನು ಏರಿ ಬರೆದಿರುವರು.

## ಇದಕ್ಕೆ ನನ್ನ ಮಾರುತ್ತರ.

'ಯಾವುದು ಇರುವದಿಲ್ಲವೋ ಅದು ಪ್ರಸಾರವಾಗುವದೇ ಇಲ್ಲ.' ಎಂಬಿವರ ಮಾತಿನಂತೆ ಅಕ್ಕನ ಅಥವಾ ಹರಿಹರನ ಕಾಲಕಿಲ್ಲುದದನ್ನು ಚಾಮರಸನಾದರೂ ಹೇಗೆ ಪ್ರಸಾರ ಮಾಡಿದನು? ಇಲ್ಲುದುದನ್ನು ಹೇಳಿದನೆಂದರೆ ನಿಮ್ಮ ಮಾತಿಗೇನೆ ವ್ಯತ್ಯಯ ಬರುವದಿಲ್ಲವೇ? ಅಥವಾ ಲಗ್ನವಾಗಿಲ್ಲವೆಂಬ ಮಾತು ಹರಿಹರನ ಕಾಲಕ್ಕಿಲ್ಲದಿದ್ದರೂ ಅಕ್ಕನವರ ಕಾಲಕ್ಕಿತ್ತು. ಅದೇ ಚಾಮರಸನ ಕಾಲಕ್ಕೆ ಹಬ್ಬಿತು. ಹಾಗಾದರೆ ಹರಿಹರನೇಕೆ ಹಾಗೆ ಹೇಳಲಿಲ್ಲವೆಂದರೆ– ಆತನ ಕಾಲಕ್ಕೆ ಆತನಿಗೆ ಹೇಳಿದ ಜನಗಳಲ್ಲಿ ಲಗ್ನವಾಗಿದ್ದಳೆಂದು ಭ್ರಮೆ (ತಪ್ಪು ಕಲ್ಪನೆ) ಯಾಗಿರಬೇಕು. ಬರಬರುತ್ತ ಅದು ಸುಳ್ಳಾಗಿ ಚಾಮರಸನ ಕಾಲಕ್ಕೆ ನಿಜಸಂಗತಿಯ ಪ್ರಮೆ ಯಾಗಿರಬೇಕು. ಆದಕಾರಣ "ಭ್ರಮೆಯಿಂದ ಪ್ರಮೆಯಾಗುವದೂ ಸೃಷ್ಟಿಯ ನೇಮ." ಎಂದು ನನ್ನ ಹೇಳಿಕೆ. ಇದಕ್ಕೆ ಸರ್ಪರಜ್ಜುನ್ಯಾಯವೇ ದೃಷ್ಟಾಂತ. ಇನ್ನು ಹರಿಹರ ದೇವನಿಗಾದರೂ ಲಗ್ನವಾಗಿತ್ತೆಂದು ಹೇಳಲು ಯಾವ ಐತಿಹಾಸಿಕ ಆಧಾರವಿದೆಯೋ ಅದು ನನಗೆ ತಿಳಿಯ ದಾಗಿದೆ. ಒಂದು ಪಕ್ಷದ ದೃಷ್ಟಿಯಿಂದ ಅಕ್ಕನವರಿಗಿಂತಲೂ ೧೩೦ ವರ್ಷ ಅಂತರದಲ್ಲಿರುವ ಹರಿಹರನಿಗಾದರೂ ಈ ಲೇಖಕರು ಒಂದು ಐತಿಹಾ ಸಿಕ ಪ್ರಮಾಣವನ್ನು ಕೊಡದಿದ್ದರೆ ಅಕ್ಕನವರು ಲಗ್ನವಾಗಿದ್ದರೆಂದು ಹೇಳುವದು ತಾವೇ ಹೇಳಿದಂತೆ ತಮ್ಮದೇ ಬೇಸರ ಕಳೆಯಲು ಕೂತು ಕೇಳುವ ಕತೆಯಾಗುವದಲ್ಲವೇ? ಎಂದು ಕೇಳಿದರೆ ಇವರಿಗೆ ಕೊಂಚ ಕಠಿಣವಾಗಬಹುದು. ಕಾರಣ ಆ ಪ್ರಶ್ನ ಮಾಡಿ ಕಲ್ಲೆದೆಯವನಾಗುವ

ಇಚ್ಛೆಯು ಎನಗಿಲ್ಲ. ಇನ್ನು ಚಾಮರಸನ ಮಾತಿಗೆ ಅಕ್ಕನವರ ವಚನವು ತುಂಬಾ ಸಹಾಯಕವಾಗುವದರಿಂದ ಅದೇ ಆಧಾರ. ಆದ್ದರಿಂದ ನಾನು ಹೇಳುವದು ಐತಿಹಾಸಿಕ ದೃಷ್ಟಿ. ಹರಿಹರನನ್ನು ಹಿಡಿದು ಲಗ್ನವಾಗಿತ್ತೆಂದು ಹೇಳುವ ನಿಮ್ಮ ಮಾತಿಗೆ ಐತಿಹಾಸಿಕ ಅಧಿಕಾರ ಸೂತ್ರವನ್ನು ಆರಿಸುವದು ಕೊಂಚ ಮಟ್ಟಿಗೆ ನಿಮ್ಮ ಭಾಗಕ್ಕೇನೆ ಉಳಿದಂತಾಯಿತು.

"ಮದುವೆಯಾಗಿಲ್ಲವೆಂದು ಹೇಳಿದರೆ ತನ್ನ ಕಥಾನಾಯಿಕೆಯ ಮಹತ್ವವು ಮತ್ತಿಷ್ಟು ಉಜ್ವಲವಾಗಲೆಂಬುದೇ ಚಾಮರಸನ ಪೌರಾಣಿಕ ಭಕ್ತಿಯ ಉದ್ದೇಶವಾಗಿದೆ." ಎಂದು ಬರೆದಿರುವರು.

## ಇದಕ್ಕೂ ನನ್ನ ಮಾರುತ್ತರ.

ಕೇವಲ ಚಾಮರಸನೊಬ್ಬನದೇ ಪೌರಾಣಿಕ ಭಕ್ತಿಯಲ್ಲ. ಹರಿಹರದೇವನಲ್ಲಿ ಪೌರಾಣಿಕ ಭಕ್ತಿಗೇನೂ ಕಮ್ಮಿಯಿಲ್ಲ. ನಿದರ್ಶನಗಾಗಿ ರೇವಣಸಿದ್ಧೇಶ್ವರರಗಳೆಯಲ್ಲಿ—"ಸದಮಳವೆನಿಪ್ಪ ಲಿಂಗದೊಳು ಜನನಂ ಬೆತ್ತು" ಎಂದು ಹರಿಹರದೇವನು ಬರೆದಿರುವನು. ರೇವಣಸಿದ್ಧೇಶ್ವರರು ಬಸವಣ್ಣನವರ ಸಮಕಾಲೀನರೆಂಬ ಮಾತನ್ನು ತಾವೂ ಒಪ್ಪಬಹುದು. ಅಂದಮೇಲೆ ಅಂಥ ಸಮೀಪಸ್ಥರ ವಿಚಾರವಾಗಿ ಸ್ಥಾವರ 'ಲಿಂಗೋದ್ಭವ' ರೆಂದು ಮೂಢ ಭಕ್ತಿಯಿಂದ ಬರೆದದ್ದು ಪೌರಾಣಿಕ ಭಕ್ತಿಯ ಹೆಗ್ಗುರುತಲ್ಲದೆ ಮತ್ತೇನು ? ಲಿಂಗೋದ್ಭವವೆಂಬ ಶಬ್ದವು ನಮ್ಮ ಮತದಲ್ಲಿ ಲಿಂಗೈಕ್ಯವೆಂಬ ಶಬ್ದದಂತೆ ತಾತ್ವಿಕವಾಗಿಯೂ ಪೂಜ್ಯರಲ್ಲಿರುವ ಪೂಜ್ಯತೆಗಾಗೆಯೂ ಬಂದಿರುವ ಶಬ್ದವು. ಉದಾಹರಣೆಗಾಗಿ— ಪರಮಪೂಜ್ಯರೂ ಗುರುಗಳೂ ಆದ ಶ್ರೀ ಹಾನಗಲ್ಲ ಕುಮಾರಸ್ವಾಮಿಗಳವರು ಶಿವಯೋಗ ಮಂದಿರದಲ್ಲಿ ಲಿಂಗೈಕ್ಯರಾದರೆಂದು ಕಾವ್ಯ ಕಟ್ಟಿ ಬಣ್ಣಿಸಬೇಕಾದರೆ ಆ ಶಿವಯೋಗಮಂದಿರದಲ್ಲಿರುವ 'ಕೊಟ್ಟೂರ ಬಸವ' ಲಿಂಗದಲ್ಲಿ ಅಡಕಾದರೆಂದು ಬಣ್ಣಿಸಬಹುದೋ ? ಆದರೆ ಲಿಂಗೋದ್ಭವ-ಲಿಂಗೈಕ್ಯ ಶಬ್ದಗಳು ನಮ್ಮಲ್ಲಿ ಸಾಮಾನ್ಯವಾಗಿ ಸೃಷ್ಟಿಯ ನೇಮದಂತೆ ಜನಿಸಿ, ಮುಂದೆ ಸಮಾಜದಲ್ಲಿ ಪೂಜ್ಯರಾದವರಿಗೆ ಲಿಂಗೋದ್ಭವರೆಂದೂ- ಕೊನೆಗೆ ವಿಷಯಗಳ ವ್ಯವಸನವಿಲ್ಲದೆ ಲಿಂಗಾ! ಲಿಂಗಾ!! ಎಂದು ಐಕ್ಯರಾದವರಿಗೆ ಲಿಂಗೈಕ್ಯರೆಂದೂ ಹೇಳುವ ತಾತ್ವಿಕ ಶಬ್ದಗಳು. ಸಮಾಜದಲ್ಲಿ ಲಗ್ನನಾಗದೆ

ಇರುವವರನ್ನು ನಾವು ಈವಾಗಲೂ ಕಾಣಬಹುದು. ಸ್ಥಾವರ ಲಿಂಗೋ ದ್ಭವರನ್ನು ಮಾತ್ರ ಕಂಡಿಲ್ಲ; ಕಾಣಲಾರೆವು. ಹೀಗೆ ಸೃಷ್ಟಿಯ ನಿಯ ಮಕ್ಕೆ ಹೊರಗಾದ ಈ ವಿಚಾರವನ್ನಾದರೂ ಹರಿಹರದೇವನು ಪೌರಾ ಣಿಕ ಭಕ್ತಿಯನ್ನು ಬಿಟ್ಟು ಕಂಡು ಅಥವಾ ಕೇಳಿಯೇ ಬರದಿರಬಹುದೇ? ಇದರಿಂದ ಈ ಲೇಖಕರು 'ಹರಿಹರನು ಕಂಡದ್ದನ್ನು-ಕೇಳಿದ್ದನ್ನು ಹೇಳು ವದರಲ್ಲಿ ಮರೆಮಾಡಿಕೊಳ್ಳುವ ಸ್ವಭಾವದವನಲ್ಲ. [ರೇವಣಸಿದ್ಧೇಶ್ವರ ರಗಳೆಯಲ್ಲಿ ೨೩ ನೇ ಪುಟವನ್ನು ನೋಡಿದರೆ ತಿಳಿಯುವದು.] ಎಂದು ತಮ್ಮ ಮಾತಿಗೆ ಆ ರಗಳೆಯನ್ನು ಆಧಾರವಾಗಿ ಅಂಗೀಕರಿಸಿರುವದು ಎಷ್ಟರ ಮಟ್ಟಿಗೆ ನೆಲೆಯಾಗಿ ನಿಲ್ಲುವದೆಂಬುದನ್ನು ಓದುಗರೇ ವಿಚಾರಿಸಲಿ.

## ಹರಿಹರನ ಕಾವ್ಯದುದ್ದೇಶ.

ಹರಿಹರದೇವನು ವೀರಶೈವ ಕವಿಗಳಲ್ಲಿ ಆದಿಕವಿ; ಮಹಾಕವಿ. ಆತನು ಕನ್ನಡಜಾಣ; ಕವಿಪ್ರಾಣ. ಆತನು ಅನಂತರಗಳೆಗಳನ್ನು ಬರೆ ದಿರುವನು. ಶತಕಗಳನ್ನು ಬಿತ್ತರಿಸಿರುವನು. ಗಿರಿಜಾಕಲ್ಯಾಣವನ್ನು ದಯಪಾಲಿಸಿರುವನು. ಆದರೆ ಆತನು ರಚಿಸಿದ ರಗಳೆಗಳೆಲ್ಲಾ ಐತಿಹಾಸಿ ಕಕ್ಕೆ ತಳಹದಿಯಾಗಲಾರವೆಂಬುದು ನನ್ನ ಭಾವನೆ. ಹಲವು ಗ್ರಂಥಗ ಳನ್ನು ಬರೆಯುವಾಗ ಆ ಸಮಸ್ತ ಕಥಾನಾಯಕರ ನಿಜಸಂಗತಿಗಳನ್ನು ಆಮೂಲಾಗ್ರವಾಗಿ ತಿಳಿದು ಬರೆಯುವದು ಆಗಿನ ಕಾಲಕ್ಕೆ ಬಹು ಕಷ್ಟಕರವಾದುದಾಗಿತ್ತು. ಆದಕಾರಣ ಅವರವರ ವಿಷಯಕ್ಕೆ ಅಲ್ಪಸ್ವಲ್ಪ ಕೇಳಿದುದನ್ನೇ ತನ್ನ ಭಾವನೆಯಿಂದ ಬೆಳಸಿ ಬರದಿರಬಹುದೆಂದು ಹೇಳ ಬಹುದು. ಏಕೆಂದರೆ ಹಲವು ಕಡೆಗೆ ಹಲವು ವಿಧವಾಗಿ ವ್ಯತ್ಯಾಸಗಳು ಕಂಡುಬರುತ್ತವೆ. ಉದಾಹರಣೆಗಾಗಿ— ಕೊಳೂರು ಕೊಡಗೂಸಿನ ರಗಳೆ,[೧] ಕಣ್ಣಪ್ಪನರಗಳೆ,[೨] ಪ್ರಭುದೇವರರಗಳೆ, ಮೊದಲಾದವುಗಳು. ಅವ ನ್ನೆಲ್ಲಾ ಇಲ್ಲಿ ವಿಸ್ತರಿಸಿ ಬರೆದು ಲೇಖನವನ್ನು ಬೆಳಸುವ ಬಯಕೆಯಿಲ್ಲ.

---

೧ ಸದ್ಧರ್ಮದೀಪಿಕೆಯ ಸಂಪಾದಕರು ಪ್ರಕಟಿಸಿದ ಇದೇ ರಗಳೆಯ ಮುನ್ನುಡಿಯ ನ್ನೋದಿ ತಿಳಿಯಬಹುದು.

೨ ಹುಬ್ಬಳ್ಳಿಯಲ್ಲಿ ಹೊರಟ 'ಕಲ್ಯಾಣ' ವೆಂಬ ಕನ್ನಡ ಮಾಸಿಕದ ಮೊದಲನೆ ಸಂಚಿ ಕೆಯಲ್ಲಿ ಅನುವಾದ ಮಾಡಿದ ಚಕ್ರವರ್ತಿ ರಾಜಗೋಪಾಲಾಚಾರ್ಯರ ಕಣ್ಣಪ್ಪನ ಕತೆಯನ್ನು ತಿಳಿಸುವ ಬರಹದಲ್ಲಿ ಮನಗಾಣಬಹುದು.

ಒಟ್ಟಿನಲ್ಲಿ ಆತನ ಕಾವ್ಯಗಳ ಉದ್ದೇಶವು ಬಹುಭಾಗವಾಗಿ ಅಂತರಂಗಿಕ ವಿದೆಯೋ ಹೊರ್ತು ಬಹಿರಂಗ (ಚಾರಿತ್ರಿಕ) ವಾಗಿಲ್ಲ. 'ರವಿ ಕಾಣದುದನ್ನು ಕವಿ ಕಂಡ' ನೆಂಬ ಮಾತು ಇಂತಹವರಿಂದಲೇ ಸಾರ್ಥಕವಾಗಿತ್ತೋ ಏನೋ ?

ನಾನೆತ್ತಿ ಬರೆದ ಸದ್ಧರ್ಮದೀಪಿಕೆಯು ಸಂಪಾದಕರ ಅಭಿಪ್ರಾಯಕ್ಕೆ ಈ ಲೇಖಕರು ಬಹು ದೀರ್ಘವಾಗಿ ಕಟುವಾಗಿ ಉತ್ತರಿಸಿ ವೃಥಾ ಲೇಖಾಂಕವನ್ನು ಬೆಳೆಸಿರುವರು. ಆ ಸಂಪಾದಕರ ಮಾತಿನಲ್ಲಿರುವ ಒಂದು ಮೂಲ ಮರ್ಮವನ್ನು ಇವರು ತಿಳಿದುಕೊಂಡಿದ್ದರೆ ಇಷ್ಟೊಂದು ರೇಗಿ ಬರೆಯುತ್ತಿರಲಿಲ್ಲ. 'ಶೇಷಂ ಕೂಪೇನ ಪೂರಯೇತ್' ಎಂಬ ರೀತಿಯಂತೆ ಇವರು ಬರೆಯುವದರಲ್ಲಿ ಅವರ ಅಂತರಂಗದ ಆಶಯವನ್ನೇ ಗ್ರಹಿಸಿಕೊಂಡಿಲ್ಲ. ಆ ಸಂಪಾದಕರ ಅಭಿಪ್ರಾಯದಲ್ಲಿ ನಾವಿಷ್ಟನ್ನು ಮಾತ್ರ ಗಮನಿಸಬೇಕು. ಅವರು ಅಕ್ಕನು ಲಗ್ನವಾಗಿಲ್ಲವೆಂದು ಸ್ಪಷ್ಟವಾಗಿ ಹೇಳಿಲ್ಲವಾದರೂ ಅವರ ಅಭಿಪ್ರಾಯವು, ಹರಿಹರದೇವನ ಕಾವ್ಯವು ಚರಿತ್ರಾಂಶದ ಸತ್ಯಪೀಠದಲ್ಲಿ ನಿಲ್ಲಲಾರದೆಂಬುದನ್ನು ಮಾತ್ರ ವ್ಯಕ್ತಪಡಿಸುತ್ತದೆ. ಇದು ಇನ್ನೂ ಸ್ಪಷ್ಟವಾಗಬೇಕಿದ್ದರೆ 'ಕೊಳೂರು ಕೊಡುಗೂಸಿನರಗಳೆ' ಯ ಮುನ್ನುಡಿಯನ್ನು ನೋಡಬಹುದು.

## ಚಾಮರಸನ ಕಾರಣವೇ ಚನ್ನಬಸವಾಂಕನಿಗೆ.

ಇದೇ ಲೇಖಕರು ಹಿಂದೆ ತಮ್ಮ ಬರಹದಲ್ಲಿ ಚಾಮರಸನು ಹರಿಹರನ ಮಾರ್ಗವನ್ನೇಕೆ ಅನುಸರಿಸಲಿಲ್ಲವೆಂಬುದಕ್ಕೆ ಯಾವ ಉತ್ತರವನ್ನು ಹೇಳಿರುವರೋ ಅದನ್ನೇ ಚನ್ನಬಸವಾಂಕನಿಗೂ ಹೇಳಿದರೆ ಸಾಕು. ಇಲ್ಲವೆ ನನ್ನ ಮಾತಿನಲ್ಲಿಯೇ ಉತ್ತರಿಸಬೇಕೆಂದರೆ—ಅಕ್ಕಗಳು ಲಗ್ನವಾಗಿಲ್ಲೆಂದು ಆಕೆಯ ವಚನವನ್ನಾಗಿ ಅಥವಾ ಬೇರೆ ಯಾವದಾದರೂ ಆಧಾರವನ್ನಾಗಲಿ ಹಿಡಿದು ಬರೆದ ಚಾಮರಸನಿಗೆ ಹರಿಹರನ ರಗಳೆಯು ಹೇಗೆ ತ್ಯಾಜ್ಯವಾಗಿದೆಯೋ ಹಾಗೆಯೇ ಗುರುವಿನಪ್ಪಣೆಯಂತೆ ರಗಳೆಯನ್ನಾಧಾರವಾಗಿಟ್ಟುಕೊಂಡು (ಬಾಸಿಗ ಕಟ್ಟಲಿಕ್ಕೆ ಮಾತ್ರ) ಬರೆಯುವ ಚನ್ನಬಸವಾಂಕನಿಗೆ ಲಗ್ನವಾಗಿಲ್ಲೆಂದು ಹೇಳುವ ಚಾಮರಸನ ಮಾತು ಅರುಚಿಯಾಗಿರುವಲ್ಲಿ ಆಶ್ಚರ್ಯವೇನು ?

## ಚನ್ನಬಸವಾಂಕನು ಒಬ್ಬರನ್ನೂ ನಂಬಿಲ್ಲ.

ಚನ್ನಬಸವಾಂಕನು ಹರಿಹರನ ಸಂಪೂರ್ಣ ಮಾರ್ಗವನ್ನು ಅನುಸರಿಸಿಲ್ಲ. ಚಾಮರಸನ ಸಕಲ ರೀತಿಯನ್ನೂ ತಿರಸ್ಕರಿಸಿಲ್ಲ. ಬಾಸಿಗ ಕಟ್ಟುವದೊಂದನ್ನು ಮಾತ್ರ ಹರಿಹರನಿಂದ ಗ್ರಹಿಸಿದ್ದಾನೆ. ಉಳಿದುದು ಬಹು ಮಟ್ಟಿಗೆ ಚಾಮರಸನ ರೀತಿಯಲ್ಲಿಯೇ ಸಾಗಿದೆ. ಅಕ್ಕನು ರಾಣಿಯಾಗಿ ರಾಜ್ಯಭಾರವನ್ನು ವಹಿಸಿದ್ದು ಅವನದೇ ಆದ ಒಂದು ಸ್ವತಂತ್ರ ಮಾರ್ಗ. ಈ ಕವಿಯು ಅಕ್ಕನಿಗೆ ಬಾಸಿಗ ಕಟ್ಟಿ ಬ್ರಹ್ಮಚರ್ಯವನ್ನು ಕಾಪಾಡ ಹೊರಟಿದ್ದು ಅಷ್ಟೊಂದು ಸಮಂಜಸವಾಗಿ ತೋರುವದಿಲ್ಲ. ಏಕೆಂದರೆ ಕೌಶಿಕನು ಕಾಮವಾಸನೆಯ ದೌಡು ಕೇವಲ ಅಕ್ಕಿಯ ಕಾಳನ್ನು ಹಾಕಿಸಿಕೊಳ್ಳುವದರಲ್ಲಿ ಪರ್ಯವಸಾನವಾಗುವಂತಹದಲ್ಲ. ಅದರಲ್ಲಿಯೂ ಅಕ್ಕನು ರಾಜ್ಯ ಸೂತ್ರವನ್ನು ಕೈಯಲ್ಲಿ ತೆಗೆದುಕೊಂಡ ಮೇಲೆ ಆವಳಿಗೆ ಅರಸನ ಮನೆಯಲ್ಲಿ ಹಲವು ಕಾಲ ಸಂದಿರಬೇಕು. ಅನಿತೊಂದು ದೀರ್ಘಕಾಲದ ವರೆಗೆ ಕೌಶಿಕನು ಕೂಡದೇ ಇದ್ದನೆಂದು ಹೇಳುವದಾದರೂ ಅಷ್ಟೊಂದು ಸಯುಕ್ತಿಕವಾಗಿ ತೋರುವದಿಲ್ಲ. ಇವನು ಹರಿಹರನನ್ನು ನಂಬಿ ಬಾಸಿಗವನ್ನು ಹೇಗೋ ಕಟ್ಟಿದನಾದರೂ ಮುಂದೆ ಬ್ರಹ್ಮಚರ್ಯವನ್ನು ಹಾಳ ಮಾಡಲು ಇವನಿಗೆ ಧೈರ್ಯ ಸಾತಿರುವದಿಲ್ಲ. ಇದರಿಂದ ಇವನು ಹೇಳುವದು ಯಾವ ದಢಕ್ಕೂ ಹತ್ತದಂತಿದೆ. ಆದುದರಿಂದ ಇವನನ್ನೇ ಆಧಾರವಾಗಿಟ್ಟುಕೊಂಡು ಚರಿತ್ರವನ್ನು ಬರೆಯುವದು ಅಷ್ಟೊಂದು ಸಮಂಜಸವಾಗಿ ತೋರುವದಿಲ್ಲೆಂದು ನನ್ನ ಭಾವನೆಯು.

## ಹೆಸರಿನ ಪ್ರಶ್ನೆ.

ಈ ಲೇಖಕರು — ಇನ್ನುಳಿದ ಕವಿಗಳಾದರೂ ಅಕ್ಕಗಳ ತಂದೆ ತಾಯಿಗಳಿಗೆ ನಿರ್ಮಲ ಸುಮತಿ ಎಂದು ಕರೆದಿರುವರು. ಹಾಗಾದರೆ ಇಂತಹ ಹೆಸರನ್ನು ಯಾರಾದರೂ ಇಡುವ ರೂಢಿಯಿದೆಯೋ? ಎಂದು ಕೇಳಿರುವರು.

ಈ ಲೇಖಕರು ಈ ಪ್ರಶ್ನೆಯನ್ನು ಮಾಡಿದುದು ಬಹು ಆಶ್ಚರ್ಯಕರವಾಗಿದೆ. ಸುಬುದ್ಧಿ, ಸಹಸ್ರಬುದ್ಧಿ, ವಿಮಲಾ ಮೊದಲಾದ ಅದೇ ಅರ್ಥದ ಪರ್ಯಾಯ ಹೆಸರುಗಳನ್ನು ಬೇಕಾದಷ್ಟು ಕಾಣಬಹುದಾಗಿದೆ.

ಹೀಗೆ ಉತ್ತರಿಸುವದರಿಂದ ಚಾಮರಸನು ಹೇಳಿದ ಹೆಸರುಗಳೇ ಸತ್ಯವೆಂದು ಸಿದ್ಧ ಮಾಡುತ್ತೇನೆಂದು ತಿಳಿಯಬಾರದು. ತಕ್ಕಮಟ್ಟಿಗೆ ಹೆಸರಿಡಲು ಸಮಂಜಸವಾಗಿವೆಯೆಂಬುದೇ ನನ್ನ ತಾತ್ಪರ್ಯ. ಒಂದು ವೇಳೆ ಇವು ಕಾಲ್ಪನಿಕವಾದರೂ ಈ ಕವಿಗೆ ಅಷ್ಟೇನು ದೋಷವುಂಟಾಗದು. ಆದರೆ ಸಮಕಾಲೀನನೆಂದು ನೀವು ಅಭಿಪ್ರಾಯಪಡುವ ಹರಿಹರ ಕವಿಯು ಆ ವಿಧವಾಗಿ ಕಲ್ಪಿಸಿರುವದು ಒಪ್ಪದ ಮಾತಾಗಿದೆ. ಈ ಹೆಸರುಗಳು ಅಂದಿನ ಕವಿಗಳಿಗೆ ಅವಶ್ಯವಿರದಿದ್ದರೆ ಭಿನ್ನ ಭಿನ್ನವಾಗಿ ಹೇಳಲು ಏಕೆ ಹೆಣಗಿದರು ? ಹೆಸರು ಹೇಳದೆ ಹಾಗೆಯೇ ಕಥೆಯನ್ನು ವಿವರಿಸಿದ್ದರೆ ನಡೆಯುತ್ತಿರಲಿಲ್ಲವೇ ? ಉಳಿದ ಕವಿಗಳಾದರೂ ಹರಿಹರನಿಟ್ಟ ಹೆಸರುಗಳನ್ನು ಏಕೆ ಅನುಮತಿಸಲಿಲ್ಲ ?

ಇನ್ನು ಬೇರೆ ಕೆಲವರು ಹರಿಹರನು ಹೇಳುವ ಹೆಸರುಗಳು ಸತ್ಯವೆಂದು ಸಾಧಿಸಲು ಇಂತು ಪ್ರಶ್ನೆಯನ್ನು ಮಾಡಿರುವರು— ನಿರ್ಮಳ, ಸುಮತಿ ಇವುಗಳಾದರೂ ಶಿವಭಕ್ತ, ಶಿವಭಕ್ತೆಯಂತೆ ಗುಣವಾಚಕ ವಿಶೇಷಣಗಳಂತೆಯೇ ತೋರುವದಿಲ್ಲವೇ ? 'ಶಿವಭಕ್ತರುದರಂಬೊಕ್ಕು' ಎಂಬ ಶಾಪವಿರುವದರಿಂದ ಅದಕ್ಕೆ ಹೆಚ್ಚಾಗಿ ಅನ್ವಯಿಸುವಂತೆ ಹೆಸರುಗಳನ್ನು ಆರಿಸಿದ್ದರೆ ತಪ್ಪೇನು ?— ಮುಂದೆ ಚಾಮರಸನು ಅಕ್ಕನ ಚರಿತ್ರಾಂಶವನ್ನು ಮಾರ್ಪಡಿಸುವಾಗ ಹೆಸರುಗಳನ್ನೂ ಮಾರ್ಪಡಿಸಿರಬಹುದೆಂದು ಊಹಿಸಬಹುದಲ್ಲವೆ ? ಎಂದು ಮೂಬಗೆಯಾಗಿ ಕೇಳಿರುವರು. ಉತ್ತರ (೧) ಚಾಮರಸನ ಹೆಸರುಗಳು ಹರಿಹರನ ಹೆಸರುಗಳಂತೆ ಗುಣವಾಚಕಗಳಾಗಿದ್ದರೂ ಹರಿಹರನಿಟ್ಟ ಹೆಸರುಗಳಂತೆ ಯೌಗಿಕವಲ್ಲ. ಇವು ಲೋಕ ರೂಢಿ (ಬಳಕೆ) ಯಲ್ಲಿ ಬಂದಿವೆ. (೨) ಶಾಪಕ್ಕೆ ಸರಿಯಾಗಿ ಹೆಸರನ್ನಾರಿಸಿದರೂ ನೀವು ಸತ್ಯಾಂಶವಂತೆ ಭಾವಿಸಿದ್ದ ಶಾಪವೇ ಕಾಲ್ಪನಿಕವೆಂದು ನನ್ನ ಅಭಿಪ್ರಾಯವಿದೆ. ಹೇಗೆಂದರೆ ಹರಹರದೇವನ ಶರಣರ ರಗಳೆಗಳಲ್ಲಿ ವ್ಯಾಸರ ಪುರಾಣಗಳ ಶೈಲಿಯ ಛಾಯೆಯು ಹಾಸುಹೊಕ್ಕಾಗಿ ಹಬ್ಬಿಕೊಂಡಿದೆ. ಹರಿಹರನು ವ್ಯಾಸರಂತೆ ಶರಣರೆಲ್ಲರನ್ನೂ ಶಾಪಕೂಪದಲ್ಲಿ ಅದ್ದಿ ತೆಗೆದಿದ್ದಾನೆ. ಪುರಾಣಗಳಲ್ಲಿರುವಂತೆ ಪುಷ್ಪಕವಿಮಾನಗಳಲ್ಲಿಯೇ ಕೈಲಾಸಕ್ಕೆ ಕಳಿಸಿಕೊಡುತ್ತಾನೆ. ಅಲ್ಲಿ ಪೂರ್ವದಲ್ಲಿರುವ ಅವರ ಪದಗಳನ್ನೇ ತಿರುಗಿ ಅವರಿಗೆ ಸರಿ ಮಾಡಿಕೊಡುತ್ತಾನೆ. ಹೀಗಿದ್ದರೂ ಈ ಲೇಖಕರು—"ಚರಿತ್ರವನ್ನು ಅನುಸರಿಸಿಯೇ ಓಲಗದ

ಲ್ಲಿಯ ಶಾಪರಚನೆಯಿದೆ ಎಂದು ಹೇಳಿದರೆ ತಪ್ಪೇನು? ಎಂದು ಎರಡನೆಯದಾಗಿ ಅಭಿಪ್ರಾಯಪಡುವದು ಹರಿಹರದೇವನು ಕೇವಲ ಅಕ್ಕಗಳೊಬ್ಬರಿಗೇನೆ ಹಾಗೆ ಮಾಡಿದ್ದರೆ ಒಪ್ಪಬಹುದಾಗಿತ್ತು. ಏಕೆಂದರೆ ಅಕ್ಕಗಳು ತಮ್ಮ ವಚನದಲ್ಲಿ ತಮ್ಮ ಜನ್ಮ ಕಾರಣವನ್ನು ಹೇಳಿಕೊಂಡಿಲ್ಲ. ಆದರೆ ತಮ್ಮ ಜನ್ಮಕಾರಣವನ್ನು ತಿಳಿಸುವ ಬಸವ, ಅಲ್ಲಮರನ್ನೂ ಸಹ ಶಾಪದಿಂದಲೇ ಹುಟ್ಟಿಸಿರುವದರಿಂದ ಅವುಗಳಂತೆ ಇದನ್ನೂ ಸಹ ನಂಬಲಿಕ್ಕಾಗುವದಿಲ್ಲ. ಅವರ ಅವತಾರ ವಿಷಯಕ್ಕೆ ಶೂನ್ಯ ಸಂಪಾನೆಯಲ್ಲಿ—
"....ಕಲಿಯುಗದಲ್ಲಿ ಜಗಹಿತಾರ್ಥವಾಗಿ, ಬಸವನೆಂಬ ಗಣೇಶ್ವರನಾಗಿ ಬಂದು, ಗುರು, ಲಿಂಗ ಜಂಗಮ, ಪಾದೋದಕ, ಪ್ರಸಾದದ ಹಾದಿಯನೆಲ್ಲರಿಗೆ ತೋರಿ ಆರಾಧಿಸುವಲ್ಲಿ, ಭಕ್ತಿ ಕಾರಣ ಪ್ರಭುವೆಂಬ ಜಂಗಮವಾಗಿ ಲಿಂಗಾರ್ಚನೆಯ ಮಾಡಬಂದ. ಇಂತೀ ಪರಶಿವಲಿಂಗವು ಲೀಲಾವಿನೋದಕ್ಕೆ ದೇವ-ಭಕ್ತನೆಂಬ ಉಭಯ ನಾಮವ ಧರಿಸಿ, ಕ್ರಿಯಾಂಗದಿಂ ಬಂದುದನರಿಯದೆ, ಶಾಪದಿಂದ ಬಂದರೆಂದು ಸಂಕಲ್ಪಿಸಿ ನುಡಿವರಿಗೆ ನಾಯಕನರಕ ತಪ್ಪದು ಕೂಡಲಚನ್ನಸಂಗಮದೇವಾ." (ಪುಟ ೨-೩) ಎಂದು ಹೇಳಿದೆ. ಇನ್ನು ಇವರು ಮೊದಲನೆಯದಾಗಿ 'ಶಿವನ ಓಲಗದಲ್ಲಿಯ ಸಂದರ್ಭಕ್ಕೆ ಅನುಸರಿಸಿ ಕಥಾರಚನೆಯಿದೆ.' ಎಂದು ಹೇಳಿರುವಂತೆ ಆ ಸಂದರ್ಭವನ್ನು ಹರಿಹರನೇನೂ ಕಂಡಿಲ್ಲ. ಕಲ್ಪಿಸಿ ಕಥೆಗೆ ಪೀಠಿಕೆಯನ್ನು ಬರೆದಿರುವನು. ಕಲ್ಪನೆಯ ಪೀಠಿಕೆಗೆ ಅನುಗುಣವಾಗಿ ಕಥೆಯನ್ನಾದರೂ ಹರಿಹರನು ಮಾರ್ಪಡಿಸಿರಬಹುದೆಂದು ಊಹಿಸಬಹುದಾಗಿದೆ.

ಇನ್ನೊಂದು. ಮುಖ್ಯ ಲೇಖಕರು ತಮ್ಮ ಮೊದಲನೆ ಲೇಖಾಂಕದ ಕೊನೆಗೆ ಅಡಿಟಿಪ್ಪಣಿಯಲ್ಲಿ ಅಕ್ಕನು ಕಲ್ಯಾಣಕ್ಕೆ ಹೋದ ಸುದ್ದಿಯನ್ನು ಹರೀಶ್ವರನೇಕೆ ಬರಿಯಲಿಲ್ಲ? ಎಂಬ ಪ್ರಶ್ನೆಗೆ ಹಿಂದೆ ಆಗಸ್ಟ ತಿಂಗಳಲ್ಲಿ ಕೊಟ್ಟ ತಮ್ಮ ಲೇಖವನ್ನು ತೋರಿಸಿದ್ದಾರೆ. ಆದರೆ ಅದರಲ್ಲಿ 'ತರುಣ ಕರ್ನಾಟಕದಲ್ಲಿ' ಕೊಟ್ಟಂತೆ ಇದೆಯೇ ಹೊರ್ತು ಹೆಚ್ಚಿನದೇನೂ ಇಲ್ಲ. ಅದನ್ನೆಲ್ಲಾ ಜುಲೈ ಸಂಚಿಕೆಯಲ್ಲಿ ಖಂಡಿಸಿ ಉತ್ತರ ಬರೆದಿರುವದರಿಂದ ಅದು ನನಗೆ ಮಾನ್ಯವಿಲ್ಲ, ಮತ್ತು ಪೀಠಿಕೆಯಲ್ಲಿ 'ಶಿವಭಕ್ತರ್ಗೆ ಬೆಸಕೆಯ್ದು' ಎಂದು ಬರೆದ ಮಾತಿಗೆ ಕಲುಮುಠದ ಹುಲುಮುಠದ ಶಿವ

ಭಕ್ತರೇ ಅನ್ವಯವಾಗುತ್ತಾರೆ ಎಂದು ಹಿಂದಿನ ಲೇಖದಲ್ಲಿಯೇ ವಿಸ್ತಾರ ವಾಗಿ ಹೇಳಿದ್ದೇನೆ. ಮತ್ತು ಈ ಲೇಖಕರು ಮೊದಲನೆಯ ಸ್ಥಲದ ೧೨೧ ನೇ ಪಂಕ್ತಿಯಲ್ಲಿಯೂ ಹೇಳಿದೆ ಎಂದು ಬರೆದಿರುವರು. ಆ ಪಂಕ್ತಿ ಯಲ್ಲಿ ಆ ವಿಚಾರವೇ ಇಲ್ಲ. ಇನ್ನು ಅದೇ ಸ್ಥಲದ ೧೨೮ ನೇ ಪಂಕ್ತಿ ಯಲ್ಲಿ 'ಶಿವಭಕ್ತರ್ಗೆ ಶರಣೆಂದು' ಎಂಬ ಪದವಿದೆಯಾದರೂ ಅದು ಕಲ್ಯಾಣದ ಶಿವಶರಣರನ್ನು ಬೋಧಿಸುವದಿಲ್ಲ. ಮುಂದೆ ೭ ನೇ ಸ್ಥಲ ದಲ್ಲಿ 'ಶಿವಭಕ್ತರ್ಗೆಹೊನ್ನಿತ್ತು ನೋಡುವೆನೆಂದು' (ಪಂ-೧೨೩) ಎಂಬು ದಕ್ಕೆ ಯಾವ ಶಿವಭಕ್ತರರ್ಥವಾಗುವದೋ ಅವರೇ ಇಲ್ಲಿಯೂ ಅನ್ವಯಿಸು ವರು. ಅಕ್ಕನ ಅನುಭವಮಂಟಪದ ಸಂವಾದವು ಸುಂದರವಿದ್ದುದರಿಂದ ಬಿಟ್ಟಿದ್ದರೆ ಕಲ್ಯಾಣಕ್ಕೆ ಹೋದುದನ್ನಾದರೂ ಹೇಳಬಾರದೇ ? ಇದಿರಲಿ, ಪ್ರಭುದೇವರ ರಗಳೆಯಲ್ಲಿ ಅನುಭವ ಮಂಟಪದ ವಿಚಾರವೇಕಿಲ್ಲ ? ಅನುಭವ ಮಂಟಪದ ಅಧ್ಯಕ್ಷನು ಅಲ್ಲಮನು. ಅದರಿಂದ ಆತನ ಚರಿ ತ್ರೆಗೆ ಹೆಚ್ಚು ಕಳೆಯೇರಿದೆ. ಅಂತಹ ವಿಚಾರವನ್ನು ವರ್ಣಿಸಬೇಕಾದುದು ಅಗತ್ಯವಲ್ಲವೇ ? ಕೇವಲ ಬಸವನಿಗೆ ಭೆಟ್ಟಿಯಾಗಿ ಮಾತಾಡಿ, ಸೊನ್ನ ಲಾಪುರಕ್ಕೆ ಆಮೇಲೆ ಬಂದು ಸಿದ್ಧರಾಮನ ಕಂಡು ಅಲ್ಲಿಂದ ಹಾಗೆಯೇ ಕೈಲಾಸಕ್ಕೆ ಹೋದನೆಂದು ಹೇಳಿದೆ. ಇಲ್ಲಿ ಶೂನ್ಯ ಸಿಂಹಾಸನಾರೋಹಣದ ವಿಚಾರವನ್ನು ಹೇಳುವದವಶ್ಯವಿತ್ತು. ಅದನ್ನು ಚಾಮರಸನು ಒಂದು ಪ್ರಕರಣವನ್ನೇ ಮಾಡಿ ಹೇಳಿದ್ದಾನೆ. ಹರಿಹರನು ಹೇಳದಿರುವದನ್ನು ಈತನು ಹೇಳಿದುದು ಸುಳ್ಳೆಂದು ಹೇಳಬಹುದೇ ? ರೇವಣಸಿದ್ಧೇಶ್ವರ- ಬಸವೇಶ್ವರ ರಗಳೆಗಳಲ್ಲಿ ಅವರವರ ಪವಾಡಗಳನ್ನು ಪ್ರಕರ್ಣಮಾಡಿ ವರ್ಣಿಸಿದ ಹರಿಹರನು ಪ್ರಭುವಿನ ನಡೆದು ಹೋದ ಗೊಗ್ಗಯ್ಯ-ಮುಕ್ತಾ ಯಕ್ಕ-ಗೋರಕ್ಷ ಮೊದಲಾದವರ ಸಂವಾದವನ್ನೂ ಶೂನ್ಯಸಿಂಹಾಸನಾ ರೋಹಣವನ್ನೂ ವರ್ಣಿಸುವದು ಬಹು ಭಾರವಾಗಿ ಬಿಟ್ಟಿರಬಹುದೇ ? ಹಾಗು ಈ ರಗಳೆಯಲ್ಲಿ ಅಕ್ಕನಿಗೂ ಅಲ್ಲಮನಿಗೂ ಇರುವ ಯಾವ ಸಂಬಂ ಧವೂ ತೋರುವದಿಲ್ಲ. ಅಕ್ಕನ ರಗಳೆಯಲ್ಲಿಯೂ ಹೀಗೆಯೆ. ಇವೆಲ್ಲವು ಗಳಿಂದ ಶರಣರ ಕಾಲದಿಂದೀಚೆಗಿದ್ದ ಹರಿಹರನು ಶರಣರ ಸಂಪೂರ್ಣ ಯಥಾರ್ಥ ಚರಿತ್ರಗಳನ್ನು ಸಂಪಾದಿಸಲು ಸಮರ್ಥನಾಗದೆ ಅಲ್ಪಸ್ವಲ್ಪ ಕೇಳಿದ್ದನ್ನೇ ಕಾವ್ಯದಲ್ಲಿ ಬೆಳಸಿ ಬರೆದಿರುವನೆಂದು ಸ್ಪಷ್ಟವಾಗುವದಿಲ್ಲವೇ?

## ಅಕ್ಕನು ದಿಗಂಬರೆಯಾದದ್ದು ಸತ್ಯ.

ಬೇರೆ ಕೆಲವರು ಅಕ್ಕನು ದಿಗಂಬರೆಯಾಗಿದ್ದಿಲ್ಲವೆಂದು ವಾದಿಸುವರು. ಇನ್ನು ಕೆಲವರು ದಿಗಂಬರೆಯಾಗಿದ್ದಳೆಂದು ಹೇಳಲು ಸಬಲವಾದ ಪ್ರಮಾಣವಿಲ್ಲ ಎಂದು ಮುಂತಾಗಿ ಬರೆದಿರುವರು. ಆದರೆ ಅಕ್ಕಗಳೇ ತಮ್ಮ ಯೋಗಾಂಗ ತ್ರಿವಿಧಿಯಲ್ಲಿ--

* ಉಟ್ಟ ಸೀರೆಯು ಸೆಳೆದು । ಕೊಟ್ಟ ತೊಡಿಗೆಯು ಹರಿದು<br>
ಬಿಟ್ಟೆನೋ ನಾನು ಬಿಡು ಮುಡಿಯು ಎಲೆ ದೇವ! ।<br>
ಕೊಟ್ಟೆನೋ ಎನ್ನ ತನುಮನವ ॥೪೨॥

ಎಂದು ಸ್ಪಷ್ಟವಾಗಿ ಹೇಳಿಕೊಂಡಿರುವರು. ಆದ್ದರಿಂದ ಅಕ್ಕಗಳು ದಿಗಂಬರೆಯಾದದ್ದೇ ಸತ್ಯ.

(ಕ್ರಮಶಃ)

* ಈ ಯೋಗಾಂಗತ್ರಿವಿಧಿಯನ್ನು ಶ್ರೀ ಬಿ ಶಿವಮೂರ್ತಿಶಾಸ್ತ್ರಿಗಳು ಹೊರಡಿಸಿದ "ಶರಣಸಾಹಿತ್ಯ" ಮಾಸಿಕದ ಮಾರ್ಗಶಿರಮಾಸ ಸಂಚಿಕೆಯಲ್ಲಿ ಪ್ರಕಟಿಸಿದ್ದೇನೆ.

# ಶ್ರೀ ಹಾನಗಲ್ಲ ಕುಮಾರ ಸ್ವಾಮಿಗಳು ರಚಿಸಿದ ಹಾಡು ಗಬ್ಬಗಳು.

(ಹಿಂದಿನಿಂದ ಮುಂದೆ ಸಾಗಿದ್ದು.)

೨

ಅನಾದಿ ವೃಥಾ ಮೂಢಮತಿ ।
ಜನನ ಮರಣದೊಳು ಕೂಡಿ ।
ಘನ ಸುಖ ಕೆಡಿಪುದು ನೋಡೋ ॥

೩

ಪರಾತ್ಮಕ ಸಂಸಾರವಹ ।
ಪರಶಿವಯೋಗವನ್ನೈದಿ ।
ಸುರಸ ಸುಖವ ನೀ ಪೊಂದೊ ॥

---

## ಪದ್ಯ ೯

(ರಾಗ- ಝಂಜುಟಿ)

ಮಾರಾರಿಯೆ ಪಾಲಿಸು ಕಾಲಾರಿ ಬೇಗ ।
ಪಾರುಗೊಳಿಸದೆನ್ನ ಮಾಯಾಸಂಗ ॥ಪ॥

೧

ಮನಸಿಜನಾಗಿತಾ-। ಘನ ಬಾಧೆಗೊಳಿಪನು ।
ವನಿತೆಯರೊಲವಿತ್ತು । ವಿನಯದಿ ಸಾಧಿಪ ॥
ಪನುಮತದಿಂದಿವ ನಾಶನಾಸಿಸಿ ॥

೨

ಮರಣದ ಭೀತಿಯಿಂ । ಕೊರಗುತ್ತಿರುವೆನು ।
ಕರುಣವಿಲ್ಲದ ಯಮ-। ದೂತರ ಕಾಟದಿ ।
ದುರುಳರ ಸಾಹಸ ಪರಿಹರಿಸಭವ ॥

೩

ಆಶಾಪಾಶದಿ। ಘಾಸಿಯಾಗುವೆ ನಾನು
ಮೋಸದ ಮಾಯೆಯು। ಬಲೆಯೊಳು ವಾಸಿಪೆ।
ಭಾಸುರಾನಂದ ಶಿವಯೋಗದೊಳಿರಿಸಿ॥

## ಬಸವೇಶ್ವರ ಸ್ತೋತ್ರ

### ಪದ್ಯ ೧೦

(ರಾಗಃ- ದರ್ಬಾರಿ ಕಾನಡಾ)

ಶ್ರೀ ಪರಾತ್ಪರ ಬಸವೇಶ್ವರನನು।
ಸಾರುತ ಸೇರುತ ಭಜಿಸೊ ನೀ ಮಾನವ ॥ಪ॥

೧

ಭಕ್ತಿಯು ಮಾರ್ಗದಿ ನಡೆಯುವ ಜನರಿಗೆ।
ಶಕ್ತಿಯನರಿತು ಫಲಗಳ ಕೊಡುವ।
ಮುಕ್ತಿಯು ಪಥವನ್ನೀಯುವ ಪರಮ॥

೨

ವೀರಶೈವ ಮತ ಜೀರ್ಣೋದ್ಧಾರಕ।
ಸಾರ ಸುಬೋಧಕ ಪರತರ ಶೋಧಕ।
ಪೂರಿತ ಕರುಣೆದಿ ದೀನ ಸುರಕ್ಷಕ॥

೩

ಶಿವಯೋಗದಲ್ಲಿ ಸುವಿರಾಗದಲಿ।
ಭವಿಗಳ ನೀಕ್ಷಿಸಿ ಭಕ್ತರ ಮಾಡಿದ।
ಸುವಿವೇಕದ ಗುರುವಿಗೆ ಗುರುವೆನಿಸಿದ॥

### ಪದ್ಯ ೧೧

(ರಾಗಃ- ದಕ್ಷಿಣಾದಿ ಕಾನಡಾ)

ಗುರು ಬಸವೇಶನ ಹರುಷದಿ ಸ್ಮರಿಸೋ।
ಸ್ಥಿರ ಸುಖ ಪೊಂದುವೆ ನಿರುತದಿ ಭಜಿಸೋ ॥ಪ॥

೧

ಪರಶಿವನಾಜ್ಞೆಯಿಂದಿಳಿದೀ ಜಗವ ।
ಪರಿಪಾಲಿಸಿ ಬೋಧಿಸಿ ಸದ್ಗುಣವ ॥

೨

ಶೈವ ಮತವ ಬಿಟ್ಟು ವೀರಶೈವದ ।
ದಿವ್ಯ ಮಾರ್ಗವ ಹೊಂದಿ ನೆರೆ ಶೋಭಿಸಿದ ॥

೩

ಹೀನದೆಶೆಯೊಳಿಹ ವೀರಶೈವರನು ।
ಕಾಣುತೆ ಕರುಣದಿ ಪೊರೆದಿಹ ಮಹಿಮನ ॥

೪

ನಿಗಮಾಗಮ ತತ್ವ ಸಾರವನರುಪುವ ।
ಬಗೆಯನು ಬೋಧಿಸಿ ಜಗದೊಳು ಮೆರೆವ ॥

೫

ಸಾಧಕ ಸಿದ್ಧರ ಮಾರ್ಗದ್ವಯವನು ।
ಬೋಧಿಸಿ ತೋರಿಸಿ ಜಗದೊಳೊಪ್ಪಿಹನು ॥

೬

ಪರುಷ ಪಂಚಕದಿಂ ದುರಿತವನೊರಿಸುತ ।
ಪರಶಿವ ಲಿಂಗವನವರೊಳು ಬೆರೆಸಿಹ ॥

---

## ಪದ್ಯ ೧೨

(ರಾಗಃ- ಭೈರವಿ)

ವೀರಶೈವಾಚಾರ ಪರಾ-।
ಘೋರ ಬಸವ ಧೀರಾ ॥ ಪ॥

೧

ಆದಿ, ನಾದ, ಬಿಂದು ಕಲಾ ; ಹೃದಯಾಲಯ ನಾಶಮುಲ॥
ಮೋದ ಘನಾನಂದವನ । ಬೋಧಾಮೃತ ಸದನ ॥

೨

ಕಾಮ ಕಲಿಯ ವೈರಿ ಸದಾ । ಮಮತಾ ಮತಿಪಾರಿಸಿದ ॥
ಸೋಮಧರಾಪಾರಸುಖ । ಪ್ರೇಮಾಬ್ಧಿ ಶಿವಸಖ ॥

೩

ತ್ರಾಹಿ ಶೈವಯೋಗ ನಿದ್ರ । ವಹಿಸಿ ಪರಮ ಶಾಂತಿಮುದ್ರ ॥
ಸಾಹಸದಿಂ ಕೂಡಿಸುತ । ಸೋಹಂ ಭಾವಯುತ ॥

---

## ರೇಣುಕ ಸ್ತೋತ್ರ

### ಪದ್ಯ ೧೩

(ರಾಗಃ- ಭೀಮಪಲಾಸ)

ಸುಶಾಂತ ಗುರುವರೇಣ್ಯ ।
ರೇಣುಕಾರ್ಯ ಭೋ ॥ಪ॥

೧

ವರ ಶೈವ ಮತಸಾರ । ಪರಮಾವತಾರ ।
ಗುರುದೇವ ನೀನೆ ಪರಿಪಾಲಿಸೈ-
ಮತಾಚಾರ್ಯ ॥

೨

ಕಪಟವಕಟ ಮೋಸ । ಚಪಲ ಕುದೋಷ ।
ವಿಪರೀತ ಮಾಡಿ । ಸುಪಥವೀಯೋ-
ಮಹಾಚಾರ್ಯ ॥

೩

ಶಿವಯೋಗಿ ಕುಲಪಾಲ । ಭವನಾಶಮೂಲ ।
ಜವದಿಂದ ನೋಡು । ತವೆ ಮೋದದಿ-
ಶಿವಾಚಾರ್ಯ ॥

---

## ತೋಂಟದಾರ್ಯರ ಸ್ತೋತ್ರ

### ಪದ್ಯ ೧೪

(ರಾಗಃ- ದೇಸ್)

ಶ್ರೀ ಜಗದ್ಗುರು ವರ ತೋಂಟದಾರ್ಯ ।
ಸುಜನ-ಮನವಸಾಘನಸಾರ ಶೌರ್ಯ ॥ಪ॥

೧

ಮಾಯಾ ಮೋಹ ಹೇಯಗೊಳಿಸಿ ಬಿಡದು ।
ಕಾಯಜ ಮದಹರ ಜಯಮೀಯ ಪೊರೆದು ॥

೨

ಜನನ ದೂರನೆನಿಸಿ ನೋಡಿ ದಯದಿ ।
ಗಣ ಸಮೂಹದಿ ಗಣಿಸೊ ನೀ ಮುದದಿ ॥

೩

ಸಿದ್ಧಲಿಂಗ ಶುದ್ಧ ಕ್ಷೇತ್ರಾಧೀಶ ।
ತಿದ್ದುತಿ ಮನವನು ಬದ್ಧನೆನಿಸದೆ ತೋಷ ॥

---

### ಪದ್ಯ ೧೫

(ರಾಗಃ- ಭೂಪ)

ಪರಶಿವಯೋಗದ ಸಾರ ।
ಕರುಣ ವಿಹಾರ । ತೋಂಟದಾರ್ಯ ಹೋ ॥ಪ॥

೧

ಮನವು ನೇತ್ರವು ಸುಷುಮ್ನದಿ ಕೂಡಿ ।
ತನುವನು ಮೀರಿ ಶಿವಸುಭಾನುತೋಷ ।
ಆನಂದಸಕ್ತ ಗುಹದಲಿ ನೀ ಅನನ್ಯ ವಿಲಾಸಹೋ ॥

೨

ಶರಣಲೋಕ ಮುನ್ನ ಪರಿದು ಬಂದು ನಿನ್ನ ।
ಮರೆಯೊಳು ಸಾರೆ ವರ ವಿಜ್ಞಾನವನ್ನು ।
ಪರಂಪರಾನಂದಾಬ್ಧಿಯಾ ಕರುಣಿಸಿ ಪರಿಪಾಲಿಸೆನ್ನಹೋ ॥

೩

ಸಿದ್ಧಲಿಂಗ ಭೂಪ ಬದ್ಧಜೀವ ಪಾಶ ।
ವಿದ್ಧುರೆ ಸಾರೆ ಸಿದ್ಧಶಿವಯೋಗ ವಾಸ ।
ಸಿದ್ಧಾಂತ ಶೇಖರಾವೇಶ ಮುದದೊಳು ನೀ ಪರಿಪಾಲಿಸೇಶಹೋ ॥

---

## ಪದ್ಯ ೧೬

(ರಾಗಃ- ಭೈರವಿ)

ಶಿವಮೂರ್ತಿಯೆ । ತವೆ ಪೂಜಿಸುವೆ ॥ಪ॥

೧

ತರು ವಿಸ್ತಾರವನಿರದೈಕ್ಯಗೊಂಡ । ನೆರೆ ಬೀಜದ ಪರಿ ।
ಶರೀರಾದಿ ಜಗವ ಮೀರಿ ತೋರ್ಪ ।

೨

ತವೆ ಇಷ್ಟಾರ್ಥವ ಭುವಿಯೊಳು ಕೊಡುವ । ಭವದೋಷವರತಿ ।
ಜವದೊಳ್ ನಾಶಿಪ ದೇವದೇವಾ ॥

೩

ಲಿಂಗ ರೂಪದ ಜಂಗಮಾರ್ಯಗೆ । ಮಂಗಲ ಗುರುವರ ।
ಕಂಗಳಾಲಯ ಶಿವಯೋಗ ದೇವಾ ॥

---

## ಪದ್ಯ ೧೭

(ರಾಗಃ- ಕೇದಾರಗೌಳ)

ದೇವ! ಕಾಯೋ ನೀ ಮಾಯಾತೀತನೆ ॥ಪ॥

೧

ವೀರಶೈವವ ಸಾರಿ ತೋರುವ ।
ಭೂರಿ ಭಕ್ತಿಯುಕ್ತರ ಪಾರುಗೊಳಿಸುತೆ ॥

೨

ಶಿಷ್ಟ ಮತವಿದು ನಷ್ಟಗೊಳ್ವುದು ।
ತುಷ್ಟಿಗೊಳಿಸುವೆನೆಂದ-ಭೀಷ್ಟ ವೀಯುತೆ ॥

೩

ಮತವೆ ನಿನ್ನದು ಪತಿಯೆ ಕಾಯ್ವುದು ।
ಗತಿಯ ಕಾಣದಿರ್ಪರ ಜತಿಯುಗೂಡುತೆ ॥

೪

ಇಂತು ಸಭೆಯೊಳು ಕುಂತು ಜನಗಳು ।
ಪಂಥಗಾರರಾಗಿರುವಂತೆ ಮಾಡುತೆ ॥

೫

ಬೇಡಿಕೊಂಬೆನು ಮಾಡು ಕೃಪೆಯನು ।
ಮೂಢರಾದ ಜನಗಳ ನೋಡಿ ಮರೆಯದೆ ॥

೬

ವೇದವೆಂಬುದು ಭೇದವೀವುದು ।
ಬೋಧಿಸೈಕ್ಯ ಮತದ ಹಾದಿ ತೋರಿಸಿ ॥

೭

ಮತವು ನಿನ್ನಯ ಹಿತದ ಸೀಮೆಯ ।
ಗತಿಯೊಳೈಕ್ಯಗೊಳ್ಳುವ ಮತಿಯ ಕೂಡುತೆ ॥

೮

ಸ್ವಂತಪರರಿಗೆ ಸಂತ ಜನರಿಗೆ ।
ಅಂತರ್ಯಾಮಿಯಾಗಿ ಹಂತೆ ತೊಲಗಿಸಿ ॥

೯

ಸಿದ್ಧಲಿಂಗನೆ ಪ್ರೊದ್ದಿದವರನೆ ।
ಶುದ್ಧರಾಗಿರುವಂತೆ ಶಿದ್ಧಿ ತೋರುತೆ ॥

---

## ಮಂಗಲಗಳು ೧೮

(ರಾಗ-ಮಾಂಡ)

ಶಿವಮಂಗಲವನು ಕೊಡು ಬೇಗ ।
ಭವದುಃಖದಿ ಬಳಲುವೆ ವೀಗ ॥ಪ॥

೧

ಮನುಜ ಜನ್ಮವನು ತೊಟ್ಟಿಹವು ।
ಮನದಿ ಹೀನಗುಣ ತೊಡರಿಹವು ॥

ಘನಮಹಿಮರ ಪಥ ಬಿಟ್ಟಿಹವು ।
ಮುನಿವಂದನೆ ನಮಿಸುತ್ತಿಹವು ॥

೨

ಹುಟ್ಟಿ ಹುಟ್ಟಿ ಸಾಯುವುದು ನೋಡಿ ।
ಕಷ್ಟತರದಿ ಬಹು ಚರಿಸಾಡಿ ॥
ದುಷ್ಟರೆನಿಸಿಕೊಂಬುದು ನೋಡಿ ।
ಶಿಷ್ಟನೆ ನೀನತಿ ದಯಗೂಡಿ ॥

೩

ಇದ್ದ ಗುಣಗಳೆಲ್ಲವ ಮರೆಸಿ ।
ಶುದ್ಧಗುಣದಿ ಮನವನ್ನಿರಿಸಿ ॥
ಸಿದ್ಧರಾಮಗುರು ದಯ ಕರಿಸಿ ।
ತಿದ್ದುವದದಿ ನೀ ಮುದವಿರಿಸಿ ॥

---

## ಮಂಗಲ ೧೯

(ರಾಗ-ಕಾಂಬೋದಿ)

ಮಂಗಳಾರತಿ ದೇವಗೆ ಶಿವಯೋಗಿಗೆ । ಕಂಗಳಾಲಯಸಂಗಗೆ ।
ಜಂಗಮಲಿಂಗಭೇದದ ಸ್ವಯಚರಪರ । ದಿಂಗಿತವರುಪಿದಂತಾಚರಿಸಿದ-
ಮುಹಮಗೆ ॥ಪ॥

೧

ಒಂದೆ ಮಠದಿ ವಾಸಿಸಿ ಸದ್ಭಕ್ತಿಯಿಂ ।
ಬಂದಬಂದವರನು ಬೋಧಿಸಿ ॥
ನಿಂದು ಏಕಾಂತದಾನಂದದ ಯೋಗದ ।
ಚಂದವನರಿದನುಷ್ಠಾನಿಸು ಶಿವ ಸ್ವಯಗೆ ॥

೨

ಚರಿಸಿ ಭಕ್ತರ ಭಕ್ತಿಯ ಕೈಕೊಳ್ಳುತ್ತ ।
ಭರದಿ ಪರತರ ಬೋಧೆಯ ॥

(ಮುಂದುವರಿವುದು.)

# 'ಶರಣಸಾಹಿತ್ಯ' ಮಾಸಪತ್ರಿಕೆ.

(ಸಂಪಾದಕರು)

---

ಬೆಂಗಳೂರ ನಗರದಲ್ಲಿ ಹೋದ ತಿಂಗಳಿನಿಂದ "ಶರಣಸಾಹಿತ್ಯ" ಪತ್ರಿಕೆಯು ಹೊರಡುತ್ತಲಿದ್ದು ಇದರ ಪ್ರಥಮ ಸಂಚಿಕೆಯು ನಮ್ಮ ಕೈಸೇರಿದೆ. ಇದರ ಸಂಪಾದಕರು ಕರ್ನಾಟಕದಲ್ಲೆಲ್ಲ ಬಹು ಪ್ರಸಿದ್ಧಿ ಹೊಂದಿದ ವೇ. ಮೂ. ಶಿವಮೂರ್ತಿ ಶಾಸ್ತ್ರಿಗಳಿದ್ದು ಅವರು ಈ ಪ್ರಯತ್ನವನ್ನು ಕೈಕೊಂಡದ್ದಕ್ಕೋಸ್ಕರ ನಾವು ಅವರನ್ನು ಅತ್ಯಂತವಾಗಿ ಅಭಿನಂದಿಸುತ್ತೇವೆ. ಶಾಸ್ತ್ರಿಗಳವರು ಕರ್ನಾಟಕತ್ವದ ಅರಿವನ್ನು ಕರ್ನಾಟಕದ ಮೂಲೆ ಮೂಲೆಗೂ ತಮ್ಮ ಕೀರ್ತನಗಳ ಮೂಲಕ ಹರಡಿರುತ್ತಾರೆ. ಅವರು ಮಾಡಿದ ಈ ಸೇವೆಯು ಮಹತ್ತರವಾದದ್ದು. ಅವರು ಉತ್ತಮ ವಾಗ್ಮಿಗಳಿದ್ದಂತೆಯೇ ಮೇಲ್ತರದ ಲೇಖಕರೂ ಸಂಶೋಧಕರೂ ಇರುವರು. ಇದು ಶಿವಾನುಭವ ಪತ್ರಿಕೆಯಲ್ಲಿ ಅವರು ಆಗಿಂದಾಗ್ಗೆ ಪ್ರಕಟಪಡಿಸುತ್ತ ಬಂದ ಲೇಖಗಳ ಮೇಲಿಂದ ಎಲ್ಲರಿಗೂ ಚನ್ನಾಗಿ ತಿಳಿದುಬರುವಂತೆ ಇದೆ.

ವೀರಶೈವ ವಾಙ್ಮಯವು ಅಪಾರವಾದದ್ದು. ಅಚ್ಚಾಗದೆ ಇದ್ದ ಹಸ್ತಲಿಖಿತ ಗ್ರಂಥಗಳು ಇನ್ನೂ ಅಸಂಖ್ಯಾತವಾಗಿರುತ್ತವೆ. ಹಾಗೆಯೇ ವೀರಶೈವರ ರಾಜಕೀಯ ಮತ್ತು ವಾಙ್ಮಯಾತ್ಮಿಕ ಇತಿಹಾಸವೂ ಪ್ರಕಾಶಕ್ಕೆ ಬಂದಿಲ್ಲ. ಈ ಕಾರ್ಯವನ್ನು ಮಾಡತಕ್ಕ ಯಾವ ಪತ್ರಿಕೆಯೂ ದಕ್ಷಿಣ ಕರ್ನಾಟಕದಲ್ಲಿ ಬಹು ದಿವಸಗಳಿಂದಲೂ ಇದ್ದಿರಲಿಲ್ಲ. ಈ ಕಾರ್ಯವನ್ನು ಶರಣಸಾಹಿತ್ಯ ಪತ್ರಿಕೆಯು ಈಗ ಕೈಕೊಂಡಿದ್ದು, ಇದರ ಮೂಲಕ ಇದು ಅವ್ಯಾಹತವಾಗಿ ಮುಂದೆ ಸಾಗುವದೆಂದು ನಾವು ಭರವಸೆ ತಾಳಿದ್ದೇವೆ.

ಶರಣಸಾಹಿತ್ಯ ಪತ್ರಿಕೆಯ ಈ ಮೊದಲನೆಯ ಸಂಚಿಕೆಯಲ್ಲಿ ಅನೇಕ ಮಹತ್ವದ ವಿಷಯಗಳು ಅಡಕವಾಗಿವೆ. ನಮ್ಮ ಈ ಶಿವಾನುಭವ ಪತ್ರಿಕೆಯು ಈ ವರೆಗೆ ಮಾಡುತ್ತ ಬಂದ ವಾಙ್ಮಯ ಸೇವೆಯನ್ನು ಕುರಿತು ಒಂದು ಬಹು ವಿಸ್ತಾರವಾದ ಲೇಖವು ಪತ್ರಿಕೆಯಲ್ಲಿ ಬಂದಿದೆ. ಇದಕ್ಕೋಸ್ಕರ ನಾವು ಅವರಿಗೆ ಬಹಳ ಋಣಿಯಾಗಿದ್ದೇವೆ. ಪತ್ರಿಕೆಯಲ್ಲಿ

ನಿಜಗುಣಿಶಿವಯೋಗಿಯ ವಿಷಯವಾಗಿ ವಿಮರ್ಶಾತ್ಮಕ ಲೇಖವು, ಕಿತ್ತೂರ ಚನ್ನಮ್ಮನ ಚರಿತ್ರೆ, ಕೈ. ವಾ. ಇರಸಂಗಪ್ಪನವರ ಜೀವನ ಚರಿತ್ರೆ, ಅಲ್ಲದೆ ಯೋಗಾಂಗ ತ್ರಿವಿದಿ ಎಂಬ ಪುರಾತನ ಗ್ರಂಥ, ಇವೇ ಮೊದಲಾದ ಮಹತ್ವದ ವಿಷಯುಗಳು ಬಂದಿರುತ್ತವೆ. ಈ ವಿಷಯುಗಳ ಮೇಲಿಂದ ಪತ್ರಿಕೆಯು ಎಷ್ಟು ಉಚ್ಚ ಧ್ಯೇಯವುಳ್ಳುದೆಂಬದು ವಾಚಕರಿಗೆ ವಿದಿತವಾಗದೇ ಇರದು. ಇದಲ್ಲದೆ ಇದರಲ್ಲಿ ಅನೇಕ ಸುಂದರವಾದ ಚಿತ್ರಗಳೂ ಕೊಡಲ್ಪಟ್ಟಿವೆ. ಈ ಪತ್ರಿಕೆಗೋಸ್ಕರ ವಿದ್ವಾಂಸರದೊಂದು ಉಪಸಂಪಾದಕ ಮಂಡಳಿಯೂ ಏರ್ಪಡಿಸಲ್ಪಟ್ಟಿದೆ. ಈ ಬಗೆಯಾಗಿ ಏರ್ಪಡಿಸಲ್ಪಟ್ಟ ಈ ಪತ್ರಿಕೆಯ ಮೂಲಕ ಕರ್ನಾಟಕಕ್ಕೆ ಘನತರ ವಾಙ್ಮಯ ಸೇವೆಯು ಜರಗುವದೆಂದು ನಾವು ನಿರೀಕ್ಷಿಸಿದ್ದೇವೆ. ಈ ಪತ್ರಿಕೆಯನ್ನು ಕನ್ನಡಿಗರೆಲ್ಲರೂ ಪೋಷಿಸುವದು ಬಹು ಅವಶ್ಯವಾಗಿದೆ.

---

## ಶಿವಾನುಭವ ಪತ್ರಿಕೆಗೋಸ್ಕರ ಕಾಣಿಕೆ.

ಶಿವಾನುಭವ ಪತ್ರಿಕೆಗೋಸ್ಕರ ಬಹುಜನರು ಆದರಭಾವವನ್ನು ತಾಳಿದವರಾಗಿರುವರು. ಅವರಲ್ಲಿ ಬೆಳಗಾವ ಜಿಲ್ಹಾ ಒಂಟಮುರಿ ಗ್ರಾಮದಲ್ಲಿರುವ ಶ್ರೀ. ಬಸವಪ್ಪ ಚನ್ನಪ್ಪ ಪಟ್ಟೇದ ಇವರು ಇರುವರು. ಅವರು ತಮ್ಮ ಚಿ॥ ರಾದ ಶಿವಬಸಪ್ಪ ಬಸವಪ್ಪ ಮತ್ತು ಬಸಲಿಂಗಪ್ಪ ಮಲ್ಲಿಕಾರ್ಜುನಪ್ಪ ಇವರ ಲಗ್ನಗಳ ಕಾಲದಲ್ಲಿ ೫ ರೂ. ಶಿವಾನುಭವ ಪತ್ರಿಕೆಗೆ ಕಾಣಿಕೆಯಾಗಿ ಕಳಿಸಿದ್ದು ಅವನ್ನು ನಾವು ಅತ್ಯಾದರ ಪೂರ್ವಕವಾಗಿ ಸ್ವೀಕರಿಸುತ್ತೇವೆ.

R. N. B. 2554.

# ಶಿವಾನುಭವ.

ಸಂಪಾದಕ.

ರಾ. ಸಾ. ಫ. ಗು. ಹಳಕಟ್ಟಿ ಬಿ. ಎ. ಎಲ್. ಎಲ್. ಬಿ.

ಸಂಪುಟ ೧೨ ] ಫೆಬ್ರುವರಿ ೧೯೩೮. [ ಸಂಚಿಕೆ ೫.

## ವಿಷಯಾನುಕ್ರಮಣಿಕೆ.

ರೆನ್ನುವ ಸಾಂಪ್ರದಾಯವಿದೆ ಹಳ್ಳಿಪಳ್ಳಿಗಳಲ್ಲಿ ಹ
ಂದು ಕೇಳಿದರೆ ನಾವು ಲಿಂಗವಂತರು, ಶಿವಭಕ್ತರ
ನುಂಟು. ಆದರೆ ವೀರಶೈವರೆಂಬುವ ಹೆಸರು ವ



# ಹರಿಹರನ ರಗಳೆ.

## (ಸಾಮವೇದಿಗಳ ಮಹಾತ್ಮೆಯ ರಗಳೆಯ ವಿಮರ್ಶೆ.)

# ಹೊಲೆಯನು ಬ್ರಾಹ್ಮಣನಿಗೆ ಲಿಂಗಧಾರಣ ಮಾಡಿದ್ದು.

(ಲೇಖಕ:-- ಶ್ರೀ॥ ಕಲ್ಯಾಣಪ್ಪ ಬ್ಯಾಳಿ ಬಿ. ಎ. ವಿಜಾಪುರ.)

ಹೊಲೆಯನು ಬ್ರಾಹ್ಮಣನಿಗೆ ಲಿಂಗ ಧರಿಸಿದನೆಂಬ ಮಾತನ್ನು ಕೇಳಿ ಎಷ್ಟೋ ಜನಗಳಿಗೆ ಪರಮಾಶ್ಚರ್ಯವಾಗಬಹುದು. ಸನಾತನಿಗಳೂ ಕರ್ಮಠರೂ ರೇಗಿಗೇಳಬಹುದು. ಪಂಚಾಚಾರ್ಯರೂ ಗುರುಗಳೂ ನಮ್ಮ ಅಧಿಕಾರವು ಹೊಲೆಯನಿಗೆ ಹೇಗೆ ಉಂಟಾಯಿತೆಂದು ಕೋಪ ಗೊಳ್ಳಬಹುದು. ಛೀ ಛೀ! ಅಂಥ ಅಭದ್ರವನ್ನು ನುಡಿಯಲಾಗದು, 'ಶಾಂತಂ ಪಾಪಂ' ಎಂದು ಪುರಾಣ ಮತವಾದಿಗಳು ಕಿವಿ ಮುಚ್ಚಿ ಕೊಳ್ಳಬಹುದು. ಹೊಲೆಯರಿಗೆ ಲಿಂಗ ಧಾರಣ ಮಾಡಕೂಡದೆಂದು ನಮ್ಮವರು ಅಂಜಿ ಹಿಂಜರಿಯುತ್ತಿರುವಾಗ ಹೊಲೆಯನು ಬ್ರಾಹ್ಮಣನಿಗೆ ಲಿಂಗ ಧಾರಣ ಮಾಡಬಹುದೇ? ಇದು ಅಸತ್ಯ ಹಾಗೂ ಅಸಂಬದ್ಧ ಪ್ರಲಾಪನೆಂದು ಕೆಲವರು ತರ್ಕಿಸಬಹುದು. ಹೊಲೆಯನು ಹೊಲೆಯನಿಗೆ ಲಿಂಗ ಧಾರಣೆ ಮಾಡಿದನೆಂದು ಯಾರಾದರೂ ಹೇಳಿದರೆ ಆ ಮಾತು ಒಂದು ವೇಳೆ ಕ್ಷಮ್ಯವಾಗಬಹುದು. ಆದರೆ ಅತ್ಯಂತ ಕೀಳು ಕುಲದವನೆನಿಸುವ ಶ್ವಪಚನು ಅತ್ಯಂತ ಶ್ರೇಷ್ಠ ಕುಲದವನೆನಿಸುವ ವಿಪ್ರನಿಗೆ ಲಿಂಗ ಧಾರಣ ಮಾಡುವದು ಅಕ್ಷಮ್ಯ ಅಪರಾಧವೆಂದು ಕೆಲವರು

ಉದ್ಘೋಷಿಸ[illegible]ಗಾತನ್ನು
ಹುಚ್ಚಿಡುವು[illegible]ಖ್ಯ ಗುರಿ
ಯಾಗಿರುವದ[illegible]ು ನನ್ನ
ಕರ್ತವ್ಯವಾಗಿ[illegible].

ಈ ಕಥೆಯು ಸ್ವ[illegible]ಲ್ಪಿತವಾದುದಲ್ಲ ವೀರಶೈವರ ಆದಿ ಕವಿಯಾದ ಹರೀಶ್ವರನು ಈ ಕಥೆಯನ್ನು ತನ್ನ ಸಾಮವೇದಿಯ ರಗಳೆಯಲ್ಲಿ ಒಳ್ಳೆ ಸುಗಮವಾಗಿ ವಿವರಿಸಿದ್ದಾನೆ. ಆ ರಗಳೆಯನ್ನು ರಾ। ಸಾ। ಹಳಕಟ್ಟಿಯವರು "**ಹರಿಹರನ ರಗಳೆಗಳು ಭಾಗ ೩**" ರಲ್ಲಿ ಮುದ್ರಿಸಿ ಪ್ರಕಟಿಸಿದ್ದಾರೆ. ವಾಚಕರು ಬೇಕಾದರೆ ಅದನ್ನು ತರಿಸಿ ನೋಡಬಹುದು. ಆ ರಗಳೆಯ ಕಥಾಸಾರವನ್ನು ಇದರಡಿಯಲ್ಲಿ ಕೊಡುತ್ತೇನೆ.

ಉತ್ತರ ಭಾಗದಲ್ಲಿ ಛತ್ತೀಸ ಪುರವೆಂಬ ಪಟ್ಟಣವಿದ್ದಿತು. ಈಗ ಛತ್ತಿಸಗಡವೆಂದು ಕರೆಯಲ್ಪಡುವ ಪಟ್ಟಣವೇ ಬಹುಶಃ ಅದಾಗಿರಬಹುದು. ಅಲ್ಲಿ ಸಾಮವೇದಿಯೆಂಬ ಬ್ರಾಹ್ಮಣನಿದ್ದನು. ಆತನು ಮೂರ್ತಿಮಂತ ಸಾಮವೇದವೇ ಆಗಿದ್ದನು. ಆತನು ಸಕಲ ಶಾಸ್ತ್ರ ಪಾರಂಗತನೂ ಕಾವ್ಯನಾಟಕ ವಿಶಾರದನೂ, ವೇದಾಂತ ಸಿದ್ಧಾಂತ ತರ್ಕ ತಂತ್ರ ವ್ಯಾಕರಣ ಕೋವಿದನೂ ಮಹಾ ವಾಗ್ಮಿಯೂ ಆಗಿದ್ದನು. ಎಂಥವರಾದರೂ ಬಂದು ಅವನಿಗೆರಗುತ್ತಿದ್ದರಲ್ಲದೆ ಇವನು ಮಾತ್ರ ಯಾರಿಗೂ ನಮಸ್ಕರಿಸನು. ಇವನು ತನ್ನ ವೇದಮಯವಾದ ಆಚರಣೆಯಿಂದಲೂ ಶಾಸ್ತ್ರಮಯವಾದ ನುಡಿಯಿಂದಲೂ ಅನೇಕರಿಗೆ ಗುರುವಾಗಿದ್ದನು. ಅವನಿಗೆ ಮೂರು ಸಾವಿರದ ಮೇಲೆ ಐನೂರು ಜನ ಶಿಷ್ಯರಿದ್ದರು. ಅವನ ಹೊಟ್ಟೆ ಬಟ್ಟೆಯನ್ನು ಸಾಗಿಸುವ ಜನಕ್ಕಂತೂ ಮಿತಿಯೇ ಇದ್ದಿಲ್ಲ. ಹೀಗಿರಲು ಸಾಮವೇದಿಗಳು ಒಂದು ದಿನ ಬೆಳಿಗೆ ಆರಣ್ಯಕವನೋದಬೇಕೆಂದು ಅರಣ್ಯಕ್ಕೆ ಬಂದು ಒಂದು ಅರಳೆಯ ಮರದ ಬುಡದಲ್ಲಿ ಕುಳಿತು ವೇದದ ಋಚಗಳನ್ನು ಛಂದಸ್ಸು, ಋಷಿ, ದೇವತೆ, ಸ್ವರ ಭೇದಗಳೊಂದಿಗೆ ಶಿಷ್ಯರಿಗೆ ತಿಳಿಸಿ ಮಧ್ಯಾನ್ಹವಾಗಲು ಆಕಾಶಮಾರ್ಗದಿಂದ ಪುರದತ್ತ ಹೊರಟರು. "ನಡೆತಂದರಿಟ್ಟ ಮಟ್ಟೆಗಳಿಂ ಪವಿತ್ರದಿಂ। ನಡೆತಂದರಿಕ್ಕಿರ್ದ ಯಜ್ಞೋಪವೀತದಿಂ।" ಅವರ ಶಿಷ್ಯರು ಭೂಮಾರ್ಗದಿಂದ ಬರುತ್ತಿದ್ದರು.

ಇತ್ತ ಅದೇ ಛತ್ರೀಸಪುರದಲ್ಲಿ ಶ್ವಪಚದೇವರೆಂಬ ಶಿವಭಕ್ತರಿದ್ದರು. ಶಿವಭಕ್ತರೆಂದರೆ ವೀರಶೈವರೇ. ಮೊದಲಿನಿಂದಲೂ ವೀರಶೈವರಿಗೆಲ್ಲ ಶಿವಭಕ್ತರೆನ್ನುವ ಸಾಂಪ್ರದಾಯವಿದೆ ಹಳ್ಳಿಪಳ್ಳಿಗಳಲ್ಲಿ ಹಳೆಯ ಜನಂಗ ನೀವಾರೆಂದು ಕೇಳಿದರೆ ನಾವು ಲಿಂಗವಂತರು, ಶಿವಭಕ್ತರು, ಎನ್ನುವ ವಾಡಿಕೆಯುಂಟು. ಆದರೆ ವೀರಶೈವರೆಂಬುವ ಹೆಸರು ಮಧ್ಯಂತರದಲ್ಲಿ ಹೇಗೋ ಬಳಿಕೆಯಲ್ಲಿ ಬಂದಿದೆ. ಇರಲಿ. ಆ ಶ್ವಪಚದೇವರು "ಭವಿಗ ಳಾರುಂ ಸುಳಿಯ ಬಾರದಟ್ಟಿಡವಿಯೊಳ್ । ಭವನ ನರ್ಚಿಸಲೆಂದು ಸರ್ವ ಸುಖವೃತ್ತಿಯೊಳ್ ।" ಸೊಗಸಾದ ಮಲ್ಲಿಗೆಯ ಹೊದರಿನ ಬುಡದಲ್ಲಿ ಕದಳೀದಳ ಕಮಲ ಪತ್ರಗಳಿಂದ ರಚಿತವಾದ ಆಸನದ ಮೇಲೆ ಕುಳಿತು, "ಸೆಜ್ಜೆಯಿಂ ಶಿವಲಿಂಗವುಂ ತೆಗೆದು ಬೊಳ್ಳಿಸಿ" ಮನಸ್ಸು ಹರ್ಷ ದೊಳೋಲಾಡುವಂತೆ ಲಿಂಗಾರ್ಚನೆಯಲ್ಲಿ ತತ್ಪರರಾಗಿದ್ದರು. ಅವರ ಲಿಂಗಪೂಜೆಯನ್ನು ಹರಿಹರನು ಬಹು ಸರಸಾಗಿ ಬಣ್ಣಿಸಿ ಕೊನೆಗೆ:

'ಕೆಯ್ಗೆ ಬಂದಂತೆ ಪೂಜಿಸುತಂ ನಮಸ್ಕರಿಸಿ
ಮೆಯ್ಗೆ ಬಂದಂತೆ ಹೊರಳುತ್ತಂ ನಮಸ್ಕರಿಸಿ
ನಾಲಿಗೆಗೆ ಬಂದಂತೆ ಪೊಗಳುತಂ ಪಾಡುತಂ
ಲೀಲೆ ಕಾಲಾದಂತೆ ತಿರುಗಿ ಬಂದಾಡುತಂ

ಎಂದು ಹೇಳಿದ್ದಾನೆ. ಅಂದರೆ ಲಿಂಗಪೂಜೆಯನ್ನು ಆತನು ಅಷ್ಟವಿಧಾನ ಷೋಡಶೋಪಚಾರಗಳಿಂದಲೇ ಮಾಡಬೇಕು. ತ್ರಿಕಾಲದಲ್ಲಿಯೇ ಮಾಡ ಬೇಕು. ನಮಸ್ಕಾರವನ್ನು ಹೀಗೆಯೇ ಹಾಕಬೇಕು- ಎಂಬ ನೇಮವನ್ನು ಲೆಕ್ಕಿಸದೆ ತನ್ನಂತರಂಗದ ಪವಿತ್ರ ಭಕ್ತಿಯು ಹೇಗೆ ಪ್ರವರ್ತಿಸಬಹುದೋ ಹಾಗೆ ಭಕ್ತಿಯೊಳಗೆ ಮುಳುಗಿ ತೇಲುತ್ತಿದ್ದನು. ಇದರಿಂದ ಉಜ್ವಲ ವಾದ ಲಿಂಗ ಭಕ್ತಿಯು ಸಹಜವಾಗಿರಬೇಕಲ್ಲದೆ ಕೃತ್ರಿಮವಾದ ಕಟ್ಟು ಪಾಟುಗಳಿಂದ ಬದ್ಧವಾಗಿರಕೂಡದೆಂದು ಹರಿಹರನ ಸ್ಪಷ್ಟ ಅಭಿಪ್ರಾ ಯವು. ಅದೇ ಶುದ್ಧಲಿಂಗ ಭಕ್ತಿಯು. ಇರಲಿ.

ಆ ಶ್ವಪಚದೇವರು ಲಿಂಗಾರ್ಚನೆಯನ್ನು ಮುಗಿಸಿ ಮೂರು ಕಲ್ಲನ್ನು ಒಲೆಯಾಗಿ ಹೂಡಿ ಅದರ ಮೇಲೆ ತಲೆಬುರುಡಿಯನ್ನಿಟ್ಟು ಜಾತಿ ಧರ್ಮ ಯೋಗರನಾದ ಮಾಂಸವನ್ನು ಅದರಲ್ಲಿರಿಸಿ ಪಾಕ ಮಾಡುತ್ತಿರುವಾಗ ಆಕಾಶದಲ್ಲಿ ರಭಸ ದನಿಯಾದುದು ಕೇಳಿ ಮೇಲಕ್ಕೆ ನೋಡಲು ನಾನು ವೇದಿಗಳು ಗಗನ ಮಾರ್ಗದಿಂದ ಹೋಗುತ್ತಿರುವದು ಕಂಡುಬಂದಿತು.

ಆಗ ಅವರು 'ಶಿವಶಿವಾ' ಭವಿಯು ನನ್ನ ಪಾಕವನ್ನು ನೋಡಿಯಾ ನೆಂದು ತಡವರಿಸಿ ತಮ್ಮ ಕೆರವಿನಿಂದ ಆ ಪಾತ್ರೆಯ ಮೇಲೆ ಮುಚ್ಚಿದರು. ಅದನ್ನು ಸಾಮವೇದಿಗಳು ನೋಡಿ ಬೆರಗಾಗಿ ಹರಭಕ್ತನ ನಿಲವನ್ನು ಪರಿಕಿಸಿ ನೋಡುವೆನೆಂದು ಶಿಷ್ಯರನ್ನು ಪುರಕ್ಕೆ ಕಳಿಸಿ, ಶ್ವಪಚದೇವರ ಬಳಿಗೆ ಬಂದು "ಎಲೆ ಭಕ್ತಯ್ಯಾ, ಬಂದವರು ವಿಪ್ರಕುಲದವರೆಂಬುದುನರಿಯದೆ ಅದನ್ನೇಕೆ ಮುಚ್ಚಿದೆ ?" ಎಂದು ಕೇಳಲಾಗಿ ಶ್ವಪಚದೇವರು ಅವನಿಗೆ ಮರುಮಾತುಗೊಡದೆ ಸುಮ್ಮನಿದ್ದರು. ಹೀಗೆಯೇ ಎರಡು ದಿನಗಳು ಗತಿಸಿದವು. ಶಿವಭಕ್ತನ ಸಹವಾಸದಿಂದ ಸಾಮವೇದಿಯ ಪಾಪವು ಕಡಿಮೆಯಾಯಿತು. ಆಗ ಶಿವನು ಸಾಮವೇದಿಯ ಸ್ವಪ್ನದಲ್ಲಿ ಬಂದು ಹೀಗೆ ಹೇಳಿದನು.

ಎಲೆ ಸಾಮವೇದಿ ನೀನೇಕೆ ಮರುಳಾದಪ್ಪೈ
ಕುಲದ ಗರ್ವದೊಳಿಂತು ಕೆಟ್ಟು ಹಾಳಾದಪ್ಪೈ
ನಾನೆಂದೊಡಂ ಶ್ವಪಚದೇವರೆನೆ ಬೇರಿಲ್ಲ
ನೀನವರ್ಗಾಳಾಗೆ ನಿನಗೆ ತೀರದುದಿಲ್ಲ.

ಬಳಿಕ ಶಂಕರನು ಶ್ವಪಚದೇವರ ಕನಸಿನಲ್ಲಿ ಹೇಳಿದುದೇನಂದರೆ:—

ನಿನ್ನ ದರ್ಶನದಿಂದವನ ಭವಿತನಂ ಪೋಯ್ತು
ನಿನ್ನ ಕಾಣ್ಕೆಯಿಂದವನ ಕುಲವೆಲ್ಲ ಹಸನಾಯ್ತು
ಮಾಡವಂಗುಪದೇಶಮಂ ನೀನೆ ಕರುಣದಿಂ
ಮಾಡಯ್ಯ ಎಲೆ ಭಕ್ತ ವಿಪ್ರಂಗೆ ಹರುಷದಿಂ

ಮರುದಿನ ಬೆಳಿಗ್ಗೆ ಸಾಮವೇದಿಗಳು ಬಂದು ಶ್ವಪಚದೇವರು ನನ್ನನ್ನು ತರ್ಕದಲ್ಲಿ ಗೆದ್ದರೆ ಅವರನ್ನು ನನ್ನ ಗುರುವನ್ನಾಗಿ ಮಾಡಿಕೊಳ್ಳುವೆನೆಂದು ಭಾವಿಸಿ ಅವರಿಗೆ ವಿನಯದಿಂದ ನುಡಿದುದೇನಂದರೆ:-

ಏಕೆ ನುಡಿಯಿರಿ ದೇವ ಎನ್ನ ಕೂಡೊಂದುಮಂ ।
ಏಕೆ ಬಾಯ್ದೆರೆಯಲೊಲ್ಲಿರಿ ದೇವ ಒಂದುಮಂ॥

ಆಗ ಶ್ವಪಚದೇವರು ನುಡಿದವು:—

ಎಲೆ ವಿಪ್ರ ಲಿಂಗಾರ್ಚನೆಯೊಳಿರುತ್ತೊಂದುವುಂ ।
ಎಲೆ ಭವಿಗಳೊಡೆ ನುಡಿಯಿಲ್ಲ ಕೇಳೊಂದುವುಂ ।

ಮುಚ್ಚಿದೆಂ ಕೆರಹಿಂದೆ ಭವಿ ಕಾಣದಂತಿದಂ।
ಮುಚ್ಚದಿದರ್ದೊಡೆ ಶಂಭು ಕೈಕೊಳ್ಳನಿಂತಿದಂ॥

ಇದರಿಂದ ಶಿವಭಕ್ತ ಬೇಡರ ಕಣ್ಣಪ್ಪನ ಮಾಂಸದ ಅಡಿಗೆಯು ಶಿವನಿಗೆ ರುಚಿಸಿದಂತೆ ಲಿಂಗಭಕ್ತ ಶ್ವಪಚಯ್ಯನ ಮಾಂಸಭೋಜನವು ಶಿವನಿಗೆ ಪ್ರಿಯಕರವಾಗಿತ್ತು. ಜಾತಿಯಿಂದ ಮನುಷ್ಯನು ಹೊಲೆಯ ನಿದ್ದರೂ ಅವನು ಮಾಂಸಭಕ್ಷಣ ಮಾಡಿದರೂ ಅವನು ಧರ್ಮ ಶಿವಭಕ್ತಿ ಸಂಪನ್ನನಾಗಿದ್ದರೆ ವೀರಶೈವ ನಾಗುವನೆಂದು ಹರಿಹರನ ಸ್ಪಷ್ಟಾಭಿಪ್ರಾ ಯವು. ಇರಲಿ.

ಶ್ವಪಚದೇವರು ತನಗೆ ಭವಿಯೆಂದದ್ದನ್ನು ಕೇಳಿ ಕುಲಾಭಿಮಾನಿ ಯಾದ ಸಾಮವೇದಿಗೆ ಸೈರಿಸುವುದಾಗದೆ ಒಳ್ಳೆ ಚತುರತನದ ಪ್ರಶ್ನೆ ಯನ್ನು ಅವರಿಗೆ ಮಾಡಿದನು:—

ಎಂದೊಡೀಗಿಡವೆಲ್ಲ ಮರವೆಲ್ಲ ಭಕ್ತರೇ?
ಸಂದಣಿಸಿ ಬರುತಿರ್ಪ ಬೇಡರುಂ ಭಕ್ತರೇ?
ಹಿಂದಟ್ಟಿ ಬರುತಿರ್ಪ ಜೇಡರುಂ ಭಕ್ತರೇ?
ಸಂದಿಸುತ್ತಿರ್ಪ ಚಂಡಾಲರುಂ ಭಕ್ತರೇ?
ಇಂತಿವಂ ನೋಡಿಯೆನ್ನಂ ನೋಡಲಾಗದೇ?
ಇಂತಿದಾವಾಗಮದೊಳುಂಟುಸುರಲಾಗದೇ?

ಅಂದರೆ ಗಿಡ-ಚಿಗರಿ-ಬೇಡರು-ಚಂಡಾಲರು ಇಲ್ಲಿಯೇ ಸುಳಿದಾಡಿ ನಿನ್ನ ಪಾಕವನ್ನು ನೋಡುವರು. ಅವರು ಭವಿಗಳಲ್ಲವೇ? ಅವುಗಳನ್ನು ನೀನು ನೋಡುವಿ. ನನ್ನನ್ನೇಕೆ ನೋಡಲಾರಿ? ಹಾಗೆ ಮಾಡಲು ಯಾವ ಆಗಮದಲ್ಲಿ ಹೇಳಿದೆ? ಈ ಪ್ರಶ್ನೆಗೆ ಸರಿಯಾದ ಉತ್ತರವನ್ನು ಶ್ವಪಚದೇವರು ಕೊಟ್ಟಿದ್ದಾರೆ. ಅದು ವಾಚಕರಿಗೆ ಸುಲಭವಾಗಿ ತಿಳಿ ಯುವದು. ನೋಡಿರಿ.

ಗಿಡಮರದ ಹೂಪತ್ರಿ ಶಂಭುವಿಂಗೇರುವುದು
ನಡೆಪೆಣನೆ ನಿನ್ನ ತನು ಹೆಬ್ಬಡಿಕೆ ನಾರುವದು
ಕಾಮವುಂಟೇ ಮರಕೆ? ಕ್ರೋಧವುಂಟೇ ಲತೆಗೆ?
ಕಾಮಾದಿ ಷಡ್ವರ್ಗವಿಡಿದು ತೀವಿತು ನಿನಗೆ.
ಎಳೆ ಪುಲ್ಗಳಂ ಮೇದು ತಿಳಿನೀರ್ಗಳಂ ಕುಡಿದು

ಬೆಳೆವ ವೃಗವಾರುವುಂ ಬಾಧಿಸವು ನೀ ನೋಡ
ನಿನ್ನೂಟವೆಂಬುದತ್ಯಂತ ಕಾಳ್ಪೋಜನಂ
ಅನ್ನವೆಂಬುದು ಪಾರ್ವಣದ ಪಿಂಡಭೋಜನಂ
ಸತ್ತವರ ಮನೆಯೊಳೇಕಾಹ್ನದ ಕುಭೋಜನಂ
ಮತ್ತೆ ನೀನುಣ್ಬುದೆಲ್ಲಂ ಕಾಕಭೋಜನಂ
ಬೇಡರೊಂದುಂ ವೇದ ಶಾಸ್ತ್ರವರಿಯರ್ದಿಟಂ
ಜಾತಿಧರ್ಮಂ ಬೇಂಟೆ ಎಂದಿರ್ಪರಂತವರ್
ಜಾತಿಚಾಂಡಾಲರೆಂದೆನಿಸಿರ್ಪರಂತವರ್
ಕರ್ಮಚಾಂಡಾಲನೆಂದೆನಿಸಿ ಕೊಳ್ವಂ ನೀನೆ
ದುರ್ಮುಖಂ ದುರ್ಗುಣಿದುರಾಚಾರಿಯುಂ ನೀನೆ
ಏಕಮೇವಾದ್ವಿತೀಯಂ ಬ್ರಹ್ಮವೆಂದಂದು
ಲೋಕದೊಳ್ ವಿಶ್ವಾಧಿಕೋ ರುದ್ರ ಎಂದರಿದು
ಸರ್ವಮನ್ಯತ್ಪರಿತ್ಯಜ್ಯ ತಾಮೆಂದರಿದು
ಸ ಶಿವ ಏಕೋ ದೇವನೆಂಬ ವೇದವನರಿದು
ಹರಿಗುಂ ಹರಂತಿ ಎಂದೆಂಬ ವಾಕ್ಯವನರಿದು
ಅರಿಗು ಬರುದೊರೆಯಾದ ನೀನಲ್ಲದಿನ್ನುಂಟೆ?
ಅರಿದರಿದು ಕುರಿಯಾದ ನಿನ್ನಿಂದೆ ಮರುಳುಂಟೆ?
ಅರಿದ ವೇದ ವ್ಯಾಸನೇನಾದನದನರಿಯಾ
ಅರಿವು ನಿನ್ನಳವೆ? ಮುನಿಗಳ ಹವಣ ಕೇಳ್ದರಿಯಾ
ಗಗನದೊಳ್ಪರುತಿರ್ಪನೆಂದೆಂಬ ಗರ್ವವೇ?
ಗಗನದೊಳ್ಪಕ್ಕಿ ಪಣ್ಣೆಲೆಗಳೇಂ ಹಾರವೇ?
ಪಂಚಮುಖನಂ ಪೂಜಿಸದ ಪಾತಕಂ ನೀನೆ
ಪಂಚವದನನ ಸ್ತುತಿಸದಿರ್ಪ ಪತಿತಂ ನೀನೆ
ಕತ್ತೆ ಕರ್ಪೂರದ ಹೇರಂ ಹೇರಿ ನಿಂದಂತೆ
ಹೊತ್ತ ವೇದಂಗಳರ್ಥವನರಿಯದಕಟಂತೆ
ಮರದಿಂದೆ ಗಿಡದಿಂದೆ ಮೃಗದಿಂದೆ ಪುಳುವಿಂದೆ
ಬರೆಬೇಡರಿಂದೆ ಚಾಂಡಾಲರಿಂ ನಾಯಿಂದೆ
ನೀನೆ ಕಷ್ಟಂ ಸುಡುಸುಡೆಲೆಲೆ ಭವಿ ಭವಿ ನೀನೆ
ನೀನೆ ಪತಿತಂ ಪಂಚಮಹಾಪಾತಕಂ ನೀನೆ

ನಿನ್ನ ನಿರೀಕ್ಷಿಸುವರೇ ಶಿವಭಕ್ತರಪ್ಪವರ್?
ನಿನ್ನೊಡನೆ ನುಡಿವರೇ ಶರಣರೆನಿಸಿರ್ಪವರ್?

ಈ ವಾಕ್ಯಗಳು ಸಾಮವೇದಿಯ ಮನಸ್ಸಿಗೆ ಚೆನ್ನಾಗಿ ನಡಲು ಅವನು ಶ್ವಪಚದೇವರಿಗೆ ಸಾಷ್ಟಾಂಗವೆರಗಿ ಕರುಣಿಸಬೇಕೆಂದು ಬೇಡಿಕೊಳ್ಳಲು ಅವರು ಅವನಿಗೆ ಲಿಂಗಧಾರಣ ಮಾಡಿದರು. ಅದನ್ನು ಹರೀಶ್ವರನು ಹೀಗೆ ವರ್ಣಿಸಿದ್ದಾನೆ.—

ಕರುಣದಿಂ ಶ್ವಪಚದೇವಂ ವಿಪ್ರನಂ ನೋಡಿ
ಕರದಲ್ಲಿ ಶಂಕರನ ನಿಜಮೂರ್ತಿಯಂ ನೀಡಿ
ಕರೆದು ಹತ್ತಿರೆ ನೋಡಿ ಪದ್ಮಾಸನದೊಳಿರಿಸಿ
ಹರನ ಶಶಿಧರನ ರೂಪವ ಚಿತ್ತದೊಳಗಿರಿಸಿ
ಪಶುಪತಿಯ ಚರಣಮಂ ಮನದ ಕೆಯ್ಯೊಳ್ಕೊಟ್ಟು
ಅಹಿತಗಳ ಮೂರ್ತಿಯಂ ಜ್ಞಾನದಿಂದ ಸೈತಿಟ್ಟು!
ಸಾಮವೇದಿಗಳ ಮಸ್ತಕದಲ್ಲಿ ಹಸ್ತಮಂ
ಪ್ರೇಮದಿಂ ಶ್ವಪಚದೇವರ್ತಮ್ಮ ಹಸ್ತಮಂ
ತಂದಿಟ್ಟು ಕರ್ಣದೊಳ್ಪಂಚಾಕ್ಷರಿಯನರುಪಿ
ಮುಂದಿರ್ದ ಶಿವಲಿಂಗ ನಿಜಮೂರ್ತಿಯಂ ತಿಳುಪಿ
ಉಪದೇಶಮಂ ಶ್ವಪಚದೇವರೊಲವಿಂ ಮಾಡೆ
ತಪನನಂತಿರೆ ತೊಳಗಿ ಬೆಳುಗುತಿರ್ದಂ ನೋಡೆ
ಕುಲಛಲದ ಮದವಳಿದು ನೆರೆಸಿತ್ತು ಶಿವಭಕ್ತಿ
ತೊಲಗಿತ್ತು ಭವಿತನಂ ಕಾಸಿ ಬೆಚ್ಚಿತು ಯುಕ್ತಿ
ಜ್ಯೋತಿಯಿಂ ಜ್ಯೋತಿಯಂ ಪೊತ್ತಿಸಿದ ತೆರನಾಯ್ತು
ಮಾತೇನು ಗುರು ಶಿಷ್ಯರೆಂದರಿಯದಂತಾಯ್ತು
ಓರ್ವರೊಳಗೋರ್ವರಂ ತಂದಿಕ್ಕಿದಂತಾಯ್ತು
ಹರಭಕ್ತ ಸಾಮವೇದಿಗಳ ಪಿತೃಕುಲವೆಲ್ಲ
ನರಕದಿಂ ರುದ್ರಲೋಕಕ್ಕೆ ನೆಗೆಯಿತ್ತೆಲ್ಲ.

ಇದರ ಮೇಲಿಂದ ಮಹಾಶಿವಭಕ್ತಿ ಸಂಪನ್ನನಾದ ಹೊಲೆಯನು ಸಹ ಲಿಂಗಾಂಗಿಯಾಗಬಹುದಿಷ್ಟೇ ಅಲ್ಲ; ಅವನು ಯೋಗ್ಯರಾದವರಿಗೆ ಲಿಂಗಧಾರಣವನ್ನು ಸಹ ಮಾಡಲು ಅಧಿಕಾರವುಳ್ಳವನಾಗುತ್ತಾನೆಂಬದು ಹರಿಹರನ ಸ್ಪಷ್ಟೋಕ್ತಿಯು ಈ ಕಾರ್ಯಕ್ಕೆ ಪಂಚಾಚಾರ್ಯರೇ ಅಧಿಕಾರಿ

ಗಳೆಂಬ ನೇಮವೇನೂ ಇಲ್ಲ. ಶಿವದೀಕ್ಷೆಯಾದ ಬಳಿಕ ಗುರುಶಿಷ್ಯ ಭಾವವಡಗಿ ಅವರಲ್ಲಿ ಸಮರಸಭಾವವು (ಅಭೇದವು) ಆಳವಡುತ್ತವೆಂಬ ಉದಾರತತ್ವವನ್ನೂ ಹರೀಶ್ವರನು ನಮಗೆ ತೋರಿಸಿಕೊಟ್ಟಿದ್ದಾನೆ. ಇರಲಿ. ಮುಂದೆ ಸಾಮವೇದಿಗಳು ತನ್ನ ಶಿಷ್ಯರನ್ನೆಲ್ಲ ಶಿವಭಕ್ತರನ್ನಾಗಿ ಮಾಡಿದರು. ಅವರ ಮನೆಯಲ್ಲಿ ಲಿಂಗಾರ್ಚನೆ, ಪತ್ರಿ, ಪುಷ್ಪ, ಅಗ್ಗಣಿ ಮುಂತಾದ ಸಂಭ್ರಮಗಳು ನಡೆಯಲಾರಂಭಿಸಿದವು. ಸಾಮವೇದಿಯು ಗುರುವಿನ ಉಪಕಾರವನ್ನು ಸ್ಮರಿಸುತ್ತ ಲಿಂಗಾನಂದವನ್ನು ಸುರಿಯುವಾಗ ಪುಲಕಿತರಾಗಿ "ಗುರುವಿಂದೆ ಬರ್ದುಕಿದೆಂ ಬರ್ದುಕಿದೆಂ ಕುಬುಬು ಬುಬು । ಗುರುವಿಂದ ಶುದ್ಧಾತ್ಮನಾದೆನೆಲೆ ಕುಬುಬುಬುಬು । ಎಂದು ಆವಗಂ ಶಿವನ ಕಾರುಣ್ಯ ಸುಖಮುಖನಾಗಿ । ಕರುಣ ಪ್ರಸಾದಮಂ ಹರುಷದಿಂ ಕೈಕೊಂಡು । ಗುರುಪದ ಧ್ಯಾನಮಂ ಹೃದಯದೊಳಗೆಡೆಗೊಂಡು । ಈ ತೆರದೊಳೊಂದೆರಡು ಮಾಸವಾಗುತ್ತಮಿರೆ । ಭೂತೇಶ್ವರನ ಭಕ್ತಿ ಪರ್ಬಿಕುಡಿವರಿಯುತಿರೆ ॥" ಅವನ ತಂದೆಯ ಶ್ರಾದ್ಧ ದಿನವು ಪ್ರಾಪ್ತವಾಯಿತು. ಶ್ರಾದ್ಧಕ್ಕೆ ವಿಶ್ವೇದೇವರಾಗಲು ಯಾರೂ ಸಮರ್ಥರಿಲ್ಲೆಂದು ತಿಳಿದು ಶ್ವಪಚದೇವರನ್ನು ಬಿನ್ನವಿಸಿಕೊಂಡರು.

ಅದಕ್ಕೆ ಶ್ವಪಚಯ್ಯಗಳು 'ಮರುಳೆ ಪಿತೃದಿವಸವೊಳ್ಬಾಗಿವಾವೆಂದೆನುತೆ, ನಿನಗೆ ಸಾಕ್ಷಾತ್ ಶಿವನೇ ವಿಶ್ವೇದೇವರಾಗಿ ಸತ್ತ ಕರುವನ್ನು ಹೊತ್ತುಕೊಂಡು ನಮ್ಮ ರೂಪದಿಂದ ಬರುವನು ಹೋಗೆಂದು ಅಪ್ಪಣೆ ಕೊಟ್ಟು ಕಳುಹಿದರು. ಇದರಿಂದ ಶ್ರಾದ್ಧಾದಿ ಪಾರಂಪರ್ಯಗಳನ್ನು ವೀರಶೈವರು ಮನ್ನಿಸುವದಿಲ್ಲವಾದ್ದರಿಂದ ಶ್ವಪಚಯ್ಯಗಳು ಅದನ್ನು ನಿರಾಕರಿಸಿದರೆಂಬದನ್ನೂ ಮತಾಂತರ ಹೊಂದಿದ ಜನಗಳು ಒಮ್ಮೆಲೇ ತಮ್ಮ ಪೂರ್ವಸಾಂಪ್ರದಾಯಗಳನ್ನು ಬಿಡಲಾರರಾದ್ದರಿಂದ ವೀರಶೈವರು ಆ ಬಗ್ಗೆ ಸಹಾನುಭೂತಿಯನ್ನು ವ್ಯಕ್ತಮಾಡುತ್ತಿದ್ದರೆಂಬದನ್ನು ಹರೀಶ್ವರನು ನಮಗೆ ತೋರಿಸಿದ್ದಾನೆ. ಇರಲಿ. ಗುರುವಿನಪ್ಪಣೆಯ ಮೇರೆಗೆ ಸಾಮವೇದಿಗಳು ಶ್ರಾದ್ಧದ ಸಿದ್ಧತೆಯನ್ನು ಮಾಡಿ ಶಿವನ ಮಾರ್ಗವನ್ನು ನಿರೀಕ್ಷಿಸುತ್ತಿರಲು ಶಿವನು ಹೊಲೆಯನ ವೇಷದಿಂದ ಸತ್ತ ಕರುವನ್ನು ಹೊತ್ತುಕೊಂಡು ಕೈಯಲ್ಲಿ ಸಂಬಳಿಗೋಲ ಹಿಡಿದುಕೊಂಡು ಸಾಮವೇದಿಯು ಸಿದ್ಧಮಾಡಿಟ್ಟ ಮಂಡಲದಲ್ಲಿ ಕಾಲಿಟ್ಟನು. ಈ ಅಸಹ್ಯವನ್ನು ನೋಡಿ ವಿಪ್ರಕುಲದವರೆಲ್ಲ. ದಿಕ್ಕುಗೆಟ್ಟು ಓಡಿಹೋದರು.

ಆಗ ಸಾಮವೇದಿಗಳು ಆ ಪರಶಿವನ ಪಾದಪೂಜೆಯನ್ನು ಮಾಡಲು:-

ಹೊತ್ತ ಕರುವಲ್ಲಿ ವಿಷ್ವಕ್ಸೇನ ತನುವಾಗೆ
ಬಿತ್ತರಿಸುವೊಂದು ಮುಖದೊಳಗೈದು ಮುಖವಾಗೆ
ಉಟ್ಟ ಪುಲಿದೊವಲಾಗ ಕೃತ್ತಿಚರ್ಮವದಾಗೆ
ಕಟ್ಟಿರ್ದ ಕಿವಿಗುಂಜಿ ನಾಗಕುಂಡಲವಾಗೆ
ಮೆಯ್ಯ ಕಡುಗರ್ಪೆಳಿದು ಕರಿಗೊರಲ್ಕಪ್ಪಾಗೆ
ಕೆಯ್ಯ ಸಂಬಳಿಗೋಲು ಖಟ್ವಾಂಗವುಯವಾಗೆ

ಶ್ರೀ ಶಂಕರನು ಸಾಮವೇದಿಯನ್ನಪ್ಪಿ ಕೈಲಾಸಕ್ಕೆ ವಿಮಾನದಲ್ಲಿ ನಡೆಯೆಂದು ಆಜ್ಞಾಪಿಸಲು ಆತನು "ಎನ್ನ ಗುರುಸಹಿತವಲ್ಲದೆ ಬಾರೆನೆಲೆ ದೇವ। ಚನ್ನಛತ್ರೀಸಪುರ ಸಹಿತವಲ್ಲದೆ ದೇವ" ಎಂದು ವಿಜ್ಞಾಪಿಸಿಕೊಳ್ಳಲು ಪರಶಿವನು ಪುರಸಹಿತ ಗುರುಶಿಷ್ಯರನ್ನು ಕೈಲಾಸಕ್ಕೊಯ್ದು ಅವರಿಗೆ ಗಣಪದವಿಯನ್ನು ಕೊಟ್ಟನು.

## ಹರಿಹರನು ಶುದ್ಧಲಿಂಗವಂತನು.

ಹರೀಶ್ವರನು ಶೈವಬ್ರಾಹ್ಮಣನೆಂದು ಕೆಲವರ ಅಭಿಪ್ರಾಯವು. ಆದರೆ ಈ ರಗಳೆಯನ್ನೋದುವದರಿಂದ ಅವನು ಶುದ್ಧಲಿಂಗಭಕ್ತನಿದ್ದನೆಂಬ ಮಾತು ಸ್ಪಷ್ಟವಾಗುತ್ತದೆ. ಒಂದು ವೇಳೆ ಆತನು ಕರ್ಮಠನೂ ಜಾತಿಮದಾಂಧನೂ ಆದ ಬ್ರಾಹ್ಮಣನಾಗಿದ್ದರೆ ಸತ್ತ ನಾಯಿಯನ್ನು ತಿಂಬ ಹೊಲೆಯನ ಕಡೆಯಿಂದ ಸಕಲವೇದಶಾಸ್ತ್ರಪಾರಂಗತನಾದ ಬ್ರಾಹ್ಮಣನಿಗೆ ಲಿಂಗಧಾರಣ ಮಾಡಿಸುತ್ತಿದ್ದನೇ? ಶ್ವಪಚನ ಬಾಯಿಯಿಂದ ಆಗಮದ ಪವಿತ್ರೋಕ್ತಿಗಳನ್ನು ನುಡಿಯಿಸುತ್ತಿದ್ದನೇ? ಇದಲ್ಲದೆ ವೀರಶೈವರು ನಿತ್ಯ ಬಳಿಕೆಯಲ್ಲಿ ಈಗ್ಯೂ ಉಪಯೋಗಿಸುತ್ತಿರುವ ಶಬ್ದಗಳು ಹರಿಹರನಿಗೆ ಮನೆಮಾರಾಗಿ ಬಿಟ್ಟಿದ್ದವು. ಉದಾ:— ಭವಿ, ಸೆಜ್ಜೆ, ಶಿವಲಿಂಗ, ಲಿಂಗಾರ್ಚನೆ, ಕರುಣಪ್ರಸಾದ, ಕಟ್ಟಾಚಾರ, ಶಿವಭಕ್ತ, ಶರಣ ಮುಂತಾದ ಶಬ್ದಗಳು ಶುದ್ಧಲಿಂಗವಂತರವೇ ಆಗಿವೆ. ಇದಲ್ಲದೆ ಶ್ವಪಚಯ್ಯನ ಲಿಂಗಪೂಜಾದೃಶ್ಯವೂ, ಶ್ವಪಚಯ್ಯನು ಸಾಮವೇದಿಗೆ ಲಿಂಗಧಾರಣ ಮಾಡಿದ ಪದ್ಧತಿಯೂ, ಶಿವದೀಕ್ಷೆಯಾದ ಬಳಿಕ ಗುರುಶಿಷ್ಯರ ಸಮರಸಭಾವವೂ, ಶ್ರಾದ್ಧಾದಿಗಳನ್ನು ವೀರಶೈವರು ಮನ್ನಿಸುವದಿಲ್ಲೆಂಬ ತತ್ವವೂ, ಹೊಲೆಯನು ಸಹ ಶಿವಭಕ್ತನಾಗುವನಲ್ಲದೆ ಅನ್ಯರನ್ನು ಸಹ

ಶಿವಭಕ್ತರನ್ನಾಗಿ ಮಾಡಲು ಅಧಿಕಾರವುಳ್ಳವನಾಗುತ್ತಾನೆಂಬ ಉದಾರ ತತ್ವವೂ ಶುದ್ಧಲಿಂಗವಂತನಿಗಲ್ಲದೆ ಬ್ರಾಹ್ಮಣನಲ್ಲಿ ಹುಟ್ಟುವದು ಸಾಧ್ಯವೇ? ಇದಲ್ಲದೆ ಶಿವಭಕ್ತಿಯಿಲ್ಲದೆ ಕೇವಲ ಹಠಯೋಗಸಾಧನದಿಂದ ಆಕಾಶ ಮಾರ್ಗದಲ್ಲಿ ಸಂಚರಿಸಿದರೆ ಅಥವಾ ಅಣಿಮಾದ್ಯಷ್ಟ ಸಿದ್ಧಿಗಳನ್ನು ಪಡೆದುಕೊಂಡರೆ ಅವನು ಶ್ರೇಷ್ಠನೆನಿಸಿಕೊಳ್ಳಲಾರನೆಂಬದು ಶುದ್ಧಲಿಂಗವಂತರ ತತ್ವವು. ಶ್ರೀಸಿದ್ಧರಾಮೇಶ್ವರನ ಹಠಯೋಗ ಮಾರ್ಗವನ್ನು ಪ್ರಭುದೇವರು ನಿರಾಕರಿಸಿದಂತೆ ಶ್ವಪಚದೇವರು ಸಾಮವೇದಿಗಳ ಯೋಗಮಾರ್ಗವನ್ನು "ಗಗನದೊಳ್ಪಕ್ಕಿ ಪಣ್ಣೆಲೆಗಳೇಂ ಹಾರವೇ ?" ಎಂದು ಜರಿದ ಮಾತನ್ನು ಹರಿಹರನು ಎತ್ತಿಹಿಡಿದಿರುವದಿಲ್ಲವೇ ? ಇದಲ್ಲದೆ "ವಿಪ್ರ ಮೊದಲು ಅಂತ್ಯಜಕಡೆಯಾಗಿ ಶಿವಭಕ್ತರಾದವರೆಲ್ಲ ಒಂದೇ ಎಂಬೆ ಕೂಡಲ ಸಂಗಮದೇವಾ" ಎಂಬ ಬಸವಣ್ಣನ ನುಡಿಯನ್ನೇ ಹರಿಹರನು ತನ್ನ ಈ ರಗಳೆಯಲ್ಲಿ ಅಕ್ಷರಶಃ ಅನುಸರಿಸಿದ್ದಾನೆ. ಒಟ್ಟಿನ ಮೇಲೆ ಹರಿಹರನು ತನ್ನ ಲಿಂಗವಂತಮತದ ವಿಶಾಲ ಮತ್ತು ಉದಾರವಾದ ತತ್ವವನ್ನು ಜಗತ್ತಿಗೆ ತೋರಿಸುವದಕ್ಕಾಗಿಯೂ ಕರ್ಮಠಬ್ರಾಹ್ಮಣರ ಜಾತಿಮದಾಂಧತೆಯನ್ನೂ ಧಿಕ್ಕರಿಸುವದಕ್ಕಾಗಿಯೂ ಸತ್ಯವಾದ ಈ ಕಥೆಯನ್ನು ಎತ್ತಿಹಿಡಿದಿರುವನು. ಅಂದಮೇಲೆ ಈತನು ಲಿಂಗವಂತನಲ್ಲದೆ ಶೈವನಾಗಬಹುದೇ ?

# ಮಹಾದೇವಿಯಕ್ಕಗಳ ಮದುವೆ.

ಲೇ:— ಶ್ರೀ. ಸ. ಹಾ. ಶಿವಮೂರ್ತಿಗಳು ಶಿವಯೋಗಮಂದಿರ.

[ಲೇಖಾಂಕ ೨.]

ಮ. ರಾ. ಸದ್ಧರ್ಮದೀಪಿಕೆಯ ಸಂಪಾದಕರ ಹೇಳಿಕೆಯನ್ನು ಈ ಲೇಖಕರು ತಮ್ಮ ಲೇಖದಲ್ಲಿ ಬಹುವಾಗಿ ಆಯ್ದುಕೊಂಡಿದ್ದಾರೆ. ಅವು ಗಳಲ್ಲಿ ಹಲವುಗಳಿಗೆ ಈ ಮೊದಲಿನ ಒಂದನೇ ಲೇಖಾಂಕದಲ್ಲಿ ಸಾಕಷ್ಟು ಉತ್ತರವು ಬರೆಯಲ್ಪಟ್ಟಿದೆ. ಅವನ್ನೀಗ ಮಾತ್ರ ಇಷ್ಟಕ್ಕೆ ನಿಲ್ಲಿಸಿ, ಇನ್ನು ಳಿದ ಆ ಲೇಖಕರ ಅಭಿಪ್ರಾಯಗಳನ್ನು ಅವಲೋಕಿಸೋಣ.

## ಪ್ರಶ್ನೆ.

ಅಕ್ಕಗಳು ಮದುವೆಯಾಗಿಲ್ಲವಾಗಿ ಸಾಧಿಸಲು ಈ ಲೇಖದಲ್ಲಿರುವ ಆಧಾರಗಳಲ್ಲಿ ಇದೊಂದು ಆಧಾರವು ಬಹು ಮುಖ್ಯವಾಗಿದ್ದಂತೆ ತೋರುತ್ತದೆ. ಏನೆಂದರೆ— ಒಂದು ವೇಳೆ ಹರಿಹರನಿಗೆ ಕಲ್ಯಾಣದ ಹಾಗು ಅನುಭವ ಮಂಟಪದ ಸುದ್ದಿಯು ಗೊತ್ತಿದ್ದರೆ, ಆ ಅನುಭವ ಮಂಟಪದ ಗೋಷ್ಠಿಯಲ್ಲಿ ಬಸವಂಣನವರು ೧೨ ವರುಷ ವಯಸ್ಸೆಂದು-- (ಶೂ. ಸಂ- ೩೩೬ ಪುಟ) ಹೇಳಿದ್ದು ಆತನಿಗೆ ಗೊತ್ತಾಗದೆ ಏಕೆ ಉಳಿ ಯಿತು ? ಒಂದು ವೇಳೆ ಗೊತ್ತಾಗಿದ್ದರೆ ಮಹಾದೇವಿಯಕ್ಕನು ಮದು ವೆಯಾಗಿದ್ದಳೆಂದು ಆತನೆಂದೂ ಬರೆಯುತ್ತಿರಲಿಲ್ಲ.--- ಎಂಬುದಾಗಿ ಈ ಲೇಖಕರು ನಿರ್ಧರಿಸಿಯೇ ಬರೆದಿದ್ದಾರೆ.

## ನಮ್ಮ ಉತ್ತರ.

ಅಕ್ಕಗಳು ಅನುಭವ ಮಂಟಪಕ್ಕೆ ಬಂದಾಗ ಅವರಿಗೆ ೧೨ ವರು ಷಗಳಾಗಿದ್ದುವೆಂದು ಈ ಲೇಖಕರು ತುಂಬಾ ನಂಬಿರುವ ವಚನವಾ ದರೂ 'ಪ್ರಭುವಾರೋಗಣೆ ಸಂಪಾದನೆ' ಯಲ್ಲಿದೆ. ಈ ವಚನದ ಮೇಲೆ ಇರುವ, ಶೂನ್ಯಸಂಪಾದನೆಯ ಕರ್ತೃವಾದ ಸಿದ್ಧವೀರಂಣ್ಣೊಡೆಯನ ವಾಕ್ಯವನ್ನೂ, ಆ ವಚನವನ್ನೂ ಪರಿಕಿಸಿದರೆ ಒಂದಕ್ಕೊಂದು ಮೇಳ ವಿಲ್ಲವೆಂಬುದನ್ನು ವಾಚಕರ ನಿದರ್ಶನಕ್ಕೇ ತಂದುಕೊಡೋಣ. ಸಿದ್ಧ

ವೀರಂಣೊಡೆಯನು— 'ಇಂತು ಬಸವರಾಜದೇವರು ಪ್ರಭುದೇವರಿಗೆ ತೃಪ್ತಿಮಾಡುವ ಬುದ್ಧಿ ಯಾವುದೆಂದು ಕೇಳಲು, ಅದಕ್ಕೆ ಚಿಕ್ಕದಂಣಾಯಕರ ವಚನ'— ಎಂದು ಹೇಳಿಕೊಂಡು ತರುವಾಯ "ಅನಂತ ವರುಷದ ಹಿರಿಯರೆಂಬೆನೆ? ಎನ್ನೆನು. ಅವರು ಭೂಭಾರಕರಾಗಿ. ಏಳು ವರುಷದ ಹಿರಿಯ ಚೇಲಾಳ. ಹನ್ನೆರಡು ವರುಷದ ಹಿರಿಯಳು ಮಹಾದೇವಿಯಕ್ಕ. ಅಂಡಜ ಪಿಂಡಜ ರೋಮಜರೆಂಬ ಅಂದಂದಿನ ಬಾಲಕರು ನಿಮಗೆ ಬುದ್ಧಿ ಹೇಳುವರೆ, ಎನಗೆ ಬುದ್ಧಿಯಿಲ್ಲ ಕೂಡಲ ಸಂಗಮದೇವಾ" ಎಂಬ ವಚನವನ್ನು § ಜೋಡಿಸಿದ್ದಾನೆ. ಇದೀಗ ಸಿದ್ಧವೀರಂಣೊಡೆಯನಾ ವಾಕ್ಯವನ್ನೂ ಈ ವಚನವನ್ನೂ ಮೇಳವಿಸಿ ನೋಡಿಕೊಂಡರೆ ಈ ವಚನವು ಚನ್ನಬಸವಂಣನವರಿಂದ ಹೇಳಲ್ಪಟ್ಟ್ಟುವೆಂದೇ ಒಪ್ಪಿಕೊಳ್ಳಬೇಕು. ಆದರೆ ಚನ್ನಬಸವಂಣನವರ ವಚನದಲ್ಲಿರಬೇಕಾದ "ಕೂಡಲ 'ಚೆನ್ನ' ಸಂಗಮದೇವಾ" ಎಂಬ ಹೆಗ್ಗುರುತು ನಮಗಲ್ಲಿ ತೋರುವದಿಲ್ಲ. ಕೇವಲ "ಕೂಡಲ ಸಂಗಮದೇವಾ" ಎಂಬ ಬಸವಂಣನವರ ಅಂಕಿತವು ಮಾತ್ರ ಒಡಮೂಡಿದೆ. ಆದರೂ ಶೂನ್ಯ ಸಂಪಾದನಾಕಾರನ ವಾಕ್ಯದಿಂದ ಮತ್ತು ಅಲ್ಲಿರುವ ಸಂದರ್ಭದಿಂದ— ಇದು ಬಸವಂಣನವರ ವಚನವೆಂದು ಯಾರೂ ಹೇಳಲು ಸಾಧ್ಯವಿಲ್ಲ. ಅದು ಸಾಧುವಲ್ಲ. ಆದರೆ ಯ್ಯಾವ ಬಗೆಯಿಂದಲೋ 'ಚೆನ್ನ' ಎಂಬ ಪದವು ಲೋಪವಾಗಿದೆ, ಎಂದು ನಿಶ್ಚಯಿಸಬಹುದು. ಆದ್ದರಿಂದ ಇದು ಚೆನ್ನಬಸವಂಣನವರ ವಚನವೆಂದು ಹೇಳಬೇಕಲ್ಲದೆ, ಬಸವಂಣನವರ ವಚನವೆಂದು ಹೇಳಿದರೆ ತಪ್ಪಾಗುವದು.

ಬಸವಂಣನವರ ವಚನವೇ ಪ್ರಮಾಣ, ಚೆನ್ನಬಸವಂಣನವರ ವಚನವು ಪ್ರಮಾಣವೇ ಅಲ್ಲವೇ? ಎಂದರೆ — ಅಂದಿನ ಯಾರ ವಚನದಲ್ಲಿಯಾದರೂ ನಮಗೆ ಒಪ್ಪಿಗೆಯಿಹುದು, ಒಲುಮೆಯಿಹುದು, ವಿಶ್ವಾಸವಿಹುದು. ಆದರೆ ಅನುಭವ ಮಂಟಪಕ್ಕೆ ಬಂದಾಗ ಅಕ್ಕಗಳಿಗೆ ಹನ್ನೆರಡು ವರುಷಗಳಾಗಿದ್ದುವೆಂಬುದನ್ನು ತೋರಲು, ಸಾರಲು ಈ ವಚನವು ಚಿಕ್ಕದಂಣಾಯಕರಿಂದ ಹೇಳಲ್ಪಟ್ಟಿಲ್ಲ; ಹನ್ನೆರಡನೆಯ ವರು

---

§ ಶೂನ್ಯಸಂಪಾದನೆಯ ೩೩೬ ನೇ ಪುಟದಲ್ಲಿ.

ಷದಲ್ಲಿ ಅಕ್ಕನು ತತ್ತ್ವವೇತ್ತಳಾಗಿದ್ದಳು, ಜ್ಞಾನಿಯಾಗಿದ್ದಳು * ಎಂಬು ದಕ್ಕಷ್ಟೇ ಹೇಳಲ್ಪಟ್ಟಿದೆ ಎಂಬುದು ನಮ್ಮ ಅಭಿಪ್ರಾಯ. ಮತ್ತೊಂದೇನಂದರೆ "ಹನ್ನೆರಡು ವರುಷದ ಹಿರಿಯಳು ಮಹಾದೇವಿಯಕ್ಕ" ಎಂಬ ವಾಕ್ಯಕ್ಕೆ ಈ ಲೇಖಕರು ಮಾಡಿರುವ ಅರ್ಥವನ್ನು ಅನುಸರಿಸಿದರೆ— "ಏಳು ವರುಷದ ಹಿರಿಯ ಚೀಲಾಳ" ಎಂಬ ಅದೇ ವಚನದೊಳಗಿನ ವಾಕ್ಯಕ್ಕೂ ಶ್ರೀಯಾಳಶೆಟ್ಟಿಯ ಕುಮಾರನಾದ ಚೀಲಾಳನೂ ಆಗ ಅನುಭವ ಮಂಟಪಕ್ಕೆ ಬಂದಿದ್ದನೆಂದು ಹೇಳಬೇಕಾಗುತ್ತದೆ. ಇದಕ್ಕೆ ಈ ಲೇಖಕರು ಸಮ್ಮತಿಸುತ್ತಾರೆಯೋ ಎಂದು ನಮ್ಮ ಸವಿನಯ ಪ್ರಶ್ನೆ. ಇನ್ನೊಂದೇನಂದರೆ ಅಕ್ಕಗಳ ಸಂಪಾದನೆಯೊಂದು ಪ್ರತ್ಯೇಕವಾಗಿದ್ದ ಮೇಲೆ ಇದರಲ್ಲಿಯ ವಚನಗಳನ್ನೂ, ಶೂನ್ಯಸಂಪಾದನೆಯನ್ನೇ ರಚಿಸಿದ ಸಿದ್ಧವೀರಣ್ಣೊಡೆಯನ ಸ್ವತಃ ಅಭಿಪ್ರಾಯವನ್ನೂ ಈ ವಿಷಯದಲ್ಲಿ ಅವಲೋಕಿಸಬೇಕು, ಆಲೋಚಿಸಬೇಕು. ಕಾರಣ ಇನ್ನು ಮಹಾದೇವಿಯಕ್ಕಗಳ ಸಂಪಾದನೆಯಲ್ಲಿ ಪ್ರವೇಶಿಸೋಣ, ಪರಿಕಿಸೋಣ, ಪರಿಗ್ರಹಿಸೋಣ.

ಅಕ್ಕಗಳು ಶಿವಾನುಭವ ಮಂಟಪವನ್ನು ಹೊಕ್ಕ ನಂತರ, ಆಗ ಶ್ರೀಮದಲ್ಲಮ ಪ್ರಭುದೇವರು—"ಉದಮದದ ಯೌವನವನೊಳಕೊಂಡ

---

* ಮಹಾದೇವಿಯಕ್ಕಗಳ— 'ಬಾಲ್ಯ ಸಡಿಲ್ದು, ಯೌವನಂ ಮೆಲ್ಲಮೆಲ್ಲನಾಲಿಂಗಿಸುವಕ್ಕಿಂತಲೂ ಮೊದಲೇ ಎಂದರೆ 'ನಾಲ್ಕಯ್ದು ಪತ್ತು ಸಂವತ್ಸರಂ ನೆರೆಯ'—ಲು ಆ ಅಕ್ಕನಿಗೆ 'ಶಿವಜ್ಞಾನ ಸಂಪನ್ನೆ' ಎಂದು ಆ ಹರಿಹರ ಕವಿಯು ಜೋಡಿಸಿದ ವಿಶೇಷಣವು ಇದೇ ಅರ್ಥವನ್ನೇ ಪುಷ್ಟೀಕರಿಸುತ್ತದೆ. [ಮಹಾದೇವಿಯಕ್ಕನ ೮ಗಳೆಯ ೧೪ನೇ ಪುಟ]

ಮಹಾದೇವಿಯಕ್ಕನು '...ನಡೆನುಡಿಯಲೊಪ್ಪುವ ಕಲ್ಪಲತೆಯಂತೆ' ಮತ್ತು '...ಭಕ್ತಿಯ ಬಳ್ಳಿಯಂತೆ, ಅನೇಕ ಪರಿಯಲಿ ಬೆಳೆವುತಿರ್ದಳು, ಲೋಕದೊಳು ತಾನಲ್ಲದಿಲ್ಲೆಂಬ ತುಳ ಮಹಿಮೆಯಲಿ......' [ಶ್ರ. ಲೀ. ಸಂ–೫೩ ಪುಟ] ಇಂತು ಬಾಲ್ಯವನ್ನು ಕಳೆಯುತಿದ್ದಳೆಂದು ಹೇಳುವೀ ಚಾಮರಸ ಕವಿಯ ಪದ್ಯಗಳಲ್ಲಿಯೂ ಇದೇ ಅಭಿಪ್ರಾಯವೇ ಧ್ವನಿತವಾಗುತ್ತದೆ.

ಮತ್ತು ಹದಿನಾರು ವಯಸ್ಸಿನ [ಶೂ. ಸಂ. ೨೭೯ ಪುಟ] ಅಕ್ಕಗಳು ಶಿವಾನುಭವ ಮಂಟಪದಲ್ಲಿ ಎಲ್ಲ ವಚನಕಾರರಿಗಿಂತಲೂ ಮಿಗಿಲಾದ ಸ್ಥಾನವನ್ನೂ ಮಾನವನ್ನೂ ಪಡೆಯುವಂತೆ ಮಾತನಾಡಬೇಕಾದರೆ ಹನ್ನೆರಡನೆಯ ವಯಸ್ಸಿನಲ್ಲಿಯೂ ಅಷ್ಟು ಜ್ಞಾನಿಗಳಾಗಿರಲೇಬೇಕು.

ಸತಿ, ನೀನಿತ್ತಲೇತಕ್ಕೆ ಬಂದೆಯುವ್ವಾ?...'' [ಶೂ. ಸಂ. ೬೭೯ ಪುಟ] ಎಂದು ಅಕ್ಕಗಳನ್ನು ಕುರಿತು ಪ್ರಶ್ನಿಸಿದ್ದಾರೆ. ಮತ್ತು ಈ ಲೇಖಕರು ಯಾವ ಶೂನ್ಯಸಂಪಾದನೆಯಲ್ಲಿಯ ವಚನವನ್ನು ಆಯ್ದುಕೊಂಡು ಸಾಧಿಸುತ್ತಾರೆಯೋ ಅದೇ 'ಶೂನ್ಯಸಂಪಾದನೆ' ಯನ್ನೇ ರಚಿಸಿದ, ಆ ಘನವಾದ ಮತಿಯುಳ್ಳ ಗತಿಯುಳ್ಳ ಸಿದ್ಧವೀರಣ್ಣೊಡೆಯನೇ, ಶಿವಾನುಭವ ಮಂಟಪಕ್ಕಭಿಮುಖರಾದ ಅಕ್ಕಗಳನ್ನು "ಷೋಡಶಪ್ರಾಯದ ಯೌವನದ ಸುಖದ ಸುಗ್ಗಿ" [ಶೂ. ಸಂ. ೨೭೬ ಪುಟ] ಎಂದು ಅದೆಂದಿಗೂ ಹೀಗೆ ಬಣ್ಣಿಸುತ್ತಿರಲಿಲ್ಲ, ಭಾವಿಸುತ್ತಿರಲಿಲ್ಲ. ಅನಿತೇಕೆ? ಅನುಭವ ಮಂಟಪದ ಬಳಿ ಅಕ್ಕಗಳು ಬರಲು, ಆಗ ಕಿನ್ನರಯ್ಯಗಳು ಪ್ರಶ್ನಿಸಿದ ವಚನಕ್ಕೆ "ಜನ್ಮಸದ ಹೊರ ಮಿಂಚಿನಲ್ಲಿ ನಿಮ್ಮ ಕಂಣಿಗೆ ತೋರುವ ಕಾಮನ ಸುಟ್ಟುರುಹಿದ ಭಸ್ಮವ ನೋಡಯ್ಯ" ಎಂದು ಅಕ್ಕಗಳೇ ಬಹು ಚೊಕ್ಕವಾಗಿ ಉತ್ತರಿಸಿಲ್ಲವೇ? ವಿವರಿಸಿಲ್ಲವೇ? ಅನುಭವ ಮಂಟಪಕ್ಕೆ ಪ್ರವೇಶಿಸಿದಾಗ ಅಕ್ಕಗಳು ತುಂಬಿದ ಯೌವ್ವನಾವಸ್ಥೆಯುಳ್ಳವರೆಂಬುದಕ್ಕೆ ಇಂತು ಅನುಭವ ಮಂಟಪದ ಅಧ್ಯಕ್ಷರಾದ ಶ್ರೀಮದಲ್ಲಮ ಪ್ರಭುಗಳ, ಅಲ್ಲದೆ ಶೂನ್ಯಸಂಪಾದನಾಕಾರನ ಮತ್ತು ಸಾಕ್ಷಾತ್ ಮಹಾದೇವಿಯಕ್ಕಗಳ ವಾಕ್ಯಗಳೂ, ವಚನಗಳೂ ಪ್ರತ್ಯಕ್ಷವಿವೆ. ಹೀಗಿದ್ದೂ ಶೂನ್ಯಸಂಪಾದನೆಯಲ್ಲಿದ್ದ ವಚನದ ಸಂದರ್ಭವನ್ನೂ, ಸಹಜಾರ್ಥವನ್ನೂ ಲಕ್ಷಿಸದೆ, ಶೋಧಿಸದೆ ತಮ್ಮ ಬಯಕೆಗನುಗುಣವಾಗಿ ಗ್ರಹಿಸಿ ಇದು ಹೀಗೇ ಎಂದು ಸಾಧಿಸಿದರೆ, ಬೋಧಿಸಿದರೆ ಅದು ವಿಮರ್ಶಕರಿಂದ ಸ್ತುತಿಸಲ್ಪಡುವ, ಮಾನಿಸಲ್ಪಡುವ ಮಾರ್ಗವಹುದೋ ಅಲ್ಲವೋ ಎಂಬುದನ್ನು ನಿರ್ಣಯಿಸಿ ಹೇಳುವ ಅಧಿಕಾರವು ವಾಚಕರನ್ನೇ ಕೂಡಿದೆ. ಇನ್ನು ಅಕ್ಕಗಳೇ ತಮ್ಮ ಯೌವನದ ವಿಚಾರವನ್ನು ಕಿನ್ನರಯ್ಯಗಳಿಗೆ ಉತ್ತರರೂಪದಲ್ಲಿ ತಿಳಿಸಿದ್ದರೂ ಈ ಲೇಖಕರು—'ಅನುಭವ ಮಂಟಪದಲ್ಲಿ ಶಿವಶರಣರೆದುರಿಗೆ ಎನಗೆ ಹನ್ನೆರಡು ವರುಷವೆಂದು ಚಿತ್ರಿಸಿದ ಅಕ್ಕಗಳಿಗೆ, ಅದಕ್ಕೂ ಮೊದಲೇ ಹರಿಹರನು ಲಗ್ನಮಾಡಿರುವನು'—ಎಂದೂ ಬರೆದಿದ್ದಾರೆ. ಅಕ್ಕಗಳೇ ಎನಗೆ ಹನ್ನೆರಡು ವರುಷವೆಂದು ಯಾವ ಅನುಭವ ಮಂಟಪದಲ್ಲಿ ಹೇಳಿರುವರೋ ತಿಳಿಯದು. ಆ ವಚನವು ಯಾವ ಗ್ರಂಥದಲ್ಲಿ ಮತ್ತು ಎಷ್ಟನೇ ಪುಟದಲ್ಲಿ ಇರುವದು ಎಂಬುದನ್ನಷ್ಟು ತಮ್ಮ ಲೇಖದಲ್ಲಿ ತಿಳಿಸಿದ್ದರೆ ಬಹು ಸೊಗಸಾಗುತ್ತಿತ್ತು. ಏಕೆಂದರೆ 'ಮಹಾದೇವಿಯಕ್ಕಗಳ ವಚನ' ವೆಂದು ಪ್ರಸಿದ್ಧ

ವಾಗಿರುವ ಅವರ ವಚನಗಳಲ್ಲಿಯಾಗಲಿ, ಬೇರೆಡೆಯಲ್ಲಿಯೇ ಆಗಲಿ ಸೃಷ್ಟಿಯಲ್ಲಿ ದೃಷ್ಟಿಯನ್ನಿಟ್ಟು ಎಷ್ಟು ಜನ ಪರಿಶೀಸಿದರೂ ಆ ವಚನವೇ ದೊರೆಯುವಂತಿಲ್ಲ. ಹೀಗಿದ್ದೂ ಲೇಖಕರಿಂತು ಧೈರ್ಯದಿಂದ ಬರೆದಿರ ಬೇಕಾದರೆ 'ಬೆಕ್ಕು ಕಂಣು ಮುಚ್ಚಿ ಹಾಲು ಕುಡಿದಂತೆ' ಎಂಬ ನಾಣ್ಣುಡಿಯನ್ನನುಸರಿಸಿರಬಹುದು.

## ಮತ್ತೂ ಇದೇ ಪ್ರಶ್ನೆಯು.

'ಇಲ್ಲಿ ವಿಚಾರಿಸಿ ನೋಡಿದರೆ ಬಸವನ ವಚನಾಮೃತಕ್ಕಿಂತಲೂ ಈ ಹರಿಹರನ ಮಾತು ನಮಗೆ ಪ್ರಮಾಣವೇ? ಹಾಗು ಆ ಕುಮಾರಿಯನ್ನು ಆ ಕೌಶಿಕನಾದರೂ ಆಗಿರಬಹುದೇ? ಆಗಿ ಭೋಗಿಸಿರಬಹುದೇ? ಇಂತಹ ಎಳೆ ವಯಸ್ಸಿನ ಅಕ್ಕನನ್ನು "ಒಂದು ದಿನ ಅರಸನೊಡತಣ ಸುರತ ಶ್ರಾಂತಿಯಿಂ ಮಹಾದೇವಿಯರ್ ಬಳಲ್ದು ಮರೆದೊರಗಿರೆ" (೬ನೆಯ ಸ್ಥಲ ೫೧ನೇ ಪುಟ) ಎಂದು ವರ್ಣಿಸಿದ ಹರಿಹರನ ಮಾತಿಗೆ ಏನನ್ನಬೇಕು? ಒಂದು ವೇಳೆ ಭೋಗಿಸಿದ್ದರೆ ಮಕ್ಕಳಾರು? ಇದನ್ನೆಲ್ಲ ನೆನೆಸಿಕೊಂಡರೆ ಹರಿಹರನು ಹೇಳುವ ಮಾತುಗಳಿಗೆ ಅಂತವೇ ಇಲ್ಲದಂತಾಗುತ್ತದೆ. ಅವೆಲ್ಲ ಗಾಳಿಯ ಗಂಟೆಂದು ಭಾಸವಾಗುತ್ತದೆ" ಎಂದು ಹುರುಳಿಲ್ಲದ ತಿರುಳಿಲ್ಲದ ಪ್ರಶ್ನೆಗಳನ್ನು ಚಾಚಿದ್ದಾರೆ.

## ಇದಕ್ಕೆ ಉತ್ತರ.

ಅನುಭವ ಮಂಟಪವನ್ನು ಹೊಕ್ಕಾಗ ಅಕ್ಕಗಳಿಗೆ ೧೨ ವರುಷವೆಂದು ತಾವೇ ತಪ್ಪು ತಿಳಿದುಕೊಂಡು, ಪಾಪ! ಲಿಂಗೈಕ್ಯನಾದ ಆ ಹರಿಹರ ಮಹಾಕವಿಯ ಮೇಲೆ ಅತಿ ಆವೇಶದಿಂದ ರೇಗಿ ಹೋಗಿ ಪರುಷ ಪದಗಳನ್ನು ಪ್ರಯೋಗಿಸಿದ ಈ ಲೇಖಕರನ್ನು ನೋಡಿದರೆ "ಕುಣಿಯಲು ಬಾರದೆ, ಭೂಮಿ ಸೊಟ್ಟವಿದೆ." ಎಂಬ ಪುರಾತನ ನಾಣ್ಣುಡಿಯು ಅದೇಕೋ ನೆನವಾಗಿಯೇ ಬಿಡುತ್ತದೆ.

ಅನುಭವ ಮಂಟಪವನ್ನು ಹೊಕ್ಕ ಅಕ್ಕನು ಚಿಕ್ಕವಳೆಂಬುದಕ್ಕೆ ಬಸವಂಣನವರ ವಚನವೂ ದೊರೆಯುವದಿಲ್ಲ. ಯಾವ ಕವಿಗಳ ಪದ್ಯಗಳೂ ಇರುವದಿಲ್ಲ. ಯೌವನಸ್ಥರಿದ್ದರೆಂಬುದಕ್ಕೆ ಮಾತ್ರ ಸಾಕಷ್ಟು ವಚನಗಳ ಪ್ರಮಾಣವನ್ನೇ ತೋರಿಸಿದ್ದೇವೆ. ಆದ್ದರಿಂದಲೇ ಕೆಂಚವೀರಂಣೊಡೆಯಾದಿಗಳೇ ಆಗಲಿ, ಹರಿಹರದೇವನಾಗಲಿ, ಚೆನ್ನಬಸವಾಂ

ಕನ್ನಾಗಲಿ ಅಕ್ಕಗಳ ಮದುವೆಯನ್ನು ತಿಳಿಸಿದ್ದಾರೆ. ಇನ್ನು ಕೌಶಿಕನ ಅಂಗ ಸಂಗದ ವಿಷಯವಾಗಿ ಸದ್ಯಃ ಯಾರ ಅಭಿಪ್ರಾಯವನ್ನೂ ನಾವು ಅಲ್ಲಗಳೆಯುವದಿಲ್ಲ, ವಿರೋಧಿಸುವದಿಲ್ಲ.

## ಪ್ರಶ್ನೆ.

ನಿಜವಾಗಿಯೂ ಆತನಿಗೆ [ಹರಿಹರನಿಗೆ] ಕಲ್ಯಾಣದ ವಿಷಯವೇ ಗೊತ್ತಿಲ್ಲ. § ಇನ್ನು ಇತ್ತ ಉಡುತಡಿಯಿಂದ ಬಂದ ಸುದ್ದಿಗಳೆಲ್ಲ ಬಹುಮಟ್ಟಿಗೆ ಕಾಲ್ಪನಿಕಗಳೇ. ಏಕಂದರೆ ಅಕ್ಕನವರು ಕೇವಲ ಕೌಶಿಕರಾಜನ ಮನೆಗೆ ಹೋದದ್ದನ್ನೇ ಲಗ್ನವಾಗಿರುವರೆಂದು ಬರೆದು ಬಿಟ್ಟ್ಟುದರಿಂದ ಅಲ್ಲಿಯ ಜನಗಳು ಹಾಗೆ ಊಹಿಸಿ ಹಬ್ಬಿಸಿರಲು ಸಾಕಷ್ಟು ಅವಕಾಶವಿದೆ.

## ನಮ್ಮ ಉತ್ತರ.

ಅಕ್ಕಗಳು ಪ್ರಥಮತಃ ಕೌಶಿಕನ ವಸತಿಗೆ ಹೋಗಿದ್ದರೆಂಬುದಕ್ಕೆ ಪ್ರಮಾಣವೆಲ್ಲಿ? ಯಾವ ಕವಿಯು ಎಲ್ಲಿ ಹೇಳಿದ್ದಾನೆ? ಹರಿಹರದೇವನು ಮಾತ್ರ ಇದನ್ನು ಹೇಳಿಲ್ಲ. ಚಾಮರಸನಂತೂ ಕೌಶಿಕನು ರಾಜನಾದರೂ ಅಕ್ಕಗಳ ಮನೆಗೇ ಬಂದಿದ್ದನೆಂದು ಬರೆದಿದ್ದಾನೆ. ಇನ್ನುಳಿದವರೂ ಇಂತು ವಿವರಿಸಿಲ್ಲವಾದ ಕಾರಣ ಈ ಲೇಖಕರ ಪ್ರಶ್ನೆಯು ತಳವಿಲ್ಲದುದಾಗಿದೆ.

## ಮತ್ತೊಂದು ಪ್ರಶ್ನೆ.

ಉಡುತಡಿಯು ಬೆಳವಲ ನಾಡಿನಲ್ಲಿತ್ತು. ಕೌಶಿಕರಾಜನು ಜೈನನು. ಅಕ್ಕನ ಮಾತಾ ಪಿತೃಗಳ ಹೆಸರು ವಿಮಲ, [ನಿರ್ಮಲ] ಸುಮತಿ ಎಂಬ ಈ ವಿಷಯಗಳೆಲ್ಲ ಹರಿಹರನ ಕಾವ್ಯದಲ್ಲಿ ಅಡಕವಾಗಿಲ್ಲ. ಕಾರಣ ಆತನ ಕಾವ್ಯವು ಸಂಪೂರ್ಣ ನಿರ್ದುಷ್ಟವಾದುದಲ್ಲವು.' ಎಂದು ಬರೆದಿದ್ದಾರೆ.

## ನಮ್ಮ ಉತ್ತರ.

ಕೌಶಿಕರಾಜನು ಜೈನನೆಂಬುದನ್ನೂ, ಉಡುತಡಿಯು ಬೆಳವಲ ನಾಡಿನಲ್ಲಿತ್ತೆಂಬುದನ್ನೂ ಹರಿಹರನಂತೆ ಚಾಮರಸನೂ ಹೇಳಿಲ್ಲ. ಅಕ್ಕ

---

§ ಈ ವಿಷಯವು ಈ ಮೊದಲಿನ ಲೇಖಾಂಕದಲ್ಲಿ ಕೊಂಚಮಟ್ಟಿಗೆ ತಿಳಿಸಲ್ಪಟ್ಟಿದೆ. ಆದರೂ ಪ್ರತ್ಯೇಕವಾಗಿ ಇನ್ನೊಮ್ಮೆ ಸರಿಯಾದ ಸತ್ಯವನ್ನು ವಿವರಿಸುವ ಬಯಕೆಯು ಈ ಲೇಖಕನಿಗಿರುವದು.

ಗಳ ಮದುವೆಯನ್ನು ಬಂಣಿಸಿದ ಚೆಂನಬಸವಾಂಕನು ಮಾತ್ರ ಇವುಗಳನ್ನೆಲ್ಲ ವಿವರಿಸಿದ್ದಾನೆ. ಚೆನ್ನಬಸವಾಂಕನಿಗೆ ಹರಿಹರನ ಕಾವ್ಯದ ಪರಿಚಯವಿದ್ದಿತು. ಇಂತು ನೋಡಿದರೆ ಚನ್ನಬಸವಾಂಕನ ಪುರಾಣವೇ ದಿಟವಾಗುವದು. ಚಾಮರಸನ ಪುರಾಣವೇ ಸಟೆಯಾಗುವದು.

* ಹರಿಹರನಿಗೆ ತನ್ನ ಕಥಾನಾಯಿಕೆಯ ಅಥವಾ ನಾಯಿಕನ ಮಾತಾ ಪಿತೃಗಳ ನಾಮವು ಗೊತ್ತಿಲ್ಲದಿದ್ದರೆ ಆಗ ಕಲ್ಪಿತದ ಗೋಜಿಗೆ ಹೋಗದೆ ಅವರಿಗೆ ಸಾಮಾನ್ಯವಾಗಿ, ಸಹಜವಾಗಿ, ಶಿವಭಕ್ತ–ಶಿವಭಕ್ತೆ ಎಂದು ಹೇಳುವದು ಆತನ ಪದ್ಧತಿಯೇ ಇದ್ದಂತೆ ತೋರುತ್ತದೆ. ಏಕೆಂದರೆ ಇನ್ನುಳಿದ ಅವನ ಎಷ್ಟೋ 'ರಗಳೆ' ಗಳೇ ಇದಕ್ಕೆ ದೃಷ್ಟಾಂತ. ಒಂದೊಂದು ಸಾರೆ ನಾಮವು ತಿಳಿದಿದ್ದರೂ ಶಿವಭಕ್ತ–ಶಿವಭಕ್ತೆ ಎಂದು ಬರೆಯುತ್ತಾನೆ. (ಉದಾ:— 'ಬಸವರಾಜ ದೇವರ ರಗಳೆ' ಯ ಸ್ಥ. ೨. ಪು. ೯ ನ್ನು ನೋಡಿ.) ಕಾರಣ ಇದನ್ನು ಅವನ 'ಪದ್ಧತಿ' ಯೆಂದು ದೋಷವೆಂದು ಪರಿಗಣಿಸಿದರೆ, ದೋಷವಾಗುವದು.

## ಈ ಲೇಖಕರ ಸುಳ್ಳು ಹೇಳಿಕೆ.

೩೭ನೇ ಇಸ್ವಿಯ ಎಪ್ರೀಲ ತಿಂಗಳ 'ಶಿವಾನುಭವ' ಮಾಸಿಕದ ೨೮೬ನೆಯ ಪುಟದಲ್ಲಿ— 'ಹರಿಹರನು ಐತಿಹಾಸಿಕ ದೃಷ್ಟಿಯನ್ನು ಬಿಟ್ಟು ತನ್ನ ಮತಕ್ಕೆ ಅಥವಾ ಮನಕ್ಕೆ ಒಪ್ಪುವಂತೆ ಒಪ್ಪನ್ನು ಹಾಕುವವನೆಂದು ಇದೇ ಲೇಖಕರೇ ಬೇರೆ ಕಡೆಗೆ ಪರ್ಯಾಯದಿಂದ ಒಪ್ಪಿಕೊಂಡಿದ್ದಾರೆ.' ಎಂದೂ ಬರೆದಿದ್ದಾರೆ.

## ನಮ್ಮ ಅಭಿಪ್ರಾಯ.

ಹರಿಹರನು ಐತಿಹಾಸಿಕ ದೃಷ್ಟಿಯನ್ನು ಬಿಟ್ಟು ಸ್ವತಂತ್ರ ಮಾರ್ಗವನ್ನು ಕಲ್ಪಿಸಿಕೊಳ್ಳುವನೆಂಬ ಕೊಂಚ ಭಾವವನ್ನಾದರೂ ಈ ಲೇಖಕರು ಆ ನನ್ನ ಬರವಣಿಗೆಯನ್ನೇ ಎತ್ತಿ ಇನ್ನು ಮುಂದಾದರೂ ತೋರಿಸಿಕೊಡಲು ಸಿದ್ಧರಿರುವರೋ?

[ ಮುಂದೆ ]

* ನಿರ್ಮಲ–ಸುಮತಿ, ಶಿವಭಕ್ತ–ಶಿವಭಕ್ತೆ, ಇವುಗಳ ವಿಚಾರವಾಗಿ ಈ ಮೊದಲಿನ ಲೇಖಾಂಕದ ೧೨೨ನೇ ಪುಟದಲ್ಲಿ ಕೊಂಚಮಟ್ಟಿಗೆ ತಿಳಿಸಲ್ಪಟ್ಟಿದೆ.

# ಶ್ರೀ ನಿಡುಮಾಮಿಡಿ ಮಠದ ಇತಿಹಾಸ.

## ಲೇಖಾಂಕ ೪.

(ಲೇ:– ಎಂ. ಜಿ. ನಂಜುಂಡಾರಾಧ್ಯ 'ವಿಶಾರದ ಸಿದ್ಧಗಂಗಾ ಗುರುಕುಲಾಶ್ರಮ)

ಈ ವರೆಗಿನ ವಿವೇಚನೆಯಿಂದ ಈ ಮಠವು ಶ್ರೀಶೈಲದಲ್ಲಿನ ಪ್ರಸಿದ್ಧವಾದ ಗೋಕರ್ಣ ಸೂರ್ಯಸಿಂಹಾಸನದ ಪರಂಪರೆಯದೆಂದೂ ಶ್ರೀ. ಜಗದ್ಗುರು ಗೋಕರ್ಣ ಶಿವಾಚಾರ್ಯರೇ ಇದರ ಮೂಲಪುರುಷರಿರಬೇಕೆಂದೂ ಸಿದ್ಧವಾಗಿದೆ. ತಾಮ್ರಶಾಸನವೂ* ಸಹ ಈ ವಿಷಯದಲ್ಲಿ ಬಲವಾದ ಆಧಾರವಾಗಿದೆಯೆನ್ನಲು ಸಂಶಯವಿಲ್ಲ.

ಇನ್ನು ಈ ಪೀಠದ ಮೂಲ ಪುರುಷರಾದ ಶ್ರೀ ಗೋಕರ್ಣ ಶಿವಾಚಾರ್ಯರ ವಿಷಯದಲ್ಲಿ ಒಂದೆರಡು ವಿಷಯಗಳನ್ನು ನಿರ್ದೇಶಿಸುವುದು ಅನಿವಾರ್ಯವಾಗಿದೆ. ಇವರ ಕಾಲಮಾನದ ವಿಷಯದಲ್ಲಿ ಯಾವುದೊಂದು ಖಚಿತವಾದ ನಿರ್ಣಯವನ್ನು ಮಾಡಲು ಸಾಧ್ಯವಿಲ್ಲವಾಗಿದೆ. ಶ್ರೀಶೈಲಂ ಮ್ಯಾನೇಜಿಂಗ್ ಕಮೀಟಿಯ ಪ್ರಸಿಡೆಂಟರಾದ ಮ॥ ರಾ॥ ಶ್ರೀ॥ ಪಿ. ರಾಮಯ್ಯನವರೂ[೨] ಸಹ 'ಶ್ರೀ ಗೋಕರ್ಣ ಶಿವಾಚಾರ್ಯರು ನವನಾಥ ಸಿದ್ಧರ ಸಮಕಾಲೀನರಾಗಿ ಶ್ರೀ ಗಿರಿಯಲ್ಲಿ ನೆಲೆಸಿದ್ದರೆಂದು ಹೇಳುವರಲ್ಲದೆ ಕಾಲಮಾನದ ವಿಷಯದಲ್ಲಿ ಕೈಹಾಕಿಲ್ಲ. ಆದರೂ ಶ್ರೀ ಗೋಕರ್ಣ ಶಿವಾಚಾರ್ಯರು ವೀರಶೈವ ಮತಪ್ರವರ್ತಕರಲ್ಲಿ ಮುಖ್ಯರಾದ ಯೋಗಾಚಾರ್ಯರಲ್ಲಿ ಪರಿಗಣಿತರಾಗಿದ್ದಾರೆ.

ಅನಾದಿ ಸಂಸಿದ್ಧವಾದ ವೀರಶೈವ ಸಿದ್ಧಾಂತವು ಪರಮಾತ್ಮನಿಂದ ಬೋಧಿಸಲ್ಪಟ್ಟು ಶಿವಯೋಗಸಿದ್ಧರೆಂಬ ಇಪ್ಪತ್ತೆಂಟು ಮಂದಿ ಯೋಗಾಚಾರ್ಯರಿಂದಲೂ ಅವರ ಶಿಷ್ಯಪ್ರಶಿಷ್ಯರಿಂದಲೂ ಭೂಲೋಕದಲ್ಲಿ ಪ್ರಚಾರ ಮಾಡಲ್ಪಟ್ಟಿತೆಂಬುದು ಸಿದ್ಧವಿಷಯವಾಗಿದೆ.

ಇವರ ಹೆಸರುಗಳೂ ಅವರ ಶಿಷ್ಯರ ಹೆಸರುಗಳೂ ಶ್ರೀ ಲಿಂಗ ಪುರಾಣದ ಪೂರ್ವಭಾಗದ ಏಳನೆಯ ಮತ್ತು ಇಪ್ಪತ್ತುನಾಲ್ಕನೆಯ

* ನಮ್ಮ ಮೊದಲನೆಯ ಲೇಖನದಲ್ಲಿ ಉಲ್ಲಿಖಿತವಾಗಿದೆ.

೨ ಶ್ರೀಶೈಲಂ ಸಂಕ್ಷಿಪ್ತ ಇತಿಹಾಸಮು.

ಅಧ್ಯಾಯುಗಳಲ್ಲಿ ವಿಸ್ತಾರವಾಗಿ ಹೇಳಿರುತ್ತದೆ. ಶ್ರೀ ವಾಯುವೀಯ ಸಂಹಿತೆಯ ಉತ್ತರಭಾಗದ ಹತ್ತನೆಯ ಅಧ್ಯಾಯದಲ್ಲಿ ಸಂಕ್ಷಿಪ್ತವಾಗಿ ಅದೇ ವಿಷಯದ ವಿವರಣವಿರುವುದು.[೧] "ಕೃಷ್ಣ":—

ಯುಗಾವರ್ತೇಷು ಸರ್ವೇಷು ಯೋಗಾಚಾರ್ಯಚ್ಛಲೇನತು ।
ಅವತಾರಾಣಿ ಶರ್ವಸ್ಯ ಶಿಷ್ಯಾಂಶ್ಚಭಗವನ್ವದ ॥
ಉಪಮನ್ಯುಃ— ಶ್ವೇತಃ ಸುತಾರೋಮದನಃ ಸುಹೋತ್ರಃ ಕಂಕ ಏವಚ ।
ತಾಗಾಕ್ಷಿಶ್ಚ ಮಹಾಮಾಯೋ ಜೇಗೀಷವ್ಯಸ್ತಥೈವಚ ॥
ದಧಿವಾಹಶ್ಚ ವೃಷಭಃ ಮುನಿರುಗ್ರೋ ತ್ರಿರೇವಚ ।
ಸುಬಾಲಕೊ ಗೌತಮಶ್ಚ ತಥಾ ವೇದ ಶಿರಾಮುನಿಃ ॥
ಗೋಕರ್ಣಶ್ಚ ಗುಹಾವಾಸೀ ಶಿಖಂಡೀಚಾಪಸ್ಮೃತಃ ।
ಜಟಾಮಾಲೀ ಚಾಟ್ಟಹಾಸೋ ದಾರುಕೋ ಲಾಂಗಲೀ ತಥಾ ॥
ಮಹಾಕಾಲಶ್ಚ ಶೂಲೀ ಚ ದಂಡೀ ಮುಂಡೀ ಸ ಏವ ಚ ।
ಸಹಿಷ್ಣುಸ್ಸೋಮಶಂರ್ಮಾ ಚ ಲಕುಲೀಶ್ವರ ಏವ ಚ ॥
ಏತೇವಾಹಾರಾಃಹ ಕಲ್ಪೇಸ್ಮಿನ್ ಸಪ್ತಮಸ್ಯಾಂತರೇ ಮನೋಃ ।
ಅಷ್ಟಾವಿಂಶತಿ ಸಂಖ್ಯಾಕಾಃ ಯೋಗಾಚಾರ್ಯಾ ಯುಗಕ್ರಮಾತ್ ॥

ಶ್ರೀಚನ್ನಸದಾಶಿವ ಯೋಗೀಂದ್ರರಿಂದ[೨] ವಿರಚಿತವಾಗಿರುವ ಶಿವಯೋಗ ಪ್ರದೀಪಿಕಾ ಎಂಬ ಗ್ರಂಥದ ವ್ಯಾಖ್ಯಾನದಿಂದಲೂ ಈ ವಿಷಯುವು ಸುದೃಢವಾಗುತ್ತದೆ.

"ಮಂತ್ರೋ ಲಯೋ ಹಠೋ ರಾಜಯೋಗಶ್ಚೇತಿ ಚತುರ್ವಿಧಂ ।
ತಮಾಹುಃ ಪೂರ್ವಮುನಯಃ ಸಿದ್ಧಾಶ್ಶಂಭು ಪ್ರಬೋಧಿತಾಃ ॥
(ಶಿ. ಪ್ರ. ಪಟಲ ೫. ಪ ೩೯)

---

೧ ಷಂ. ವಾದ ಪರೀಕ್ಷಾ (ಶ್ರೀ ಪಾವಟೆ.)

೨ ಇವರ ಕಾಲವನ್ನು ಕವಿಚರಿತೆಕಾರರು ನಿರ್ಣಯಮಾಡಿಲ್ಲ. ಆದರೆ ಇವರ ಶಿವಯೋಗ ಪ್ರದೀಪಿಕೆಗೆ ಸು. ೧೫೦೦ಕ್ಕಿಂತಲೂ ಹಿಂದೆ ಇದ್ದ ನಿಜಗುಣಶಿವ ಯೋಗಿಗಳು 'ಪರಮಾರ್ಥಪ್ರಕಾಶಿಕೆ ಎಂಬ ಟೀಕೆಯನ್ನು ಬರೆದಿರುವುದರಿಂದ ಅವರಿಗಿಂತಲೂ ಹಿಂದಿನವರೆನ್ನಲು ಅಡ್ಡಿಯಿಲ್ಲ. ನಿಜಗುಣರ ಕಾಲವು ಸು. ೧೧೬೦ ಎಂದೂ ಕೆಲವರ ಮತ. (ಕ. ಚ. ೨ ಪು. ೧೫೩)

ಇದಕ್ಕೆ ಸು॥ ೧೭೦೦ ರಲ್ಲಿದ್ದ ಪಂಡಿತಪ್ರಕಾಂಡರಾದ ಬಸವರಾಧ್ಯರು[೨] ಮಹತ್ವವುಳ್ಳ ವ್ಯಾಖ್ಯಾನವನ್ನು ಬರೆದಿದ್ದಾರೆ. 'ಶಂಭುಪ್ರಬೋಧಿತಾಃ ಸಿದ್ಧಾಃ ಪೂರ್ವಮುನಯಃ' ಎಂಬುದಕ್ಕೆ:— 'ಶ್ರೀ ಕಂಠೇಶ್ವರನಿಂದೆ ಉಪದೇಶಿಸಲ್ಪಟ್ಟಂಥ ಪ್ರಾಚೀನರಾದ ಶ್ವೇತಾದಿ ಮುನೀಶ್ವರರು (ಈ ರೀತಿ) ಹೇಳುವರು. ಆ ಮುನಿಗಳಾರೆಂದೊಡೆ:— ಶ್ವೇತ, ದಮನ (ಮದನ), ಯುವಾಲೋಕ, ಸುಹೋತ್ರ, ಕಂಕ (ಕಂಕಣ), ಲೋಹಾಕ್ಷಿ, ಜೇಗೀಷವ್ಯ, ದಧಿವಾಹ, ವೃಷಭ, ಉಗ್ರ, ಅತ್ರಿ, ಸುಬಾಲಕ (ಸುಧಾರಕ), ಗೌತಮ, ವೇದಶಿರ (ವೇದಶಿಖಿ), ಗೋಕರ್ಣ, ಗುಹಾವಾಸಿ, ಸಿಖಂಡಿ ಜಟಾಮಾಲಿ, ಅಟ್ಟಹಾಸ (ಚಾರುಹಾಸ), ದಾರುಕ, ಲಾಂಗುಲಿ, ಮಹಾಕಾಯ, ಶೂಲಿ, ದಂಡಿ (ಡಿಂಡಿ), ಮುಂಡಿ, ಸಹಿಷ್ಣು, ಸೋಮಶರ್ಮ (ಸುರೇಶ್ವರ), ಲಕುಲೀಶರೆಂಬ ಇಪತ್ತೆಣ್ಬರೂ ಶಿವಾನುಗ್ರಹೀತರು. ಈ ಮುನಿಗಳಿಗೆ ಪ್ರತ್ಯೇಕ ಪ್ರತ್ಯೇಕವಾಗಿ ನಾಲ್ವರು ನಾಲ್ವರು ಶಿಷ್ಯರಾಗಲಾಗಿ ಶ್ವೇತ ಮೊದಲಾಗಿ ಮಿತ್ರ ಕಾರುಷ್ಯರೇ ಅಂತ್ಯವಾಗಿ ನೂರ ಹನ್ನೆರಡು ಜನ ಶಿಷ್ಯರ ವರ್ಗಂ ಗೂಡಿ ಇವರ್ಮುನೀಶ್ವರರೆನಿಸಿಕೊಂಬರು. ಈ ಯರ್ಥದಲ್ಲಿ ವಾಯುವೀಯ ಸಂಹಿತೆಯಲ್ಲಿ:—

ಅಷ್ಟಾವಿಂಶತಿ ಸಂಖ್ಯಾತಾಃ ಯೋಗಾಚಾರ್ಯಾಯುಗ ಕ್ರಮಾತ್ ।
ಶಿಷ್ಯಾಃ ಪ್ರತ್ಯೇಕ ಮೇತೇಷಾಂ ಚತ್ವಾರಶ್ಯಾಂತ ತೇಜಸಃ ॥
ರುದ್ರಾಕ್ಷ ಮಾಲಾಭರಣಾಸ್ತ್ರಿ ಪುಂಡ್ರಾಂಕಿತ ಮಸ್ತಕಾ ।

(ಶಿವ. ಪ್ರ. ಪು ೫.)

ಈ ಯೋಗಾಚಾರ್ಯರ ನಾಮಮಾಲೆಯಲ್ಲಿ ಒಬ್ಬಿಬ್ಬರ ಹೆಸರುಗಳು ಸ್ವಲ್ಪ ಬದಲಾವಣೆಯಾಗಿ ಕಂಡುಬಂದರೂ ಶ್ರೀ ಗೋಕರ್ಣ ಶಿವಾಚಾರ್ಯರ ಹೆಸರು ಇರ್ಕಡೆಯೂ ಉಲ್ಲಿಖಿತವಾಗಿಯೇ ಇದೆ. ಮತ್ತು ವೀರಶೈವರು ದಶಕರ್ಮಗಳಲ್ಲಿ ಮುಖ್ಯವಾಗಿ ಆರಾಧಿಸುವ ನಂದ್ಯಾದಿ ಇಪ್ಪತ್ತುನಾಲ್ಕುಮಂದಿ ಗಣಾಧೀಶ್ವರ ನಾಮಮಾಲೆಯಲ್ಲಿಯೂ[೧] ಇವರ ಹೆಸರು ಅಚ್ಚಳಿಯದೆ ಉಳಿದಿದೆ. ("ಶ್ರೀನಂದಿ, ಭೃಂಗಿರಿಟಿ, ವೀರಕ, ವೀರಭದ್ರ, ಪುಷ್ಪದಂತ, ಅಂಡಾಭರಣ, ದಂಡಪಾಣಿ, ಚಂಡೇಶ್ವರ, ದಾರುಕ,

---

೨ ಶಿ. ಚ. ೩ ಪು. ೫೫೭.

೧ 'ಶ್ರೀನಂದಿ.........................................ದಧೀಚಿ,

ರೇಣುಕ, ವಿಕರ್ಣ, ವಿಜಯಕರ್ಣ, ಗಂಟಾಕರ್ಣ, ರೇಣುಕರ್ಣ, ಗೋಕರ್ಣ, ರೇವಣಸಿದ್ಧ, ಮರುಳಸಿದ್ಧ, ಏಕೋರಾಮ, ಪಂಡಿತಾರಾಧ್ಯ, ಸುಕೇತು, ರುರು, ಉಪಮನ್ಯು, ಭೃಗು, ದಧೀಚಿ ") ಅಂದಮೇಲೆ ಗೋಕರ್ಣ ಗಣಾಧೀಶರು ಅತ್ರಿ, ಗೌತಮ, ಶ್ವೇತ, ಮುಂತಾದ ಅನೇಕ ವೇದಮಂತ್ರಗಳ ದ್ರಷ್ಟಾರರಾದ ಋಷಿಮುನಿಗಳ ಪಂಕ್ತಿಗೆ ಸೇರಿದವರೂ "ಸಿದ್ಧಾಃ ಶಂಭು ಪ್ರಬೋಧಿತಾಃ (ಏವಂ) ಆಹುಃ " ಎಂದು ಹೇಳಿದುದರಿಂದ ಇವರು ಅಣಿಮಾದಿ ಸಿದ್ಧಿಗಳನ್ನು ಪಡೆದಿದ್ದ ಶಿವಯೋಗಿಗಳೂ, ವೀರಶೈವಮತ ಪ್ರಸಾರಕರೂ ಆಗಿದ್ದರೆಂಬುದು ಸ್ಪಷ್ಟಕಾಣುತ್ತದೆ. ಇವರ ಅಸ್ತಿತ್ವದ ಬಗ್ಗೆ ಪ್ರಾಚೀನ ಶಿಲಾಲಿಪಿಗಳ ಮೂಲಕವಾದ ದಾಖಲೆಗಳಾವುವೂ ನಮಗೆ ಇನ್ನೂ ಉಪಲಬ್ಧವಿಲ್ಲವಾದರೂ ಇವರು ನೂರಾರು ಶತಮಾನಗಳ ಹಿಂದಿನವರೆಂಬುದರಲ್ಲಿ ಸಂಶಯವಿಲ್ಲ. ಈ ಯೋಗಾಚಾರ್ಯರ ಅನೇಕ ಶಿಷ್ಯಪರಂಪರೆಯ ಬಗ್ಗೆ ಅನೇಕ ನಿದರ್ಶನಗಳು ಉಪಲಬ್ಧವಾಗುತ್ತವೆ. ಹಾಗೆಯೇ ಈ ಪೀಠವೂ ಸಹ ಶ್ರೀ ಗೋಕರ್ಣ ಶಿವಾಚಾರ್ಯರ ಶಿಷ್ಯಪರಂಪರೆಗೆ ನಡೆದುಬಂದುದೆಂದು ದೃಢವಾಗಿ ಹೇಳಬಹುದು.

ಆದರೆ ಇವರ ನಂತರ ಶ್ರೀ ವಿರೂಪಾಕ್ಷದೇಶಿಕೇಂದ್ರರೇ ಈ ಪೀಠಾರೋಹಣ ಮಾಡಿರಬೇಕೆಂದು ಪುಲ್ಲ ಕವಿಯ ಪಂಡಿತಾರಾಧ್ಯ ಚರಿತ್ರೆಯಿಂದ ಊಹಿಸಬಹುದಾಗಿದೆ. ಪುಲ್ಲ ಕವಿಯೂ ಸಹ ಇತರ ಪುರಾಣಕಾರರಂತೆಯೇ ಭೂಲೋಕದಲ್ಲಿ ವೀರಶೈವದ ದುಃಸ್ಥಿತಿ, ಅದನ್ನು ನಿವಾರಣೆಯ ಬಗ್ಗೆ ಕೈಲಾಸದಲ್ಲಿ ಸಭೆ ಸೇರುವುದೂ, ಓರ್ವ ಗಣಾಧೀಶನು ಶಿವನ ಅಪ್ಪಣೆಯಿಂದ ಶ್ರೀಶೈಲದಲ್ಲಿ ವಿರಜಿಸುವ ಶ್ರೀ ಭೀಮಲಿಂಗದಲ್ಲವತಾರ ಮಾಡುವುದೂ, ಅನಂತರ ಮಲ್ಲಿಕಾರ್ಜುನ ಸ್ವಾಮಿಯು ಪ್ರತ್ಯಕ್ಷನಾಗಿ ವೀರಶೈವ ಮತೋದ್ಧಾರಕ್ಕೆ ಪ್ರೇರೇಪಿಸುವುದೂ ಇತ್ಯಾದಿಯಾಗಿ ಆರಂಭಿಸುತ್ತಾನೆ. ಶ್ರೀ ವಿರುಪಾಕ್ಷ ದೇಶಿಕೇಂದ್ರರು ತಮ್ಮ ತಪೋಬಲದಿಂದ ಅನೇಕ ಪವಾಡುಗಳನ್ನು ನಡೆಯಿಸಿ ಶ್ರೀ ಕಾಶೀಕ್ಷೇತ್ರಕ್ಕೆ ದಯಮಾಡಿಸಿ ಅಲ್ಲಿ 'ಶ್ರೀಪತಿ ಪಂಡಿತ'ನೆಂಬ ಓರ್ವ ಉದ್ದಾಮ ಪಂಡಿತನನ್ನು ವಾದದಲ್ಲಿ ಸೋಲಿಸಿ ಅವನಿಗೂ ಅವನ ವಂಶೀಯರಿಗೂ ಲಿಂಗಧಾರಣೆಯನ್ನು ಮಾಡಿ ಅವರಿಗೆ 'ಪಂಡಿತಾರಾಧ್ಯ' ರೆಂದು ಅಭಿಧಾನವಂಗೈದು ಅವರ ವಂಶಪಾರಂಪರ್ಯವಾಗಿ ಈ ಪೀಠಾಧಿಪತಿಗಳಾಗಿ ಸ್ವೀಕ

ರಿಸುವುದಾಗಿ ಅನುಜ್ಞೆಯನ್ನು ಕೊಡುತ್ತಾರೆ.[೧] ಆದುದರಿಂದಲೇ ಆ ಪರಂಪರೆಯ ಚರಿತ್ರೆಯನ್ನು ಬಣ್ಣಿಸುವ ತನ್ನ ಕೃತಿಗೆ 'ಶ್ರೀ ಪಂಡಿತಾರಾಧ್ಯ ಚರಿತ್ರಂ' ಎಂದು ಕರೆಯುತ್ತಾನೆ.

## ಪಂಡಿತಾರಾಧ್ಯರು ಯಾರು ?

ಜಗದ್ಗುರು ಪಂಡಿತಾರಾಧ್ಯರ ವಿಷಯವಾಗಿ ವಿಚಾರ ಮಾಡುವುದಕ್ಕೆ ಮೊದಲು ನಾವು ಇವರ ಹೆಸರಿನಿಂದ ಅನೇಕ ಶತಮಾನಗಳಿಂದ ನಡೆದುಬಂದಿರುವ ಪಂಡಿತಾರಾಧ್ಯ ಪೀಠಗಳೆಂದು ಹೆಸರು ಪಡೆದಿರುವ ಮಠಗಳ ವಿಷಯವಾಗಿ ಗಮನಿಸುವುದು ಆವಶ್ಯಕ.

ಶ್ರೀ ನಿಡುಮಾಮಿಡಿಮಠ ಗುಳೂರು ಮತ್ತು ಶ್ರೀ ವೀರಭಿಕ್ಷಾವರ್ತಿ ಮಠ ಗುಂತಕಲ್ಲು ಈ ಎರಡು ಮಠಗಳ ಇತಿಹಾಸದಿಂದ ನಮಗೆ ಈ ವಿಷಯವನ್ನರಿಯಲು ಸಹಾಯವಾಗಬಹುದು. ಶಿವಾಗಮಗಳ[೨] ಉಲ್ಲೇಖದಂತೆ ದ್ವಾಪರದಲ್ಲಿದ್ದ ಶ್ರೀಧೇನುಕರ್ಣ (ಗೋಕರ್ಣ) ಶಿವಾಚಾರ್ಯರೇ ಕಲಿಯುಗದಲ್ಲಿ ಪಂಡಿತಾರಾಧ್ಯರೆಂದು ವ್ಯವಹರಿಸಲ್ಪಟ್ಟಿರಬೇಕು. ಅಂದರೆ ಶ್ರೀ ಗೋಕರ್ಣ ಶಿವಾಚಾರ್ಯರಿಗೂ ಶ್ರೀ ಪಂಡಿತಾರಾಧ್ಯರಿಗೂ ಅಭೇದವನ್ನಂಗೀಕರಿಸಿದಾಗಲೇ ನಮಗೆ ಈ ಮಠಗಳ ಚರಿತ್ರೆಯು ಸಮಂಜಸವಾಗುತ್ತದೆ. ಗೋಕರ್ಣ ಶಿವಾಚಾರ್ಯರು (ಪಂಡಿತಾರಾಧ್ಯ), ಶ್ರೀ ವಿರುಪಾಕ್ಷದೇಶಿಕರು, ಅನಂತರ ಶ್ರಿ ಚಂದ್ರಗುಂಡದೇಶಿಕರು, ಇತ್ಯಾದಿ ಪರಂಪರೆಯು ಕ್ರಮಬದ್ಧವಾಗುತ್ತದೆ. ಹಾಗೆಯೇ ಶ್ರೀ ವೀರಭಿಕ್ಷಾವರ್ತಿ ಎಂಬುವರೂ ಶ್ರೀ ವಿರೂಪಾಕ್ಷದೇಶಿಕರ ಸಮಕಾಲೀನರಾಗಿದ್ದು ಅಲ್ಲಿನ ಪೀಠಾಧೀಶರಾದರೆಂಬುದನ್ನೂ ಶ್ರೀ ಪುಲ್ಲ ಕವಿಯು ಉಲ್ಲೇಖಿಸುವುದರಿಂದ ಆ ಮಠದ ಪರಂಪರೆಯ ಕ್ರಮವೂ ಸರಿಯಾಗುತ್ತದೆ. ಈ ವಿಷಯವು

---

೧ ಈ ವಿಷಯದಲ್ಲಿ ಈ ಚರಿತ್ರೆಯನ್ನು ಬರೆದ ಮೂವರು ಕವಿಗಳಿಗೂ ಐಕಮತ್ಯವಿದೆ. ಅದರಂತೆ ನೂತನ ಮೂರ್ತಿಗಳನ್ನು ಮಾಡುವ ಸಂದರ್ಭದಲ್ಲಿ 'ಪಂಡಿತಾರಾಧ್ಯ ಸಂಭವುನಿಸುಗುಣ। ಶಾಲಿಬಾಲುನಿರೀಕ್ಷಿಂಚಿ...... ಮಂತ್ರಮುಪದೇಶವೊಸಗಿ ॥ ಸಂ. ಅಶ್ವಾಸ. ೧೦೪೯ ಎಂದು ಪ್ರತಿಪಟ್ಟದ ಸಮಯದಲ್ಲೂ ಉಲ್ಲೇಖಗಳಿವೆ.

೨ ಶಿವಾಗಮಗಳ ಉಗಮವು ಇಂದಿಗೆ ೨೦೦೦ ವರ್ಷ ಹಿಂದಿನದು (ವಚನ ಶಾಸ್ತ್ರರಹಸ್ಯದ ಪು. ೨೮೯)

ಮಹಾಂತದೇಶಿಕರಿಂದ[೧] ರಚಿತವಾಗಿರುವ ಶಿವಶರಣ ವಿಲಾಸವೆಂಬ ಗ್ರಂಥದಲ್ಲಿ ಸರಿಯಾಗಿ ಉಲ್ಲಿಖಿತವಾಗಿದೆ. ಅವರು ತಮ್ಮ ಉಲ್ಲೇಖಕ್ಕೆ ಪ್ರಾಚೀನ ಪ್ರಮಾಣ ಗ್ರಂಥಗಳ ಆಧಾರವೆಂದು ಹೇಳಿದ್ದರೂ ಅವಿಂದು ನಮಗೆ ಉಪಲಬ್ಧವಾಗದಿರುವುದು ವಿಷಾದಕರ.

ಇತಿಹಾಸದಲ್ಲಿ ಪ್ರಸಿದ್ಧನಾದ ದೇವರ (ಜೇಡರ) ದಾಸಿಮಯ್ಯನಿಗೆ ಈ ಪಂಡಿತಾರಾಧ್ಯರ ಮೂರನೆಯ ಪೀಠಾಧಿಪತಿಗಳಾದ ಚಂದ್ರಗುಂಡ ದೇಶಿಕೇಂದ್ರರು ದೀಕ್ಷೆಯನ್ನಿತ್ತಿದ್ದಾರೆ ಎಂಬ ವಿಷಯವು ಇಲ್ಲಿ ವಿಶದವಾಗಿ ಪ್ರತಿಪಾದಿಸಲ್ಪಟ್ಟಿದೆ.

ಶ್ರೀ॥ ವೊ ಮಹಾತ್ಮನೆ ಕೇಳು ಪುಣ್ಯಾ
ರಾಮವೆನುತ ಖ್ಯಾತಿಗೊಂಡತಿ
ರಾಮಣೀಯಕವಾಗಿ ಭೂಕೈಲಾಸವೆನಿಸಿರ್ಪ ॥೧॥

ಶ್ರೀಗಿರಿಕ್ಷೇತ್ರ ಪ್ರದೇಶಕೆ ಪೋಗಿ . ...... ॥೨॥
ನಲೆಸಿರುವ ಘನಮಲ್ಲಿಕಾರ್ಜುನ
ನೊಲುಮೆಯನು ಪಡೆದುತ್ತಮಾಶ್ರಮ
ದಲ್ಲಿ ಸದಾ ತತ್ತ್ವಾರ್ಥ ಚಿಂತಕರೆಡೆಯ ಬಿಡದಿರ್ದು ॥೩॥

ಕಂಡು ತದ್ದೀಕ್ಷೋಪದೇಶವ
ಗೊಂಡು ತದ್ವರ ವೀರಶೈವಾಚಾರ ಧರ್ಮಗಳ ॥೪॥

ಪರಿಯನರಿದವರಿಂದಲಷ್ಟಾ
ವರಣವಂಗಿಸಿ ತದ್ಗುರು
ಕರಪಯೋರುಹ ಸಂಭವ ವಿರೂಪಾಕ್ಷದೇಶಿಕನ ॥೫॥

ಪರಮ ಶಿಷ್ಯಾಗ್ರಣಿಯೆನ್ನಿಸಿ
ಮೆರೆಯುತಿಹ ಶಶಿಗುಂಡದೇಶಿಕ
ವರ ನಿಗಮಲಾಂಬರಗಳನುನೇದಿತ್ತು ಮನವರಿದು ॥೬॥

ಬೇಸರದೆ ಸೇವಿಸುತೆ ಮಂತ್ರೋ
ಪಾಸನಾಧ್ಯಾಯನಿತ ದೇವರ
ದಾಸಿಮಯ್ಯನುವೆಸರವಡೆದವನಿಂದನುಗ್ರಹವ ॥೮॥

(ಶಿವ. ವಿ ಸಂಧಿ ೧೬.)

---

[೧] ಕ. ಚ ೩ ೨೨೬—೧೯ನೆಯ ಶತಮಾನ.

ವ॥ ಮತ್ತು ಆ ಮಲ್ಲಿಕಾರ್ಜುನ ಮೂರ್ತಿಯು... ತತ್ ಸಿಂಹಾಸನೇಶನಾದ ಚಂದ್ರಗುಂಡದೇಶಿಕೇಂದ್ರನ ಶಿಶ್ರೂಷೆಯಂ ಗೈವುತ್ತ ....."

(ಶಿವ. ವಿ. ಪು. ೫೧೭.)

"ದೇವರದಾಸಿಮಾರ್ಯನು........ತದ್ಗಣದೆಡೆಗೈತಂದು ಪ್ರಸನ್ನನಾಗಿ ಚಂದ್ರಗುಂಡದೇಶಿಕೇಂದ್ರನೊಡನೆ ಮೃದುಮಧುರೋಕ್ತಿಯಿಂದಿಂತೆಂದನು"

(ಶಿವ. ವಿ. ಪು. ೫೧೮.)

ಇದೇ ವಿಷಯವು ಹಿಂದೆ ಹೇಳಿದ ಪುಲ್ಲಕವಿ ಮುಂತಾಧವರ ಕೃತಿಗಳಲ್ಲಿಯೂ ಸರಿಯಾಗಿ ಪ್ರತಿಪಾದಿಸಲ್ಪಟ್ಟಿದೆ. ...

ದೇವರ (ಜೇಡರ) ದಾಸಿಮಾರ್ಯನು ಕ್ರಿ. ಶ. ೧೦೦೮—೧೦೫೦ರ ವರೆಗೆ ಆಳಿದ ಜಯಸಿಂಹನ ಕಾಲದಲ್ಲಿದ್ದನು.[೧] ಈತನು ಜಯಸಿಂಹನ ಹೆಂಡತಿಯಾದ ಸುಗ್ಗಲದೇವಿಗೆ ಗುರುವಾಗಿ ಅನೇಕ ಜೈನರನ್ನು ವಾದದಲ್ಲಿ ಸೋಲಿಸಿದನೆಂದು ಎಲ್ಲ ವೀರಶೈವ ಗ್ರಂಥಕಾರರೂ ವರ್ಣಿಸಿದ್ದಾರೆ. ವಚನಕಾರನಾದ ದೇವರ ದಾಸಿಯು ಡೋಹರಕಕ್ಕಯ್ಯ ಮುಂತಾದವರ ಹೆಸರನ್ನೆತ್ತಿರುವುದರಿಂದ ಬಸವನ ಸಮಕಾಲಿಕನಿರಬೇಕೆಂದು ಕೆಲವರ ಮತ. ಈ ವಿಷಯದಲ್ಲಿ ಶ್ರೀಮಾನ್ ಎಂ. ಆರ್. ಶ್ರೀನಿವಾಸಮೂರ್ತಿಗಳ ಹಾಗೂ ವೇ॥ ಕೀರ್ತನಕೇಸರಿ, ಬಿ. ಶಿವಮೂರ್ತಿಶಾಸ್ತ್ರಿಗಳ ಲೇಖನಗಳು ದರ್ಶನೀಯವಾದುವು.[೨] ಈ ವಿಷಯದಲ್ಲಿ ವೇ. ಶಾಸ್ತ್ರಿಗಳವರು ಕೂಲಂಕಷವಾಗಿ ಚರ್ಚಿಸಿ ದಾಸಿಮಾರ್ಯರು ಇಬ್ಬರೆಂದೂ ಜೇಡರ ದಾಸಿಯು ಹಿಂದಿನ ಸಿದ್ಧಾಂತದಂತೆ ಜಯಸಿಂಹನ ಕಾಲದವನೇ ಎಂದೂ ದೇವರದಾಸಿ (ವಚನಕಾರ) ಯು ಬಸವನ ಸಮಕಾಲಿಕನೆಂದೂ ನಿರ್ಣಯಿಸಿ ಇದಕ್ಕೆ ಅನೇಕ ಪ್ರಾಮಾಣಿಕರ ಉಕ್ತಿಗಳನ್ನೂ ಉದಾಹರಿಸಿದ್ದಾರೆ. ಇದೇ ಸಿದ್ಧಾಂತಕ್ಕೆ ಪುಲ್ಲ ಕವಿ, ಮಹಾಂತದೇಶಿಕ, ಇಡಗೂರು ರುದ್ರಕವಿ, ಅಪ್ಪಪ್ಪ ಮುಂತಾದವರ ಉಲ್ಲೇಖಗಳೂ ಸಮಂಜಸವಾಗಿ ಕಾಣುತ್ತವೆ.

---

೧ ಡಾ॥ ಫ್ಲೀಟ ಸಾಹೇಬರ ಇಂಡಿಯನ್ ಅಂಟಿಕ್ವೆರಿ ೧೯ ಪುಟ ೨೬೧ (ಶಿವಾನುಭವ ೧೨ ಸಂಚಿಕೆ ೧೯-೨೮) ರಾ॥ ಸಾ॥ ಪಿ ಜಿ. ಹಳಕಟ್ಟಿಯವರೂ ದಾಶಿಮಾರ್ಯರು ಬಸವೇಶ್ವರನ ಕಾಲಕ್ಕಿಂತ ೧೦೦—೧೫೦ ವರ್ಷ ಹಿಂದಿನವರೆಂದು ಅಭಿಪ್ರಾಯಪಟ್ಟಿದ್ದಾರೆ, (ದೇವರದಾಸ ವಚನ)

೨ ಶಿವಾನುಭವ ಮಾರ್ಚ ೧೯೩೫ ಮತ್ತು ೧೯೩೬ ಅಕ್ಟೋಬರ ಸಂಚಿಕೆಗಳು

ಚಂದ್ರಗುಂಡದೇಶಿಕರು ಕ್ರಿ. ಶ. ೧೧೧೨–೧೧೪೫ ವರೆಗಿದ್ದ ರಾಜೇಂದ್ರ ಚೋಳನ[೧] ಬ್ರಹ್ಮಹತ್ಯೆಯನ್ನು ಕಳೆದು ತಮ್ಮ ಶಿಷ್ಯನನ್ನಾಗಿ ಮಾಡಿಕೊಂಡ ವಿಷಯದಲ್ಲಿ ಹಿಂದೆಯೇ ಹೇಳಿದ್ದೇವೆ. ಆತನು ತನ್ನ ಪತ್ನಿಯಾದ ಕನಕವಲ್ಲೀ ದೇವಿಯೊಡನೆ ತನ್ನ ರಾಜಧಾನಿಯಾದ (ಈಗಿರುವ ಗೂಳೂರು) ಗುಯಲೂರು ನಗರೋದ್ಯಾನದಲ್ಲಿ ಶ್ರೀಯವರಿಗೆ ದೀಪಾದಿಗಳನ್ನರ್ಪಿಸುತ್ತಿದ್ದನೆಂಬುದು ಪ್ರಸಿದ್ಧವಾಗಿದೆ. ಆದ್ದರಿಂದ ದೇವರ (ಜೇಡರ) ದಾಸಿಯೂ ಅವನ ಗುರುವಾದ ಚಂದ್ರಗುಂಡದೇಶಿಕರೂ ಸಮಕಾಲಿಕರಿರಬೇಕೆಂಬುದು ಸ್ಪಷ್ಟವಾಗಿದೆ. ಇಂಡಿಯನ್ ರಿವ್ಯು ೧೯೧೫ ಮೇ ಪತ್ರಿಕೆಯಲ್ಲಿ ಶ್ರೀಮಾನ್ ನಾರಾಯಣ ಶಾಸ್ತ್ರಿ ಬಿ. ಎ. ಬಿ. ಎಲ್ ಮದರಾಸು[೨] ಇವರು ಕ್ರಿ. ಶ. ೧೧೬೦ ರಲ್ಲಿ ಓರ್ವ ಶ್ರೀಪತಿಯು ಶಂಕರಾಚಾರ್ಯರಿಗೆ ಸಮಾನಯೋಗ್ಯತೆಯುಳ್ಳವನಾಗಿದ್ದನು ಎಂದು ಬರೆದಿರುತ್ತಾರೆ. ಆದರೆ ಈ ಶ್ರೀಪತಿಯೂ ಶ್ರೀ ವಿರೂಪಾಕ್ಷದೇಶಿಕರು ವೀರಶೈವನನ್ನಾಗಿ ಮಾಡಿದ ಶ್ರೀಪತಿಯೂ ಒಬ್ಬನೇ ಎಂಬುದು ವಾದಗ್ರಸ್ತ. ಈ ಮುಂತಾದ ವಿಷಯಗಳನ್ನು ವಿಚಾರಿಸಿದರೆ ಶ್ರೀ ಚಂದ್ರಗುಂಡದೇಶಿಕರ ಮೂಲಪುರುಷರಾದ ಶ್ರೀ ಗೋಕರ್ಣೇಶ್ವರ ಶಿವಾಚಾರ್ಯರು (ಪಂಡಿತಾಚಾರ್ಯ) ಸು. ಹತ್ತನೆಯ ಶತಕಕ್ಕಿಂತಲೂ ಹಿಂದಿನವರೆಂದು ಸಿದ್ಧವಾಗುತ್ತದೆ.

ಆದರೆ ವೀರಶೈವ ಇತಿಹಾಸದಲ್ಲಿ ಮಲ್ಲಿಕಾರ್ಜುನ ಪಂಡಿತಾರಾಧ್ಯರು (೧೧೬೦) ಒಬ್ಬ ಪ್ರಸಿದ್ಧ ವಿಭೂತಿಗಳಾಗಿದ್ದಾರೆ. ಇವರು ವೀರಶೈವ ಮತಕ್ಕಾಗಿ ಅಪಾರವಾದ ಸೇವೆಯನ್ನು ಮಾಡಿರುವುದರಿಂದಲೇ ಇವರನ್ನು ಸ್ತುತಿಸದ ವೀರಶೈವ ಕವಿಗಳೇ ವಿರಳ. ಇವರು ಮೊದಲು ಆರಾಧ್ಯ ಬ್ರಾಹ್ಮಣರಾಗಿದ್ದು[೩] ವೀರಶೈವ ಪ್ರೇಮಿಗಳಾಗಿದ್ದರೆಂದೂ, ಒಮ್ಮೆ ಬಸವೇಶ್ವರನು ಜನಿವಾರವನ್ನು ತೆಗೆದು ಶುದ್ಧ ವೀರಶೈವನಾಗೆಂ

---

೧ ಹಿಂದೂ ಚರಿತ್ರಸಾರ (೧೯೨೬)

೨ ಶಿವಾನುಭವ ಅಗಷ್ಟು ೧೯೩೫ (ಪ್ರಭುದೇವರ ಕಾಲನಿರ್ಣಯ.)

೩ ಈ ವಿಷಯವು ಪ್ರೊ॥ ಟಿ. ಎಸ್. ವೆಂಕಣ್ಣಯ್ಯನವರು ವಿಮರ್ಶಿಸಿರುವ ಶಿವತತ್ತ್ವಸಾರದಿಂದ ವ್ಯಕ್ತವಾಗುತ್ತದೆ. (ಪ್ರಬುದ್ಧಕರ್ನಾಟಕ ೧೬-೨)

ದಾಗ 'ಭಕ್ತಿವಿೂದಿವಲ ಪ್ರಮಾದಿ ಬ್ರಾಹ್ಯಂಬುತೋ ಬೊತ್ತುಬಾಯು ಲೇಸು ಬಸವಲಿಂಗ' ಎಂದರೆಂದೂ ಅನೇಕವಾಗಿ ಉಲ್ಲೇಖಗಳು ದೊರೆಯುತ್ತವೆ. ಬಸವನ ನಂತರ ಇವರು ವೀರಶೈವರಾಗಿ ತಮ್ಮ ಉದ್ದಾಮ ಪಾಂಡಿತ್ಯದಿಂದಲೂ ಮಹಿಮಾಬಲದಿಂದಲೂ ಅನೇಕ ಸಭೆಗಳಲ್ಲಿ ಪರವಾದಿಗಳನ್ನು ನಿಗ್ರಹಿಸಿ ವೀರಶೈವ ಮತವನ್ನು ಪ್ರಸಾರಮಾಡಿದರೆಂದೂ ವೀರಶೈವ ಗ್ರಂಥಗಳು ಹೇಳುತ್ತವೆ. ಇವರ ವಿಷಯದಲ್ಲಿ ಪಾಲ್ಕುರಿಕೆ ಸೋಮನಾರಾಧ್ಯರ ಪಂಡಿತ ಚರಿತೆ, ಚತುರಾಚಾರ್ಯ ಪುರಾಣ, ಗುರುರಾಜ ಕವಿಯ ಪಂಡಿತಾರಾಧ್ಯರ ಚರಿತ್ರೆ, ನೀಲಕಂಠಾಚಾರ್ಯನ ಆರಾಧ್ಯ ಚರಿತ್ರೆ, ಶ್ರೀನಾಥನ ಅನೇಕ ಕೃತಿಗಳೂ ನಮಗೆ ದೊರೆಯುತ್ತವೆ. ವೀರಶೈವರಲ್ಲಿ ಪಂಡಿತಾರಾಧ್ಯರೆಂದರೆ ಇವರ ಹೆಸರೇ ನಮಗೆ ಎದ್ದು ಕಾಣುವಂತಾಗಿರುವುದು. ಅವರ ಅವಿಶ್ರಾಂತ ಪರಿಶ್ರಮದ ಫಲವು ಇವಕ್ಕಾಗಿ ವೀರಶೈವ ಮತವು ಅವರಿಗೆ ಋಣಿಯಾಗಿದೆ. ಆದರೆ ಪಂಚಾಚಾರ್ಯರಲ್ಲಿ ಉಕ್ತರಾದವರು ಇವರೇಯೋ? ಅಥವಾ ಬೇರೆಯೋ? ಎಂಬುದು ತೀರ ಚರ್ಚಾಸ್ಪದವಾದುದು. ಈ ವಿಷಯದಲ್ಲಿ 'ಇದಮಿತ್ಥಂ' ಎಂದು ನಿರ್ಣಯಿಸಲು ನಮಗೆ ಸರಿಯಾದ ಚಾರಿತ್ರಿಕ ದಾಖಲೆಗಳು ಉಪಲಬ್ಧವಾಗಿಲ್ಲವಾದ್ದರಿಂದ ಈ ವಿಷಯದಲ್ಲಿ ಬರುವ ಎಂದೆರಡು ಅನುಪಪತ್ತಿಗಳನ್ನು ಇಲ್ಲಿ ಉಲ್ಲೇಖಿಸುವುದು ಅನುಚಿತವಾಗಲಾರದೆಂದು ಭಾವಿಸಿದೆ. ಒಮ್ಮೆ ಇವರೇ ಮತಾಚಾರ್ಯರಲ್ಲಿ ಪರಿಗಣಿತರಾದರೆಂದು ಸಿದ್ಧವಾದರೂ ಮುಂದಿನ ಅನುಪಪತ್ತಿಗಳಿಗೆ ಸಮಾಧಾನಗಳನ್ನು ಹುಡುಕುವುದು ಅನಿವಾರ್ಯ.

### ಶ್ರೀ ಮಲ್ಲಿಕಾರ್ಜುನ ಪಂಡಿತಾರಾಧ್ಯರ ವಿಷಯದಲ್ಲಿ:—

"ಇವನು ಈಶ್ವರನಿಂದ ಆಜ್ಞಪ್ತನಾಗಿ ಶ್ರೀಶೈಲಮಲ್ಲಿಕಾರ್ಜುನ ಲಿಂಗದ ಸನ್ನಿಧಿಯಲ್ಲಿ ತಪಂ ಬಿಟ್ಟಿದ್ದ ಭೀಮನ ಪಂಡಿತನಿಗೂ ಗೌರಾಂಬೆಗೂ ಮಗನಾಗಿ ಹುಟ್ಟಿದನು. ವೆಲನಾಡು ಚೋಳನ ಸಭೆಯಲ್ಲಿ ಪರವಾದಿಗಳನ್ನು ನಿಗ್ರಹಿಸಿದನು. ಅವನು ಕಣ್ಣುಗಳನ್ನು ಕೀಳಿಸಲು ಈಶ್ವರನ ಅನುಗ್ರಹದಿಂದ ಊರ್ಧ್ವನೇತ್ರವನ್ನು ಪಡೆದನು. ಬಸವನು ಕಳುಹಿಸಿದ ಭಸಿತವನ್ನು ಧರಿಸಿಕೊಳ್ಳಲು ಕರ್ನಾಟಕ ಭಾಷೆಯು ಬಂದಿತು. ಕೇತರ ಕಲ್ಯಾಣಕ್ಕೆ ಹೋಗುವಾಗ ದಾರಿಯಲ್ಲಿ ಬಸವನ ಲಿಂಗೈಕ್ಯವನ್ನು ಕೇಳಿ ಶಿವೈಕ್ಯನಾದನು" ಎಂದಿದೆ.[1]

---

೧ ಕ. ಚ ೧ ೨೦೪.

ಇವರ ವಂಶಕ್ರಮವು ನೀಲಕಂಠಾಚಾರ್ಯನ ಆರಾಧ್ಯ ಚರಿತ್ರೆಯಲ್ಲಿ[೧] "ಪಂಡಿತೇಶ್ವರನ ಮಗ ಕೇದಾರಾರಾಧ್ಯನಿಗೆ ಜಗದಾರಾಧ್ಯ ಪಟ್ಟವಾಯಿತು. ಪಂಡಿತೇಶ್ವನ ಕರಕಂಜಾತನಾದ ದೋನಮಾರ್ಯನಿಗೆ ಭಕ್ತಿರಾಜ್ಯದ ಪಟ್ಟವಾಯಿತು. ಕೇದಾರ ದೇಶಿಕನ ಮಕ್ಕಳು (೧) ಮನು ಪಂಡಿತ (೨) ಚನ್ನವಿಭು (೩) ಮಹಾದೇವ (೪) ಭೀಮನಪಂಡಿತ. ಈ ವಂಶದಲ್ಲಿ ಯುವ್ವಟೂರು ಗುರುಸೋಮನಾಥನು ಹುಟ್ಟಿದನು."

ಹಾಗೆಯೇ ಮಹಿಮ್ನಸ್ತೋತ್ರ, ಮಲ್ಹಣಸ್ತೋತ್ರ ಮುಂತಾದ ಗ್ರಂಥಗಳಿಗೆ ವ್ಯಾಖ್ಯಾನವನ್ನು ಬರೆದ ಗುರುದೇವನು[೨] (೧೩೫೦) ತನ್ನ ವಂಶಕ್ರಮವನ್ನು ತನ್ನ ವೀರಶೈವಾಚಾರ ಪ್ರದೀಪಿಕೆಯಲ್ಲಿ ಈ ರೀತಿ ಹೇಳಿದ್ದಾನೆ. ದ್ರಾಕ್ಷಾರಾಮದ ಕೋಟಿಪಲ್ಲಾರಾಧ್ಯ ದೇಶಿಕ; ಮಗ ಭೀಮಪಂಡಿತ, ಅವನ ಹೆಂಡತಿ ಗೌರಾಂಬೆ, ಇವರ ಮಗ ಮಲ್ಲಿಕಾರ್ಜುನ ಪಂಡಿತ, ಇವನು ವೆಲನಾಡು ಚೋಳನ ಆಸ್ಥಾನದಲ್ಲಿ ಪರವಾದಿಗಳನ್ನು ಜೈಸಿದನು; ಮಗ ಪಂಡಿತಾರಾಧ್ಯ, ಮಗ ವೀರಾರಾಧ್ಯ, ತತ್ ಪ್ರತೀಕ ಸಂಭೂತ ಗುರುಬಸವ, ಮಕ್ಕಳು ಗಂಗಾಧರ, ಬಸವ; ಬಸವನ ಮಕ್ಕಳು ಹಿರಿಯಾರ್ಯ, ಪಂಡಿತಾರ್ಯ, ಪಂಡಿತಾರ್ಯನ ಮಗ ಗುರುಲಿಂಗ, ಮಕ್ಕಳು ಗುರುದೇವ, ಪಂಡಿತಾರ್ಯ, ಬಸವಾರಾಧ್ಯ, ಜಕ್ಕಾರ್ಯ. ಈ ಗುರುದೇವನು ವ್ಯಾಖ್ಯಾನಕಾರನು. ವೀರಶೈವಾಚಾರ ಪ್ರದೀಪಿಕೆಯನ್ನು ಸಿದ್ಧದೇವನಿಗೋಸ್ಕರ ಬರೆದಂತೆ ಹೇಳುತ್ತಾನೆ. ಈ ಸಿದ್ಧದೇವನಾರೋ ತಿಳಿಯದು" ಎಂದಿದೆ.

ಈ ಎರಡು ತೆರನಾದ ವಂಶಕ್ರಮವೂ ಸಹ ಈಗ ಪಂಡಿತಾರಾಧ್ಯ ಪೀಠಗಳೆಂದು ಪ್ರಸಿದ್ಧವಿರುವ ಗೂಳೂರು ಮತ್ತು ಗುಂತಕಲ್ಲು ಮಠಗಳ ಪಟ್ಟವಲ್ಲರಿಯಲ್ಲಿ ಪರಿಗಣಿತವಾದಂತೆ ಕಂಡುಬಂದಿಲ್ಲ. ಮತ್ತು 'ಯುವ್ವಟೂರು ಗುರುಸೋಮನಾಥ' ನ ಆಜ್ಞೆಯಿಂದ ಆಂಧ್ರದಲ್ಲಿ ಪ್ರಸಿದ್ಧ ಕವಿಶ್ರೇಷ್ಠನಾದ ಬೊಮ್ಮೆರ ಪೋತನಾಮಾತ್ಯನು 'ಶ್ರೀ ವೀರಭದ್ರವಿಜಯ'

---

೧ ಕ. ಚ. ೨ ೧೩೪.

೨ ಕ. ಚ. ೨ ೩೪.

ವೆಂಬ ಗ್ರಂಥವನ್ನು ಬರೆದಂತೆ ತನ್ನ ಗ್ರಂಥದಲ್ಲಿ ಹೇಳಿರುವುದರಿಂದ ಈ ಮಲ್ಲಿಕಾರ್ಜುನ ಪಂಡಿತಾರಾಧ್ಯರ ಪೀಠವು ಯುವ್ವಟೂರಿನಲ್ಲಿರಬೇಕು. ಅಥವಾ ಇವರಿಗೆ 'ಅಮರಗುಂಡದ ಮಲ್ಲಿಕಾರ್ಜುನ' ಎಂಬ ಮತ್ತೊಂದು ಹೆಸರಿರುವುದರಿಂದ ಅಮರಗುಂಡದಲ್ಲಿರಬೇಕೆಂದು ಭಾಸವಾಗುತ್ತದೆ. ಆದರೆ ಇದರಿಂದ ಇವರು ಈಗ ಪ್ರಸಿದ್ಧವಾಗಿರುವ ಪಂಚಾಚಾರ್ಯರಲ್ಲಿ ಸೇರಿಲ್ಲ ವೆಂಬ ಕೊರತೆಯಾವುದೂ ಬರಲಾರದೆಂದು ನಮ್ಮ ಭಾವನೆ. ಏಕೆಂದರೆ ಅನಾದಿಕಾಲದಿಂದ ಬಂದ ವೀರಶೈವ ಇತಿಹಾಸವನ್ನು ವಿವೇಚಿಸಿದಲ್ಲಿ ಯೋಗಾಚಾರ್ಯರೂ, ನಂದ್ಯಾದಿಗಣವರರೂ ಬಸವಾದಿಪ್ರಮಥರೂ, ಚತು ರಾಚಾರ್ಯರೇ ಆದಿಯಾಗಿ ಎಲ್ಲರೂ (ಸಮಾಜಸೇವೆಗಾಗಿ ಜೀವನವನ್ನು ಎರವಾಗಿ ಸವೆಸಿದ ಮಹಾಪುರುಷರು) ಮತದ ಪ್ರಚಾರಕಾರ್ಯದಲ್ಲಿ ಭಾಗಿಗಳೇ ಆದ್ದರಿಂದ ಇದರ ಉತ್ಕರ್ಷತೆಯು ಫಲವು ಇವರೆಲ್ಲರನ್ನೂ ಸೇರಿದುದು. ಈ ಮತದ ಬೆಳವಣಿಗೆಯಲ್ಲಿ ಅಂದಂದಿಗೆ ಅವತರಿಸಿ ಮತೋದ್ಧಾರಮಾಡಿದ ಮಹನೀಯರೆಲ್ಲರೂ ವೀರಶೈವ ಮತೋದ್ಧಾರಕರೆ ನ್ನಲು ಅಡ್ಡಿಯಿಲ್ಲ.

ಈ ದೃಷ್ಟಿಯಿಂದ ವೀರಶೈವ ಇತಿಹಾಸವನ್ನು ನೋಡಿದರೆ ಎಷ್ಟೋ ಜನ ಮಠಾಧಿಪತಿಗಳಿಗೆ 'ಜಗದ್ಗುರು' 'ವೀರಶೈವ ಸಿದ್ಧಾಂತ ಸ್ಥಾಪನಾ ಚಾರ್ಯ' ಎಂಬ ಉಪಾಧಿಗಳು ಇದ್ದುದು ಸರ್ವ ಜನ ವಿದಿತವಾಗಿದೆ. ವಸ್ತುತಃ 'ಮತಸ್ಥಾಪಕತ್ವ' ಎಂಬ ಪದವು '*Discovery*' ಎಂದರೆ 'ಇದ್ದುದನ್ನು ಹೊರಪಡಿಸುವುದು' ಎಂಬರ್ಥದಲ್ಲಿ ಉಪಯೋಗಿಸಲ್ಪಟ್ಟಿದೆ ಯಲ್ಲದೆ '*Investigation*' ಎಂದರೆ 'ನೂತನವಾಗಿ ಪರಿಶೋಧನೆಗಳಿಂದ ನಿರ್ಮಿಸಿದುದು,' ಅಥವಾ 'ಕಂಡುಹಿಡಿಯಲ್ಪಟ್ಟುದು' ಎಂದರ್ಥದಲ್ಲಲ್ಲ. ಈ ದೃಷ್ಟಿಯಿಂದಲೇ ನಾವು ಹಿಂದಿನ ಎಲ್ಲಾ ಮತಸ್ಥಾಪಕರ (ಮತಾ ಚಾರ್ಯ) ನ್ನು ನೋಡಬೇಕು. ಏಕೆಂದರೆ (ಮತ) ತತ್ವಗಳು ನಿತ್ಯವಾ ದವುಗಳಾದ್ದರಿಂದ ಅವುಗಳನ್ನು ಹೊಸದಾಗಿ ನಿರ್ಮಿಸುವುದು ಅಸಂಭವ.

ಅಂದಮೇಲೆ ವೀರಶೈವ ಮತತತ್ವಗಳ (ಸಿದ್ಧಾಂತ) ನ್ನು ತಾವು ಮೊದಲು ಅನುಷ್ಠಾನಮಾಡಿ ಅನಂತರ ಅವುಗಳನ್ನು ಪರಮತನಿರಾಕ ರಣಪೂರ್ವಕ ಸ್ಥಾಪಿಸಿ, ಪ್ರಚಾರಮಾಡಿದ ಮಹಾತ್ಮರಾದ ಶ್ರೀ ಮಲ್ಲಿಕಾ ರ್ಜುನ ಪಂಡಿತಾರಾಧ್ಯರು ಆಚಾರ್ಯರ ಶ್ರೇಣಿಯಲ್ಲಿ ಮಾನ್ಯರಾದರೆಂ ಬುದು ನಿರ್ವಿವಾದವಾದುದು. ಇವರ ಜಗದ್ಗುರುತ್ವವನ್ನು ಆಂಧ್ರದಲ್ಲಿ

ಪ್ರಸಿದ್ಧಕವಿ ಶ್ರೀಷ್ಮನಾದ 'ಶ್ರೀನಾಥ' ನು ಚನ್ನಾಗಿ ಪ್ರತಿಪಾದಿಸಿರುವನು. ಶಿವಶರಣರ ಶ್ರೇಣಿಯಲ್ಲಿ ಗುಣಕ್ಕೇ ಪ್ರಾಧಾನ್ಯತೆಯಿದ್ದುದರಿಂದ ಎಲ್ಲರೂ ಇವರ ಮಹತ್ತ್ವವನ್ನು ಹಾಡಿ ತಣಿದರು. ಅವರಲ್ಲಿ ಭಕ್ತ, ಆಚಾರ್ಯ, ಹಾಗೂ ವಿರಕ್ತ ಎಂಬ ಶಬ್ದಗಳ ತರ, ತಮ ಭಾವಗಳ ಮೇಲು ಕೀಳು ಗಳ ಪರಿವೆಯಿದ್ದಂತೆ ಕಂಡುಬರುವುದಿಲ್ಲ. "ಮೊಚ್ಚೆಹೊಲೆಯುತ್ತಿದ್ದವ ಮೋಕ್ಷದಲ್ಲಿ ಸಮಭಾಗಿ" ಯೆಂಬ ಭಾವವು ಬೇರೂರಿತ್ತು. ಅದನ್ನು ಕೃತಿಯಲ್ಲಿ ತಂದ ಮಹಾಪುರುಷರವರು. ಈ ವಿಷಯವು ಶ್ರೀ ನಿಡುಮಾಮಿಡಿಮಠದ ಇತಿಹಾಸದಿಂದಲೂ ಸ್ಪಷ್ಟಕಾಣುವುದು. ಈ ಮಠಾಧಿಪತಿಗಳು ಆಚಾರ್ಯಪರಂಪರೆಗೆ ಸೇರಿದವರಾದರೂ ಚಂದ್ರಗುಂಡ ದೇಶಿಕರ ನಂತರ ಈ ಪೀಠಾಧೀಶರಾದವರು ಇತಿಹಾಸದಲ್ಲಿ ಪ್ರಸಿದ್ಧನೂ 'ದ್ವಿತೀಯ ಶಂಭು' ವೆಂದು ಬಿರುದುವೆತ್ತ ಮಹಾತ್ಮನೂ ಆದ, ಶ್ರೀಮದ್ಬಸವೇಶ್ವರನ ಅಂಕಿತವನ್ನು ತಮ್ಮ ಕರಕಂಜಾತರಿಗಿಟ್ಟಿರುವು ('ಕರಿಬಸವ,' 'ಇಮ್ಮಡಿ ಕರಿಬಸವ,' 'ಗುರುಬಸವ' ಎಂದು ಕರೆದಿರುವ) ದನ್ನು ನೋಡಿದರೆ ಇಂದಿನ ಈ ತೆರನಾದ ಮೇಲು ಕೀಳುಗಳು ಕೇವಲ ಕಲ್ಪಿತಗಳೆಂದು ಅರಿಯದಿರವು. ಅಸ್ತು.

ಪ್ರಕೃತದಲ್ಲಿ ಶ್ರೀಶೈಲ ಗೋಕರ್ಣಪೀಠಾಸೀನರಾದ ಶ್ರೀ ವಿರೂಪಾಕ್ಷ ದೇಶಿಕರೆಂಬ ಯೋಗಿವರೇಣ್ಯರು ಅವತರಿಸಿ ನಡೆಯಿಸಿದ ಮಹತ್ಕಾರ್ಯಗಳೂ ಅವರ ಶಿಷ್ಯಪರಂಪರೆಯ ಮಹಿಮೆಗಳೂ 'ಪಂಡಿತಾರಾಧ್ಯಚರಿತ್ರೆ'[೧] ಯಲ್ಲಿ ಮನೋಹರವಾಗಿ ವರ್ಣಿಸಲ್ಪಟ್ಟಿರುವುದರಿಂದಲೂ ಅದು ಆಂಧ್ರದಲ್ಲಿದ್ದು ಕನ್ನಡ ಬಾಂಧವರಿಗೆ ಅರಿಯುವುದಸಾಧ್ಯವಾದ್ದರಿಂದಲೂ ಅದರ ಸರಳಾನುವಾದವನ್ನು ಮಾಡುವುದರಲ್ಲಿದೆ. ಇನ್ನೂ ಈ ಪೀಠಕ್ಕೆ ಸಂಬಂಧಿಸಿದ ಮತ್ತೆ ಕೆಲವು ಐತಿಹಾಸಿಕ ವಿಷಯಗಳನ್ನು ಮುಂದುವರಿಸಲಾಗುತ್ತೆ. (ಮುಂದೆ)

---

೧ ಶಲ್ಲಕವಿ--

ಸೂ:--- (ಶ್ರೀಮಲ್ಲಿಕಾರ್ಜುನ ಪಂಡಿತಾರಾಧ್ಯರ ಮತ್ತು ಶ್ರೀಶೈಲಪಂಡಿತಾರಾಧ್ಯಪೀಠಗಳ ವಿಷಯದಲ್ಲಿ ಇನ್ನೂ ಅನೇಕ ಶೋಧನೆಗಳಾಗಬೇಕಾದ್ದರಿಂದ ತತ್ಸಂಬಂಧವಾದ ಸತ್ಯಚಾರಿತ್ರಿಕ ದಾಖಲೆಗಳು ದೊರೆತಲ್ಲಿ ಅದನ್ನು ಕೃತಜ್ಞತೆಯಿಂದ ಸ್ವೀಕರಿಸಲು ಲೇಖಕನ ಸಮ್ಮತಿಯಿದೆ ಲೇ.)

# ಸೃಷ್ಟಿಯ ರಚನೆ.

ವೀರಶೈವರಲ್ಲಿ ಸೃಷ್ಟಿಯ ರಚನೆಯ ಬಗ್ಗೆ ವಿಶೇಷ ತರದ ವಿಚಾರಗಳುಂಟು. ಅವುಗಳು ಇತರ ವೇದಾಂತ ಮಾರ್ಗಗಳ ತತ್ವಗಳನ್ನು ಹೋಲುವದಿಲ್ಲ. ಆದರೆ ಅವು ಶಿವಾಗಮ ಗ್ರಂಥಗಳಿಗನುಸಾರವಾಗಿ ಇರುತ್ತವೆ. ಶೈವರಲ್ಲಿ ಈಗ ಶಿವಸಿದ್ಧಾಂತಿಗಳು, ಕಾಶ್ಮೀರೀಶೈವರು ಎಂದು ಮೊದಲಾದ ಭೇದಗಳಿರುತ್ತವೆ. ಅವರಲ್ಲಿ ಸಹ ವೀರಶೈವರು ತಮ್ಮ ಒಂದು ವಿಶಿಷ್ಟವಾದ ಮಾರ್ಗವನ್ನು ಅನುಸರಿಸಿ ತಮ್ಮ ಸಿದ್ಧಾಂತವನ್ನು ನೆಲೆಗೊಳಿಸಿರುವರು. ಅವರಲ್ಲಿರುವ ಇದರ ಸಂಬಂಧವಾದ ವಿಚಾರಗಳು ಬೇರೆ ಬೇರೆ ಶಿವಾಗಮಗಳ ಮಾರ್ಗವನ್ನು ಹೋಲುತ್ತಿದ್ದರೂ ಇದರಲ್ಲಿ ಅವರು ಕೆಲವು ಮಾರ್ಪಾಡುಗಳನ್ನು ಮಾಡಿ ಈ ವಿಷಯವನ್ನು ವಿವರಿಸಿದ್ದಾರೆ.

ಅವರ ವಿಷಯ ವಿವರಣೆಯಲ್ಲಿ ನಾವು ಮೂರು ಮುಖ್ಯ ವಿಭಾಗಗಳನ್ನು ಮಾಡಬಹುದು. ಮೊದಲನೆಯದರಲ್ಲಿ ನಾದ ಬಿಂದು ಕಲೆಗಳ ವಿಚಾರ, ಎರಡನೆಯದರಲ್ಲಿ ಸಾದಾಖ್ಯಗಳ ವಿಚಾರ, ಮೂರನೆಯದರಲ್ಲಿ ಷಡಧ್ವಗಳ ವಿಚಾರ ಎಂದು ಇರುತ್ತವೆ. ಈ ವಿಚಾರಗಳು ಬಹು ಮಾರ್ಮಿಕವೂ ಈಗಿನ ಪಾಶ್ಚಿಮಾತ್ಯ ಶಾಸ್ತ್ರೀಯ ಸಂಶೋಧನೆಗಳಿಗೆ ಹೊಂದಿಕೆಯಾಗುವಂಥವುಗಳೂ ಇರುತ್ತವೆ. ಇವುಗಳ ಮೇಲಿಂದ ವೀರಶೈವರು ಧಾರ್ಮಿಕ ಸಂಶೋಧನೆಯ ಕಾರ್ಯದಲ್ಲಿ ಹಿಂದಿನ ಕಾಲದಲ್ಲಿ ಎಷ್ಟು ಅತ್ಯುಚ್ಚ ಪದವನ್ನು ಹೊಂದಿದ್ದರೆಂಬದು ವ್ಯಕ್ತವಾಗುತ್ತದೆ.

ಜಗತ್ತಿನ ಪ್ರಕಟನೆಯ ಕಾಲದಲ್ಲಿ ಅದು ಮೊದಲು ಸರ್ವ ಶೂನ್ಯ ಸ್ಥಿತಿಯಲ್ಲಿ ಇತ್ತು. ಆಗ ಅದರಲ್ಲಿ ಚಿತ್‌ಶಕ್ತಿಯು ಉದ್ಭವಿಸುತ್ತದೆ. ಅದರ ಮೂಲಕವೇ ನಾದ, ಬಿಂದು, ಕಲೆಗಳು ತಲೆದೋರುತ್ತವೆ. ಈ ನಾಲ್ಕೂ ಬೆರೆದುಕೊಳ್ಳಲು ಮೂಲಪ್ರಣವಕ್ಕೆ ಕಾರಣವಾಗುತ್ತವೆ. ಆಮೇಲೆ ಜಗತ್ತು ಕೆಲವು ಸಾದಾಖ್ಯಗಳೊಳಗಿಂದ ಹಾಯ್ದು ಪ್ರಕಟಕ್ಕೆ ಬರುತ್ತದೆ. ಈ ಸಾದಾಖ್ಯಗಳಲ್ಲಿ ಸೃಷ್ಟಿಗೆ ಕಾರಣವಾಗಿರುವ ಅನೇಕ ಬಗೆಯ ಶಕ್ತಿಗಳು ಉದ್ಭವಿಸುತ್ತವೆ. ಈ ಎರಡನೆಯ ಸ್ಥಿತಿಯೊದಗಿದಲ್ಲಿ ಈ

ಶಕ್ತಿಗಳ ಹರಿದಾಟಕ್ಕೆ ಅತ್ಯವಶ್ಯವಾಗಿರುವ ಷಡಧ್ವಗಳು ಉಂಟಾಗುತ್ತವೆ. ಹೀಗೆ ಶೂನ್ಯದೊಳಗಿಂದ ದೃಶ್ಯ ಜಗತ್ತು ಉತ್ಪನ್ನವಾಗಿರುತ್ತದೆಂದು ವೀರಶೈವರು ತಿಳಿದಿದ್ದಾರೆ. ಇಲ್ಲಿ ಶೂನ್ಯವೆಂದರೆ ಪರಶಿವ ಅಥವಾ ಪರಬ್ರಹ್ಮ ಎಂತಲೇ ತಿಳಿಯಬೇಕು. ಈ ಎಲ್ಲ ವಿಷಯಗಳ ಜ್ಞಾನವು ಷಟ್‌ಸ್ಥಲ ಶಾಸ್ತ್ರಕ್ಕೆ ಮೂಲವಾಗಿರುತ್ತದೆ. ಆದರೆ ಇಂಥ ವಿಷಯಗಳ ಅರಿವು ಇನ್ನೂ ಹೆಚ್ಚಾಗಿ ಸಂಶೋಧಿಸಲ್ಪಟ್ಟಿರುವದಿಲ್ಲ. ಆದರೆ ವಚನ ಗ್ರಂಥಗಳಲ್ಲಿಯೂ ಆಗಮ ಗ್ರಂಥಗಳಲ್ಲಿಯೂ ಇವುಗಳ ವಿವರಣೆಗೆ ಮಹತ್ವದ ಸ್ಥಾನವಿರುತ್ತದೆ. ಈ ವಿಷಯಗಳನ್ನು ಕುರಿತು ನಾವು ಕೆಳಗೆ ಸ್ವಲ್ಪದರಲ್ಲಿ ಹೇಳಲು ಯತ್ನಿಸಿದ್ದೇವೆ. ಅವುಗಳನ್ನು ವಾಚಕರು ಅವಶ್ಯವಾಗಿ ತೂಗಿ ನೋಡಿ ತಮಗೆ ತೋರಿದ ಅಭಿಪ್ರಾಯಗಳನ್ನು ಬಹಿರಂಗಗೊಳಿಸಬೇಕೆಂತಲೂ ನಮ್ಮ ಸೂಚನೆ ಇದೆ.

ಇನ್ನು ಮೇಲೆ ವೀರಶೈವರು ತಮ್ಮ ತಾತ್ವಿಕ ಷಟ್‌ಸ್ಥಲ ಸಿದ್ಧಾಂತವನ್ನು ಹೊರಗೆಡುಹುವ ಸಮಯವು ಬಂದಿದೆ. ಈ ವರೆಗೆ ಅದರ ವಾಙ್ಮಯಾತ್ಮಕ ಮತ್ತು ಉಚ್ಚ ಸಾಮಾಜಿಕ ವಿಚಾರಗಳ ಪ್ರಭಾವವನ್ನು ಜನರಲ್ಲಿ ಶಿವಾನುಭವ ಪತ್ರಿಕೆಯ ದ್ವಾರಾ ಪ್ರಕಟಮಾಡುತ್ತ ಬಂದಿರುತ್ತೇವೆ. ಆದರೆ ಇನ್ನು ಮೇಲೆ ವೀರಶೈವ ಸಿದ್ಧಾಂತವನ್ನು ವ್ಯಕ್ತಪಡಿಸುವ ಕಾರ್ಯವನ್ನು ಕೈಕೊಳ್ಳುವದು ಅವಶ್ಯವಾಗಿದೆ. ಈಚೆಗೆ ಈ ವಿಷಯಕ್ಕೆ ಸಂಬಂಧಿಸಿದ ಗ್ರಂಥಗಳು ಅನೇಕವಾಗಿ ಹೊರಪಟ್ಟಿವೆ. ಅವುಗಳನ್ನು ವೀರಶೈವರು ಓದಿ ತಿಳಿದು ತಾವು ಕಂಡುಹಿಡಿದ ವಿಚಾರಗಳನ್ನು ಲೇಖಗಳ ಮೂಲಕ ನಮಗೆ ತಿಳಿಸಿದಲ್ಲಿ ಅವುಗಳಿಗೆ ಶಿವಾನುಭವ ಪತ್ರಿಕೆಯಲ್ಲಿ ಯಾವಾಗಲೂ ಇಂಬುಗೊಡುವೆವು. ಇದರಿಂದ ಸಮಾಜದಲ್ಲಿ ಹೊಸತರದ ಚಲನೆಯು ಉಂಟಾಗಬಹುದು.

---

## ನಾದ, ಬಿಂದು, ಕಲೆಗಳು.

ವೀರಶೈವ ಧರ್ಮ ಗ್ರಂಥಗಳಲ್ಲಿ ನಾದ ಬಿಂದು ಕಲೆಗಳೆಂಬ ಶಬ್ದಗಳು ಆಗಿಂದಾಗ್ಗೆ ಬರುತ್ತವೆ. ಜಗತ್ತಿನ ಮತ್ತು ಮನುಷ್ಯನ ಎಲ್ಲ ಅವಸ್ಥೆಗಳಲ್ಲಿಯೂ ಇವು ಪರಿಣಾಮ ಮಾಡುತ್ತವೆಂದು ತಿಳಿಯಲ್ಪಟ್ಟಿವೆ. ಜಗತ್ತಿನ ಸೃಷ್ಟಿಯ ಕಾಲಕ್ಕೆ ಇವುಗಳು ಉತ್ಪನ್ನವಾಗುತ್ತವೆ. ಅವು

ಉತ್ಪನ್ನವಾಗಿ ಪರಮಾತ್ಮನ ಮೂಲ ಚಿತ್ತುವಿನೊಡನೆ ಕೂಡಿದ ಕೂಡಲೆ ಓಂಕಾರ ಪ್ರಣವವು ಪ್ರಾದುರ್ಭವಿಸುತ್ತದೆ. ಇದೇ ಮಹಾಲಿಂಗವೆಂದೆನಿಸಿಕೊಳ್ಳುತ್ತದೆ. ಮತ್ತು ಈ ಮಹಾಲಿಂಗದಿಂದ ಜಗತ್ತಿನಲ್ಲಿ ಪಂಚ ಸಾದಾಖ್ಯಗಳೂ ಉಂಟಾಗುತ್ತದೆ.

ಜಗತ್ತು ಆರಂಭದಲ್ಲಿ ಸರ್ವ ಶೂನ್ಯ ನಿರಾಲಂಬ ಸ್ಥಿತಿಯಲ್ಲಿರುತ್ತದೆ. ಆಗ ಪರಶಿವನಲ್ಲಿ ಜಗತ್ತನ್ನು ಉತ್ಪನ್ನ ಕೂಡಬೇಕೆಂಬ ಇಚ್ಛೆಯು ತಲೆದೋರಲು ಮಹಾಜ್ಞಾನ ಚಿತ್ತು ಉದಯವಾಗುವದು. ಆ ಚಿತ್ತಿನಿಂದ ಅಕಾರ ಉಕಾರ ಮಕಾರಗಳೆಂಬ ಅಕ್ಷತ್ರಯಗಳು ಉತ್ಪನ್ನವಾಗುತ್ತವೆ. ಅಕಾರವೇ ನಾದ, ಉಕಾರವೇ ಬಿಂದು, ಮಕಾರವೇ ಕಳೆ. ಈ ಮೂರರೊಡನೆ ಮೂಲ ಚಿತ್ತು ಬೆರೆಯಲು ಓಂಕಾರವೆಂಬ ಪ್ರಣವವು ಉತ್ಪನ್ನವಾಗುತ್ತದೆಂದು ವೀರಶೈವ ಸಿದ್ಧಾಂತವು ಹೇಳುತ್ತದೆ.

ನಾದವು ಒಂದು ಬಗೆಯ ಅಲುಗಾಡುವಿಕೆ ಅಥವಾ ಹೊಯಿಲು ಎಂದು ಹೇಳಬಹುದು. ಇದೇ ಜಗದುತ್ಪತ್ತಿಗೆ ಮೂಲಕಾರಣವು. ಈ ಹೊಯಿದಾಟಿನಿಂದ ಬಿಂದುವಿನ ಪ್ರಾದುರ್ಭಾವವು. ಬಿಂದುವು ಜಗತ್ತು ಘನೀಭೂತವಾಗುವ ಮೊದಲನೆಯ ಸ್ಥಿತಿಯೆಂದು ಹೇಳಬಹುದು. ಹೀಗೆ ನಾದ ಬಿಂದುಗಳು ಉದಯವಾಗಿ ಅವುಗಳ ಪರಸ್ಪರ ಸಂಯೋಗವಾದಲ್ಲಿ ಕಲೆಯು ಉತ್ಪನ್ನವಾಗುತ್ತದೆ. ಈ ಕಲೆಯು ಜಗತ್ತಿನಲ್ಲಿ ತೋರುವ ದೃಶ್ಯ ಶಕ್ತಿ ಎಂದು ಹೇಳಬಹುದು. ಇದರ ಮೂಲಕವೇ ಪದಾರ್ಥಗಳ ಗುಣಗಳೂ ಕ್ರಿಯೆಗಳೂ ಸಂಭವಿಸುತ್ತವೆ. ಈ ನಾದ ಬಿಂದು ಕಲೆಗಳು ಜಗತ್ತಿನಲ್ಲಿ ಇಷ್ಟೇ ಅಲ್ಲ. ಜಗತ್ತಿನ ಪ್ರತಿಯೊಂದು ಪದಾರ್ಥದಲ್ಲಿಯೂ ತೋರಿಬರುತ್ತವೆ.

ನಾದವು ಮೊದಲು ಚಿತ್‌ಸ್ವರೂಪದಲ್ಲಿರುತ್ತದೆ. ಅದು ಓಂ ಓಂ ಓಂ ಎಂದು ಸುನಾದ ಘೋಷವುಳ್ಳುದೆಂದು ಹೇಳಲ್ಪಡುತ್ತದೆ. ಬಿಂದುವಾದರೂ ಆರಂಭದಲ್ಲಿ ಚಿತ್‌ಸ್ವರೂಪುಳ್ಳುದು. ಅದು ಪ್ರಜ್ವಲಿಸುವ ಕಂಭದಂತೆ ಝುಗಝುಗಿಸಿ ಬೆಳಗುತ್ತದೆ. ಹಾಗೆಯೇ ಚಿತ್‌ಸ್ವರೂಪುಳ್ಳ ಮಕಾರವು ಮಧ್ಯಾಹ್ನ ಕಾಲದ ಪ್ರಚಂಡ ಸೂರ್ಯ ಕೋಟಿಗಳ ಪ್ರಕಾಶಕ್ಕಿಂತಲೂ ಮಿಗಿಲಾಗಿ ಮಹಾಪ್ರಕಾಶವುಳ್ಳದೆಂದು ಹೇಳಲ್ಪಡುತ್ತದೆ. ಹೀಗೆ ಇವುಗಳ ಸ್ವರೂಪವನ್ನು ವಚನಕಾರರು ಹೇಳುವದುಂಟು.

ನಾದವು ಜಗತ್ತಿಗೆ ಬೀಜ ಸ್ವರೂಪವಾಗಿದೆ. ಬಿಂದುವು ಅದಕ್ಕೂ ಹೆಚ್ಚು ಸ್ಥೂಲ ಸ್ವರೂಪವುಳ್ಳದ್ದಾಗಿದೆ. ಕಲೆಯು ಶಿವಶಕ್ತಿಯ ದ್ಯೋತಕವು. ಹೀಗೆ ನಾದ ಬಿಂದು ಕಲೆಗಳ ಕಾರ್ಯಗಳನ್ನು ವೀರಶೈವ ಧರ್ಮ ಗ್ರಂಥಕಾರರು ವಿವರಿಸುತ್ತಾರೆ. ಇವುಗಳೊಡನೆ ಪರಮಾತ್ಮನ ಮೂಲ ಚಿತ್ತು ಕೂಡಿದಲ್ಲಿ ಓಂಕಾರದ ಉತ್ಪತ್ತಿಯು. ಈ ಓಂಕಾರವೇ ಅಖಂಡ ಪರಿಪೂರ್ಣಗೋಳಕಾಕಾರ ತೇಜೋ ಮೂರ್ತಿಯಾದ ಮಹಾಲಿಂಗವು.

ದೇಹದಲ್ಲಿ ನಾದವೇ ಪ್ರಾಣವು, ಬಿಂದುವೇ ದೃಶ್ಯ ಶರೀರವು, ಕಳೆಯೇ ಮನವಾಗಿರುತ್ತದೆ. ಇವುಗಳು ಕೂಡಿದಾಗಲೇ ಮನುಷ್ಯನಲ್ಲಿ ಕಾರ್ಯಗಳು ಸಂಭವಿಸುತ್ತವೆ. ಹುಟ್ಟುವಿಕೆಗೆಯೇ ಬಿಂದುವು. ಸ್ಥಿತಿಯೇ ಕಳೆಯು, ನಾದದಿಂದಲೇ ಸಂಹಾರವು. ಹೀಗೆ ಜಗತ್ತಿನಲ್ಲಿರುವ ಪದಾರ್ಥಗಳ ಪ್ರಾದುರ್ಭಾವ, ಅಸ್ತಿತ್ವ, ನಾಶ ಹಾಗೂ ಅವುಗಳ ಸ್ವರೂಪ ಮತ್ತು ಕ್ರಿಯೆ ಇವುಗಳೆಲ್ಲವೂ ನಾದ ಬಿಂದು ಕಲೆಗಳ ಮೂಲಕವಾಗಿಯೇ ಸಂಭವಿಸುತ್ತವೆಂದು ತಿಳಿಯಲ್ಪಟ್ಟಿರುತ್ತದೆ.

---

## ಪಂಚಸಾದಾಖ್ಯಗಳು.

ಜಗತ್ ಸೃಷ್ಟಿಯ ಕಾಲದಲ್ಲಿ ಅಖಂಡ ಪರಿಪೂರ್ಣ ಗೋಳಕಾಕಾರ ತೇಜೋ ಮೂರ್ತಿಯಾದ ಮಹಾಲಿಂಗವು ಮೇಲೆ ಹೇಳಿದ ಪ್ರಕಾರ ಉದ್ಭವಿಸುತ್ತದೆ. ಈ ಮಹಾಲಿಂಗದಿಂದ ಪಂಚಸಾದಾಖ್ಯಗಳು ಪ್ರಕಟವಾಗುತ್ತವೆ. ಈ ಸಾದಾಖ್ಯಗಳು ಜಗತ್ತು ವ್ಯಕ್ತವಾಗುವಾಗ ಉಂಟಾಗುವ ಆದರ ಬೇರೆ ಬೇರೆ ಸ್ವರೂಪಗಳೆಂದು ಹೇಳಬಹುದು. ಇವು ಮಹಾಸಾದಾಖ್ಯ ಶಿವಸಾದಾಖ್ಯ ಅಮೂರ್ತಿ ಸಾದಾಖ್ಯ ಮೂರ್ತಿಸಾದಾಖ್ಯ ಕರ್ತೃಸಾದಾಖ್ಯ ಕರ್ಮಸಾದಾಖ್ಯ ಎಂಬವುಗಳಿದ್ದು ಮೊದಲಿನ ಸಾದಾಖ್ಯಕ್ಕಿಂತ ಅದರ ಮುಂದಿನ ಸಾದಾಖ್ಯವು ಹೆಚ್ಚು ಹೆಚ್ಚು ಸ್ಥೂಲ ಸ್ಥಿತಿಯನ್ನು ಹೊಂದುತ್ತ ಹೀಗೆ ಒಂದರ ಹಿಂದೊಂದು ಉಗಮವಾಗುತ್ತ ಹೋಗುತ್ತವೆ. ಈ ಐದು ಸಾದಾಖ್ಯಗಳಲ್ಲಿ ಸೃಷ್ಟಿಯ ಕಾರ್ಯದಲ್ಲಿ ಅವಶ್ಯವಾಗಿರುವ ಶಕ್ತಿಗಳೂ ಕಲೆಗಳೂ ಲಿಂಗಗಳೂ ಪಂಚಾಕ್ಷರಗಳೂ, ಪಂಚಮುಖಗಳೂ ಕಳಾಮೂರ್ತಿಗಳೂ ಅಂಗಗಳೂ ಅಧಿದೇವತೆಗಳೂ ಉತ್ಪನ್ನವಾಗುತ್ತವೆ. ಸೃಷ್ಟಿಯ ಕ್ರಮದಲ್ಲಿ

ಕಾರ್ಯಗಳು ಸರಿಯಾಗಿ ನಡಿಯಲು ಇವೆಲ್ಲವೂ ಅವಶ್ಯವಾದವುಗಳು. ಇವು ಕ್ರಮವಾಗಿ ಪ್ರಕಟವಾಗುತ್ತ ಮುಂದೆ ಹುಟ್ಟುವಡೆಗೆ ಪದಾರ್ಥಗಳಿಗೆ ಪ್ರತ್ಯಕ್ಷ ಕಾರಣವಾಗಿರುವ ಪಂಚಮಹಾಭೂತಗಳೂ ಉತ್ಪನ್ನವಾಗುತ್ತವೆ. ಇವುಗಳೂ ಸೃಷ್ಟಿಗೆ ಕಾರಣವಾಗಿವೆ. ಸಾದಾಖ್ಯಗಳು ಜಗತ್ತಿನಲ್ಲಿ ತಲೆದೋರುವಂತೆ ಮನುಷ್ಯನಲ್ಲಿಯೂ ಕೂಡ ಕಂಡುಬರುತ್ತವೆ. ಹೀಗೆ ಸಾದಾಖ್ಯಗಳು ಜಗತ್ತಿನ ಸೃಷ್ಟಿಯ ಕಾಲದಲ್ಲಿ ವಿಧವಿಧ ಸ್ವರೂಪಗಳನ್ನು ತಾಳುತ್ತ ಜಗತ್ತಿಗೆ ಕಾರಣವಾಗಿವೆ ಪ್ರತಿಯೊಂದು ಸಾದಾಖ್ಯದಲ್ಲಿ ಸೃಷ್ಟಿಯ ಕಾರ್ಯಕ್ಕೆ ಅವಶ್ಯವಾಗಿ ಬೇಕಾಗುವ ಎಲ್ಲ ತರದ ವಸ್ತುಗಳೂ ಶಕ್ತಿಗಳೂ ಹುಟ್ಟುತ್ತವೆ. ಅವುಗಳ ಕಾರ್ಯಗಳನ್ನು ನಡಿಸಲಿಕ್ಕೆ ಸದಾಶಿವ ಈಶ್ವರ ರುದ್ರ ವಿಷ್ಣು ಮತ್ತು ಬ್ರಹ್ಮ ಈ ಅಧಿದೇವತೆಗಳು ಇರುತ್ತಾರೆ. ಹಾಗೆಯೇ ಪರಾಶಕ್ತಿ ಆದಿಶಕ್ತಿ ಇಚ್ಛಾಶಕ್ತಿ ಜ್ಞಾನಶಕ್ತಿ ಕ್ರಿಯಾಶಕ್ತಿ ಎಂಬ ಶಕ್ತಿಗಳೂ ಉತ್ಪನ್ನವಾಗುತ್ತವೆ. ಮತ್ತು ಜಗತ್ತಿನಲ್ಲಿಯ ಕ್ರಿಯೆಗಳಿಗೆ ಇವೂ ಕಾರಣಗಳು. ಮುಂದೆ ಆಕಾಶ ವಾಯು ಅಗ್ನಿ ಜಲ ಮತ್ತು ಪೃಥ್ವಿ ಎಂಬ ಪಂಚಮಹಾಭೂತಗಳೂ ಉದ್ಭವಿಸುತ್ತವೆ. ಅವುಗಳ ತತ್ವಗಳು ಪ್ರತಿಯೊಂದು ಪದಾರ್ಥದಲ್ಲಿ ಸೇರಿಕೊಂಡು ಪದಾರ್ಥಗಳ ಗುಣಧರ್ಮಗಳಿಗೆ ಕಾರಣವಾಗಿರುತ್ತವೆ.

ಪಂಚಸಾದಾಖ್ಯಗಳು ಶಿವನ ಪಂಚಮುಖಗಳೆಂತಲೂ ಹೇಳಲ್ಪಡುತ್ತವೆ. ಈ ಪ್ರತಿಯೊಂದು ಮುಖದಲ್ಲಿ ಪಂಚಾಕ್ಷರಿಯ ಐದು ಅಕ್ಷರಗಳೂ ನೆಲೆಗೊಂಡಿವೆ. ಈ ಪಂಚಾಕ್ಷರಿಯು ಪಂಚಲಿಂಗ ಸ್ವರೂಪವನ್ನು ಹೊಂದಿ ಅವುಗಳಲ್ಲಿ ಪ್ರಕಾಶಿಸುತ್ತದೆ. ಈ ಸಾದಾಖ್ಯಗಳಲ್ಲಿ ಶಾಂತತೀತೋತ್ತರಕಲೆ ಶಾಂತ್ಯಾತೀತಕಲೆ ಶಾಂತಕಲೆ ವಿದ್ಯಾಕಲೆ ಪ್ರತಿಷ್ಠಾಕಲೆ ಮತ್ತು ನಿವೃತ್ತಿಕಲೆ ಎಂಬ ಕಲೆಗಳು ಬೆಳಗುತ್ತವೆ. ಇವೆಲ್ಲವುಗಳು ಶಿವನ ನೆನಹು ಮಾತ್ರದಿಂದ ಉಂಟಾಗಿ ಜಗತ್ತನ್ನು ವ್ಯವಸ್ಥೆಯಿಂದ ನಡಿಸಿಕೊಂಡು ಹೋಗುತ್ತವೆಂದು ವೀರಶೈವ ತತ್ವಜ್ಞರು ತಿಳಿದಿರುತ್ತಾರೆ.

---

## ಷಡಧ್ವಗಳು.

ಅಧ್ವಗಳು ಆರು ಇರುತ್ತವೆ. ಅವು ಮಂತ್ರಾಧ್ವ, ಪದಾಧ್ವ, ವರ್ಣಾಧ್ವ, ಭುವನಾಧ್ವ, ತತ್ವಾಧ್ವ, ಕಲಾಧ್ವಗಳಾಗಿವೆ. ಶಿವಾಗ

ಮಾಗಳಲ್ಲಿ ಇವುಗಳಿಗೆ ಬಹು ಮಹತ್ವದ ಸ್ಥಾನವಿದೆ. ಶೈವ ಧರ್ಮ ಗ್ರಂಥಗಳಲ್ಲಿ ಇವುಗಳ ವಿವೇಚನೆಯು ಬಹು ವಿಸ್ತಾರವಾಗಿ ಮಾಡಲ್ಪಡುವದುಂಟು. ವೀರಶೈವ ಸಿದ್ಧಾಂತದಲ್ಲಿಯೂ ಇವುಗಳ ಉಲ್ಲೇಖವು ಅಲ್ಲಲ್ಲಿ ಬರುತ್ತದೆ. ಆದರೆ ದೀಕ್ಷೆಯ ಮೂಲಕ ಷಡಧ್ವ ಶುದ್ಧಿಯನ್ನು ಹೊಂದಿದ ಬಳಿಕ ಷಟ್‌ಸ್ಥಲ ಮಾರ್ಗದಂತೆ ವೀರಶೈವನು ನಡೆಯಬೇಕಾದುದರಿಂದ ಈ ಷಡಧ್ವಗಳ ಬದಲು ಷಟ್‌ಸ್ಥಲ ವಿಷಯಗಳು ವೀರಶೈವ ಗ್ರಂಥಗಳಲ್ಲಿ ಹೆಚ್ಚಾಗಿ ನಿರೂಪಿಸಲ್ಪಡುವದುಂಟು.

ಪರಶಿವನ ಮೂಲಕ ಸಾದಾಖ್ಯಗಳು ಹೊರಹೊಮ್ಮುವವೆಂದು ಹಿಂದೆ ಹೇಳಲ್ಪಟ್ಟಿದೆಯಷ್ಟೇ. ಈ ಸಾದಾಖ್ಯಗಳು ಪ್ರಕಟವಾಗುವಾಗ ವಿಶ್ವದಲ್ಲಿ ಸಂಚಲನೆಯು ಉತ್ಪನ್ನವಾಗಿ ಅದು ಯಾವ ಮಾರ್ಗದಿಂದ ಮುಂದೆ ಪ್ರವಹಿಸುತ್ತದೋ ಅದೇ ಅಧ್ವವೆನಿಸಿಕೊಳ್ಳುವದು. ಶಕ್ತಿಯು ಪ್ರವಹಿಸಲು ಅದಕ್ಕೊಂದು ಆಧಾರವು ಬೇಕು. ಈ ಆಧಾರವು ಅದಕ್ಕೆ ದೊರೆತಾಗಲೇ ಅದು ಪ್ರಕಟವಾಗುತ್ತದೆ. ಇಂಥ ಆಧಾರವೇ ಅಧ್ವವೆಂದು ಹೇಳಬಹುದು. ಇವುಗಳ ಮೂಲಕ ಶಿವಶಕ್ತಿಯು ಜಗತ್ತಿನಲ್ಲಿ ಹರಿದಾಡುತ್ತದೆ.

ಅಧ್ವಗಳು ವಿದ್ಯುಲ್ಲತೆಯು ಹರಿದು ಬರುವಂಥ ತಾರಾಯಂತ್ರದ ತಂತಿಗಳಂತಿರುತ್ತವೆ. ವಿಶ್ವವು ಪ್ರಕಟವಾಗಲು ಅವು ಸಾಧನಗಳಾಗಿವೆ. ಆದ್ದರಿಂದ ಅಧ್ವಗಳು ಜಗತ್ತಿನಲ್ಲೆಲ್ಲ ಪಸರಿಸಿರುತ್ತವೆ. ಸಾದಾಖ್ಯಗಳು ಮತ್ತು ಅಧ್ವಗಳು ಇವುಗಳ ಸಂಬಂಧವನ್ನು ಕೆಳಗಿನ ದೃಷ್ಟಾಂತದ ಮೂಲಕ ಹೇಳಬಹುದು. ಜೇಡಹುಳದ ಸುತ್ತಲು ಜಾಳಿಗೆಗಳು ಪಸರಿಸಿದಂತೆ ಸಾದಾಖ್ಯಗಳು ಪಸರಿಸಿರುತ್ತವೆ. ಆದರೆ ಒಂದು ಜಾಳಿಗೆಯ ವಲಯದಿಂದ ಮತ್ತೊಂದು ವಲಯಕ್ಕೆ ಹೋಗಲು ಜೇಡಹುಳವು ಹೇಗೆ ತಾನಿರುವ ಸ್ಥಳದಿಂದ ಆಯಾ ಜಾಳಿಗೆಗಳೊಳಗಿಂದ ಹಾಯ್ದು ಕಡೆಯ ಜಾಳಿಗೆಯ ವರೆಗೆ ಸರಳವಾದ ತಂತಿಗಳನ್ನು ಹೆಣೆದುಕೊಂಡು ಆಯಾ ಜಾಳಿಗೆಗಳ ವಲಯಗಳಿಗೆ ಹೋಗಲು ಅನುವು ಮಾಡಿಕೊಂಡಿರುತ್ತದೆಯೋ ಹಾಗೆಯೇ ಷಡಧ್ವಗಳ ಮೂಲಕ ಪರಶಿವನಿಂದ ಶಕ್ತಿಯು ಹೊರಟು ವಿಶ್ವದ ತುಂಬೆಲ್ಲ ಅಂದರೆ ಸಾದಾಖ್ಯಗಳಲ್ಲೆಲ್ಲ ಹರಡಿರುತ್ತದೆ. ಅಧ್ವಗಳ ಸಹಾಯದಿಂದಲೇ ಪ್ರಪಂಚದ ಆವಿರ್ಭಾವವು. ಅವ್ಯವಸ್ಥಿತವಾಗಿ ಇರುವ ಮೂಲ ಪ್ರಪಂಚು ಈ ಷಡಧ್ವಗಳ ಮೂಲಕ

ವಾಗಿಯೇ ವ್ಯವಸ್ಥೆಯಿಂದ ವ್ಯವಹರಿಸುತ್ತದೆ. ಮತ್ತು ಈಗ ಕಾಣುವ ಸೌಂದರ್ಯಯುಕ್ತ ಜಗತ್ತು ಆಗಿರುತ್ತದೆ.

ಷಡಧ್ವಗಳಲ್ಲಿ ಕೆಲವು ಸೂಕ್ಷ್ಮವೂ ಕೆಲವು ಸ್ಥೂಲವೂ ಕೆಲವು ಬಹು ಸೂಕ್ಷ್ಮವೂ ಇರುತ್ತವೆ. ಆದರೂ ಅವುಗಳಲ್ಲಿ ಪರಸ್ಪರ ಸಂಬಂಧವಿದೆ. ಇದರಿಂದ ವಿಶ್ವಕ್ಕೆ ವೈವಿಧ್ಯತೆಯು ಪ್ರಾಪ್ತವಾಗಿರುತ್ತದೆ.

ಅಧ್ವಗಳ ಸಂಖ್ಯೆಯು ಬಹಳವಿದೆ. ಆದರೆ ಅವುಗಳಲ್ಲೆಲ್ಲ ಆಗಮಕಾರರು ಆರು ಮುಖ್ಯ ವರ್ಗಗಳನ್ನು ಮಾಡಿರುವರು. ಮನುಷ್ಯನು ಮಾಡುವ ಕ್ರಿಯೆಗಳೂ ಜಗತ್ತಿನ ವ್ಯಾಪಾರಗಳೂ ಈ ಅಧ್ವಗಳ ಮೂಲಕವಾಗಿಯೇ ದೃಶ್ಯಸ್ಥಿತಿಗೆ ಬರುತ್ತವೆ.

ಈ ಆರು ಅಧ್ವಗಳಲ್ಲಿ ಪುನಃ ಎರಡು ಮುಖ್ಯ ವಿಭಾಗಗಳು ಕಲ್ಪಿಸಲ್ಪಟ್ಟಿರುತ್ತವೆ. ಒಂದನೇ ವಿಭಾಗದಲ್ಲಿ ಮಂತ್ರಾಧ್ವ, ಪದಾಧ್ವ, ವರ್ಣಾಧ್ವಗಳು ಬರುತ್ತವೆ. ಎರಡನೇ ವಿಭಾಗದಲ್ಲಿ ಭುವನಾಧ್ವ, ತತ್ವಾಧ್ವ, ಕಲಾಧ್ವಗಳು ಬರುತ್ತವೆ. ಮೊದಲನೆಯ ವಿಭಾಗದಲ್ಲಿಯ ಅಧ್ವಗಳು ಸೂಕ್ಷ್ಮವಾಗಿರುವದರಿಂದ ನಾದದಿಂದ ಉದ್ಭವಿಸಿರುತ್ತವೆಂದು ತಿಳಿಯಲ್ಪಟ್ಟಿರುತ್ತವೆ. ಎರಡನೇ ವರ್ಗದಲ್ಲಿಯ ಅಧ್ವಗಳು ಹೆಚ್ಚು ಸ್ಥೂಲವಾಗಿರುವದರಿಂದ ಅವು ಬಿಂದುವಿನಿಂದಾಗಿರುತ್ತವೆಂದು ತಿಳಿಯಲ್ಪಟ್ಟಿರುತ್ತವೆ. ಈ ನಾದಬಿಂದುಗಳು ಕೂಡಿದಾಗಲೇ ಕಲೆಯು. ಆದ್ದರಿಂದ ವರ್ಣಾಧ್ವದೊಡನೆ ಕಲಾಧ್ವವು, ಪದಾಧ್ವದೊಡನೆ ತತ್ವಾಧ್ವವು, ಮಂತ್ರಾಧ್ವದೊಡನೆ ಭುವನಾಧ್ವವು ಕೂಡಿಕೊಂಡು ಚಲಿಸುತ್ತವೆ. ಈ ಜೋಡಿಗಳಲ್ಲಿ ಪರಸ್ಪರ ಸಂಬಂಧವಿದೆ. ಈ ಸಂಬಂಧವನ್ನು ಮಂತ್ರ, ಪದ, ವರ್ಣಾಧ್ವಗಳು ಶಬ್ದಸ್ವರೂಪವೆಂತಲೂ ಭುವನ, ತತ್ವ, ಕಲಾಧ್ವಗಳು ಅರ್ಥಸ್ವರೂಪವೆಂತಲೂ ಆಗಮಜ್ಞರು ವಿವರಿಸಿ ಹೇಳುವದುಂಟು. ಮೊದಲಿನವು ಶಬ್ದಾತ್ಮಕವೆಂತಲೂ ಎರಡನೆಯವು ವಸ್ತ್ವಾತ್ಮಕವೆಂತಲೂ ವರ್ಣಿಸಲ್ಪಟ್ಟಿರುತ್ತವೆ. ಮೊದಲನೆಯ ವರ್ಗವು ಶಕ್ತ್ಯಾತ್ಮಕವೂ ಎರಡನೆಯ ವರ್ಗವು ಸ್ವರೂಪಾತ್ಮಕವೂ ಎಂತಲೂ ಹೇಳಲ್ಪಟ್ಟಿರುತ್ತವೆ.

ಮಂತ್ರ, ಪದ, ವರ್ಣಾಧ್ವಗಳು ಶುದ್ಧಾಧ್ವಗಳಾಗಿವೆ. ಭುವನ, ತತ್ವ, ಕಲಾಧ್ವಗಳು ಅಶುದ್ಧಾಧ್ವಗಳಾಗಿವೆ.

ಈ ಅಧ್ವಗಳಲ್ಲಿ ಎಲ್ಲಕ್ಕೂ ಸ್ಥೂಲವಾದುದು ಕಲಾಧ್ವವು ಮತ್ತು ಎಲ್ಲಕ್ಕೂ ಸೂಕ್ಷ್ಮವಾದುದು ಮಂತ್ರಾಧ್ವವು. ಆದುದರಿಂದ ಕಲೆಯಲ್ಲಿ ತತ್ವ, ತತ್ವದಲ್ಲಿ ಭುವನ, ಭುವನದಲ್ಲಿ ವರ್ಣ, ವರ್ಣದಲ್ಲಿ ಪದ, ಪದದಲ್ಲಿ ಮಂತ್ರ ಹೀಗೆ ಈ ಅಧ್ವಗಳು ಪರಸ್ಪರ ಕೂಡಿಕೊಳ್ಳುತ್ತವೆ.

ಷಡಧ್ವಗಳ ಜ್ಞಾನ ಮಾಡಿಕೊಂಡಾಗಲೇ ಮನುಷ್ಯನಿಗೆ ಪ್ರಗತಿಯ ದ್ವಾರವು ತೋರಹತ್ತುತ್ತದೆ. ಮನುಷ್ಯನು ಮೊದಲಿನ ಮೂರು ಶಬ್ದಾಧ್ವಗಳ ಜ್ಞಾನಮಾಡಿಕೊಂಡು ಉಳಿದ ಮೂರು ಅರ್ಥಾಧ್ವಗಳ ಜ್ಞಾನಮಾಡಿಕೊಳ್ಳಬೇಕು. ಅಂದರೆ ಅವನು ಜ್ಞಾನಿಯೆನಿಸಿಕೊಳ್ಳುವನು ಮತ್ತು ಮಹಾಮಾಯೆಯಿಂದ ದೂರಾಗುವನು. ಆಗ ಅಶುದ್ಧಾಧ್ವಗಳು ಬಿಂದುವಿನಲ್ಲಿಯೂ ಶುದ್ಧಾಧ್ವಗಳು ನಾದದಲ್ಲಿಯೂ ಅಡಗುವವು. ಮುಂದೆ ಈ ಬಿಂದುವು ಸಹ ನಾದದಲ್ಲಿ ಅಡಗುವದು ಮತ್ತು ನಾದವು ಪರಾಶಕ್ತಿಯಲ್ಲಿ ಅಡಗುವದು ಮತ್ತು ಪರಾಶಕ್ತಿಯು ಪರಮಾತ್ಮನಲ್ಲಿ ಅಡಗುವದು. ಆಗ ಮನುಷ್ಯನು ಷಡಧ್ವಗಳ ಜಾಳಿಗೆಯಿಂದ ಹೊರಬಿದ್ದು ಮೋಕ್ಷವನ್ನು ಹೊಂದುವನು. ಹೀಗೆ ಅಧ್ವಗಳು ಆಗಮಗ್ರಂಥಗಳಲ್ಲಿಯೂ ಶಿವಸಿದ್ಧಾಂತ ಗ್ರಂಥಗಳಲ್ಲಿಯೂ ಸವಿಸ್ತಾರವಾಗಿ ನಿರೂಪಿಸಲ್ಪಟ್ಟಿರುತ್ತವೆ.

ಮಂತ್ರಾಧ್ವ:— ಇದರಲ್ಲಿ ಹನ್ನೊಂದು ಮಂತ್ರಗಳಿವೆ. ಅವು ಸದ್ಯೋಜಾತಾದಿ ಪಂಚಬ್ರಹ್ಮ ಮಂತ್ರಗಳು. ಇವು ಐದು ಇವೆ. ಇವುಗಳೊಡನೆ ಹೃದಯ ಮಂತ್ರ, ಶಿರೋಮಂತ್ರ, ಮೊದಲಾದ ಷಡಂಗಮಂತ್ರಗಳು ಆರು ಕೂಡಿ ಹನ್ನೊಂದು ಮಂತ್ರಗಳಾಗುತ್ತವೆ. ಇವು ಮಂತ್ರಾಧ್ವಗಳು.

ಪದಾಧ್ವ:—ಇವು ೯೪ ಇವೆ. ಕೆಲವು ಆಗಮಗ್ರಂಥಗಳಲ್ಲಿ ಇವು ಎಂಭತ್ತೊಂದು ಇವೆ ಎಂದು ಹೇಳಲ್ಪಟ್ಟಿವೆ ಮಂತ್ರಾಧ್ವಕ್ಕೆ ಈ ಪದಾಧ್ವವೇ ಅವಲಂಬನವು. ಪದಗಳಿಂದಲೇ ಮಂತ್ರಗಳು ಉತ್ಪವಿಸುತ್ತವೆ.

ವರ್ಣಾಧ್ವ:— ಇವು ಐವತ್ತೆರಡು ಅಕ್ಷರಗಳು. ಪದಾಧ್ವಕ್ಕೆ ವರ್ಣಾಧ್ವವು ಮೂಲವಾಗಿದೆ. ಅಂದರೆ ವರ್ಣಗಳ ಸಹಾಯದಿಂದ ಪದಗಳು ರಚಿಸಲ್ಪಡುತ್ತವೆ. ಮತ್ತು ಪದಗಳಿಂದ ಮಂತ್ರಗಳು ಉತ್ಪನ್ನವಾಗುತ್ತವೆ. ಮಂತ್ರಗಳು ಎಲ್ಲೆಲ್ಲಿಯೂ ತುಂಬಿವೆ.

ಮೇಲೆ ಕಾಣಿಸಿದ ಅಧ್ವಗಳು ನಾದಾತ್ಮಕವಾಗಿವೆ ನಾದದಿಂದಲೇ ಇವು ಹುಟ್ಟುತ್ತವೆ. ಇವುಗಳಿಂದಲೇ ವೇದಗಳ ಆಗಮಗಳ ಉಗಮವು.

ಪದಗಳ ಸಂಘವೇ ಮಂತ್ರಗಳು. ಇವುಗಳಲ್ಲಿ ಪಂಚಬ್ರಹ್ಮಮಂತ್ರಗಳು, ಷಡಂಗಮಂತ್ರಗಳು ಎಂದು ಎರಡು ವಿಧಗಳಿರುತ್ತವೆ.

ಪಂಚಬ್ರಹ್ಮ ಮಂತ್ರಗಳು ಮೂರ್ತಿಬ್ರಹ್ಮ, ತತ್ವಬ್ರಹ್ಮ, ಭೂತಬ್ರಹ್ಮ, ಪಿಂಡಬ್ರಹ್ಮ, ಕಲಾಬ್ರಹ್ಮ, ಎಂದು ಐದು ಪ್ರಕಾರಗಳಾಗಿರುತ್ತವೆ. ಸಾಕಲ್ಯ, ಶಾಂಭವ, ಸೌಖ್ಯ, ಸಾವಸ್ಯ, ಸಾಯುಜಗಳೆಂಬ ಪಂಚಪ್ರಣವುಗಳು ಮೂರ್ತಿಬ್ರಹ್ಮಮಂತ್ರಗಳು. ಶುದ್ಧಪ್ರಸಾದ, ಮೂಲಪ್ರಸಾದ, ತತ್ವಪ್ರಸಾದ, ಆದಿಪ್ರಸಾದ, ಆತ್ಮಪ್ರಸಾದ ಎಂಬವು ಪಂಚಪ್ರಸಾದಗಳು ತತ್ವಬ್ರಹ್ಮ ಮಂತ್ರಗಳು. ಲ ವ ರ ಯ ಹ ಕಾರಗಳು ಭೂತಬ್ರಹ್ಮ ಮಂತ್ರಗಳು. ತವ್ಮ ತವ್ಮ ಬೀಜಾಕ್ಷರಗಳಿಂದ ಯುಕ್ತವಾದ ಸದ್ಯೋಜಾತ, ವಾಮದೇವ, ಅಘೋರ, ತತ್ಪುರುಷ, ಈಶಾನಗಳೆಂಬ ಪಂಚಮಂತ್ರಗಳು ಪಿಂಡಬ್ರಹ್ಮ ಮಂತ್ರಗಳು. ಈ ಪಂಚಬ್ರಹ್ಮ ಮುಖಗಳಿಗೆ ಸಂಬಂಧಿಸಿ ಮೂವತ್ತೆಂಟು ಕಲೆಗಳಿದ್ದು ಅವುಗಳಿಂದ ಕೂಡಿದ ಪಂಚಮಂತ್ರಗಳು ಕಲಾಬ್ರಹ್ಮ ಮಂತ್ರಗಳು.

ಇನ್ನು ಷಡಂಗ ಮಂತ್ರಗಳು ಶಿವಾಂಗ, ಭೂತಾಂಗ, ವಿದ್ಯಾಂಗ, ಕೂಟಾಂಗ, ಶಕ್ತ್ಯಂಗ, ಸಾಮಾನ್ಯಾಂಗ ಎಂದು ಆರು ತೆರನಾಗಿರುತ್ತವೆ.

ಆಗಮಕಾರರು ಹೀಗೆ ಅನೇಕ ಭೇದವಿಭೇದಗಳನ್ನು ಕಲ್ಪಿಸಿ ಈ ಶುದ್ಧಾಧ್ವಗಳಿಂದ ಶಿವಾಗಮಗಳೂ ಉಪಭೇದಗಳಿಂದ ಕೂಡಿದ ೨೮ ಸಂಹಿತೆಗಳೂ ಉತ್ಪನ್ನವಾದವೆಂದು ತಿಳಿಸುತ್ತಾರೆ.

ಭುವನಾಧ್ವ:— ಇವು ೨೨೪ ಇರುತ್ತವೆ. ಬ್ರಹ್ಮಾಂಡದಲ್ಲೆಲ್ಲ ಇವು ಪಸರಿಸಿರುತ್ತವೆ.

ತತ್ವಾಧ್ವ: — ಇವು ೩೬ ಇವೆ. ಇವುಗಳ ಸವಿಸ್ತಾರ ವಿವೇಚನೆಯನ್ನು ಕ್ರಮಶಃ ಮಾಡುವೆವು.

ಕಲಾಧ್ವ:— ಇವು ಐದು ಇರುತ್ತವೆ. ಇವು ನಿವೃತ್ತಿ, ಪ್ರತಿಷ್ಠಾ, ವಿದ್ಯಾ, ಶಾಂತಿ, ಶಾಂತ್ಯಾತೀತಗಳು ಇರುತ್ತವೆ. ಈ ಕಲೆಗಳು ಪದಾ

ರ್ಥಗಳೊಡನೆ ಬೆರೆದು ಅವುಗಳಲ್ಲಿ ಅನೇಕ ತರದ ಪರಿಣಾಮಗಳನ್ನುಂಟು ಮಾಡುತ್ತವೆ. ಇವುಗಳ ಸಂಕ್ಷಿಪ್ತ ವಿವರವು ಏನೆಂದರೆ:—

ನಿವೃತ್ತಿಕಲೆ:— ಪರಮಾತ್ಮನ ಅರಿವು ಮನುಷ್ಯನಲ್ಲಿ ಉತ್ಪನ್ನವಾಗಲು ಈ ನಿವೃತ್ತಿಕಲೆಯು ಜಾಗ್ರತಿಯನ್ನು ಹೊಂದುತ್ತದೆ. ಆಗ ಇವನು ದುಷ್ಟ ವಾಸನೆಗಳನ್ನು ಬಿಟ್ಟು ಪರಮಾತ್ಮನೊಡನೆ ಕೂಡಲು ಬಯಸುತ್ತಾನೆ. ಇದರ ಅಧಿದೇವತೆಯು ಬ್ರಹ್ಮನಿರುತ್ತಾನೆ. ಪ್ರತಿಷ್ಠಾಕಲೆ:— ಈ ಕಲೆಯ ಮೂಲಕ ಮೋಕ್ಷೋನ್ಮುಖನಾದ ಆತ್ಮನು ದೃಢಚಿತ್ತನಾಗಿರುತ್ತಾನೆ. ವಿಷ್ಣುವೇ ಇಲ್ಲಿ ಅಧಿದೇವತೆಯು ವಿದ್ಯಾಕಲೆ: ಇಲ್ಲಿ ಪಾಪಕರ್ಮಗಳು ನಾಶಹೊಂದುತ್ತವೆ. ಬುದ್ಧಿಯು ವಿಶಾಲವಾಗುತ್ತದೆ. ಮಲಗಳು ದೂರಾಗುತ್ತವೆ. ರುದ್ರನು ಇಲ್ಲಿ ಅಧಿದೇವತೆಯು. ಶಾಂತಿಕಲೆ: ಇಲ್ಲಿ ಅಹಂಕಾರವು ತೊಲಗಿ ಹೋಗುತ್ತದೆ ಎಲ್ಲೆಲ್ಲಿಯೂ ಸಮಾಧಾನವು ನೆಲೆಗೊಳ್ಳುತ್ತದೆ. ಇದರ ಅಧಿದೇವತೆಯು ಮಹೇಶ್ವರನು. ಶಾಂತ್ಯಾತೀತಕಲೆ:— ಇದರ ಮೂಲಕ ಪರಮಾತ್ಮನ ಪ್ರೇಮ ಮತ್ತು ಕರುಣೆಯನ್ನು ಮನುಷ್ಯನು ಹೊಂದಿ ಪರಮಾತ್ಮನಲ್ಲಿಯೇ ಜೀವಿಸುತ್ತಾನೆ. ಇದು ಸೌಖ್ಯದ ಪರಮಾವಧಿಯಾಗಿದೆ. ಹೀಗೆ ಕಲೆಗಳು ಮನುಷ್ಯನಲ್ಲಿ ಉಚ್ಚಸ್ಥಿತಿಯನ್ನುಂಟುಮಾಡಲು ಸಾಧನಗಳಾಗಿರುತ್ತವೆ. ಇವು ಜಗತ್ತಿನಲ್ಲಿ ಕೂಡ ವ್ಯಾಪಿಸಿಕೊಂಡು ಸೃಷ್ಟಿಯಲ್ಲಿ ಅನೇಕ ಬಗೆಯ ಪರಿಣಾಮಗಳನ್ನುಂಟು ಮಾಡುತ್ತವೆ.

ಭುವಾನಧ್ವ, ತತ್ವಾಧ್ವ ಮತ್ತು ಕಲಾಧ್ವ ಇವುಗಳು ಬಿಂದು ರೂಪವಾಗಿರುತ್ತವೆ. ಈ ಷಡಧ್ವಗಳನ್ನು ತಿಳಿದುಕೊಂಡು ವ್ಯವಹರಿಸುವವನು ಪರಮಾತ್ಮನೊಡನೆ ಬೆರೆದುಕೊಳ್ಳುತ್ತಾನೆ.

ಪರಮಾತ್ಮನಿಗೆ ಅಧ್ವಪತಿ ಎಂಬ ಹೆಸರು ಇದೆ.

ಹೀಗೆ ಷಡಧ್ವಗಳ ಸಂಕ್ಷಿಪ್ತ ವಿವರಣೆಯು ಇದ್ದು ಪ್ರತಿಯೊಂದು ಅಧ್ವದಲ್ಲಿ ಅನೇಕ ವಿಭಾಗಗಳಿರುತ್ತವೆ. ಈ ವಿಭಾಗಗಳು ಅನುಕ್ರಮವಾಗಿ ತಮ್ಮ ತಮ್ಮೊಳಗೆ ಬೆರೆದುಕೊಂಡು ಜಗತ್ತಿನಲ್ಲಿ ನಾನಾವಿಧ ಕಾರ್ಯಗಳನ್ನು ಮಾಡುತ್ತವೆ. ಮತ್ತು ಅವೆಲ್ಲವು ಪ್ರಳಯಕಾಲದಲ್ಲಿ ಪರಶಿವನಲ್ಲಿಯೇ ಅಡಗುತ್ತವೆ.

ಈ ವಿಚಾರಗಳು ದಕ್ಷಿಣದೇಶದಲ್ಲಿರುವ ಶೈವಸಿದ್ಧಾಂತಿಗಳ ಗ್ರಂಥಗಳಲ್ಲಿ ವಿಸ್ತಾರವಾಗಿ ನಿರೂಪಿಸಲ್ಪಡುವದುಂಟು. ಆದರೆ ವೀರಶೈವರು ಷಟ್‌ಸ್ಥಲಮಾರ್ಗಕ್ಕೆ ಪ್ರತ್ಯಕ್ಷ ಸಂಬಂಧಪಟ್ಟಿರುವ ವಿಷಯಗಳನ್ನು ಮಾತ್ರ ತೆಗೆದುಕೊಂಡು ಅವುಗಳನ್ನೇ ಹೆಚ್ಚಾಗಿ ವಿವರಿಸುತ್ತಾರೆ. ಅವರು ಅಧ್ವಗಳಲ್ಲಿ ತತ್ವಾಧ್ವಕ್ಕೆ ಬಹಳ ಮಹತ್ವಕೊಟ್ಟಿರುತ್ತಾರೆ. ಉಳಿದ ಅಧ್ವಗಳನ್ನು ಅವರು ತಮ್ಮ ಷಟ್‌ಸ್ಥಲಗಳ ಆಯಾ ಸ್ಥಲಗಳಲ್ಲಿ ಸೇರಿಸಿಕೊಂಡು ಬಿಟ್ಟಿರುತ್ತಾರೆ. ಈ ಎಲ್ಲ ವಿಷಯಗಳನ್ನು ಕುರಿತು ಪುನಃ ಮುಂದೆ ನಾವು ವಿವೇಚಿಸುತ್ತ ಹೋಗುವೆವು.

ಪ್ರಬುದ್ಧ ಕರ್ಣಾಟಕದಲ್ಲಿಯ

# ಕೆಲವು ವಚನಕಾರರು—೧

## ಈ ಲೇಖದ ವಿಮರ್ಶೆ.

---

ಶ್ರೀಮಾನ್ ಡಿ. ಎಲ್. ನರಸಿಂಹಾಚಾರ್ ಇವರು ಪ್ರಬುದ್ಧ ಕರ್ಣಾಟಕದ ಈ ವರ್ಷದ ಮೊದಲನೆಯ ಸಂಚಿಕೆಯಲ್ಲಿ "ಕೆಲವರು ವಚನಕಾರರು" ಎಂಬ ಶಿರೋಲೇಖದ ಕೆಳಗೆ ಒಂದು ಮನನೀಯವಾದ ಲೇಖವನ್ನು ಬರೆದಿರುವರು. ಇದರಲ್ಲಿ ಅವರು ವಚನಕಾರರ ಕಾಲ, ವಚನಗಳ ರಚನೆ, ವಚನಕಾರರ ವೃತ್ತಾಂತ ಮುಂತಾದವುಗಳ ವಿಷಯವಾಗಿ ವಿಮರ್ಶೆಯನ್ನು ಮಾಡಿರುವರು. ಇದರಲ್ಲಿ ಅವರು ಈವರೆಗೆ ಸಂಶೋಧನೆಯಾದ ವಿಷಯಗಳನ್ನು ಒತ್ತಟ್ಟಿಗೆ ಕ್ರೋಡೀಕರಿಸಿ ಸಹಾನುಭೂತಿಪೂರ್ವಕವಾಗಿ ವಿವೇಚನೆ ಮಾಡಿದ್ದಕ್ಕೋಸ್ಕರ ನಾವು ಅವರನ್ನು ಅಭಿನಂದಿಸುತ್ತೇವೆ. ಆದರೆ ಅವರ ವಿಮರ್ಶೆಯಲ್ಲಿ ನಮಗೆ ತೋರಿಬಂದ ಕೆಲವು ಸಂಗತಿಗಳನ್ನು ಈ ಲೇಖದಲ್ಲಿ ಉಲ್ಲೇಖಿಸಿದ್ದೇವೆ.

ವಚನಗಳ ಆರಂಭದ ಕಾಲವು ಆವುದೆಂಬುದು ಇನ್ನೂ ನಿಶ್ಚಿತವಾಗಿ ತಿಳಿದಿರುವದಿಲ್ಲ. ಈ ವಾಙ್ಮಯದ ಬಹು ದೊಡ್ಡ ಭಾಗವು ಇನ್ನೂ ಅಚ್ಚಾಗದೆ ಉಳಿದಿರುವದರಿಂದ ಅವುಗಳ ಕಾಲವನ್ನು ನಿಶ್ಚಯಾತ್ಮಕವಾಗಿ ಹೇಳುವದು ದುಸ್ತರವಾಗಿರುತ್ತದೆ. ಆದರೆ ಶ್ರೀ ನರಸಿಂಹಾಚಾರರವರು ಅಭಿಪ್ರಾಯಪಟ್ಟಂತೆ ಈ ಗದ್ಯ ಪದ್ಧತಿಯನ್ನು ಮೊದಲು ಪ್ರಚುರಪಡಿಸಿದವರು ವೀರಶೈವರೆಂಬದರಲ್ಲಿ ಏನೂ ಸಂದೇಹವಿಲ್ಲ. ಅವರು ಹೇಳುವಂತೆ ಇವು ಆಗಿನ ಬಹುಜನ ಸಮಾಜದ ತಿಳುವಳಿಕೆಗೋಸ್ಕರ ಬರೆಯಲ್ಪಟ್ಟವಿರುವದು ನಿಜವಿದೆ. ಆದರೆ ಲೇಖಕರು ತಮ್ಮ ಲೇಖದಲ್ಲಿ "ಪಾಂಡಿತ್ಯವಿದ್ದು ಪದ್ಯರಚನಾಶಕ್ತಿಯುಳ್ಳ ಯಾವ ವೀರಶೈವ ಕವಿಯೂ ವಚನಗಳನ್ನು ಬರೆಯದೆ ಇದ್ದುದನ್ನು ನೋಡಿದರೆ ಸಾಮಾನ್ಯ ಜನ ಸಮುದಾಯವೇ ವಚನೋತ್ಪತ್ತಿಗೆ ಮೂಲಸ್ಥಾನವೆಂದೆನಿಸುತ್ತವೆ." ಎಂದು ಬರೆದಿರುತ್ತಾರೆ. ಆದರೆ ಹೀಗೆ ಅವರು ನುಡಿಯುವದರಲ್ಲಿ ವಚನಗಳನ್ನು ಬರೆದವರು ಸಾಮಾನ್ಯ ಜನರಿದ್ದು ಅವರು ವಿದ್ವಾಂಸರೂ ತತ್ವಜ್ಞಾನ ವಿಶಾರದರೂ ಸಂಸ್ಕೃತಾಭ್ಯಾಸವಿಲ್ಲದವರೂ ಇದ್ದರೆಂದು ತಿಳಿದಿದ್ದರೆ

ಮಾತ್ರ ಅದು ತಪ್ಪೆಂದು ನಮಗೆ ತೋರುತ್ತದೆ. ಯಾಕಂದರೆ ವಚನ ಗ್ರಂಥಗಳಲ್ಲಿ ಶ್ರೇಷ್ಠತರದ ಅಧ್ಯಾತ್ಮಿಕ ವಿಚಾರಗಳು ತುಂಬಿರುತ್ತವೆಂಬದು ಪ್ರಭುದೇವ ಮೋಳಿಗೆಯ ಮಾರಯ್ಯ ಅಂಬಿಗರ ಚೌಡಯ್ಯ ಇವರ ವಚನಗಳನ್ನು ನೋಡಿದಲ್ಲಿ ತಿಳಿದುಬರುತ್ತದೆ. ಮಹಾದೇವಿಯಕ್ಕ, ದೇವರ ದಾಸಿಮಯ್ಯ ಮತ್ತು ಇದೇ ಸಂಚಿಕೆಯಲ್ಲಿ ನಾವು ಪ್ರಸಿದ್ಧಿಸಿದ ಗಜೇಶ ಮಸಣಯ್ಯ ಇವರ ಉಕ್ತಿಗಳನ್ನು ನೋಡಿದಲ್ಲಿ ಇವರು ಇಚ್ಛಿಸಿದ್ದರೆ ಮಿಗಿಲಾದ ಕಾವ್ಯಗಳನ್ನು ರಚಿಸಲು ಶಕ್ತರಾಗಿದ್ದರೆಂದು ನಾವು ಊಹಿಸಬಹುದಾಗಿದೆ. ಅವರ ವಚನಗಳು ಕಾವ್ಯಗಳಂತೆಯೇ ಭಾಸವಾಗುತ್ತದೆ. ಉರಿಲಿಂಗಪೆದ್ದಿಯ ವಚನಗಳಿಂದ ಅವನು ಸಂಸ್ಕೃತವಾಙ್ಮಯದಲ್ಲಿ ಎಷ್ಟು ಬಲ್ಲಿದನಾಗಿದ್ದನೆಂಬದು ಗೊತ್ತಾಗುತ್ತದೆ. ವಚನಕಾರರ ಈ ಉಕ್ತಿಗಳಿಂದ ೧೧ ಮತ್ತು ೧೨ ನೇ ಶತಮಾನಗಳಲ್ಲಿ ಕರ್ನಾಟಕವು ಸಂಸ್ಕೃತಿಯಲ್ಲಿ ಎಷ್ಟು ಮುಂದುವರಿದಿತ್ತೆಂಬುದನ್ನು ಚನ್ನಾಗಿ ಊಹಿಸಬಹುದಾಗಿದೆ. ಇದಕ್ಕೆ ವೀರಶೈವ ಧಾರ್ಮಿಕ ಕ್ರಾಂತಿಯೇ ಮುಖ್ಯ ಕಾರಣವಾಯಿತೆಂಬುದು ನಿಸ್ಸಂದೇಹವಾದದ್ದು.

ಲೇಖಕರು ತಮ್ಮ ಲೇಖದಲ್ಲಿ "ವಚನಗಳ ಮುಖ್ಯ ಗುರಿಯು ಧಾರ್ಮಿಕ ನೈತಿಕೋಪದೇಶ" ವೆಂದು ಬರೆದಿರುವರು. ಇದರಲ್ಲಿ ನಿಜತ್ವವು ಕೆಲವಂಶ ಮಾತ್ರವಿರುತ್ತದೆ. ಈಚೆಗೆ ಅನೇಕರು ಮಾಡುತ್ತಬಂದ ವಚನಗಳ ವಿಮರ್ಶೆಯು ಭಕ್ತಸ್ಥಲ ಮತ್ತು ಮಹೇಶ್ವರಸ್ಥಲ ಇವುಗಳಲ್ಲಿಯ ವಚನಗಳನ್ನು ಮಾತ್ರ ತೆಗೆದುಕೊಂಡು ಮಾಡಿದವುಗಳಿರುತ್ತವೆ. ಷಟ್‌ಸ್ಥಲಶಾಸ್ತ್ರದಲ್ಲಿ ಮಹತ್ವವಾಗಿರುವ ಕಡೆಯ ನಾಲ್ಕು ಸ್ಥಲಗಳ ಮರ್ಮಗಳನ್ನು ಅವರು ತಿಳಿದುಕೊಳ್ಳದೆ ಹೋಗಿ ಅವುಗಳ ಸಿದ್ಧಾಂತದ ವಿಮರ್ಶೆಯನ್ನು ಮಾಡಿದ್ದು ಮಾತ್ರ ತೋರಿಬರುವದಿಲ್ಲ. ಇದರಿಂದ ವಚನಕಾರರ ನಿಜವಾದ ತತ್ವೋಪದೇಶವು ಇನ್ನೂ ಗೊತ್ತಾಗದೇಹೋಗಿರುತ್ತದೆ. ಇದು ನಮ್ಮ ವೀರಶೈವ ಪಂಡಿತರಲ್ಲಿಯೂ ಕೂಡ ತೋರಿಬರುತ್ತದೆ. ದೊಡ್ಡ ದೊಡ್ಡ ಪೀಠಾಚಾರ್ಯರು, ಶಾಸ್ತ್ರಿಗಳು, ಪಂಡಿತರು ಇವರಲ್ಲಿ ಷಟ್‌ಸ್ಥಲಗಳ ಮರ್ಮವನ್ನು ತಿಳಿದವರು ಮತ್ತು ಅವುಗಳಂತೆ ಆಚರಿಸುತ್ತಿರುವವರು ಬಹು ವಿರಳರಾಗಿದ್ದಾರೆ. ಈ ಸಿದ್ಧಾಂತದ ತತ್ವಗಳ ಪರಿಚಯವಿಲ್ಲದ್ದರಿಂದಲೇ ವಚನಗಳ ಅರ್ಥವು ಬಹು ಜನರಿಗೆ ಬೋಧವಾಗುವದಿಲ್ಲ. ವೀರಶೈವರ ನೈತಿಕ ತತ್ವಬೋಧೆಗಳು ಎಷ್ಟು ಮಹತ್ವವಾಗಿರುತ್ತವೆಯೋ

ಅಷ್ಟೇ ಅವರ ಸಿದ್ಧಾಂತದಲ್ಲಿ ಅಡಕವಾಗಿರುವ ಧಾರ್ಮಿಕ ತತ್ವಗಳೂ ಮಹತ್ವವಾಗಿರುವವು.

ಲೇಖಕರು ತಮ್ಮ ಲೇಖದಲ್ಲಿ "ರಾ. ಬ. ಆರ್. ನರಸಿಂಹಾಚಾರ್ಯರ ಅವಿಶ್ರಾಂತ ಫಲರೂಪವಾಗಿ ಅನೇಕ ಜನ ವಚನಕಾರರು ಬೆಳಕಿಗೆ ಬಂದಿದ್ದಾರೆ. ಅವರು ೨೪೩ ಜನ ವಚನಕಾರರ ವಿಷಯವನ್ನು ತಿಳಿಸಿದ್ದಾರೆ" ಎಂದು ಬರೆದಿರುವರು. ಆದರೆ ವಚನಶಾಸ್ತ್ರ ಸಾರ ಭಾಗ ೧ ಇದರ ಪ್ರಥಮ ಆವೃತ್ತಿಯ ಕಾಲದಲ್ಲಿ ೨೧೩ ವಚನಕಾರರ ಹೆಸರುಗಳು ಮೊದಲು ಶೋಧಿಸಲ್ಪಟ್ಟವು. ಮುಂದೆ ಅದರ ೨ನೇ ಆವೃತ್ತಿಯ ಕಾಲದಲ್ಲಿ ಈ ಸಂಖ್ಯೆಯು ೨೩೭ಕ್ಕೆ ಹೋಗಿರುತ್ತದೆ. ಈ ಸಂಗತಿಯನ್ನು ಕವಿಚರಿತೆಕಾರರೇ ತಮ್ಮ ಗ್ರಂಥದಲ್ಲಿ ಒಪ್ಪಿರುವರು. ಅವರು ಆರಂಭದಲ್ಲಿ ೫೦-೬೦ ವಚನಕಾರರ ಹೆಸರುಗಳನ್ನು ಮಾತ್ರ ಪ್ರಸಿದ್ಧಿಸಿದ್ದರು.

ಮುಂದೆ ಲೇಖಕರು ವಚನಗಳ ಪ್ರಸಾರಕ್ಕೆ ಮತ್ತು ವೀರಶೈವ ಸಮಾಜದ ಅಭ್ಯುದಯಕ್ಕೆ ಕಾರಣಗಳು ರಾಜಾಶ್ರಯವು ದೊರೆತದ್ದಲ್ಲದೇ ಇದಕ್ಕೆ "ಅನುಕೂಲ್ಯಗಳೆಲ್ಲವೂ ಇದ್ದವು. ಆದುದರಿಂದ ಆ ಮತವು ಅಷ್ಟು ಬೇಗನೆ ನೀರಿನಲ್ಲಿ ಬಿದ್ದ ಎಣ್ಣೆಯಂತೆ ದೇಶದಲ್ಲೆಲ್ಲ ಹಬ್ಬಿತು" ಎಂದು ಬರೆದಿರುತ್ತಾರೆ. ಅಂದರೆ ವೀರಶೈವಮತ ಪ್ರಸಾರವು ಹಗುರಾಗಿ ಆಯಿತೆಂದು ಲೇಖಕರ ಅಭಿಪ್ರಾಯವಿದ್ದ ಹಾಗೆ ನಮಗೆ ತೋರುತ್ತದೆ. ಆದರೆ ಇದು ತಪ್ಪಾದದ್ದು. ವೀರಶೈವ ಮತಪ್ರಸಾರ ಕಾಲದಲ್ಲಿ ಉಂಟಾದ ಹೋರಾಟಗಳ ಜ್ಞಾನವು ಬಹು ಜನರಿಗೆ ಇಲ್ಲದ್ದರಿಂದಲೇ ಅವರು ಈ ತಪ್ಪು ವಿಧಾನವನ್ನು ಮಾಡಿರುವರು. ಚಾಲುಕ್ಯ ಜಯಸಿಂಹನ ಕಾಲದಲ್ಲಿ ಜೈನರೊಡನೆ ದೇವರದಾಸಿಮಯ್ಯನು ಮಾಡಬೇಕಾದ ಹೋರಾಟಗಳು, ಪುಲಿಗೆರಿಯಲ್ಲಿ ಆದಯ್ಯನು ಶಸ್ತ್ರವನ್ನು ಹಿಡಿದು ಹೋರಾಡಬೇಕಾದದ್ದು, ರೇವಣಸಿದ್ಧನು ಮಂಗಳವಾಡದಲ್ಲಿ ಬಿಜ್ಜಳನೊಡನೆ ಮತ್ತು ಆವನು ಕಡೂರ ಜಿಲ್ಲೆಯ ಮಲೆನಾಡಿನಲ್ಲಿಯ ಅಲ್ಲಿಯ ರಾಜನೊಡನೆ ಮಾಡಬೇಕಾದ ಯುದ್ಧಗಳು, ಬಸವೇಶ್ವರನ ಕಾಲದಲ್ಲಿ ಉಂಟಾದ ಕಡುತರವಾದ ಕಲಹಗಳು, ಉಳಿವೆಯಲ್ಲಿಯೂ ಅದಕ್ಕೆ ಹೋಗುವ ಮಾರ್ಗದಲ್ಲಿಯೂ ವೀರಶೈವರು ತಮ್ಮ ವೈರಿಗಳೊಡನೆ ಕಾದಾಡಿ ತಮ್ಮ ರಕ್ತವನ್ನು ಹರಿಸಿದ್ದು, ಮುಂದೆ ನೂರಾರು ಶಿವಶರಣರು ದೇಶದಲ್ಲಿ

ಉತ್ಪನ್ನರಾಗಿ ತಮ್ಮ ವಿರೋಧಿಗಳ ಉಪಟಳಕ್ಕೆ ಮಾರಾಂತು ನಿಂತು ಕಾದಾಡಿದ್ದು, ಇವುಗಳ ಅದ್ಭುತ ಇತಿಹಾಸವು ಇನ್ನೂ ಬಹು ಜನ ರಿಗೆ ಗೊತ್ತಿಲ್ಲ. ಇದರಿಂದ ಈ ತಪ್ಪು ವಿಧಾನಗಳು ಲೇಖಕರಿಂದ ಆಗಿ ರುತ್ತವೆ.

ತರುವಾಯ ಈ ಲೇಖಕರು "ಇತರ ಮತಗಳ ಗರ್ಹಣೆಯೂ ಅವಹೇಳನವೂ ವೀರಶೈವರ ಸಾಹಿತ್ಯದಲ್ಲಿ ಹೆಚ್ಚಾಗಿದೆ" ಎಂದು ಆಕ್ಷೇ ಪಿಸಿರುವರು. ಆದರೆ ಈ ಆಕ್ಷೇಪಣೆಯು ಸರಿಯಾದುದಲ್ಲ. ವಚನಕಾ ರರಿಗೆ ಯಾಂಕೂಡವೂ ದ್ವೇಷಬುದ್ಧಿಯು ಇಲ್ಲ. ಅವರ ಟೀಕೆಗಳು ಕಡುತರವಾದವುಗಳೆಂಬುದು ನಿಜವು. ಆದರೆ ಇವುಗಳಲ್ಲಿ ದ್ವೇಷಬುದ್ಧಿ ಇಲ್ಲ. ಅವರು ತಮ್ಮೊಳಗಿನವರಾದ ಭಕ್ತ ಜಂಗಮಾದಿಗಳನ್ನು ಸಹ ಟೀಕಿಸುವದನ್ನು ಬಿಟ್ಟಿಲ್ಲ. ಅವರು ವಿರಕ್ತರು, ಕವರ್ತರ, ಶೀಲವಂತರು ಇವರ ದುರ್ನಡತೆಗಳನ್ನು ಬೈಲಿಗೆಳೆಯಲು ಹಿಂಜರಿದಿಲ್ಲ. ಇದರಂತೆ ಇವರು ಬ್ರಾಹ್ಮಣರನ್ನೂ ಕೂಡ ನಿಂದಿಸಿರುವರು. ಅವರು ಹೀಗೆ ನಿಂದಿಸಿದ್ದು ಅವರು ಮಾಡುವ ಯಜ್ಞಾದಿ ಕರ್ಮಗಳು, ಹಿಂಸೆಗಳು ಅವರ ಜಾತ್ಯ ಭಿಮಾನ, ಅವರ ಅನೇಕ ದೇವತೆಗಳ ಉಪಾಸನೆ ಮತ್ತು ಕರ್ಮಠ ತನ ಇವುಗಳಿಗೋಸ್ಕರ ಮಾತ್ರ. ಆದರೆ ಬ್ರಾಹ್ಮಣರನ್ನು ಆದರದಿಂದ ಸಂಬೋಧಿಸಿದ ವಚನಗಳೂ ಕೂಡ ಅನೇಕ ದೊರೆಯುವದುಂಟು. ವಚನಕಾರರು ಜಾತಿದ್ವೇಷಿಗಳಲ್ಲ. ಅವರು ವಿಶ್ವವ್ಯಾಪಕವೃತ್ತಿಯುವರೂ ಧರ್ಮ, ನೀತಿಗಳನ್ನು ಪರಿಪಾಲಿಸುವವರೂ ಡಂಭಾಚಾರಗಳನ್ನು ನಿಂದಿ ಸುವವರೂ ಇದ್ದಾರೆ. ಆದ್ದರಿಂದ ಇದಕ್ಕೆ ವಿರುದ್ಧವಾಗಿ ನಡೆಯುವ ವರು ಯಾರಿದ್ದರೂ ಕೂಡ ಅವರನ್ನು ಟೀಕಿಸದೆ ಬಿಟ್ಟಿಲ್ಲ

ಆಮೇಲೆ ಲೇಖಕರು ಬೇರೆ ಬೇರೆ ವಚನಕಾರರ ಬಗ್ಗೆ ಈ ವರೆಗೆ ದೊರೆದಿರುವ ವೃತ್ತಾಂತಗಳನ್ನು ವಿಮರ್ಶಿಸುತ್ತ ಹೋಗಿರುವರು.

ದೇವರದಾಸಿಮಯ್ಯ:— ಈತನು ಬಹು ವಿದ್ವಾಂಸನಾಗಿದ್ದನೆಂದು ಎಲ್ಲ ವೀರಶೈವ ಗ್ರಂಥಗಳಲ್ಲಿ ಉಲ್ಲೇಖಗಳು ದೊರೆಯುತ್ತವೆ. ಆದರೆ ಈ ಹೆಸರಿನವರು ಇಬ್ಬರು ಮೂವರು ಇದ್ದರೆಂದು ಮಾತ್ರ ವೀರಶೈವ ಗ್ರಂಥಗಳಲ್ಲಿ ಉಲ್ಲೇಖಗಳು ದೊರೆಯುವದಿಲ್ಲ. ವಚನಕಾರರ ಚರಿತ್ರೆ ಗಳನ್ನು ಸ್ಥಾನಿಕ ಐತಿಹ್ಯಗಳು, ಪುರಾತನರು ಬರೆದ ಪುರಾಣಗಳು ಇವರು ಸ್ವತಃ ಬರೆದ ಗ್ರಂಥಗಳು, ಶಿಲಾಲೇಖಗಳು, ಅವರ ಬಗ್ಗೆ

ಇದ್ದ ಗ್ರಂಥೋಕ್ತ ಇತರ ಉಲ್ಲೇಖಗಳು ಇವೆಲ್ಲವುಗಳನ್ನೂ ಒಟ್ಟಿಗೆ ಸಮಾಲೋಚಿಸಿ, ನಿರ್ಧರಿಸಬೇಕಾಗುತ್ತದೆ. ಪ್ರಸಿದ್ಧನಾದ ದೇವರದಾಸಿಮಯ್ಯನು ಜಯಸಿಂಹನ ಕಾಲದವನೆಂಬುದು ಈಚೆಗೆ ದೊರೆದ ಶೋಧಗಳಿಂದ ಹೆಚ್ಚಿಚ್ಚಿಗೆ ದೃಢಪಡುತ್ತ ಹೋಗಿದೆ. ಇವನ ಬಗ್ಗೆ ಹೊಸ ವಿವರಣೆಗಳೂ ಬಂದಿದ್ದು ಅವು ಇದೇ ಸಂಚಿಕೆಯಲ್ಲಿ ಪ್ರಕಟವಾಗಿರುವ "ನಿಡುಮಾಮಿಡಿ ಮಠ" ದ ಇತಿಹಾಸವನ್ನು ಅವಶ್ಯವಾಗಿ ವಾಚಕರು ನೋಡಬೇಕು. ಇವನ ವಚನಗಳ ಸೌಂದರ್ಯದ ಬಗ್ಗೆ ಲೇಖಕರಾದ ಶ್ರೀಯುತ ನರಸಿಂಹಾಚಾರರು ಬಹು ಪ್ರಶಂಸಾಪೂರ್ವಕವಾಗಿ ಬರೆದಿರುವರು. ಇದರಲ್ಲಿ ಅವರನ್ನು ನಾವು ಪೂರ್ಣವಾಗಿ ಸಮರ್ಥಿಸುತ್ತೇವೆ. ದೇವರದಾಸಿಮಯ್ಯನ ವಚನಗಳು ಅತ್ಯಂತ ಭಾವಪೂರಿತವಾದವುಗಳು, ಬಹು ಚೊಕ್ಕಟವಾದವುಗಳು. ಅವನ ವಚನಗಳ ರೀತಿಯನ್ನು ಬೇರೊಬ್ಬರಲ್ಲಿ ಕಾಣುವದು ಅಪರೂಪವು.

ಚಂದಿಮರಸ:— ಲೇಖಕರು ಚಂದಿಮರಸನು ಕೆಂಭಾವಿಯವನಿರುವನೆಂದು ಭಾವಿಸಿರುವರು. ಭೋಗಯ್ಯನನ್ನು ಪೀಡಿಸಿದ ರಾಜನ ಹೆಸರು ಚಂದಿಮರಸನು ಎಂದಿದ್ದು ಇವನೇ ಸಿಮ್ಮಲಗಿಯ ಚನ್ನರಾಮನೆಂಬ ಅಂಕಿತವುಳ್ಳ ವಚನಕಾರನಿದ್ದಾನೆಂದು ಇವರು ಭಾವಿಸಿರುವರು. ಇದು ತಪ್ಪು ಇರುತ್ತದೆ. ಈ ಅಂಕಿತವುಳ್ಳ ಚಂದಿಮರಸು ವಚನಕಾರರಲ್ಲಿ ಬಹು ಪ್ರಸಿದ್ಧನು. ತೋಂಟದಾರ್ಯನ ಶಿಷ್ಯನಾದ ಘನಲಿಂಗನು ಇವನನ್ನು ತನ್ನ ವಚನದಲ್ಲಿ ಹೊಗಳಿರುವನು. ಅವನು ಸಿಮ್ಮಲಿಗೆ ಗ್ರಾಮದವನು. ಈ ಸಿಮ್ಮಲಿಗೆಯು ವಿಜಾಪುರ ಜಿಲ್ಲಾ ಕೃಷ್ಣಾತೀರದಲ್ಲಿ ಚಿಮ್ಮಲಿಗೆ ಎಂಬ ಹೆಸರಿನಿಂದ ಪ್ರಸಿದ್ಧವಾಗಿರುತ್ತದೆ. ನದಿಯ ಮಧ್ಯದಲ್ಲಿ ಚಂದಿಮರಸನ ದೇವಾಲಯವಿದೆ. ಗ್ರಾಮದವರು ಅದಕ್ಕೆ ಚಂದಯ್ಯನ ಗುಡಿ ಎಂದೆನ್ನುತ್ತಾರೆ. ಈ ಗುಡಿಯ ಸುತ್ತಲೂ ಒಂದು ದೊಡ್ಡ ಮಡುವು ಈಗ ಇದ್ದು ನದಿಯ ಪ್ರವಾಹವು ತಗ್ಗಿದಾಗ್ಗೆ ಈ ಗುಡಿಯ ಕಟ್ಟೆಯ ಮೇಲೆ ನಿಲ್ಲಬಹುದು. ಈತನ ೧೫ ವಚನಗಳು ದೊರೆತಿರುತ್ತವೆಂದು ಕವಿಚರಿತೆಯಲ್ಲಿ ಉಲ್ಲೇಖವಿದೆ. ಆದರೆ ನಮಗೆ ಆತನ ೫೫ ವಚನಗಳು ದೊರೆತಿದ್ದು ಅವುಗಳನ್ನು ನಾವು ಶಿವಾನುಭವ ಪತ್ರಿಕೆಯ ಮುಂದಿನ ಸಂಚಿಕೆಯಲ್ಲಿ ಪ್ರಸಿದ್ಧಿಸುತ್ತ ಹೋಗುವೆವು.

ವೀರಶೈವಾಚಾರ್ಯ ಪಂಚಕಃ— ಶ್ರೀಯುತ ಡಿ. ಎಲ್. ನರಸಿಂಹಾಚಾರರವರು ಐದು ಜನ ವೀರಶೈವಾಚಾರ್ಯರಲ್ಲಿ ಕೆಲವರು ವಚನಕಾರರಿದ್ದಂತೆ ತಿಳಿಯಬರುತ್ತದೆ ಎಂದು ಈ ಲೇಖದಲ್ಲಿ ಬರೆದಿರುತ್ತಾರೆ. ಆದರೆ ಲೇಖಕರು ಈ ವಿಷಯವನ್ನು ತೆಗೆದುಕೊಂಡು ನಿರ್ಧಾರವಾಗಿ ತಮ್ಮ ಮತವನ್ನು ಕೊಡಲು ಮುಂದುವರಿದಿದ್ದು ಸಾಹಸದ ಕೆಲಸವು. ಹೀಗೆ ಅವರು ಪ್ರಯತ್ನಿಸಿದಲ್ಲಿ ಅವರು ಗೊಂದಲದಲ್ಲಿ ಬೀಳುವದು ನಿಶ್ಚಯವು. ಪಂಡಿತಾರಾಧ್ಯರೆಂಬ ಹೆಸರುಳ್ಳ ಗ್ರಂಥಕಾರರು ಒಬ್ಬರ ಕಿಂತಲೂ ಹೆಚ್ಚಾಗಿರುವರೆಂಬದು ತಿಳಿದುಬರುತ್ತದೆ. ಅವರೆಲ್ಲರೂ ಬಹುತರವಾಗಿ ತೆಲಗು ದೇಶದವರು, ವಿದ್ವಾಂಸರು, ಮತ್ತು ಶ್ರೀಶೈಲದೇವಸ್ಥಾನಕ್ಕೆ ಅಥವಾ ಪೀಠಕ್ಕೆ ಹೊಂದಿದವರು. ವಚನ ಗ್ರಂಥಗಳು ತೆಲಗು ಭಾಷೆಯಲ್ಲಿ ಕಂಡುಬರುವದಿಲ್ಲಾದ್ದರಿಂದ ಇವರು ವಚನಕಾರರಿದ್ದರೆನ್ನಲಿಕ್ಕೆ ಬಲವಾದ ಆಧಾರಗಳು ಬೇಕಾಗುತ್ತವೆ. ಕೆಲವು ಮುದ್ರಿಕೆಗಳಲ್ಲಿ ಮಲ್ಲಿಕಾರ್ಜುನ ಎಂಬ ಹೆಸರು ಸೇರ್ಪಡೆಯಾಗಿರುತ್ತದೆಂಬದು ನಿಜವು. ಆದರೆ ಇಷ್ಟರಿಂದಲೇ ಅವು ಪಂಡಿತಾರಾಧ್ಯನವೆಂದು ಹೇಳಲಿಕ್ಕೆ ಬರಲಾರದು. ಅಮರಗುಂಡದ ಮಲ್ಲಿಕಾರ್ಜುನಾ ಎಂಬ ಮುದ್ರಿಕೆಯುಳ್ಳ ವಚನವಿದೆ. ಆದರೆ ಅಮರಗುಂಡವು ಈಗಿನ ಗುಬ್ಬಿ ಗ್ರಾಮವಿದ್ದು ಈ ವಚನದ ಅಂಕಿತವು ಪುರದ ನಾಗಣ್ಣ ಎಂಬ ಹೆಸರಿನ ವಚನಕಾರನದು ಇದೆ. ಗುರು ಸಿದ್ಧಮಲ್ಲ ಎಂಬ ಅಂಕಿತವು ಪಂಡಿತಾರಾಧ್ಯನದೆಂದು ವಚನಶಾಸ್ತ್ರಸಾರ ಗ್ರಂಥದಲ್ಲಿ ಬರೆದಿದೆ. ಆದರೆ ಈತನ ವಚನಗಳು ಎರಡು ಮಾತ್ರ ನಮಗೆ ದೊರೆತಿವೆ. ಅವುಗಳ ಮೇಲಿಂದ ಯಾವ ಅನುಮಾನವೂ ಹೊರಡುವಂತಿಲ್ಲ. ಪಂಡಿತಾರಾಧ್ಯನ ವಿಷಯವಾಗಿ ಈ ಸಂಚಿಕೆಯಲ್ಲಿ ಬಂದ ನಿಡುಮಾಮಿಡಿ ಮಠದ ವೃತ್ತಾಂತವನ್ನೂ ವಾಚಕರು ವಿಚಾರಮಾಡಬೇಕು. ಅದರಲ್ಲಿ ಅನೇಕ ವಿಚಾರಾರ್ಹವಾದ ವಿಷಯಗಳು ಬಂದಿವೆ. ಏಕೋರಾಮಾರಾಧ್ಯರ ವಿಷಯವಾಗಿಯೂ ಇದೇ ಸ್ಥಿತಿಯು ಇದೆ. ಅವನ ಬಗ್ಗೆಯೂ ಶ್ರೀಯುತ ನರಸಿಂಹಾಚಾರರು ಕೆಲವು ಸಿದ್ಧಾಂತಗಳನ್ನು ಮಾಡಲಿಕ್ಕೆ ಹೋಗಿರುವರು. ಆದರೆ ಅವು ನಿಜವೆಂದು ನಂಬಲರ್ಹವಾದುವಲ್ಲ. ಕೆಲವು ಮುದ್ರಿಕೆಗಳಲ್ಲಿ ರಾಮ ಎಂಬ ಹೆಸರು ಬಂದಿದೆ. ಇಷ್ಟರಿಂದಲೇ ಏಕೋರಾಮನ ವಿಷಯಕ್ಕೆ ಯಾವ ಅನುಮಾನವೂ ಹೊರಡಲಾರದು. ಉದಾಃ— ಎನ್ನಯ್ಯ ಚನ್ನರಾಮಾ, ಏಕಾಂತರಾಮೇಶ್ವರ ಲಿಂಗಾ, ಚನ್ನಕೂಡಲ

ರಾಮೇಶ್ವರಲಿಂಗ, ನಾರಾಯಣಪ್ರಿಯ ರಾಮನಾಥಾ, ರಾಮೇಶ್ವರಲಿಂಗಾ ಎಂಬ ಮುದ್ರಿಕೆಗಳಿದ್ದು, ಅವುಗಳು ಯಾವ ವಚನಕಾರರವೆಂಬುದನ್ನು ನಾವು ಕೆಲವು ಗ್ರಂಥಗಳ ಸಹಾಯದಿಂದ ಗೊತ್ತುಪಡಿಸಿದ್ದು ಇವು ಅನುಕ್ರಮವಾಗಿ ಏಕಾಂತರಾಮಿ ತಂದೆ, ಏಕಾಂತದ ರಾಮಯ್ಯ, ಭರಿತಾರ್ಪಣದ ಚನ್ನಬಸವಣ್ಣ, ಗುಪ್ತಮಂಚಣ್ಣ, ಮೆರೆಮಿಂಡದೇವ ಈ ವಚನಕಾರರವು ಇರುತ್ತವೆಂದು ನಮಗೆ ಕಂಡುಬಂದಿದೆ. ಆದರೆ ಇವರಲ್ಲಿ ಯಾರು ಪಂಚಾಚಾರ್ಯರಲ್ಲಿ ಒಬ್ಬರಾದ ಏಕೋರಾಮಾರಾಧ್ಯರು ಇರುತ್ತಾರೆಂದು ಹೇಳಲು ಸಾಧನೆಗಳಿಲ್ಲ. ಆದರೆ ನಾವು ಏಕೋರಾಮಾರಾಧ್ಯರ ಪುರಾಣ ಗ್ರಂಥದೊಳಗಿನ ಸಾರವನ್ನು ಹಿಂದೊಮ್ಮೆ ಶಿವಾನುಭವದಲ್ಲಿ ಪ್ರಸಿದ್ಧಿಸಿದ್ದೇವೆ. ಆದರೆ ಅದರಲ್ಲಿ ಏಕೋರಾಮನು ವಚನಗಳನ್ನು ರಚಿಸಿದ್ದರ ಉಲ್ಲೇಖವಿಲ್ಲ. ಮರುಳಾರಾಧ್ಯನ ವಿಷಯವಾಗಿಯೂ ಹೀಗೆಯೇ ಇದೆ. ರೇವಣ್ಣ ಪ್ರಭು ಎಂಬುದು ಮರುಳಸಿದ್ಧೇಶ್ವರನ ಅಂಕಿತವೆಂದು ಕಂಡುಬಂದಿದೆ. ಆದರೆ ಈ ಮರುಳಸಿದ್ಧನಾರೆಂಬುದನ್ನು ನಿರ್ಧಾರವಾಗಿ ಹೇಳಲಿಕ್ಕೆ ಈಗ ಶಕ್ಯವಿಲ್ಲ.

ಲೇಖಕರಾದ ಶ್ರೀಯುತ ಡಿ. ಎಲ್. ನರಸಿಂಹಾಚಾರರು ವಚನಕಾರರ ವಿಷಯಗಳನ್ನು ಹೀಗೆ ಒತ್ತಟ್ಟಿಗೆ ಸಂಗ್ರಹಿಸಿ ಈ ಲೇಖನವನ್ನು ಬರೆದಿದ್ದಕ್ಕೆ ನಾವು ಅವರನ್ನು ಅಭಿನಂದಿಸುತ್ತೇವೆ. ಮತ್ತು ಅವರ ಮುಂದಿನ ಲೇಖಗಳ ಮಾರ್ಗವನ್ನು ನಿರೀಕ್ಷಿಸುತ್ತೇವೆ.

ಇಲ್ಲಿ ನಾವು ಈ ವಿಷಯವಾಗಿ ವೀರಶೈವ ಸಮಾಜದವರ ಕಾರ್ಯಗಳನ್ನು ತಿಳಿಸುವದು ಅವಶ್ಯತೋರುತ್ತದೆ. ಶಿವಶರಣರ ವಚನ ಗ್ರಂಥಗಳು ಎಷ್ಟು ಮಹತ್ವವಾದವುಗಳಿರುತ್ತವೆಂಬದು ಈಗ ಸಿದ್ಧವಾಗಿರುತ್ತದೆ. ಆದರೆ ಅವುಗಳನ್ನು ಸಂಗ್ರಹಿಸುವ, ಬರೆಯಿಸುವ, ಸಂಶೋಧಿಸುವ, ಮತ್ತು ಪ್ರಸಿದ್ಧಿಸುವ, ಕಾರ್ಯಗಳು ಬಲವತ್ತರವಾಗಿ ಮುಂದೆ ಸಾಗಬೇಕಾಗಿದ್ದು ಈ ವಿಷಯದಲ್ಲಿ ಸುವ್ಯವಸ್ಥಿತ ಪ್ರಯತ್ನಗಳು ಇನ್ನೂ ಏನೂ ನಡೆದಿರುವದಿಲ್ಲ. ಈ ಕಾರ್ಯವು ಈ ವರೆಗೆ ನಮ್ಮೊಬ್ಬರಿಂದ ಮಾತ್ರ ಸಾಗಿರುತ್ತದೆ. ಆದರೆ ಇನ್ನು ಮುಂದೆ ನಾವು ಈ ಕಾರ್ಯವನ್ನು ಎಷ್ಟು ದಿವಸ ನಡೆಯಿಸಬೇಕು ಎಂಬದನ್ನು ಹೇಳುವದು ದುಸ್ತರವಾಗಿದೆ. ತಾಡವಾಲಿಯ ಮತ್ತು ಹಸ್ತಲಿಖಿತ ಗ್ರಂಥಗಳು ಅಸಂಖ್ಯಾತವಾಗಿ ಗ್ರಾಮಾಂತರಗಳಲ್ಲಿ ಇನ್ನೂ ಹಾಗೆಯೇ ಉಳಿದಿರು

ತ್ತವೆ. ಆದರೆ ಆ ಸಂಗ್ರಹಗಳನ್ನು ನೋಡಿ, ಅವುಗಳಲ್ಲಿ ಯಾವ ಯಾವವು ವಚನ ಗ್ರಂಥಗಳು, ಆ ಗ್ರಂಥಗಳು ಯಾವ ವಿಷಯವನ್ನು ಬೋಧಿಸುತ್ತವೆ, ಅವುಗಳ ಮುದ್ರಿಕೆಗಳು ಆವವು, ಅವುಗಳಲ್ಲಿಯ ವಚನಗಳ ಸಂಖ್ಯೆ ಎಷ್ಟು, ಇನ್ನೂ ಹೊರಪಡದೆ ಇದ್ದ ಬೇರೆ ವಚನಕಾರರು ಇನ್ನೂ ಇದ್ದಾರೆಯೋ ಹೇಗೆ, ಎಂಬವನ್ನು ಪರಿಶೋಧಿಸಿ ಸಂಶೋಧನ ಮಾಡುವ ಕಾರ್ಯವು ಏನೂ ಮುಂದುವರಿಸಿಲ್ಲೆಂದು ಹೇಳಲು ಬಹು ವಿಷಾದವಾಗುತ್ತದೆ. ವೀರಶೈವ ಸಮಾಜದಲ್ಲಿ ದೊಡ್ಡ ದೊಡ್ಡ ಉತ್ಪನ್ನವುಳ್ಳ ಮಠಗಳು ಅನೇಕವಾಗಿವೆ. ಅವುಗಳಿಗೆ ನಡೆಮುಕೊಳ್ಳುವ ಶಿಷ್ಯರೂ ಅಸಂಖ್ಯಾತರಾಗಿದ್ದಾರೆ. ಹಾಗೆಯೇ ವೀರಶೈವ ಸುಶಿಕ್ಷಿತರೂ ಈಗ ಬಹು ಜನರು ಹೊರಬಿದ್ದಿದ್ದಾರೆ. ಧಾರ್ಮಿಕ ಪಾಠಶಾಲೆಗಳೂ ಅನೇಕವಿದ್ದು ಅವುಗಳಿಗಾಗಿ ಬಹು ಹಣ ವೆಚ್ಚವಾಗುತ್ತಲಿದೆ. ಆದರೆ ಸಮಾಜದ ಸಂಸ್ಕೃತಿಯನ್ನು ಹೆಚ್ಚಿಸಿ ಒಂದು ಮಹತ್ತರ ಕ್ರಾಂತಿಯನ್ನು ಮಾಡಿದ ಒಂದು ಶ್ರೇಷ್ಠ ವಾಙ್ಮಯವನ್ನು ಕಾದಿಡಲು ಪ್ರಯತ್ನಗಳು ಸಾಗದೆ ಇದ್ದದ್ದಕ್ಕೋಸ್ಕರ ನಾವು ಅತ್ಯಂತ ಪರಿತಪಿಸಬೇಕಾಗಿದೆ.

# ಗಜೇಶಮಸಣಯ್ಯನ ವಚನಗಳು.

ಗಜೇಶಮಸಣಯ್ಯನ ವಚನಗಳು ಲಿಂಗಾಂಗ ಸಾಮರಸ್ಯಬೋಧಕವಾಗಿರುತ್ತವೆ. ಅವನು ತನ್ನ ಸಾಮರಸ್ಯಸ್ಥಿತಿಯನ್ನು ಸತಿಪತಿಭಾವದ ವಚನಗಳಮೂಲಕ ಹೇಳಿರುತ್ತಾನೆ. ಇವು ಶಿವಶರಣರ ವಚನಗಳಲ್ಲಿ ಬಹು ಸುಂದರವಾದವುಗಳು. ಇವುಗಳು ಮಹಾ ಶಿವಶರಣೆಯಾದ ಮಹಾದೇವಿಯಕ್ಕನ ವಚನಗಳಿಗೆ ಸರಿಸಮನಾಗಿವೆ. ಇವು ಆಕೆಯ ವಚನಗಳಷ್ಟೇ ಸುಂದರವೂ ಲಲಿತವೂ ಮಧುರವೂ ಆಗಿರುತ್ತವೆ. ಅವುಗಳಲ್ಲಿ ಕಾವ್ಯ ಚಮತ್ಕೃತಿಯು ಕಂಡುಬರುತ್ತದೆ. ಮತ್ತು ಸಾಮರಸ್ಯದ ನಿಜಸ್ಥಿತಿಯನ್ನು ಅರಹುತ್ತ ಬಹುಅರ್ಥಬೋಧಕವಾಗಿವೆ. ಅಲ್ಲಲ್ಲಿ ನೈತಿಕ ವಿಷಯಗಳೂ ಬಂದಿರುತ್ತವೆ. ಪ್ರತಿಯೊಂದು ವಚನದಲ್ಲಿ ಕನ್ನಡನುಡಿಯ ಸೊಬಗು ಹೊರಸೂಸುತ್ತದೆ.

ಗಜೇಶಮಸಣಯ್ಯನನ್ನು ಬಸವೇಶ್ವರನ ಕಾಲದ ಶಿವಶರಣರಲ್ಲಿ ಎಣಿಸಬಹುದು. ವಚನವಾಙ್ಮಯದ ಪ್ರತಿಯೊಂದು ವಚನ ಸಂಗ್ರಹದಲ್ಲಿ ಅವನ ವಚನಗಳು ಕಂಡುಬರುತ್ತವೆ. ಗುಬ್ಬೀಮಲುಹಣನು ಅವನ ವಚನಗಳನ್ನು ತನ್ನ ಗ್ರಂಥದಲ್ಲಿ ಬಹುಕಡೆಗೆ ಉದಹರಿಸಿದ್ದಾನೆ. ಹಾಗೆಯೇ ಅನೇಕರು ಅವನ ವಚನಗಳನ್ನು ತೆಗೆದುಕೊಂಡಿರುವರು.

ಗಜೇಶಮಸಣಯ್ಯನ ಚರಿತ್ರೆಯು ಶಿವಶರಣರ ಚರಿತ್ರೆಗಳಲ್ಲಿ ಹಲವು ಕಡೆಗೆ ಬಂದಿರುತ್ತದೆ. ಅವುಗಳಿಂದ ಅವನು ಕರಜಿಗೆ ಗ್ರಾಮದವನೆಂದು ತಿಳಿದುಬರುತ್ತದೆ. ಭೈರವೇಶ್ವರ ಕಾವ್ಯದಲ್ಲಿ ಬಂದ ಅವನ ವೃತ್ತಾಂತವು ಏನಂದರೆಃ—

## ಗಜೇಶಮಸಣಯ್ಯಗಳ ಕಥೆ.

"ಕರಜಿಗೆ ಎಂಬ ಪಟ್ಟಣದಲ್ಲಿ ಗಜೇಶಮಸಣಯ್ಯನು ಜಂಗಮದಾಸೋಹವ ಮಾಡುತ್ತ ಲಿಂಗಪೂಜೆಯ ಮಾಡುವಲ್ಲಿ ಇತರೇತರವ ಮರೆದು ಹುಲಿ ಕರಡಿ ಸರ್ಪ ಶರಭ ವೃಶ್ಚಿಕ ಭೂತ ವೇತಾಳ ಬಿರುಗಾಳಿ ಅನಲ ಸಿಡಿಲು ಮಿಂಚು ಮಳೆಗಾಳಿ ಇವುಗಳ ಭಯ ಬಂದಡೆಯೂ ಲಿಂಗ

ಪೂಜೆಯ ಬಿಟ್ಟು ತೊಲಗಬಾರದೆಂಬ ಭಾಷೆಯಿಂದ ಪೂಜೆಗೆಯ್ಯುತ್ತಿ ರಲು ಕೆಲಂಬುಕಾಲ ನಡೆಯಲಾಗಿ, ಒಂದು ದಿನ ಮಸಣಯ್ಯನು ಗುರು ದರುಶನಕ್ಕೆ ಹೋಗುವಾಗ ದಾರಿಯಲೊಂದು ನದಿಯಂ ಕಂಡು ಶಿವ ಪೂಜೆಗೆ ಮೂರ್ತವ ಮಾಡಿ ಶಿವಧ್ಯಾನನಲ್ಲಿರುವ ಸಮಯದಲ್ಲಿ ಇವರ ಲಿಂಗನಿಷ್ಠೆಯುವ ನೋಡಬೇಕೆಂದು ಶಿವನು ಗಗನವ ಇಬ್ಭಾಗವಪ್ಪಂತೆ ಮಳೆಯ ಕರೆಯಲು ಮೂರು ಜಾವ ಹಿಂಗದೆ ಶಿವಪೂಜೆಯಲ್ಲಿರಲು ಮಳೆಯಿಂದ ನೆನೆದು ಚಳಿಯಿಂದ ಶಿವಪೂಜೆಯಂ ಬಿಡದೆ ಸುರಿವ ಮಳೆ ಯಲ್ಲಿ ಶಿವಪೂಜೆ ಹಿಂಗದೆ ಮಾಡುತ್ತಿರಲಾಗ ಮಳೆ ಹೊಳೆದು ಪೆರ್ನದಿ ಯುರವಣಿಸಿ ಬರುವಾಗ ಗಜೇಶಮಸಣಯ್ಯನು ಲಿಂಗನಿಷ್ಠೆಯಲ್ಲಿ ನಿಬ್ಬೆ ರಗಾಗಿಪ್ಪುದಂ ಕಂಡು ನದಿಯು ಮೇಲೆ ಮುಸುಕಿ ಒರಲಮ್ಮದೆ ತಾಳ ಮರಸುದ್ದದಲ್ಲಿ ಇಬ್ಬೊಳೆಯಾಗಿ ಅದರಿಂದ ಸ್ಥಾನವಂಬಿಟ್ಟು ಹಿಂದೆ ಅಗಲಿ ಮುಂದೆ ಕೂಡಿ ಪರಿವುದಂ ಕಂಡು ಧರೆಯ ಜನರೆಲ್ಲರುಂ ಪಾದ ಪೂಜೆಯಮಾಡುವ ಭಕ್ತರಿಗೆ ಶರಧಿ ಅಂಜುವದೆಂದು ಕೊಂಡಾ ಡುತ್ತಿರಲು ಲಿಂಗಪೂಜೆಯ ಮಾಡುವಲ್ಲಿ ಮಳೆಹೊಯ್ದು ಹೊಳೆಬಂದುದು ಕನಸಿನಂತಾಗಲು ಆಗ ಗಜೇಶಮಸಣಯ್ಯನು ಮಹಾಲಿಂಗಗಜೇಶ್ವರ ನೆಂಬ ತಮ್ಮ ಪ್ರಾಣಲಿಂಗದಲ್ಲಿ ನುತಿಸಿದರು ಇಂತೆಂದು:– "ಅಗಲಿದ ನಲ್ಲನ ಕನಸಿನಲ್ಲಿ ಕಂಡು ಸಖಿಯರಾದಿರವ್ವಾ. ಕಂಡ ಕನಸು ದಿಟವಾ ದರೆ ಆವ ನಮ್ಮ ನಲ್ಲ. ಮನಸುಳ್ಳವರು ನೀವು ಪುಣ್ಯಗೆಯ್ದಿರವ್ವಾ. ಮಹಾಲಿಂಗಗಜೇಶ್ವರನು ಅಗಲಿದರೆ ನಿದ್ರೆ ನಮಗೆ ಬಾರದು, ಕನಸೆ ಲ್ಲಿಂದ ಬಹುದವ್ವಾ" ಎಂದು ಲಿಂಗವ ನುತಿಸುವ ವಿಕಳಾವಸ್ಥೆಯಲ್ಲಿ ನಿರ ವಯಲಾರದು."

ಈ ಪ್ರಕಾರ ಇದರಲ್ಲಿ ಆವನ ವೃತ್ತಾಂತವಿದೆ. ಇದರಿಂದ ಲಿಂಗಾಂಗ ಸಾಮರಸ್ಯತ್ವದಲ್ಲಿ ಗಜೇಶಮಸಣಯ್ಯನು ಎಷ್ಟು ಉನ್ನತ ಸ್ಥಿತಿಯನ್ನು ಹೊಂದಿದ್ದನೆಂಬದು ಗೊತ್ತಾಗುತ್ತದೆ. ನಮಗೆ ದೊರೆದ ವಚನಗಳು ಬೇರೆಬೇರೆ ವಚನಸಂಗ್ರಹಗಳಿಂದ ಎತ್ತಿತೆಗೆದವುಗಳಿರುತ್ತವೆ. ಅವೆಲ್ಲವು ಬಹು ಅಶುದ್ಧವಾಗಿದ್ದು ಅವುಗಳನ್ನು ಶಕ್ಯವಿದ್ದಷ್ಟರ ಮಟ್ಟಿಗೆ ತಿದ್ದಿ ಇಲ್ಲಿ ಪ್ರಸಿದ್ಧಿಸಿದ್ದೇವೆ. ಅವುಗಳಲ್ಲಿ ಕಂಡುಬರುವ ಮುಖ್ಯ ವಿಚಾರಗಳಿಗನು ಸಾರವಾಗಿ ನಾಲ್ಕು ವಿಭಾಗಗಳನ್ನು ಮಾಡಿ ಇಲ್ಲಿ ವಿವರಿಸಿದ್ದೇವೆ.

## (೧) ಪರಮಾತ್ಮನ ಬಗ್ಗೆ ಹಂಬಲ ಮತ್ತು ಅವನನ್ನು ಒಲಿಸುವ ರೀತಿಗಳು

**ವಿವರಣೆ:-** ಕೆಳಗಿನ ವಚನಗಳಲ್ಲಿ ವಚನಕಾರನು ದೇವರಲ್ಲಿದ್ದ ತನ್ನ ಉತ್ಕಟ ಅನುರಾಗವನ್ನು ಅನೇಕ ರೀತಿಯಿಂದ ಹೇಳುತ್ತಾನೆ. ಅವನು ಪರಮಾತ್ಮನ ವಿಷಯವಾಗಿ ಕಾತುರನಾಗಿ ಅವನನ್ನು ಹಾರೈಸುತ್ತಾನೆ. ಅವನ ಒಲವನ್ನು ಪಡೆಯಲು ಹಾತೊರೆಯುತ್ತಾನೆ. ಈ ಕಾಲದಲ್ಲಿ ಮನಸ್ಸಿನ ಸ್ಥಿತಿಯು ಹೇಗಾಗುತ್ತದೆಂಬದನ್ನು ತನ್ನ ಮಧುರ ವಚನಗಳಿಂದ ಬಹು ಸರಸವಾಗಿ ಬಣ್ಣಿಸುತ್ತಾನೆ. ಹೀಗೆ ಬಣ್ಣಿಸುವಲ್ಲಿ ಅವನು ಪಶುಪಕ್ಷಿ ಗಿಡಮರಗಳ ಸ್ಥಿತಿಗತಿಗಳನ್ನು ನೋಡಿ ಅವುಗಳಿಗೆ ತನ್ನನ್ನು ಹೋಲಿಸುತ್ತಾನೆ ಹೀಗೆ ನುಡಿದು ಪರಮಾತ್ಮನ ಒಲವನ್ನು ಸಂಪಾದಿಸಲು ಏನುಮಾಡಬೇಕು, ಹೇಗೆ ನಡೆಯಬೇಕು, ಎಂಬದನ್ನು ಇಲ್ಲಿ ಹೇಳುತ್ತಾನೆ ಸಂಸಾರವು ಹುಸಿ ಎಂದು ತಿಳಿಯಬೇಕು, ಪರಮಾತ್ಮನ ರಕ್ಷಣೆಯನ್ನು ಬೇಡಬೇಕು, ಅವನ ತೊತ್ತು ಸೇವೆ ಮಾಡಬೇಕು, ಪವಿತ್ರವಾದ ಆಚರಣೆಯುಳ್ಳವನಾಗಬೇಕು, ಎಂದು ಮೊದಲಾಗಿ ಈ ವಚನಗಳಲ್ಲಿ ಹೇಳಿರುತ್ತಾನೆ. ಹೀಗೆ ವರ್ತಿಸಿದ್ದಾದರೆ ಪರಮಾತ್ಮನು ಒಲವು ಉಂಟಾಗುವದೆಂದು ಬೋಧಿಸುತ್ತಾನೆ.

### ವಚನಗಳು.

೧. ಆಲಿಕಲ್ಲು, ಮರದ ಗಿರಿಯಲಿಹ ಮೃಗಮುಗಿಸುವ ಗಾಳಿ, ತುಂಡು ಉರವಣಿಸುವ ಪಕ್ಷಿಗಳು, ಸರಗೈವ ಕೋಗಿಲೆ, ಗಗನದ ಚಂದ್ರಮ, ನೀವತ್ತ ಸಾರಿರೇ. ಅಗಲಲಾರೆನು ಸಖಿಯೇ. ಬೆಳುದಿಂಗಳು ಬಿಸಿಲಾಯಿತ್ತು. ಅಗಲಲಾರೆನು ಎನ್ನಿನೆಯನ. ದಶಾವಸ್ಥೆಗೊಂಡೆನು ಮಹಾಲಿಂಗ ಗಜೇಶ್ವರನನು ಳಿದಡೆ.

ಆಲಿಕಲ್ಲು = ಅನೇಕಕಲ್ಲು.

೨. ಕೋಗಿಲೆಯು ಗಳಹು ಹೋದ ಬನದಂತಾದೆ ನೋಡವ್ವಾ. ರಾಮುರಾಡಿನ ಹೊಳಲಿನಂತಾದೆ ನೋಡವ್ವ. ಜನ್ವನ ಬಳಲ್ದ ಸ್ತ್ರೀಯರ ಮುಖಶಾಂತಿಯಂತಾದೆ ನೋಡವ್ವಾ. ಪರಿಮಳವಿಲ್ಲದ ಪುಷ್ಪದಂತಾದೆ

ನೋಡವ್ವಾ. ಚಂದ್ರಮನಿಲ್ಲದ ಇರುಳಿನಂತಾದೆ ನೋಡವ್ವಾ. ಮಹಾ ಲಿಂಗ ಗಜೇಶ್ವರನನಗಲುವದರಿಂದ ಸಾವುದು ಸುಖ ನೋಡವ್ವಾ.

**ಗಳಹು = ಸ್ವರ, ಹೊಳಲು = ಪಟ್ಟಣ, ಗ್ರಾಮ, ಜವ್ವನ = ಯೌವ್ವನ.**

೩. ಗಿಡುಮರದ ಕುರುಬಿತಿಯು ಜವ್ವನದಂತೆ, ನುಡಿಯಲರಿಯದ ಮುಗ್ಧೆಯಾಗಿರ್ದೆನವ್ವಾ. ಹಗಲನರಿಯದ ಜಕ್ಕವಕ್ಕಿಯಂತೆ ಮನ ಬಯಸುತ್ತಿರ್ದೆನವ್ವಾ. ಹಲವು ಕಾಲ ಎಲವದ ಮರನ ಸಾರಿರ್ದ ರಗಿಳಿಯಂತಾದೆನವ್ವಾ. ಇಂದೆಮ್ಮ ಮಹಾಲಿಂಗ ಗಜೇಶ್ವರನ ಬರವ ಕಾಣದೆ, ಇವರೆಲ್ಲರ ವಿಧಿಯ ಹೊತ್ತೆನವ್ವಾ.

**ಜಕ್ಕವಕ್ಕಿ = ಚಕ್ರವಾಕಪಕ್ಷಿ.**

೪. ಆವುಗೆಯ ಕಿಚ್ಚಿನಂತಾದೆನವ್ವಾ. ಆವ ಓಡ ಸುಟ್ಟನೆಂದರಿಯೆನವ್ವಾ. ಅಂದು ಹೋದವನೆಲ್ಲಿ ಉಳಿದನೆಂದರಿಯೆನವ್ವಾ. ನಿರಾಳ ನಿರಾಳದಲ್ಲಿ ಮಹಾಲಿಂಗ ಗಜೇಶ್ವರದೇವನುಳಿದನೆಂದು ಹೇಳಿದಡೆ ಬೆಂದೆನವ್ವಾ.

**ಓಡು = ಮಣ್ಣಿನಪಾತ್ರೆ, ನಿರಾಳ = ಕಟ್ಟಕಡೆಯ ಶಾಂತವಾದ ಶೂನ್ಯಸ್ಥಿತಿ.**

೫. ಋತುಕಾಲ ತಪ್ಪಿದ ಕೋಗಿಲೆಯಂತೆ ನುಡಿಯದಂತಿರ್ದಳಲ್ಲಾ. ಪರಿಮಳ ತಪ್ಪಿದ ಭ್ರಮರನಂತೆ ಸುಳಿಸುಳಿಗೊಳುತಿದ್ದಳಲ್ಲಾ. ಫಲವು ತಪ್ಪಿದ ಬಂಜೆ ಬನದೊಳಗಣ ಆರಗಿಳಿಯಂತಿದ್ದಳಲ್ಲಾ. ದರದುರದ ಜವ್ವನದಲ್ಲಿ ತೋರಣದೆಲೆಯಂತೆಯಾದಳಲ್ಲಾ. ಮಹಾಲಿಂಗ ಗಜೇಶ್ವರನ ನೆರೆವ ಭರದಿಂದ ಮರುಳುಗೊಂಡಳಲ್ಲಾ.

**ದರದುರ = ರಭಸ.**

೬. ಚಕೋರನಂತೆ ದಿನವನೆಣಿಸುತಿರ್ದಳವ್ವೆ. ದರುವಕ್ಕಿ ಕಂಡ ಕನಸಿನಂತಿರ್ದಳವ್ವೆ. ವೋಡಂಬೊಕ್ಕ ಚಂದ್ರನಂತಿರ್ದಳವ್ವೆ. ದಶಾವಸ್ಥೆಯುವಳಾನು. ಆಚೆಯ ತಡೆಯಲ್ಲಿರ್ದವರನು ಈಚೆಯ ತಡೆಗೆ ಕರೆದುಕೊಂಬಂತೆ, ಇದು ನಮ್ಮ ಮಹಾಲಿಂಗ ಗಜೇಶ್ವರ ಎನಗೆ ಕಾಹು.

**ಕಾಹು = ರಕ್ಷಣೆ.**

೭. ಹೆರರಿಗೆ ಕೂರ್ತವಳ ತೆಗೆದಪ್ಪಿಕೊಂಡೊಡೆ ಅರ್ಥಗೆಡಹುವುದಲ್ಲದೆ ಮನವು ಬೇರೆ. ಇದ್ದಿಲ ಮಿಡಿದಡೆ ರಸವುಂಟೇ? ಸಾಧಕ ಸಾಧಿ

ಸಿದ ನಿಧಾನವನೊಯಿದ ಕುಳಿಯಂತೆ, ಆದರ ವಿಧಿ ಎನಗಾಯಿತ್ತು ಮಹಾಲಿಂಗ ಗಜೇಶ್ವರಾ.

**ಕೂರ್ತವಳ = ಪ್ರೀತಿಸುವವಳ, ಮಿಡಿ = ಹಿಚಕು, ಸಾಧಕ = ಮಾಂತ್ರಿಕ, ನಿಧಾನ = ಹಣದವೊತ್ತ, ಕುಳಿ = ಕುಣಿ, ಗುಂಡಿ.**

೮. ನೇಹವೆಳದಾಯಿತ್ತಾಗಿ, ನೋಟ ವಿಪುಳವಾಯಿತ್ತ ಕಂಡೆ. ಅಂಗದ ಕಳೆ ಕಂಗಳ ನೋಟ ಸೈರಿಸದು. ಬಲುಹಿನ ಮೇಲೆ ಕಂಪಡರಿತ್ತು. ಮತ್ಸ್ಯ ಬೆನ್ನ ಬಸಿರ ತೋರಿತ್ತು. ಮೂಗಿಯ ಕೋಗಿಲೆಯಂತೆ ಮೂಗಿಯಾಗಿದ್ದೆನವ್ವಾ. ಮಹಾಲಿಂಗ ಗಜೇಶ್ವರನೊಲವಿಂದೆನಗೆ ಹರಣದ ಬರವೆಯವ್ವಾ.

**ನೇಹ = ಸ್ನೇಹ, ಪ್ರೀತಿ, ಬಲುಹು = ಶಕ್ತಿ, ಕಂಪು = ಸುಗಂಧ, ಮೂಗ = ಮೂಕಿ, ಒಲವು = ಪ್ರೀತಿ.**

೯. ಸರ್ವಜನ ಸನುಮತವೆಂಬ ಮಾತು ಸಾಮಾನ್ಯವೇ ಅವ್ವಾ? ತಾ ಮೆಚ್ಚ. ಸುಖಿಯಾಗಿಪ್ಪವರನೊಬ್ಬರನಾರುವ ಕಾಣೆನವ್ವಾ. ತಾ ಸತ್ತು ಹೆರರ ಕೊಂದವಸ್ಥೆಯ ಚಂದವ ಚಂದ್ರಮತಿಯಲಿ ಕಂಡೆನು. ಇಂದು ಕಂಡೆನು ಗಜೇಶ್ವರಮಸಣಯ್ಯಗಳಲ್ಲಿ ಮಹಾಲಿಂಗ ಗಜೇಶ್ವರ ದೇವರು ಮಾಡಿದುದ.

೧೦. ಅಯ್ಯಾ ಒಲಿವವರ ಕೊಲುವರೆ ಮಸೆವ ಕೂರಲಗೇಕೆ? ಅವರ ನೊಲ್ಲೆನೆಂದರೆ ಸಾಲದೇ? ಮಳಲ ಪ್ರತುಮೆಯನಡಿಗಡಿಗೆ ನೀರಿನಲ್ಲಿ ತೊಳೆದಂತೆ. ಅವರ ನೊಲ್ಲೆನೆಂದರೆ ಸಾಲದೇ? ಮಹಾಲಿಂಗ ಗಜೇಶ್ವರಾ ನಿಮ್ಮ ಶರಣರನಗಲಿ, ತುಪ್ಪದಲ್ಲಿ ಕಿಚ್ಚ ನಂದಿಸಿದಂತಾದೆನವ್ವಾ.

**ಕೂರಲಗು = ಹದನಾದಕತ್ತಿ.**

೧೧. ಅಗಲಿದ ನಲ್ಲನ ಕನಸಿನಲಪ್ಪಿ ಸುಖಿಯಾದಿರವ್ವಾ. ಕಂಡ ಕನಸು ದಿಟವಾದಡೆ ಅವ ನಮ್ಮ ನಲ್ಲ, ಮನಸುಳ್ಳವರು ನೀವು ಪುಣ್ಯಗೈದಿರವ್ವ. ಮಹಾಲಿಂಗ ಗಜೇಶ್ವರ ದೇವನನಗಲಿದಡೆ, ನಿದ್ರೆ ಎಮಗಿಲ್ಲ. ಕನಸೆಲ್ಲಿಂದಲ್ಲಿ ಬಹುದವ್ವಾ?

೧೨. ಅಪ್ಪಿನ ಸೋಂಕಿನ ಸುಖವನಗಲುವ ಮನಕಿಂದ ಬಂಜೆಯಾಗಿಪ್ಪುದು ಕರ ಲೇಸು ನೋಡವ್ವಾ. ಕಂಗಳ ನೋಟ ಮನಕ್ಕೆ

ಸೈರಿಸದು. ಎಣೆಗೊಂಡು ಬಡವಾದ ಪರಿಯ ನೋಡಾ ಅವ್ವಾ. ತುಪ್ಪ ಳವನಿಕ್ಕಿದ ಹಂಸೆಯಂತಾದೆನವ್ವಾ, ಮಹಾಲಿಂಗ ಗಜೇಶ್ವರನುಳಿದರೆ.

**ಎಣೆಗೊಳ್ಳು = ಕೂಡು. ಹಾಲಿಲ್ಲದೆ ಬಾಲಕರು ಸೊರಗುವದು.**

೧೩. ಮಾಘ ಮಾಸದ ನವಿಲಿನಂತಾದೆನವ್ವಾ. ಇರುಳು ತೊಳಲುವ ಜಕ್ಕವಕ್ಕಿಯಂತೆ ಹಲುಬುತಿರ್ದೆ ನೋಡವ್ವಾ. ಮಾಗಿಯ ಕೋಗಿಲೆಯಂತೆ ಮೂಗಿಯಾಗಿರ್ದೆ ನೋಡವ್ವ. ಮಹಾಲಿಂಗ ಗಜೇಶ್ವರನ ಅನುಭಾವ ಸಂಬಂಧಿಗಳ ಬರವೆನ್ನ ಪ್ರಾಣದ ಬರವು ನೋಡವ್ವಾ.

೧೪. ಒಳಗೆ ಶೋಧಿಸಿ, ಹೊರಗೆ ಧವಳಿಸಿ, ಭಾವದಿಂದ ಗುಡಿ ತೋರಣವ ಕಟ್ಟಿದೆನಯ್ಯಾ. ಲಿಂಗ ಬಾರಯ್ಯಾ, ಎನ್ನ ದೇವ ಬಾರಯ್ಯಾ. ಎನ್ನ ತರಂಗದ ಪರಂಜ್ಯೋತಿಯೇ ನಿಮ್ಮ ನಾನಿದಿರುಗೊಂಬೆ. ನೀ ಬಾರಯ್ಯಾ. ಎನ್ನ ಮಹಾಲಿಂಗ ಗಜೇಶ್ವರಾ ನೀ ಬಾರಯ್ಯಾ.

**ಧವಳಿಸು = ಶುದ್ಧಮಾಡು.**

೧೫. ಕೂಪರನಗಲುವಾತನಾತ ಘಾತಕನವ್ವಾ. ಅವ್ವಾ, ದಿಬ್ಯವ ತುಡುಕಿದರೆ ಕೈ ಬೇವುದಲ್ಲದೆ, ಮೈ ಬೇವುದೇ? ಒಲಿದವರನಗಲಿದರೆ ಸರ್ವಾಂಗವು ಬೇವುದವ್ವಾ. ಮಹಾಲಿಂಗ ಗಜೇಶ್ವರನ ಶರಣರನಗಲಿ ಆವುಗೆಯ ಮಧ್ಯದ ಘಟದಂತಾದೆನವ್ವ.

**ಕೂಪರು = ಪ್ರೀತಿಸುವವರು, ದಿಬ್ಯ = ಶಣಕ್ಕೆ ಇಟ್ಟ ವಸ್ತು.**

೧೬. ಅನಂತ ಅನಂತ ಕಾಲ ನಿತ್ಯವೆಂಬಿರಿ. ಸಂಸಾರ, ಸಂಸಾರ, ಇದು ಹುಸಿ, ಇದು ಹುಸಿ, ನೋಡಾ! ಎಲವೊ, ಇಂದಿನಿಂದಿನ ಸುಖ ವಿಂದಿಂಗೆ ಪರಿಣಾಮ? ಓನದಿನದ ಸುಖವು ಹುಸಿ ಕಂಡಾ. ಮಹಾ ಲಿಂಗಗಜೇಶ್ವರನಲ್ಲಿ ತಿಳಿದು ನೋಡೆಲವೋ.

೧೭. ನೀನೊಲಿದು ಕೂರ್ತವರು, ನಿಮಗೊಲಿದು ಕೂರ್ತವರು. ನಿಮ್ಮ ಪರಿಯೇ ಅವರು. ನಿಮ್ಮ ರೂಹೇ ಅವರು. ಆಳಾರು, ಅರಸಾರೆಂದು ಅರಿಯಬಾರದು. ನಿಮ್ಮ ರೂಹೇ. ಮಹಾಲಿಂಗ ಗಜೇಶ್ವರನನೊಲಿದು ಪೂಜಿಸಿದವರು ಸಾಲೋಕ್ಯ, ಸಾಮೀಪ್ಯ ಸಾರೂಪ್ಯ

ಸಾಯುಜ್ಯಪದವಿಗಳ ಪಡೆದರು. ಎನಗೆ ನಿಮ್ಮ ತೊತ್ತು ಸೇವೆಯೇ ಸಾಕು.

**ರೂಹು = ರೂಪು.**

೧೮. ನೋಟಕ್ಕೆಯೂ ಕೂಟಕ್ಕೆಯೂ ಕಣ್ಣು ಮನವೇ ಕಣ ವವ್ವಾ. ಅವ್ವಾ, ಕಂಗಳು ತಪ್ಪಿ ನೋಡಲಮ್ಮೆ, ಅಮ್ಮ. ಕೇಳಿಲೆಯವ್ವಾ, ಅವ್ವಾ, ಕಿವಿಗಳು ತಪ್ಪಿ ಕೇಳಲಮ್ಮೆ, ಅಮ್ಮ. ಕೇಳಿಲೆ ಅವ್ವಾ, ಅವ್ವಾ, ಕಲಿ ಕಾಳಗದಲ್ಲಿ ಸೋವಂತೆ ತನು ಮನ ಧನದ ಭಂಗವಳಿದು ನೆರೆವನವ್ವಾ ಮಹಾಲಿಂಗಗಜೇಶ್ವರ ದೇವನವ್ವಾ

**ನೋಡಲಮ್ಮೆ = ನೋಡಲಾರೆನು, ಸೋವು = ದೂಡು, ನುಗಿಸು.**

೧೯. ಬೇರೆ ಗತಿ ಮತಿ ಚೈತನ್ಯವಿಲ್ಲದವಳು. ತೊತ್ತಿನ ಮುನಿಸು ಸಲುವುದೇ ? ಆವಳು ಮುನಿದಡಾಗಳೆ ಕೆಡುವ. ಅರಸು ಮುನಿದಡಾ ಗಳೆ ಕೆಡುವ. ತೊತ್ತಿಗೆ ರಾಜರಕ್ಷಣೆ ಧರ್ಮ ಮಹಾಲಿಂಗಗಜೇಶ್ವರಯ್ಯ.

೨೦. ಮಾತಂಗಿಯ ಹೊಳೆಯಲಿ ಉತ್ತಮನ ನೆಳಲು ಸುಳಿದಡೆ ರೂಹು ಹೊಲೆಯನಾಗಬಲ್ಲುದೇ ಅಯ್ಯ ? ಮರ್ತ್ಯಲೋಕದ ಮಾನವ ರೊಳಗೆ ಶರಣ ಸುಳಿವಡೆ, ಶರಣ ಸೂತಕಿಯಾಗಬಲ್ಲನೇ ಅಯ್ಯ ? ಮರ್ತ್ಯರ ಭವಿ ತನವ ಅಗಿದೊಗೆಯದೆ ಮಾಬನೇ ಮಹಾಲಿಂಗ ಗಜೇ ಶ್ವರಯ್ಯ ?

**ಮಾಬನೇ = ಬಿಡುವನೇ**

೨೧ ರಿಪುಗಳ ಕಾಳಗ ಕೊಳುಗುಳದನುಭವ, ಉದಕ ಹೋಗಿ ನಿಂದ ಮುಮ್ಮುರಿಯಂತೆ. ಜಗಕ್ಕೆಲ್ಲ ಕನ್ನಡಿ ನೋಡಾ. ಮಹಾಲಿಂಗ ಗಜೇಶ್ವರನರಿವನೇ ಬಲ್ಲ.

**ಕೊಳಗುಳ = ಯುದ್ಧ, ಮುಮ್ಮುರಿ = ಕಾವಳಿಸಿಕು.**

೨೨. ಬರುಮನವಾದುದೆಂದು ಬೆರಗುವೋದಳು ನೋಡವ್ವೆ. ಕಮ್ಮ ರಿವರಿದಳು ನೋಡಾ ಅವ್ವೆ! ಸಮಾಧಾತುವಿಲ್ಲ. ನೋಡೆಮಗೆ, ಮದ್ದು ಮಹಾಲಿಂಗ ಗಜೇಶ್ವರ ದೇವರ ಒಲವು ನೋಡಾ ಅವ್ವಾ.

**ಕಮ್ಮರಿ = ಬೆಕ್ಕಪ್ಪನ ಕಂದರ ಪ್ರದೇಶ.**

೨೩. ಚಂದ್ರಮನ ಕಂಡು ಮಂಡೆಯ ಬಿಟ್ಟು ಏಳು ಬಂಧವ ತೋರಿ ಬೆರೆದನವ್ವಾ. ಮಗಳ ಕುಂಕುಮದ ತಿಲಕವ ಕಂಡು ನಿನ್ನ ನೊಸಲಲ್ಲಿ ಎಸೆಯ ಬಂದ ಕಾಮ ಕೈಮರೆದನವ್ವಾ. ಮಹಾಲಿಂಗ ಗಜೇಶ್ವರನ ಸಂಪಗೆಯ ವನಕ್ಕೆ ಹೋಗಿ ಶರಣೆನ್ನು ಮಗಳೇ.

೨೪. ಉಪ್ಪಿಲ್ಲದೂಟ ಸಪ್ಪೆ ಕಾಣಿರೇ ಅಯ್ಯ. ಮಿಕ್ಕಿನ ರಾಗ, ಶಿವನಲ್ಲದ ದೈವ, ಫಲವಿಲ್ಲ ಕಾಣಿರೇ ಅಯ್ಯ. ಮಿಕ್ಕಿನ ತುಂಬುರ ನಾರದರು ಶಿವನ ಕೇಳಿಸುವ ರಾಗ, ಮಹಾಲಿಂಗ ಗಜೇಶ್ವರನ ನಚ್ಚಿನ ರಾಗ.

೨೫. ಪರಮ ಪದವಿಯ ನಿಮ್ಮ ಕೊರಳಲ್ಲಿ ಕಟ್ಟಿಕೊಳ್ಳಿ. ಪರಮ ಪದವಿಯ ನಿಮ್ಮ ತಲೆಯಲ್ಲಿ ಸುತ್ತಿಕೊಳ್ಳಿ, ಎನಗೆ ನಿಮ್ಮ ತೊತ್ತು ಸೇವೆಯೇ ಸಾಕು. ಮಹಾಲಿಂಗ ಗಜೇಶ್ವರದೇವಾ ಪರಮಪದವ ನಿಮ್ಮ ಎದೆಯಲ್ಲಿ ಇರಿದುಕೊಳ್ಳಿ.

೨೬. ಗಾಂಧಾರಿ ಮಾಂಧಾರಿ ಎಂಬ ಹೊತ್ತಿನಣ ತೆರಟ್ಟಿಯರೆಂಬರಿರವು ಮಲಹಣ ಮಲಹಾಣಾ ನಿಮ್ಮನೆಂತು ಬಲ್ಲೆ? ಎಮಗೆಂತರಿಯೆ. ಮಲಹಣಾ ಮನೆಯವರು ಬರಲೀಯ್ಯರು. ಅನ್ನವನು ಬಿಡಲಾರೆ. ದೇವರಲ್ಲಿಗೆ ಹೋಗಿ ಬೇಡಿಕೊಳ್ಳೋ ಮಲಹಣಾ. ಅಂಬುಜಮುಖ ಲಂಪಟಳು. ಮಹಾಲಿಂಗ ಗಜೇಶ್ವರ ನಿಮಗೆಂತು ಬಲ್ಲೆ? ಎಮಗೆಂತರಿಯವೊ?

(೬೫೪ ಅಶುದ್ಧವಾಗಿದೆ.)

## ೨. ಪರಮಾತ್ಮನಲ್ಲಿ ಒಡಗೂಡಿರುವದು.

**ವಿವರಣೆ:** — ಇಲ್ಲಿ ವಚನಕಾರನು ಪರಮಾತ್ಮನಲ್ಲಿ ಬೆರೆದು ಹೇಗೆ ಇರಬೇಕೆಂಬುದನ್ನು ವರ್ಣಿಸುತ್ತಾನೆ. ಆಗ ಅವನು ತನ್ನನ್ನು ಮರೆತಿರಬೇಕು. ಜಗತ್ತಿನ ಬಾಹ್ಯ ಸೌಖ್ಯವನ್ನು ತೊರೆದು ಆನಂದಿಸಬೇಕು. ಸಿಟ್ಟು ಖೇದ ಮುಂತಾದ ಮಾನಸಿಕ ವಿಕಾರಗಳು ದೂರಾಗಿರಬೇಕು. ಆಗ ಅವನು ಶುದ್ಧನಾಗುವನು, ಮನಸ್ಸು ನಿರ್ಮಳವಾಗುವದು ಎಂದು ಅನೇಕ ವಿಧವಾಗಿ ವಚನಕಾರನು ಇಲ್ಲಿ ಹೇಳಿದ್ದಾನೆ. ಇದರಲ್ಲಿ ಶಿವಯೋಗಕ್ಕೆ ಸಂಬಂಧಿಸಿದ ಅನೇಕ ಗೂಢ ವಿಷಯುಗಳನ್ನು ಸೂಚನಾತ್ಮಕ ರೀತಿಯಿಂದ ಅವನು ವಿವರಿಸುತ್ತಿರುವದು ತೋರಿಬರುತ್ತದೆ.

### ವಚನಗಳು.

೨೭. ಭಕ್ತಿ ಸಮ್ಮೇಳ, ಒತ್ತಿಹ ಹಳವಳಿಕೆ, ಸಮಕಳೆ, ಸಮರತಿ ನೆರೆವ ಭರದಲ್ಲಿ ಅರಿಯದಿದ್ದಳು. ಸಂಯೋಗ ವಿಯೋಗ ಬ್ರಹ್ಮಸಮಾಧಿ. ಮಹಾಲಿಂಗ ಗಜೇಶ್ವರನಲ್ಲಿ ಏಕೋಭಾವ.

೨೮. ಆತನ ನೋಡಿದಂದು ದೆಸೆಗಳ ಮರೆದೆನಿನ್ನೇಂತವ್ವಾ. ಅವ್ವಾ, ಅವ್ವಾ ಆತನ ನುಡಿಸಿದಡೆ, ಮೈಯೆಲ್ಲಾ ಬೆವರ್ದದಿನ್ನೇಂತವ್ವಾ. ಅವ್ವಾ, ಅವ್ವಾ ಕೈಹಿಡಿದಡೆ ಎನ್ನ ನಿರಿಗಳು ಸಡಿಲಿದವಿನ್ನೇಂತವ್ವಾ. ಇಂದೆಮ್ಮ ಮಹಾಲಿಂಗ ಗಜೇಶ್ವರನನಪ್ಪಿದೆನೆಂದಡೆ, ನಾನಪ್ಪ ಮರೆದೆನಿನ್ನೇಂತವ್ವಾ.

೨೯. ತಮ್ಮ ತಮ್ಮ ಗಂಡರು ಚೆಲುವರೆಂದು ಕೊಂಡಾಡುವ ಹೆಣ್ಣುಗಳು ಪುಣ್ಯಜೀವಿಗಳವ್ವಾ. ನಾನು ಎನ್ನ ನಲ್ಲನೆಂತಹವನೆಂದರಿಯೆನವ್ವಾ. ಮಹಾಲಿಂಗ ಗಜೇಶ್ವರ ನಿರಿಯ ಸೆರಗ ಸಡಿಲಿಸಲೊಡನೆ ಆನೇನೆಂದರಿಯೆನವ್ವಾ.

೩೦. ಹಗಲು ಮನಸಿಂಗಂಜಿ, ಇರುಳು ಕನಸಿಂಗಂಜಿ, ಧ್ಯಾನ ಮೌನಿಯಾಗಿರ್ದಳವ್ವೆ. ಸಖಿ ಬಂದು ಬೆಸಗೊಂಡಡೇನೆಂದು ಹೇಳುವಳವ್ವೆ ? ಏನೆಂದು ನುಡಿವಳವ್ವೆ ? ಸಾಕಾರದಲ್ಲಿ ಸವೆದು ನಿರಾಕಾರದಲ್ಲಿ ಅರ್ಪಿಸಿದಡೆ ಮಹಾಲಿಂಗ ಗಜೇಶ್ವರ ದೇವನುಮೋಶ್ವರನಾಗಿರ್ದನವ್ವಾ.

೩೧. ಇರುಳಿನ ಚಕ್ರವಕ್ಕಿಯಂತಗಲಿ ಹಲುಬುತ್ತಿರೆ, ಇರುಳಿನ ತಾವರೆಯಂತೆ ಮುಖ ಬಾಡಿ, ಇರುಳಿನ ನೈದಿಲೆಯಂತೆ ಕಣ್ಣ ಮುಚ್ಚದೆ, ಇರುಳಿನ ಸಮುದ್ರದಂತೆ ಘನವಾಗಿ, ಸಲೆಯುಮ್ಮಳಿಸಿ, ಸಂಜೆ ಹರಿದು ಮಹಾಲಿಂಗ ಗಜೇಶ್ವರನ ಬರವಿಂಗೆ ಬೆಳಗಾಯಿತ್ತು.

೩೨. ಅಗಲದ ನಲ್ಲನನಗಲಿ ನೆರೆವೆನೆಂಬ ಕಾಮಿನಿಯರ ಭಂಗವ ನೋಡಾ. ಆ ನಮ್ಮ ನಲ್ಲನ ಅನುವಿನೊಳಿರ್ದು ನೆರೆದಿಹೆನೆಂಬ ಭರವೆನಗವ್ವಾ. ಮಹಾಲಿಂಗ ಗಜೇಶ್ವರ ದೇವರನಗಲುವರೆ ನಾನೇನು ಕಲುಮರದವಳೇ ಅವ್ವಾ?

**ಭಂಗ = ಅವಮಾನ.**

೩೩. ಇಂದುವಿನಲ್ಲಿ ಉದಯವಾದ ಕಲ್ಲಿನಂತೆ ಮುನಿಸು ಮರೆದಿರ್ದಳವ್ವೆ. ಅವ ಸೋಂಕಿನಲ್ಲಿ ಸುಖಿಯಾದಳು. ಅಗಲಿದಡೆ ಕರಿಗೊಂಡಳು. ಮಹಾಲಿಂಗ ಗಜೇಶ್ವರ ದೇವರಲ್ಲಿ ಮನ ಸೋಂಕಿ ಮನಲೀಯ್ಯವಾದಳವ್ವೆ.

**ಕರಿಗೊಳ್ಳು = ಬೇಯು**

೩೪. ಕಂಗಳ ಬಲದಲ್ಲಿ ಮುನಿದಿಹೆನೆಂಬೆನೆ? ಕಂಗಳು ತನ್ನನಲ್ಲದೆ ನೋಡವು. ಮನದ ಬಲದಲ್ಲಿ ಮುನಿದಿಹೆನೆಂಬೆನೆ? ಮನದೊಡೆಯನು. ತನುವಿನ ಬಲದಲ್ಲಿ ಮುನಿದಿಹೆನೆಂಬೆನೆ? ತನು ತಾಳಲಾರದು. ಇಂತಹ ಮನ ಪ್ರೇರಕ ಮನಚೋರಕನೆ ತಾನಧೀನವಾಗಿ ಮನದವಳ ಮೆಚ್ಚುವನವ್ವಾ. ಮನದಲ್ಲಿ ಬೆರಸುವೆ, ಭಾವದಲ್ಲಿ ಬೆರಸುವೆ. ಮೇಲೆ ಪ್ರಾಣನಾಥನಾಗಿ ಮಹಾಲಿಂಗ ಗಜೇಶ್ವರ ದೇವ ಮುನಿಸಿಂಗೆ ಮನಸ ತರಲೀಸನವ್ವಾ.

೩೫. ಉದರ ತಾಗಿದ ಮಾತು ಅಧರ ತಾಗಿವಲ್ಲಿ ಬೀಸರವೋದುದೆಂದು ಅಧರವ ಮುಚ್ಚಿಕೊಂಡಳವ್ವೆ. ಕಂಗಳ ಕೊನೆ ಬೀಸರವೋದುದೆಂದು ಕಂಗಳ ಮುಚ್ಚಿಕೊಂಡಳವ್ವೆ. ಪರಿಮಳ ಬೀಸರವೋದುದೆಂದು ಅಳಿಗೆ ಬುದ್ಧಿಯ ಹೇಳಿದಳವ್ವೆ. ಮನ ಬೀಸರವೋದುದೆಂದು ದಿನಕರನ ಕಾವಲ ಕೊಟ್ಟಳವ್ವೆ, ಇಂದು ನಮ್ಮ ಮಹಾಲಿಂಗ ಗಜೇಶ್ವರನ ನೆರೆವ ಭರದಿಂದ.

**ಬೀಸರ = ನಷ್ಟ, ಅಂತ್ಯ.**

೩೬. ಮೂಗಿನ ಕಪ್ಪು, ಪ್ರಣುತೆಯು ಕತ್ತಲೆ, ಜ್ಯೋತಿ ಎಂಬರು. ವಿವರಣ ಹೋಗದಡೆಂತೋ? ರಸದ ದ್ರಾಕ್ಷ, ಸ್ಫಟಿಕದ ದಾರಣ, ಮಾಣಿಕ್ಯದ ಸ್ವಯಂಜ್ಯೋತಿ, ಜ್ಞಾನದ ಪ್ರಭೆ. ಮಹಾಲಿಂಗ ಗಜೇಶ್ವರನ ನೆನೆವ ಮನದ ಕಾವಳ ತಳವೆಳಗು ಭೋ.

**ವಿವರಣ = ವಿವರ್ಣ, ಬಣ್ಣಗೆಡುವದು; ದಾರಣ = ಕೆತ್ತುವದು ಕಾವಳ = ಕತ್ತಲೆ, ತಳವೆಳಗು = ಬೆರಗು, ಆಶ್ಚರ್ಯ.**

೩೭ ನಲ್ಲನುಳಿದನೆಂದೊಂದು ಮಾತನಟ್ಟಿದರೆ, ಕರಸ್ಥಲದಲ್ಲಿ ನೆಯ್ದಿಲು ಮೂಡಿತ್ತ ಕಂಡೆನವ್ವಾ. ಉದಕದೊಳಗೆ ತಾವರೆ ಬಾಡಿತ್ತ ಕಂಡೆನವ್ವಾ. ಮಹಾಲಿಂಗ ಎನ್ನ ಗಜೇಶ್ವರನುಳಿದನೆಂದರೆ ಒಂದೆಲೆಯಲ್ಲಿ ಹೂ ಮೂಡಿತ್ತ ಕಂಡೆನವ್ವಾ.

೩೮. ನೇಹದ ಮುತ್ತು ಅಧರದ ಬಿತ್ತು ಅದರ ಸವಿ ರಸ ಗಟ್ಟಿಯಾಯಿತ್ತವ್ವಾ. ಅವ್ವಾ ತನು ವಿಕಸಿತವಪ್ಪುದು. ನಾಗೇಂದ್ರನ ಸೂತ್ರದ ವೃಷ್ಟದಂತವ್ವಾ. ನೇಹದ ಮುಗುದೆ ವಿಕಳೆಯಾಗಿ ಮಹಾಲಿಂಗ ಗಜೇಶ್ವರನಲ್ಲಿಯೇ ಕಾವರಗೊಂಡಿದ್ದಳವ್ವೆ.

**ಮುತ್ತು= ಮುದ್ದು, ವಿಕಸಿತ= ಅರಳುವದು; ಕಾವರ= ವಿಕಲತೆ.**

೩೯. ಹಮ್ಮಿನ ಕಳೆಯು ಪುಳಕದಲ್ಲಿ ತಾರಕಿ ತಳಿತಂತೆ, ಅಂಗ ಸಂಗದಲಿದ್ದಳವ್ವೆ. ಬಂದ ಬರವಿನ ನಿಂದ ಚಂದದ ಪೊಸ ಪುವ್ವ ಮುಡಿದಳವ್ವೆ. ಅಡವಿಯುಲಾದ ಮರನ ಅಡಿಯುಲಿ ಬಿಸಿಲ ಬಯಸಿದಳವ್ವೆ. ಇಂದು ಮಹಾಲಿಂಗ ಗಜೇಶ್ವರನ ನೆರವ ಭರದಲ್ಲಿ ಕಳಕ್ಕೆ ಬಂದ ಮೃಗದಂತೆ ತನ್ನ ತಾ ಮರೆದಿರ್ದಳವ್ವೆ.

೪೦ ಅಂಗಸಂಗದಲ್ಲಿದ್ದು ಬಂದುದನೆ ಕಂಡು ಹಸುಮಗುವಿನಂತಾದೆ ನೋಡವ್ವಾ. ಕಂಗಳ ನೋಟದ ಸುಖಕೆ ಮನವನೊಪ್ಪಿಸುವೆ. ಪತಂಗದ ಬೆಸುಗೆಯಂತಾದೆ ನೋಡವ್ವಾ. ಮದಾಳಿಯ ನಾಸಿಕದಂತೆ ಸುಳಿದು ಸುಖಬಡುವೆ. ಮಹಾಲಿಂಗ ಗಜೇಶ್ವರನೆನ್ನ ಇನಿಯ ನೋಡವ್ವಾ.

೪೧. ಅವ್ವಾ ನಾನುಸಿರಲಮ್ಮೆನು. ಅಲ್ಲಿ ಗಂಡೆಣೆ ಇಪ್ಪುದೆಂದೆ ಅವ್ವಾ. ಅವ್ವಾ ಬೆಟ್ಟದ ರತಿಯಲ್ಲಿ ಹುಟ್ಟಿ ಬೆಳೆದುದಯವಾದಳು. ಅವ್ವಾ ಇಂದೆ ಮಹಾಲಿಂಗ ಗಜೇಶ್ವರನುಳಿದನೆಂದಟ್ಟಿದರೆ, ಅವ್ವಾ ನಾನು ಅಲ್ಲಿ ಪ್ರತಿಬಿಂಬವಿದ್ದಿತೆಂದು.

## (೩) ಪರಮಾತ್ಮನಲ್ಲಿ ಸಾಮರಸ್ಯವನ್ನು ಹೊಂದಿ ಸುಖಿಸುವದು.

**ವಿವರಣೆಃ**— ಕೆಳಗಿನ ವಚನಗಳಲ್ಲಿ ವಚನಕಾರನು ಸಾಮರಸ್ಯದ ಸ್ಥಿತಿಯನ್ನು ವರ್ಣಿಸಿದ್ದಾನೆ. ಮತ್ತು ಅದರಲ್ಲುಂಟಾಗುವ ಸುಖ ಮತ್ತು ಶಾಂತಿಯನ್ನು ವಿವರಿಸಿದ್ದಾನೆ.

### ವಚನಗಳು.

೪೨. ಅಗಲಲಿಲ್ಲದ ನಲ್ಲನನಗಲಿ ನೆರೆವೆನೆಂಬ ಕಾಮಿನಿಯರ ಭಂಗವ ನೋಡಾ. ಆ ನಮ್ಮ ನಲ್ಲನ ಅನುವಿನೊಳಿರ್ದು ನೆರೆದಿಹೆನೆಂಬ ಭರವೆನಗವ್ವಾ. ಮಹಾಲಿಂಗ ಗಜೇಶ್ವರಯ್ಯನ ಕೂಡಿದ ಬಳಿಕ ಅಗಲಲೆಡೆಯುಂಟೇ ಅವ್ವಾ ?

೪೩. ಕಂಗಳ ಕಳೆ, ನೋಟದ ಮಸಕ, ಮಿಂಚಿನ ಗೊಂಚಲು ತಾಗಿದಂತಾದೆನವ್ವಾ ! ತಾರಕಿ ತಾರಕಿ ತಳಿತಂತೆ, ಅರಗಿನ ಬಳ್ಳಿ ಹಬ್ಬಿದಂತವ್ವಾ! ಐದು ರೂಹನೊಂದು ಮಾಡಿ ಕಾದಿ ಗೆಲಿದು ಸೋತು ಹೊರಪೊಂಟು ಹೋದನವ್ವಾ ಮಹಾಲಿಂಗ ಗಜೇಶ್ವರ ಕಂಗಳ ಮಾಸಾಳು.

**ಮಸಕ = ತಳಮಳಿಕೆ; ಮಾಸಾಳು= ಶೂರ; ತಳಿ = ಚಿಗುರು ಹೊರಬೀಳು**

೪೪. ಮುನಿಸು ಮುನಿದಡೆ, ಸಿರಿಗಂಧದ ಮುರುಡಿನ ಹಾಗಿರಬೇಕವ್ವಾ. ತೆಗೆದಪ್ಪಿದರೆ ಚಂದನದ ಸೀತಳದ ಹಾಗಾಗಬೇಕವ್ವಾ. ಹೆಣಗುವಲ್ಲಿ ಮೈಯೆಲ್ಲ ಕೆಯ್ಯಾಗಿ ಹೆಣಗಬೇಕವ್ವಾ. ಮಹಾಲಿಂಗ ಗಜೇಶ್ವರನ ನೆರೆವ ಭರದಿಂದ ನೊಂದು ಅಂಕದ ಮೇಲೆ ಬಿದ್ದ ಹಾಗಿರಬೇಕವ್ವಾ.

**ಮುರುಡು= ಗಂಟು; ಅಂಕ= ತೊಡೆ, ಶರೀರ, ಮಗ್ಗಲು.**

೪೫. ಎನ್ನ ಕಡೆಗಣ್ಣು ಕೆಂಪಾಯಿತ್ತವ್ವಾ! ಎನ್ನ ನಳಿತೋಳು ಉಡುಗಿದವವ್ವಾ ! ಇಕ್ಕಿದ ಹವಳದ ಸರ ಬೆಳುಪಾದವವ್ವಾ ! ಮುಕ್ತಾಫಳ ಹಾರದಿಂದಾನು ಬೆಂದೆನವ್ವಾ! ಇಂದಿನ ಮಹಾಲಿಂಗ ಗಜೇಶ್ವರನು ಬಹಿರಂಗವನೊಲ್ಲದೆ ಅಂತರಂಗದಲ್ಲಿ ನೆರೆದ ಕಾಣಾ ಅವ್ವಾ.

೪೬. ಕಾಮಂಗಂಜಿ ಚಂದ್ರಮನ ಮರೆಹೊಗಲು, ರಾಹುಗೊಂಡಂತಾದಳವ್ವೆ. ಹಾವೆಂದರಿಯದೆ, ನೇಣೆಂದರಿಯದೆ, ಕ್ಷಣ ನಾಗಭೂಷ

ಣೆಯಾಗಿರ್ದಳವ್ವೆ! ಮಹಾಲಿಂಗ ಗಜೇಶ್ವರನ ನೆರೆವ ಭರದಿಂದೆ ಕಳಕ್ಕೆ ಬಂದ ಮೃಗದಂತಿರ್ದೆನವ್ವಾ

ನೇಣು= ಹಗ್ಗ

೪೭. ಮಾಗಿಯ ಹುಲ್ಲಿನ ಸೋಂಕಿನಂತೆ ತನು ಪುಳುಕಿತಳಾದ ಳವ್ವೆ! ನುಡಿ ತೊದಲು. ಆತನ ಒಲುಮೆ ಆಧಾರವಾಗಿದ್ದಳವ್ವೆ! ಬಿಳಿಯ ತುಂಬಿ ಕುಂಕುಮದ ರಜದಲ್ಲಿ ಬಂಡುಂಡಂತೆ ಮಹಾಲಿಂಗ ಗಜೇಶ್ವ ರನಲ್ಲಿ ತನ್ನ ತಾನೆ ರತಿಯಾಗಿರ್ದಳವ್ವೆ.

೪೮. ನೇಹದ ಮನವನರಿಯಲೊಡನೆ ನೋಡಲಮ್ಮೆನವ್ವಾ! ಕಂಗಳ ಪಿಸುಣವ ಹೇಳಿಹನೆಂದು ನೋಡಲಮ್ಮೆನವ್ವಾ! ಕಜ್ಜಲ ಕಲಕಿದಡೆ ಕುರುಹಳಿಯಿತ್ತೆಂದು ನೋಡಲಮ್ಮೆನವ್ವಾ! ಮಹಾಲಿಂಗ ಗಜೇಶ್ವರನೊ ಲವು ಎನಗೆ ಸುಖದ ಮೊದಲು ನೋಡವ್ವಾ.

ಪಿಸುಣ = ಪಿಶುನ, ಹೊಲಸುತನ; ಕಜ್ಜಲ = ಕಾಡಿಗೆ.

೪೯. ಬಿಟ್ಟ ತಲೆಯ, ಬಿಡು ಮುಡಿಯ, ಬರುಮೆಯ್ಯ, ಕಿವಿಯ ಬಿಚ್ಚೋಲೆಯ, ಉಟ್ಟ ನಿರಿಯ, ಸಡಿಲದ ಕಳೆಯ, ಘಳಿಲನೆ ನಡೆತಂದಳು. ನಚ್ಚುಮಚ್ಚಿನ ಮನ ಸಂಧಾನವನು, ಬಂದಪ್ಪಿದ ಸೋಂಕಿನ ಸುಖವನು ಮಹಾಲಿಂಗ ಗಜೇಶ್ವರ ತಾನೆ ಬಲ್ಲ.

ಬಿಚ್ಚೋಲೆ=ಕಿವಿಯಲ್ಲಿಯ ಒಂದು ಬಗೆಯ ಓಲೆಯ ಆಭರಣ.

೫೦. ಮೂಗಿನ ತುಂಬಿಗೆ ಪರಿಮಳ ಒತ್ತಿಹವೆಂದು ಅಂಗಸಂಗ ದಲ್ಲಿಕ್ಕಿ ಮುಚ್ಚುವೆನವ್ವಾ! ಮನ ಮರೆದ ಮದಾಳಿಯ ನೇಹದಂತಾ ದೆನವ್ವಾ, ಮಹಾಲಿಂಗ ಗಜೇಶ್ವರನನುಭಾವಕ್ಕೆ ಸುಖಿಯಾಗಿ.

೫೧. ಎವೆ ಎವೆ ಹಳಚದೆ ಮೊಲೆಯ ಮೇಲಣ ಗಾಯ ಬಳಿಯ ರಕುತದ ಧಾರೆ ಸುರಿದಲ್ಲಿ, ಸಸಿ ಒಸರಿ ಬಸಿವಂತೆ ಎಸೆದನವ್ವಾ! ಅಪ್ಪಿನ ಸೋಂಕಿನ ಸುಖ ಅಚ್ಚುಕವಳಿದುಳಿದಡೆ ಮಹಾಲಿಂಗ ಗಜೇಶ್ವರದೇವ ನಿರಾಸನಾಗಿರ್ದನವ್ವಾ.

ಅಚ್ಚುಕ = ಅಚ್ಚು, ನಿರಾಸ ಇಚ್ಛೆ ಇಲ್ಲದಿರುವಿಕೆ.

೫೨. ದೃಷ್ಟಿಯು ಕಲ್ಲು ತಾಗಿದಂತೆ, ಮುನಿಸ ಮರೆದೆ ನೋಡಾ ಅವ್ವಾ! ಸೋಂಕಿದೊಡೆ ಸುಖಿಯಾದೆ. ಉಳಿದೊಡೆ ಕರಿಗೊಂಡೆ. ಪಾಷಣದೊಸರಿನಂತಾದೆ ನೋಡವ್ವಾ! ಸೋಂಕಿದಡೆ ಮಹಾಲಿಂಗ ಗಜೇಶ್ವರನ ಒಲವು ಎನಗೆ ಸುಖದೊದವು ನೋಡಾ ಅವ್ವಾ.

೫೩. ಪದುಮ ಪಜ್ಜಳ ವರ್ಣ ನೆಯಿದಲೆಯಾಗಿರ್ದಳವ್ವೆ! ತುಂಬಿ ಮುತ್ತನುಗುಳುವಂತೆ, ಕಂಗಳು ಕಂಕಣವಾಗಿ ಚಂದ್ರ ಬಿಂಬದಗ್ರದಂತೆ, ಅವಘಟಿಸಿಕೊಂಡಿರ್ದ ಬಂಗಾರಕ್ಕೆರಗಿದ ರತ್ನದಂತೆ ಆನೊಂದೇ ಗ್ರಾಹಿಯಾಗಿರ್ದೆನವ್ವಾ, ಅಖಂಡಿತನಾಗಿ ಮಹಾಲಿಂಗ ಗಜೇಶ್ವರನನುಭಾವಕ್ಕೆ ಸುಖಿಯಾಗಿ.

**ಪಜ್ಜಳ=ಪ್ರಜ್ವಲ, ಹೊಳಪು.**

## (೪) ಮೋಕ್ಷ.

**ವಿವರಣೆ:**— ಕೆಳಗಿನ ವಚನಗಳಲ್ಲಿ ಕಡೆಯದಾದ ಐಕ್ಯಸ್ಥಿತಿಯನ್ನು ವಚನಕಾರನು ವರ್ಣಿಸಿ ಅದರ ಸ್ವರೂಪವನ್ನು ಹೇಳಿದ್ದಾನೆ.

### ವಚನಗಳು.

೫೪. ದೇವರ ನೆನೆದು ಮುಕ್ತರಾದೆವೆಂಬ ಯುಕ್ತಿಶೂನ್ಯರ ಮಾತ ಕೇಳಲಾಗದು. ಅದೇನು ಕಾರಣವೆಂದಡೆ, ದೇವರ ನೆನೆವವರಿಗೆ ದೇವರುಂಟೇ? ದೂರ ದೂರದಲ್ಲಿದ್ದವರ ನೆನೆವರಲ್ಲದೆ, ಸಮೀಪದಲ್ಲಿದ್ದವರನಾರು ನೆನೆದವರಿಲ್ಲ. ಇದನರಿದು ನಿನ್ನೊಳಡಗಿ ನಾ ನಿನ್ನ ನೆನೆಯಲಿಲ್ಲ. ನನ್ನೊಳಡಗಿ ನೀನೆನಗೆ ಮುಕ್ತಿಯನೀಯಲಿಲ್ಲ. ಇದು ಕಾರಣ ನಾ ನೀನೆನಲಿಲ್ಲ ಮಹಲಿಂಗ ಗಜೇಶ್ವರಾ.

೫೫. ಹಲವು ಕಾಲದಲಿ ಕೇದಾರ ಕಂಡಂತಾದೆನವ್ವಾ! ಮುನಿಸು ನಾಚಿಕೆ ಹೋಗಿ ಕಂಗಳ ಕೊನೆಯಲ್ಲಿ ಸಿಲುಕಿದನವ್ವಾ! ತನು ಜಜ್ಜರವೋಗಿ ಕಂಗಳ ಕೊನೆಯಲ್ಲಿ ಸಿಲುಕಿದೆನ್ನ ಮಹಾಲಿಂಗ ಗಜೇಶ್ವರನು ಳಿದನೆಂದಡೆ ಆಲಿ ಕಲ್ಲ ನುಂಗಿದ ಚಕೋರನಂತಾದೆನವ್ವಾ.

೫೬. ಅವ್ವಾ, ಆತನ ಬೆರಸಿದ ಕೂಟವ ಏನೆಂದು ಹೇಳುವೆನವ್ವಾ! ಹೇಳಲುಬಾರದು ಕೇಳಲುಬಾರದು. ಏನು ಹೇಳುವೆನವ್ವಾ! ಶಿಖಿ ಕರ್ಪುರ ಬೆರಸಿದಂತೆ ಮಹಾಲಿಂಗ ಗಜೇಶ್ವರನ ಕೂಡಿದ ಕೂಟವ ಹೇಳಲು ಬಾರದವ್ವಾ.

೫೭. ಬಾಲಕಿ ಹಾಲ ಸವಿದಂತೆ, ಮರುಳನ ಮನದ ನೆನಹಿನಂತೆ, ಮೂಗ ಕಂಡ ಕನಸಿನಂತೆ, ಮೈಯ್ಯರಿಯದ ನೆಳಲಿನಂತೆ, ಬಂಜೆಯ ಮನದ ಸ್ನೇಹದಂತೆ, ಮಹಾಲಿಂಗ ಗಜೇಶ್ವರನಲ್ಲಿ ಲಿಂಗೈಕ್ಯವು.

೫೮. ಸಮರಸೈಕ್ಯದೊಳಗಣ ಸ್ನೇಹ, ಮತ್ಸ್ಯ ಕೂರ್ಮವಿಹಂಗನಂತೆ. ಸ್ನೇಹದ ನೋಟದಲ್ಲಿ ತೃಪ್ತಿ, ಸ್ನೇಹದ ನೆನಹಿನಲ್ಲಿ ತೃಪ್ತಿ, ಸ್ನೇಹದ ಸ್ಪರ್ಶನದಲ್ಲಿ ತೃಪ್ತಿ. ಇಂತೀ ಪರಿಯಲ್ಲಿ ಎಮ್ಮ ಮಹಾಲಿಂಗ ಗಜೇಶ್ವರನಲ್ಲಿ ಐಕ್ಯ. ವಾರಿ ಕಲ್ಲ ಪುತ್ಥಳಿ ಕರಗಿ ಅಪ್ಪುವ ಕೂಡಿದಂತಾಯಿತ್ತು.

೫೯. ಹೊಸ ಮದುವೆಯ ಹಸೆಯುಡಗದ ಮುನ್ನ, ಹೂಸಿದ ಅರಿಶಿನ ಬಿಸಿಲಿಂಗೆ ಹರಿಯದ ಮುನ್ನ, ತನು ಸಂಚಲವಡಗಿ ಮನವು ಗುರುಕಾರುಣ್ಯವ ಪಡೆದು ಹುಸಿಯಿಲ್ಲಧಿರ್ದಡೆ ಭಕ್ತನೆಂಬೆ. ಹಿಡಿಯಲಿಲ್ಲದಿರ್ದಡೆ ಮಹೇಶ್ವರನೆಂಬೆ. ತನುವಿಲ್ಲದಿರ್ದಡೆ ಪ್ರಸಾದಿಯೆಂಬೆ. ಜೀವವಿಲ್ಲದಿರ್ದಡೆ ಪ್ರಾಣಲಿಂಗಿಯೆಂಬೆ. ಆಸೆಯಿಲ್ಲದಿರ್ದಡೆ ಶರಣನೆಂಬೆ. ಐದರ ಸಂಪರ್ಕ ವಿಯೋಗವಾದಡೆ ಐಕ್ಯನೆಂಬೆ. ಐಕ್ಯದ ಸಂತೋಷ ಹಿಂಗಿದಡೆ ಜ್ಯೋತಿರ್ಮಯನೆಂಬೆ. ಇಂತಾಗಬೇಕೆಂಬ ಈ ಮನದ ದೇಹವನಿರಿದಡರಿಯದು, ತರಿದಡರಿಯದು, ಬೈದಡರಿಯದು, ಹೊಯ್ದಡರಿಯದು, ನಿಂದಿಸಿದಡರಿಯದು, ಸ್ತುತಿಸಿದಡರಿಯದು, ಸುಖವನರಿಯದು, ದುಃಖವನರಿಯದು. ಈ ಚತುರ್ವಿಧದ ತಾಗು ನಿರೋಧವನರಿಯದಿರ್ದಡೆ ಆತನೇ ಮಹಾಲಿಂಗ ಗಜೇಶ್ವರನೆಂಬೆ.

R. N. B. 2554.

# ಶಿವಾನುಭವ.

ಸಂಪಾದಕ.

ರಾ. ಸಾ. ಫ. ಗು. ಹಳಕಟ್ಟಿ ಬಿ. ಎ. ಎಲ್. ಎಲ್. ಬಿ.

ಸಂಪುಟ ೧೨ ] ಮಾರ್ಚ ೧೯೩೮. [ ಸಂಚಿಕೆ ೬.

## ವಿಷಯಾನುಕ್ರಮಣಿಕೆ.

# ಶಿವಾನುಭವ.

ವರ್ಷ ೧೨]　　ಮಾರ್ಚ ೧೯೩೮　　[ಸಂಚಿಕೆ ೬

## ಮಹಾದೇವಿಯಕ್ಕಗಳ ಮದುವೆ.

ಲೇ:— ಶ್ರೀ ಸ. ಹಾ ಶಿವಮೂರ್ತಿಗಳು, ಶಿವಯೋಗಮಂದಿರ.

[ಲೇಖಾಂಕ ೩.]

ಈ ಲೇಖಕರ ಕೆಲವು ಪ್ರಶ್ನೆಗಳಿಗೆ ಪ್ರಭುಲಿಂಗ ಲೀಲೆಯಲ್ಲಿರುವ ಅಕ್ಕನ ಕಥಾಭಾಗವನ್ನೂ ಮಹಾದೇವಿಯಕ್ಕನ ರಗಳೆಯನ್ನೂ ಇಲ್ಲಿಂದ ಕೊಂಚ ಬಿತ್ತರಿಸುತ್ತ ಉತ್ತರಿಸುತ್ತೇನೆ.

### 'ಪ್ರಭುಲಿಂಗಲೀಲೆಯ' ಕಥಾಭಾಗ.

ಕೌಶಿಕರಾಜನುವೈಹಾಳಿಯಿಂದ ಬರುವಾಗ ಆ ಸಂಭ್ರಮವನ್ನು ನೋಡಲು ನಿಂತಿದ್ದ ಅಕ್ಕನನ್ನು ನೋಡಿದೊಡನೆ ನಿಮಿಷದಲ್ಲಿಯೇ ಕಾಮಾತುರದಿಂದ ಕಂಗೆಟ್ಟು ಕಳವಳಿಸುತ್ತ ಅರಮನೆಗೆ ಹೋಗಿ ಅಕ್ಕನನ್ನು ವರಿಸುವ ಲಾಲಸೆಯಿಂದ ಹೆಗ್ಗಡತಿ [ವಿಲಾಸಿನಿ] ಯುರನ್ನಟ್ಟಿ ಮಹಾದೇವಿಯರ ತಂದೆ ತಾಯಿಗಳನ್ನು ಕೇಳಿಸುತ್ತಾನೆ. ಆಗ ಅಕ್ಕನ ಮಾತಾಪಿತರು 'ನೃಪ ಕುಲದವಗೆ ಕೊಡೆವು' ಎನ್ನಲು, ಅದಕ್ಕಾ ಹೆಗ್ಗಡತಿಯರು—'ಅರಸನಿದಿರೇ ನೀವು? ಸುಮ್ಮನೆ ಸರಸದಿಂದಲಿ ಕೊಡುವುದೊಳಿತು. ವಿರಸವಾದೊಡೆ ನೀವು ಮಾಡುವುದೇನು ಭೂಪತಿಯು? ಮಗಳಿಗೆ ಸ್ವಸ್ತಿಯಾಗುವದು, ನಿಮಗಾಸ್ತಿಯಾಗುವದು.' ಎಂದು ಪ್ರತ್ಯುತ್ತರಿಸಲು ಮತ್ತಾ ತಾಯಿ ತಂದೆಗಳು—'ತಾಯಮಾರಿ ತೊತ್ತತೆಗೆದು ಕೊಂಬರೆ? ಇದ ಸುಡು. ಕಾಮದಾಸೆಗೆ ಕಳವಳಿಸಿ ವಿಷಮ ಕುಲ

ದಲಿ ಕೊಳ್ಳುಕೊಡೆಯು ಮಾಡಿದರೆ, ನಾಯಕದ ನರಕಗಳು ತಪ್ಪವು. ಸಾಕು ಸುಮ್ಮನಿರಿ; ರಾಯ ಮಾಡುವುದೇನು ? ಅಥವಾ ಆಕೆ [ಅಕ್ಕನೆ] ಒಪ್ಪಿಕೊಂಡರೆ ನಾವಾಗ ಕೊಡುವೆವು.' ಎಂದು ಉತ್ತರಿಸಲು ಆಗ ಅಕ್ಕನು ಹೆಗ್ಗಡತಿಯರನ್ನು ಕುರಿತು—'ನಾನೆ ಬೇಕಾಗಿದ್ದರೆ ಕೌಶಿಕರಾಜನೇ ಇಲ್ಲಿ ಬಂದು. ನಾನೇನ ಹೇಳುವೆನೋ ಅದನ್ನು ಮಾಡುವೆನೆಂದು ನನ್ನ ಮನೋನುರಾಗದಂತೆ ಶಪಥ ಮಾಡಲಿ.' ಎಂದಳು. ಆಗಾ ವಿಲಾಸಿನಿಯರು ಇದನ್ನು ಅರಸನಿಗೆ ತಿಳಿಸಲು ಅದರಂತೆ ಕೌಶಿಕರಾಜನು ಅಕ್ಕನ ಮನೆಗೇ ಬಂದು—'ಲಲನೆ ಕೇಳೌ! ಮೊದಲಲ್ಲಿ ನಿನ್ನ ಬಯಕೆಯ ಸಲಿಸುವೆನು. ಬಳಿಕ ನಿನ್ನನೊಲಿಸಿಕೊಂಬೆನು.' ಎನಲು, ಅಕ್ಕನು—'ನನ್ನ ಹೇಳಿಕೆಯ ಕೇಳದಿದ್ದರೆ ನಿನ್ನನ್ನು ಬಿಟ್ಟುಹೋಗುವೆ. ಎಂದುಸುರುವಳು. ಕೌಶಿಕರಾಜನು—'ಏನು ಮಾಡಲಿಬೇಕು ಹೇಳೆಲೆ ಮಾನಿನಿಯೆ!' ಎನಲು,—'ನೀನು ಸಲೆ ಶಿವಭಕ್ತನಾದರೆ ಕೂಡುವೆನು ನಿನ್ನ. ನೀನು ಭವಿಯಾಗಿರ್ದೊಡೊಲ್ಲೆನು. ನಾನು ಹೇಳುವುದಿನಿತೆ.' ಎಂದು ಅಕ್ಕನು ಸಾರುವಳು. ಅದಕ್ಕರಸು ಕೌಶಿಕನು—'ನಮಗೆ ಶಿವಭಕ್ತಿಯನು ಮಾಡುವ ಸಮಯುವಳವಡದು.' ಎಂದು ಹೇಳುತ್ತ ಉಟ್ಟ ಸೀರೆ ತೊಟ್ಟ ಆಭರಣಗಳನ್ನು ಅರಸನಿಗೇ ಕೊಟ್ಟು ವೈರಾಗ್ಯದಿಂದ ದಿಗಂಬರೆಯಾಗಿ ಅಲ್ಲಮಪ್ರಭುವನ್ನರಸುತ್ತ ಸಾಗಿದಳು. ಇದೆಲ್ಲವೂ ಚಾಮರಸ ಕವಿಯ ಹೇಳಿಕೆಯಾಯಿತು. ಇನ್ನು ಮಹಾದೇವಿಯಕ್ಕನ ರಗಳೆಯಲ್ಲಿ ನೋಡೋಣ.

## 'ಮಹಾದೇವಿಯಕ್ಕನ ರಗಳೆ' ಯಲ್ಲಿ.

ವೈಹಾಳಿಗೆ ಹೋದ ಸಮಯದಲ್ಲಿ ಅರಸು ಕೌಶಿಕನು ಸಹಜ ಸೌಂದರ್ಯವತಿಯಾದ ಅಕ್ಕನನ್ನು ನೋಡಿದೊಡನೆ ಫೋಟೋ ಯಂತ್ರಕ್ಕೆ ಸಿಕ್ಕ ಆಕೃತಿಯಂತೆ, ಅಕ್ಕನಾ ರೂಪು ಚಕ್ಕನೆ ಆತನ ಚಿತ್ತದಲ್ಲಿ ಚೊಕ್ಕವಾಗಿ ಮೂಡಿತು, ಕೂಡಿತು. ಅಂದಿನಿಂದ ತದ್ಭಾವದಲ್ಲಿಯೇ ಮೂರ್ಛೆಸಂದು ಕಂದಿ ಕುಂದಿ ಬಹು ಕಸಿವಿಸಿಯಾದನು. ಕೊನೆಗೆ ತಾಳದೆ ಮಂತ್ರಿಗಳನ್ನು ಕರೆಯಿಸಿ—'ಮಹಾದೇವಿಯಂ ಕಂಡೊಡುಳಿವೆಂ. ಅಲ್ಲದೊಡಳಿವೆ'. ಎಂದು ಹೇಳಿದ ಮೇಲೆ—'ಮಹಾದೇವಿ ಪೋಗದಿರಿ; ನಿಲ್ಲಿ. ನಿನಗೆ ತೊತ್ತಾದೆ. ಎನ್ನಾಣೆ ಹೋಗದಿರಿ.' ಇಂತು ಕಣ್ಮುಚ್ಚಿ ಕಳವಳಿ

ಸಿದನು. ಅರಸನ ಈ ಬಗೆಯನ್ನು ನೋಡಿದಾ ಮಂತ್ರಿಗಳು ವಸಂತಕನೆಂಬ ದೂತನನ್ನು ಕುರಿತು–'ನಿಂದಿರಲು ತೆರಪಿಲ್ಲ; ಬೇಗ ಶಿವಭಕ್ತನರಮನೆಗೆ ಹೋಗಿ, ಮಹಾದೇವಿಯುಂ ಅವನಿಪತಿಗಂ ಬೇಡು .." ಎಂದು ಹೇಳಿಕಳುಹಿದರು. ಅದರಂತೆ ವಸಂತಕನು ಬಂದು ಅಕ್ಕನ ಮಾತಾಪಿತರಿಗೆ ಭಯೋತ್ಪಾದಕವಾಗುವಂತೆ ರಾಜನ ನಿಷ್ಠುರ ಸ್ವಭಾವವನ್ನು ಬಿತ್ತರಿಸನು. ಇದ ಕೇಳಿ ಭೀತರಾಗಿ–'ಅರಸ ಕೌಶಿಕನೊಡನೆ ಸಮಸುಖದೊಳಿರು ಮಗಳೆ! ಸಿರಿದಪ್ಪ ಸಂಪದವನಿನಗೀವನೆಲೆ ಮಗಳೆ!!" ಎಂದು ತಂದೆ ತಾಯಿಗಳು ಹೇಳಿದರು. ಇದನ್ನು ಕೇಳಿದೊಡನೇ ಅಕ್ಕನು, ಧಿಗಿಲು ಭುಗಿಲೆಂದು ಕೋಪಿಸುತ್ತ ' ಎಲೆ ಭವಿಯೊಡನೆ ಬೆರಸಿರಲ್ಕಾರ್ಪೆನೆ? ಮೃಡ ಪೂಜೆಯಚಲಸುಖಮುಂ ಪಿಂಗಲಾರ್ಪೆನೆ? ಆನೇಕೆ ಭವಿಯೇಕೆ? ಭಕ್ತರೀ ಮಾತೇಕೆ? ಏನೆಂದೊಡಂ ಭವಿಯನೊಲ್ಲೆನ್ [ವಸಂತಕನನ್ನು ನೋಡಿ] ಹೋಗೆಲೆ ವಸಂತಕ! ನಿನಗೆ ಸೋಲ್ವವರಿಲ್ಲ. ನಾಗಭೂಷಣನ ಭಕ್ತರಿಗೆ ಭವಿಯು ಸರಿಯಲ್ಲ. ಬೆಳಗಿಂಗೆ ಕತ್ತಲೆಯ ಕೂಟಮುಂಟೇ ಮರುಳೆ! ತಿಳಿವ ಗಜ್ಞಾನದೊಳು ಸಂಗಮುಂಟೇ ಮರುಳೆ!!" ಎಂದು ಗಜರಿ ಗರ್ಜಿಸಿ ಕಳುಹುವಳು. ವಸಂತಕನೂ ರಾಜನ ಬಳಿ ಹೋಗಿ ಅಕ್ಕನ ನಡೆನುಡಿಗಳೆಲ್ಲವನ್ನೂ ಇಂತೆಂದರುಹಲು, ಕಾಮನ ಯಾತನೆಯಲ್ಲಿದ್ದಾ ಅರಸು ಕೌಶಿಕನು–'ತಡವೇಕೆ? ಇನ್ನುಂ ನೋಡತಿರ್ಪರೆ? ಬಲ್ಪಿಂದ ಮೆಲ್ಪಿಂದ ಮೆಂತಾದೊಡಂ ಪೋಗಿ...ತನ್ನಿರೇ ಏನೆಂದಳೆಂದುದನೊಡಂಬಟ್ಟು' ಎಂದು ಸಿಟ್ಟಿನಿಂದ ಕಟ್ಟಪ್ಪಣೆ ವಿಧಿಪನು. ತರುವಾಯ ಮಂತ್ರಿಗಳೂ ರೊಚ್ಚಿಗೆದ್ದು ತಾವೇ ಅಕ್ಕಗಳ ಮನೆಗೆ ಬಂದು ಆಕೆಯ ತಂದೆ ತಾಯಿಗಳನ್ನುದ್ದೇಶಿಸಿ—'ಅಯ್ಯಲಾ ಭಕ್ತರಿರಾ! ಕೆಟ್ಟ ಸುತೆಯಿಂದ ದುರ್ಮರಣವಾದಪುದು. ಕುಪಿತನಾದಂ ನೃಪತಿ; ಕೂಸು [ಅಕ್ಕನನ್ನು] ಕೊಡವಿರ್ದಡೀಗಂ ಕೊಲಲು ಬೆಸಸಿದಂ .." ಎಂದು ಅರಸನ ಕಟ್ಟಪ್ಪಣೆಯನ್ನು ಬೀರಿದರು. ಇದ ಕೇಳಿ ದುಃಖಗೊಂಡಾ ಮಾತಾಪಿತರು "ಎಲೆ ಮಗಳೆ! ನಿನ್ನಯ ದೂಸರಿಂ [ತಿರಸ್ಕಾರದಿಂ] ದೆಮಗೆ ನೆಲಸಿತ್ತು ದುರ್ಮರಣವೇನೆಂಬೆ ವೃದ್ಧರಿಗೆ. ಹೊಸತು ನಿನ್ನಯ ಭಕ್ತಿ ತಾನೆಮಗೆ ಸಂಕಟಂ. ವಸುಧೆಯೊಳು ಭವಿಯೊಳಗೆ ಬಾಳರೇನುತ್ಕಟಂ. ಕಾರಿಕಾಲಮ್ಮೆ ತಾಂ ಭವಿಯೊಡನೆ ಬಾಳಳೆ? ಹೇರೂರ ಹೆಂಗೂಸು ಭವಿಗೆ ಸತಿಯಾಗಳೆ? ಎಲೆಲೆ ಮೈಜಕ್ಕವ್ವೆ ಭವಿಗೆ ಪುದುವೋಗಳೆ?

ಎಲೆಲೆ ಮಾಂಗಾಯುಕ್ಕ ಪಾಂಡ್ಯನೊಡಗೂಡಳೆ? ಮಗಳೆ ಕೇಳವರಿಂದೆ ಬುದ್ಧಿ ಪಿರಿದೇ ನಿನಗೆ?...... ಏಕೆಮ್ಮನೀ ವಿಧಿಗೆ ತಂದಪ್ಪೆ ಬೇಡಮ್ಮ. ಲೌಕಿಕದಿ ಕೌಶಿಕನ ಸಂಗಮಂ ಮಾಡಮ್ಮ." ಎಂದು ಅಂಗಲಾಚಿ ಯಾಚಿಸದರು. ಇದ ಕೇಳಿದ ಅಕ್ಕನು, ಭವಿಯ ಸಂಗದ ಪ್ರಸಂಗ ಸಂದಿತಲ್ಲ! ಎಂದು ನೊಂದು 'ಅಂಬಕತ್ರಯನೆ ಇನ್ನೇವೆ' ನೆನುತ ಯೋಚಿಸಿ – 'ಪಿರಿಯರ್ ಪುರಾತನರನೆನಗೆ ಸಮುಗಟ್ಟುವರೆ? ಪರಮ ಶೈವಾಂಬುರಾಶಿಗಳನಿಂತೆಣಿಸುವರೆ? ಆ ಮಾತದಂತಿರಲಿ. ನಿಮ್ಮಯ ನಿರೋಧಮಂ ಏಮಾತು ತೀರ್ಚುವೆಂ... ಏನಾಗಿಯಾದೊಡಂ ಭಕ್ತರಂ ರಕ್ಷಿಪುದು; ನಾನಾ ವಿಧಂ...ಶರಣರಂ ಸಲಹುವದು; ಎಂದುಂಟು ಸತ್ಯಂ, ಪುರಾತನರ ವಚನವಿದು. ಕಾರಣ ಇಂದು ನಿಮಗುಮ್ಮಳಂ ಬೇಡ. ಇದ ನಂಬುವದು.' ಎಂದು ಅಭಯಕೊಟ್ಟು ಮಾತಾಪಿತರನ್ನು ಸಂತೈಸಿ, ಮುಂದೆ ನಿಂತಿರ್ದ ಮಂತ್ರಿಗಳನ್ನೂ ಕುರಿತು 'ನೀವೆಂದುದಂ ಮಾಳ್ಪೆನಂತು; ಅದಕ್ಕೆರಡಿಲ್ಲ. ಆದರೆ ಎನ್ನ ಮನದೊಳಿದ್ದಂತೆ ನೀವೂ ಮಾಡುವದು. ಏನೆಂದರೆ—'ಎನ್ನಿಚ್ಛೆಯೊಳು ಶಿವನ ಪೂಜೆಯೊಳು ನಲಿದಿಪ್ಪೆ. ಎನ್ನಿಚ್ಛೆಯೊಳು ಮಹೇಶ್ವರರ ಗೋಷ್ಠಿಯೊಳಿಪ್ಪೆ. ಎನ್ನಿಚ್ಛೆಯೊಳು ನಿಮ್ಮ ನೃಪನ ಸಂಗದೊಳಿಪ್ಪೆ. ಇಲ್ಲೀ ಮೂರುಂ ತಪ್ಪನೇ ಸೈರಿಸುವೆನು. ಅಲ್ಲಿಂದು ಬಳಿಕ ಒಲಿದಂತಿಪ್ಪೆ ನಾನುಳಿದು.' ಎಂದು ನುಡಿಯಲು ಮಂತ್ರಿಗಳೂ ಇದಕ್ಕೊಡಂಬಟ್ಟರು. ಮುಂದೆ ವಿವಾಹವಾಗುವದು. ಕೊನೆಗೆ ಅರಸನಿಂದ ಮೂರು ತಪ್ಪಾಗಲು ವೈರಾಗ್ಯದಿಂದ ಶ್ರೀಗಿರಿಯತ್ತ ಸಾಗಿದಳು. (ಇವೆಲ್ಲ ಹರಿಹರದೇವನ ಹೇಳಿಕೆ.)

## ಈ ಈರ್ವರ ಹೇಳಿಕೆಯಲ್ಲಿ ನನ್ನ ವಿಚಾರ.

ಶ್ರೀ ಚಾಮರಸ ಕವಿಯ ಪ್ರಭುಲಿಂಗಲೀಲೆಯಲ್ಲಿಃ— 'ನೀನು ಶಿವ ಭಕ್ತನಾದರೆ ಕೂಡುವೆನು ನಿನ್ನ; ನೀನು ಭವಿಯಾಗಿದ್ದರೊಲ್ಲೆ' ಎಂದು ಅಕ್ಕಗಳು ಕೌಶಿಕರಾಜನನ್ನು ಕುರಿತು ಹೇಳಬೇಕಾದರೆ,—. ಮುಂದೆ ಕೌಶಿಕನು ಏನು ಹೇಳುವನೆಂಬುದನ್ನು ಮಾತ್ರ ಅವರೇನೂ ಆಗ ತಿಳಿದಿದ್ದಿಲ್ಲ. ಅದ್ದರಿಂದ ಆಗ ಅಕ್ಕನ ಮನದಲ್ಲಿ ಕೌಶಿಕನು ಶಿವ ಭಕ್ತನಾದ ಪಕ್ಷದಲ್ಲಿ ಅವನನ್ನು ಲಗ್ನವಾಗಬೇಕೆಂಬ ಹಂಬಲವಿತ್ತೆಂದು (ಚಾಮರಸನ ದೃಷ್ಟಿಯಿಂದ) ಹೇಳಲ್ಪಡಬೇಕಾಗುತ್ತದೆ. ಮತ್ತೂ ಈ

ಮಾತಿನಿಂದ ಆಗ ಒಬ್ಬ ಶಿವಭಕ್ತನನ್ನು ಮದುವೆಯಾಗುವ ಇಷ್ಟವು ಅಕ್ಕನಿಗೂ ಇದ್ದೇ ಇತ್ತೆಂದು ಬಹು ಸ್ಪಷ್ಟವಾಗಿ ತೋರುತ್ತದೆ.

ಅರಸನು ಕೌಶಿಕನು ಭವಿಯಾದರೂ ವೀರಶೈವ ದೀಕ್ಷೆಯನ್ನು ಅವನು ಪಡೆದರೆ ಲಗ್ನವಾಗುವೆನೆಂದು ಸ್ವಸಂತೋಷದಿಂದಲೇ ಒಪ್ಪಿಕೊಂಡ ಅಕ್ಕನು, ಅವನದಕ್ಕೆ ಒಲ್ಲದೇ ಹೋದರೆ ಬೇರೊಬ್ಬ ಶಿವಭಕ್ತನನ್ನು ವರಿಸಿ—"ಬಯಸದೆ ಭೋಗ ಮೋಕ್ಷ ಪರರಪ್ಪುದು ಚಿತ್ರವಲಾ ಶಿವಾಧವಾ." ಎಂಬ ಲಿಂಗವಂತರ ತತ್ವದಂತೆ ಐಹಿಕಾಮುಷ್ಮಿಕ ಸುಖ-ಶಾಂತಿಯನ್ನು ಹೊಂದಲು ಆ ಅಕ್ಕನಿಗೆ ಅಂದವಾದ ಅಚ್ಚುಕಟ್ಟಾದ ಅತ್ಯುನ್ನತವಾದ ಮಾರ್ಗವಿತ್ತು. ನಿಜವಾಗಿಯೂ ಅಕ್ಕನು ಅಂತು ಹೇಳಿದ್ದರೆ ಇಂತು ವರ್ತಿಸದೇ ಇರುತ್ತಿರಲಿಲ್ಲ. ಹೀಗೆ ಬೇರೊಬ್ಬ ಅನುಗುಣನಾದ ಶಿವಭಕ್ತನನ್ನು ವರಿಸಿದ್ದರೆ ಮುಂದೆ ಕೌಶಿಕರಾಜನಿಂದಲೂ ಭಯವಿರಲಿಲ್ಲ. (ಪ್ರಭುಲಿಂಗಲೀಲೆಯಲ್ಲಿಯ ಈ ಕಥಾಭಾಗವನ್ನು ನೋಡಿ) ಆದರೆ ಅಕ್ಕನು (ಕೌಶಿಕನು ಲಿಂಗಧಾರಣವಾಗದೊಡನೆಯೇ) ಅದಾವ ಕಾರಣದಿಂದಲೋ ಉಡಿಗೆತೊಡಿಗೆಗಳನ್ನೆಲ್ಲ ಅರಸನಿಗೆ ಕೊಟ್ಟು ವಿರತಿ ತಳೆದು ದಿಗಂಬರೆಯಾಗಿ ಹೋದಳೆಂದು [೧] ಚಾಮರಸನು ಹೇಳಿರುತ್ತಾನೆ. ಹೀಗೆ ಹೇಳಿದುದರಿಂದ ಓದುಗರಾದ ನಮ್ಮೆಲ್ಲರಿಗೊಂದು ಸಂಶಯವುಂಟಾಗುವದು ಸಹಜ. ಏನೆಂದರೆ 'ಭವಿಯಾದ ರಾಜನು ಲಿಂಗವಂತನಾದರೆ ಮದುವೆಯಾಗುವನೆಂದು ನಿರ್ಬಂಧವಿಲ್ಲದೇ ಸ್ವಸಂತೋಷದಿಂದ ಒಪ್ಪಿಕೊಂಡ ಅಕ್ಕನು, ಅವನು ಲಿಂಗವಂತನಾಗದಿರಲು, ಬೇರೊಬ್ಬ ವೀರಶೈವನನ್ನು ವಿವಾಹವಾಗಲಿಲ್ಲವೆಂದ ಮೇಲೆ, ಆ ಅಕ್ಕನಿಗೆ ರಾಜನನ್ನೇ ವರಿಸಬೇಕೆಂಬ 'ಆಶೆ' ಯೇನಾದರೂ ಇತ್ತೋ? ಎಂದು ಸಂಶಯವು ಬಂದೇಬರುತ್ತದೆ.

---

೧ ತನ್ನ ಉಡಿಗೆ ತೊಡಿಗೆಗಳನ್ನೆಲ್ಲ ಅರಸನಿಗೆ ಬಿಚ್ಚಿಕೊಟ್ಟು ವೈರಾಗ್ಯದಿಂದ ದಿಗಂಬರೆಯಾಗಿ ಹೋಗುವಷ್ಟು ಕಾರಣವು ಅಥವಾ ಕಷ್ಟವು ಆ ಅಕ್ಕನಿಗೆ ಅಲ್ಲಿ ಅಂತಹದೇನಿತ್ತು? ಎಂದು ಹುಡುಕಿದರೆ ಪ್ರಭುಲಿಂಗಲೀಲೆಯಲ್ಲಿ ಉತ್ತರ ದೊರೆಯಲಾರದೆಂದು ನನ್ನ ತಿಳುವಳಿಕೆಯಲ್ಲಿದೆ. ಮತ್ತೂ ಆಭರಣಾದಿಗಳನ್ನು ಅರಸನಿಗೆ ಏಕೆ ಕೊಡಬೇಕಾಗಿತ್ತು? ಎಂಬ ಸಂಶಯವೂ ವಿಚಾರಿಸಲ್ಪಡತಕ್ಕದ್ದಾಗಿದೆ.

ಕಾರಣ 'ಶಿವಭಕ್ತನಾದರೆ ಲಗ್ನವಾಗುವೆ' ನೆಂದು ಅಕ್ಕಗಳೇ ಕೌಶಿಕನಿಗೆ ಹೇಳಿರುವರೆಂದು ಚಾಮರಸನು ಬರೆದದ್ದು ಒಪ್ಪತಕ್ಕ ಮಾತಲ್ಲ, ಅದು ಸಾಧುವೂ ಅಲ್ಲ. ಇದೊಂದೇ ಮಾತಿನಲ್ಲಿಯೇ ಚಾಮರಸನು ಈ ಕಥೆಯನ್ನು ಮಾರ್ಪಡಿಸಿಕೊಂಡ ಗುಟ್ಟು, ನಾನು ಈ ಮೇಲೆ ವಿವರಿಸಿದ ದೃಷ್ಟಿಯಿಂದ ನೋಡಿದರೆ ಚೆನ್ನಾಗಿ ಬಟ್ಟಬಯಲಾಗುತ್ತದೆ.

ಇನ್ನು ಹರಿಹರದೇವನ 'ಮಹಾದೇವಿಯಕ್ಕನ ರಗಳೆ' ಯಲ್ಲಿ:— ಕೌಶಿಕರಾಜನ ದೂತನಾದ ವಸಂತಕನ ಬೆದರಿಕೆಗೆ ಹೆದರಿದ ಅಕ್ಕನ ತಂದೆ ತಾಯಿಗಳು 'ಅರಸ ಕೌಶಿಕನೊಡನೆ ಸಮಸುಖದೊಳಿರು ಮಗಳೆ! ' ಎಂದು ಹೇಳಿದೊಡನೆಯೇ ಅಕ್ಕನು ರೊಚ್ಚಿಗೆದ್ದು— "ಎಲೆ ಭವಿಯೊಡನೆ ಬೆರಸಿರಲ್ಬಾರ್ಪೆನೆ? ವೃಡ ಪೂಜೆಯುಚಲ ಸುಖಮಂ ಪಿಂಗಲಾರ್ಪೆನೆ? ಆನೇಕೆ ಭವಿಯೇಕೆ? ಏನೆಂದೊಡಂ ಭವಿಯನೊಲ್ಲೆನ್" ಎಂದು ತಂದೆ ತಾಯಿಗಳನ್ನು ಕುರಿತು ಹೇಳಿ, ನಂತರ ಆ ರಾಜದೂತನನ್ನು ಕುರಿತು— 'ಹೋಗೆಲೆ ವಸಂತಕ! ನಿನಗೆ ಸೋಲ್ವವರಿಲ್ಲ. ನಾಗಭೂಷಣನ ಭಕ್ತರಿಗೆ ಭವಿಯು ಸರಿಯಲ್ಲ. ಬೆಳಗಾಗೆ ಕತ್ತಲೆಯು ಕೂಟಮುಂಟೇ ಮರುಳೆ? ತಿಳಿವಗಜ್ಞಾನದೊಳು ಸಂಗಮುಂಟೇ ಮರುಳೆ?" ಇಂತು ಗಜರಿ ಗರ್ಜಿಸಿ ಕಳಿಸಿದಳೆಂದು ಹೇಳುವ ಹರಿಹರನ ಮಾತುಗಳು, ಅಕ್ಕನ ಆ ಚೊಕ್ಕ ಶಿವಜ್ಞಾನಕ್ಕೆ ಮಾನಕ್ಕೆ ಒಪ್ಪತಕ್ಕವಾಗಿಯೆ. ಇಲ್ಲಿ 'ಲಿಂಗವಂತನಾಗು' ಎಂಬ ಮಾತೇ ಇಲ್ಲ. ಮೊದಲು ಒಟ್ಟು ಭವಿಯನ್ನೇ ಒಲ್ಲೆನೆನ್ನುವಳು. ಚಾಮರಸನು ಹೇಳುವಂತೆ, ಮೊದಲಿಗೇ ಯಾವದೊಂದೂ ಬಲಾತ್ಕಾರವಿಲ್ಲದೆ ಮದುವೆಯಾಗುವೆನೆಂದು (ಲಿಂಗವಂತನಾದರೆ) ಮನಮಾಡುವಂತಹ, ಸಮ್ಮತಿ ಕೊಡುವಂತಹ, ಸ್ವಭಾವವು ಅಕ್ಕಗಳದಾಗಿರಲಿಲ್ಲ. ಇದನ್ನು ಆಕೆಯ ವಚನಗಳಿಂದಲೇ ಅರಿಯಬಹುದು.

ಇತ್ತ ಆ ದೂತನೂ (ವಸಂತಕನು) ಬಂದು "ಎನ್ನಳವಲ್ಲ. ಆ ಕನ್ಯೆಯತಿ ಭಕ್ತಿಯುತೆ; ವೈರಾಗ್ಯಯುತೆ. ಸಿಡಿದೆದ್ದಪಳು ಭವಿಯ ಮಾತೆನೆ. ತಂದೆ ತಾಯಿಗಳ ಬಂಧುಬಳಗಗಳ ಮಾತ ಲೆಕ್ಕಿಸಳು, ಪರಿಕಿಸಳು." ಎಂದು ಮಂತ್ರಿಗಳಿಗೆ ತಿಳುಹುವನು. ಇದನ್ನು ಕೇಳಿದ ಮಂತ್ರಿಗಳೆಲ್ಲರೂ ತಮ್ಮೊಳಗೊಬ್ಬರ ಮೊಗವನೊಬ್ಬರು ನೋಡುತ 'ಮೆಲ್ಲನೀ ಮಾತನರಸಂಗೇ ಅರುಪಿ ನೋಡುವಂ. ಅಲ್ಲಿ ಹುಟ್ಟಿದ ಹದಕೆ ತಕ್ಕುದಂ ಮಾಡುವ' ಎಂದು ಆಲೋಚಿಸಿ, ಅತಿ ಕಾಮಾತುರನಾದ

ಕೌಶಿಕನಿಗೆ ತಿಳುಪುವರು. ಮೊದಲೇ ಸ್ವತಂತ್ರಸರ್ವಾಧಿಕಾರವುಳ್ಳ ನಾಡಿಗೊಡೆಯ; ಅದರಲ್ಲಿ ತರುಣ; ಮೇಲಾಗಿ ಕಾಮುಕ. 'ಕಾಮಾಂಧೋ ನೈವ ಪಶ್ಯತಿ.' ಇಂಥವನಿಗೆ 'ಅತಿಭಕ್ತಿಯುತೆ ವೈರಾಗ್ಯಯುತೆ' ಎಂದು ಹೇಳಿದರೆ ಎಲ್ಲಿಯಾದರೂ ಸುಮ್ಮನೇ ಬಿಟ್ಟು ಬಿಡುವನೇ? ಆಗ— "ಬಲ್ಪಿಂದ ಮೆಲ್ಪಿಂದ 'ಮೆಂತಾದೊಡಂ' ಪೋಗಿ ತನ್ನಿರಿ." ಎಂದು ಕಟ್ಟಪ್ಪಣೆಯನ್ನು ಕೊಟ್ಟೆಬಿಟ್ಟ. ಇಷ್ಟಾದ ಮೇಲೆ ಇನ್ನು ತಂತ್ರವಿಶಾರದರಾದ ಮಂತ್ರಿಗಳನ್ನು ಕೇಳಬೇಕೆ? ಆಕೆಯ ತಂದೆ ತಾಯಿಗಳಿಗೆ— 'ದುರ್ಮರಣವಾದಪುದು; ಕುಪಿತನಾದಂ ನೃಪತಿ. ಕೂಸು ಕೊಡದಿರ್ದಡೀಗಂ ಕೊಲಲು ಬೆಸಸಿದಂ[೧]" ಎಂದು ಹೇಳಿಯೇ ಬಿಟ್ಟರು. ಯಾವ

---

೧ "ಚಾಮರಸಾದಿಗಳು ಹೇಳುವಂತೆ ಮೊದಲೇ 'ಶಿವಭಕ್ತನಾಗು' ಎಂದು ಕರಾರು ಮಾಡಿದ್ದರೆ, ಆ ಕರಾರನ್ನು ಮೀರಿ ಶಿವಭಕ್ತರನ್ನು ಕೊಲ್ಲುವಷ್ಟು ಕೌಶಿಕನು ಕಟುಕನಿದ್ದಿಲ್ಲ. ಆತನೂ ಮನುಷ್ಯನು. ಅದರಲ್ಲಿ ರಾಜನು. ಕಾರ್ಯಾ ಕಾರ್ಯ ವಿವೇಕವೂ ಇತ್ತು. ತಕ್ಕಮಟ್ಟಿಗೆ ಗುಣವಂತನೂ ಇದ್ದನು. ಇಲ್ಲವಾದರೆ "ವೈಹಾಳಿಯಿಂದೆ ಬರುತಿರ್ದನಾ ಕೌಶಿಕಂ। ಸಾಹಸಾಭರಣನತಿ ವೀರಂ ಗುಣಾಧಿಕಂ॥" ಎಂದು ಹರೀಶ್ವರನು ಆತನ ಗುಣವರ್ಣನೆಯನ್ನು ಮಾಡುತ್ತಿರಲಿಲ್ಲ." ಎಂಬ ಈ ಲೇಖಕರ ಆಕ್ಷೇಪಣೆಯು ಪ್ರಶ್ನೆಯೊಂದು ಇಲ್ಲಿದೆ.

ಶಿವಭಕ್ತನಾದರೆ ಲಗ್ನವಾಗುವೆನೆಂಬ ಚಾಮರಸನ ಕರಾರೇ ಕಲ್ಪಿತವೆಂಬುದನ್ನು ಇದೇ ಲೇಖಾಂಕದಲ್ಲಿ ಈ ಮೊದಲೇ ವಿವರಿಸಿದೆನಷ್ಟೆ! ಇನ್ನು ಈ ಲೇಖಕರು ಹೇಳುವಂತೆ, ಕೌಶಿಕನು ಕಾರ್ಯಾ ಕಾರ್ಯ ವಿವೇಕಿಯೂ ತಕ್ಕಮಟ್ಟಿಗೆ ಗುಣವಂತನೂ ಆಗಿದ್ದರೆ—ತರುಣಿಯಾದ ಅಕ್ಕನು, ಲಗ್ನವಾದವಳೊ ಆಗದವಳೊ ಎಂಬುದನ್ನು ವಿಚಾರಿಸದೆ, ನೋಡಿದೊಡನೆ ಅದೆಂದಿಗೂ ಕಾಮಾತುರನಾಗುತ್ತಿರಲಿಲ್ಲ (ತರುಣಿಯರನ್ನು ದೂರದಿಂದಾಗಲಿ ಕೊಂಚ ಸಮೀಪದಿಂದಾಗಲಿ ನೋಡಿ, ಈಕೆ ಕನ್ಯೆ, ಅಥವಾ ಸತಿ, ಎಂದು ನಿರ್ಧರಿಸಿ ತಿಳಿಯುವದು ಠಿಣ.) ಪರಸ್ತ್ರೀ ಎಲ್ಲಿರುವಳೋ ಎಂಬ ಸಂಶಯದಿಂದ ಅಂಜದೇ ಅಳುಕದೇ ಹೋಗುತ್ತಿರಲಿಲ್ಲ. ಇದರಿಂದ ಅವನಿಗೆ ವಿವೇಕವೂ ತಕ್ಕಮಟ್ಟಿಗೆ ಗುಣವೂ ಇರಲಿಲ್ಲವೆಂತಲ್ಲ; ಮನುಷ್ಯನಾದ ಮೇಲೆ ಪ್ರತಿಯೊಬ್ಬನೂ ತಕ್ಕಮಟ್ಟಿಗೆ ವಿವೇಕಿಯೂ ಗುಣ

ನಾದರೊಬ್ಬ ದೊಡ್ಡ ಸಿರಿವಂತನಾಗಿದ್ದರೆ, ಅಕ್ಕನಾ ತಂದೆ ತಾಯಿಗಳು ಎಂತಾದರೂ ಅವನನ್ನು ತ್ಯಜಿಸಬಹುದಿತ್ತು, ತಿರಸ್ಕರಿಸಬಹುದಿತ್ತು. ಆದರೆ ಸರ್ವ ಸ್ವತಂತ್ರನೂ, ಗರ್ವವಿಶಿಷ್ಟನೂ, ಛಲಯುತನೂ ಬಲಯುತನೂ ಆದ ತನ್ನ ರಾಷ್ಟ್ರದೊಡೆಯನ ತಡೆಯಿಲ್ಲದ ಕಡುಶಾಸನ! ರಾಜದ್ರೋಹದಿಂದಾಗುವ ಕರಾಳ ದುಃಶಾಸನ!! ಇದಲ್ಲದೆ ಮಗಳು ನೋಡಿದರೆ ಪ್ರತಿಕೂಲಳು; ಇನ್ನು ತಮ್ಮನ್ನು ನೋಡಿಕೊಂಡರೆ ಅಬಲರು, ಅಸಹಾಯಕರು, ಅದರಲ್ಲಿಯೂ ಮುದುಕರು. ಇಂತಹ ಘೋರ ಸಮಯದಲ್ಲಿ ಆ ಬಡಪಾಯಿಗಳಾದರೂ ಏನು ಮಾಡಿಯಾರು? ಎತ್ತ ನೋಡಿದರೂ ದುಃಖವೇ ದುಃಖ. ಸೊಪ್ಪಾದ ಮುಖದಲ್ಲಿ ಕಂಣೀರು ತುಂಬಿ—'ಎಲೆ ಮಗಳೆ! ಮಗಳೆ!! ನಿನ್ನಯ ದೂಸರಿಂ [ತಿರಸ್ಕಾರದಿಂ] ದೆಮಗೆ। ನೆಲಸಿತ್ತು ದುರ್ಮರಣವೇನೆಂಬೆ ವೃದ್ಧರಿಗೆ। ಹೊಸತು—'ನಿನ್ನಯ ಭಕ್ತಿ' ತಾನೆಮಗೆ ಸಂಕಟಂ। ವಸುಧೆಯೊಳು ಭವಿಯೊಳಗೆ ಬಾಳರೇನುತ್ಕಟಂ॥" ಎಂದು ಹೇಳುತ್ತ ಹಿಂದಿನ ಮಹಾ ಶಿವಶರಣೆಯರಾದ, ಕಾರಿಕಾಲೆಮ್ಮೆ, ಹೇರೂರ ಹೆಂಗೂಸು, ವೈಜ

---

ವಂತನೂ ಇದ್ದೇ ಇರುತ್ತಾನೆ; ಆದರೆ ಕಾಮನ ಕಣೆಗಳು ತಾಗಿದವೆಂದರೆ ಮಾತ್ರ 'ಗುಣವು' ಹರಿದುಹೋಗುತ್ತದೆ. ಬುದ್ಧಿಯು ಸರಿದುಹೋಗುತ್ತದೆ, ಮನವು ಕರಗಿಹೋಗುತ್ತದೆ, ಎಂಬುದೇ ನನ್ನ ಅಭಿಪ್ರಾಯ.

ಕಾಮಿಯಾದ ಕೌಶಿಕನು ಶಿವಭಕ್ತರನ್ನು ಕೊಲ್ಲುವಷ್ಟು ಕಟುಕನಿದ್ದಿಲ್ಲವೆಂಬುದಕ್ಕೆ ಪ್ರತಿಯಾಗಿ, ಒಂದು ಪ್ರಸಿದ್ಧ ಐತಿಹಾಸಿಕ ದೃಷ್ಟಾಂತವನ್ನೇ ಸಂಕ್ಷೇಪವಾಗಿ ತೋರಿಸಲು ಯತ್ನಿಸುತ್ತೇನೆ. ವಿಜಾಪುರ ಜಿಲ್ಲೆಯಲ್ಲಿರುವ ಕಡಲೇಮಟ್ಟಿ ರೇಲ್ವೆ ಸ್ಟೇಶನದ ಮಾಸ್ತರನೊಬ್ಬನು ಜೊತೆಯಲ್ಲಿ ಒಂದು ಕೂಸುಳ್ಳ ಕಾಶೀಬಾಯಿ ಎಂಬ ಪತಿವ್ರತೆಯನ್ನು ಮಧ್ಯರಾತ್ರಿಯಲ್ಲಿ ನೋಡಿ ಕಾಮಾತುರನಾಗಿ ಆಕೆಯನ್ನು ಕೂಡಲು ಮನಮಾಡಿ ಬೇರೆ ಉಪಾಯದಿಂದ ಒಳಗೆ ಕರೆದು ಬಲಾತ್ಕರಿಸಲು, ಆ ಕಾಶೀಬಾಯಿಯು ಆ ಮಗುವನ್ನೂ ಅವನನ್ನೂ ಒಳಗೇ ಬಿಟ್ಟು ನೆವ ತೋರಿ ಹೊರಗೆ ಬಂದು ಕದವನ್ನಿಕ್ಕಿ ಭದ್ರಮಾಡಿದಳು. ಒಳಗಿದ್ದ ಮಾಸ್ತರನು—ಮಗುವನ್ನು ಕೊಲ್ಲುವನೆಂಬ ಆಸೆ ತೋರಿಸಿದರೆ ಒಳಗೆ

ಕ್ಕನವ್ವೆ, ಮಾಂಗಾಯಕ್ಕ ಮೊದಲಾದವರು ಭವಿಯೊಡನೆ ಬಾಳಿಲ್ಲವೆ? ಒಡಗೂಡಿಲ್ಲವೆ? ಎಂದು ಪೂರ್ವದ ದೃಷ್ಟಾಂತಗಳನ್ನೂ ತೋರಿಸಿ, ಇದೇನು ಹೊಸತಲ್ಲ; ಅವರೆಲ್ಲರಿಗಿಂತಲೂ ನಿನ್ನ ಬುದ್ಧಿ ಹಿರಿದಾದುದೆ? ಲೌಕಿಕದಿ ಕೌಶಿಕನ ಸಂಗವಂ ಮಾಡವ್ವ. ಎಮ್ಮನು ಈ ವಿಧಿಗೇಕೆ ತರುವೆ?" ಇಂತು ಮುಂತಾಗಿ ತನ್ನ ಸಲುವಾಗಿಯೇ ಕಣ್ಣೀರುಗರೆ

---

ಮತ್ತೆ ಬರುವಳೆಂಬ ಆಸೆಯಿಂದ ಚೂರಿ ಹಿಡಿದು ಕತ್ತರಿಸತೊಡಗಿದನು. ಪಾತಿವ್ರತ್ಯದಲ್ಲಿ ಲಕ್ಷ್ಯವಿಟ್ಟ ಆ ಸ್ತ್ರೀಯಳು ಅದಕ್ಕೂ ಬಾರದಿರಲು ಆ ಮಗುವಿನ ಒಂದು ಅವಯವವನ್ನು ಕಡಿದೇ ಬಿಟ್ಟನು. ಅವಳು ಅದಕ್ಕೂ ಬಾರದಿರಲು ಪ್ರತಿಯೊಂದು ಅವಯವವನ್ನು ಕಡಿದು ಕಡಿದು ತೋರಿಸುತ್ತ ಕೊಂದ ಕರುಣಾಜನವಾದೀ ಕಥೆಯು ಉತ್ತರ ಕರ್ನಾಟಕದ ಲಾವಣಿಗಾರರಿಂದಲೇ ಈಗಾಗಲೇ ಹಾಡಲ್ಪಡುತ್ತದೆ. ಮುಂದೆ ಆ ಮಾಸ್ತರನಿಗೆ ಶಿಕ್ಷೆಯೂ, ಆ ಪತಿವ್ರತೆಗೆ ಪಾರಿತೋಷಕವೂ, ಸರಕಾರದಿಂದಲೇ ಕೊಡಲ್ಪಟ್ಟವೆ. ಈ ಎಲ್ಲ ಇತಿಹಾಸವನ್ನು ನೋಡಿದವರು ಈಗಲೂ ಇದ್ದಾರೆ." ಇಂತು ಮುಂದೆ ಸರಕಾರದ ಭಯವುಳ್ಳ ಸಾಮಾನ್ಯ ಮನುಷ್ಯನೇ ಇಂತಹ ಕ್ರೂರಕರ್ಮ ಮಾಡಬೇಕಾದರೆ, ಯಾವುದೊಂದು ಭಯವಿಲ್ಲದ ರಾಜನು 'ಮರಣ ದಂಡನೆ ವಿಧಿಸುವ ಕಟುಕತನದಲ್ಲಿ ಆಶ್ಚರ್ಯವಾದರೂ ಏನು? ಇದಕ್ಕಾಗಿಯೇ ನಮ್ಮ ಪೂರ್ವಜರೂ 'ಕಾಮಾಂಧೋ ನೈವಪಶ್ಯತಿ' 'ನ ಕಾಮವೃತ್ತಿರ್ವಚನೀಯಮೀಕ್ಷತೆ' 'ಕಾಮಾತುರಾಣಾಂ ನ ಭಯಂ......' ಇಂತು ಹಾಡಿರುವರು. ಇಂತಹ ಆ ಕೌಶಿಕರಾಜನ ಸ್ವಭಾವವನ್ನು 'ಅರಸನತಿ ವಿಷಯಿಯತಿ ಕೋಪಿಯತಿ ನಿಷ್ಠುರಂ। ಪಿರಿಯರವರಿವರೆನ್ನನತಿ ಸತೇಜಂ ಕರಂ॥', ಎಂದು ಅವನ ದೂತನ ಮುಖದಿಂದಲೂ ಸಾಲದಿದ್ದಕ್ಕೆ ಮತ್ತೂ 'ದುರ್ಮದಂ ನಿಷ್ಠುರಂ ಹಸ್ತಿ ಮೂರ್ಖಂ ನೃಪತಿ।' ಎಂದು ಆತನ ಮಂತ್ರಿಗಳ ಮೊಗದಿಂದಲೂ ಹರಿಹರ ಕವಿಯೇ ನುಡಿಸಿದ್ದಾನೆ. ಮತ್ತು ಈ ವರ್ಣನೆಗೆ ಭಂಗ ಬಾರದಂತೆ ಕೊನೆಯ ವರೆವಿಗೂ ಈ ಕೌಶಿಕನ ಪಾತ್ರವನ್ನು ಚಿತ್ರಿಸುವದರಲ್ಲಿ ತೋರಿದ ಹರಿಹರನ ಕೈವಾಡವು ಬಹು ಸೂಕ್ಷ್ಮವಾಗಿದೆ. ಇನಿತು ಸೂಕ್ಷ್ಮವಾಗಿ ಚಿತ್ರಿಸಿದ ಆ ಹರಿಹರನೇ 'ವೈಹಾಳಿಯಿಂದೆ ಬರುತಿರ್ದನಾ ಕೌಶಿಕಂ । ಸಾಹಸಾಭರಣನತಿವೀರಂ ಗುಣಾಧಿಕಂ ॥" ಎಂದು ಬಣ್ಣಿಸಿರುವನೆಂದರೆ, ಇದು ವಿಶ್ವಾಸಾರ್ಹವಾಗಲು

ಯುತ್ತ ಸುರಿಸುತ್ತ ಹೇಳುವ ಲಾಲನೆ ಪಾಲನೆ ಮಾಡಿದಾ ವೃದ್ಧ ಮಾತಾಪಿತರ ಈ ದುಃಖೋಕ್ತಿಗಳನ್ನು ಕೇಳದೆ ಅವರನ್ನು ಮರಣಕ್ಕೀಡು ಮಾಡುವಷ್ಟು ಅಕ್ಕನ ಚಿತ್ತವು ದಾರುಣವಾದುದಿರಲಿಲ್ಲ; ದಯೆಯುಳ್ಳದ್ದಿತ್ತು, 'ಧರ್ಮಪರಾಯಣವಾಗಿತ್ತು. ಆಗ ಇಂತು ವಿಚಾರಿಸಿದರೆ ಅಕ್ಕನು ತನಗೆ ಅನಿಷ್ಟವಾದ ಭವಿಯ ವಿವಾಹವನ್ನು ಒಪ್ಪಿಕೊಳ್ಳಬೇಕು.[೧] ಈ ಕಿಣ್ಣವಾದ ಕಾರ್ಯದ್ವಯದಲ್ಲಿ ಸಿಕ್ಕಿಬಿದ್ದ ಅಕ್ಕನಿಗೆ ದುಃಖವಾಗದಿರಲು ಸಾಧ್ಯವಿಲ್ಲ ಆಗ ಆಕೆಯೂ ಕಣ್ಣನೀರಿಕ್ಕುತ 'ಅಂಬಕತ್ರಯನೆ ಇನ್ನೇವೆ' ನೆನುತ ದಿಕ್ಕು ತೋಚದೆ ನೊಂದಳು. ಯೋಚಿಸಿ ಇಂತು ನುಡಿ

---

ಆಧಾರವಿಲ್ಲವೆನ್ನುತ್ತೇನೆ. ಏಕೆಂದರೆ ಈ ವರ್ಣನೆಗೆ ತಕ್ಕಂತೆ ಕೌಶಿಕ ರಾಜನ ವ್ಯಕ್ತಿತ್ವವು ಮಹಾದೇವಿಯಕ್ಕನ ರಗಳೆಯಲ್ಲಿ ಎಲ್ಲಿಯೂ ಕಾಣುವದಿಲ್ಲ. ಕಾಮಿಯಾದ ಕೌಶಿಕನೂ ಅಂತಹ ಸ್ವಭಾವದವನಿರಲು ಸಾಧ್ಯವಿಲ್ಲ. ಹಾಗಾದರೆ ಈ ಪದ್ಯದ ಗತಿಯೇನು? ಎಂದರೆ ಹರಿಹರನ ಈ 'ಮಹಾದೇವಿಯಕ್ಕನ ರಗಳೆ' ಎಂಬುದು ಒಟ್ಟು ಮೂರು ಪ್ರತಿಗಳ ಆಧಾರದಿಂದ ಪ್ರಿಂಟಾಗಿದೆ ಎಂದು ಅದರ ಪ್ರಕಾಶಕರೇ ಬರೆದಿದ್ದಾರೆ. ಅವುಗಳಲ್ಲಿ ಈ ಪದ್ಯವು ಮಾತ್ರ ಒಂದೇ ಪ್ರತಿಯಲ್ಲಿದೆ ಎಂಬುದನು ಅದೇ ಪದ್ಯದ ಅಡಿಟಿಪ್ಪಣಿಯಿಂದ ತಿಳಿಯಬಹುದಾಗಿದೆ. ಕಾರಣ ಸಾಹಿತ್ಯ ದೃಷ್ಟಿಯಿಂದಲೂ, ಇನ್ನಿತರ ದೃಷ್ಟಿಯಿಂದಲೂ ವಿಚಾರಿಸಿದರೆ, ಈ ಶ್ಲೋಕವು ಯಾರಿಂದಲೋ ಪ್ರಕ್ಷಿಪ್ತವಾದುದೆಂದು ಹೇಳಲೇಬೇಕು.

(೧) ಕೌಶಿಕನಿಗೆ ಲಿಂಗಧಾರಣ ಮಾಡಿಸಿದರೆ 'ಭವಿ' ಯೆಂಬ ಮಾತೇ ಇಲ್ಲವಲ್ಲ? ಎಂದರೆ – ಕೌಶಿಕನ ಅಂತರಂಗವು ಲಿಂಗಧಾರಣೆಗೆ ಪರಿಪಕ್ವವಾದುದಿಲ್ಲ. ಏಕೆಂದರೆ ಅವನಾ ಲಿಂಗವಂತಿಕೆ ಯೋಗ ಮುಮುಕ್ಷುಭಾವದ ತಾತ್ವಿಕ ದೃಷ್ಟಿಯಿಂದಿರದೆ, ಕೇವಲ ಕಾಮೋಪಭೋಗ ಇಷ್ಟವುಳ್ಳದ್ದಾಗಿದೆ. ನೆವವುಳ್ಳದ್ದಾಗಿದೆ. ಆದ್ದರಿಂದ ಅವನು ವೀರಶೈವ ದೀಕ್ಷೆಗೆ ಅಧಿಕಾರಿಯೇ ಇಲ್ಲ. ಇಂತು ಅನಧಿಕಾರಿಯಾದಾ ಕೌಶಿಕರಾಜನನ್ನು ತತ್‌ಕ್ಷಣವೇ 'ನೀನು ಶಿವಭಕ್ತನಾದರೆ ಲಗ್ನವಾಗುವೆ' ಎಂದು ನುಡಿಯಲು ಒಪ್ಪಿಕೊಳ್ಳಲು ಅಕ್ಕಗಳೇನೂ ಅಜ್ಞಾನಿಗಳಿದ್ದಿಲ್ಲ, ಅನುಭವಿಗಳಿದ್ದಿಲ್ಲ. ಆದ್ದರಿಂದಲೇ ಈ ನಿಜವಾದ ಲಿಂಗವಂತಿಕೆಯ ತತ್ವವನ್ನರಿತ ಹರಿಹರನೂ ತನ್ನ ಕಾವ್ಯದಲ್ಲೆಲ್ಲಿಯೂ 'ಶಿವಭಕ್ತನಾಗು' ಎಂಬ ಮಾತನ್ನೇ ಎತ್ತಿಲ್ಲ. ಒಟ್ಟು ಕೌಶಿಕನಿಗೆ 'ಭವಿ' ಯೆಂದೇ ನಿರ್ದೇಶಿಸಿದ್ದಾನೆ.

ದಳು. 'ಆ ಹಿರಿಯ ಶಿವಶರಣೆಯರ ವಿಚಾರವಂತಿರಲಿ, ನಿಮಗಾದ ನಿರೋಧದ ಮಾತನ್ನೀಗ ತೀರಿಸುವೆ. ಏಕೆಂದರೆ— ಏನಾಗಿಯೂ ಮೊಡಂ ಭಕ್ತರಂ ಭಕ್ತರಂ ರಕ್ಷಿಪುದು ನಾನಾವಿಧಂ ಬಂದು ಶರಣರಂ ಸಲಹುವದು ಎಂದುಂಟು "ಸತ್ಯಂ ಪುರಾತನರ ವಚನವಿದು" ಕಾರಣ ಇಂದು ನಿಮಗುಮ್ಮಳಂ ಬೇಡ.' ಎಂದು ಆ ಮಾತಾಪಿತರನ್ನು ಸಂತೈಸಿದಳೆಂದು ಹೇಳುವ, ಹರಿಹರದೇವನ ಗೀತೆಯಲ್ಲಿ ನೀತಿಯಲ್ಲಿ ಧರ್ಮವಿದೆ; ಸತ್ಯವಿದೆ; ಸಹಜವಿದೆ. ಇಸಿತಲ್ಲ "ಜಾಲಗಾರನೊಬ್ಬ ಜಲವ ಹೊಕ್ಕು ಶೋಧಿಸಿ ಹಲವು ಪ್ರಾಣಿಯ ಕೊಂದು ನಲಿನಲಿದಾಡುವ. ತನ್ನ ಮನೆಯಲೊಂದು ಶಿಶು ಸತ್ತಡೆ ಅದಕ್ಕೆ ಮರುಗುವಂತೆ, ಅವಕೇಕೆ ಮರುಗನು?..." ಎಂದು ಮೀನುಗಳನ್ನೂ ನೋಡಿ ಮನ ಕರಗಿ ನೊಂದು ಹಾಡಿವ ಅಕ್ಕನಿಗೂ ಸಲ್ಲತಕ್ಕದ್ದಾಗಿದೆ, ಶೋಭಿಸತಕ್ಕದ್ದಾಗಿದೆ. ಇಂತಹ ಸದಯ ಹೃದಯಳಾದ, ಸತ್ಯ ಶರಣೆಯಾದ, ಲಿಂಗಾಂಗಸಂಗಿಯಾದ ಅಕ್ಕನ ಅನುಮತಿಯಿಂದಲೇ ಆ ಶಿವಭಕ್ತರ [ತನ್ನ ತಂದೆತಾಯಿಗಳ] ವಧೆಯೀಗ ನಡೆಯತಕ್ಕದ್ದು, ತಡೆಯತಕ್ಕದ್ದು. ವೀರಶೈವ ಮತದಲ್ಲಿಯ ಶಿವಭಕ್ತರಿಗಿರುವ ಸ್ಥಾನವು, ಮಾನವು ಶ್ರೀಶಿವಸಮಾನವಾದುದು. ಆಗಮಗಳಲ್ಲಿಯಂತೂ 'ಮದ್ಭಕ್ತಾ ಮಮಾಧಿಕಾಃ' ಎಂದು ಆ ಶಿವ ಶಾಸನವೇ ಇದೆ. ಇದನ್ನೇ ಪರ್ಯಾಯದಿಂದ ಬಸವಣ್ಣನವರೂ—'ಶಿವಭಕ್ತರಿಗಿಂತ ಹಿರಿಯರಿಲ್ಲ' ಎಂದು ಬೋಧಿಸಿದ್ದಾರೆ, ಸಾಧಿಸಿದ್ದಾರೆ. ಈ ಶಿವ ಭಕ್ತ ಸರ್ವೋತ್ಕೃಷ್ಟತೆಯನ್ನರಿತ ಅಕ್ಕನು, ತನ್ನ ತಂದೆತಾಯಿಗಳಾದ ಶಿವಭಕ್ತರ ವಧೆಯನ್ನು ಹೇಗೆ ಮಾಡಿಸುವಳು? ಕಾರಣ ಇದನ್ನು ತಪ್ಪಿಸಲೋಸುಗ ಬೇರೊಂದುಪಾಯವೂ ಸಾಗದಿರುವಾಗ, ಅನಿವಾರ್ಯವಾದ ಭವಿಯ ಒಡತಣಕ್ಕೆ ಒಪ್ಪಿಕೊಂಡರೆ ಇದು ಗುಬ್ಬಿಗೆ ಬ್ರಹ್ಮಾಸ್ತ್ರವಾದಂತೆ ಆಗಲಾರದು. [ಶಿವಭಕ್ತರ ವಧೆಗಿಂತಲೂ ದೊಡ್ಡದಿನ್ನೊಂದು ಪಾಪಕರ್ಮವಿಲ್ಲೆಂದು ಸಾರುವದು ವೀರಶೈವಮತ.] ಇದು ಕಾರಣ ಅಕ್ಕನು ಮನವಿಲ್ಲದಿದ್ದರೂ, ವಧೆ ತಪ್ಪಿಸುವ ಮಟ್ಟಿಗೆ ಮದುವೆಗೆ ಒಪ್ಪಿದ್ದರಿಂದ ಆದರಲ್ಲಿಯೇ ನಿಲ್ಲುವಂತಿರಲಿಲ್ಲ. ಜಲದಲ್ಲಿಯ ಕಮಳದಳದಂತೆ ಇದ್ದು ಮುಂದೆ ಆದರಿಂದ ತನ್ನನ್ನೂ ತಪ್ಪಿಸಿಕೊಳ್ಳುವ ಯೋಚನೆಯೂ ಆಕೆಯ ಮನದಲ್ಲಿ ಮನೆಮಾಡಿರಬೇಕು, ಒಡಮೂಡಿರಬೇಕು. ಆದ್ದರಿಂದಲೇ ಮುಂದಿನ ಮಂತ್ರಿಗಳನ್ನು ಕುರಿತು—"ನೀವೆಂದುದಂ ಮಾಳ್ಪೆನಂತು ಅದಕ್ಕೆರಡಿಲ್ಲ. ನೀವೂ ಎನ್ನ ಮನದೊಳಿದ್ದಂತೆ ಮಾಡುವುದು. ಏನೆಂದರೆ—

೧. ಎನ್ನಿಚ್ಛೆಯೊಳು ಶಿವನ ಪೂಜೆಯೊಳುನಲಿದಿಪ್ಪೆ.
೨. ,, ಮಹೇಶ್ವರರ ಗೋಷ್ಠಿಯೊಳಿಪ್ಪೆ.
೩. ,, ನಿಮ್ಮ ನೃಪನ ಸಂಗದೊಳಿಪ್ಪೆ.

ಇಲ್ಲೀ ಮೂರು ತಪ್ಪುಗಳಾಗುವ ವರೆಗೆ ಇರುವೆ. ಅಲ್ಲಿಂದ ಬಳಿಕ ಒಲಿದಂತಿಪ್ಪೆ ನಾನು." ಎಂದುದಕ್ಕೆ ಮಂತ್ರಿಗಳೂ ಒಡಂಬಟ್ಟು[೧] ಮುಂದೆ ವಿವಾಹ ನಡೆಸುವರು. ಇಂತು ಅಕ್ಕನು ಮೂರು ನಿಯಮಗಳನ್ನು ಮಾಡಿದುದರಿಂದ ಲಾಭವೇನು? ಎಂದರೆ:— ಶಿವಭಕ್ತರ ಮರಣವಂತೂ ತಪ್ಪಿತು. ಅಲ್ಲದೆ ತನ್ನ ಬಂಧನವೂ ಬಿಚ್ಚುವಂತೇ ಇದೆ. ಇದರಿಂದ ಮುಂದೆ ತನ್ನ ಚೆನ್ನಮಲ್ಲಿಕಾರ್ಜುನನತ್ತ ಸಾಗಲೂ ಸ್ವಚ್ಛಂದವಾಯಿತು. ಒಟ್ಟು ತನ್ನ ಪ್ರಿಯ ಚೆನ್ನಮಲ್ಲಿಕಾರ್ಜುನನತ್ತ ಸಾಗಬೇಕಾದರೆ ನಡುವೊಂದು ಮಹಾಪ್ರವಾಹವು ಎತ್ತ ಹೋಗಲೂ ಮಾರ್ಗವಿಲ್ಲದಂತೆ ಮುಂದಡ್ಡವಾಗಲು ಅದರಲ್ಲಿ ಈಸಿದಳು, ಬಿದ್ದು ಜೈಸಿದಳು. ಆಗ ಈ ಮೂರು ನಿಯಮಗಳು, ಮೂರು 'ಈಸುಗುಂಬಳ ಕಾಯಿಗಳಂ'ತೆ ಸಹಾಯಗಳಾದವು.

ಹೀಗೆ ನಿಯಮ ಮಾಡುವುದಾದರೂ ರೂಢಿಯಲ್ಲಿದೆಯೋ ಹೇಗೆ? ಎಂದರೆ— ಸೃಷ್ಟಿಯಲ್ಲಿ ಯಾವ ಯಾವ ರೂಢಿಗಳು ರೂಢವಾಗಿವೆಯೋ ಆ ಆ ರೂಢಿಗಳಿಗೆ ವಿಪರೀತವಾಗಿ ಆಗುವ ಕ್ವಚಿತ್ತಾದ ಒಂದು ರೂಢಿಯೂ ಇಲ್ಲವೆಂತಲ್ಲ. ವಿವಾಹ ವಿಷಯದಲ್ಲಿ ಅಕ್ಕನಿಗೆ ಒದಗಿದ ವಿಷಮ ಸಮಯವೇ 'ರೂಢಿಗೆ ವಿಪರೀತವಾಗಿ ಆಗುವ ಕ್ವಚಿತ್ತಾದ ರೂಢಿ ಯೆಂದು ಹೇಳಬಹುದು. 'ಒಂದೊಂದು ಕಾರ್ಯದಲ್ಲಿ ತಮ್ಮ ತಮ್ಮ ಮತಾನುಸಾರವಾಗಿ ಬಹು ಜನರು ವರ್ತಿಸುವ ಒಂದೊಂದು ಪದ್ಧತಿಯೇ ರೂಢಿ.' ಕಾರಣ ಅಕ್ಕನ ಸ್ವಭಾವದ ಸ್ತ್ರೀಯರೂ, ಕೌಶಿಕನ ಸ್ವಭಾವದ ರಾಜರೂ ಇದ್ದಿದ್ದರೆ ಇದೂ ಒಂದು ರೂಢಿಯೇ ಆಗುತ್ತಿತ್ತು. ಇನ್ನು ಮುಂದೆ ಅಂತಹವರಾದರೆ ಆಗಲೂ ಬಹುದು.

---

(೧) ವಿಷಯಿಯೂ ಚಪಲಚಿತ್ತನೂ ನಿಷ್ಠುರನೂ ಆದ ಕೌಶಿಕನು ಈ ಮೂರು ನಿಯಮಗಳಿಗೆ ಅಧೀನನಾಗಿ ವರ್ತಿಸುವದು ಅಸಾಧ್ಯವೆಂದೇ ಅಕ್ಕನ ಬಗೆಯಲ್ಲಿ ನಿಶ್ಚಯವಾಗಿರಬೇಕು. ಒಂದು ಪಕ್ಷ ವರ್ತಿಸಿದನೆಂದರೆ ತನಗಂತು ಚೆನ್ನಮಲ್ಲಿಕಾರ್ಜುನನ ಧ್ಯಾನಕ್ಕೆ ಯಾವ ಆತಂಕವೂ ಇಲ್ಲವೆಂದು ಇಂತು ಮಾಡಿರಬೇಕು.

# ವೀರಶೈವ ಕವಿಗಳ ವೈಶಿಷ್ಟ್ಯ.

ಲೇಖಕರು :—ಶ್ರೀ ಚಂದ್ರಶೇಖರದೇವರು ಅಡ್ನೂರು

ಕನ್ನಡ ಕವಿಗಳಲ್ಲಿ ವೀರಶೈವ ಕವಿಗಳು ತಮ್ಮ ನಡೆ-ನುಡಿ (ಬಾಳು-ಭಾಷೆ) ಗಳಲ್ಲಿ ಒಂದು ವೈಶಿಷ್ಟ್ಯವನ್ನು ಕಾಯ್ದುಕೊಂಡು ಬಂದಿದ್ದಾರೆ. ಅದರಿಂದಲೇ ಅವರ ಜಸವೆಣ್ಣಿಗೆ ಶೋಭನದ ತಿಲಕನ್ನಿಟ್ಟಂತಾಗಿದೆ. ಅವರು ಅನ್ಯರಂತೆ ಕಂಡು ನಡೆಯಲಿಲ್ಲ; ಕಲ್ತು ನುಡಿಯಲಿಲ್ಲ. ಏಕೆಂದರೆ ಅವರ ತತ್ವ ಅವರ ಮತಪಂಥಗಳು ಸ್ವತಂತ್ರವಾಗಿರುವದೇ ಕಾರಣ. ಅವರು ತಮ್ಮತಮ್ಮ ಸುಂದರ ಸುಗಮಶೈಲಿಯ ಕಾವ್ಯಗಳನ್ನು, ಯಾವದೇ ಒಂದು ಸ್ಫೂರ್ತಿದಾಯಕವಾದ ನವಚೈತನ್ಯದಿಂದ ಪ್ರೇರಿತರಾಗಿ ಆಳವಾದ ಅನುಭವದಿಂದ ಪೂರಿತರಾಗಿ ರಚಿಸಿದರು. ಆದ್ದರಿಂದಲೇ ಅವರ ಭಾಷೆಯು ರಮ್ಯವಾಗಿ ಬಳೆದು-ಬಳಿಕೆಯಲ್ಲಿಳಿದು, ಬೆಳಕಿಗೆ ಬಂದಿತು. ಒಂದು ಹೆಮ್ಮರದ ತಣ್ಣೆಳಲಲ್ಲಿ ಬಿತ್ತಿದ ಬೆಳೆ, ಬಲವಾಗಿ ಬೆಳೆದು ಬಹುವಾಗಿ ಫಲಿಸದು. ಅದು ಸಣ್ಣಾಗಿ ಬೆಳೆದು ಕಣ್ಣಿಗೆ ನುಣ್ಣಗೆ ಮಾತ್ರ ತೋರಬಹುದು. ಆದರೆ ಅದರಲ್ಲಿ ಅಂತಸ್ಸತ್ವವು ಕಾಣಲಾರದು. ಹಾಗೆಯೆ ಒಬ್ಬರು ಆಚರಿಸಿದಂತೆ ಆಚರಿಸುವವನ ಬಾಳು-ಒಬ್ಬರು ಆಡಿದಂತೆ ಆಡುವವನ ಭಾಷೆ ಆ ನಾಡಿನ ಜನಾಂಗಕ್ಕೆ ಆದರ್ಶವಾಗಿ ಬ್ಬಾಳಲಾರದು. ಅಭೂತ ಪೂರ್ವವಾಗಿ ಬೆಳಗಲಾರದು.

ಕನ್ನಡತಿಯ ಕಾವ್ಯ ಪ್ರಪಂಚದಲ್ಲಿ ಕೆಲಸ ಮಾಡಿ ಕೀರ್ತಿ ಪಡೆದರು ಮುಖ್ಯವಾಗಿ ಜೈನರು, ವೀರಶೈವರು, ಬ್ರಾಹ್ಮಣರು. ಇವರಲ್ಲಿ ವೀರಶೈವ ಕವಿಗಳು ಒಬ್ಬೊಬ್ಬರು ಒಂದೊಂದು ವೈಶಿಷ್ಟ್ಯವನ್ನು ಸಂಪಾದಿಸಿಕೊಂಡು ಬಂದಿದ್ದಾರೆ. ಕನ್ನಡತಿಗೆ ತಮ್ಮ ಸ್ವತಂತ್ರವಾದ ಸುಂದರವಾದ ಸಾಹಿತ್ಯದ ಸಿರಿಸೊಬಗನ್ನುಕೊಟ್ಟು ( ಖಾದಿಯನ್ನುಡಿಸಿ ) ಅಂದ ಚಂದಮಾಡಿ ಉಳಿದ ಸಂಸ್ಕೃತಿಗಳಲ್ಲಿ ತಲೆಯೆತ್ತಿ ನಿಲ್ಲುವಂತೆ ಮಾಡಿದ್ದಾರೆ. ಇಕೋ ಇದು ಸ್ವತಃ ಸಂಪಾದಿಸಿದ ಮನೆಯ ಸಂಪತ್ತು ಎಂದು ಧೈರ್ಯವಾಗಿ ತೋರಿಸುವಂತೆ ಮಾಡಿದ್ದಾರೆ.

ಮೊತ್ತಮೊದಲು ಜೈನ ಕವಿಗಳು ಪ್ರೌಢ ಕಾವ್ಯಗಳನ್ನು ಕಟ್ಟು ನಿಟ್ಟಿನಿಂದ ಬರೆದು, ಕೇವಲ ಪಂಡಿತರ ಭಾಷೆಯನ್ನಾಗಿ ಮಾಡಿದರು. ಕಟ್ಟಕಡೆಗೆ ಬ್ರಾಹ್ಮಣ ಕವಿಗಳು ಸಂಸ್ಕೃತದಲ್ಲಿರುವ ಕಥಾವಸ್ತುಗಳನ್ನೂ ಕಥನರೀತಿಯನ್ನೂ ಅನುವಾದ ಮಾಡಿಕೊಂಡು ಪರ ಸಂಸ್ಕೃತಿಯಿಂದ ಜೀವಿಸುವಂತೆ ಮಾಡಿದರು. ಇವರಿಬ್ಬರಿಂದಲೂ ಕನ್ನಡತಿಯು ಸ್ವತಃ ಸಾಹಿತ್ಯ ಸಂಪತ್ತಿನಿಂದ ಬಾಳುವ ಭಾಗವು ಅವಳ ಸೌಭಾಗ್ಯಕ್ಕೆ ಪ್ರಾಪ್ತ ವಾಗಲಿಲ್ಲ. ಆ ಸಂಪತ್ತಿನ ಸುಗ್ಗಿಯನ್ನು ನಟ್ಟನಡುವಿನ ವೀರಶೈವ ಕವಿಗಳು ಆಕೆಯ ಒಡಲಲ್ಲಿ ತುಂಬಿದರು. ಆವಳಿಗೆ ವಿಲಕ್ಷಣವಾದ ನೆಲೆ ಬೆಲೆಗಳನ್ನು ತಂದುಕೊಟ್ಟರು. ಇವರು ಕವಿಸಮಯಗಳಿಗೆ ಸಿಲ್ಕಲಿಲ್ಲ. ಶಬ್ದಾಲಂಕಾರಗಳಿಗೆ ಮನಸೋಲಲಿಲ್ಲ. ಅಲ್ಲಲ್ಲಿ ಅನುಭವವನ್ನೂ ಅರ್ಥಾ ಲಂಕಾರಗಳನ್ನೂ ಬಳಸಿ ಕನ್ನಡ ಕಾವ್ಯಕನ್ನಿಕೆಯನ್ನು ನೈಸರ್ಗಿಕ ಸೌಂದ ರ್ಯದಿಂದ ಶೋಭಿಸುವಂತೆ ಮಾಡಿದರು. ಇವರ ಹೃದಯಗಳೇ ಕಾವ್ಯಝರಿಗಳಾಗಿ ಹರಿದು ನಿಂತವು. ಈ ದೃಷ್ಟಿಯಿಂದ ವಿಚಾರಿಸಿದರೆ ಇವರು ಕನ್ನಡತಿಯ ಹೊಟ್ಟೆಯ ಮಕ್ಕಳಂತಿಹರು. ಇಲ್ಲವೇ ಪ್ರಕೃ ತಿಯೇ ಆಗಿರುವರು ಎಂದು ಹೇಳಿದರೆ ತಪ್ಪಾಗಲಾರದು. ಈ ಕಾರಣ ದಿಂದ ಇವರು ಕನ್ನಡತಿಯ ಸ್ವತಂತ್ರ ಜೀವನಕ್ಕೂ-ಸ್ವರೂಪಸೌಂದರ್ಯ ಕ್ಕೂ ಉಳಿದವರಿಗಿಂತಲೂ ಹೆಚ್ಚುಹೆಚ್ಚಾಗಿ ಕೆಲಸ ಮಾಡಿದರು; ಕೃತ ಕೃತ್ಯರಾದರು. ಇಂತಹ ಇವರ ವೈಶಿಷ್ಟ್ಯವನ್ನು ಕಂಡುಂಡೇ ಬಸವ ಪುರಾಣದ ಮಲ್ಲಣಾರ್ಯರು ತಮ್ಮ ಭಾವಚಿಂತಾರತ್ನವೆಂಬ ಗ್ರಂಥ ದಲ್ಲಿ —

> "......... ಶಿವಭಕ್ತರೆಂದೆನಿಪ ಕವಿಗಳು,
> ದುರ್ಜನವ್ರಾತಘೂಕ ರವಿಗಳು
> ಶಿವನ ಕಿವಿವಾಯ್ಗೆ ನೆರೆಸವಿಗಳು ॥"

ಎಂದು ಒಳ್ಳೇ ಹೃದಯಂಗಮವಾಗಿ ಶಿವ ಕವಿಗಳನ್ನು ಬಣ್ಣಿಸಿದ್ದಾರೆ.

ಇತಂಹ ವೀರಶೈವ ಕವಿಗಳಲ್ಲಿ ಬಸವಣ್ಣ, ಹರಿಹರ, ರಾಘವಾಂಕ ನಿಜಗುಣ ಶಿವಯೋಗಿ, ಸರ್ವಜ್ಞ, ಮರಿತೋಂಟದಾರ್ಯ ಮೊದಲಾದ ವರು ಅಗ್ರಗಣ್ಯರು. ಇವರು ಕನ್ನಡಕ್ಕೆ ಕೊಟ್ಟ ಪೊಸಕಲೆಗಳಲ್ಲಿ ವಚನ, ರಗಳೆ, ಷಟ್ಪದಿ, ತ್ರಿಪದಿ, ಶತಕ, ಸಾಂಗತ್ಯ, ಕೈವಲ್ಯ, ಕೋಶ ಮೊದ ಲಾಗಿ ಹಲವು ಒಗೆಯಾಗಿವೆ. ಈ ಸಾಹಿತ್ಯದಿಂದಲೇ ಇಂದು ಕನ್ನ

ಡತಿಯು ಸ್ವತಂತ್ರಳಾಗಿ ಪರಿಗಣಿಸಲರ್ಹಳಾಗಿದ್ದಾಳೆ. ಶಿಶುಗಳಿಗೂ ಸಹ ತನ್ನ ಸವಿದನಿಯ ಹಾಲನ್ನು ನೀಡುವ ಕರುಣಾಮೂರ್ತಿಯಾಗಿದ್ದಾಳೆ. ಪಶುಗಾಯಿಗಳಿಗೂ ತನ್ನ ರುಚಿಯನ್ನು ಹಚ್ಚಿ ಅವರ ಅವಿದ್ಯೆಯ ರೋಗವನ್ನು ಹರಿವ ವೈದ್ಯಗಾರಳಾಗಿದ್ದಾಳೆ. ನಾಸ್ತಿಕರಿಗೆ ಅನುಭವದ ಆಳವಿಚಾರವನ್ನು ಅರುಹಿ ಆಸ್ತಿಕರನ್ನಾಗಿ ಮಾಡುವ ಆಧ್ಯಾತ್ಮಿಕ ಯೋಗಿಣಿಯಾಗಿದ್ದಾಳೆ. ಅರಸಿಕರಿಗೆ ರಸವನ್ನು ನೀಡುವ ರಾಗಮೂರ್ತಿಯಾಗಿದ್ದಾಳೆ. ಒಟ್ಟಿನಲ್ಲಿ ತನ್ನ ಸ್ವತಂತ್ರವಾದ ಈ ವೈವಿಧ್ಯದಿಂದ ಎಲ್ಲರನ್ನೂ ಎಲ್ಲರೀತಿಯಿಂದಲೂ ತಣಿಸಲರ್ಹಳಾಗಿದ್ದಾಳೆ. ಈ ವಿಲಕ್ಷಣವಾದ ವೈಶಿಷ್ಟ್ಯವನ್ನು ತಂದುಕೊಟ್ಟ ಆ ಮಹಾನುಭಾವರ ಒಂದೊಂದು ಕೃತಿಯನ್ನು ಕುರಿತು ಒಂದೊಂದು ಮಾತನ್ನು ಹೇಳಿ ಬರಹವನ್ನು ಪೂರೈಸುವೆನು.

೧. ಬಸವಣ್ಣ :— ಈತನು ಕೊಟ್ಟ ಸಂಪತ್ತು ವಚನ ವಾಙ್ಮಯ. ಇದು ಅಪಾರವಾದುದು; ಅದ್ವಿತೀಯವಾದುದು. ಈ ವಾಙ್ಮಯವು ಅನುಭವಪೂರಿತವೂ ಹೃದಯಪ್ರೇರಿತವೂ ಬುದ್ಧಿಪ್ರಚೋದಕವೂ ಆಗಿದೆ. ಇದರ ನೆಲೆಬೆಲೆಗಳು ಇಂದಿನ ಸಾಹಿತ್ಯದಲ್ಲಿ ಯಾವ ಸ್ಥಾನದಲ್ಲಿವೆಯೆಂಬುದು ಎಲ್ಲರಿಗೂ ಗೊತ್ತಿದ್ದ ಮಾತಾಗಿದೆ. ಹಲವುಮಂದಿ ಉದ್ದಾಮ ಸಾಹಿತಿಗಳು ತಮಗಾದ ಆನಂದ ಪ್ರಕಟನೆಗಾಗಿ– ಈ ವಾಙ್ಮಯಕ್ಕೆ "ಕನ್ನಡ ಉಪನಿಷತ್ತುಗಳು" ಎಂದು ಹೊಗಳಿದ್ದಾರೆ. "ರತ್ನದ ತುಂಡುಗಳು" ಎಂದು ಕರೆದಿದ್ದಾರೆ. ನೈಸರ್ಗಿಕ ನಿಲುವುಳ್ಳ "ಋಷಿಕನ್ನೆ" ಯೆಂದು ಬಣ್ಣಿಸಿದ್ದಾರೆ. ಕನ್ನಡ ಸಾಹಿತ್ಯ ಚಕ್ರದ "ಶ್ವೇತ ಛತ್ರ" ಎಂದು ಸ್ತುತಿಸಿದ್ದಾರೆ. ಇಂತಹ ಸುಂದರ ವಚನ ವಾಙ್ಮಯವನ್ನು —

"ನೋಡದ ಕಣ್ಗಳೇಕೆ? ಸಲೆಕೇಳದಕರ್ಣಮದೇಕೆ? ಭಕ್ತಿಯಿಂ ।
ಪಾಡದ ಬಾಯದೇಕೆ? ಪೆಸಗೊಳ್ಳದ ಜಿಹ್ವೆಯದೇಕೆ? ಲೇಖನಂ ॥
ತೀಡದ ಕೈಗಳೇಕೆ? ನೆರೆ ಶೋಧಿಸದಂಗಮದೇಕೆ? ಓದಿಯ- ।
ಳ್ಕಾಡದ ಚಿತ್ತವೇಕೆ? ಬಸವಣ್ಣನ ಬಿಂಕಿನ ಭಾಷೆಯಳ್ಕರಿಂ ॥"

ಎಂದು ಪಂಪಾಶತಕದಲ್ಲಿ ಹರಿದ ಹರಿಹರನ ಹೃದಯದ ಝರಿಯನ್ನು ಇಂತು ಮಾರ್ಪಡಿಸಿಕೊಳ್ಳದೆ ಮನಸ್ಸು ಶಾಂತವಾಗದು. ಒಟ್ಟಿನಲ್ಲಿ ಈತನು ಮುಮುಕ್ಷುಗಳಾದ ಭಕ್ತರಿಗೆ ಭಕ್ತಿಯ ಭಂಡಾರವನ್ನುಕೊಟ್ಟು (ಭಕ್ತಿ ಭಂಡಾರಿ) ಯಾದಂತೆ ಕನ್ನಡಿಗರಿಗೆ ಅಮೋಘವಾದ ಅಸದೃಶ

ವಾದ ವಚನ ವಾಙ್ಮಯವನ್ನಿತ್ತು "ವಚನ ಭಂಡಾರಿ" ಯೂ ಆಗಿದ್ದಾನೆ. ಈತನ ಅನುಯಾಯಿಗಳು ಅಲ್ಲಮ ಪ್ರಭು, ಚನ್ನಬಸವಣ್ಣ, ಅಜಗಣ್ಣ, ಸಿದ್ಧರಾಮ, ಮಾಚಿದೇವ, ಅಕ್ಕಮಹಾದೇವಿ, ಮಹಾದೇವಿ, ಲಿಂಗಮ್ಮ, ಕೊಂಟದಾರ್ಯ, ಸ್ವತಂತ್ರ ಸಿದ್ಧಲಿಂಗೇಶ್ವರ ಇವರೇ ಮೊದಲಾದ ೨೦೦-೩೦೦ ಜನ ಶಿವಶರಣ- ಶರಣೆಯರಿರುವರು.

೨. ಹರಿಹರದೇವನು :— ಈ ಕ್ರಾಂತಿಕಾರಕ ಕವಿಯು ಕೊಟ್ಟ ಸಿರಿಯು ಸರಳ ಸುಂದರ ರಗಳೆಗಳು. ಇವು ಈಗಿನ ಸಾಹಿತ್ಯಕ್ಕೆ ಮಾಲಿಕದಂತಿವೆ. ಈತನ ಈ ಕ್ರಾಂತಿಯಾದರೂ ಅಸದೃಶವಾಗಿದೆ, ಅಪಾರವಾಗಿದೆ. ಇದು ಜನಸಾಮಾನ್ಯಕ್ಕೂ ಸಂತೋಷದಾಯಕವಾಗಿದೆ. ಈ ರಗಳೆಯ ವಿಚಾರವಾಗಿ ಒಂದೆರಡು ಮಾತುಗಳಲ್ಲಿ ಹೇಳಿ ಮುಗಿಸಲು ಸಾಧ್ಯವಿಲ್ಲ. ಆದರೂ ಹೇಳಬೇಕಂದರೆ ಈತನ ಕಾವ್ಯ ತರಂಗಿಣಿಯು ತುಂಬಿ ತುಳುಕುತ್ತ ತೊರೆ–ನೊರೆಗಳಿಂದ ಇಸಿದನಿಗೈಯುತ್ತ ಹರಿದಿದೆ. ಅದರಲ್ಲಿ ಈಜುವವರ ಹೃದಯ ಕೂಪಗಳಲ್ಲಿ ಅದು ಮಡುಗಟ್ಟಿ ನಿಲ್ಲುತ್ತದೆ.

ಅದರಿಂದ ಚಿತ್ತಭೂಮಿಯಲ್ಲಿ ಪೊಚ್ಚ ಪೊಸ ಹಸರು ಹುಟ್ಟುತ್ತದೆ. ಆ ಹಸುರಿನಲ್ಲಿ ಪೊಸಕಲೆಯೆಂಬ ಕುಸುಮವರಳಿ ತನ್ನ ಪೊಸ ಗಂಪನು ಬೀರುವದು. ಆಗುಂಟಾಗುವ ಆ ಸುಖರಸದಲ್ಲಿ ಎಲ್ಲರೂ ಮೈಮರೆವರು. ಆದುದರಿಂದ ಇವನು ಕೇವಲ 'ಕರಣಿಕರ ಕುಲತಿಲಕ' ನಾಗದೆ "ಕವಿ ಕುಲತಿಲಕ" ನೂ ಆದನು. ಆಗ ಇನ್ನಿತರ ಕವಿಗಳು ಈತನಿಗೆ ಆಡಿದ 'ರಗಳೆಯ ಕವಿ' ಎಂಬ ಕಟಕಿಯು, ಈಗ ಅದೇ ಕೀರ್ತಿಯನ್ನು ತಂದು ಕೊಡುವ ಬಿರುದಿನ ಕುರುಹಾಗಿ ಪರಿಣಮಿಸಿದೆ. ಹೀಗೆ ಕಟಕಿಯಿಂದ ಆಡಿದ ಮಾತೇ ಕೀರ್ತಿವಾಚಕವಾಗಿ ಪರಿಣಮಿಸಿದ್ದು ಈ ಕವಿಯ ಕಾವ್ಯ ಮಹತ್ವವನ್ನು ವ್ಯಕ್ತ ಮಾಡುವದಿಲ್ಲವೆ? ಈ ಕವಿಯನ್ನನುಸರಿಸಿ ಸೋಮನಾಥ, ಶಂಕರದೇವ, ಸ್ವತಂತ್ರ ಸಿದ್ಧಲಿಂಗೇಶ್ವರ ಮೊದಲಾದವರು ರಗಳೆಗಳನ್ನು ಬರೆದು ತಮ್ಮ ಸಾಹಿತ್ಯ ಸೇವೆಯನ್ನು ಸಲ್ಲಿಸಿದ್ದಾರೆ.

೩. ರಾಘವಾಂಕ :—ಇವನು ಮೊಟ್ಟ ಮೊದಲು ಷಟ್ಪದಿಯಲ್ಲಿ ಸ್ವತಂತ್ರ ಗ್ರಂಥವನ್ನು ಬರೆದು ಕನ್ನಡತಿಯನ್ನು ಸ್ವತಂತ್ರಮಾಡಿ ಸಿಂಗರಿಸಿದ ಉಭಯಕವಿ ಕಮಲ ರವಿಯು. ಈತನ ಕಾವ್ಯರೂಪ ಷಟ್ಪದಿ

ಗಳು ( ಭ್ರಮರಗಳು ) ಗಾಯಕರು, ಗಮಕಿಗಳು, ಕವಿಗಳು, ಕಲಾ ವಿದರು, ವಾದಿಗಳು, ವಾಗ್ಮಿಗಳು, ರಸಾವೇಶಿಗಳೆಂಬ ಕುಸುಮಗಳಿಗೆ ರಗಿ ಅವರ ಹೃದಯಾಂತರಾಳಗಳಲ್ಲಿ ಮುಳುಗಿ ಅವರನ್ನೇ ತಲೆದೂಗಿ ಸುತ್ತವೆ. ಈತನ ಈ ರಾಜಮಾರ್ಗವನ್ನು ಉದ್ದಾಮ ಕವಿಗಳಾದ ಚಾಮರಸ, ವಿರೂಪಾಕ್ಷ ಪಂಡಿತ, ಭೀಮಕವಿ, ಗುಬ್ಬಿಯ ಮಲ್ಲ ಣಾರ್ಯ, ಪ್ರಾಸ ಭೂಷಣ ( ಷಮ್ಮಿಶೆಟ್ಟಿ) ಮೊದಲಾದ ಅನಂತ ಕವಿ ಗಳೂ ಸಹ ಹಿಂಬಾಲಿಸಿ ನಡೆದಿದ್ದಾರೆ.

೪. ನಿಜಗುಣರು :—ಇವರು ಕನ್ನಡದೇವಿಗೆ ಕೊಟ್ಟ ಸಾಹಿತ್ಯವು ಅಪೂರ್ವವಾದುದು; ಅಗಾಧವಾದುದು. ವೇದಾಂತ ಮತ್ತು ಯೋಗ ವಿಷಯಗಳನ್ನು ಮೊದಲು ಕನ್ನಡದಲ್ಲಿ ಬರೆದು ಕನ್ನಡತಿಯನ್ನು ವೇದಾಂ ತಿನಿಯನ್ನೂ ಯೋಗಿಣಿಯನ್ನೂ ಮಾಡಿದ ಶ್ರೇಯಸ್ಸು ಸಂಪೂರ್ಣ ಇವ ರದೇ. ಕೈವಲ್ಯಗಳ ಕ್ರಾಂತಿಯು ಕನ್ನಡಿತಿಯ ಕಲೆಗಳಲ್ಲಿ ಒಳ್ಳೆ ಬಗಿ ಲಾದ ಕ್ರಾಂತಿಯು. ಇವಗಳಲ್ಲಿ ಭಾವ, ರಾಗ, ಸಾಹಿತ್ಯ, ಸರ್ವವು ಸೇರಿದೆ; ಸುಂದರವಾಗಿದೆ. ಇವನ್ನು ರಚಿಸಿ ಕನ್ನಡಿತಿಗೆ ನತ್ತನ್ನು ಕೊಟ್ಟಂ ತಾಗಿದೆ. ಇತಂಹ ಸಾಹಿತ್ಯದ ಆದ್ಯ ಪ್ರವರ್ತಕನೂ ಈತನೇ ಎಂದು ಈಗಿನ ಮಟ್ಟಿಗೆ ಹೇಳಬಹುದು. ಈ ಹೆದ್ದಾರಿಯಲ್ಲಿ ಸರ್ಪ ಭೂಷಣ ಶಿವಯೋಗಿ, ಮುಪ್ಪಿನ ಷಡಕ್ಷರಿ, ಮಹಂತ ಶಿವಯೋಗಿ, ಘನಮಠಾರ್ಯ ಮೊದಲಾದ ಋಷಿಕವಿಗಳು ಸ್ವಚ್ಛಂದವಾಗಿ ಸಂಚರಿಸಿದ್ದಾರೆ.

೫. ಸರ್ವಜ್ಞ:— ಈ ಕವಿಯ ಮತ್ತು ಈತನ ಕಾವ್ಯದ ಪರಿ ಚಯದ ಅವಶ್ಯವೇ ಇಲ್ಲ. ಈ ಗಂಡುಗವಿಯು ಕನ್ನಡತಿಗೆ ತನ್ನ ತ್ರಿಪದಿಯ ಸುಂದರ ಉಡುಪನ್ನು ಉಡಿಸಿ ಕೈವಿಡಿದು ಕರೆದೊಯ್ದು ಅವಳಿಗೆ ಹಳ್ಳಿಪಳ್ಳಿಗಳ ಪರಿಚಯ ಮಾಡಿಕೊಟ್ಟ ಮಹಾಕವಿಯು. ಈತನ ಈ ಅಪಾರವಾದ ರಾಜಮಾರ್ಗವನ್ನು ಇನ್ನಿತರ ಕವಿಗಳು ಅನುಸರಿಸಿದರೆಂದು ಹೇಳಿ ಈತನಿಗೆ ಒಂದು ಪ್ರಾಶಸ್ತ್ಯವನ್ನು ತಂದು ಕೊಡುವದು ಅಷ್ಟೊಂದು ಸಮಂಜಸವಲ್ಲೆಂದು ನನ್ನ ಭಾವನೆ. ಆದ ಕಾರಣ ಇಲ್ಲಿ ಉಳಿದ ತ್ರಿಪದಿಗಾರರ ಹೆಸರನ್ನೆತ್ತದೆ ಬಿಟ್ಟಿರುವೆನು.

೬. ಮರಿತೋಂಟದಾರ್ಯ:— ಶಿವಕವಿ ತಿಲಕರಾದ ಇವರು ಸಂಸ್ಕೃತದಲ್ಲಿ ವೀರಶೈವಾನಂದ ಚಂದ್ರಿಕೆ, ತರ್ಕಚಂದ್ರಿಕೆ, ಷಟ್‌ಸ್ಥಲ

# ವರದಾನಿಗುಡ್ಡವ್ವೆಯು ಚರಿತ್ರೆ.

ವರದಾನಿಗುಡ್ಡವ್ವೆಯ ಚರಿತ್ರೆಯು ಶಿವಾನುಭವ ಪತ್ರಿಕೆಯ ೧ನೇ ಸಂಪುಟ ೩ನೇ ಸಂಚಿಕೆಯಲ್ಲಿ ೧೯೨೭ನೇ ಇಸವಿಯಲ್ಲಿ ಮೊದಲು ಪ್ರಕಟಿಸಲ್ಪಟ್ಟಿತು. ಆ ಚರಿತ್ರೆಯೊಡನೆ ವೀರಶೈವ ಮಹಾ ಕವಿಯೂ ವಿಜಯನಗರದ ಅರಸುಗಳ ಸೇನಾಪತಿಯೂ ಆದ ಲಕ್ಕಣ್ಣದಂಡೇಶನ ಕಾವ್ಯವೂ ಪ್ರಸಿದ್ಧಿಸಲ್ಪಟ್ಟಿತು. ಈ ಕಾವ್ಯವು ವಾರ್ಧಿಕ ಷಟ್ಪದಿಯಾಗಿದೆ. ಈ ಚರಿತ್ರೆಯಲ್ಲಿ ವರದಾನಿಗುಡ್ಡ [illegible] ಲಂಪುರವೆಂಬ ಗ್ರಾಮದಲ್ಲಿ ಕಿತ್ತುಹಾಕಲ್ಪಟ್ಟ ಬ್ರಹ್ಮೇಶ್ವರ ಲಿಂಗವನ್ನು ಪುನಃ ಸ್ಥಾಪಿಸಿದ್ದರ ಕಥೆಯು ಈ ಕವಿಯಿಂದ ವರ್ಣಿಸಲ್ಪಟ್ಟಿದೆ. ಆದರೆ ಅವನು ರಚಿಸಿದ ಈ ಕೃತಿಯಲ್ಲಿ ಈ ಶಿವಶರಣೆಯ ಚರಿತ್ರಾಂಶಗಳು ಹೆಚ್ಚಿಗೆ ದೊರೆಯುವದಿಲ್ಲ. ಆಕೆಯು ಶೂರ ಸ್ತ್ರೀಯಳೂ ಶಿವಶರಣೆಯೂ ಆಗಿದ್ದಳೆಂದು ಮಾತ್ರ ಈ ಕಾವ್ಯದಿಂದ ತಿಳಿದುಬರುತ್ತಿದೆ.

ಆದರೆ ನಮಗೆ ಈಚೆಗೆ ದೊರೆದ ಒಂದು ಗ್ರಂಥದಲ್ಲಿ ಈಕೆಯ ಅನೇಕ ವಿಷಯಗಳು ನಮಗೆ ಗೊತ್ತಾಗುತ್ತಿದ್ದು ಅವುಗಳನ್ನು ನಾವು ಈ ಲೇಖದಲ್ಲಿ ವಿವರಿಸುತ್ತೇವೆ. ಈ ಕಾವ್ಯವನ್ನು ರಚಿಸಿದವನು ವಿಜಾಪುರ ಪಟ್ಟಣದ ಉತ್ತರದಲ್ಲಿ ೨೦ ಮೈಲು ದೂರವಾಗಿರುವ ಹೊರ್ತಿ ಎಂಬ ಗ್ರಾಮದವನು. ಅವನು ತನ್ನ ಹೆಸರನ್ನು ಹೇಳುವಲ್ಲಿ "ಶ್ರೀಗಿರಿಯ ಸಿದ್ಧಾಪುರ। ಹೋರುತಿ ವಾಸ ಸಿದ್ಧೇಶನು। ಶಿವ ಚನ್ನಬಸವನ ಹೃದಯ ಕಮಲದೊಳ್ ನೀನಿರ್ದು ನುಡಿಸಿದರೆ। ನುಡಿದೆನಲ್ಲದೆ ಲಿಂಗಾಂಗಸವು ರಸದ ಪದಗಳನು॥ ಎಂದು ತನ್ನ ಹೆಸರನ್ನು ಹೇಳಿಕೊಂಡಿರುವನು. ಈ ಗ್ರಂಥದಲ್ಲಿ ಅಲ್ಲಲ್ಲಿ ಗದ್ಯಗಳೂ ಪದ್ಯಗಳೂ ಇವೆ. ಅದು ಉತ್ತಮ ತರಗತಿಯ ಗ್ರಂಥವಲ್ಲದಿದ್ದರೂ ಅದರಲ್ಲಿ ಈ ಪ್ರಸಿದ್ಧ ಶಿವಶರಣೆಯ ಚರಿತ್ರೆಯಲ್ಲಿ ಈವರೆಗೆ ಗೊತ್ತಿಲ್ಲದ ಅನೇಕ ಸಂಗತಿಗಳು ಬಂದಿವೆ. ಲಕ್ಕಣ್ಣದಂಡೇಶನು ವಿಜಯನಗರದಲ್ಲಿದ್ದುದರಿಂದ ಮುಸಲ್ಮಾನರ ಆಳಿಕೆಗೊಳಪಟ್ಟ ಪ್ರದೇಶಗಳಲ್ಲಿ ಬಂದು ಇಲ್ಲಿದ್ದ ಗುಡ್ಡಾಪುರ ಮತ್ತು ಅವರ ಸನಿಯದ ಗ್ರಾಮಗಳಲ್ಲಿ ಗೊತ್ತಾಗಬಹುದಾದ ವರದಾನಿಗುಡ್ಡವ್ವೆಯ ಚರಿತ್ರೆಯಲ್ಲಿಯ ಅಂಶಗಳು ಅವನಿಗೆ ತಿಳಿಯದೆ ಇದ್ದಿರಬಹುದು. ಆದುದರಿಂದ ಅವನ ವರ್ಣ

ನೆಗಳಲ್ಲಿ ಗುಡ್ಡಮ್ಮೆಯ ಚರಿತ್ರೆಯಲ್ಲಿಯ ಅನೇಕ ವಿಷಯಗಳು ಬಾರದೆ ಇದ್ದರೆ, ಆದರಲ್ಲಿ ಏನೂ ಆಶ್ಚರ್ಯವಿಲ್ಲ.

## ತರ್ದವಾಡಿಯ ನಾಡು.

ವರದಾನಿಗುಡ್ಡಮ್ಮೆಯು ಬಸವೇಶ್ವರನ ಕಾಲದಲ್ಲಿ ಇದ್ದಿರಬೇಕೆಂದು ನ್ರು ಮೊದಲು ಊಹಿಸಿದ್ದು ಈ ಚರಿತ್ರೆಯಿಂದ ಹೆಚ್ಚಿಗೆ ದೃಢಪಡು ಆಕೆಯ ಪವಿತ್ರ ಸ್ಥಾನವು ವಿಜಾಪುರ ಪಟ್ಟಣದ ವಾಯುವ್ಯಕ್ಕೆ ೩೦ ಮೈಲುಗಳ ಮೇಲಿರುವ ಗುಡ್ಡಾಪುರವಿರುತ್ತದೆ. ಈ ಭಾಗವು ಈಗ ಅಪ್ರಸಿದ್ಧವಾಗಿದ್ದರೂ ಬಸವೇಶ್ವರನ ಕಾಲದಲ್ಲಿ ಬಹು ಮುಂದುವರಿದ ನಾಡಾಗಿತ್ತು. ಈ ಭಾಗದಲ್ಲಿ ಅನೇಕ ಜೈನ, ವೀರಶೈವ, ಬ್ರಾಹ್ಮಣ ಕವಿಗಳು ಮೊದಲಿನಿಂದಲೂ ಆಗುತ್ತಬಂದಿದ್ದಾರೆ. ಈ ಭಾಗದ ರಾಜಧಾನಿಯು ಭೀಮಾತೀರದಲ್ಲಿದ್ದ ತರ್ದೇವಾಡಿಯು. ಇಲ್ಲಿ ಬಿಜ್ಜಳನ ತಂದೆಯಾದ ಪೇರ್ಮಾಡಿರಾಯನು ರಾಜ್ಯವಾಳುತ್ತಿದ್ದನು. ರೇವಣಸಿದ್ಧೇಶ್ವರನು ಬಹು ದಿವಸ ವಾಸಮಾಡಿದ ಮಂಗಳವಾಡವು ಇಲ್ಲಿಂದ ೨೫ ಮೈಲುಗಳ ಮೇಲೆ ಇದೆ. ವಚನಕಾರನೂ ಮಹಾ ಶಿವಶರಣನೂ ಆದ ಹಾವಿನಹಾಳ ಕಲ್ಲಯ್ಯನ ಗ್ರಾಮವು ಇಲ್ಲಿಂದ ೨೪ ಮೈಲು ದೂರ ಇದೆ. ಸಿದ್ಧರಾಮನ ಸೊನ್ನಲಿಗೆಯೂ ಅಮುಗಿದೇವನ ಪುಳುಜೆ ಗ್ರಾಮವೂ ಈ ಪ್ರದೇಶದಲ್ಲಿಯೇ ನೆಲಸಿರುತ್ತವೆ. ಆದ್ದರಿಂದ ವರದಾನಿಗುಡ್ಡಮ್ಮೆಯು ಪ್ರಸಿದ್ಧಿಗೆ ಬಂದ ಈ ಭಾಗವು ಬಸವೇಶ್ವರನ ಕಾಲದಲ್ಲಿ ಕ್ರಾಂತಿಯನ್ನೆಸಗಿದ ಮಹಾಪುರುಷರ ಆವಾಸ ಭೂಮಿಯಾಗಿತ್ತೆಂದು ಹೇಳಿದರೆ ಆವ ಪ್ರತ್ಯವಾಯವೂ ಇಲ್ಲ.

ಲಕ್ಕಣ್ಣದಂಡೇಶನು ತನ್ನ ಚರಿತ್ರೆಯಲ್ಲಿ ಗುಡ್ಡಮ್ಮೆಯು ಪಾರ್ವತಿಯ ಅವತಾರವೆಂದು ಹೇಳಿ ಆಕೆಯು ಗುಡ್ಡಾಪುರದಲ್ಲಿದ್ದ ಸೋಮೇಶಲಿಂಗ ಭಕ್ತರ ಗರ್ಭದಲ್ಲಿ ಜನಿಸಿದಳೆಂದು ಹೇಳಿರುವನು. ಆದರೆ ಆಕೆಯ ತಾಯಿ ತಂದೆಗಳ ಹೆಸರನ್ನು ಅವನು ಹೇಳಿಲ್ಲ. ಆದರೆ ಈ ಎಲ್ಲ ವಿಷಯಗಳು ಈ ಚರಿತ್ರೆಯಲ್ಲಿ ವಿಸ್ತಾರವಾಗಿ ಹೇಳಲ್ಪಟ್ಟಿವೆ. ಮತ್ತು ಅವು ಸ್ಥಾನಿಕ ದಂತಕಥೆಗಳಿಂದಲೂ ಪುರಾತನ ಕುರುಹುಗಳಿಂದಲೂ ಬಲಪಡುತ್ತವೆ.

## ಗುಡ್ಡಮ್ಮಯ ಜನ್ಮ ಮತ್ತು ಬಾಲ್ಯ.

ಗುಡ್ಡಮ್ಮಯ ತಾಯಿಯ ಹೆಸರು ಶಿರಸಮ್ಮ ಮತ್ತು ತಂದೆಯ ಹೆಸರು ಅನಂತರಾಯ. ಅವರು ಪಾಂಚಾಳರ ಕಾಯಕವನ್ನು ಮಾಡುತ್ತ ಉಮರಾಣಿ ಎಂಬ ಗ್ರಾಮದಲ್ಲಿ ಇರುತ್ತಿದ್ದರು. ಉಮರಾಣಿ ಗ್ರಾಮವು ವಿಜಾಪುರ ಜಿಲ್ಲಾ ಇಂಡೀ ತಾಲೂಕಿನಲ್ಲಿ ಭೀಮಾ ತೀರದ ಒಂದು ಗ್ರಾಮವಾಗಿದೆ. ಹಾವಿನಹಾಳ ಗ್ರಾಮದ ಕಲ್ಲಯ್ಯನೂ ಕೂಡ ಇವರಂತೆಯೇ ಅಕ್ಕಸಾಲಿಗನಾಗಿದ್ದನು. ಉಭಯ ದಂಪತಿಗಳು ಶಿವಭಕ್ತಿಯುಳ್ಳವರಾಗಿ ಅಲ್ಲಿ ವಾಸಿಸುತ್ತಿದ್ದರು. ಅವರಿಗೆ ಮಕ್ಕಳಿಲ್ಲದ್ದರಿಂದ ಅವರು ಆ ಗ್ರಾಮದಲ್ಲಿಯ ವೀರ ಮಲ್ಲಯ್ಯನ ದೇವಾಲಯಕ್ಕೆ ಹೋಗಿ ನೋಂಪಿಯನ್ನು ಮಾಡುತ್ತಲಿದ್ದರು. ಮುಂದೆ ಪರಮಾತ್ಮನು ಅವರಿಗೆ ಮೆಚ್ಚಿ ಶಿರಸಮ್ಮನ ಸ್ವಪ್ನದಲ್ಲಿ ಬಂದು ನಿನಗೆ ಒಬ್ಬ ಪ್ರಸಿದ್ಧಳಾದ ಪುತ್ರಿಯು ಹುಟ್ಟುವಳು ಎಂದು ಹೇಳಿ ಬಯಲಾದನು.

ಮುಂದೆ ಶಿರಸಮ್ಮನು ಗರ್ಭವನ್ನು ತಾಳಿ ೯ ತಿಂಗಳಾದ ಮೇಲೆ ಒಂದು ದಿವಸ ನಿದ್ರೆಗೈದಿರಲು, ೭ ವರ್ಷಗಳ ಬಾಲವೇಷ ತಾಳಿದ ಶಿಸುವು ಆಕೆಯ ಕರ್ಣದಿಂದ ಉದಯವಾಗುವದು. ಆಗ ಪಟ್ಟಣಿಗರು ಇದು ಚೋದ್ಯವೆಂದು ವಿಸ್ಮಯಬಟ್ಟು ಆ ಶಿಸುವಿಗೆ ಲಿಂಗಮ್ಮನೆಂದು ನಾಮಕರಣಮಾಡಿದರು. ಶಿಸುವು ಅಯೋನಿಜವೆಂದು ಹೇಳಲು ಹೀಗೆ ಈ ಕಥೆಯನ್ನು ವಿವರಿಸಿರುವರು ಸಹಜವಾಗಿದೆ. ಮತ್ತು ವರದಾನಿಗುಡ್ಡಮ್ಮಯ ಮೊದಲಿನ ಹೆಸರು ಲಿಂಗಮ್ಮನೆಂದಿತ್ತೆಂಬದನ್ನೂ ನಾವು ಲಕ್ಷಿಸತಕ್ಕದ್ದು.

## ಕಲ್ಯಾಣಕ್ಕೆ ಆಗಮನಮಾಡಿದ್ದು.

ಹೀಗೆ ಲಿಂಗಮ್ಮನು ಉಮರಾಣಿ ಗ್ರಾಮದಲ್ಲಿ ಇರುತ್ತಿರಲು ಇತ್ತ ಬಸವೇಶ್ವರನು ಕಲ್ಯಾಣ ಪಟ್ಟಣದಲ್ಲಿ ಮಂತ್ರಿಪದವನ್ನು ವಹಿಸಿ ಶಿವಾನುಭವದ ಮಾರ್ಗವನ್ನು ಎತ್ತಲೂ ಪಸರಿಸುವ ಕಾರ್ಯದಲ್ಲಿ ತೊಡಗಿದ್ದನು. ಇದನ್ನು ತಿಳಿದು ಎಲ್ಲ ಪ್ರಾಂತಗಳಿಂದಲೂ ಬಹು ಜನ ಶಿವಶರಣರು ಅವನಲ್ಲಿಗೆ ಬಂದು ಕಲ್ಯಾಣದಲ್ಲಿ ನಿಂತು ಶಿವಾನುಭವ ಗೋಷ್ಠಿಯ ಮಗ್ನರಾಗಿರುತ್ತಿದ್ದರೆಂಬದು ಪ್ರಸಿದ್ಧವೇ ಇದೆ. ಇದು ಲಿಂಗಮ್ಮನಿಗೆ ತಿಳಿದ ಬಳಿಕ ಆಕೆಯು ತನ್ನ ತಾಯಿತಂದೆಗಳಿಗೆ ಏನೂ

ತಿಳಿಸದೆ ತನ್ನ ಗ್ರಾಮದಿಂದ ಹೊರಟು ಕಲ್ಯಾಣಕ್ಕೆ ಬಂದುಬಿಟ್ಟಳು. ಕವಿಯು ಈ ವಿಷಯವನ್ನು ಕುರಿತು ಮಾಡಿದ ವರ್ಣನೆ ಏನಂದರೆ:—

"ಉಮರಾಣಿ ಗ್ರಾಮ ಮಧ್ಯದಿ ಪಾಂಚಾಳ ಯುಕ್ತ ಶಿರಸಮ್ಮನ ಮಗಳಾದ ಶಿವಶರಣಿ ಲಿಂಗಮ್ಮ ಮಹದೇವಿ ಜನಸಮೂಹ ನೇತ್ರಕ್ಕೆ ಮೇಘಮಿಂಚಿನಂತೆ ಹೊಳಪಿನಲಿ ಗುಪ್ತವಾದಳು. ಮಾತಾಪಿತೃಗಳಿಗೆ ಬೈಲಾಗೆ ದುಃಖ ಶರಧಿಯೊಳು ಮುಳುಗೆ ಮರುಳರಂತೆ ದಿವಸ ಕಳೆವರು. ಶರಣಿ ಲಿಂಗಮ್ಮ ಕಲ್ಯಾಣ ಬಸವರಾಜನ ದರ್ಶನಕ್ಕೆ ಪ್ರಯಾಣ ಒದಗುವಳು. ಮಾತಾಪಿತರ ದುಃಖವ ಆತ್ಮನಲ್ಲಿ ತಿಳಿದು ಅನಂತರಾಯನ ಸ್ವಪ್ನದಲಿ ಬಂದು ಮೊದಲಿನ ಹೊಳಪ ತೋರಿಸಿ ನೀವು ಪುಣ್ಯಶಾಲಿಗಳು, ನನ್ನ ವಯಸ್ಸು ಆದಂತೆ ರೂಪು ಶಿಲಾಗೊಂಬೆಯ ರಚಿಸು, ನಾನು ಕಲ್ಯಾಣ ಗಣಾಧೀಶ್ವರರು ಪುರಾತನರು ಶರಣಿ ಶರಣರು ಪಟ್ಟಣ ಸಮೂಹಕ್ಕೆ ಅನ್ನಪ್ರಸಾದ ತೃಪ್ತಿಬಡಿಸಿ ನೀಲಮ್ಮ ಬಸವಣ್ಣನ ದರ್ಶನ ತೆಗೆದುಕೊಂಡು ಮುಂದಿನ ಕಾಲಜ್ಞಾನ ಸೂಚನಾರ್ಥ ಉಪದೇಶಹೇಳಿ ಹೊರಟು, ಒಂದು ವತ್ಸರಕೆ ಬರುವೆನು. ಶಿಲಾಮೂರ್ತಿಯ ಜೋಪಾನ ಮಾಡಿರಿ. ದುಃಖವೇತಕ್ಕೆ? ವಚನ ಹಾಡುವದು ಆತ್ಮನಲಿ ಸೇರಿ ಎಚ್ಚರಾಗಿ, ಎಂದು ಬಯಲಾದಳು ಮಹಾದೇವಿ" ಎಂದು ವರ್ಣಿಸಿರುವನು.

ಮುಂದೆ ಕವಿಯು ಕಲ್ಯಾಣ ಪಟ್ಟಣದ ವರ್ಣನೆಯನ್ನು ಮಾಡಿರುವನು. ಅಲ್ಲಿರುವ ಉದ್ಯಾನವನಗಳು, ಪಕ್ಷಿಗಳು, ಕೊಳಗಳು, ಝೇಂಕರಿಸುವ ತುಂಬಿಗಳು, ಸುಂದರವಾದ ಅರಮನೆಗಳು, ಅಲ್ಲಿರುವ ಶಿವಭಕ್ತರ ಶಿವಪೂಜಾಸಂಭ್ರಮಗಳು, ಮುಂತಾದವವುಗಳನ್ನು ಲಿಂಗಮ್ಮನು ನೋಡುತ್ತ ಮಹಾದೇವಿ ಎಂಬ ಒಬ್ಬ ಅತ್ಯಂತ ದರಿದ್ರಳಾದವಳಲ್ಲಿ ಇರಹತ್ತುವಳು- ಲಿಂಗಮ್ಮನ ಈ ಸನ್ನಿಧಿಯಿಂದ ಆಕೆಯು ಅತ್ಯಂತ ಐಶ್ವರ್ಯವನ್ನು ಪಡೆಯುವಳು. ಆಗ ಆ ಬಡವಿಯು ಲಿಂಗಮ್ಮನ "ಪಿಡಿದು ಚರಣವ ಬಿಡಳು ಹೆಸರನು ನುಡಿದು ಹೇಳವ್ವ ನಿನ್ನ ತೊತ್ತಿಗೆ. ಪೊಡವಿದೈವದ ಆದಿಶರಣಮ್ಮ ತಾನೆಂದಳು. ಬಡವಿ ಎಂಬುದಕ್ಕೊಲಿದು ಬಂದೆನು. ಬಿಡದೆ ಪೂಜೆ ಮಾಳ್ಪುದು. ಕಲ್ಯಾಣ ಬಸವಪ್ಪನ ದರ್ಶನಕೆ ಹೋಗಬೇಕೆಂದು ಕಳುಹಿಸಿಕೊಂಡು ನಡೆದು ಮೌನದಲಿ ಲಿಂಗಮ್ಮ ಶರಣಿ ಬರುವ ಹಾದಿಯೊಳು ಮತ್ತೊಂದು ರೂಪವ ಧರಿಸಿ ನಡೆಗೊಂಡು" ಎಂದು ಕವಿಯು ಇಲ್ಲಿ ವರ್ಣಿಸಿರುವನು.

## ಶಿವಾನುಭವಮಂಟಪದಲ್ಲಿ ಪ್ರವೇಶ.

ತರುವಾಯ ಲಿಂಗಮ್ಮನು ಕಲ್ಯಾಣ ಪಟ್ಟಣದಲ್ಲಿ ಶಿವಾನುಭವ ಮಂಟಪದಲ್ಲಿ ಸೇರಿಕೊಂಡು ಅಲ್ಲಿ ನಡೆಯುತ್ತಿದ್ದ ತತ್ವಗೋಷ್ಠಿಗಳನ್ನು ಕೇಳುತ್ತ ಕಾಲಕಳೆಯಹತ್ತಿದಳು. ಈ ವಿಷಯುವನ್ನು ಕುರಿತು ಈ ಗ್ರಂಥ ದಿಂದ ತಿಳಿಯುವದು ಏನೆಂದರೆ ಲಿಂಗಮ್ಮನು ಅಂಗದಲ್ಲಿ ರುದ್ರಾಕ್ಷಿ ಧಾರಣ ಮಾಡಿ ಬಸವರಾಜನ ವನಕ್ಕೆ ದಯಮಾಡಿಸಿ ಪಾದದಲ್ಲಿ ಹಾವುಗೆಯ ಧರಿಸಿ ಲಿಂಗಾರ್ಚನೆಯ ಜಪದಲಿ ಯೋಗವನ್ನು ಹೊಂದು ವಳು. ಹೀಗೆ ಕಾಲಕಳೆಯುತ್ತಿರಲು ಇದು ಬಸವೇಶ್ವರನಿಗೆ ತಿಳಿದು ಅವನು ಅವಳಿದ್ದಲ್ಲಿಗೆ ಹೋಗಿ ಕಾಣುವನು. ಆಗ ಆಕೆಯು ಅವನಿಗೆ ಪಾದೋದಕ, ಪ್ರಸಾದ ಮುಂತಾದ ವಿಷಯಗಳನ್ನು ಅರುಹುವಳು. ಶಿವಯೋಗದ ಮರ್ಮವನ್ನು ತಿಳಿಸುವಳು. ಇವುಗಳನ್ನೆಲ್ಲ ಕವಿಯು ಇಲ್ಲಿ ವರ್ಣಿಸಿದ್ದಾನೆ. ಹೀಗೆ ಲಿಂಗಮ್ಮನು ಪ್ರಸಾದವನ್ನು ಸ್ವೀಕರಿಸಿ ತನ್ನನ್ನು ತೃಪ್ತಿಮಾಡಿಕೊಳ್ಳುವದಲ್ಲದೆ ಕಲ್ಯಾಣ ಪಟ್ಟಣದಲ್ಲಿಯ ಎಲ್ಲ ಗಣಂಗಳನ್ನೂ ಪ್ರಸಾದದ ಮೂಲಕ ತೃಪ್ತಿಪಡಿಸುವಳು. ಆಗ ಕಲ್ಯಾಣ ಪಟ್ಟಣದಲ್ಲಿರುವ ಎಲ್ಲರೂ ಚಕಿತರಾದರು. ಈ ವಿಷಯುವನ್ನು ಕವಿಯು ವರ್ಣಿಸಿರುವದು ಹೇಗೆಂದರೆ:—

“ಬಸವೇಶ್ವರ ಸೋಜಿಗವಾಗಿ ಅಂತರಾತ್ಮನ ಕಂಡು ನೋಡ ಲಾಗಿ ಮಹಾ ಶರಣೆ ಮಹತ್ವದಿಂದೆ ಗಣಂಗಳ ತೃಪ್ತಿಮಾಡಿರುವಳು ಎಂದು ಬಸವಣ್ಣ ನೀಲಲೋಚನೆ ಸಾಷ್ಟಾಂಗವೆರಗಿ, ನೀವು ಘೋಂಕಾರ ಶರಣನ ನೆನವಿನಿಂದ ಹುಟ್ಟಿದ ತಾಯಿ ಮಹಾಶರಣಿ ಲಿಂಗಮ್ಮನವರು ನಿಮ್ಮ ಧರ್ಮ ಮಹತ್ವದಿಂದೆ ಸರ್ವ ಗಣಾಧೀಶ್ವರರಿಗೆ ತೃಪ್ತಿಬಡಿಸಿದಿರಿ. ಇಂತಹ ಧರ್ಮ ಯಾರಿಂದ ಆಗದು ಎಂದು ದಾನಮ್ಮ ಶರಣ ಎಂಬ ನಾಮಕರಣಹೊಂದಿರೆಂದಾ ಬಸವಣ್ಣಾ.”

ಆ ಮೇಲೆ ಬಸವನು ಆಕೆಯನ್ನು ಅನುಭವಮಂಟಪಕ್ಕೆ ಕರೆ ದೊಯ್ದು, ನೆರೆದ ಶರಣಜನರಲ್ಲಿ ಬಹುಮಾನಿಸುವನು ಮತ್ತು ತನ್ನ ಗದ್ದುಗೆಯ ಮೇಲೆ ಕುಳ್ಳಿರಿಸುವನು. ಇದರಿಂದ ದಾನಮ್ಮನೆಂಬ ಹೆಸರು ಬಸವೇಶ್ವರನಿಟ್ಟದ್ದಾಗಿದೆಂದು ತಿಳಿದುಬರುತ್ತದೆ.

## ಕಲ್ಯಾಣದಲ್ಲಿಯ ವಾಸ.

ಹೀಗೆ ಲಿಂಗಮ್ಮನು ಕಲ್ಯಾಣಪಟ್ಟಣದಲ್ಲಿ ತನ್ನ ದಾನಮಾಡುವ ಬಲದಿಂದ ದಾನಮ್ಮನೆಂಬ ಹೆಸರನ್ನು ಬಸವೇಶ್ವರನಿಂದ ಪಡೆದು ಅಲ್ಲಿಯೇ ಕಾಲಕಳೆಯ ಹತ್ತಿದಳು. ಆ ಕಾಲದಲ್ಲಿ ಆಕೆಯು ಅಲ್ಲಿಯ ಜನರ ಅನೇಕ ಕಷ್ಟಗಳನ್ನು ನಿವಾರಣೆಮಾಡುತ್ತ ದಾನಧರ್ಮಮಾಡುತ್ತ ಶಿವಗೋಷ್ಠಿಯಲ್ಲಿ ಇರುತ್ತಿದ್ದಳೆಂದು ತೋರುತ್ತದೆ. ಈ ಗ್ರಂಥದಲ್ಲಿ ಹೇಳಿದುದೇನೆಂದರೆ ಒಂದು ದಿನ ಗೌರಮ್ಮನೆಂಬ ಬಾಲೆಯು ಹುಚ್ಚಿಯಂತೆ ತಿರುಗುತ್ತಿದ್ದದ್ದನ್ನು ದಾನಮ್ಮನು ನೋಡಿದಳು. ಆಗ ದಾನಮ್ಮನು "ಆಕೆಯ ಕರವ ಹಿಡಿದು ಗೃಹದೊಳಗೆ ಕರೆದೊಯ್ದು ಗದ್ದುಗೆಯ ಮೇಲೆ ಮೂರ್ತವ ಮಾಡಿಸಲು" ಗೌರಮ್ಮನು "ನನ್ನ ಪುರುಷ ಹೇಳದೆಹೋಗಿ ಮೂರು ವರ್ಷವಾಯಿತು, ಚಿಂತೆ ಮಾಡುತ್ತಿರುವೆನು." ಎಂದು ಹೇಳಲು ದಾನಮ್ಮನು "ನಿನ್ನ ಚಿಂತೆಗೆ ನನ್ನ ಆತ್ಮದಲ್ಲಿ ಕಳವಳವಾಗಿ ನೋಡಿದೆ, ಒಂದು ಗಾವುದ ಅಂತರ ೨೫ ವರುಷ ಪುರುಷನು ಕೆಂಜಿಗನು ಬರುವ ಹಾದಿಯೊಳು ನೋಡಿದೆ" ಎಂದು ಹೇಳಿದ ಬಳಿಕ ಒಂದು ಗಳಿಗೆಯಲ್ಲಿ ಅವನು ಮನೆಗೆ ಬಂದನು. ಆಗ ಪತಿಯ ಕಂಡು "ಹಿರ್ರನೆ ಹಿಗ್ಗಿದಳು. ಪತಿಯ ಪಾದದ ಮೇಲೆ ಹೊರಳಿ ಕರವಿಡಿದು ಕರಕೊಂಡು ಗೃಹದೊಳಗೆ ಬಂದು ತಾವು ಐಕ್ಯವಾಗಿ ಲಿಂಗ ತೋರದೇ ಇರುವದು ಲಿಂಗಾರ್ಚನೆಯ ಮಾಡಿಸಿ ಪ್ರಸಾದಮಾಡಿ ಉಣಿಸಲಿಲ್ಲ ಎಂದು ನೇತ್ರದಿಂದ ಶರಧಿ ಸುರಿಸುತಲಿ ಬಾಲೆ ದುಃಖ ಭಾವದಿ ಇರಲು ಮುಗಳ ಸ್ವಪ್ನದಲಿ ಹೋಗಿ ನಿತ್ಯ ಲಿಂಗ ಮಜ್ಜನ ಮಾಡಿ ಪ್ರಸಾದವ ತಂದು ಎಡೆಮಾಡಿದರೆ ನಮ್ಮ ಹಸ್ತದಿಂದೆ ನಾವೇ ಸ್ವೀಕಾರ ಮಾಡಿಹೆವು ಎಂದು ಬಯಲಾದಳು"

ಇದರ ಮೇಲಿಂದ ವರದಾನಿಗುಡ್ಡವ್ವೆಯು ಕಲ್ಯಾಣ ಪಟ್ಟಣದಲ್ಲಿ ಯಾವ ರೀತಿಯಿಂದ ಕಾಲಕಳೆಯುತ್ತಿದ್ದಳೆಂಬದನ್ನು ಊಹಿಸಬಹುದಾಗಿದೆ.

ಹೀಗೆ ಕೆಲವು ಕಾಲ ಸಂದಿ ಹೋದ ಬಳಿಕ ಕಲ್ಯಾಣಪಟ್ಟಣದಲ್ಲಿ ಬಿಜ್ಜಳನೃಪನ ಕೂಡ ಅನಾಹುತಗಳು ಸಂಭವಿಸಲು, ಶಿವಶರಣರು ರಾಜಧಾನಿಯನ್ನು ಬಿಟ್ಟು ಚದರಿ ಹೋದರು. ಬಸವನು ಕೂಡಲ

ಸಂಗಮನಾಥನಲ್ಲಿಗೆ ತೆರಳಿದನು. ಅವನ ಬೆಂಬತ್ತಿ ಅವನ ಪತ್ನಿಯಾದ ನೀಲಲೋಚನೆಯೂ ಸಂಗಮ ಗ್ರಾಮದ ಸಮೀಪವಲ್ಲಿರುವ ತಂಗಡಿಗೆ ಗ್ರಾಮದಲ್ಲಿಗೆ ಹೋಗಿ ಐಕ್ಯಹೊಂದಿದಳು. ಈ ವಿಷಯಗಳು ಇಲ್ಲಿ ಹೇಳಲ್ಪಟ್ಟಿವೆ. ಈ ಭಯಾನಕ ಸ್ಥಿತಿಯಲ್ಲಿ ಬಸವೇಶ್ವರನ ಕಾಲದಲ್ಲಿ ಕಲ್ಯಾಣ ಪಟ್ಟಣದಲ್ಲಿ ವಾಸವಾಗಿದ್ದ ಶಿವಶರಣರು ತಮ್ಮ ತಮ್ಮ ಸ್ಥಾನಗಳಿಗೆ ಹೊರಟುಹೋದ ಹಾಗೆ ತೋರುತ್ತದೆ. ಈ ಸಮಯದಲ್ಲಿ ವರದಾನಿಗುಡ್ಡಮ್ಮೆಯೂ ತನ್ನ ಪೂರ್ವದ ಗ್ರಾಮವಾದ ಉಮರಾಣಿಯಿಂದ ಒಂದುವರೆ ಮೈಲು ದೂರವಾಗಿರುವ ಸಂಕ ಎಂಬ ತೀರ್ಥಕ್ಕೆ ಬಂದಳೆಂದು ಈ ಗ್ರಂಥದಲ್ಲಿ ಹೇಳಲ್ಪಟ್ಟಿದೆ.

## ಗುಡ್ಡಮ್ಮೆಯ ವಿವಾಹ.

ಈ ಸಂಕ ತೀರ್ಥವು ಸಂಗಮನಾಥನ ಸ್ಥಾನವಾಗಿದ್ದು ಅವನೊಡನೆ ದಾನಮ್ಮನು ಲಗ್ನವಾದದ್ದು ಇಲ್ಲಿ ಹೇಳಲ್ಪಟ್ಟಿದೆ. ಈ ವರ್ಣನೆಯು ವಿಸ್ತಾರವಾಗಿ ಇಲ್ಲಿ ಇರುತ್ತದೆ. ಇದರ ಮೇಲಿಂದ ವರದಾನಿ ಗುಡ್ಡಮ್ಮೆಯು ಕಲ್ಯಾಣ ಪಟ್ಟಣದಲ್ಲಿ ಕ್ರಾಂತಿಯುಂಟಾದ ಬಳಿಕ ತನ್ನ ಆವಾಸ ಸ್ಥಾನಕ್ಕೆ ಬಂದು ಗೃಹಸ್ಥಾಶ್ರಮಿಯಾಗಿ ವರ್ತಿಸಿದಳೆಂದು ತೋರುತ್ತದೆ. ಹೀಗೆ ಅವಳು ಲಗ್ನವಾದ ಬಳಿಕ ಉಭಯ ದಂಪತಿಗಳು ಸಂಕದಿಂದ ಗುಡ್ಡಾಪುರ ಸ್ಥಳದಲ್ಲಿ ಬಂದು ಶಿವಯೋಗದಲ್ಲಿ ಇರತೊಡಗಿದರು. ಇಲ್ಲಿ ದಾನಮ್ಮನು ಹೀಗೆ ಮೂರ್ತವಾಡಿದ್ದರಿಂದ ಈ ಸ್ಥಾನಕ್ಕೆ ಮಹತ್ವ ಬಂದಂತೆ ತೋರುತ್ತದೆ. ಇಲ್ಲಿ ಕೆಲವು ದಿನಗಳಿದ್ದ ಮೇಲೆ ಉಭಯತರು ದೇಶ ಪರ್ಯಟಣ ಮಾಡಲು ಹೊರಟರು. ಅವರು ಹೋದ ಹೋದಲ್ಲೆಲ್ಲ ಜನರನ್ನು ಉದ್ಧಾರಮಾಡುತ್ತ, ಶಿವಶಾಸ್ತ್ರಗಳನ್ನು ಅರುಹುತ್ತ ಸಂಚರಿಸುತ್ತಿದ್ದದ್ದರ ವರ್ಣನೆಗಳು ಇದರಲ್ಲಿ ಬಂದಿರುತ್ತವೆ.

ಬಿಜ್ಜಳನು ಮಡಿದ ತರುವಾಯ ಬಸವೇಶ್ವರನ ಕಾಲದಲ್ಲಿ ಶಿವಾನುಭವ ಮಂಟಪದಲ್ಲಿದ್ದವರೆಲ್ಲರೂ ಕಲ್ಯಾಣವನ್ನು ಬಿಟ್ಟು ಶಿವಾನುಭವ ಬೋಧೆ ಮಾಡುತ್ತ ಸಂಚರಿಸಿದ ಹಾಗೆ ತೋರುತ್ತದೆ. ವೀರಶೈವ ಧರ್ಮಪ್ರಸಾರದ ಕಾರ್ಯವು ಬಸವೇಶ್ವರನ ತರುವಾಯ ಮತ್ತಿಷ್ಟು ಹೆಚ್ಚಿಗೆ ಪ್ರಬಲವಾಗಿ ಸಾಗಿದ ಹಾಗೆ ಉಲ್ಲೇಖಗಳು ವೀರಶೈವ ಇತಿಹಾಸದಲ್ಲಿ ಬಹಳ ಕಡೆಗೆ ಕಂಡುಬರುತ್ತವೆ. ಹೀಗೆ ಕಾರ್ಯ ಮಾಡಿದವರಲ್ಲಿ ವರದಾನಿ ಗುಡ್ಡ

ಮ್ಮೆಯೂ ಒಬ್ಬಳಾಗಿದ್ದಾಳೆ. ಈ ದೃಷ್ಟಿಯಿಂದ ವಿಚಾರ ಮಾಡಿದಲ್ಲಿ ವರದಾನಿ ಗುಡ್ಡಮ್ಮೆಯ ಕಾರ್ಯ ಮಹತ್ವವು ವಿಶೇಷತರವಾಗಿರುತ್ತದೆ.

## ಆದವಾನಿಯಲ್ಲಿಯ ವಾಸ.

ವರದಾನಿಗುಡ್ಡಮ್ಮೆಯೂ ಆಕೆಯ ಪತಿಯೂ ಮೊದಲು ಆದವಾನೀ ಸ್ಥಳಕ್ಕೆ ದಯಮಾಡಿಸಿದರು. ಅಲ್ಲಿ ನಡೆದ ಸಂಗತಿಗಳನ್ನು ಗ್ರಂಥಕಾರನು ವರ್ಣಿಸಿರುವದು ಹೇಗೆಂದರೆ:— ಆ ಗ್ರಾಮದಲ್ಲಿ "ದೇವಾಂಗ ಶೀಲವಂತರು ಮುತ್ತೈದೇರಿಗೆ ಮಾಡುವ ನೇಮವಿದ್ದು ನಾಲ್ವರು ಸಿಕ್ಕಿದರು. ಹುಡುಕಲಾಗಿ ದಾನಮ್ಮ, ಶರಣ ಸಂಗಮನಾಥನು ಸತಿ ಪುರುಷರು ನಂದೀ ದೇವಾಲಯದಲ್ಲಿ ಮೂರ್ತವ ಮಾಡಿರುವರು, ಅಲ್ಲಿ ದೇವಾಂಗ ನೋರ್ವನು ನೋಡಿ ಸಾಷ್ಟಾಂಗಮಾಡಿ ಕರವ ಹಿಡಿದು ಗೃಹಕ್ಕೆ ಕರೆದೊಯ್ಯೆ, ದೇವಾಂಗ ದಂಪತಿಗಳು ಹಿಗ್ಗಿ ಮುತ್ತೈದೇರಿಗೆ ಫಲ ಉಡಿತುಂಬಿ ....... ವಿಧಾನಯುಕ್ತಮಾಡಿ ಪಂಚಾಮೃತ ಭೋಜನ ಮಾಡಿಸಿ ಕರ್ಪುರ ವೀಳೆಯವ ಕೊಟ್ಟು ಕಳಿವಿದರು. ದೇವಾಂಗ ಸಂತೋಷಭರಿತನಾಗಿದ್ದು ನೆರೆಮನೆ ಹೊಕ್ಕು ಅವರ ಮುಂದೆ ಹೇಳಲು ನಮಗೆ ಅವರೇ ಸಿಕ್ಕಿದ್ದರು ಎಂದರು. ಇದರಂತೆ ಸಾವಿರು ಮನೆಗಳಲ್ಲಿ ದಾನಮ್ಮ ಸಂಗಮನಾಥ ಸತಿಪುರುಷರು ತಮ್ಮ ಮಹತ್ವದಿಂದ ಮುತ್ತೈದಿತನ ಭಾಗ ಸಲುಹಿದರು. ಸರ್ವ ಸಾವಿರ ಮನೆಯವರು ನಿಮ್ಮ ಭಕ್ತರೆಂದೇ ಪಾದಕ್ಕೆರಗಿದರು" ಎಂದು ವರ್ಣಿಸಲ್ಪಟ್ಟಿದೆ. ಇದರ ಮೇಲಿಂದ ಅಲ್ಲಿಯ ದೇವಾಂಗ ಕುಲದವರೆಲ್ಲ ಶಿವಭಕ್ತರಾದರೆಂದು ತೋರುತ್ತದೆ.

## ಅಲಂಪುರದಲ್ಲಿ ಯುದ್ಧ.

ವರದಾನಿಗುಡ್ಡಮ್ಮೆಯು ಅತ್ಯಂತ ಶೂರಳಾಗಿದ್ದಳೆಂದು ವೀರಶೈವ ಗ್ರಂಥಗಳಿಂದ ತಿಳಿದುಬರುತ್ತದೆ. ಶಿವಶರಣರಲ್ಲಿ ಅನೇಕರಿಗೆ ಕೆಲವು ಪ್ರಸಂಗಗಳಲ್ಲಿ ಶೂರತನದಿಂದ ಕಾದಾಡುವ ಪ್ರಸಂಗಗಳು ಬಂದಿವೆ. ಆ ಕಾಲಕ್ಕೆ ಅವರು ಹಿಂಜರಿಯದೆ ಕಾಳಗಮಾಡಿ ಜಯಸಿದ್ದುಂಟು, ಮತ್ತು ಕೆಲವು ಸಾರೆ ಮಡಿದದ್ದೂ ಉಂಟು. ಇಂಥ ವೀರರಲ್ಲಿ ವರದಾನಿಗುಡ್ಡಮ್ಮೆಯು ಎಣಿಸಲ್ಪಟ್ಟಿರುವಳು. ಲಕ್ಕಣ್ಣ ದಂಡೇಶನು ಈ ಕಥಾ ಸಂದರ್ಭವನ್ನು ತನ್ನ ಕಾವ್ಯದಲ್ಲಿ ಮನೋಹರವಾಗಿ ವಿಸ್ತರಿ

ಸಿರುವನು. ಅಲಂಪುರವೆಂಬ ಗ್ರಾಮದಲ್ಲಿ ಬ್ರಹ್ಮೇಶ್ವರ ಲಿಂಗವನ್ನು ಭ್ರಷ್ಟಗೊಳಿಸಿ ಹೊಳೆಯಲ್ಲಿ ಪರವಾದಿಗಳು ಹಾಕಿಸಲು, ವರದಾನಿ ಗುಡ್ಡಮ್ಮೆಯು ಸೈನ್ಯದೊಡನೆ ಅಲ್ಲಿಗೆ ಹೋಗಿ ವೈರಿಗಳನ್ನು ಜಯಿಸಿ ಪುನಃ ದೇವಸ್ಥಾನದಲ್ಲಿ ಲಿಂಗವನ್ನು ನೆಲೆಗೊಳಿಸಿದಳೆಂಬ ಐತಿಹ್ಯವಿದೆ. ಇದು ವರದಾನಿಗುಡ್ಡಮ್ಮೆಯು ಆದವಾನಿಯಲ್ಲಿದ್ದಾಗ ಸಂಭವಿಸಿರ ಬಹುದೆಂದು ತೋರುತ್ತದೆ. ಲಕ್ಕಣ್ಣ ದಂಡೇಶನು ಅಲಂಪುರವು ಮಲಾಪಹಾರೀ ತೀರದಲ್ಲಿತ್ತೆಂದು ಒರೆಯುತ್ತಾನೆ ಆದರೆ ಈ ಹೆಸರಿನ ಗ್ರಾಮವು ಮಲಾಪಹಾರೀ ಅಥವಾ ಭೀಮಾನದೀ ತೀರಗಳಲ್ಲೆಲ್ಲಿಯೂ ಕಂಡುಬರುವದಿಲ್ಲ. ಆದರೆ ಅಲಂಪುರವು ಕರ್ನೂಲ್ ಜಿಲ್ಹೆಯಲ್ಲಿ ಮಾತ್ರ ಇರುತ್ತದೆ. ಅದು ಶ್ರೀಶೈಲ ಪ್ರಾಂತದ ಸಮೀಪವರ್ತಿಯಾದ ಗ್ರಾಮ ವಾಗಿರುತ್ತದೆ. ಬಸವೇಶ್ವರನ ತರುವಾಯ ಪ್ರಭುದೇವ, ಮಹಾದೇವಿ ಯಕ್ಕ ಮೊದಲಾದ ಶಿವಶರಣರು ಶ್ರೀಶೈಲಕ್ಕೆ ಹೊರಟುಹೋದರೆಂಬ ಐತಿಹ್ಯವಿದೆ. ಮತ್ತು ಆ ಭಾಗದಲ್ಲಿ ಪರವಾದಿಗಳೊಡನೆ ಹೋರಾಟ ಗಳಾದ ವಿವರಗಳೂ ಅನೇಕ ವೀರಶೈವ ಗ್ರಂಥಗಳಲ್ಲಿ ಬಂದಿರುತ್ತವೆ. ವರದಾನಿಗುಡ್ಡಮ್ಮೆಯೂ ಕೂಡ ಕಲ್ಯಾಣದಲ್ಲಿ ಎದ್ದ ದಂಗೆಗಳ ಮೂಲಕ ತನ್ನ ಗ್ರಾಮಕ್ಕೆ ಹೋಗಿ ಅಲ್ಲಿ ಬಹುದಿವಸವಿರದೆ ಶ್ರೀಶೈಲದ ಕಡೆಗೆ ಹೋದಾಗ ಆಕೆಯು ಅಲ್ಲಿಯ ಅಲಂಪುರದಲ್ಲಿ ದಂಡನ್ನೆತ್ತಿ ಕಾದಾ ಡುವ ಪ್ರಸಂಗವು ಬಂದಿರಬಹುದು.

## ಕಪಿಲಾ ಕಾವೇರಿ ಸಂಗಮ ಸ್ಥಳದಲ್ಲಿ ಇದ್ದದ್ದು.

ಮುಂದೆ ಅಲಂಪುರದಲ್ಲಿ ಬ್ರಹ್ಮೇಶ್ವರ ಲಿಂಗವನ್ನು ಆಕೆಯು ಸ್ಥಾಪ ನೆಯನ್ನು ಮಾಡಿ ಮುಂದೆ ತನ್ನ ಪತಿಯೊಡನೆ ದಕ್ಷಿಣ ದೇಶಕ್ಕೆ ತೆರಳಿ ದಳು. ಅವಳು ಕಪಿಲಾ ಕಾವೇರೀ ನದಿಗಳ ಸಂಗಮಸ್ಥಾನಕ್ಕೆ ಬಂದು ಅಲ್ಲಿ ಒಂದುವರೆ ವರುಷ ವಾಸವಾಗಿದ್ದಳು. ಅಲ್ಲಿ ತನ್ನ ಮಹತ್ವದ ಬಲ ದಿಂದ ಅನೇಕ ದಾನ ಧರ್ಮಗಳನ್ನು ಜರಿಗಿಸಿದಳು. ಕುರುಡ, ಕುಂಟ, ಹೆಳವರು ಆಕೆಯ ಸಾನ್ನಿಧ್ಯದಿಂದ ತಮ್ಮ ಕುಂದುಗಳನ್ನು ದೂರುಮಾ ಡಿಕೊಂಡರು. ಇದರಿಂದ ಮಲಿಯಾಳ, ಕೋಚೀನ ಸೀಮೆಯಲ್ಲಿಂದ ಸಹ ಬಹು ಜನರು ಅಲ್ಲಿಗೆ ಆಗಮಿಸಿ ಪುನೀತರಾದರು. ಆಗ ದೇವಾ ಲಯದ ಪೂಜಾರಿಯು ಬಿನ್ನವಿಸಿಕೊಳ್ಳಲು ತಮ್ಮ ಕುರುಹನ್ನು ಅಲ್ಲಿ

ಸ್ಥಾಪಿಸುವ ಉದ್ದಿಶ್ಯವಾಗಿ ಆ ಸಂಗಮ ಸ್ಥಳದಲ್ಲಿ ಗುಡ್ಡಮ್ಮೆಯು ಒಂದು ಕೋಟಿ ಲಿಂಗಸ್ಥಾಪನೆ ಮಾಡಿದಳೆಂದೂ ಪೂಜಾರಿಗಳಿಗೂ ಆ ಪ್ರದೇಶ ವಲ್ಲಿಯ ಜನರಿಗೂ ಶಿವದೀಕ್ಷೆಮಾಡಿದಳೆಂದೂ ಇಲ್ಲಿ ಹೇಳಿದೆ.

## ರಾಮೇಶ್ವರನ ದರ್ಶನ.

ಮುಂದೆ ವರದಾನಿ ಗುಡ್ಡಮ್ಮೆಯು ರಾಮೇಶ್ವರ ಕ್ಷೇತ್ರಕ್ಕೆ ಹೋಗಿ ಅಲ್ಲಿ ಕೆಲವು ಮಾಸ ಕಳೆದಳು. ಅಲ್ಲಿ ಬಸವನ ದೇವಾಲಯುವನ್ನು ನಿರ್ಮಿಸಿದಳು. ಮುಂದೆ ಕಾಂಚೀ ಪಟ್ಟಣಕ್ಕೆ ತನ್ನ ಪತಿಯೊಡನೆ ಆಗಮಿಸಿದಳು.

## ಕಾಂಚೀ ಪಟ್ಟಣದಲ್ಲಿ ವಾಸ.

ಅವರು ಕಾಂಚೀ ಪಟ್ಟಣದಲ್ಲಿದ್ದ ಮಹತ್ತರವಾದ ವಿಷ್ಣು ದೇವಾಲಯುವನ್ನು ಸಂದರ್ಶಿಸಲು ಹೋದಾಗ ದ್ವಾರಪಾಲಕರು ಅವರನ್ನು ಒಳಗೆ ಬರಲು ತಡೆದರು. ಆದರೆ ಅವರು ಮರುಳರಂತೆ ನಟಿಸಿ ಉಪಾಯ ದಿಂದ ದೇವಾಲಯ ಪ್ರವೇಶವನ್ನು ಮಾಡಿ ಮೂರ್ತಿಯ ಇದಿರಿಗೆ ಹೋಗಿ ನಿಂತರು. ಆಗ ಮೂರ್ತಿಯು ತನ್ನ ಸ್ಥಾನದಿಂದೆದ್ದು ಉಭಯತರಿಗೆ ನಮಸ್ಕರಿಸಲು ವರದಾನಿ ಗುಡ್ಡಮ್ಮೆಯು ಮೂರ್ತಿಯ ತಲೆಯ ಮೇಲೆ ಕೈ ಇಡಲಾಗಿ ಅಲ್ಲಿ ಒಂದು "ಪರಶಿವಲಿಂಗ ಮುದ್ರೆಯು" ಮೂಡಿತು. ಇದನ್ನು ಪಟ್ಟಣದಲ್ಲಿಯ ಬ್ರಾಹ್ಮಣರು ಕಂಡು ದ್ವಾರ ಪಾಲಕರನ್ನು ತಾಡನ ಮಾಡಲು ಆ ಪೆಟ್ಟುಗಳೆಲ್ಲ ಆ ಬ್ರಾಹ್ಮಣರಿಗೆ ತಗಲ ಹತ್ತಲು ಅವರು ಆಶ್ಚರ್ಯಬಟ್ಟು ಅರಸನಿಗೆ ದೂರು ಹೇಳಿದರು. ಆಗ ಅರಸನು ದೇವಾಲಯಕ್ಕೆ ಬಂದು ನಡೆದ ಸಂಗತಿಗಳನ್ನು ತಿಳಿದು ಉಭಯ ದಂಪತಿಗಳನ್ನು ಅರಮನೆಗೆ ಕರೆತಂದು ಸನ್ಮಾನಿಸಿದರು. ಬ್ರಾಹ್ಮಣರೆಲ್ಲರೂ ತಮ್ಮ ಯಜ್ಞೋಪವೀತದೊಡನೆ ಲಿಂಗಧಾರಣೆಯನ್ನೂ ಮಾಡಿದರು. ಅರಸನೂ ಕೂಡ ಹಾಗೆಯೇ ಯಜ್ಞೋಪವೀತದೊಡನೆ ಲಿಂಗವನ್ನೂ ಧರಿಸಿದನು. ಈ ಮಹತ್ವವು ಸುತ್ತಲೂ ಪ್ರಸಿದ್ಧವಾಗಲು ಕುರುಡ, ಕುಂಟ, ಹುಚ್ಚರು, ದೇವಾಲಯಕ್ಕೆ ಬಂದು ವರದಾನಿ ಗುಡ್ಡಮ್ಮೆಯಿಂದ ಪುನೀತರಾಗಿ ಆರೋಗ್ಯವನ್ನು ಹೊಂದಿ ಮರಳುತ್ತಿದ್ದರು. ಈ ಮೇರೆಗೆ ಗುಡ್ಡಮ್ಮ ಮತ್ತು ಸಂಗಮನಾಥರು ಕೆಲಕಾಲ ಈ ಸ್ಥಳದಲ್ಲಿ ಕಳೆದರು.

## ತೀರ್ಥ ಕ್ಷೇತ್ರಗಳ ದರ್ಶನ.

ಅಲ್ಲಿಂದ ಅವರು ಉತ್ತರ ದೇಶಕ್ಕೆ ತೆರಳಿ ಕಾಶೀ ವಿಶ್ವೇಶ್ವರನ ದರ್ಶನವನ್ನು ಹೊಂದಿ, ಅಲ್ಲಿಂದ ಪ್ರಯಾಗ ಗಯಾ ಕ್ಷೇತ್ರಗಳನ್ನು ನೋಡಿ, ಪುನಃ ದಕ್ಷಿಣಕ್ಕೆ ಹೊರಳಿ ಸೊನ್ನಲಿಗೆಯ ಸಿದ್ಧರಾಮೇಶನನ್ನು ಕಂಡರು. ಮುಂದೆ ಸೊನ್ನಲಿಗೆಯಿಂದ ಕೂಡಲ ಸಂಗಮಕ್ಕೆ ಬಂದು, ಅಲ್ಲಿಂದ ಹೊರಟು ಕೃಷ್ಣಾ ಘಟಪ್ರಭಾ ನದಿಗಳು ಕೂಡಿದ ಪುಣ್ಯ ಸ್ಥಳವಾದ ಸಂಗಮಕ್ಕೆ ಬಂದು, ಅಲ್ಲಿಂದ ಮಣ್ಣಾಗೂಳಿ ಎಂಬ ಗ್ರಾಮಕ್ಕೆ ಆಗಮಿಸಿದರು.

## ಮನಗೋಳಿಗೆ ಬಂದದ್ದು

ಮಣ್ಣಾಗೂಳಿಯು ವಿಜಾಪುರ ಪಟ್ಟಣದ ದಕ್ಷಿಣಕ್ಕಿರುವ ಮನಗೂಳಿ ಎಂಬುದಾಗಿರುತ್ತದೆ. ವರದಾನಿಗುಡ್ಡಮ್ಮೆಯು ಈ ಸ್ಥಲಕ್ಕೆ ಬಂದ ಕಾಲದಲ್ಲಿ ಅಲ್ಲಿಯ "ಪಂಚಮಸಾಲ ಗೌರವ್ಮ ಗೌಡಿತಿ" ಯು ಒಬ್ಬನೇ ಮಗನು ಮರಣ ಹೊಂದಿದ್ದನು. ಆಗ ಆಕೆಯು ಅತ್ಯಂತ ದುಃಖಿತಳಾಗಿ ಉಭಯ ಶರಣರ ಮೊರೆಹೊಗಲು ಅವರು ತಮ್ಮ ಲಾಕುಳಚಿತ್ತವನ್ನು ಮೃತದೇಹದ ಮೇಲೆ ಆಡಿಸಲು ಅವನು ಎಚ್ಚರಾದವರಂತೆ ಏಳಲು ಸರ್ವ ಜನರು ಸೋಜಿಗಗೊಂಡು ಅವರನ್ನು ಬಹಳ ಮನ್ನಿಸಿದರು.

## ಬಾಗೇವಾಡಿಗೆ ಬಂದಿದ್ದು

ಆಮೇಲೆ ಅವರು ಬಾಗವಾಡಿಗೆ ಬಂದು ಅಲ್ಲಿರುವ ಸಂಗಮನಾಥನ ದರ್ಶನವನ್ನು ಹೊಂದಿದರು. ಅವರು ಅಲ್ಲಿಯ ನಂದಿಯನ್ನು ಕುರಿತು ಸ್ತುತಿಮಾಡುತ್ತಿರಲು ಅಲ್ಲಿಯ "ದೇಶಮುಖ ದೇಶಪಾಂಡೆಯರು ನಮ್ಮ ಗರಳಿಗೆ ಲಿಂಗಧಾರಣ ಮಾಡಬೇಕೆಂದು ಸತಿ ಪುರುಷ ಶರಣರಿಗೆ ಸಾಷ್ಟಾಂಗ ಎರಗಲು, ಶಿವಬ್ರಾಹ್ಮಣರು ನೀವು, ನಿಮ್ಮ ಕೊರಳಿಗೆ ಈಗ ಶಿವಲಿಂಗ ಮೂರ್ತಿಯು ಲಿಂಗವಿರುವದು ನೋಡಿ" ಎಂದು ಹೇಳಲು ಅದೇ ಸ್ಥಿತಿಯುಂಟಾಗಿರಲು ನೆರೆದ ಜನರು ಬೆರಗುಹೊಂದಿದರು. ಮತ್ತು ಅವರು ದಾನಮ್ಮನ ಭಕ್ತರಾದರು.

## ಗುಡ್ಡಮ್ಮೆಯು ಐಕ್ಯವಾದದ್ದು

ಅಲ್ಲಿಂದ ಉಭಯತರು ಗುಡ್ಡಾಪುರಕ್ಕೆ ಬರಲು ಅಲ್ಲಿ ದಾನಮ್ಮನ ಮಾತೆಯಾದ ಶಿರಸಮ್ಮ ಮತ್ತು ಪಿತನಾದ ಅನಂತರಾಯ ಇವರು

ಅದೇ ಸ್ಥಳದಲ್ಲಿ ಮುಕ್ತರಾಗಿ ಸಮಾಧಿಸ್ಥರಾದದ್ದು ಕಂಡು ದಾನಮ್ಮನು ಅವರ ಪಾದಕ್ಕೆ ಶರಣೆಂದು ಸಾಷ್ಟಾಂಗವೆರಗಿದಳು. ಆಗ ಅಲ್ಲಿ ಉತ್ಸವಗಳು ಜರಗಿದವು. ಪ್ರಸಾದವು ಮುಗಿದಮೇಲೆ ಶರಣರ ಪಾದಕಮಲಕ್ಕೆ ಜನಸಮುದಾಯವು ಸಾಷ್ಟಾಂಗವೆರಗಿತು. ಭಕ್ತಮಂಡಲಿಯು ಎದ್ದು ನೋಡುವಷ್ಟರಲ್ಲಿ ದಾನಮ್ಮನು ಐಕ್ಯವಾಗಿ ಶಿಲಾಮೂರ್ತಿಯಾಗಿ ಮುಂದೆ ನಿಂತಿದ್ದಳು. "ಸಂಗಮೇಶ್ವರ ಪುರುಷರ ಪಾದಕೆ ಪಾದದಲಿ ಅಡಕವಾಗಿ ಶಿಲಾಮೂರ್ತಿಯು ಪೊಕ್ಕಳು ಮುತ್ತೈದಿ ಶರಣಿ ದಾನಮ್ಮ. ಶಿಲಾಮೂರ್ತಿ ಸಜೀವವಾಗಿ ಕಣ್ಣು ತೆರೆದು ಸಂಗಮನಾಥನ ನೋಡಲು ತನ್ನ ಪಶ್ಚಿಮ ಮೇಲುಭಾಗದಲಿ ಐಕ್ಯವಾಗಿ ಲಿಂಗಮೂರ್ತಿಯು ನಿಜವಾಗಿ ತೋರಿದುದು ನೋಡಿ ಮೌನಗೊಂಡಿತ್ತು ಶಿಲಾಮೂರ್ತಿಯು. ಭಕ್ತಜನ ಮಂಡಳಿ ಶರಣರ ಮಹತ್ವನ ಕಂಡು ಧನ್ಯ" ರಾದರು. ಎಂದು ಇಲ್ಲಿ ವರ್ಣಿಸಲ್ಪಟ್ಟಿದೆ.

ಮೇಲ್ಕಂಡ ವಿವರಣೆಯಲ್ಲಿ ಅನೇಕ ಅದ್ಭುತ ಸಂಗತಿಗಳು ವಿವರಿಸಲ್ಪಟ್ಟಿರುತ್ತವೆ. ಆದರೆ ಗುಡ್ಡವ್ವೆಯ ಚರಿತ್ರೆಯನ್ನು ನಾವು ಸೂಕ್ಷ್ಮವಾಗಿ ಪರಿಶೀಲಿಸಿದಲ್ಲಿ ಬಸವೇಶ್ವರನ ಕಾಲದಲ್ಲಿ ಉಂಟಾದ ಧಾರ್ಮಿಕ ಮತ್ತು ಸಾಮಾಜಿಕ ಕ್ರಾಂತಿಯಲ್ಲಿ ಆಕೆಯು ಉನ್ನತವಾದ ಕಾರ್ಯಗಳನ್ನು ಮಾಡಿದಳೆಂಬುದು ವಿಶದವಾಗುತ್ತದೆ. ಆ ಕಾಲದಲ್ಲಿ ಬಾಲಕರು, ಹೆಂಗಳೆಯರು, ಅಸ್ಪೃಶ್ಯಮೊದಲ್ಗೊಂಡು ಎಲ್ಲ ಜಾತಿಯವರು ಇವರಲ್ಲೆಲ್ಲ ಒಂದು ಅದ್ಭುತವಾದ ಆಂದೋಲನವು ಬರೇ ಕಲ್ಯಾಣ ರಾಜಧಾನೀ ಪ್ರದೇಶದಲ್ಲಿಯಷ್ಟೇ ಅಲ್ಲ, ಕರ್ನಾಟಕದ ಮೂಲೆಮೂಲೆಯಲ್ಲಿಯೂ ಇವರ ನೆರೆ ಪ್ರಾಂತಗಳಾದ ಆಂಧ್ರ, ತಮಿಳು ಮಲಯಾಳ ದೇಶಗಳಲ್ಲಿಯೂ ಕೂಡ ಸಾಗಿತ್ತೆಂಬುದು ಕಂಡುಬರುತ್ತದೆ. ಸ್ತ್ರೀಯರು ಸ್ವಾಭಾವಿಕವಾಗಿ ಧಾರ್ಮಿಕ ಉಜ್ವಲಭಾವವುಳ್ಳವರು. ಅವರಲ್ಲಿ ವೀರಶೈವದ ಧಾರ್ಮಿಕ ಕಳೆಯು ಬಲವಾಗಿ ಮೂಡಿಕೊಂಡು ಅವರನ್ನು ಮಹತ್ತಾದ ಸಾಹಸ ಕೃತ್ಯಗಳಿಗೆ ತೊಡಗಿಸಿತು. ಉಡುತಡಿಯ ಮಹಾದೇವಿಯಕ್ಕನು ತನಗೆ ದೊರೆದ ರಾಜವೈಭವವನ್ನು ತ್ಯಜಿಸಿ, ಕಠಿಣವಾದ ಆಯುಷ್ಯಕ್ರಮವನ್ನು ತಳೆದಳು. ಅವಳ ತೇಜಃಪುಂಜವಾದ ನುಡಿಗಳು ಹೃದಯವನ್ನು ಈಗಲೂ ಅರಳಿಸುತ್ತವೆ. ಆದರೆ ವರದಾನಿಗುಡ್ಡವ್ವೆಯು ವೀರವೃತ್ತಿಯನ್ನು ತಾಳಿದವಳಾದಳು. ಅವಳು ಕಲ್ಯಾಣ ಪಟ್ಟಣದಲ್ಲಿ

ಅನಾಹುತಗಳು ಉಂಟಾದಬಳಿಕ ವೀರಶೈವ ಧರ್ಮದ ಪ್ರಸಾರ ಕಾರ್ಯದಲ್ಲಿ ತೊಡಗಿದಳು. ಅವಳು ದೇಶವನ್ನು ಸಂಚರಿಸಿ ಅಲ್ಲಲ್ಲಿ ಜನಸಮುದಾಯಕ್ಕೆ ಧರ್ಮೋಪದೇಶಮಾಡುತ್ತ ಸಂಚರಿಸಿದಳು. ಅವಳ ಉಪದೇಶದ ಪ್ರಭಾವದಿಂದ ಅನೇಕರು ವೀರಶೈವ ಧರ್ಮೋಪಾಸಕರಾದರು. ಅನೇಕ ರಾಜರಲ್ಲಿ ಸಹ ಆಕೆಯು ಮನ್ನಣೆಯನ್ನು ಹೊಂದಿದಳು. ಬಸವೇಶ್ವರನ ತರುವಾಯ ದೇಶದಲ್ಲಿ ಕಡುತರವಾದ ಪ್ರಸಂಗಗಳು ಉಂಟಾದಂತೆ ನಮಗೆ ತೋರುತ್ತದೆ. ಆಗ ಶಿವಶರಣರು ಕಲ್ಯಾಣಪಟ್ಟಣವನ್ನು ತೊರೆದು ತಮ್ಮ ಅಸ್ತಿತ್ವದ ರಕ್ಷಣೆಯನ್ನು ತಮ್ಮ ಶಕ್ತಿಸಾಹಸಗಳಿಂದ ಕಾಯ್ದುಕೊಳ್ಳುವ ಪ್ರಸಂಗಗಳು ಅವರಿಗೆ ಒದಗಿದವು. ವೀರಶೈವರ ಇತಿಹಾಸದಲ್ಲಿ ಈ ಕಾಲವು ಅತ್ಯಂತ ಕಠಿಣತರವಾದದ್ದು. ಇಂಥ ಸಮಯದಲ್ಲಿ ವರದಾನಿ ಗುಡ್ಡಮ್ಮೆಯು ಶಸ್ತ್ರವನ್ನು ಧರಿಸಿ ಹಗೆಗಳೊಡನೆ ಕಾದಾಡಲು ಹಿಂದೆಗೆಯಲಿಲ್ಲ. ಇದರಿಂದ ವೀರಶೈವ ಶೂರ ಸ್ತ್ರೀಯರಲ್ಲಿ ಆಕೆಯು ಎಣಿಸಲ್ಪಟ್ಟಿದ್ದಾಳೆ. ಆಕೆಯ ದೇವಾಲಯದಲ್ಲಿ ನಡೆಯುವ ಉತ್ಸವಾದಿ ಕಾರ್ಯಗಳಿಂದ ಆಕೆಯು ಈ ವೀರ ವೃತ್ತಿಯವಳಿದ್ದಳೆಂಬದನ್ನು ಊಹಿಸಬಹುದಾಗಿದೆ. ಈಗಲೂ ಗುಡ್ಡಾಪುರದ ದಾನಮ್ಮನ ದೇವಾಲಯವು ಅತ್ಯಂತ ಜಾಗ್ರತಸ್ಥಾನವೆಂದು ಉತ್ತರ ಕರ್ನಾಟಕ ಮತ್ತು ದಕ್ಷಿಣ ಮಹಾರಾಷ್ಟ್ರ ಪ್ರಾಂತಗಳಲ್ಲಿ ಬಹಳ ಖ್ಯಾತಿಯು ಇದೆ. ಇದರಿಂದ ಇಲ್ಲಿಯ ಜನರು ಬಹು ಭಯಭಕ್ತಿಯಿಂದ ಈ ದೇವಾಲಯಕ್ಕೆ ನಡೆದುಕೊಳ್ಳುತ್ತಾರೆ. ದಾನಮ್ಮನ ಪೂಜಾದಿ ಕಾರ್ಯಗಳು ಬಹು ಪವಿತ್ರತೆಯಿಂದ ಜರಗುವಂತೆ ಬಹು ಜಾಗ್ರತೆಪಡುತ್ತಾರೆ. ದಾನಮ್ಮನ ಮೂಲ ಗ್ರಾಮವು ಉಮರಾಣಿ ಎಂಬುದಿದ್ದು, ಆಕೆಯು ಲಗ್ನವಾಗಿದ್ದಳೆಂದು ಈಗಿನ ಗ್ರಂಥದಿಂದ ತೋರಿಬರುತ್ತದೆ. ಮತ್ತು ಗುಡ್ಡಾಪುರವು ಆಕೆಯ ಸಮಾಧಿ ಸ್ಥಳವಾಗಿರುತ್ತದೆಂತಲೂ ತಿಳಿದುಬರುತ್ತದೆ. ಇದರಿಂದಲೇ ಗುಡ್ಡಾಪುರ ಗ್ರಾಮಕ್ಕೆ ಬಹು ಮಹತ್ವವು ಪ್ರಾಪ್ತವಾಗಿರುತ್ತದೆ.

ವರದಾನಿಗುಡ್ಡಮ್ಮೆಯ ಹಸ್ತಲಿಖಿತ ಗ್ರಂಥವನ್ನು ಅಥಣಿಯ ಮೋಟಗಿ ಮಠದ ವೇ॥ ಮೂ॥ ಬಸಪಲಿಂಗಶಾಸ್ತ್ರಿಗಳು ನಮಗೆ ತಂದು ಕೊಟ್ಟರು. ಇದಕ್ಕೋಸ್ಕರ ನಾವು ಅವರಿಗೆ ಬಹಳ ಆಭಾರಿಯಾಗಿದ್ದೇವೆ.

# ವಚನಕಾರರ ರಾಷ್ಟ್ರಭಾವನೆ.

(ಸದಾಶಿವಪ್ಪ ತೆನಿಹಳ್ಳಿ ವೀರಶೈವ ಸಾಹಿತ್ಯ ಮಂಡಳ ವಿಜಾಪುರ.)

೧೨ನೇ ಶತಮಾನದ ಕಾಲವೆಂದರೆ ನಮ್ಮ ವಚನಕಾರರ ಉದಯ ಕಾಲ. ಆಗಿನ ಕಾಲದಲ್ಲಿ ನಮ್ಮ ಹಿಂದುಸ್ತಾನದ ಸಮಾಜದ ರಚನೆ ಧಾರ್ಮಿಕ ಕಲ್ಪನೆ ಇವುಗಳನ್ನು ತಿಳಿದುಕೊಳ್ಳುವದು ಅತ್ಯಂತ ಅವಶ್ಯವಿದೆ. ಯಾಕಂದರೆ ಯಾವದಾದರೊಂದು ರಾಷ್ಟ್ರದಲ್ಲಿ ಅಥವಾ ಸಮಾಜದಲ್ಲಿ ಕ್ರಾಂತಿಯಾಗಬೇಕಾದರೆ ಆಗಿನ ಕಾಲದ ರಾಷ್ಟ್ರ ಅಥವಾ ಸಮಾಜವು ಏನಾದರೊಂದು ಬಂಧನದೊಳಗೆ ಸಿಲುಕಿಕೊಂಡಿರಬೇಕು. ಆ ಬಂಧನಗಳ ವಿಮೋಚನೆಗಾಗಿ ಮಾಡಿದ ಪ್ರಯತ್ನವೇ ಕ್ರಾಂತಿಯೆನಿಸುವದು. ಕಾಲಮಾನ ಪರಿಸ್ಥಿತಿಗನುಸರಿಸಿ ಸಮಾಜದ ರಚನೆಯಲ್ಲಿಯೂ, ಧಾರ್ಮಿಕ ಕಲ್ಪನೆಗಳಲ್ಲಿಯೂ, ಬದಲಾವಣೆಯನ್ನು ಮಾಡಿ ಜನಾಂಗಕ್ಕೆ ಭವಿಷ್ಯ ಜೀವನದ ಸುಖ ಸೌಖ್ಯರ್ಯದ ಕಲ್ಪನೆಯನ್ನು ತಂದು ಕೊಡುವದೇ ಕ್ರಾಂತಿಯು. ಈ ತರದ ಬದಲಾವಣೆಯು ಆಗಿನ ಕಾಲದಲ್ಲಿ ಅವರಿಗೆ ಬೇಕಾಗಿತ್ತು. ನಮ್ಮ ವಚನಕಾರರು ಹಳೇ ವಿಚಾರಗಳ ಗೊಡವೆಗೆ ಹೋಗದೇ ಬರೇ ಹೊಸ ವಿಚಾರಗಳ ಬೆನ್ನುಹತ್ತಿದರೆಂದು ಅನ್ನಲಿಕ್ಕೆ ಬರಲಾರದು. ಯಾಕಂದರೆ ಅವರು ಹಳೆಯುದರಲ್ಲಿಯ ಮಿಥ್ಯ ವಿಚಾರಗಳನ್ನು ಬಿಟ್ಟು ಸತ್ಯವಾದವುಗಳನ್ನೇ ಆಯ್ದುಕೊಂಡರು. ಮತ್ತು ಅಂಥ ವಿಚಾರ ವೇದಿಕೆಯ ಮೇಲೆಯೇ ತಮ್ಮ ಕ್ರಾಂತಿಗುಡಿಯನ್ನು ಕಟ್ಟಿದರು. ಹೂವು ಗಿಡದ ಸಾರ ಸರ್ವಸ್ವವೇ ಆದರೂ ತನ್ನ ಭವಿಷ್ಯ ಜೀವನದ ಅನಂತ ಶಕ್ತಿಗಳನ್ನು ತನ್ನಲ್ಲಿ ಅಡಕ ಮಾಡಿಕೊಂಡಂತೆ, ವಚನಕಾರರು ನಮ್ಮ ಸತ್ಯ ಧರ್ಮದ ಸನಾತನತ್ವದ ಮೇಲೆಯೇ ತಮ್ಮ ಕ್ರಾಂತಿಯ ಮಂದಿರವನ್ನು ಸ್ಥಾಪಿಸಿದರು. ಮತ್ತು ತಮ್ಮ ಮುಂದಿನ ಜೀವನದ ಏಳಿಗೆಗಾಗಿ ಬೇಕಾಗುವ ಕೆಲವು ತತ್ವಗಳನ್ನು ಅದರೊಳಗೆ ಇಟ್ಟರು. ಹಳೆಯುದರಲ್ಲಿ ಹೊಸದನ್ನು ಕಂಡರು, ಹೊಸದರಲ್ಲಿ ಹಳೆಯುದನ್ನು ರೂಪಿಸಿದರು. ಇದೇ ಅವರ ಆ ಕ್ರಾಂತಿಯ ಮರ್ಮ.

ಆಗಿನ ಕಾಲದಲ್ಲಿ ಉತ್ತರ ಹಿಂದುಸ್ತಾನದಲ್ಲಿ ಮುಸಲ್ಮಾನರ ದಾಳಿಗಳು ಅವ್ಯಾಹತವಾಗಿ ನಡದೇ ಇದ್ದುದು ಇತಿಹಾಸ ಪ್ರಸಿದ್ಧವಾದ

ಮಾತು. ಮುಸಲ್ಮಾನರ ಒಂದೊಂದು ಗುಂಪು ಹಿಂದುಗಳನ್ನು ಸದೆ ಬಡೆದು ತಮ್ಮ ಧರ್ಮವನ್ನು ಪ್ರಸಾರ ಮಾಡಹತ್ತಿದರು. ಇದರಿಂದ ಆಗಿನ ಕಾಲದ ಹಿಂದೂ ಜನರ ಸಾಂಪತ್ತಿಕ ಸ್ಥಿತಿಯ ಮೇಲೂ ಧರ್ಮದ ಹಕ್ಕಿಗೂ ಬಲವಾದ ಏಟುಗಳು ಬಿದ್ದವು. ಈ ಪ್ರಕಾರ ಮುಸಲ್ಮಾನರು ನಮ್ಮ ಹಿಂದೂಗಳ ಮೇಲೆ ಬೀಳಬೇಕಾದರೆ, ಆಗಿನ ಕಾಲದ ಹಿಂದೂ ಸಮಾಜದ ಮನೋ ದೌರ್ಬಲ್ಯವೇ ಕಾರಣವಿರಬಹುದು. ಹೇಗೆಂದರೆ ಮೊದಲು ನಮ್ಮ ಸಮಾಜದಲ್ಲಿ ಜನ್ಮಸಿದ್ಧವಾದ ವರ್ಣಾಶ್ರಮ ಧರ್ಮವು ಪ್ರಚಾರದಲ್ಲಿತ್ತು. ಈ ವರ್ಣಾಶ್ರಮ ಧರ್ಮದ ಪ್ರಭಾವವು ರಾಜಕಾರಣ ದಲ್ಲಿ ಸಮಾವೇಶವಾಗಹತ್ತಿದ್ದರಿಂದ ಆಗಿನ ಕಾಲದ ನಮ್ಮ ರಾಜಕೀಯ ವಿಚಾರದಲ್ಲಿ ಶಿಥಿಲತೆಯುಂಟಾಯಿತು. ಬ್ರಾಹ್ಮಣರು, ಬಾಹ್ಯ ಜಗ ತ್ತನ್ನು ನಾವು ಮರೆತವರು, ಇಹಲೋಕದ ಚಿಂತೆ ನಮಗೆ ಬೇಡ, ಬ್ರಹ್ಮ ಚಿಂತನೆಯೇ ನಮ್ಮ ಜೀವನದ ಕೊನೆಯ ಗುರಿಯು ಎಂದು ಆಶ್ರಮವಾಸಿಗಳಾಗಿ ಕಾಲಹರಣ ಮಾಡುತ್ತಿದ್ದರು, ಕ್ಷತ್ರಿಯರು ರಾಜ ಕಾರಣಕ್ಕೆ ವಿಶೇಷತಃ ಸಂಬಂಧಪಟ್ಟವರಾದರೂ ತಮ್ಮ ತಮ್ಮೊಳಗಿನ ಅಂತಃಕಲಹದಿಂದ ಅವರ ಕ್ಷಾತ್ರ ತೇಜಸ್ಸೇ ಅವರಿಗೆ ವೈರಿಯಾಗಿ ಪರಿ ಣಮಿಸಿತು. ಇದಕ್ಕೆ ಇತಿಹಾಸವೇ ಸಾಕ್ಷಿ. ವೈಶ್ಯರು ತಮ್ಮ ವ್ಯಾಪಾ ರದ ಸೀಮೆಯನ್ನು ಬಿಟ್ಟು ಕದಲಲಿಲ್ಲ. ಸಮುದ್ರಯಾನ ಮಾಡು ವದು ಪಾಪದ ಕೆಲಸವೆಂದು ಅವರು ತಿಳಿಯುತ್ತಿದ್ದರು. ಇನ್ನುಳಿದ ಶೂದ್ರರಂತೂ ಬುದ್ಧಿಹೀನರಾಗಿ ಹೇಗೋ ಉಪಜೀವನವನ್ನು ಸಾಗಿಸಿ ಕೊಂಡು ಸೇವಾವೃತ್ತಿಯಲ್ಲಿಯೇ ಕಾಲಹರಣ ಮಾಡುತ್ತ ಇದ್ದರು. ಈ ಪ್ರಕಾರವಿದ್ದ ವರ್ಣ ವ್ಯವಸ್ಥೆಯಲ್ಲಿ ಒಬ್ಬರ ಸುಖ ದುಃಖಗಳು ಮತ್ತೊ ಬ್ಬರ ಸುಖ ದುಃಖಗಳಾಗಿ ಪರಿಣಮಿಸಲಿಲ್ಲ. ಸಮಾಜದಲ್ಲಿ ಒಕ್ಕಟ್ಟು ಸಡಲಿತು, ಬಿಕ್ಕಟ್ಟು ಉತ್ಪನ್ನವಾಯಿತು. ಇಂಥ ಪರಿಸ್ಥಿತಿಯಲ್ಲಿ ಮತ್ತೊಂದು ವಿಚಾರವು ನಮ್ಮನ್ನು ಬಾಧಿಸತೊಡಗಿತು. ಅದೇನಂದರೆ, ಕೆಲವು ಕರ್ಮಕಾಂಡಿಗಳಾದ ಸನಾತನಿಗಳು ಧರ್ಮದ ಹೆಸರಿನಿಂದ ಅನಂತ ಅತ್ಯಾಚಾರಗಳನ್ನು ಮಾಡುತ್ತಿದ್ದರು. ಒಂದು ಕಡೆ ಯಜ್ಞ-ಯಾಗಾದಿ ಕರ್ಮಗಳ ಹೆಸರಿನಿಂದ ಮೂಕ ಪ್ರಾಣಿಗಳ ವಧೆ ನಡೆ ಯಿತು. ಮತ್ತೊಂದು ಕಡೆ ಅದೇ ಧರ್ಮದ ಹೆಸರಿನಿಂದ ಸುಲಿಗೆಯಾ ದರೂ ನಡೆಯಿತು. ದಲಿತ ವರ್ಗದವರಂತೂ ಮೇಲ್ತರಗತಿಯ ಜನರ

ಕಡೆಯಿಂದ ಬರುತ್ತಿದ್ದ ಅನಂತ ಯಾತನೆಗಳನ್ನು ಸಹಿಸಿ ಹಿಂದೂ ಧರ್ಮದಲ್ಲಿರತಕ್ಕ ತನ್ನ ಸಹಾನುಭೂತಿಯನ್ನು ಸಡಲಿಸಿದರು. ಆದ್ದರಿಂದ ಪರಧರ್ಮದವರ ದಾಳಿಗೆ ಮತ್ತಿಷ್ಟು ಕಳೆ ಏರಿತು. ಇಂಥ ಸಮಯದಲ್ಲಿ ನಮ್ಮ ಹಿಂದೂ ಸಮಾಜದಲ್ಲಿ ಕ್ರಾಂತಿಯಾಗದೆ, ಅದರ ಸಂಸ್ಕೃತಿಯು ಉಳಿಯುವ ಶಕ್ಯವೇ ಇರಲಿಲ್ಲ.

ಇಂಥ ಪ್ರಸಂಗದಲ್ಲಿ ನಮ್ಮ ವಚನಕಾರರು ಜನಾಂಗ ಸಂಘಟನೆ, ಶಿಕ್ಷಣದಲ್ಲಿ ಬದಲಾವಣೆ, ಔದ್ಯೋಗಿಕ ಪ್ರಗತಿ, ಸ್ತ್ರೀ ಸ್ವಾತಂತ್ರ್ಯ, ಅಹಿಂಸೆ ಮೊದಲಾದ ರಾಷ್ಟ್ರಪೋಷಕವಾದ ಶಕ್ತಿಯನ್ನು ಜನಾಂಗದೊಳಗೆ ತುಂಬಹತ್ತಿದರು. ಯಾವ ಪ್ರಕಾರ ಒಬ್ಬ ಚಿತ್ರಕಾರನು ಒಂದು ಒರಡಾದ ಕಾಡು ಬಂಡೆಯಲ್ಲಿ ತನಗೆ ಬೇಕಾಗುವ ಒಂದು ಇಷ್ಟ ವಿಗ್ರಹವನ್ನು ಸಂದರ್ಶಿಸುವಂತೆ, ನಮ್ಮ ವಚನಕಾರರು ಭಿನ್ನ ಭಿನ್ನ ಸಂಸ್ಕೃತಿ ಭಿನ್ನ ಭಿನ್ನ ವಿಚಾರಗಳಿಂದ ತುಂಬಿ ತುಳುಕುತ್ತಿದ್ದ ನಮ್ಮ ಭರತ ಖಂಡದಲ್ಲಿ ಒಂದು ಆದರ್ಶ ಸಮಾಜದ ರೂಪರೇಷೆಯನ್ನು ಸಿದ್ಧಪಡಿಸಿದರು.

## ಸಮಾಜ ಸಂಘಟಣೆ.

ಈಗಿನ ಕಾಲದಲ್ಲಿ ನಮ್ಮ ಹಿಂದೂ ಸಮಾಜಕ್ಕೆ ಅಸ್ಪೃಶ್ಯತೆಯು ಕಳಂಕಪ್ರಾಯವಾಗಿರುವಂತೆ ಆಗಿನ ಕಾಲದಲ್ಲಿಯಾದರೂ ಇತ್ತು. ಇದನ್ನು ಪರಿಹಾರ ಮಾಡುವದಕ್ಕೋಸ್ಕರ ನಮ್ಮ ವಚನಕಾರರು ಆಯಾ ಧರ್ಮದಲ್ಲಿದ್ದ ನೀತಿವಂತ ಜನರನ್ನು ಒಟ್ಟುಗೂಡಿಸಿ, ಒಂದು ಸಭೆಯನ್ನು ಮಾಡಿಕೊಂಡು ಅದರ ಮುಖಾಂತರ ಜನರಿಗೆ ನೀತಿಯ ಬೋಧೆಯನ್ನು ಮಾಡುತ್ತಿದ್ದರು. ಈಗಿನ ರಾಷ್ಟ್ರಸಭೆಯಂತೆ ಆಗಿನ ಶಿವಾನುಭವ ಮಂಟಪ, ಈಗಿನ ರಾಷ್ಟ್ರಸಭೆಯ ಚಾಲಕನಾದ ಮಹಾತ್ಮಾ ಗಾಂಧಿಯಂತೆ ಆಗಿನ ಶಿವಾನುಭವ ಮಂಟಪದ ಚಾಲಕನಾದ ಮಹಾತ್ಮಾ ಬಸವೇಶ್ವರ ಹೀಗೆ ಪರಿಸ್ಥಿತಿಯಾಯಿತು. ಬಸವಣ್ಣನವರು ದಲಿತ ವರ್ಗದವರ ಕೂಡ ಯಾವ ಪ್ರಕಾರದ ವರ್ತನೆಯನ್ನಿಟ್ಟಿದ್ದರು. ಮತ್ತು ಯಾವ ಪ್ರಕಾರ ಅವರ ಜೀವನದೊಳಗೆ ಸಮರಸವಾಗಿದ್ದರೆಂಬದು ಅವರ ವಚನಗಳೇ ಸ್ಪಷ್ಟೀಕರಣ ಮಾಡುತ್ತವೆ.

೧. ಅಪ್ಪನು ಡೋಹರ ಕಕ್ಕಯ್ಯನಾಗಿ, ಮುತ್ತಯ್ಯ ಚನ್ನಯ್ಯನಾದರೆ ಆನು ಬದುಕುವೆ. ಮತ್ತು ಶ್ವಪಚಯ್ಯನ ಸನ್ನಿಧಿಯಿಂದ

ಮಾತು. ಮುಸಲ್ಮಾನರ ಒಂದೊಂದು ಗುಂಪು ಹಿಂದುಗಳನ್ನು ಸದೆ ಬಡೆದು ತಮ್ಮ ಧರ್ಮವನ್ನು ಪ್ರಸಾರ ಮಾಡಹತ್ತಿದರು. ಇದರಿಂದ ಆಗಿನ ಕಾಲದ ಹಿಂದೂ ಜನರ ಸಾಂಪತ್ತಿಕ ಸ್ಥಿತಿಯ ಮೇಲೂ ಧರ್ಮದ ಹಕ್ಕಿಗೂ ಬಲವಾದ ಏಟುಗಳು ಬಿದ್ದವು. ಈ ಪ್ರಕಾರ ಮುಸಲ್ಮಾನರು ನಮ್ಮ ಹಿಂದೂಗಳ ಮೇಲೆ ಬೀಳಬೇಕಾದರೆ, ಆಗಿನ ಕಾಲದ ಹಿಂದೂ ಸಮಾಜದ ಮನೋ ದೌರ್ಬಲ್ಯವೇ ಕಾರಣವಿರಬಹುದು. ಹೇಗೆಂದರೆ ಮೊದಲು ನಮ್ಮ ಸಮಾಜದಲ್ಲಿ ಜನ್ಮಸಿದ್ಧವಾದ ವರ್ಣಾಶ್ರಮ ಧರ್ಮವು ಪ್ರಚಾರದಲ್ಲಿತ್ತು. ಈ ವರ್ಣಾಶ್ರಮ ಧರ್ಮದ ಪ್ರಭಾವವು ರಾಜಕಾರಣ ದಲ್ಲಿ ಸಮಾವೇಶವಾಗಹತ್ತಿದ್ದರಿಂದ ಆಗಿನ ಕಾಲದ ನಮ್ಮ ರಾಜಕೀಯ ವಿಚಾರದಲ್ಲಿ ಶಿಥಿಲತೆಯುಂಟಾಯಿತು. ಬ್ರಾಹ್ಮಣರು, ಬಾಹ್ಯ ಜಗ ತ್ತನ್ನು ನಾವು ಮರೆತವರು, ಇಹಲೋಕದ ಚಿಂತೆ ನಮಗೆ ಬೇಡ, ಬ್ರಹ್ಮ ಚಿಂತನೆಯೇ ನಮ್ಮ ಜೀವನದ ಕೊನೆಯ ಗುರಿಯು ಎಂದು ಆಶ್ರಮವಾಸಿಗಳಾಗಿ ಕಾಲಹರಣ ಮಾಡುತ್ತಿದ್ದರು, ಕ್ಷತ್ರಿಯರು ರಾಜ ಕಾರಣಕ್ಕೆ ವಿಶೇಷತಃ ಸಂಬಂಧಪಟ್ಟವರಾದರೂ ತಮ್ಮ ತಮ್ಮೊಳಗಿನ ಅಂತಃಕಲಹದಿಂದ ಅವರ ಕ್ಷಾತ್ರ ತೇಜಸ್ಸೇ ಅವರಿಗೆ ವೈರಿಯಾಗಿ ಪರಿ ಣಮಿಸಿತು. ಇದಕ್ಕೆ ಇತಿಹಾಸವೇ ಸಾಕ್ಷಿ. ವೈಶ್ಯರು ತಮ್ಮ ವ್ಯಾಪಾ ರದ ಸೀಮೆಯನ್ನು ಬಿಟ್ಟು ಕದಲಲಿಲ್ಲ. ಸಮುದ್ರಯಾನ ಮಾಡು ವದು ಪಾಪದ ಕೆಲಸವೆಂದು ಅವರು ತಿಳಿಯುತ್ತಿದ್ದರು. ಇನ್ನುಳಿದ ಶೂದ್ರರಂತೂ ಬುದ್ಧಿಹೀನರಾಗಿ ಹೇಗೋ ಉಪಜೀವನವನ್ನು ಸಾಗಿಸಿ ಕೊಂಡು ಸೇವಾವೃತ್ತಿಯಲ್ಲಿಯೇ ಕಾಲಹರಣ ಮಾಡುತ್ತ ಇದ್ದರು. ಈ ಪ್ರಕಾರವಿದ್ದ ವರ್ಣ ವ್ಯವಸ್ಥೆಯಲ್ಲಿ ಒಬ್ಬರ ಸುಖ ದುಃಖಗಳು ಮತ್ತೊ ಬ್ಬರ ಸುಖ ದುಃಖಗಳಾಗಿ ಪರಿಣಮಿಸಲಿಲ್ಲ. ಸಮಾಜದಲ್ಲಿ ಒಕ್ಕಟ್ಟು ಸಡಲಿತು, ಬಿಕ್ಕಟ್ಟು ಉತ್ಪನ್ನವಾಯಿತು. ಇಂಥ ಪರಿಸ್ಥಿತಿಯಲ್ಲಿ ಮತ್ತೊಂದು ವಿಚಾರವು ನಮ್ಮನ್ನು ಬಾಧಿಸತೊಡಗಿತು. ಅದೇನಂದರೆ, ಕೆಲವು ಕರ್ಮಕಾಂಡಿಗಳಾದ ಸನಾತನಿಗಳು ಧರ್ಮದ ಹೆಸರಿನಿಂದ ಅನಂತ ಅತ್ಯಾಚಾರಗಳನ್ನು ಮಾಡುತ್ತಿದ್ದರು. ಒಂದು ಕಡೆ ಯಜ್ಞ-ಯಾಗಾದಿ ಕರ್ಮಗಳ ಹೆಸರಿನಿಂದ ಮೂಕ ಪ್ರಾಣಿಗಳ ವಧೆ ನಡೆ ಯಿತು. ಮತ್ತೊಂದು ಕಡೆ ಅದೇ ಧರ್ಮದ ಹೆಸರಿನಿಂದ ಸುಲಿಗೆಯಾ ದರೂ ನಡೆಯಿತು. ದಲಿತ ವರ್ಗದವರಂತೂ ಮೇಲ್ತರಗತಿಯ ಜನರ

ಕಡೆಯಿಂದ ಬರುತ್ತಿದ್ದ ಅನಂತ ಯಾತನೆಗಳನ್ನು ಸಹಿಸಿ ಹಿಂದೂ ಧರ್ಮದಲ್ಲಿರತಕ್ಕ ತನ್ನ ಸಹಾನುಭೂತಿಯನ್ನು ಸಡಲಿಸಿದರು. ಆದ್ದರಿಂದ ಪರಧರ್ಮದವರ ದಾಳಿಗೆ ಮತ್ತಿಷ್ಟು ಕಳೆ ಏರಿತು. ಇಂಥ ಸಮಯದಲ್ಲಿ ನಮ್ಮ ಹಿಂದೂ ಸಮಾಜದಲ್ಲಿ ಕ್ರಾಂತಿಯಾಗದೆ, ಅದರ ಸಂಸ್ಕೃತಿಯು ಉಳಿಯುವ ಶಕ್ಯವೇ ಇರಲಿಲ್ಲ.

ಇಂಥ ಪ್ರಸಂಗದಲ್ಲಿ ನಮ್ಮ ವಚನಕಾರರು ಜನಾಂಗ ಸಂಘಟನೆ, ಶಿಕ್ಷಣದಲ್ಲಿ ಬದಲಾವಣೆ, ಔದ್ಯೋಗಿಕ ಪ್ರಗತಿ, ಸ್ತ್ರೀ ಸ್ವಾತಂತ್ರ್ಯ, ಅಹಿಂಸೆ ಮೊದಲಾದ ರಾಷ್ಟ್ರಪೋಷಕವಾದ ಶಕ್ತಿಯನ್ನು ಜನಾಂಗದೊಳಗೆ ತುಂಬಹತ್ತಿದರು. ಯಾವ ಪ್ರಕಾರ ಒಬ್ಬ ಚಿತ್ರಕಾರನು ಒಂದು ಮೊರಡಾದ ಕಾಡು ಬಂಡೆಯಲ್ಲಿ ತನಗೆ ಬೇಕಾಗುವ ಒಂದು ಇಷ್ಟ ವಿಗ್ರಹವನ್ನು ಸಂದರ್ಶಿಸುವಂತೆ, ನಮ್ಮ ವಚನಕಾರರು ಭಿನ್ನ ಭಿನ್ನ ಸಂಸ್ಕೃತಿ ಭಿನ್ನ ಭಿನ್ನ ವಿಚಾರಗಳಿಂದ ತುಂಬಿ ತುಳುಕುತ್ತಿದ್ದ ನಮ್ಮ ಭರತ ಖಂಡದಲ್ಲಿ ಒಂದು ಆದರ್ಶ ಸಮಾಜದ ರೂಪರೇಷೆಯನ್ನು ಸಿದ್ಧಪಡಿಸಿದರು.

## ಸಮಾಜ ಸಂಘಟಣೆ.

ಈಗಿನ ಕಾಲದಲ್ಲಿ ನಮ್ಮ ಹಿಂದೂ ಸಮಾಜಕ್ಕೆ ಅಸ್ಪೃಶ್ಯತೆಯು ಕಳಂಕಪ್ರಾಯವಾಗಿರುವಂತೆ ಆಗಿನ ಕಾಲದಲ್ಲಿಯಾದರೂ ಇತ್ತು. ಇದನ್ನು ಪರಿಹಾರ ಮಾಡುವದಕ್ಕೋಸ್ಕರ ನಮ್ಮ ವಚನಕಾರರು ಆಯಾ ಧರ್ಮದಲ್ಲಿದ್ದ ನೀತಿವಂತ ಜನರನ್ನು ಒಟ್ಟುಗೂಡಿಸಿ, ಒಂದು ಸಭೆಯನ್ನು ಮಾಡಿಕೊಂಡು ಅದರ ಮುಖಾಂತರ ಜನರಿಗೆ ನೀತಿಯ ಬೋಧೆಯನ್ನು ಮಾಡುತ್ತಿದ್ದರು. ಈಗಿನ ರಾಷ್ಟ್ರಸಭೆಯಂತೆ ಆಗಿನ ಶಿವಾನುಭವ ಮಂಟಪ, ಈಗಿನ ರಾಷ್ಟ್ರಸಭೆಯ ಚಾಲಕನಾದ ಮಹಾತ್ಮಾ ಗಾಂಧಿಯಂತೆ ಆಗಿನ ಶಿವಾನುಭವ ಮಂಟಪದ ಚಾಲಕನಾದ ಮಹಾತ್ಮಾ ಬಸವೇಶ್ವರ ಹೀಗೆ ಪರಿಸ್ಥಿತಿಯಾಯಿತು. ಬಸವಣ್ಣನವರು ದಲಿತ ವರ್ಗದವರ ಕೂಡ ಯಾವ ಪ್ರಕಾರದ ವರ್ತನೆಯನ್ನಿಟ್ಟಿದ್ದರು. ಮತ್ತು ಯಾವ ಪ್ರಕಾರ ಅವರ ಜೀವನದೊಳಗೆ ಸಮರಸವಾಗಿದ್ದರೆಂಬದು ಅವರ ವಚನಗಳೇ ಸ್ಪಷ್ಟೀಕರಣ ಮಾಡುತ್ತವೆ.

೧. ಅಪ್ಪನು ಡೋಹರ ಕಕ್ಕಯ್ಯನಾಗಿ, ಮುತ್ತಯ್ಯ ಚನ್ನಯ್ಯನಾದರೆ ಆನು ಬದುಕುವೆ. ಮತ್ತು ಶ್ವಪಚಯ್ಯನ ಸನ್ನಿಧಿಯಿಂದ

ಭಕ್ತಿಯ ಸದ್ಗುಣವ ನಾನು ಅರಿವೆನಯ್ಯಾ. ಕಷ್ಟಜಾತಿಯ ಜನ್ಮದಲ್ಲಿ ಬರಿಸಿದೆ, ಎನಗಿದು ವಿಧಿಯೇ ಕೂಡಲ ಸಂಗಮದೇವಾ.

೨. ಶೆಟ್ಟಿಯೆಂಬೆನೆ ಶಿರಿಯಾಳನ? ಮಡಿವಾಳನೆಂಬೆನೆ, ಮಾಚಯ್ಯನ? ಡೋಹರನೆಂಬೆನೆ, ಕಕ್ಕಯ್ಯನ? ಮಾದಾರನೆಂಬೆನೆ ಚನ್ನಯ್ಯನ? ಆನು ಹಾರುವನೆಂದಡೆ ಕೂಡಲ ಸಂಗಯ್ಯ ನಗುವನಯ್ಯಾ.

೩. ಅಪ್ಪನು ನಮ್ಮ ಮಾದರ ಚನ್ನಯ್ಯ. ಬೊಪ್ಪನು ನಮ್ಮ ಡೋಹರ ಕಕ್ಕಯ್ಯ. ಚಿಕ್ಕಯ್ಯ ಎಮ್ಮಯ್ಯ ಕಾಣಿರಯ್ಯಾ. ಅಣ್ಣನು ನಮ್ಮ ಕಿನ್ನರಿ ಬೊಮ್ಮಯ್ಯ. ಎನ್ನ ನೇತಕ್ಕರಿಯಿರಿ ಕೂಡಲಸಂಗಮದೇವಾ.

೪. ಆಚಾರವನ್ನರಿಯಿರಿ, ವಿಚಾರವನ್ನರಿಯಿರಿ. ಜಂಗಮಸ್ಥಲ ಲಿಂಗ ಕಾಣಿರಯ್ಯಾ. ಜಾತಿ ಭೇದವಿಲ್ಲ, ಸೂತಕವಿಲ್ಲ, ಅಜಾಂತಗೆ ಕುಲವಿಲ್ಲ, ನುಡಿದಂತೆ ನಡೆಯದಿದ್ದರೆ, ಕೂಡಲಸಂಗಯ್ಯ ಮೆಚ್ಚನು, ಕೂಡಲಸಂಗಮದೇವಾ.

೫. ಕೊಲ್ಲುವನೇ ಮಾದಿಗ, ಹೊಲಸು ತಿಂಬುವನೇ ಹೊಲೆಯ, ಕುಲವೇನೋ ಅವಂದಿಗರ ಕುಲವೇನೋ? ಸಕಲ ಜೀವಾತ್ಮರಿಗೆ ಲೇಸನೇ ಬಯಸುವ ನಮ್ಮ ಕೂಡಲಸಂಗನ ಶರಣರೆಲ್ಲ ಕುಲಜರು.

೬. ಹೊಲೆಯರ ಭಾವಿಯಲೊಂದು ಎಲವು ತಾ ನಟ್ಟಿರಲು, ಹೊಲೆ ಎನುವುದೀ ಜಗವು. ಹಲವೆಲುವಿನಿಂದಾಧ ಮೆಲುವಂಥ ಬಾಯಿಂದ ಬಲುಸಟೆಯ ನುಡಿಯಲದು ಹೊಲೆಯರಾ ಭಾವಿಂದ ಕರಕಷ್ಟ ಕಾಣಾ ರಾಮನಾಥಾ.

೭. ನೆಲನೊಂದೇ ಹೊಲಗೇರಿ, ಶಿವಾಲಯಕ್ಕೆ ಜಲವೊಂದೇ ಶೌಚಾಚಮನಕ್ಕೆ ಕುಲವೊಂದೇ, ತನ್ನ ತಾನರಿದಂಗೆ ಫಲ ಒಂದೇ, ಷಡುದರ್ಶನ ಮುಕ್ತಿಗೆ ನಿಲುವೊಂದೇ ಕೂಡಲಸಂಗಮದೇವಾ ನಿಮ್ಮನರಿದಂಗೆ.

ಮಹಾತ್ಮಾ ಬಸವೇಶ್ವರ ಮತ್ತು ಮಹಾತ್ಮಾ ಗಾಂಧಿ ಇವರ ಅಸ್ಪೃಶ್ಯರ ಉದ್ಧಾರ ಕಾರ್ಯದಲ್ಲಿ ಏನಾದರೂ ಮತಭೇದವಿದೆಯೋ ಹೇಗೆಂದು ಯಾರಾದರೂ ಪ್ರಶ್ನಿಸಿದರೆ, ಎಳ್ಳಷ್ಟೂ ಮತಭೇದವಿಲ್ಲವೆಂದು

ನನಗೆ ಅನಿಸುತ್ತದೆ. ಮಹಾತ್ಮಾ ಗಾಂಧಿಯವರ ಕೆಲವು ವಚಗಳನ್ನು ನಾನು ಇಲ್ಲಿ ಉದಹರಿಸಿದ್ದೇನೆ.

೧. ಕಷ್ಟದಲ್ಲಿ ಸಿಕ್ಕಿ ಬಿದ್ದು ಪರಿತಪಿಸುವವರಾರು? ಬಡವರು, ಮತ್ತು ಬಲವಂತರ ದಬ್ಬಾಳಿಕೆಗೆ ಗುರಿಯಾಗಿ ನೊಂದಿರುವ ಅಸ್ಪೃಶ್ಯರು ಇವರ ಸೇವೆಯೇ ದೇವರ ಸೇವೆ; ದೈವಭಕ್ತನು ತ್ರಿಕರಣಪೂರ್ವಕ ವಾಗಿ ಈ ಜನರನ್ನು ಸೇವಿಸಬೇಕು; ಅಸ್ಪೃಶ್ಯರೆಂದು ಹೆಸರಿಟ್ಟು ಜನ ರನ್ನು ದೂರ ಓಡಿಸುವವರು. ದಬ್ಬಾಳಿಕೆಯಿಂದ ನೊಂದು ನರಳುತ್ತಿ ರುವವರನ್ನು ಹೇಗೆ ಸೇವಿಸಬಲ್ಲರು; ಮಾನವ ವರ್ಗವನ್ನೇ ಹತ್ತರ ಸೇರಿ ಸಿದ ಅವನ ಹೃದಯದಲ್ಲಿ ದೇವರೆಂತು ವಾಸಿಸಿಯಾನು?

೨. ಹಿಂದೂ ಜನರು ಉಚ್ಚವಾದ ಮತ್ತು ಉತ್ತಮವಾದ ಧರ್ಮಕ್ಕೆ ಕಳಂಕ ತರುವಂಥ ಅಸ್ಪೃಶ್ಯತೆಯನ್ನು ಎಲ್ಲಿಯವರೆಗೆ ತೆಗೆದುಹಾಕುವ ದಿಲ್ಲವೋ ಅಲ್ಲಿಯವರೆಗೆ ಅವರು ಸ್ವಾತಂತ್ರ್ಯಕ್ಕೆ ನಿಶ್ಚಯವಾಗಿ ಪಾತ್ರ ರಾಗಿರಲಾರರು. ಮತ್ತು ಅವರಿಗೆ ಲಭ್ಯವೂ ಆಗಲಾರದು.

೩. ಅಸ್ಪೃಶ್ಯತಾ ನಿರೋಧ ಚಳವಳಿಯು ಸ್ಥಾಪಿತವಾಗುವದೆಂದರೆ ಹರಿಜನ ಸ್ಥಿತಿಗತಿಗಳಲ್ಲಿ ಅಲ್ಪಸ್ವಲ್ಪ ವ್ಯತಾಸಮಾಡಬೇಕೆಂದಲ್ಲ ಎಲ್ಲಾ ಆತ್ಮರುಗಳು ಒಂದೇ ಎಂದೂ, ಉತ್ತಮ ಹೀನವೆಂಬ ವಿಭಾಗವು ಮಿಥ್ಯವೆಂದೂ, ಅದು ಮಾಯೆಯ ಪ್ರಭಾವವೆಂದೂ ಪ್ರತಿಪಾದಿಸುವ ಮಹೋನ್ನತ ತತ್ವಗಳನ್ನೊಳಗೊಂಡ ಹಿಂದೂ ಧರ್ಮಕ್ಕೆ ಅಂಟಿರುವ ಉಚ್ಚನೀಚ ಭಾವನೆಗೆ ಮೂಲವಾದ ಅಸ್ಪೃಶ್ಯತೆಯನ್ನು ಪೂರ್ಣವಾಗಿ ನಾಶಮಾಡಿ ಹಿಂದೂ ಧರ್ಮದ ಹಿತವನ್ನು ಸಾಧಿಸುವದೇ ಅಸ್ಪೃಶ್ಯತಾ ಚಳವಳಿಯ ಮೂಲ ಉದ್ದೇಶವು.

ಈ ತರದ ಉಪದೇಶಗಳಲ್ಲಿ ಉಭಯ ಮಹಾತ್ಮರ ಗೊತ್ತುವಳಿ ಗಳು ಒಂದೇ ಎಂಬುದು ತಿಳಿದುಬರುತ್ತದೆ.

ವಚನಕಾರರ ಈ ಕಾರ್ಯಕ್ರಮದೊಳಗೆ ಆಪತ್ತುಗಳಾದರೂ ಮೇಲಿಂದಮೇಲೆ ಬರಲಾರದೆ ಇರಲಿಲ್ಲ. ಯಾಕಂದರೆ ಆಗಿನ ಕಾಲ ದಲ್ಲಿ ಸನಾತನಿಗಳೆಂದರೆ ರಾಜರು, ರಾಜರೆಂದರೆ ಸನಾತನಿಗಳು. ವಚನ

ಕಾರರ ಹೊಸ ಆಚಾರವಿಚಾರಗಳು ಅವರಿಗೆ ಸರಿದೋರದಾದವು. ವಚನ ಕಾರರು ಧರ್ಮಲೆಂಡರೆಂದೂ, ಕರ್ಮಭ್ರಷ್ಟರೆಂದೂ ಅವರ ವಿಷಯು ವಾಗಿ ಬಿಜ್ಜಳರಾಜನಲ್ಲಿ ಮೇಲಿಂದಮೇಲೆ ಕಲುಷಿತವನ್ನುಂಟುಮಾಡು ತ್ತಿದ್ದರು. ಆದ್ದರಿಂದ ವಚನಕಾರರ ಕಾರ್ಯಕ್ರಮದೊಳಗೆ ರಾಜ ರಿಂದಲೂ ಸನಾತನಿಗಳಿಂದಲೂ ಸಂಕಟಗಳು ಬಂದೊದಗುತ್ತಿದ್ದವು. ಆದರೆ ಇಂಥ ಸಂಕಟಗಳಿಗೆ ಭಯ ಪಡದೇ ಅವರು ಸಮಾಜೋದ್ಧಾ ರದ ಕಾರ್ಯಕ್ರಮವನ್ನು ಒಳ್ಳೇ ಒತ್ತರದಿಂದ ಸಾಗಿಸಿದರು. ಇಷ್ಟೇ ಅಲ್ಲ. ಮಧುವಯ್ಯಾ ಹರಳಯ್ಯರೆಂಬುವರಲ್ಲಿ ಶರೀರ ಸಂಬಂಧ ಬೆಳಿಸಿ ದರು. ಈ ಪ್ರಕಾರವಾಗಿ ನಮ್ಮ ಹಿಂದೂ ಸಮಾಜದಲ್ಲಿರತಕ್ಕ ಉಚ್ಚ ನೀಚ ಭಾವನೆಗಳನ್ನು ಕಳಿದು, ಎಲ್ಲರೂ ಒಂದೇ ತಾಯಿಯ ಮಕ್ಕ ಳೆಂದೂ, ಧಾರ್ಮಿಕ ವಿಚಾರದಲ್ಲಿಯೂ ರಾಜಕಾರಣದಲ್ಲಿಯೂ ಪ್ರವೇಶ ಮಾಡಲಿಕ್ಕೆ ಹಕ್ಕು ಉಂಟೆಂದೂ ಸಾರಿಹೇಳಿದರು. ಇದರಿಂದ ಹಿಂದು ಳಿದ ಜಾತಿಯವರೂ, ಅಸ್ಪೃಶ್ಯರೂ ತಂಡೋಪತಂಡವಾಗಿ ಬಂದು, ವಚನಕಾರರ ತತ್ವವನ್ನು ಸ್ವೀಕಾರಮಾಡಿದರು.

## ಶಿಕ್ಷಣ.

ಯಾವುದಾದರೊಂದು ರಾಷ್ಟ್ರ ಅಥವಾ ಜನಾಂಗವು ಉನ್ನತಿಯ ಸ್ಥಾನವನ್ನು ಹೊಂದಬೇಕಾದರೆ, ರಾಷ್ಟ್ರೀಯ ಶಿಕ್ಷಣವೇ ಅದರ ಮಹೋ ನ್ನತವಾದ ಗುರಿಯಾಗಿರುತ್ತದೆ. ಯಾಕಂದರೆ ಸದ್ಯದ ಪರಿಸ್ಥಿತಿಯನ್ನು ನಿರೀಕ್ಷಣ ಬುದ್ಧಿಯಿಂದ ವಿಚಾರಮಾಡಿದ್ದಾದರೆ ಯಾವ ರಾಷ್ಟ್ರವು ಶಿಕ್ಷ ಣದೊಳಗೆ ಮುಂದುವರಿದಿದೆಯೋ, ಆ ರಾಷ್ಟ್ರವು ಒಳ್ಳೇ ಉನ್ನತಾವಸ್ಥೆ ಯೊಳಗೆ ಇರುತ್ತದೆ. ಇದು ನಮಗೆ ಗೊತ್ತಿದ್ದ ಮಾತು. ನಮ್ಮ ದೇಶದ ಪರಿಸ್ಥಿತಿಯು ಮೇಲಿಂದ ಶಿಕ್ಷಣವು ಆಗಿನ ಕಾಲಕ್ಕಾದರೂ ಬೇಕಾಗಿತ್ತು. ಈಗಿನ ಕಾಲಕ್ಕಾದರೂ ಕೂಡ ಶಿಕ್ಷಣದ ಅವಶ್ಯಕತೆ ಇದೆ. ಆಗಿನ ಕಾಲದ ಶಿಕ್ಷಣವು ಬರೇ ಸವರ್ಣೀಗಳ ಸ್ವತ್ತಾಗಿತ್ತೆ ಹೊರ್ತು ಸಾಮಾನ್ಯ ಜನರಿಗೆ ಶಿಕ್ಷಣಕೊಡುವ ಸಾಂಪ್ರದಾಯವಿರಲಿಲ್ಲ. ಸವರ್ಣಿಗಳಲ್ಲಿ ಶಿಕ್ಷ ಣವು ಸಾಧಾರಣ ಮಟ್ಟಿಗೆ ಇದ್ದಿತಾದರೂ ಅದು ಕೂಡ ಮತ ತತ್ವ ಗಳ ಬಡಿದಾಟಿನಲ್ಲಿ ಸಿಲ್ಕಿಕೊಂಡು ಹೀನಪರಿಸ್ಥಿತಿಯೊಳಗಾಗಿತ್ತು. ಇಂಥ ಪರಿಸ್ಥಿತಿಯಲ್ಲಿ ವಚನಕಾರರು ಸಾಮಾನ್ಯ ಜನರಿಗೂ ಕೂಡ

ಜ್ಞಾನದ ತಿಳುವಳಿಕೆಯಾಗಬೇಕೆಂಬ ಸದುದ್ದೇಶದಿಂದ ನಾಡಭಾಷೆಯಾದ ಕನ್ನಡದಲ್ಲಿಯೇ ಶಿಕ್ಷಣಕೊಡಹತ್ತಿದರು. ಗೀರ್ವಾಣ ಭಾಷೆಯಲ್ಲಿದ್ದ ಉಚ್ಚ ತತ್ವಗಳನ್ನೇ ತೆಗೆದುಕೊಂಡು ಸರಳವಾದ ಕನ್ನಡ ಭಾಷೆಯಲ್ಲಿ ಬೋಧಿಸಹತ್ತಿದರು. ಇದರಿಂದ ಸಾಮಾನ್ಯ ಜನರಿಗೂ ಕೂಡ ಮತ ತತ್ವಗಳ ವಿಚಾರಗಳನ್ನು ತಿಳಿದುಕೊಳ್ಳಲಿಕ್ಕೆ ಆಸ್ಪದಸಿಕ್ಕಿತು.

ಆಗಿನ ಕಾಲದಲ್ಲಿ ಶಿಕ್ಷಣದ ಕ್ರಮವು ಭಿನ್ನ ಭಿನ್ನ ಸ್ವರೂಪವನ್ನು ತಾಳಿತ್ತು. ದೇವತ್ವದ ವಿಷಯವಾಗಿಯಾಗಲೀ ಧರ್ಮದ ವಿಷಯದಲ್ಲಿಯಾಗಲೀ ಒಂದೇ ತರದ ಧೋರಣೆಯು ಇರಲಿಲ್ಲ. ಇದರಿಂದ ನಮ್ಮ ಜನಾಂಗದಲ್ಲಿ ಅನಂತ ಮುಖಗಳಾಗಿ ಪಕ್ಷ ಪಂಗಡಗಳು ಹೆಚ್ಚಾದವೇ ಹೊರ್ತು ಜನರಲ್ಲಿ ರಾಷ್ಟ್ರೀಯ ಭಾವನೆ ಉತ್ಪನ್ನವಾಗಿರಲಿಲ್ಲ ಇದನ್ನು ಹೋಗಲಾಡಿಸುವದಕ್ಕಾಗಿ ನಮ್ಮ ವಚನಕಾರರು ದೇವರು ಒಬ್ಬನೇ ಇರುವನೆಂದೂ, ಸತ್ಯಧರ್ಮವೇ ಧರ್ಮವೆಂದೂ, ಮನುಷ್ಯ ಜನಾಂಗನೆಂದರೆ ಒಂದೇ ಎಂದೂ, ತಮ್ಮ ಸ್ಪಷ್ಟವಾದ ಅಭಿಪ್ರಾಯವನ್ನು ಜನಾಂಗದ ಮುಂದೆ ಇಟ್ಟರು. ಮತ್ತು ಷಟ್‌ಸ್ಥಲಶಾಸ್ತ್ರಸಿದ್ಧಾಂತ ಮೂಲಕ ಜನರಲ್ಲಿ ಚಿತ್ತಶುದ್ಧಿ ಇಂದ್ರಿಯನಿಗ್ರಹ ಸ್ವಾವಲಂಬನ ಮೊದಲಾದ ವಿಷಯದ ಕಲ್ಪನೆಯನ್ನು ಜನಾಂಗದೊಳಗೆ ತುಂಬಿದರು.

## ದೇವರು ಒಬ್ಬನೇ ಇದ್ದಾನೆ.

೧. ಇಬ್ಬರು ಮೂವರು ದೇವರೆಂದು ಉಬ್ಬುಬ್ಬಿ ಮಾತಾಡಬೇಡ. ದೇವನೊಬ್ಬನೇ ಕಾಣಿರೋ. ಇಬ್ಬರೆಂಬುದು ಹುಸಿ ನೋಡಾ ಕೂಡಲ ಸಂಗಮದೇವಾ.

೨. ದೇವಲೋಕ ಮರ್ತ್ಯಲೋಕವೆಂಬಿವು ಬೇರಿಲ್ಲ ಕಾಣಿರಣ್ಣಾ. ಈ ಲೋಕದೊಳಗೆ ಮತ್ತನಂತಲೋಕ. ಶಿವಲೋಕ ಶಿವಾಚಾರವಯ್ಯಾ. ಶಿವಭಕ್ತನಿದ್ದ ಠಾವೇ ದೇವಲೋಕ ಶಿವಭಕ್ತನಂಗಣವೇ ವಾರಣಾಸಿ. ಕಾಯಕವೇ ಕೈಲಾಸ ಇದು ಸತ್ಯ ಕೂಡಲಸಂಗಮದೇವ.

೩. ದೇವಲೋಕ ಮರ್ತ್ಯಲೋಕವೆಂಬಿವು ಬೇರಿಲ್ಲಕಾಣಿರಣ್ಣಾ. ಸತ್ಯವ ನುಡಿವುದೇ ದೇವಲೋಕ ಮಿಥ್ಯವನುಡಿವುದೇ ಮರ್ತ್ಯಲೋಕ.

ಆಚಾರವೇ ಸ್ವರ್ಗ, ಅನಾಚಾರವೇ ನರಕ ಇದಕ್ಕೆ ನೀವೇ ಪ್ರಮಾಣು ಕೂಡಲಸಂಗಮದೇವ.

೪. ಪುಣ್ಯ ಪಾಪವೆಂಬವು ತಮ್ಮ ಇಷ್ಟ ಕಾಣಿರಣ್ಣಾ. ಅಯ್ಯಾ ಎಂದರೆ ಸ್ವರ್ಗ, ಎಲವೋ ಎಂದಡೆ ನರಕ. ದೇಶಭಕ್ತ ಜಯುಜಯು ಎಂಬ ನುಡಿಯೊಳಗೆ ಕೈಲಾಸವೈದುದು ಕೂಡಲಸಂಗಮದೇವಾ.

೫. ಕಿಚ್ಚು ದೈವವೆಂದು ಹವಿಯನಿಕ್ಕುವ ಹಾರುವರಮನೆಯಲ್ಲು ಕಿಚ್ಚೆದ್ದು ಸುಡುವಾಗ ಬಚ್ಚಲ ನೀರು ಬೀದಿಯ ಧೂಳು ಹೊಯ್ದು ಬೊಬ್ಬಿಟ್ಟೆಲ್ಲರ ಕರೆವರಯ್ಯಾ. ವಂದನೆಯ ಮರೆದು ನಿಂದಿಸುತಿರ್ದರಲ್ಲ. ಕೂಡಲಸಂಗಮದೇವಾ.

೬. ದೇವ ದೇವ ಬಿನ್ನಪವ ಅವಧಾರು. ವಿಪ್ರಮೊದಲು ಅಂತ್ಯಜ ಕಡೆಯಾಗಿ ಶಿವಭಕ್ತರನೆಲ್ಲ ಒಂದೇ ಎಂಬೆ. ಹಾರುವ ಮೊದಲು ಶ್ವಪಚ ಕಡೆಯಾಗಿ ಭವಿಯಾದವರನೆಲ್ಲ ಒಂದೇ ಎಂಬೆ. ಹೀಗೆಂದು ನಂಬುವ ದೆನ್ನ ಮನವು. ಈ ನುಡಿದ ನುಡಿಯೊಳಗೆ ಎಳ್ಳ ಮೊನೆಯಷ್ಟು ಸಂದೇಹ ವುಳ್ಳರೆ ನೀನಂದೇ ಮೂಗು ಕೊಯ್ಯಿ ಕೂಡಲಸಂಗಮದೇವಾ.

ವಚನಕಾರರ ಈ ತರದ ಬೋಧನೆಯಿಂದ ದೇವರ ವಿಷಯಕ್ಕಿದ್ದ ತಪ್ಪು ಕಲ್ಪನೆಗಳು ದೂರಾದವು. ಧರ್ಮದ ಮೂಢನಂಬಿಕೆಗಳು ಹಾರಿ ಹೋದವು. ಜನಾಂಗದಲ್ಲಿ ಒಕ್ಕಟ್ಟು ಬೆಳೆಯಹತ್ತಿತು. ಬಿಕ್ಕಟ್ಟು ಪರಿ ಹಾರವಾಗುತ್ತಾ ಬಂದಿತು. ಆಗಿನ ಕಾಲದ ಪಂಡಿತರ ಜ್ಞಾನಸಂಚ ಯಕ್ಕೆ ಗೀರ್ವಾಣ ಭಾಷೆಇದ್ದಂತೆ ಬಹುಸಂಖ್ಯಾಕರಾದ ಸಾಮಾನ್ಯ ಜನರ ಜ್ಞಾನಸಂಚಯಕ್ಕೆ ಕನ್ನಡ ಭಾಷೆಯೇ ಮಾತೃತ್ವದ ಸ್ಥಾನವನ್ನು ಪಡೆಯಿತು.

ಇನ್ನು ವಚನಕಾರರ ಶಿಕ್ಷಣವು ರಾಷ್ಟ್ರೀಯತೆಗೆ ಸಾಧಕವೇ ಬಾಧ ಕವೇ ಈ ಪ್ರಶ್ನೆಗೆ ನಾನು ಉತ್ತರ ರೂಪವಾಗಿ ಈಗಿನ ಕಾಲದಲ್ಲಿ ರಾಷ್ಟ್ರದ ಪುನರ್ಘಟನೆಯಲ್ಲಿ ಅದರಲ್ಲಿಯೂ ವಿಶೇಷತಃ ಶಿಕ್ಷಣದ ವಿಷಯದಲ್ಲಿ ಮುಖ್ಯ ಪಾತ್ರವನ್ನು ವಹಿಸಿದ ಮಹಾತ್ಮಾ ಗಾಂಧಿಯವರ ವಿಚಾರಗಳನ್ನೇ ತಮ್ಮ ಮುಂದಿಡುತ್ತೇನೆ.

(೧) ಯಾವುದು ಚಿತ್ತಶುದ್ಧಿಯನ್ನು ಮಾಡುವದಿಲ್ಲವೋ ಮನಸ್ಸನ್ನು ಮತ್ತು ಇಂದ್ರಿಯಗಳನ್ನು ವಶದಲ್ಲಿಟ್ಟುಕೊಳ್ಳಲು ಕಲಿಸುವದಿಲ್ಲವೋ ಧೈರ್ಯವನ್ನೂ ಸ್ವಾವಲಂಬನವನ್ನೂ ಹುಟ್ಟಿಸುವದಿಲ್ಲವೋ ಉಪಜೀವಿಕೆಯ ಮಾರ್ಗಗಳನ್ನು ತೋರಿಸುವದಿಲ್ಲವೋ ಪಾರತಂತ್ರದಿಂದ ಬಿಡುಗಡೆಯಾಗುವದಕ್ಕಾಗಿ ಸ್ವಾತಂತ್ರ್ಯದಿಂದ ಇರುವದಕ್ಕಾಗಿ ಕಳಕಳಿ ಸಾಹಸ, ಸಾಮರ್ಥ್ಯವನ್ನು ಹುಟ್ಟಿಸುವದಿಲ್ಲವೋ ಆ ಶಿಕ್ಷಣದಲ್ಲಿ ಅರುವಿನ ಆಗರವೂ ತಾರ್ಕಿಕ ಕೌಶಲ್ಯವೂ ಭಾಷಾ ಪಾಂಡಿತ್ಯವೂ ಎಷ್ಟೇ ಇದ್ದರೂ ಅದು ಶಿಕ್ಷಣವೆನಿಸುವದಿಲ್ಲ. ಅದು ಅಪೂರ್ಣ ಶಿಕ್ಷಣವೆನಿಸುವದು.

(೨) ಆದರ್ಶ ಶಿಕ್ಷಕನು ವಿದ್ಯಾರ್ಥಿಯ ಅಭ್ಯಾಸದ ಕಡೆಗೆ ಅಷ್ಟೇ ಗಮನವನ್ನು ಕೊಡದೆ, ಅವನ ಇಡೀ ಜೀವನದ ಉನ್ನತಿಯ ಕಡೆಗೆ ಸಂಪೂರ್ಣ ಲಕ್ಷ್ಯಗೊಟ್ಟು ಅವನ ಅಂತರಾಳದಲ್ಲಿ ಇಳಿಯಲು ಪ್ರಯತ್ನಿಸುವನು.

ಈ ಪ್ರಕಾರ ಉಭಯ ಮಹಾತ್ಮರ ಶಿಕ್ಷಣದ ವಿಚಾರಗಳನ್ನು ತುಲನಾತ್ಮಕ ದೃಷ್ಟಿಯಿಂದ ನೋಡಿದರೆ, ವಿಶೇಷತಃ ಬಿನ್ನಾಭಿಪ್ರಾಯಗಳು ಕಂಡುಬರುವದಿಲ್ಲ. ಆದ್ದರಿಂದ ವಚನಕಾರರು ರಾಷ್ಟ್ರೀಯ ಧ್ಯೇಯವನ್ನೇ ಶಿಕ್ಷಣದ ಮೂಲಮಂತ್ರವನ್ನಾಗಿ ಮಾಡಿದರು.

## ಉದ್ಯೋಗ.

ಯಾವದಾದರೊಂದು ರಾಷ್ಟ್ರ ಅಥವಾ ಜನಾಂಗದ ಸಾಂಪತ್ತಿಕ ಸ್ಥಿತಿಯು ಉನ್ನತಿಯಾಗಬೇಕಾದರೆ, ಆ ರಾಷ್ಟ್ರದಲ್ಲಿ ಔದ್ಯೋಗಿಕ ಸುಧಾರಣೆಯಾಗುವದು ಅವಶ್ಯವದೆ. ಆ ಪ್ರಕಾರ ನಮ್ಮ ವಚನಕಾರರು ಜನಾಂಗದೊಳಗೆ ಉದ್ಯೋಗಕ್ಕೆ ಒಳ್ಳೇ ಮಹತ್ವವನ್ನು ಕೊಟ್ಟಿದ್ದಾರೆ. ಯಾಕಂದರೆ ಅವರು ಸಮಾಜದಲ್ಲಿ ಯಾವದೇ ತರಗತಿಯ ಉದ್ಯೋಗವಿದ್ದರೂ ಅದಕ್ಕೆ ಸಮಾನ ಯೋಗ್ಯತೆಯನ್ನು ಕೊಟ್ಟಿದ್ದಾರೆ. ಮತ್ತು ಸಮಾಜದಲ್ಲಿ ಸಕಲರೂ ಯಾವದಾದರೊಂದು ಉದ್ಯೋಗ ಮಾಡಿಯೇ ತೀರಬೇಕೆಂಬ ಸ್ವಾವಲಂಬನ ತತ್ವವನ್ನು ಜನಾಂಗದೊಳಗೆ ತುಂಬಿದರು. ಇದರಿಂದ ಪ್ರತಿಯೊಬ್ಬ ಮನುಷ್ಯನು ಯಾವದಾದರೊಂದು ಉದ್ಯೋಗವನ್ನು ಮಾಡಿಯೇ ಹೊಟ್ಟೆ ತುಂಬಿಕೊಳ್ಳಬೇಕಾಯಿತು. ವಚ

ನಕಾರರಿಗಿಂತ ಪೂರ್ವದಲ್ಲಿ ಬಡಿಗ, ಸಿಂಪಿಗ, ಅಕ್ಕಸಾಲಿಗ, ಕಮ್ಮಾರ ಮೊದಲಾದ ಉದ್ಯೋಗಗಳು ಹೀನವಾದವುಗಳೆಂದೂ ಇಂಥ ಕೆಲಸಗಳನ್ನು ಮಾಡುವವರು ಕೀಳು ಕುಲದವರೆಂದೂ ತಿಳಿಯುತ್ತಿದ್ದರು. ವಚನಕಾರರು ಇಂಥ ಮೂಢ ವಿಚಾರವನ್ನು ತೆಗೆದುಹಾಕಿ ಉದ್ಯೋಗದಲ್ಲಿ ಮೇಲು ಕೀಳುಗಳೆಂಬ ಭಾವನೆಯು ತಪ್ಪೆಂದೂ ಇಂಥ ವಿಚಾರಗಳು ರಾಷ್ಟ್ರ ಘಾತುಕವಾದ ಕೀಳು ಭಾವನೆ ಎಂದೂ ಜನರಿಗೆ ಬೋಧನೆಯನ್ನು ಮಾಡಿದರು.

## ಕಾಯಕದ ಮಹತ್ವ.

೧. ಕೃಷಿಕೃತ್ಯ ಕಾಯಕದಿಂದಾದಡೇನು ತನು ಮನ ಬಳಲಿಸಿ ತಂದು ದಾಸೋಹವ ಮಾಡುವ ಪರಮ ಸದ್ಭಕ್ತನ ಪಾದವ ತೋರಯ್ಯಾ ಎನಗೆ. ಅದೆಂಬೆನೆ, ಆತನ ತನು ಶುದ್ಧ ಮನಶುದ್ಧ ನಡೆಶುದ್ಧ ನುಡಿ ಎಲ್ಲ ಪಾವನ. ಆತನಿಗೆ ಉಪದೇಶವ ಮಾಡಿದಾತನೇ ಪರಮ ಸದ್ಗುರು. ಅಂತಪ್ಪ ಸದ್ಭಕ್ತನ ಮನೆಯು ಕೈಲಾಸವೆಂದು ಹೊಕ್ಕು ಲಿಂಗಾರ್ಚನೆಯ ಮಾಡುವ ಜಂಗಮವೇ ಜಗತ್ಪಾವನ, ಇಂತಪ್ಪವರ ನಾನು ನೆರೆ ನಂಬಿ ನಮೋ ನಮೋ ಎಂಬೆನಯ್ಯಾ ಕೂಡಲ ಸಂಗಮದೇವಾ.

೨. ಕಾಯಕದಲ್ಲಿ ನಿರುತನಾದಡೆ, ಗುರುದರುಶನವಾದರೂ ಮರೆಯಬೇಕು, ಲಿಂಗಪೂಜೆಯಾದರೂ ಮರೆಯಬೇಕು, ಜಂಗಮ ಮುಂದೆ ಇದ್ದಡೆಯೂ ಹಂಗುಹರಿಯಬೇಕು, ಕಾಯಕವೇ ಕೈಲಾಸವಾದ ಕಾರಣ ಅಮಳೇಶ್ವರ ಲಿಂಗವಾಯಿತ್ತಾದರೂ ಕಾಯಕದೊಳಗು.

## ಕಾಯಕದಲ್ಲಿ ಜಾತಿಭೇದವಿಲ್ಲ.

೩. ದೇವಸಹಿತ ಭಕ್ತನ ಮನೆಗೆ ಬಂದರೆ, ಕಾಯಕವಾವುದೆಂದು ಬೆಸಗೊಂಡೆನಾದರೆ ನಿಮ್ಮಾಣೆ ನಿಮ್ಮ ಪುರಾತನರಾಣೆ, ತಲೆದಂಡ ತಲೆದಂಡ ಕೂಡಲ ಸಂಗಮದೇವಾ ಭಕ್ತರಲ್ಲಿ ಕುಲವನರಸಿದೊಡೆ ನಿಮ್ಮ ರಾಣಿವಾಸದಾಣೆ.

## ಉದ್ಯೋಗದಲ್ಲಿ ನೈತಿಕ ಬೆಂಬಲವಿರಬೇಕು.

೪. ಕಂದಿಸಿ ಕುಂದಿಸಿ ಬಂಧಿಸಿ ನೋಯಿಸಿ; ಕಂಡ ಕಂಡವರ ಬೇಡಿ ತಂದು ಜಂಗಮ ಲಿಂಗಕ್ಕೆ ಮಾಡಿಹನೆಂಬ ದಂದುಗದ ಮಾಟಕ್ಕೆ ಲಿಂಗ ನೈವಿದ್ಯಸಲ್ಲದು. ತನುಕರಗಿ ಮನಬಳಲಿ ಬಂದ ತೆರೆದ ಅಸುವ ನರಿದು ಸಂದಿಲ್ಲದೆ ಸಂಶಯವಿಲ್ಲದೆ ಜಂಗಮ ಲಿಂಗಕ್ಕೆ ದಾಸೋಹವೇ ಮಾಟ, ಕಾರೆಯ ಸೊಪ್ಪಾದರೂ ಕಾಯಕದಿಂದ ಬಂದುದು ಲಿಂಗ ಕ್ಕರ್ಪಿತವಲ್ಲದೆ ದುರಾಶೆಯಿಂದ ಬಂದುದು ಅನರ್ಪಿತ ಇದು ಕಾರಣ ಸತ್ಯ ಶುದ್ಧ ಕಾಯಕದ ನಿತ್ಯ ದ್ರವ್ಯವಾದರೆ ಚಂದೇಶ್ವರ ಲಿಂಗಕ್ಕೆ ನೈವೇದ್ಯ ಸಂದಿತ್ತು ಕೇಳಯ್ಯಾ.

## ಉದ್ಯೋಗದಲ್ಲಿ ಸ್ತ್ರೀಯರ ಸಾಹಸ.

೫. ನಾತಿರುಹುತಿಹ ರಾಟಿಯ ಕುಲಜಾತಿಯ ಕೇಳರಣ್ಣಾ. ಅಡಿಯಣ ಹಲಗೆ ಬ್ರಹ್ಮ, ತೋರಣ ವಿಷ್ಣು. ನಿಂದ ಬೊಂಬೆ ಮಹಾ ರುದ್ರ, ರುದ್ರನ ಬೆಂಬಳಿಯವೆರಡು ಸೂತ್ರದ ಕರ್ಣ ಅರಿವೆಂಬ ಕದರು ಭಕ್ತಿಯೆಂಬ ಕೈಯ್ಯಲ್ಲಿ ತಿರುಹಲಾಗಿ ಸುತ್ತಿತ್ತು ನೂಲು. ಕದಿರು ತುಂಬಿತ್ತು ರಾಟಿಯ ತಿರುಪಲಾರೆ. ಎನ್ನ ಗಂಡ ಹುಟ್ಟಿಹ ಕದಿರೆರೆ ಮ್ಮೊಯ್ಯೊಡೆಯ ಗುಮ್ಮೇಶ್ವರ.

ಈ ಪ್ರಕಾರ ವಚನಕಾರರು ಔದ್ಯೋಗಿಕ ಕ್ರಾಂತಿಯನ್ನು ಮಾಡಿ ರಾಷ್ಟ್ರೀಯತ್ವದ ಮುಖ್ಯ ಅಂಗವೆನಿಸಿದ ಸಾಂಪತ್ತಿಕ ಸುಧಾರಣೆಗಾಗಿ ಪ್ರಯತ್ನ ಮಾಡಿದರು. ಇದು ಏನು ಸಾಮಾನ್ಯ ಕೆಲಸವಲ್ಲ. ಆಧು ನಿಕ ಹಿಂದುಸ್ತಾನದಲ್ಲಿಯೂ ಕೂಡ ರಾಷ್ಟ್ರ ಮುಖಂಡರು ನಿರುದ್ಯೋ ಗದ ನಿವಾರಣೆಗಾಗಿ ಸತತ ಪ್ರಯತ್ನ ಮಾಡಹತ್ತಿದ್ದಾರೆ. ಆದ್ದರಿಂದ ನಮ್ಮ ವಚನಕಾರರ ಔದ್ಯೋಗಿಕ ಆಂದೋಲನವು ಜನಾಂಗದ ಸಾಂಪ ತ್ತಿಕ ಸ್ಥಿತಿಯನ್ನು ಸುಧಾರಿಸಿ, ರಾಷ್ಟ್ರೀಯ ಭಾವನೆಯನ್ನು ಉಜ್ವಲಗೊ ಳಿಸುವದೇ ಆಗಿದೆ.

## ಸ್ತ್ರೀ ಸ್ವಾತಂತ್ರ್ಯ.

ಸಧ್ಯದ ಜಗತ್ತಿನೊಳಗೆ ಸ್ತ್ರೀಯರಿಗೆ ಸ್ವಾತಂತ್ರತೆ ಕೊಡಬೇಕೋ ಕೊಡಬಾರದೋ ಎಂಬದು ಇನ್ನೂ ಚರ್ಚಾಸ್ಪದ ವಿಚಾರವಾಗಿದೆ.

ಫ್ಯಾಸಿಝುಂ ಮತ್ತು ನಾಜೀ ತತ್ವಗಳು ಸ್ತ್ರೀಯರ ಸ್ವಾತಂತ್ರ್ಯಕ್ಕೆ ನಿರ್ಬಂಧ ಇರಬೇಕೆಂದೂ, ಬೊಲ್ಸೆವಿಜಂ ಮತ್ತು ಪ್ರಜಾಪಕ್ಷಗಳು ಅವರಿಗೆ ಸ್ವಾತಂತ್ರ್ಯ ಕೊಡಬೇಕೆಂದೂ ವಾದಿಸುತ್ತವೆ. ಅದರಂತೆ ನಮ್ಮ ಪೌರ್ವಾತ್ಯ ಜನಾಂಗದಲ್ಲಿಯೂ ಕೂಡ ಮತಭೇಧ ಅದೆ ಅಂತೂ ಜಗತ್ತಿನಲ್ಲಿ ಸ್ತ್ರೀ ಸ್ವಾತಂತ್ರ್ಯವು ವಾದಗ್ರಸ್ತ ವಿಷಯವಾಗಿದೆ. ವಚನ ಕಾರರು ಸ್ತ್ರೀ ಸ್ವಾತಂತ್ರ್ಯತೆಗೆ ಒಪ್ಪಿಗೆಯನ್ನು ಕೊಟ್ಟರಾದರೂ ಅದು ನೈತಿಕ ಶಕ್ತಿಯ ಆಧಾರದ ಮೇಲೆ ನಿಲ್ಲಬೇಕೆಂಬ ಒಂದು ಸಂಕೋಲಿ ಯನ್ನು ಬಗಿದಿದ್ದಾರೆ. ಅಂದರೆ ನಮ್ಮ ವಚನಕಾರರ ಸ್ತ್ರೀ ಸ್ವಾತಂತ್ರ್ಯವು ನೀತಿಯುಕ್ತವಾದುದು. ಸ್ವಾಭಾವಿಕವಾಗಿ ಸ್ತ್ರೀಯರು ಕೋಮಲಹೃದಯಿ ಗಳು ಮತ್ತು ಪ್ರೇಮಿಗಳು ಇನ್ನು ವಿಷಯವಾಸನೆಗೆಳೆಯುವಂಥ ಪ್ರೇಮದಿಂದ ರಾಷ್ಟ್ರಕ್ಕೆ ಅಹಿತನಾಗಬಹುದು; ಶುದ್ಧ ಸಾತ್ವಿಕ ಪ್ರೇಮ ದಿಂದ ಹಿತವಾಗಬಹುದು. ಶುದ್ಧ ಸಾತ್ವಿಕ ಪ್ರೇಮದಿಂದ ಕೂಡಿದ ಸ್ತ್ರೀ ಸ್ವಾತಂತ್ರ್ಯವೇ ನಮ್ಮ ವಚನಕಾರರ ತತ್ವವಾದ್ದರಿಂದ ವಚನ ಕಾರರ ಸ್ತ್ರೀ ಸ್ವಾತಂತ್ರ್ಯತೆಯಲ್ಲಿ ಒಂದು ಅದ್ಭುತ ಶಕ್ತಿ ಇದೆ. ಸ್ತ್ರೀಯ ರಿಗೆ ಸ್ವಾತಂತ್ರ್ಯವನ್ನು ಕೊಟ್ಟು ಅವರ ನೈತಿಕ ವೃತ್ತಿಯನ್ನೇ ಹದ ಗೆಡಿಸಿದ ಜನಾಂಗಕ್ಕೂ ನಮ್ಮ ವಚನಕಾರರು ಬೋಧನೆಯನ್ನು ಮಾಡಿ ದ್ದಾರೆ. ಮತ್ತು ಸ್ತ್ರೀಯರನ್ನು ದಾಸ್ಯದಲ್ಲಿಟ್ಟು ಅವರನ್ನು ಮನುಷ್ಯತ್ವದ ಸೀಮೆಯಿಂದ ಹೊರದೂಡಿದ ಜನಾಂಗಕ್ಕೂ ತಿಳಿ ಹೇಳಿದ್ದಾರೆ. ಅಂತೂ ನಮ್ಮ ವಚನಕಾರರ ಸ್ತ್ರೀ ಸ್ವಾತಂತ್ರ್ಯವು ಜಗತ್ತಿಗೇನೇ ಬುದ್ಧಿಕಲಿಸು ವಂತಹದು ಇದೆ. ಮತ್ತು ಅವರ ಈ ಧೋರಣೆಯಿಂದ ಸದ್ಯದ ಜಗ ತ್ತಿನಲ್ಲಿ ಸ್ತ್ರೀ ಸ್ವಾತಂತ್ರ್ಯದ ವಿಷಯಕ್ಕೆ ಇದ್ದ ವಾದವು ಬಗೆಹರಿಯ ಬಹುದು ಎಂದು ತೋರುತ್ತದೆ. ವಚನಕಾರರ ಧೋರಣೆಯನ್ನು ಅವರ ವಚನಗಳಿಂದಲೇ ಅರಿಯಲಾಗಿದೆ.

೧. ಸತಿಪತಿಗಳೊಂದಾದ ಭಕ್ತಿ ಹಿತವಾಗಿಪ್ಪುದು ಶಿವಂಗೆ, ಸತಿ ಪತಿಗಳೊಂದಾಗದವನ ಭಕ್ತಿ ಅಮೃತದೊಳ್ ವಿಷಬೆರಸಿದಂತೆ ಕಾಣಾ ರಾಮನಾಥಾ.

೨. ಉಭಯ ದೃಷ್ಟಿಯಿಂದ ದೃಷ್ಟವ ಕಾಂಬಂತೆ ದಂಪತಿ ಏಕ ಭಾವವಾಗಿಸಿಂದಲ್ಲಿ ಗುಹೇಶ್ವರಲಿಂಗಕ್ಕೆ ಅರ್ಪಿತವಾಯಿತ್ತು ಸಂಗನ ಬಸವಣ್ಣಾ.

ಈ ವಚನಗಳ ಮೇಲಿಂದ ನೋಡಿದರೆ, ಸ್ತ್ರೀ ಮತ್ತು ಪುರುಷ ರಿಂದರೆ, ಒಂದೇ ಜೀವನದ ಎರಡು ದೇಹಗಳು, ಎಂಬ ಕಲ್ಪನೆಯನ್ನು ತಂದುಕೊಟ್ಟು ಮೇಲು ಕೀಳೆಂಬ ಭಾವನೆಯನ್ನು ಕಿತ್ತೊಗೆದರು. ಇದ ರಿಂದ ಸಮಾಜದಲ್ಲಿ ಎಂಥ ಸ್ತ್ರೀಯರು ಉತ್ಪನ್ನವಾದರೆಂದರೆ, ಆಧ್ಯಾ ತ್ಮಿಕ ಕ್ಷೇತ್ರದ ಮಹೋನ್ನತ ಶಿಖರವೆನಿಸಿದ ಐಕ್ಯಸ್ಥಲದವರೆಗೂ ಹೋಗಿ ಮುಟ್ಟಿದರೆಂಬುದನ್ನು ಅವರ ವಚನಗಳಿಂದ ಸ್ಪಷ್ಟೀಕರಣ ಮಾಡಿದ್ದೇನೆ.

೩. "ಅಂಗದೊಳಗೆ ಅಂಗವಾಗಿ ಅಂಗ ಲಿಂಗೈಕ್ಯವ ಮಾಡಿದೆ, ಮನದೊಳಗೆ ಮನವಾಗಿ ಮನವ ಲಿಂಗೈಕ್ಯವ ಮಾಡಿದೆ, ಭಾವದೊ ಳಗೆ ಭಾವವಾಗಿ ಭಾವಲಿಂಗೈಕ್ಯವ ಮಾಡಿದೆ, ಅರಿವಿನೊಳಗೆ ಅರಿವಾಗಿ ಅರಿವು ಲಿಂಗೈಕ್ಯವ ಮಾಡಿದೆ, ಕ್ರೀಯುಗಳೆಲ್ಲವ ನಿಲಿಸಿ ಕ್ರೀಯಾತೀತ ವಾಗಿ ನಿಷ್ಪತ್ತಿ ಲಿಂಗೈಕ್ಯವಾದೆ ನಾನೆಂಬುದ ನಿಲಿಸಿ ನೀನೆಂಬುದ ಕೆಡಿಸಿ ಉಭಯ ಲಿಂಗೈಕ್ಯವ ಮಾಡಿದೆ, ಚನ್ನಮಲ್ಲಿಕಾರ್ಜುನನೊಳಗೆ ನಾನಳಿ ದೆನಾಗಿ ಲಿಂಗವೆಂಬ ಘನವು ಎನ್ನಲ್ಲಿ ಅಳಿಯಿತ್ತು ಕಾಣಾ ಸಂಗನ ಬಸವಣ್ಣಾ.

೪. ನಾನು ನಿನಗೊಲಿದೆ ನೀನು ಎನಗೊಲಿದೆ, ನೀನೆನ್ನನಗಲ ದಿಪ್ಪೆ, ನಾನಿನ್ನನಗಲದಿಪ್ಪೆ ನಿನಗೆ ನನಗೆ ಬೇರೊಂದು ಠಾವುಂಟೇ? ನೀ ಕರುಣಿ ಎಂಬುದ ನಾ ಬಲ್ಲೆ. ನೀನಿರಿಸಿದ ಗತಿಯೊಳಗೆ ಇಪ್ಪಳಾ ನಯ್ಯಾ. ನೀನೇ ಬಲ್ಲೆ ಚನ್ನಮಲ್ಲಿಕಾರ್ಜುನ.

ಈ ಪ್ರಕಾರ ವಚನಕಾರರು ಸ್ತ್ರೀಯರಿಗೆ ಸ್ವಾತಂತ್ರ್ಯತೆಯನ್ನು ಕೊಟ್ಟ ಕಾರಣ ಸಮಾಜದಲ್ಲಿ ಅಕ್ಕಮಹಾದೇವಿಯರಂಥ ಸ್ತ್ರೀ ರತ್ನಗಳು ಉದಯವಾದರು. ಇಷ್ಟೇ ಅಲ್ಲ ಶಿವಾನುಭವ ಮಂಟಪದ ಮಧ್ಯ ದೊಳು ನಿಂತು ಜ್ಞಾನ ಭಾಂಡಾರವೆನಿಸಿದ ಅಲ್ಲಮ ಪ್ರಭುವಿನನ್ನೂ ಭಕ್ತಿಯ ಕಣಿಯಾದಂಥ ಬಸವಣ್ಣನವರನ್ನೂ ವಾದದಲ್ಲಿ ಸೋಲಿಸಿ, ಆತ್ಮ ತೇಜಸ್ಸಿನ ಅಖಂಡ ವೈಭವವನ್ನು ಮೆರೆಸಿದರು. ಆದ್ದರಿಂದ ನಮ್ಮ ಸ್ತ್ರೀ ಸ್ವಾತಂತ್ರ್ಯತೆಯಲ್ಲಿ ಭಕ್ತಿಯ ಭಾಂಡಾರವಿದೆ. ಸತ್ಯದ ಸೌಂದರ್ಯವಿದೆ ಪ್ರೇಮದ ನನೆ ಇದೆ ಅಹಿಂಸೆಯ ಗೊನೆ ಇದೆ ವಾದ ಗ್ರಸ್ತ ಜಗತ್ತು ಇತ್ತ ಲಕ್ಷ್ಯ ಕೊಡುವದೇ?

## ಅಹಿಂಸೆ.

ವಚನಕಾರರ ಅಹಿಂಸೆಯ ವಿಷಯಕ್ಕೆ ಹೇಳುವದಾದರೆ ಅವರು ಪ್ರಾಣಿಗಳ ಹಿಂಸೆ ಮಾಡಬಾರದು. ಇಷ್ಟೇ ಅಲ್ಲ ಎರಡನೇಯವರ ಮನಸ್ಸು ನೋಯಿಸುವಂಥ ವೃತ್ತಿ ಕೂಡ ಹಿಂಸೆ ಎಂದೆ ಅವರ ಭಾವನೆ ಇದ್ದಂತೆ ಕಂಡು ಬರುತ್ತದೆ. ಯಾಕಂದರೆ ಬಸವಾದಿ ಪ್ರಮಥರ ಯಾವ ವಚನಗಳನ್ನು ಒಳಹೊಕ್ಕು ನೋಡಿದರೂ ಅಲ್ಲಿ ಕಠೋರತೆಯು ಲವ ಲೇಶವು ಕೂಡ ಕಂಡುಬರುವದಿಲ್ಲ. ಒಮ್ಮೊಮ್ಮೆ ಎರಡನೇಯರ ವಿಚಾರಗಳನ್ನು ಖಂಡನೆ ಮಾಡಿರುವರು. ಆದರೆ ಅದರಲ್ಲಿಯೂ ಕೂಡ ಒಂದು ತರದ ವಿನಯವದೆ.

೧. ತನುವ ನೋಯಿಸಿ ಮನವ ಬಳಲಿಸಿ ನಿಮ್ಮ ಪಾದವ ಪಿಡಿವವರೊಳರೇ? ಈ ನುಡಿ ಸುಡದಿಹುದೇ? ಕೂಡಲ ಸಂಗಮದೇವಾ ಶಿವಭಕ್ತರ ನೋವು ಲಿಂಗದ ನೋವು.

೨. ಜಾಲಗಾರನೊಬ್ಬ ಜಲವಹೊಕ್ಕು ಶೋಧಿಸಿ, ಹಲವು ಪ್ರಾಣಿಗಳ ಕೊಂದು ನಲನಲಿದಾಡುವ ತನ್ನ ಮನೆಯಲೊಂದು ಶಿಶು ಸತ್ತರೆ ಆದಕೆ ಮರುಗುವಂತೆ ಅವಕೇಕೆ ಮರುಗನು? ಚನ್ನಮಲ್ಲಿಕಾರ್ಜುನನ ಭಕ್ತನಾಗಿರ್ದು ಜೀವ ಹಿಂಸೆಮಾಡುವ ಮಾದಿಗರ ನೇನೆಂಬೆನಯ್ಯಾ?

೩. ನುಡಿಯಲ್ಲಿ ಕಿಂಕರತ್ವವನರಿದು ಕರವ ಬೀಸುವಲ್ಲಿ ತುಷಾರ ಕೀಟಕವನರಿದು ಅಡಿ ಇಡುವಲ್ಲಿ ಪೊಡವಿಯಲ್ಲಿ ಹೊರಹೊಮ್ಮಿದ ಜೀವನ ಚೇತನಾದಿಗಳನರಿದು ಮತ್ತೆ ಗಿಡವ ಹಿಡಿವಲ್ಲಿ ಮತ್ತೊಂದು ಒಡಗೂಡುವಲ್ಲಿ ಒಡಗೂಡಿ ಬಿಡುವಲ್ಲಿ ಸರ್ವ ದಯಕ್ಕೆ ಮದಿ ಪುಚ್ಛವಿಲ್ಲದಿರಬೇಕು ಇಂತೀ ಸಡಗರದ ಚಿತ್ತ ದಸರೇಶ್ವರ ಲಿಂಗನೊಡಗೂಡುವ ಭಕ್ತಿ.

### ಆದ್ದರಿಂದ ನಮ್ಮ ವಚನಕಾರರು ಶುದ್ಧ ಅಹಿಂಸಾ ವಾದಿಗಳು.

ಅನೇಕರು ರಾಜಕಾರಣಕ್ಕೂ ಧರ್ಮಕ್ಕೂ ಏನೂ ಸಂಬಂಧವಿಲ್ಲ ಇವಕ್ಕೆ ರಾಜಕೀಯ ಸ್ವರೂಪ ಕೊಡುವದು ತಪ್ಪು ಎಂದು ತಿಳಿಯುತ್ತಾರೆ. ಆದರೆ ಯಾವದಾದರೂ ರಾಜ್ಯವು ಬಹುಕಾಲ ಸ್ಥಿರವಾಗಿ ಉಳಿಯಬೇಕಾದರೆ ನೀತಿಯು ನೆಲೆಗಟ್ಟಿನ ಮೇಲೆಯೇ ಅದು ನಿಲ್ಲಬೇಕು. ಇಲ್ಲದಿದ್ದರೆ ಅದು ಬಹು ದಿವಸ ಬಾಳಲಾರದು. ನೀತಿಯಿಲ್ಲದ

ರಾಜಕಾರಣ ರಾಷ್ಟ್ರೀಯತ್ವವೇ ಅಲ್ಲ ಅದು ಬಂಡುಗಾರಿಕೆಯಲ್ಲಿ ಬರುತ್ತದೆ. ನೀತಿ ಎಂದರೆ ಸತ್ಯ ಪ್ರೇಮ ಅಹಿಂಸೆ ಇವುಗಳ ಮಿಲನದಿಂದಾದ ಒಂದು ತತ್ವ ಇಂಥ ತತ್ವಗಳ ಭೂಮಿಕೆಯ ಮೇಲೆಯೇ ನಮ್ಮ ವಚನಕಾರರು ರಾಷ್ಟ್ರೀಯತ್ವದ ನಿಶಾನೆಯನ್ನು ನಿಲ್ಲಿಸಿದರು.

ಇನ್ನು ಅಹಿಂಸಾ ಮತ್ತು ಪ್ರೇಮದ ವಿಷಯಕ್ಕೆ ಮಹಾತ್ಮಾ ಗಾಂಧಿಯವರು ಅಂದಿರುವದೇನೆಂದರೆ, ಜಗದಾಂತರ್ಯ ಶಕ್ತಿಗಳಲ್ಲಿ ಪ್ರೇಮದಷ್ಟು ಅದ್ಭುತವಾದ ಶಕ್ತಿ ಮತ್ತೊಂದಿಲ್ಲ. ಅಂಥ ಶುದ್ಧ ಸಾತ್ವಿಕ ಪ್ರೇಮವೇ ಅಹಿಂಸೆಯು. ಈತರದ ಒಂದು ದಿವ್ಯಶಕ್ತಿಯು ಬಸವಣ್ಣನವರ ಹೃದಯದಲ್ಲಿಯೂ ಕೂಡ ಇತ್ತೆಂದು ಅವರ ವಚನಗಳ ಮೇಲಿಂದ ತಿಳಿಯುತ್ತದೆ. ಯಾವಾತನ ಹೃದಯದಲ್ಲಿ ಪ್ರೇಮದ ಝುರಿಯು ಹರಿದಿದೆಯೋ ಅವನಲ್ಲಿ ಜನರನ್ನು ಒಲಿಸಿಕೊಳ್ಳುವ ಶಕ್ತಿ ಇರುತ್ತದೆ.

ಈ ಪ್ರಕಾರ ನಮ್ಮ ಬಸವಣ್ಣನವರು ಪ್ರತ್ಯಕ್ಷ ಪ್ರೇಮ ಮೂರ್ತಿಗಳಿದ್ದದರಿಂದ ಆಗಿನಕಾಲದ ಜನರಿಗೆಲ್ಲ ಬೇಕಾದವರಾದರು, ಆದ್ದರಿಂದ ಬಿಜ್ಜಳರಾಜನು ಬಹು ಸಂಖ್ಯಾಕರ ಬೆಂಬಲವನ್ನು ಪಡೆದ ಬಸವಣ್ಣನವರಿಗೆ ತನ್ನ ರಾಜನೀತಿಶಾಸ್ತ್ರಕ್ಕನುಸರಿಸಿ ಪ್ರಧಾನಪಟ್ಟಕ್ಕೇರಿಸಬೇಕಾಯಿತು. ಈ ಪ್ರಕಾರ ಬಸವಣ್ಣನವರು ಬಸವಣ್ಣವರಾಗಿಯೇ ಉಳಿಯದೆ ಮಂತ್ರಿಪರ್ಯ ಬಸವಣ್ಣನವರಾದರು. ಧರ್ಮ ಮತ್ತು ರಾಜಕಾರಣ ಇವು ಒಂದೇ ನಾಣ್ಯದ ಎರಡು ಮಗ್ಗುಲುಗಳೆಂಬುದನ್ನು ಪ್ರತ್ಯಕ್ಷತೋರಿಸಿದರು ಆದ್ದರಿಂದ ಅಹಿಂಸೆಯಲ್ಲಿ ಒಂದು ತರದ ರಾಷ್ಟ್ರೀಯ ತೇಜವಿದೆ.

ಈ ಪ್ರಕಾರ ನಮ್ಮ ವಚನಕಾರರು ರಾಷ್ಟ್ರದಲ್ಲಿ ಸಂಘಟನೆ ಶಿಕ್ಷಣ ಪ್ರಸಾರವು ಔದ್ಯೋಗಿಕ ಪ್ರಗತಿ ಸ್ತ್ರೀ ಸ್ವಾತಂತ್ರ್ಯ ಅಹಿಂಸೆ ಮುಂತಾದ ರಾಷ್ಟ್ರಪೋಷಕವಾದ ವಿಚಾರಗಳಲ್ಲಿ ಹೊಸ ಚೈತನ್ಯವನ್ನು ತುಂಬಿದರು. ೮೦೦ ವರ್ಷಗಳಾಚೆಯಲ್ಲಿ ನಡೆದ ಆಗಿನ ಕಾಲದ ಆಂದೋಲನವು ಈಗಿನ ಕಾಲಕ್ಕೆ ಸಹ ಆದರ್ಶ ಪ್ರಾಯವಾಗಿದೆ. ಯಾಕಂದರೆ ಈಗಿನ ರಾಷ್ಟ್ರ ಮುಖಂಡರೂ ಕೂಡ ಅವೇ ವಿಚಾರಗಳನ್ನೇ ಮುಂದಿಟ್ಟುಕೊಂಡಿದ್ದಾರೆ. ಇದರ ಮೇಲಿಂದ ವಚನಕಾರರ ಮುಂದುಧೋರಣೆಯು ಎಷ್ಟು ಆದರಣೀಯವಾಗಿತ್ತೆಂಬುದು ವ್ಯಕ್ತವಾಗುತ್ತದೆ.

# ಬಾರೆ! ಕಾವ್ಯರಾಣಿ.

(ವಿ. ಎಸ್. ಎಸ್. ಪಾಟೀಲ, ಇಂಟರ ಕಾಲೇಜ ಗುಲ್ಬರ್ಗಾ.)

೧

ಬಾರೆ! ಬಾರೆ! ಕಾವ್ಯರಾಣಿ!
ಬಾರೆಯೆನ್ನ ಅರಗಿಣಿ!

ಕವಿಯ ಹೃದಯದಲ್ಲಿ ನೀನು
ಬೆರೆತು ಬೇಗ ಕೂಡಿಕೊಂಡು
ಸೊಂಗಿನಿಂದ ಸರಸವಾಡಿ
ನಲಿದು ನಲಿದು ನಲ್ಮೆಯಿಂದ
ಬಾರೆ ಬೇಗ ಮೋಹಿನಿ!
ಭರಿತ ರಸದ ಯೋಗಿನಿ!

ಬೆಳಗು ದೇವಿ ಬೆಳಗುವಾಗ
ಇಳೆಯ ಇರುಳು ಕಳೆಯುವಾಗ
ತಂಪುಗಾಳಿ ತೀಡುವಾಗ
ಕಂಪುಮನಕೆ ನೀಡುವಾಗ
ಓಡಿಬಾರೆ ಚೆಲುವ ಚೆನ್ನೆ!
ಸರಸಿಜಾಕ್ಷಿಸರಸ ರನ್ನೆ!

ಎದೆಯ ಬಳ್ಳಿಬಾಡುವಾಗ
ಮನದಶಾಂತಿ ನೀಗುವಾಗ
ಆತ್ಮಶಕ್ತಿ ಕುಂದಿದಾಗ
ಕವಿಯು ತಾನು ಬಳಲಿಬೆಂದು
ಬಯಸಿ ಬಹಳ ನಿನ್ನ ರೂಪು
ಚಿತ್ರಿಸುತ್ತ ಕರೆಯುವಾಗ
ಬಂದು ನಿಲ್ಲೆ ಕಾಮಿನಿ!
ಪೂರ್ಣಭಾವ ಶಾಲಿನಿ!

(ಮುಂದುವರಿಯುವುದು)

# ಚಂದಿಮರಸನ ವಚನಗಳು.

ಚಂದಿಮರಸನ ವಚನಗಳು ನಮಗೆ ಸ್ವತಂತ್ರವಾಗಿ ದೊರೆತಿರುವದಿಲ್ಲ. ನಮಗೆ ಅಲ್ಲಲ್ಲಿ ದೊರೆದ ಅವನ ವಚನಗಳನ್ನು ಒತ್ತಟ್ಟಿಗೆ ಸಂಗ್ರಹಿಸಿ ಈ ಗ್ರಂಥದಲ್ಲಿ ಪ್ರಸಿದ್ಧಿಸಿದ್ದೇವೆ. ಚಂದಿಮರಸನು ವಚನಕಾರರಲ್ಲಿ ಬಹು ಪ್ರಸಿದ್ಧನಾದವನು. ಆದುದರಿಂದಲೇ ಅವನ ಉಕ್ತಿಗಳು ವಚನಗಳ ಪ್ರತಿಯೊಂದು ಸಂಗ್ರಹದಲ್ಲಿ ಬಹುಶಃ ದೊರೆಯುತ್ತವೆ. ಈ ವಚನಕಾರನ ಭಾಷೆಯಲ್ಲಿ ಕ್ಲಿಷ್ಟತೆ ಇಲ್ಲ. ಅವನ ನುಡಿಗಳು ಬಹು ಸುಲಭವೂ ಸರಳವೂ ಇರುತ್ತವೆ. ಆದರೂ ಅವುಗಳಲ್ಲಿ ಮಾಧುರ್ಯವು ತುಂಬಿರುತ್ತದೆ. ಇಲ್ಲಿ ಪ್ರಸಿದ್ಧಿಸಿದ ವಚನಗಳನ್ನು ನಾವು ಪರೀಕ್ಷಿಸಿದಲ್ಲಿ ಚಂದಿಮರಸನು, ತಾನು ಯಾರು, ವಿಶ್ವವಾವುದು, ತನಗೂ ವಿಶ್ವಕ್ಕೂ ಆವ ಸಂಬಂಧವಿದೆ, ತನ್ನನ್ನು ತಾನು ತಿಳಿಯುವದರ ಮಹತ್ವವೇನು, ಇಂಥ ಮಹತ್ವದ ವಿಷಯುಗಳನ್ನು ಅವನು ಹೆಚ್ಚಿಗೆ ಚರ್ಚಿಸುತ್ತಿರುವದು ಕಂಡುಬರುತ್ತದೆ. ಅವುಗಳಲ್ಲಿ ವೀರಶೈವ ಧರ್ಮದ ತಿರುಳು ಚನ್ನಾಗಿ ಹೊರಬೀಳುತ್ತದೆ. ಅವನು ಪ್ರತಿಪಾದಿಸುವ ವಿಚಾರಗಳು ವೀರಶೈವ ಧರ್ಮದ ತತ್ವಗಳನ್ನು ಚನ್ನಾಗಿ ಸಮರ್ಥಿಸುತ್ತವೆ.

ಈ ವಚನಕಾರನು ಪುರಾತನ ಕಾಲದ ವಚನಕಾರರಂತೆ ಸ್ವಲ್ಪ ಶಬ್ದಗಳಲ್ಲಿ ಬಹ್ವರ್ಥವು ಬರುವಂತೆ ತನ್ನ ವಚನಗಳನ್ನು ರಚಿಸಿದ್ದಾನೆ. ಹೀಗೆ ಮಾಡುವಲ್ಲಿ ಅವನು ತನ್ನ ವಿದ್ವತ್ತೆಯನ್ನು ಹೊರಗೆಡುವುವ ಹವ್ಯಾಸಕ್ಕೆ ಬದ್ಧಿರುವದಿಲ್ಲ. ಅವನ ನುಡಿಗಳಲ್ಲಿ ಸಹಜತೆ ಇದೆ. ವಾಗಾಡಂಬರಗಳೇನೂ ಇರುವದಿಲ್ಲ.

ಈತನ ಗ್ರಾಮವು ಅವನ ಮುದ್ರಿಕೆಯಲ್ಲಿ ಹೇಳಿದಂತೆ ಸಿಮ್ಮಲಿಗೆಯಾಗಿರುತ್ತದೆ. ಸಿಮ್ಮಲಿಗೆಯು ವಿಜಾಪುರ ಪಟ್ಟಣದ ದಕ್ಷಿಣಕ್ಕೆ ೩೦ ಮೈಲುಗಳಾಚೆ ಕೃಷ್ಣಾ ನದಿಯ ದಡದಲ್ಲಿದೆ. ಇದು ಈಗ ಬಾಗೇವಾಡಿ ತಾಲೂಕಿನ ಒಂದು ಗ್ರಾಮವಾಗಿದೆ. ಈ ಗ್ರಾಮವಿದ್ದ ಸ್ಥಳವು ಬಹು ರಮಣೀಯವಾದದ್ದು. ಅಲ್ಲಿಯ ವಿಶಾಲವಾದ ಕೃಷ್ಣಾ ನದಿಯು

ಪಾತ್ರವು ಗ್ರಾಮಕ್ಕೆ ಕಳೆಯನ್ನು ತಂದಿದೆ. ಈ ಪಾತ್ರದ ಮಧ್ಯದ ಲ್ಲಿಯೇ ಚಂದಿಮರಸನ ಗುಡಿಯು ಇದೆ. ಅದಕ್ಕೆ ಊರವರು ಚಂದ ಯ್ಯನ ಗುಡಿ ಎಂದೆನ್ನುತ್ತಾರೆ. ಗುಡಿಯ ಸುತ್ತಲೂ ಆಳವಾದ ಒಂದು ಮಡುವು ಇದೆ. ಆದರೆ ನದಿಯ ನೀರು ತಗ್ಗಿದಾಗ ಈ ಗುಡಿಯ ಕಟ್ಟೆಯ ಮೇಲೆ ನಿಲ್ಲಬಹುದು. ನೀರಿನ ಮಧ್ಯದಲ್ಲಿ ಗುಡಿಯು ಇದ್ದ ದ್ದರ ಮೇಲಿಂದ ಕೃಷ್ಣಾ ನದಿಯು ತನ್ನ ಪಾತ್ರವನ್ನು ಬದಲಿಸಿ ಗುಡಿ ಯನ್ನು ಸುತ್ತು ಹಾಕಿದೆಯೋ ಏನೋ ಎಂಬ ಸಂಶಯವು ಉಂಟಾ ಗುತ್ತದೆ.

'ಚಂದಿಮರಸು' ಈ ಹೆಸರಿನ ಮೇಲಿಂದ ಈ ವಚನಕಾರನು ತನ್ನ ಪೂರ್ವಾಶ್ರಮದಲ್ಲಿ ಒಂದು ಗ್ರಾಮ ಅಥವಾ ನಾಡಿನ ಒಡೆಯನಿದ್ದಿರ ಬೇಕೆಂದು ಊಹಿಸಬಹುದಾಗಿದೆ. ಇವನ ಚರಿತ್ರೆಯು ಇನ್ನೂ ಉಪ ಲಬ್ಧವಾಗಿಲ್ಲ. ಆದರೆ ಈತನ ಗುರುವು ನಿಜಗುಣಯೋಗಿಯು ಇದ್ದ ನೆಂದು ಅವನ ವಚನಗಳಿಂದಲೇ ತಿಳಿದುಬರುತ್ತದೆ. ಈ ಗ್ರಂಥ ದಲ್ಲಿಯ ವಚನಗಳು ೧೨, ೧೩, ೨೩. ೨೬, ೪೦, ೪೫ ಇವುಗಳನ್ನು ನೋಡಿರಿ. ಇಲ್ಲಿ ಚಂದಿಮರಸನು ತನ್ನ ಗುರುವಿನ ಸ್ಮರಣೆ ಮಾಡಿದ್ದು ಕಂಡುಬರುತ್ತದೆ. ಅವುಗಳಲ್ಲಿ ಅವನು ನಿಜಗುಣನೇ ತಾನಾಗಬೇಕೆಂಬ ಆಕಾಂಕ್ಷೆಯನ್ನು ತೋರಿಸಿದ್ದಾನೆ. ಕೆಲವು ವಚನಗಳಲ್ಲಿ ತಾನು ಅವ ನಿಗೆ ಮರೆಹೊಕ್ಕಿರುವೆನೆಂದು ಭಕ್ತಿಭಾವಪೂರಿತನಾಗಿ ನುಡಿದಿದ್ದಾನೆ. ಇನ್ನೊಂದು ವಚನದಲ್ಲಿ ನಿಜಗುಣನು ಪರಮಾತ್ಮನ ಸ್ವರೂಪು ಎಂದು ಸಂಬೋಧಿಸಿದ್ದಾನೆ. ಇವುಗಳ ಮೇಲಿಂದ ಯಾವ ಕಾಲದಲ್ಲಿ ಗುರು ಶಿಷ್ಯ ಸಂಬಂಧದ ಶಿವಾನುಭವದ ವಿಚಾರಗಳು ಪ್ರಚಾರದಲ್ಲಿದ್ದವೋ ಆ ಕಾಲದಲ್ಲಿ ಅಂದರೆ ಬಸವೇಶ್ವರನ ಕಾಲದ ಸಮೀಪಕ್ಕೆ ಈ ಉಭ ಯತರಿದ್ದರೆಂದು ತೋರುತ್ತದೆ.

ಇದರೆ ಈ ನಿಜಗುಣನು ಷಟ್‌ಶಾಸ್ತ್ರಗಳನ್ನು ರಚಿಸಿದ ನಿಜಗುಣ ಶಿವಯೋಗಿಯಲ್ಲ. ಈತನು ವಚನಕಾರನಾದ ನಿಜಗುಣಯೋಗಿಯಾ ಗಿರುವನು. ಇವನ ಮುದ್ರಿಕೆಯು "ನಿಜಗುಣಯೋಗಿಯ ಯೋಗಾ" ಎಂದು ಇದೆ. ನಿಜಗುಣ ಶಿವಯೋಗಿಯ ಮುದ್ರಿಕೆಯು "ಶಂಭುಲಿಂಗ" ಎಂದು ಇದೆ. ಇದರ ಮೇಲಿಂದ ಈ ಉಭಯತರು ಬೇರೆ ಬೇರೆ ಇದ್ದಾರೆಂಬದಾಗಿ ತೋರುತ್ತದೆ.

ತೋಂಟದಾರ್ಯರ ಶಿಷ್ಯನಾದ ಘನಲಿಂಗನು ಚಂದಿಮರಸನನ್ನು ತನ್ನ ವಚನಗಳಲ್ಲಿ ಹೊಗಳಿದ್ದಾನೆ. ಘನಲಿಂಗನ ವಚನಗಳು ಪುಟ ೧೪ ನೋಡಿರಿ. ಅಲ್ಲಿ ಅವನು ಅಂದಿರುವದೇನೆಂದರೆ:— "ನಿಜಗುಣ ಚಂದಿಮರಸರು ಕರಸ್ಥಲದನಾಗಿದೇವರೊಳಗಾದ ಎಲ್ಲ ವಿರಕ್ತರು ಆವ ಕ್ರಿಯೆಯಲ್ಲಿ ಆಚರಿಸಿ ಲಿಂಗೈಕ್ಯರಾದರೆಂದು ಕೆಟ್ಟು ನುಡಿವ ಭವಹೇತುಗಳು ನೀವು ಕೇಳಿರೋ. ಅವರು ತುಂಬಿದ ತೊರೆಯ ಸಂಭ್ರಮದಿಂದ ಹಾಯಿದರು. ಶಕ್ತಿಯ ಮುಂದೆ ಹಾಲು ಬೋನ ಹಣ್ಣು ಕಜ್ಜಾಯನಿಕ್ಕಿರಲು ಆ ಶಕ್ತಿಯ ಮಾತನಾಡಿಸಿ ಉಂಡರು. ಇತ್ಯಾದಿ" ಇಲ್ಲಿ ಘನಲಿಂಗನು "ನಿಜಗುಣ ಚಂದಿಮರಸರು" ಎಂದು ಈರ್ವರ ಹೆಸರನ್ನು ಒಂದೆಡೆಗೆ ಹೇಳಿದ್ದರಲ್ಲಿ ಅರ್ಥವಿರಬೇಕು. ಅವರಲ್ಲಿರುವ ಗುರುಶಿಷ್ಯ ಸಂಬಂಧವನ್ನು ಲಕ್ಷಿಸಿ ಅವನು ಹೀಗೆ ನುಡಿದಿರಬಹುದೆಂದು ತೋರುತ್ತದೆ.

ಆದರೆ ಈ ಈರ್ವರು ಆವ ಕಾಲದಲ್ಲಿದ್ದರೆಂಬದನ್ನು ನಿಶ್ಚಿತವಾಗಿ ಹೇಳಲು ಸಾಧ್ಯವಿಲ್ಲ. ನಿಜಗುಣನ ಕಾಲವು ೧[illegible]೬೫ ಇದ್ದುದಾಗಿ ರಾ॥ಬ॥ ನರಸಿಂಹಾಚಾರ್ಯರು ತಮ್ಮ ಕವಿಚರಿತೆಯಲ್ಲಿ ಬರೆದಿರುವರು. ಆದರೆ ನಿಜಗುಣನು ಮತ್ತು ಚಂದಿಮರಸು ಶಿವಾನುಭವಮಂಟಪದಲ್ಲಿದ್ದರೆಂಬ ಐತಿಹ್ಯವಿಲ್ಲ. ಆದರೂ ಅವರು ಬಸವನ ತರುವಾಯ ೩೦—೪೦ ವರ್ಷಗಳು ಮತ್ತು ಘನಲಿಂಗನ ಕಾಲ ಅಂದರೆ ೧೪೫೦ ಈ ಅವಧಿಯ ಮಧ್ಯದಲ್ಲಿರಬೇಕೆಂದು ಹೇಳಲು ಮಾತ್ರ ಈಗ ಶಕ್ಯವಿದೆ.

## (೧) ವಿಶ್ವದ ಸ್ವರೂಪ.

**ವಿವರಣೆ:**— ಜಗತ್ತು ಮಹಾಘನ ಗಂಭೀರವಾದ ಸಮುದ್ರದೋಪಾದಿಯಲ್ಲಿ ಎಲ್ಲೆಡೆಯಲ್ಲಿಯೂ ಪಸರಿಸಿದಂತೆ ದೃಷ್ಟಿಗೆ ಗೋಚರವಾಗುತ್ತದೆ. ಆದರೆ ಈ ವಿಸ್ತಾರವಾದ ಜಗತ್ತು ಪರಮಾತ್ಮನನ್ನು ಬಿಟ್ಟಿಲ್ಲ. ಪರಮಾತ್ಮನು ಈ ಜಗತ್ತಿನಲ್ಲೆಲ್ಲ ಪೂರ್ಣವಾಗಿ ನಿಬಿಡವಾಗಿ ಹರಡಿಕೊಂಡಿರುತ್ತಾನೆ. ಹ್ಯಾಗೆ ಜಲಧಿಯಲ್ಲಿ ನೊರೆ ತೆರೆಗಳು ಉದ್ಭವಿಸಿ, ಆ ಜಲಧಿಯಲ್ಲಿಯೇ ಇದ್ದುಕೊಂಡು ಅದರಲ್ಲಿಯೇ ಕಡೆಗೆ ಲಯಹೊಂದುತ್ತವೆಯೋ, ಹಾಗೆಯೇ ಜಗತ್ತು ಪರಮಾತ್ಮನಲ್ಲಿಯೇ ಜನಿಸಿ ಪರಮಾತ್ಮನಲ್ಲಿಯೇ ಸ್ಥಿತಿಗೊಂಡು ಕಡೆಗೆ ಪರಮಾತ್ಮನಲ್ಲಿಯೇ ಬೆರೆದು ಹೋಗುತ್ತದೆ. ಆದ್ದರಿಂದ ಪರಮಾತ್ಮನನ್ನು ಕಾಣಲು ವಿಶ್ವದ ಹೊರಗೆ ಹೋಗಲು ಕಾರಣವಿಲ್ಲ. ಅವನನ್ನು ಜಗತ್ತಿನಲ್ಲಿಯೇ, ಇಷ್ಟೇ ಅಲ್ಲ, ತನ್ನಲ್ಲಿಯೇ ಕಾಣಬಹುದು ಎಂದು ವಚನಕಾರನು ಹೇಳುತ್ತಾನೆ. ಹೀಗೆ ಹೇಳಿದರೂ ಅವನು ಈ ತೋರಿಕೆಯ ವಸ್ತುಗಳು ಪರಮಾತ್ಮನೆಂದು ತಿಳಿಯಬಾರದೆಂದು ಮರಳಿ ಎಚ್ಚರಿಸಿರುವನು. ಇಲ್ಲಿ ಅವನು ಈ ದೃಶ್ಯ ಜಗತ್ತಿಗೆ ಪರಮಾತ್ಮನು ಮೀರಿರುತ್ತಾನೆಂದು ಹೇಳುತ್ತಾನೆ. ವಿಶ್ವದ ಆಚೆಗೆ, ಅದರಿಂದಾಚೆಗೆ ಅವನು ಇರುತ್ತಾನೆಂದು ಇಲ್ಲಿ ಒತ್ತಿ ಒತ್ತಿ ಹೇಳುತ್ತಾನೆ. ಪರಮಾತ್ಮನು ನಿರ್ಜನಿತನು, ನಿರಾಶ್ರಯನು, ನಿಸ್ಸಂಗಿಯು, ನಿರ್ಲೇಪನು, ನಿಃಪ್ರಪಂಚಿಯು ಇದ್ದು ಅವನು ಇಂಥವನು, ಅಂಥವನು, ಎಂದು ನುಡಿಯಲುಬಾರದು. ಅವನು ಅನ್ನುವದೇನಂದರೆ, ಸೃಷ್ಟಿಯು ಹುಟ್ಟಿದುದು ಪರಮಾತ್ಮನ ಲೀಲೆಯಿಂದ ಮಾತ್ರ. ಈ ಲೀಲೆಯ ಮೂಲಕ ಶಿವಶಕ್ತಿಗಳೆಂದು ಎರಡು ಉದ್ಭವಿಸುತ್ತವೆ. ಇವು ಆತ್ಮನಿಗೆ ಕಾರಣವು. ಈ ಆತ್ಮನಿಂದ ಆಕಾಶ ಆಕಾಶದಿಂದ ವಾಯು, ವಾಯುವಿನಿಂದ ಅಗ್ನಿ, ಅಗ್ನಿಯಿಂದ ಅಪ್ಪು, ಅಪ್ಪುವಿನಿಂದ ಪೃಥ್ವಿಯು ಉದ್ಭವಿಸುತ್ತವೆ. ಈ ಪಂಚ ಮಹಾ ಭೂತಗಳು ವಿಶ್ವಕ್ಕೆ ಕಾರಣವಾಗಿವೆ. ಹೀಗೆ ಜಗತ್ತೂ, ಜೀವರಾಶಿಗಳೆಲ್ಲವೂ ಪರಮಾತ್ಮನ ನೆನಹಿನಿಂದ ಉಂಟಾಗುತ್ತವೆ. ಈ ಪಂಚಮಹಾ ಭೂತಗಳಲ್ಲದೆ, ಪಂಚ ಪ್ರಾಣ ವಾಯುಗಳು, ಜ್ಞಾನೇಂದ್ರಿಯಗಳು, ಕರ್ಮೇಂದ್ರಿಯಗಳು, ಕರಣ ಚತುಷ್ಟಯಗಳು ಜನಿಸುತ್ತವೆ. ಈ ಎಲ್ಲ ೨೪ ತತ್ವಗಳು ಕೂಡಿಕೊಂಡಲ್ಲಿ ಜೀವಾತ್ಮನು ಜಗತ್ತಿನಲ್ಲಿ ವ್ಯವಹರಿಸಲು ಶಕ್ತನಾಗುತ್ತಾನೆ. ಆದರೆ

ಹೀಗೆ ವ್ಯವಹರಿಸುವ ಜೀವಾತ್ಮನ ಗುಣ, ಕರ್ಮ, ಧರ್ಮಗಳು ಪರಮಾತ್ಮನಾಗಿಲ್ಲ. ಅವನು ಈ ಎಲ್ಲವನ್ನೂ ಮೀರಿ, ಜಗತ್ತಿನಲ್ಲಿದ್ದು ಕೊಂಡು ಜಗತ್ತನ್ನು ರಕ್ಷಿಸುತ್ತ ಅಬಾಧಿತವಾಗಿ ನಾಶರಹಿತನಾಗಿ ವಿಶ್ವದಲ್ಲಿಯೇ ಇರುತ್ತಾನೆ. ಹೀಗೆ ಕೆಳಗಿನ ವಚನಗಳಲ್ಲಿ ವಚನಕಾರನು ಹೇಳುತ್ತಾನೆ. ಈ ವಿಚಾರಗಳು ಎಲ್ಲ ವಚನಕಾರರಲ್ಲಿ ಕಂಡುಬರುತ್ತಿದ್ದು ಅವುಗಳನ್ನೇ ಚಂದಿಮರಸನು ಬಹು ಸ್ಫುಟವಾಗಿ ವಿಶದವಾಗಿ ಇಲ್ಲಿ ತಿಳಿಯಪಡಿಸುತ್ತಾನೆ.

## ವಚನಗಳು.

೧. ಘನ ಗಂಭೀರ ಮಹಾ ವಾರುಧಿಯಲ್ಲಿ ಫೇನತರಂಗಬುದ್ಬುದಂಗಳಾದವಲ್ಲದೆ, ಬೇರಾಗಬಲ್ಲವೇ? ಆತ್ಮನೆಂಬ ಅಂಬುಧಿಯಲ್ಲಿ ಸಕಲ ಬ್ರಹ್ಮಾಂಡ ಕೋಟಿಗಳು ತೋರಿದವಲ್ಲದೆ ಬೇರಾಗಬಲ್ಲವೇ? ಇದು ಬೇರೆಂಬ ಅರಿಮರುಳಗಳನೇನೆಂಬೆ? ವಿಶ್ವವನರಿದು ನೋಡಲು ಸಿಮ್ಮಲಿಗೆಯ ಚನ್ನರಾಮನೆಂಬ ಲಿಂಗವು ಬೇರಿಲ್ಲ.

೨. ಸಮುದ್ರದಿಂದಾದ ತೆರೆಗಳು ಸಮುದ್ರದೊಳಗೆ ಆಡುತ್ತ ಆ ಸಮುದ್ರದೊಳಗೆ ಇಹವು. ತೆರೆಗಳು ಬೇರೊಂದುದಕವೇ? ನಿಮ್ಮಿಂದಲಾದ ಜಗವು ನಿಮ್ಮಲ್ಲಿಯೇ ಇದ್ದು ನಿಮ್ಮಲ್ಲಿಯೇ ಆಡುವುದು. ಬೇರೆ ಬೇರೆ ಕುಲ ಉಂಟೇ ಈ ಜಗಕ್ಕೆ? ಅದೆಂತೆಂದರೆ ಬ್ರಹ್ಮಬೀಜಂ ಜಗತ್ಸರ್ವಂ। ಬ್ರಹ್ಮಣೈವವಿವರ್ಧತೆ ಬ್ರಹ್ಮಣ್ಯೈವ ಲಯಂ ಯಾತಿ ಜಾತಿ ಭೇದ ಕುತೋ ಭವೇತ್। ಇಂತೆಂದುದಾಗಿ ಕುಲವೂ ಇಲ್ಲ, ಛಲವೂ ಇಲ್ಲ. ಮರವೆಯ ನುಡಿಯನೊಪ್ಪುವನೇ ಸಿಮ್ಮಲಿಗೆಯ ಚನ್ನರಾಮ ಬಿಡುಜಡನೇ.

೩. ದ್ವೀಪಾದ್ವೀಪವಿಲ್ಲದಲ್ಲಿಂದತ್ತತ್ತ. ಕಾಲಕರ್ಮವಿಲ್ಲದಲ್ಲಿಂದತ್ತತ್ತ. ಮಾಯಾ ಮೋಹವಿಲ್ಲದಲ್ಲಿಂದತ್ತತ್ತ. ಏನೂ ಅದೇನೂ ಇಲ್ಲದಲ್ಲಿಂದತ್ತತ್ತ. ಆದಿ ಮೂವರಿಲ್ಲದಲ್ಲಿಂದತ್ತತ್ತ. ಸಿಮ್ಮಲಿಗೆಯ ಚನ್ನರಾಮನೆಂಬ ಲಿಂಗವಿಲ್ಲದಲ್ಲಿಂದತ್ತತ್ತ.

೪. ನಿರ್ಜನಿತ, ನಿರಾಶ್ರಯ, ನಿರಾವರಣ, ನಿಸ್ಸಂಗ, ನಿರ್ಲೇಪ ನಿಃಕಪಟಿ, ನಿರ್ಮಾಯೆ, ನಿಃಪ್ರಪಂಚಿ, ನಿರವಯನನವಯವಕ್ಕೆ ತರ

ಲಿಲ್ಲ ನಿಲ್ಲೋ. ಅನಿರ್ವಚನೀಯನ ವಚನಕ್ಕೆ ತರಲಿಲ್ಲ ನಿಲ್ಲೋ. ಸಿಮ್ಮಲಿಗೆಯ ಚನ್ನರಾಮನೆಂಬ ಚರಲಿಂಗವನುಪಮಿಸಲಿಲ್ಲ ನಿಲ್ಲೋ.

೫. ಏನೆಂದೆನಲಿಲ್ಲದ ಮಹಾ ಘನವು ತನ್ನ ಲೀಲೆಯಿಂ ತಾನೇ ಸ್ವಯಂಭುಲಿಂಗಸ್ಥಲವಾಯಿತ್ತು. ಆ ಲಿಂಗದಿಂದಾಯಿತ್ತು ಶಿವಶಕ್ತ್ಯಾತ್ಮಕವು. ಆ ಶಿವಶಕ್ತ್ಯಾತ್ಮಕದಿಂದಾದುದು ಆತ್ಮ, ಆತ್ಮನಿಂದಾದುದಾಕಾಶ, ಆಕಾಶದಿಂದಾಯಿತ್ತು ವಾಯು, ವಾಯುವಿನಿಂದಾಯಿತ್ತು ಅಗ್ನಿ, ಅಗ್ನಿಯಿಂದಾಯಿತ್ತು ಅಪ್ಪು, ಅಪ್ಪುವಿನಿಂದಾಯಿತ್ತು ಪೃಥ್ವಿ, ಆ ಪೃಥ್ವಿಯಿಂದಾಯಿತ್ತು ಸಕಲ ಜಗ ಜೀವವೆಲ್ಲವು. ನಿಮ್ಮ ನೆನಹು ಮಾತ್ರದಿಂದಾದವು ನೋಡಾ ಸಿಮ್ಮಲಿಗೆಯ ಚನ್ನರಾಮಾ.

೬. ಪೃಥ್ವಿ ಅಪ್ಪು ತೇಜ ವಾಯು ಆಕಾಶವೆಂಬಿವು ಪಂಚ ಮಹಾಭೂತಂಗಳು. ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನವೆಂಬಿವು ಪಂಚ ಪ್ರಾಣವಾಯುಗಳು. ವಾಕ್ಕು ಪಾಣಿ, ಪಾದ, ಪಾಯು ಗುಹ್ಯವೆಂಬಿವು ಕರ್ಮೇಂದ್ರಿಯಂಗಳು. ಶ್ರೋತ್ರ, ತ್ವಕ್ಕು, ನೇತ್ರ, ಜಿಹ್ವೆ, ಘ್ರಾಣವೆಂಬಿವು ಪಂಚ ಜ್ಞಾನೇಂದ್ರಿಯಂಗಳು. ಮನ, ಬುದ್ಧಿ, ಚಿತ್ತ, ಅಹಂಕಾರವೆಂಬಿವು ಅಂತಃಕರಣ ಚತುಷ್ಟಯಂಗಳು. ಇಂತು ಇಪ್ಪತ್ತುನಾಲ್ಕು ತತ್ವಂಗಳು ಕೂಡಿ ದೇಹವಾಯಿತ್ತು. ಅದೆಂತೆಂದಡೆ, ಭೂತಿಶ್ಚ ಪಂಚಭಿಃಪ್ರಾಣೈ । ಶ್ಚತುರ್ದಶಭರಿಂದ್ರಿಯೈಃ ॥ ಚತುರ್ವಿಂಶತಿ ದೇಹಾನಿ ಸಾಂಖ್ಯಶಾಸ್ತ್ರವಿದೋ ವಿದುಃ ॥ ಎಂದುದಾಗಿ ಇಂತೀ ಇಪ್ಪತ್ತು ನಾಲ್ಕು ತತ್ವಂಗಳು ಕೂಡಿ ಚೇಷ್ಟಿಸುವಾತನೇ ಜೀವಾತ್ಮನು. ಅದೆಂತೆಂದರೆ ಮನ ಚತುರ್ವಿಂಶಕಶ್ಚ ಜ್ಞಾತೃತ್ವಂ ಪಂಚವಿಂಶಕಃ । ಆತ್ಮ ಷಡ್ವಿಂಶಕಶ್ಚೈವ ಪರಮಾತ್ಮಸಪ್ತವಿಂಶಕಃ । ಚತುರ್ವಿಧಂ ತು ಮಾಯಾ ಸನ್ನಿರ್ಗುಣಂ ಪರಮೇಶ್ವರಃ । ಪಂಚವಿಂಶತಿತತ್ವಾನಿ ಮಾಯಾಕರ್ಮ ಗುಣಾಯುಕಾ ವಿಷಯಾ ಇತಿ ಕಥ್ಯತೆ ಪಾಶಜೀವ ನಿಬಂಧನಾತ್ । ಇಂತು ಪಂಚವಿಂಶತಿ ತತ್ವಂಗಳುತ್ಪತ್ತಿಯು. ನಿಮ್ಮ ನೆನಹು ಮಾತ್ರದಿಂದಾದವಾಗಿ, ಅವರ ಗುಣ ಧರ್ಮ ಕರ್ಮಂಗಳು ನಿಮಗಿಲ್ಲ ನೋಡಾ ಸಿಮ್ಮಲಿಗೆಯ ಚನ್ನರಾಮಾ.

## (೨) ತನ್ನನ್ನು ತಾನು ಅರಿವುದು.

**ವಿವರಣೆ:—** ವಚನಕಾರನು ಹಿಂದಿನ ವಚನಗಳಲ್ಲಿ ಪರಮಾತ್ಮನ ಸ್ವರೂಪನ್ನು ವರ್ಣಿಸಿ ಅವನನ್ನು ಹೇಗೆ ಒಳಕೊಳ್ಳಬೇಕೆಂಬುದನ್ನು ಮುಂದಿನ ವಚನಗಳಲ್ಲಿ ತಿಳಿಸುತ್ತಾನೆ. ಅವನ ಮುಖ್ಯ ಅಭಿಪ್ರಾಯವು ಜ್ಞಾನದಿಂದಲೇ ಪರಮಾತ್ಮನನ್ನು ಸಾಧಿಸಬೇಕು ಮತ್ತು ಅವನಲ್ಲಿ ಬೆರೆಯಬೇಕು ಎಂದು ಹೇಳುತ್ತಾನೆ. ಈ ಜ್ಞಾನವು ಉಂಟಾದೊಡನೆಯೇ ಭಿನ್ನತ್ವವು ಹಾರಿಹೋಗುತ್ತದೆ. ಈ ಭಿನ್ನತ್ವವು ಅಳಿದಲ್ಲಿ ತಾನೇ ಸಿಮ್ಮಲಿಗೆಯ ಚನ್ನರಾಮನಾಗುವನೆಂದು ಅವನು ಬೋಧಿಸುತ್ತಾನೆ. ಇದು ಅಶಕ್ಯವಲ್ಲವೆಂಬುದನ್ನು ತೋರಿಸಲು ಅವನು ಕೆಲವು ದೃಷ್ಟಾಂತಗಳನ್ನು ೮ನೇ ವಚನದಲ್ಲಿ ಕೊಟ್ಟಿದ್ದಾನೆ. ಹ್ಯಾಗೆ ಚಂದ್ರಮನ ಪ್ರಕಾಶದಿಂದ ಚಂದ್ರನನ್ನು ಕಾಣುತ್ತಾರೋ ಹ್ಯಾಗೆ ದೀಪದ ಬೆಳಗಿನಿಂದ ದೀಪವನ್ನು ಕಾಣುತ್ತಾರೋ ಹಾಗೆಯೇ ತನ್ನ ಬೆಳಗಿನಿಂದ ತನ್ನನ್ನು ಕಂಡದ್ದಾದರೆ ತಾನೇ ಸಿಮ್ಮಲಿಗೆಯ ಚನ್ನರಾಮನೆಂದು ಹೇಳುತ್ತಾನೆ. ಹೀಗೆ ಚಂದಿಮರಸನು ವೀರಶೈವ ಧರ್ಮದ ಮಹತ್ವದ ತಿರುಳನ್ನು ಈ ವಚನಗಳಲ್ಲಿ ವಿವರಿಸಿ ಹೇಳಿರುವನು. ಇದು ಆಶ್ಚರ್ಯವೆಂದು ವಚನಕಾರನು ೯ನೇ ವಚನದಲ್ಲಿ ಹೇಳುತ್ತಾನೆ. ತಾನೆಂಬುದೊಂದು ಬೆಳಗಿನ ಬೀಜ, ಈ ಬೀಜವು ಕತ್ತಲೆಯನೊಳಕೊಂಡು ಕೆಲಕಾಲವಿರುತ್ತದೆ. ಮುಂದೆ ಈ ಬೀಜವು ಹೊರಹೊರಟು ಪ್ರಕಾಶವನ್ನು ಕಂಡು ಫಲಿಸುತ್ತದೆ. ಹಾಗೆಯೇ ಮನುಷ್ಯನ ಅರಿವು ಇರುತ್ತದೆ ಮನುಷ್ಯನಲ್ಲಿ ಕಾಣಲು ಕತ್ತಲೆ, ಆದರೆ ಕತ್ತಲೆಯಲ್ಲಿ ಪ್ರಕಾಶಮಾನವಾದ ರೂಪು ಇರುತ್ತದೆ. ಅದು ತಾನೆಂಬುದು ಇದ್ದು ಅದು ಮಹಾ ಘನಲಿಂಗದಲ್ಲಿಯೇ ಮೊಳಕೆಯೊಡೆದು ಅಲ್ಲಿಯೇ ಕಾಲೂರಿ ಫಲಿಸುತ್ತದೆ. ಜಗತ್ತಿನಲ್ಲಿ ಹೇಗೆ ಮಣ್ಣು ಕಳೆದು ಮಡಿಕೆ ಇರಲಾರದೋ, ಹೇಗೆ ಹೊನ್ನು ಕಳೆದು ತೊಡಿಗೆ ಇರಲಾರದೋ ಹಾಗೆಯೇ ಸಚ್ಚಿದಾನಂದ ನಿತ್ಯಪರಿಪೂರ್ಣನು ತಾನೇ ಇದ್ದಾನೆಂದು ವಚನಕಾರನು ೧೦ ನೇ ವಚನದಲ್ಲಿ ಹೇಳುತ್ತಾನೆ. ಈ ವಿಚಾರದ ಮರ್ಮವನ್ನು ಹೇಳಲೂ ಬಾರದು, ಕೇಳಲೂ ಬಾರದು, ಇದು ಅನುಭವದ ಮಾತೆಂದು ೧೧ ನೇ ವಚನದಲ್ಲಿ ಹೇಳುತ್ತಾನೆ. ಮುಂದೆ ಅನುಭಾವಿಯು ಹೇಗೆ ವರ್ತಿಸುತ್ತಾನೆಂಬದನ್ನು ೧೨ ನೇ ವಚನದಲ್ಲಿ ಹೇಳಿದ್ದಾನೆ. ಉತ್ತಮ ಮಣಿಯು ಒಂದು ಪದಾರ್ಥದ ಮೇಲೆ ಇಟ್ಟಲ್ಲಿ

ಅದರ ವರ್ಣದಂತೆ ಅದು ಹೇಗಾಗುವದೋ ಹಾಗೆಯೇ ಜ್ಞಾನಿಯು ಜನರ ಲ್ಲಿದ್ದು ಅವರವರಂತೆಯೇ ತೋರುತ್ತಾನೆ. ಆದರೆ ಅವನು ತನ್ನದನ್ನು ಬಿಟ್ಟಿರುವದಿಲ್ಲ. ಹೀಗೆ ವರ್ತಿಸಿ ಅವನು ಉತ್ತರೋತ್ತರ ಪ್ರವೃತ್ತಿ ಯನ್ನು ಹೊಂದುತ್ತ ಹೋಗುವನು. ಹೀಗೆ ವಚನಕಾರನು ಪರಮಾತ್ಮ ನನ್ನು ಹೇಗೆ ಬೆರೆಯಬೇಕೆಂಬುದನ್ನು ಹೇಳಿರುತ್ತಾನೆ.

## ವಚನಗಳು.

೭. ನಿಜವಸ್ತು ಒಂದೇ. ತನ್ನ ಲೀಲೆಯಲೆರಡಾಗಬಲ್ಲುದದೊಂದೇ. ಬೇರೆ ತೋರಬಲ್ಲುದದೊಂದೇ. ತನ್ನ ಮರವೆಯ ಬಲ್ಲುದದೊಂದೇ. ತಾನ ಲ್ಲದನ್ಯವಿಲ್ಲೆಂದರಿದರಿದರಿವು ತಾನೇ ಸಿಮ್ಮಲಿಗೆಯ ಚನ್ನರಾಮಾ.

೮. ಇಂದುವಿನ ಬೆಳಗಿನಿಂದ ಇಂದುವನು, ಭಾನುವಿನ ಬೆಳಗಿ ನಿಂದ ಭಾನುವನು, ದೀಪದ ಬೆಳಗಿನಿಂದ ದೀಪವ ಕಾಂಬಂತೆ, ತನ್ನ ಬೆಳಗಿನಿಂದ ತನ್ನನೇ ಕಂಡು ನಿಂದ ನಿಲವು ತಾನೆ ಸಿಮ್ಮಲಿಗೆಯ ಚನ್ನರಾಮಾ.

**ಭಾನು = ಸೂರ್ಯ.**

೯. ಬೆಳಗಿನ ಬೀಜ ಮಹಾ ಬೆಳಗು ಕತ್ತಲೆಯನೊಳಕೊಂಡು ಕಣ್ದೆರವ ಪರಿಯ ನೋಡಾ! ತಿಳಿವಡೆ ಬೆಳಗಲ್ಲ. ಒಳಗೊಳಗೆ ಹೊಳೆವ ಕಳೆ ಇದೇನೋ? ಅದೆಲ್ಲಿಂದ ಹುಟ್ಟಿ ಅದೆಲ್ಲಿಂದ ತೋರಿತ್ತು? ಅಲ್ಲಿಯೇ ಆಗಾಗಿ ಅಲ್ಲಿಯೇ ಬೆಳೆಯಿತ್ತು. ಸಿಮ್ಮಲಿಗೆಯ ಚನ್ನರಾಮನೆಂಬ ಮಹಾ ಘನಲಿಂಗದಲ್ಲಿಯೇ ಕಾಲೂರಿ ನಿಂದ ಪರಿಯನೇನೆಂಬೆ?

**ಆಗು=ಅಸ್ತಿತ್ವ.**

೧೦. ಮಣ್ಣ ಕಳೆದು ಮಡಿಕೆ ಇಲ್ಲ. ಹೊನ್ನ ಕಳೆದು ತೊಡಿಗೆ ಇಲ್ಲ. ತನ್ನ ಕಳೆದು ಜಗವಿಲ್ಲ. ತಾನೇ ತನ್ನಿಂದನ್ಯವಿಲ್ಲ. ಸುಖ ದುಃಖ ಬಂಧ ಮೋಕ್ಷಂಗಳಿಲ್ಲದ, ನಾಹಂ ಮೆಂದೆನಲಿಲ್ಲದ, ಕೋಹಂ ಮೆಂದೆನಲಿಲ್ಲದ, ನುಡಿಗೆಡೆ ಎನಿಸಿ ಏನೂ ಇಲ್ಲದ, ಸಚ್ಚಿದಾನಂದ ನಿತ್ಯ ಪರಿಪೂರ್ಣ ನೀನೆ ಸಿಮ್ಮಲಿಗೆಯ ಚನ್ನರಾಮಾ.

**ತೊಡಿಗೆ = ಆಭರಣ.**

೧೧. ತೋರುವಡೆ ವಿಷವಾಗಿರದು. ಅದು ತೋರದಾಗಿ ಅರಿಯಬಾರದು. ಅರಿಯಬಾರದಾಗಿ ಹೇಳಬಾರದು. ಹೇಳಬಾರದಾಗಿ ಅದು ಕಾಣಬಾರದು. ಅದು ತರ್ಕ. ಅದು ನಿನ್ನಲ್ಲಿಯೇ ಇದೆ. ಹೇಳಲಿಲ್ಲ, ಕೇಳಲಿಲ್ಲ, ಅರಿಯಲಿಲ್ಲದುದನೇನೆಂಬೆ ಹೇಳಾ ಸಿಮ್ಮಲಿಗೆಯ ಚನ್ನರಾಮಾ ?

೧೨. ಸನ್ಮಣಿ ಎಂದು ಹೊದ್ದಿದಂತೆ ತೋರುತ್ತಿಪ್ಪುದು. ನಿಜವು ತನ್ನಂತೆ. ಅನುಭಾವಿ ಅವರವರಂತೆ ತೋರುವ. ತಾ ತನ್ನಂತೆ. ಮತ್ತಾರಂತೆಯೂ ಆಗ. ಚಿನ್ಮಯ ಪರಮಾನಂದ ತಿಳಿದು ನೋಡುವಡೆ ನಿಜ ಗುಣ ತಾನೇ ಸಿಮ್ಮಲಿಗೆಯ ಚನ್ನರಾಮಾ.

೧೩. ಕೋಹಮ್ಮೆಂಬುದರ ಪ್ರಸನ್ನತೆಯನರಸುವ ಕತದಿಂದ ನಿರಹಂಕಾರಿ ಪರಮ ವಿರಕ್ತ. ವಿಷಯ ರಹಿತ. ಏನು ಹೊರೆ ಹೊದ್ದದಿರ್ಪನು. ಚಿನ್ಮಯ ಪರಮಾನಂದವನು ತಿಳಿದು ನೋಡುವಡೆ ನಿಜ ಗುಣ ತಾನೆ ಸಿಮ್ಮಲಿಗೆಯ ಚನ್ನರಾಮಾ.

**ಕತ = ನೆವ.**

೧೪. ಹಾವ ಹೊತ್ತುಕೊಂಡು ಹೋಗುತ್ತ ಹಾವಡಿಗನಡಿಯಲ್ಲಿ ಹಾವ ಕಂಡ ಮರುಳನ ಗಾವಿಲತನವ ನೋಡಾ! ತನ್ನಿಂದನ್ಯವೆಂಬರೆ ಭಿನ್ನವಾಯಿತ್ತು. ತನ್ನ ಪರಮಾರ್ಥ ತನ್ನಲ್ಲಿ. ಸಿಮ್ಮಲಿಗೆಯ ಚನ್ನರಾಮನೆಂಬ ಲಿಂಗದಲ್ಲಿ. ಮಾಯಾ ಮರ್ಕಟ ಜಡನೇ.

**ಗಾವಿಲತನ = ಮೂಢತನ, ಹುಂಬತನ.**

## (೩) ವಿಷಯಾದಿಗಳನ್ನು ಬಿಡುವುದು.

**ವಿವರಣೆಃ** - ಮನುಷ್ಯನು ತನ್ನನ್ನು ತಾನು ಅರಿಯಬೇಕಾದರೆ ಅವನಿಗೆ ದಾರಿಯಲ್ಲಿ ನಾನಾ ತರದ ವಿಷಯಗಳು ಅಡ್ಡಬರುವವು. ಇವುಗಳನ್ನು ಅವನು ಸ್ವಸಾಮರ್ಥ್ಯದಿಂದ ದೂರಮಾಡಬೇಕು. ಇದು ಅವನ ಕರ್ತವ್ಯವು. ಮನುಷ್ಯನು ಪ್ರಪಂಚದಲ್ಲಿ ವಿಷಯಾಸಕ್ತನಾಗಿರುವನು. ಆದರೆ ಆತ್ಮನು ಹಾಗಿರದೆ ನಿರ್ಗುಣನೂ ನಿರ್ವಿಕಾರನೂ ಆಗಿರುವನು. ಮಾಯೆಯನ್ನು ದೂರಮಾಡಿದಲ್ಲಿ ನೀನೇ ದಿಟವಾಗುವಿ ಎಂದು ವಚನಕಾರನು ೧೫ ನೇ ವಚನದಲ್ಲಿ ಹೇಳಿರುವನು. ಆದ್ದರಿಂದ ವಿಷಯಗಳಲ್ಲಿಯ ಆಸಕ್ತಿಯನ್ನು ತೊರೆದು ನಿರ್ವಿಷಯಿಯಾಗಿ ಮನುಷ್ಯನು ಆಚರಿಸಬೇಕು. (ವಚನ ೧೬) ಮನುಷ್ಯನು ಸಹಜವಾಗಿ ಜ್ಞಾನಾನಂದ ಪರಿಪೂರ್ಣನಾಗಿರುವದರಿಂದ ಮಾಯೆಯನ್ನು ದೂರಮಾಡಲು ಶಕ್ಯವಿದೆ. ಈ ಮಾಯೆ ದೂರಾಗಲೊಡನೆ ನೀನೇ ಸಿಮ್ಮಲಿಗೆಯ ಚನ್ನರಾಮನು ಎಂದು ವಚನಕಾರನು ಇಲ್ಲಿ ಹೇಳುತ್ತಾನೆ. (ವಚನ ೧೭) ಇದೇ ಪರಮಾರ್ಥ ಸಾಧನೆಯು. ಇದು ಸುರರಿಗೂ ಯೋಗಿಗಳಿಗೂ ಅಸಾಧ್ಯವಾಗಿರುವದು. (ವಚನ ೧೮) ಆದರೆ ಪ್ರಪಂಚದಲ್ಲಿ ಮುಳುಗಿದ ಮನುಷ್ಯನು ನಿಜವನ್ನರಿಯದೆ ನೇಣು ಹಾವೆಂದು ಭಾವಿಸಿದ್ದಾನೆ. ಮಿಥ್ಯವಾದ ದೇಹವೇ ತಾನೆಂಬ ಭ್ರಮೆಗೊಳಗಾಗಿರುವನು. ಇಲ್ಲದ ಸಂಸಾರವನ್ನು ನೆಚ್ಚಿ ದುಃಖಕ್ಕೊಳಗಾಗುತ್ತಾನೆ. ಆದರೆ ಸಂಸಾರವು ಹುಸಿ ಎಂದು ತಿಳಿದರೆ, ಸಿಮ್ಮಲಿಗೆಯ ಚನ್ನರಾಮನ ದಾರಿಯು ಕಂಗೊಳಿಸಹತ್ತುವದು. (ವಚನ ೨೦) ವಚನಕಾರನು ಈ ವರ್ತನೆಯು ಸಾಧ್ಯವಾದುದೆಂಬ ಭಾವದಿಂದ ಅನೇಕ ವಚನಗಳನ್ನು ನುಡಿದಿರುವನು. ಆ ತರದ ಮನಸ್ಸಿನ ವರ್ತನೆ ಇರಬೇಕು ಅಂದರೆ ನಿಜವು ಸಾಧ್ಯವೆಂದು ಅವನ ವಿಚಾರಗಳಿರುತ್ತವೆ. ೨೧ ಮತ್ತು ೨೨ ನೇ ವಚನಗಳನ್ನು ನೋಡಿರಿ. ಆದರೆ ಹೀಗೆ ಹೇಳಿದರೂ ಅವನು ಗುರುಪಾದವ ಹಿಡಿದು ತಿಳಿಯಿರೆಂದು ೨೩ ನೇ ವಚನದಲ್ಲಿ ನುಡಿದಿರುವನು. ವಚನಕಾರನ ಗುರುವು ಮಹಾ ಶಿವಾನುಭಾವಿಯಾದ ನಿಜಗುಣನಿದ್ದು ಅವನೊಡನೆ ಹ್ಯಾಗೆ ಒಡಗೂಡಬೇಕೆಂಬುದನ್ನು ಈ ವಚನದಲ್ಲಿ ಅವನು ಬಹು ಮಾರ್ಮಿಕ ರೀತಿಯಿಂದ ಹೇಳಿದ್ದಾನೆ. ಗುರುವಿನ ಜೀವವನ್ನರಿವುದೇ ಚನ್ನರಾಮನನ್ನು ತಿಳಿಯುವದೆಂದು ಹೇಳಿದ್ದಾನೆ. ವೀರಶೈವರಲ್ಲಿ ಗುರು

ಶಿಷ್ಯ ಸಂಬಂಧವು ಹೇಗಿರುತ್ತದೆಂಬದನ್ನು ಅವನು ಇಲ್ಲಿ ಸೂಚಿಸಿದ್ದಾನೆ. ಹೀಗೆ ನಡೆದಲ್ಲಿ ವಿಷಯಗಳು ಅಡಗುವವು, ಮಾಯೆಯು ದೂರಾಗುವದು, ಪರಮಾತ್ಮನೊಡನೆ ಮನುಷ್ಯನು ಬೆರೆಯುವನೆಂದು ವಚನಕಾರನು ಕೆಳಗಿನ ವಚನಗಳಲ್ಲಿ ನುಡಿದಿರುವನು.

## ವಚನಗಳು.

೧೫. ಆತ್ಮನು ನಿರವಯ ನಿರ್ಗುಣ ನಿರ್ವಿಕಾರ. ನೋಡುವರೆ ಕರ್ಮವ ಮಾಡುವವರಾರೋ? ಸಂಸಾರವಾರಿಗೆ ತೋರಿತ್ತು? ಬಂಧ ಮೋಕ್ಷಂಗಳಾರಿಗೆ ಎಲೆ ಅಯ್ಯಾ? ನಿನ್ನ ನಿನ್ನಿಂದ ತಿಳಿದು ನೋಡಲು ತಥ್ಯ ಮಿಥ್ಯಂಗಳನೊಂದು ಮಾಡಿ ಕಟ್ಟಲಳವೇ? ಮಾಯೆ ಪುಸಿ. ದಿಟ ನೀನೆ ಸಿಮ್ಮಲಿಗೆಯ ಚನ್ನರಾಮಾ.

೧೬. ಇಂದ್ರಿಯಂಗಳನೊಡಗೂಡಿ ಬಹಿರ್ಮುಖನಾಗಿ ವಿಷಯಂಗಳಲ್ಲಿ ಆಸಕ್ತಿಯುಳ್ಳವನು ಅಂತರ್ಮುಖ ರೂಪನಪ್ಪ ಪ್ರತ್ಯಗಾತ್ಮನನೆಂತೂ ಕಾಣಲರಿಯನು. ಮೇರುಗಿರಿಯ ಕಂಡಿಹೆನೆಂದು ತೆಂಕ ಮುಖವಾಗಿ ನಡೆದು ಮೇರುಗಿರಿಯ ಕಾಣಲರಿಯನು. ಸಕಲ ವಿಷಯಂಗಳಲ್ಲಿ ಆಸಕ್ತಿಯಂ ಬಿಟ್ಟು ನಿರ್ವಿಷಯಿಯಾಗಿ ನಿಜದಲ್ಲಿ ನಿಂದ ನಿಲವು ನೀನೆ ಸಿಮ್ಮಲಿಗೆಯ ಚನ್ನರಾಮಾ.

೧೭. ತಾನಿದಿರೆಂಬ ಮಾಯೆ ತೋರಿತ್ತಾಗಿ ತಾನಲ್ಲ. ಈ ತೋರುವುದೇ ಉಳಿವು. ಜ್ಞಾನಾನಂದ ಪರಿಪೂರ್ಣ ತಾನೆಂಬುದನಾರೂ ಅರಿಯರಲ್ಲಾ. ತಿಳಿದು ನೋಡಲಿಲ್ಲಾಗಿ ನಿಜಸಿದ್ಧ ನೀನೆ ಸಿಮ್ಮಲಿಗೆಯ ಚನ್ನರಾಮಾ.

೧೮. ಸುರರಿಗೆ ನಿರಂತರ ಜಾಗರಣ. ಮರುಳುಗಳಿಗೆ ನಿರಂತರ ಸ್ವಪ್ನ ಅಚರಜೀವಿಗಳಿಗೆ ನಿರಂತರ ಸುಷುಪ್ತಿ. ವರಯೋಗಿಗಳಿಗೆ ನಿರಂತರ ತೂರ್ಯ. ಸ್ಥೂಲತನು ಸೂಕ್ಷ್ಮತನು ಕಾರಣತನುವ ಹೊಂದಿ ಮಾಯಾತನುವಾಗಿ ಮಾಯೆ ತೋರುತ್ತಿಪ್ಪುದು. ನೀನು ಸಕಲತನು ರಹಿತ. ತನ್ನ ತನ್ನಿಂದರಿದ ಪರಮಾರ್ಥ ನೀನೆ ಸಿಮ್ಮಲಿಗೆಯ ಚನ್ನರಾಮಾ.

೧೯. ಹತ್ತರ ಹಸಿಗೆ ಯಲಚ್ಚಾದ ಪರಿಗಳ ನೀವೆತ್ತ ಬಲ್ಲಿರೋ ಗಣಿತದ ಗುಣಿತವ? ನಾಲ್ಕು ಬಂದಡೆ ಕಳೆ. ಐದು ಬಂದಡೆ ನಂದಿ. ಆರು ಬಂದಡೆ ಜಾಗರ. ಏಳು ಬಂದಲ್ಲಿ ಗೈದು. ಜಾಣರೆಂಬವರಿಗೆ ಕುವಾಡ. ಸಿಮ್ಮಲಿಗೆಯ ಚನ್ನರಾಮನೆಂಬ ಲಿಂಗದಲ್ಲಿ ಜೂಜುಗಳೆದು ನಿಲ್ಲು.

೨೦. ನೇಣು ಹಾವೆಂದು ಬಗೆದವನಂತೆ ಈ ದೇಹಾದಿಯಾನೆಂದು ಬಗೆದು, ಭ್ರಮೆ ಬಂದು, ಇಲ್ಲದ ಸಂಸಾರದ ಸಕಲ ದುಃಖಕ್ಕೊಳಗಾದರಯ್ಯಾ! ಆ ಭ್ರಮೆಯ ಹುಸಿ ಎಂದು ತಿಳಿದ ತಿಳಿವು ನೀನೆ ಸಿಮ್ಮಲಿಗೆಯ ಚನ್ನರಾಮಾ.

೨೧. ಕಂಗಳ ಮುಂದೆ ತೋರಿದ ಮಿಂಚು ಮನದ ಮೇಲೆ ತಿಳಿಯಿತ್ತಿದೇನೋ? ಕಳೆಯಬಾರದು, ಕೊಳಬಾರದು. ಕಂಗಳ ಕತ್ತಲೆ ಮನದ ಮಿಂಚು. ಇದು ಬಲ್ಲವರನಲ್ಲೆನಿಸಿತ್ತು ಸಿಮ್ಮಲಿಗೆಯ ಚನ್ನರಾಮನೆಂಬ ನಾಮದೊಡಕು.

೨೨. ಹಿರಿದಪ್ಪ ಮಾಯೆಯನೆಂತು ಕೆಡಿಸುವೆನೆಂದು ಬೆಂಬಿಡದಿರು ಮರುಳೇ. ಮಾಯೆ ದಿಟಕ್ಕೆ ಇಲ್ಲ. ಇಲ್ಲದುದನೆಂತು ಕೆಡಿಸುವಿರಿ? ತನ್ನನರಿದಡೆ ಸಾಕು. ಅರಿದೆನರಿಯೆನೆಂಬುದು ಮಾಯೆ. ಆ ಮಾಯೆ ನಿನಗಿಲ್ಲ. ಚಿನ್ಮಯ ನೀನೆ ಸಿಮ್ಮಲಿಗೆಯ ಚನ್ನರಾಮಾ.

೨೩. ಜಾಣನಯ್ಯ ಶ್ರೀಗುರುಪಾದವ ಹಿಡಿವಲ್ಲಿ. ಜಾಣನಯ್ಯ ವಿಷಯಂಗಳ ಬಿಡುವಲ್ಲಿ. ಜಾಣನಯ್ಯ ಅವಿದ್ಯೆಯ ಗೆಲುವಲ್ಲಿ. ಜಾಣನಯ್ಯ ತನ್ನ ತಾನರಿವಲ್ಲಿ. ಜಾಣನಯ್ಯ ಸಿಮ್ಮಲಿಗೆಯ ಚನ್ನರಾಮನಲ್ಲಿ ನಿಜಗುಣನ ಜೀವವನರಿವಲ್ಲಿ.

## (೪) ಸೋಹಂಭಾವದಿಂದ ವರ್ತಿಸುವುದು.

**ವಿವರಣೆ:—** ಮುಂದಿನ ವಚನಗಳಲ್ಲಿ ಚಂದಿಮರಸನು ಜಗತ್ತಿನಲ್ಲಿ ನಡೆಯುವ ದುರ್ವ್ಯಾಪಾರಗಳನ್ನು ವಿವರಿಸಿದ್ದಾನೆ. ಎಲ್ಲ ವಚನಕಾರರು ಶುದ್ಧ ವರ್ತನೆಯಿಂದ ಮನುಷ್ಯನು ನಡೆಯಬೇಕೆಂಬದನ್ನು ಕುರಿತು ಪದೇ ಪದೇ ಹೇಳಲು ಎಂದೂ ಬೇಸರಿಯುವದಿಲ್ಲ. ಈ ವಿಷಯವನ್ನು ಅವರು ಅನೇಕ ರೀತಿಯಿಂದ ಹೇಳುವದುಂಟು. ೨೪ನೇ ೨೫ನೇ ವಚನಗಳಲ್ಲಿ ಮನುಷ್ಯನು ಎಲ್ಲಿಂದ ಬಂದಿದ್ದಾನೆ, ಅವನು ಇಲ್ಲಿ ತನ್ನ ಪೂರ್ವದ ಹುಟ್ಟನ್ನು ಮರೆತು ಹ್ಯಾಗೆ ಆಚರಿಸುತ್ತಾನೆ, ಇದರಿಂದ ಪ್ರಪಂಚದಲ್ಲಿ ಅವನು ನೋವುತ್ತ ಬಳಲುತ್ತ, ಹೇಗೆ ನಾನಾ ಯೋನಿಗಳಲ್ಲಿ ಹುಟ್ಟಿ ಹುಟ್ಟಿ ಬರುತ್ತಾನೆ, ಎಂಬದನ್ನು ವರ್ಣಿಸಿ ಸೋಹಂ ಭಾವವಿರಬೇಕೆಂದು ಹೇಳಿದ್ದಾನೆ. ಇದೇ ಪರಮ ಸಂತೋಷದ ಸ್ಥಿತಿಯು. ಮನುಷ್ಯನು ವಿಧಿ ನಿಷೇಧ, ಜನನಿ ಜನಕರು, ಕುಲಗೋತ್ರ ಜಾತಿ ವಿಜಾತಿ, ಭೇದಾಭೇದ, ಸ್ವರ್ಗ ನರಕ ಇಂಥ ತೋರಿಕೆಯ ವಸ್ತುಗಳಿಗೆ ಒಲಿದು ಯಾತನೆಪಡುತ್ತಾನೆ. ಇಂಥ ಭಿನ್ನತೆಗಳಿಂದ ಅವನು ದೂರಿರಬೇಕು. (ವಚನ ೨೬) ಆದರೆ ಹೀಗೆ ವರ್ತಿಸುವದು ಬಹು ಕಷ್ಟಕರವಾದ ಕಾರ್ಯವೆಂದು ವಚನಕಾರನು ಮುಂದೆ ಹೇಳಿ ಇಂಥ ಮಾಯೆಯನ್ನು ಗೆಲಿವುದು ಸಿಮ್ಮಲಿಗೆಯ ಚನ್ನರಾಮನಿಗೆ ಮಾತ್ರ ಸಾಧ್ಯವೆಂದು ಹೇಳುತ್ತಾನೆ. ಹೀಗೆ ಹೇಳಿ ಮನುಷ್ಯನ ಕ್ಷುದ್ರ ದೇಹ ಎಂತಹದಿದೆ ಎಂಬುದನ್ನು ವರ್ಣಿಸಿ, ಮನಸ್ಸಿನಲ್ಲಿ ಇದಕ್ಕೋಸ್ಕರ ಹೇಯ ಭಾವ ಹುಟ್ಟಿಸಲು ಯತ್ನಿಸುತ್ತಾನೆ. (ವಚನ ೨೯) ಇಂಥ ದೇಹವನ್ನು ಹಿಡಿದುಕೊಂಡು ಸಂಸಾರದ ಅಲ್ಪ ಸುಖವನ್ನು ಬಯಸಿ ಅದಕ್ಕೆ ಹೇಗೆ ಮೋಹಿಸುತ್ತಾನೆಂಬುದನ್ನು ಚಿತ್ತವೇಧಕ ಉದಾಹರಣೆಯಿಂದ ಹೇಳುತ್ತಾನೆ. (ವಚನ ೩೦) ಆದರೆ ಇಂಥ ಸಂಸಾರದ ಕಷ್ಟಗಳನ್ನು ನಿವಾರಣೆ ಮಾಡಲು ಮನುಷ್ಯನಿಗೆ ಯಾರೂ ಸಹಾಯಕರಿಲ್ಲ. ಆದರೆ "ಸೋಹಂ ಬ್ರಹ್ಮಾಸ್ಮಿ" ಎಂಬ ಭಾವವನ್ನು ಬಲಿದು ನಿನ್ನನ್ನು ನೀನೇ ತಿಳಿದುಕೋ ಎಂದು ಬೋಧಿಸುತ್ತಾನೆ

### ವಚನಗಳು.

೨೪. ಪರಮಾತ್ಮನ ಸ್ಫುರಿತಲಹರಿಯಿಂದ ಅಂತರಾತ್ಮನುತ್ಪತ್ತಿಯು. ಅಂತರಾತ್ಮನ ಪ್ರಲಹರಿಯಿಂದ ಜೀವಾತ್ಮನುತ್ಪತ್ತಿಯು. ಇಂತೀ ಜೀವಾ

ತ್ಮಾಂತರಾತ್ಮಾದಿಗಳು ಅಂಗಪ್ರಾಣದಲ್ಲಿ ಒಂದೇ ಎಂದೆನಿಸಿದರೂ, ಆ ನೊಂದೆಂಬ ತಾನುಸಜೀವನು ಅಂಗನೆಯು ಸಂಗ ಮೊದಲಾದ ದುಃಖಂ ಗಳಲ್ಲಿ ನೋವುತ್ತ, ನಾನಾ ಯೋನಿಗಳಲ್ಲಿ ಜನಿಸುತ್ತ, ರೌರವನರಕದಲ್ಲಿ ಆಳುತ್ತ, ಮುಳುಗುತ್ತಲಿಹನು. ಆ ಪರಮಾತ್ಮನು ಜೀವಾತ್ಮನ ಶಿಖಾ ಮಧ್ಯದಲ್ಲಿದ್ದು ನಾಹಂ ಎನ್ನದೆ, ಸೋಹಂ ಸೋಹಂ ಎನ್ನುತ್ತ, ನಮ್ಮ ಸಿಮ್ಮಲಿಗೆಯ ಚನ್ನರಾಮನೆಂಬ ಅಖಂಡ ಲಿಂಗದೊಳಗೆ ನಿತ್ಯತ್ವವ ನೈದುತ್ತ, ಎಡೆದೆರಹಿಲ್ಲದೆ ಪರಮ ಸಂತೋಷದೊಳಗಿದ್ದಿತ್ತು.

೨೫. ಕರ್ಮ ಭಕ್ತಿ ಜ್ಞಾನ ವೈರಾಗ್ಯವೆಂಬ ಚತುರಾಶ್ರಮಿಗಳಿಗೆ ತೃತ್ಯನುಭವಸಿದ್ಧವಾಗಿಹುದು. ಹಿಡಿದು ಸುಖವಿಲ್ಲ, ಬಿಟ್ಟು ದುಃಖವಿಲ್ಲ. ನೆರೆಯರಿದು ವಿಷಯಂಗಳ ಬಿಟ್ಟೊಡೆ ಪರಮಾನಂದ. ಎಂದಿಗೂ ಪರ ಬ್ರಹ್ಮದಲ್ಲಿಹುದು, ಆ ಸೋಹಂಬ್ರಹ್ಮದಲ್ಲ ನಿಂದಿರೆ. ಈ ದೇಹದ ಅಹಂ ಮಮತೆಯ ಬಿಡು. ಮಾಯೆಯುಳಿವುದೇ ಸಿಮ್ಮಲಿಗೆಯ ಚನ್ನರಾಮನ ಭಾವಿಸಿ ನೋಡಿದಲ್ಲಿ?

೨೬. ವಿಧಿ ನಿಷೇಧ, ಜನನಿ ಜನಕ, ಕುಲ ಗೋತ್ರ, ಜಾತಿ ವಿಜಾತಿ, ಭೇದಾಭೇದ, ಸ್ವರ್ಗ ನರಕಾದಿ, ಭಯವೇನೂ ಇಲ್ಲ. ಜಗ ವೇನೂ ಇಲ್ಲ. "ಅತ್ರ ಪಿತಾ ಪಿತಾ ಭವತಿ ಮಾತಾ ಮಾತಾ ಲೋಕಾ ಲೋಕ ದೇವೋದೇವ ವೇದಾ ವೇದ ಬ್ರಾಹ್ಮಣ ಬ್ರಾಹ್ಮಣ ಚಾಂಡಾಲೋ ಚಾಂಡಾಲೋ" ಎಂದುದು ವೇದ. ಅದು ತಾನೇ. ತನ್ನಿಂದನ್ಯವಿಲ್ಲ. ತೋರುವ ತೋರಿಕೆ ಎಲ್ಲ ಮಾಯೆ ಎಂದಂದು, ಜ್ಞಾನಾನಂದ ಪರಿಪೂರ್ಣ ತಾನೆಂದರಿದು, ನೀನಾಗಿ ನಿಂದ ನಿಜಗುಣ ನೀನೆ ಸಿಮ್ಮಲಿಗೆಯ ಚನ್ನರಾಮಾ.

೨೭. ನಿಚ್ಚ ಕನಸಿನಲ್ಲಿ ಅಶ್ವಮೇಧ ಬ್ರಹ್ಮಹತ್ಯವ ಮಾಡಿದೊಡಂ, ಎಂತು ನಡೆದೊಡಂ ದೇವದತ್ತಂಗೆ ಗುಣ ದೋಷ ಉಂಟೆ? ಸ್ವರ್ಗ ನರಕ ಉಂಟೇ ಹೇಳಾ? ಅದೆತ್ತಣ ಮಾತು? ಕನಸು ಮಿಥ್ಯವಪ್ಪುದರಿಂ ಮಾಯೆ ಮಾಯೆ. ಈ ಮಾಯೆಯುನರಿದು ಹುಸಿಜೀವ ಭಾವಾಭಾವ ದಿಂದ ಏನ ಮಾಡಿದರೇನೋ ಸಿಮ್ಮಲಿಗೆಯ ಚನ್ನರಾಮಾ. ?

೨೮. ಕಾಳಕೂಟದ ಹಾಳಾಹಳವೆಂಬ ವಿಷ ಕುಡಿದವರನಲ್ಲದೆ, ಮಿಕ್ಕಿನವರನೇನು ಮಾಡಲು ಬಲ್ಲದು? ಹೆಣ್ಣೆಂಬ ಕಡು ನಂಜು ನುಡಿದವರಂ ನೋಡಿದವರಂ ಕೇಳಿದವರಂ ಗಡಣ ಸಂಗ ಮಾತ್ರದಿಂ ಮಡುಹಿ ನರಕದಿ ಕೆಡಿಸುದು. ದೇವ ದಾನವ ಮಾನವಾದಿಗಳನಾದೊಡೆಯೂ ಉಳಿಯಲೀಯದು. ಆವಂಗೆಯೂ ಗೆಲಬಾರದ ಮಾಯೆ. ಈ ಮಾಯೆಯ ಗೆಲಿದಾತ ನೀನೆ ಸಿಮ್ಮಲಿಗೆಯ ಚನ್ನರಾಮಾ.

ಗಡಣ = ಘಟನೆ, ಸಂಯೋಗ    ಮಡುಹು = ಕೊಲ್ಲು.

೨೯. ಎಲು, ತೊಗಲು, ನರ, ಮಾಂಸ, ಪುರೀಷ, ಶ್ಲೇಷ್ಮ, ರಕ್ತ, ಅಂಗವಿಕಾರ, ಕ್ರಿಮಿ, ಓಕರಿಕೆ, ಜಂತು, ಜರೆ, ಮರಣ, ವ್ಯಾಧಿಯ ತವರುಮನೆ, ನೋಡುವರೆ ಪಾಪದ ಪುಂಜ, ಇಂತೀ ಹೇಸಿಕೆಯೊಳಗೆ ಏತರ ಸುಖವನರಸುವೆ? ಸುಖದಾಸೆಯ ನೋಡುವರೆ ಸಕಲ ದುಃಖದಾಗರ, ನರಕದ ಪಾಕುಳ, ಇಂತೆಂದೇ ತಿಳಿದು ವಿರಕ್ತನಾದ ಪರವಪ್ಪ ನಿಜ ನೀನೆ ಸಿಮ್ಮಲಿಗೆಯ ಚನ್ನರಾಮಾ.

**ಪುರೀಷ = ಮಲ, ಶ್ಲೇಷ್ಮ = ಸಿಂಬಳ, ಪಾಕುಳ = ಸುತ್ತುವಲಯ, ಮನೆ.**

೩೦. ಬಟ್ಟೆಯಲ್ಲಿ ಹೋಗುತ್ತಿಪ್ಪ ಮನುಜನೊಬ್ಬನನ್ನ ಹುಲಿ ಕಾಡಗಿಚ್ಚು ರಕ್ಕಸಿ ಕಾಡ ನೆಗಳು ನಾಲ್ಕು ದಿಕ್ಕಿನಲ್ಲಿ ಅಟ್ಟಿ ಬರುತ್ತಿರಲು. ಅವಂ ಕಂಡು ಭಯದಿಂದ ಹೋಗಲು ದಿಕ್ಕು ತೋರದೆ ಹಾಳು ಬಾವಿಯ ಕಂಡು ತಲೆಯೂರಿ ಬೀಳುವಲ್ಲಿ ಹಾವ ಕಂಡು ಬೀಳಲಮ್ಮದೆ ಇಲಿ ಕಡಿದ ಬಳ್ಳಿಯಂ ಹಿಡಿದು ನಿಲ್ಲಲು ಜೇನುಹುಳು ಮೈನೂರುವಾಗ ಮೂಗಿನ ತುದಿಯಲೊಂದು ಹನಿಯು ಮಧುಬಿಂದು ಬೀಳಲಾಗಿ ಆ ಮಧುವಂ ಕಂಡು ಹಿರಿದಪ್ಪ ದುಃಖವನೆಲ್ಲವ ಸೈರಿಸಿ ನಾಲಿಗೆಯಲ್ಲಿ ಆ ಮಧುವ ಸೇವಿಸುವನಂತೆ ಈ ಸಂಸಾರ ಸುಖವ ವಿಚಾರಿಸಿ ನೋಡಿದಡೆ ದುಃಖದಾಗರವು. ಇದನರಿದು ಸಕಲ ವಿಷಯಂಗಳಲ್ಲಿಯ ಸುಖವಿಂತುಂಟೆಂದು ನಿರ್ವಿಷಯಿಯಾಗಿ ನಿಂದ ನಿಲವು ನೀನೇ ಸಿಮ್ಮಲಿಗೆಯ ಚನ್ನರಾಮಾ.

೩೧. ಎಲುವಿನ ಹಂದರ ನರವಿನ ಜಾಳಿಗೆ, ಅಮೇಧ್ಯದ ಹುತ್ತ, ಮೂತ್ರದ ಬಾವಿ, ಶ್ಲೇಷ್ಮದ ಕೆಸರು, ಕೀವಿನ ಸೊನೆ, ನೆತ್ತರ ಮಡು

ನಾಡಿಗಳ ಸುತ್ತುವಳ್ಳಿ, ನೆಣ ಮಾಂಸದ ಗಟ್ಟಿಯು ತೆಪ್ಪ, ಕಿಸುಕುಳದ ಹೇಸಿಕೆ, ಅತಿ ಹೇಯದ ಮಲಿನತೆ, ತೊಗಲ ಪಾಕುಳ, ಕ್ರಿಮಿಯ ಸಂಕುಳ, ರೇತೋರಜಸ್ಸಿನಲ್ಲಿ ಜನಿತ, ಉತ್ಪತ್ತಿ ಸ್ಥಿತಿ ಲಯದ ಬೀಜ, ಆಧಿ ವ್ಯಾಧಿಯ ತವರುಮನೆ, ವಿಷಯದ ಭವದುಃಖದಾಗರ, ತೋರಿ ಕೆಡುವ ತನು ಇದು ನಿನ್ನದೆಂದು ಪಾಪಂಗಳ ಮಾಡಿ, ಬಾರದ ಭವಂಗಳಲ್ಲಿ ಬಂದು, ದೇಹದಿಚ್ಛೆಗೆ ಸಂದು, ಹುಸಿವೆತ್ತಿ ದೇಹಗೊಂಡು ಮರುಗುವೆ, ಮರುಳು ಮಾನವಾ! ಅಘೋರ ನರಕದಲ್ಲಿ ಕೆಡುವಾಗ, ಅಡ್ಡಬಪ್ಪವರಾರು ಹೇಳಾ? ಅಹಂ ಮಮತೆಯಂ ಮರೆದು, ದೇಹದಿಚ್ಛೆಯ ಬಿಟ್ಟು, ಸೋಹಂ ಬ್ರಹ್ಮಾಸ್ಮಿ ಎಂದು, ಕೇಡಿಲ್ಲದ ಪದವ ಮಾಡಿಕೋ ಮರುಳೇ. ಮೋಹ ಬೇಡ. ಕೆಡುವೆ. ನಿನ್ನಲ್ಲಿ ನೀನೇ ತಿಳಿದು ನೋಡಾ ಸಮ್ಮಲಿಗೆಯ ಚನ್ನರಾಮಾ.

**ಸೊನೆ = ಹೊರಬಿದ್ದ ರಸ**

# ಶಿವಾನುಭವ.

ಸಂಪಾದಕ.

**ರಾ. ಸಾ. ಫ. ಗು. ಹಳಕಟ್ಟಿ** ಬಿ. ಎ. ಎಲ್. ಎಲ್. ಬಿ.

ಸಂಪುಟ ೧೨ ]  ಎಪ್ರಿಲ ೧೯೩೮.  [ ಸಂಚಿಕೆ ೭.

## ವಿಷಯಾನುಕ್ರಮಣಿಕೆ.

# ಶಿವಾನುಭವ.

ವರ್ಷ ೧೨] ಎಪ್ರೇಲ ೧೯೩೮ [ಸಂಚಿಕೆ ೭

## ಶ್ರೀ. ತೋಂಟದ ಸಿದ್ಧಲಿಂಗೇಶ್ವರರ ಚರಿತ್ರೆ.

(ರಾ. ಸಾ. ಫ. ಗು. ಹಳಕಟ್ಟಿ ಬಿ. ಏ. ಎಲೆಲ್. ಬಿ. ವಿಜಾಪುರ)

ತೋಂಟದಾರ್ಯರು ಕರ್ನಾಟಕದಲ್ಲಿ ಆಗಿಹೋದ ಮಹಾಪುರುಷರು. ಅವರು ಮಾಡಿದ ಕಾರ್ಯಗಳು ಮಹತ್ತರವಾದವುಗಳು. ಅವರು ಅತ್ಯುತ್ತಮ ತರಗತಿಯ ವಚನಕಾರರೂ ಇದ್ದವರು. ಅವರ ವಚನಗಳು ವಿದ್ವತ್ ಪ್ರಚುರವಾದವುಗಳು ಮತ್ತು ಬಹಳ ಓಜಸ್ಸುಳ್ಳವು. ಅಲ್ಲದೆ ಅವರು ಸಮಾಜೋದ್ಧಾರಕರೂ ಆಗಿರುವರು. ಅವರು ಅನೇಕ ದೇಶಗಳಲ್ಲಿ ಸಂಚರಿಸಿ ಧರ್ಮ ಬೋಧೆ ಮಾಡುತ್ತ ಕಾಲ ಕಳೆದರು. ಹಾಗೆಯೇ ಅವರು ಮಹತ್ತರವಾದ ಸಮಾಜ ಸಂಘಟನಾ ಶಕ್ತಿಯುಳ್ಳವರು. ಅವರು ತಮ್ಮ ವಿಶೇಷತರ ನಿರ್ಬಂಧನೆಗಳ ಮೂಲಕ ಸಮಾಜದ ಕಟ್ಟನ್ನು ಬಲಪಡಿಸಿದರು. ಯಾವ ಕಾಲದಲ್ಲಿ ಸಮಾಜವು ಬಹು ಶಿಥಿಲತೆಯನ್ನು ಹೊಂದಿತ್ತೋ ಆಗ್ಗೆ ಅವರು ಉದಯವಾಗಿ ಅದರ ಭದ್ರತೆಯನ್ನು ಕಾಯ್ದರು. ಇದರಂತೆಯೇ ಅವರು ಅತ್ಯಂತ ತಪಸ್ವಿಗಳೂ ಶಿವಯೋಗ ನಿರತರೂ ಆಗಿದ್ದರು. ಅವರ ಬಗ್ಗೆ ಅನೇಕ ಆಖ್ಯಾಯಿಕೆಗಳು ಪ್ರಚುರವಾಗಿವೆ. ಇಂಥ ಮಹಾನುಭಾವರ ಚರಿತ್ರೆಯನ್ನು ಈ ಸಂಚಿಕೆಯಲ್ಲಿ ಕೊಡಲೆಳಸಿದ್ದೇವೆ.

### ವೀರಶೈವ ಸಮಾಜೋದ್ಧಾರದ ಕಾಲಗಳು.

ವೀರಶೈವ ಸಮಾಜೋದ್ಧಾರದ ಇತಿಹಾಸದಲ್ಲಿ ನಾವು ಮುಖ್ಯವಾದ ೪ ವಿಭಾಗಗಳನ್ನು ಕಲ್ಪಿಸಬಹುದು (೧) ದೇವರದಾಸಿಮಯ್ಯನ

ಕಾಲಃ— ಈ ಕಾಲದಲ್ಲಿ ಕರ್ನಾಟಕದಲ್ಲಿ ಒಂದು ಮಹತ್ತರವಾದ ಧರ್ಮ ಜಾಗ್ರತಿಯುಂಟಾಗಿ ಶಿವಮತವು ಇಲ್ಲಿ ನೆಲೆಗೊಳಿಸಲ್ಪಟ್ಟಿತು. ಆಗ ಅನೇಕ ಶಿವಶರಣರುದಯರಾಗಿ ಶಿವಮತೋದ್ಧಾರ ಕಾರ್ಯಗಳನ್ನು ನಡೆಸಿದರು. ಇದು ಬಸವೇಶ್ವರನ ಪೂರ್ವದ ಕಾಲವು. (೨) ಬಸವೇಶ್ವರನ ಕಾಲಃ— ಈ ಕಾಲದಲ್ಲಿ ಕರ್ನಾಟಕದಲ್ಲಿ ಒಂದು ಮಹತ್ತರವಾದ ಧಾರ್ಮಿಕ ಮತ್ತು ಸಾಮಾಜಿಕ ಕ್ರಾಂತಿಯುಂಟಾಯಿತು. ಕಲ್ಯಾಣ ಪಟ್ಟಣದಲ್ಲಿ ಶಿವಾನುಭವ ಮಂಟಪದಲ್ಲಿ ಶ್ರೀ ಬಸವೇಶ್ವರನ ಸಮ್ಮುಖ ದಲ್ಲಿ ಸ್ಥಿರಪಡಿಸಿದ ಉದಾತ್ತ ತತ್ವಗಳು ಕರ್ನಾಟಕಾಂಧ್ರ ದೇಶಗಳಲ್ಲಿ ಸಾರಲ್ಪಟ್ಟವು. ಇದು ವಚನ ವಾಙ್ಮಯದ ಉಚ್ಚ ಕಾಲವು. (೩) ವಿಜಯನಗರದ ಕಾಲವುಃ— ಇದು ೧೫ನೇ ಶತಮಾನವು. ವೀರಶೈವ ಪುನರುದ್ಧಾರದ ಕಾಲವು ಇದರಲ್ಲಿ ನಾವು ಪುನಃ ಎರಡು ವಿಭಾಗಗಳನ್ನು ಮಾಡಬಹುದು. (ಅ) ಈ ಶತಮಾನದ ಮಧ್ಯಕಾಲ ಮತ್ತು (ಬ) ಕಡೆಯ ಕಾಲ. ಮಧ್ಯಕಾಲದಲ್ಲಿ ಅರಸನಾಗಿದ್ದ ಗಜಬೇಂಟೆಕಾರ ಇಮ್ಮಡಿ ದೇವರಾಯ ಅಥವಾ ಪ್ರೌಢರಾಯನ (೧೪೨೪–೧೪೪೬) ಆಳಿಕೆಯಲ್ಲಿ ಲಕ್ಕಣ್ಣದಂಡೇಶ, ನೂರೊಂದು ವಿರಕ್ತರು ಮೊದಲಾದ ಶಿವಾನುಭವಿಗಳು ಉದಯವಾಗಿ ವೀರಶೈವ ಧರ್ಮವನ್ನು ಎತ್ತಿಹಿಡಿದರು. ಕಡೆಯ ಕಾಲದಲ್ಲಿ ತೋಂಟದಾರ್ಯರು ಉದಯವಾಗಿ ದೇಶದಲ್ಲಿ ಉಂಟಾದ ವಿಪರೀತಗಳನ್ನು ದೂರಮಾಡಿ ಸಮಾಜದಲ್ಲಿ ವ್ಯವಸ್ಥೆಯನ್ನುಂಟು ಮಾಡಿದರು. (೪) ಕೆಳದಿಯ ರಾಜರ ಕಾಲಃ— ಈ ವಂಶದಲ್ಲಿ ವಿದ್ಯಾ ಪ್ರೋತ್ಸಾಹನ ಶೀಲರಾದ ಅನೇಕ ರಾಜರು ಉದ್ಭವಿಸಿ ಕರ್ನಾಟಕ ಸಂಸ್ಕೃತಿಯನ್ನು ಎತ್ತಿಹಿಡಿದರು. ಹೀಗೆ ವೀರಶೈವ ಧಾರ್ಮಿಕ ಮತ್ತು ಸಾಮಾಜಿಕ ಇತಿಹಾಸದಲ್ಲಿ ಮುಖ್ಯ ನಾಲ್ಕು ವಿಭಾಗಗಳನ್ನು ಮಾಡಬಹುದು.

## ತೋಂಟದಾರ್ಯರು ಉದಯವಾದ ಕಾಲದ ಪರಿಸ್ಥಿತಿ.

ತೋಂಟದಾರ್ಯರು ವಿಜಯನಗರದ ರಾಜನಾದ ವಿರೂಪಾಕ್ಷನ (೧೪೬೭-೧೪೭೮) ಆಳಿಕೆಯಲ್ಲಿ ಪ್ರಸಿದ್ಧಿಗೆ ಬಂದಿರಬಹುದೆಂದು ರಾ॥ ಬ॥ ಆರ್. ನರಸಿಂಹಾಚಾರ್ಯರು ತಮ್ಮ ಕವಿಚರಿತೆಯಲ್ಲಿ ಊಹಿಸಿರುವರು. ಅವರು ಸುಮಾರು ೧೪೭೦ ರಲ್ಲಿ ಇರಬಹುದೆಂತಲೂ ಹೇಳಿದ್ದಾರೆ. ಇದು ನಿಜವೆಂದು ತೋರುತ್ತದೆ. ವಿರೂಪಾಕ್ಷರಾಜನ ಆಳಿಕೆಯು ದೇಶಕ್ಕೆ ಸುಖಕರವಾಗಿರಲಿಲ್ಲ. ಆಗ ದೇಶದಲ್ಲೆಲ್ಲ ಅಸ್ವಸ್ಥತೆಗಳು ನೆಲೆ

ಗೊಂಡಿದ್ದವು ಈತನು ಆರಂಭದಲ್ಲಿ ವೀರಶೈವ ಮತಾನುಯಾಯಿಗಿದ್ದು ಹಿಂದುಗಡೆ ಶ್ರೀ ವೈಷ್ಣವ ಧರ್ಮವನ್ನು ಸ್ವೀಕರಿಸಿದನು. ಅರಸನ ದೌರ್ಬಲ್ಯದ ಮೂಲಕ ದೇಶದಲ್ಲೆಲ್ಲ ದಂಗೆಗಳೆದ್ದಿದ್ದವು. ಪ್ರಾಂತಾಧಿಕಾರಿಗಳು ಸ್ವತಂತ್ರರಾಗಿ ಅಲ್ಲಲ್ಲಿ ಆಳತೊಡಗಿದ್ದರು. ಈ ಬಗೆಯು ರಾಜ್ಯದ ಅವನತಿಯೊಡನೆ ನೈತಿಕ ಮತ್ತು ಧಾರ್ಮಿಕ ಅವನತಿಗಳೂ ಉತ್ಪನ್ನವಾಗುವದು ಸ್ವಾಭಾವಿಕವು. ಹೀಗೆ ಅವ್ಯವಸ್ಥೆಯಾದದ್ದನ್ನು ಚನ್ನಬಸವ ಪುರಾಣ ಕರ್ತನಾದ ವಿರೂಪಾಕ್ಷ ಪಂಡಿತನು ತನ್ನ ಕಾವ್ಯದಲ್ಲಿ ವರ್ಣಿಸಿದ್ದಾನೆ. ಇಂಥ ವಿಪ್ಲವ ಕಾಲದಲ್ಲಿ ತೋಂಟದಾರ್ಯರು ಕರ್ನಾಟಕದಲ್ಲಿ ಉಗಮಿಸಿದರು.

ನಿರಂಜನ ವಂಶರತ್ನಾಕರದಲ್ಲಿ ತೋಂಟದಾರ್ಯರು ಯಾವ ಕಾಲದಲ್ಲಿ ಉದಯಿಸಿದರೆಂಬದನ್ನು ಹೇಳುವಲ್ಲಿ "ಪಂಪಾ.ವಿರೂಪಾಕ್ಷನ ಕ್ಷೇತ್ರದ ವಿದ್ಯಾನಗರದ ಪ್ರೌಢರಾಯನ ಆಳಿಕೆಯಲ್ಲಿ ನೂರೊಂದು ವಿರಕ್ತರು ಭೂಮಿಯಲ್ಲಿ ಮಹಿಮರೆನಿಸಿ ಮಹತ್ವಗಳ ಮಾಡಿ ಶಿವಮತವನುದ್ಧರಿಸಿ ಶಿವಲೋಕಕ್ಕೆ ಹೋದಬಳಿಕ ಪ್ರೌಢರಾಯನ ಪಟ್ಟಣವ ಆ ರಾಜನು ಸಾಂಬಲೋಕಕ್ಕೆ ಹೋದನಂತರ ನರಸಣ್ಣರಾಯನಾಳಿಕೆಯಲ್ಲಿ ಆ ಸೀಮೆಯಲ್ಲಿ ಶಿವಮತವಳಿದು ಅನ್ಯಮತವು ಹೆಚ್ಚಿದ ಕಾರಣನಾದನು. ಶಿವನಿಗೆ ಸೂಚಿಸಿದರಿಂದ ನಿರಂಜನ ಗಣವರನು ಶಿವನಪ್ಪಣೆಯಿಂದ ಏಳುನೂರು ಗಣವರರು ಸಹಿತವಾಗಿ ಮರ್ತ್ಯಲೋಕದಿ ಈ ವಿರತರು ಅವತರಿಸಿದರೆಂಬುದಕ್ಕೆ ಆ ಪುರಾಣಗಳೇ ಸಾಕ್ಷಿಯು" (ಪುಟ ೩೯) ಎಂದು ಹೇಳುತ್ತಾನೆ.

ಇಲ್ಲಿ ಹೇಳಲ್ಪಟ್ಟ ನರಸಣ್ಣರಾಯನು ಸಾಳುವ ವಂಶದ ನರಸಿಂಹನಾಗಿರುವನು. ಈತನು ಪ್ರೌಢರಾಯನ ಕಾಲದಲ್ಲಿ ವಿಖ್ಯಾತನಾದ ಸೇನಾಪತಿಯಾಗಿ ದಕ್ಷಿಣ ದೇಶವನ್ನು ಮುಳುಬಾಗಿಲಿನಲ್ಲಿದ್ದು ಆಳುತ್ತಿದ್ದನು. ಪ್ರೌಢರಾಯನ ತರುವಾಯ ದುರ್ಬಲರಾದ ಮಲ್ಲಿಕಾರ್ಜುನ ಮತ್ತು ವಿರೂಪಾಕ್ಷರಾಯ ಇವರ ಇಳಿಕೆಯಲ್ಲಿಯೂ ತನ್ನ ಅಧಿಕಾರವನ್ನು ಹೆಚ್ಚಿಸುತ್ತ ಕಡೆಗೆ ತಾನೇ ವಿಜಯನಗರದಲ್ಲಿ ರಾಜ್ಯಾರೋಹಣವನ್ನು ಮಾಡಿದನು. ಈ ನರಸಣ್ಣನಾಯಕನ ಕಾಲವು ೧೪೫೯ ರಿಂದ ೧೪೬೮ ರ ವರೆಗೆ ಇದ್ದುದಾಗಿ ತಿಳಿದುಬರುತ್ತದೆ. ಈ ಸಾಳುವ ನರಸಿಂಹನು ಶ್ರೀ. ವೈಷ್ಣವ ಮತಾವಲಂಬಿಯಾಗಿ ಈ ಮತವನ್ನು ಹೆಚ್ಚಿ

ಸುತ್ತಿರುವ ಕಾಲದಲ್ಲಿ ತೋಂಟದಾರ್ಯರು ಉದಯಿಸಿದರೆಂಬದನ್ನು ಈ ಗ್ರಂಥದಲ್ಲಿ ವರ್ಣಿಸಿದೆ. ಹೀಗೆ ಹೇಳಿದ್ದರಲ್ಲಿ ಸತ್ಯಾಂಶವಿರುತ್ತದೆಂದು ನಮಗೆ ತೋರುತ್ತದೆ.

## ವಾಣಿಜ್ಯಪುರ.

ತೋಂಟದಾರ್ಯರು ಉದಯವಾದುದು ಮೈಸೂರು ಜಿಲ್ಲೆಯಲ್ಲಿರುವ ವಾಣಿಜ್ಯಪುರ ಅಥವಾ ಈಗಿನ ಹರದನಹಳ್ಳಿಯು. ಈ ಗ್ರಾಮವು ಈಗ ಒಂದು ಸಣ್ಣ ಸ್ಥಳವಾಗಿದ್ದರೂ ಹಿಂದಿನ ಕಾಲದಲ್ಲಿ ಇದು ಒಂದು ಮಹತ್ವದ ಪಟ್ಟಣವಾಗಿತ್ತು. ಇಲ್ಲಿಂದಲೇ ವೀರಶೈವ ಧರ್ಮಪ್ರಸಾರ ಕಾರ್ಯಗಳು ದೇಶದಲ್ಲೆಲ್ಲ ಜರಗುತ್ತಿದ್ದವೆಂಬುದಕ್ಕೆ ಬಲವಾದ ಕಾರಣಗಳುಂಟು. ಕರ್ನಾಟಕ ಪ್ರಾಂತದ ಉತ್ತರ ಪ್ರದೇಶವನ್ನು ಮುಸಲ್ಮಾನರು ಆಕ್ರಮಿಸಿ ಕಲ್ಯಾಣ ಪಟ್ಟಣವನ್ನು ವಿಧ್ವಂಸ ಮಾಡಿದ ಬಳಿಕ ಅಲ್ಲಿಯ ಶೂನ್ಯ ಸಿಂಹಾಸನಾಧೀಶ್ವರರು ಈ ಭಾಗದಿಂದ ತೆರಳಿ ವಿಜಯನಗರದ ರಾಜ್ಯವನ್ನು ಸೇರಿ, ಕೆಲವು ಕಾಲ ಮೈಸೂರು ಸೀಮೆಯಲ್ಲಿಯೂ ಕೆಲವು ಕಾಲ ಬೆಳಗಾವ ಜಿಲ್ಹೆಯ ದಕ್ಷಿಣ ಭಾಗದಲ್ಲಿಯೂ ಇದ್ದು ಕಡೆಗೆ ಮೈಸೂರು ಜಿಲ್ಹೆಯಲ್ಲಿರುವ ವಾಣಿಜ್ಯಪುರದಲ್ಲಿ ಇರಹತ್ತಿದರು. ಅಂದಿನಿಂದ ಈ ಗ್ರಾಮವು ಬಹು ಮಹತ್ವದ ಸ್ಥಾನವಾಯಿತು.

## ತೋಂಟದಾರ್ಯರ ಉದಯ.

೧೮ನೇ ಪಟ್ಟದ ಶ್ರೀ. ಗೋಸಲ ಚನ್ನಬಸವ ಸ್ವಾಮಿಗಳು ಇಲ್ಲಿ ಇರುತ್ತಿರಲು ಅವರಿಗೆ ತೋಂಟದಾರ್ಯರು ಶಿಷ್ಯತ್ವವನ್ನು ಹೊಂದಿದರು. ಮತ್ತು ಅವರಿಂದ ಪಟ್ಟವನ್ನು ಹೊಂದಿದರು. ಇದು ನಿರಂಜನವಂಶರತ್ನಾಕರದಲ್ಲಿ ವರ್ಣಿಸಲ್ಪಟ್ಟದ್ದು ಹೇಗೆಂದರೆ:- "ವಾಣಿಜ್ಯಪುರದಿ ಶೂನ್ಯಸಿಂಹಾಸನಸ್ಥ ಗೋಸಲ ಚನ್ನಬಸವರಾಜೇಂದ್ರರು ಒಪ್ಪುತ್ತ ಇರ್ದ ಕಾಲದಲ್ಲಿ ಪಂಪಾಕ್ಷೇತ್ರದಿ ವಿದ್ಯಾನಗರಿಯನ್ನಾಳಿದ ಪ್ರೌಢರಾಯನು ಸಾಂಬಲೋಕಕ್ಕೆ ಹೋದನಂತರ ಕೆಲವು ದಿವಸದಿ ಆ ರಾಜ್ಯದಲ್ಲಿ ಅನಾಚಾರವು ಹೆಚ್ಚಾಗಿ ಶಿವಾಚಾರವಡಗಿ ಮೇಲಾಧರಣಿಯೊಳು ವೀರಶೈವಾಚಾರವಿಲ್ಲದೆ ಪರವಾದಿಗಳು ಘನವಾಗಲು ಕೈಲಾಸಕ್ಕೆ ನಾರದನು ಪೋಗಿ" ಇತ್ಯಾದಿ ಆಗ ಪರಶಿವನು ತನ್ನ ನಿರಂಜನ ಗಣೇಶ್ವರನನ್ನು ೭೦೦ ಗಣವರರೊಡನೆ ಭೂಮಿಗೆ ಕಳಿಸಿದನೆಂತಲೂ ಈ ನಿರಂಜನ ಗಣೇ

ಶ್ವರನು ೮ ವರುಷದ ಶಿಶುರೂಪವನ್ನು ತಾಳಿ ಕೈಲಾಸದಿಂದ ವಾಣಿಜ್ಯ ಪುರದ ಗೋಸಲ ಚನ್ನಬಸವ ಸ್ವಾಮಿಗಳ ವರಸನ್ನಿಧಾನಕ್ಕೆ ಇಳಿದ ನೆಂತಲೂ ಇದರಲ್ಲಿ ಹೇಳಲ್ಪಟ್ಟಿದೆ. ಮಹಾಪುರುಷರು ಮಹಿಮಶಾಲಿ ಗಳೆಂಬ ಭಾವನೆಯು ಹಿಂದೂ ಧರ್ಮೀಯರಲ್ಲಿದ್ದು ಇದಕ್ಕನುಸಾರ ವಾಗಿ ಈ ವರ್ಣನೆಯು ಇದ್ದರೂ, ಇದರಿಂದ ತೋಂಟದಾರ್ಯರು ಉದಯಿಸಿದ ಕಾಲದಲ್ಲಿ ದೇಶ ಪರಿಸ್ಥಿತಿಯು ಎಷ್ಟು ಕೆಟ್ಟು ಹೋಗಿತ್ತು ಅವರ ಗುರುಗಳು ಆರು, ತೋಂಟದಾರ್ಯರು ಎಲ್ಲಿ ಮೊದಲು ತಮ್ಮ ಆಯುಷ್ಯಕ್ರಮವನ್ನು ಪ್ರಾರಂಭಿಸಿದರು ಎಂಬ ಮಹತ್ವದ ವಿಷಯಗಳು ಮೇಲ್ಕಂಡ ಗ್ರಂಥದಲ್ಲಿ ಸ್ಪಷ್ಟವಾಗಿ ಹೇಳಲ್ಪಟ್ಟಿವೆ. ಹೀಗೆ ತೋಂಟದಾ ರ್ಯರು ಉದಯಿಸಲು, ಗೋಸಲ ಚನ್ನಬಸವೇಶ್ವರರು ಅವರಿಗೆ "ನಿರಾ ಭಾರ ವೀರಶೈವ ದೀಕ್ಷೆಯನ್ನಿತ್ತು ಷಟ್‌ಸ್ಥಲ ಬ್ರಹ್ಮೋಪದೇಶವಂ ಮಾಡಿ ಅನಾದಿ ಸಿದ್ಧಲಿಂಗೇಶನೆಂಬ ನಾಮವಂ ಕೊಟ್ಟು ರಕ್ಷಿಸಿದರು" ಎಂದು ಇದೇ ಗ್ರಂಥದಲ್ಲಿ ಹೇಳಲ್ಪಟ್ಟಿದೆ. (ಪುಟ ೩೭). ಮುಂದೆ ಗೋಸಲ ಚನ್ನಬಸವೇಶ್ವರರು ತಮ್ಮ ಶಿವಾನುಭವ ಚರಂತಿಕೆಯ ಪಟ್ಟವನ್ನು ಸಿದ್ಧಲಿಂಗ ಯತಿಗಳಿಗೆ ಕೊಟ್ಟು ತಾವು ಸಿದ್ಧಗಂಗೆಗೆ ಹೋಗಿ ಅಲ್ಲಿ ಕೆಲ ಕಾಲವಿದ್ದು ಮುಂದೆ ಗುಬ್ಬಿಗೆ ಬಂದು ಅಲ್ಲಿ ಮಹಾಕವಿ ಮಲ್ಲಣಾಚಾ ರ್ಯನ ಭಕ್ತಿಯನ್ನು ಸ್ವೀಕರಿಸಿ ಅಲ್ಲಿಯೇ ನಿರ್ವಯಲಾದರು.

## ತೋಂಟದಾರ್ಯರ ಸಹಾಯಕರು.

ಹೀಗೆ ಗೋಸಲ ಚನ್ನಬಸವೇಶ್ವರರ ತರುವಾಯ ತೋಂಟದಾ ರ್ಯರ ಮೇಲೆ ಸಮಾಜೋದ್ಧಾರ ಕಾರ್ಯವನ್ನು ನಿರ್ವಹಿಸುವ ಭಾರವು ಬಿದ್ದಿತ್ತು. ಇದರಲ್ಲಿ ಅವರು ತಮ್ಮ ಶಕ್ತಿ ಸಾಹಸಗಳನ್ನು ಮಿಗಿಲಾಗಿ ತೋರಿಸಿದರೆಂದು ಅವರ ಚರಿತ್ರೆಯಿಂದ ತಿಳಿದುಬರುತ್ತದೆ. ಈ ಕಾಲಕ್ಕೆ ದೇಶದಲ್ಲಿದ್ದ ಶಿವಾನುಭವಿಗಳೂ ಸತ್ಪುರುಷರೂ ವಾಣಿಜ್ಯಪುರದಲ್ಲಿ ನೆರೆದು ಈ ಕಾರ್ಯದಲ್ಲಿ ಅವರಿಗೆ ನೆರವಾಗಲು ಸನ್ನದ್ಧರಾದರು. ಇಂಥವರು ಅನೇಕರು ಆ ಕಾಲಕ್ಕಿದ್ದುದು ತೋರಿಬರುತ್ತದೆ. ಯಾಕಂದರೆ ಪ್ರೌಢ ರಾಯನ ಆಳಿಕೆಯಲ್ಲಿ ಲಕ್ಕಣ್ಣಾಮಾತ್ಯ, ಜಕ್ಕಣಾಚಾರ್ಯ ಇವರ ಪ್ರಯತ್ನದಿಂದಲೂ ಆ ರಾಜನ ಸಹಾನುಭೂತಿಯಿಂದಲೂ ವೀರಶೈವ ಸಮಾಜಕ್ಕೆ ಕಳೆ ಏರಿತ್ತೆಂದು ಇತಿಹಾಸಜ್ಞರು ಒಪ್ಪಿಕೊಳ್ಳುತ್ತಾರೆ. ಇದ ರಿಂದ ಆ ಕಾಲಕ್ಕೆ ದೇಶದಲ್ಲೆಲ್ಲ ಬಹುಕಡೆಗೆ ಧರ್ಮಜಾಗ್ರತಿಯು ಉತ್ಪ

ನ್ನವಾಗಿ ಅನೇಕ ಶಿವಶರಣರು ಉತ್ಪನ್ನರಾದರು. ಇವರ ಹೆಸರುಗಳನ್ನು ಲಕ್ಕಣ್ಣದಂಡೇಶನು ತನ್ನ 'ಶಿವತತ್ವ ಚಿಂತಾಮಣಿ' ಎಂಬ ಗ್ರಂಥದಲ್ಲಿ ಕೊಟ್ಟಿದ್ದಾನೆ. ಇದರಿಂದ ವಿಜಯನಗರವು ವೀರಶೈವರಿಗೆ ಧಾರ್ಮಿಕ ಮಹತ್ವದ ಕೇಂದ್ರಸ್ಥಾನವಾಯಿತು.

ಆದರೆ ಮುಂದೆ ವಿರೂಪಾಕ್ಷರಾಯನ ಕಾಲದಲ್ಲಿ ರಾಜ್ಯದಲ್ಲಿ ಅವ್ಯವಸ್ಥೆಯು ತಲೆದೋರಿತು. ಮತ್ತು ಶ್ರೀ ವೈಷ್ಣವ ಧರ್ಮವು ಪ್ರಬಲಿಸಿತು. ಆಗ ವೀರಶೈವರ ಕೇಂದ್ರಸ್ಥಾನವು ವಿಜಯನಗರವಾಗಿ ಉಳಿಯಲು ಸಾಧ್ಯವಿಲ್ಲದಾಯಿತು. ಆದರೆ ಇಷ್ಟರಲ್ಲಿ ವಾಣಿಜ್ಯಪುರದಲ್ಲಿ ಶೂನ್ಯಸಿಂಹಾಸನಾಧಿಪತಿಗಳ ಆವಾಸ ಸ್ಥಾನವಾಗಿದ್ದುದರಿಂದಲೂ ಇದರಿಂದ ಅಲ್ಲಿ ಶಿವಾನುಭವಿಗಳು ಆಗಮಿಸಹತ್ತಿದುದರಿಂದಲೂ ಅದು ವೀರಶೈವರ ಚಟುವಟಿಕೆಗಳಿಗೆ ಮುಖ್ಯಸ್ಥಾನವಾಯಿತು. ಹಿಂದೆ ದೇವರದಾಸಿಮಾರ್ಯನ ಕಾಲದಲ್ಲಿ ಉಂಟಾದ ಧರ್ಮ ಜಾಗ್ರತಿಯು ಹೇಗೆ ಬಸವೇಶ್ವರನಿಗೆ ಸಹಾಯವಾಯಿತೋ ಹಾಗೆಯೇ ಪ್ರೌಢರಾಯನ ಕಾಲದಲ್ಲಿ ಉಂಟಾದ ಧರ್ಮ ಜಾಗ್ರತಿಯು ಪರಿಣಾಮಗಳು ತೋಂಟದಾರ್ಯರಿಗೆ ಸಹಾಯಕಾರಿಗಳಾದವು. ಅವರು ಅವುಗಳ ಉಪಯೋಗವನ್ನು ಬಸವೇಶ್ವರನಂತೆಯೇ ಪೂರ್ಣವಾಗಿ ಮಾಡಿಕೊಂಡು ದೇಶದಲ್ಲಿ ಅನೇಕ ಮಹತ್ವದ ಕಾರ್ಯಗಳನ್ನು ಜರುಗಿಸಿದರು.

ತೋಂಟದಾರ್ಯರ ಈ ಕಾಲದಲ್ಲಿ ಅನೇಕ ಸಹಾಯಕರು ದೊರೆತರು. ಅವರಲ್ಲಿ ಕೆಲವರು ವಚನಕಾರರಿರುವರು, ಕೆಲವರು ಕವಿಗಳಿರುವರು, ಕೆಲವರು ಸಾಧುವರ್ಯರಿರುವರು. ಇವರೆಲ್ಲರೂ ಒಂದೇ ಕಡೆಯವರಲ್ಲ. ಕರ್ನಾಟಕಾಂಧ್ರ, ತಮಿಳು, ದೇಶಗಳಲ್ಲಿಂದ ಬಂದವರು. ಬಸವೇಶ್ವರನ ಕಾಲದಲ್ಲಿ ಅನೇಕ ನಾಡುಗಳಿಂದ ಶಿವಾನುಭವ ಸಂಪನ್ನರು. ಕಲ್ಯಾಣಪಟ್ಟಣದಲ್ಲಿ ಕಲೆತು ಧರ್ಮ ಕಾರ್ಯಗಳನ್ನು ನೆರವೇರಿಸಲು ಹೇಗೆ ತತ್ಪರರಾದರೋ ಹಾಗೆಯೇ ವಾಣಿಜ್ಯಪುರದಲ್ಲಿ ತೋಂಟದಾರ್ಯರ ಸನ್ನಿಧಾನದಲ್ಲಿ ನೂರಾರು ಜನ ಶಿವಶರಣರು ನೆರೆದು ಅವರ ಸಹಾಯಕ್ಕೆ ಸನ್ನದ್ಧರಾದರು. ಈ ವೀರಶೈವ ಸಮಾಜದಲ್ಲಿ ಕಂಟಕಗಳು ಕಾಲಕಾಲಕ್ಕೆ ಉಂಟಾದದ್ದು ಕಂಡುಬರುತ್ತದೆ. ಆದರೆ ಇಂಥ ಕಾಲದಲ್ಲಿಯೇ ಅದರಲ್ಲಿ ಧಾರ್ಮಿಕ ಚಟುವಟಿಕೆಗಳು ದೃಷ್ಟಿಗೆ ಬೀಳುತ್ತವೆ.

ನಿರಂಜನ ವಂಶರತ್ನಾಕರದಲ್ಲಿ ತೋಂಟದಾರ್ಯರಿಗೆ ಜೋಡಿಗರಾದ ಈ ಮಹಾನುಭಾವರ ಹೆಸರುಗಳು ಇವೆ. ಅವು ಯಾವವೆಂದರೆ:– ಕಂಬಳಿಯದೇವರು, ಸಿದ್ಧನಂಜೇಶ್ವರರು, ಚನ್ನದೇವರು, ದೊಡ್ಡ ಸಿದ್ಧಲಿಂಗೇಶ್ವರ, ಕಂಕಣದದೇವರು, ಲಂಬಕರ್ಣದದೇವರು, ಸಿದ್ಧಮಲ್ಲೇಶ್ವರ, ಗುಮ್ಮಳಾಪುರದ ವರದ ಸಿದ್ಧಲಿಂಗೇಶ್ವರ, ಎಡತೊರೆಯ ಪುರದ ಗುರುಸಿದ್ಧ, ವೀರಣ್ಣೊಡೆಯರು, ಘನಲಿಂಗದೇವರು, ಚಿಕ್ಕಮಲ್ಲೇಶ್ವರ, ಮರುಳಸಿದ್ಧೇಶ್ವರ, ಚಂದ್ರಶೇಖರ, ಸುರಗಿಯಾರ್ಯ ಶಾಂತಮಲ್ಲಿಕಾರ್ಜುನ, ಬೆಡಗಿನ ಪರ್ವತೇಶ್ವರ, ಪಟ್ಟಣದದೇವರು, ಜಿಗುನಿಯ ಮರುಳುದೇವರು, ಮಳಿಯದೇವರು, ಬತ್ತಲೆಯಾರ್ಯ, ಸಂಪಿಗೆಯ ರಾಚವಟ್ಟಿದೇವರು, ಸಪ್ಪೆಯಾರ್ಯ, ಉಪ್ಪಿನಹಳ್ಳಿಯಾರ್ಯ, ಜೋಲಿಯಾ ಬಸವೇಶ್ವರ, ರಾಚವಟ್ಟಿಯ ಕೋರಿಯ ಸಿದ್ಧಬಸವೇಶ್ವರ, ಹಿರಣ್ಯಾರ್ಯ, ಚೋಳೆ ಬಸವೇಶ್ವರ, ಕಿತ್ತಾವರದ ಚನ್ನಮಲ್ಲೇಶ್ವರ ಇವರ ಹೆಸರುಗಳು ಹೇಳಲ್ಪಟ್ಟಿವೆ. ಹೀಗೆ ಏಳುನೂರು ಜನರು ನೆರೆದು ''ಸಂತತಂಗೂಡಿ ಷಟ್‌ಸ್ಥಲಮಾರ್ಗವಂ ಧರೆಯೊಳಂತರಿಸದಂತೆ ನೆಲೆಗೊಳಿಸುತ್ತ ಪೂಜೆಗೊಳುತಿರದೆ ನಿಜಮುಕ್ತರಹರು" ಎಂದು ಹೇಳಿದ್ದು ಇದರಿಂದ ಈ ಯಾವತ್ತರೂ ಷಟ್‌ಸ್ಥಲ ಮಾರ್ಗವನ್ನು ದೇಶದಲ್ಲಿ ಬೋಧಿಸುವ ಕಾರ್ಯದಲ್ಲಿ ನಿರತರಾಗಿದ್ದರೆಂದು ಕಂಡುಬರುತ್ತದೆ. ಹೀಗೆ ಹೇಳಿದ್ದರಲ್ಲಿ ಯಾವ ಅತಿಶಯೋಕ್ತಿಯೂ ಇರುವದಿಲ್ಲ. ಈ ವಿಷಯವು ಚನ್ನಬಸವ ಪುರಾಣ ಕರ್ತನಾದ ವಿರುಪಾಕ್ಷ ಪಂಡಿತನೂ ಕೂಡ ತನ್ನ ಪುರಾಣದಲ್ಲಿ ಹೇಳಿರುವನು. ಇವನು ತೋಂಟದಾರ್ಯರ ತರುವಾಯ ಸುಮಾರು ೧೦೦ ವರ್ಷಗಳ ನಂತರ ಇದ್ದನು. ಆದುದರಿಂದ ತೋಂಟದ ಸಿದ್ಧಲಿಂಗ ಯತಿಯು ಮಾಡಿದ ಕಾರ್ಯಗಳ ವೃತ್ತಾಂತವು ಅವನಿಗೆ ಹೆಚ್ಚಿಗೆ ಗೊತ್ತಾಗುವದು ಸಾಧ್ಯವಿದೆ. ತೋಂಟದಾರ್ಯರ ಸಮಾಧಿಸ್ಥಲವು ಎಡೆಯೂರು. ಈ ಸ್ಥಳದಲ್ಲಿ ಅವರ ದೇವಸ್ಥಾನವಿದ್ದು ಅದರ ಪ್ರಾಕಾರದಲ್ಲಿ ೧೫೦೦ರಲ್ಲಿ ಬರೆದ ಒಂದು ಶಿಲಾಶಾಸನವಿದೆ. ಇದರಲ್ಲಿ ಬರೆದ ಸಂಗತಿಗಳಾದರೂ ಮಹತ್ವದವಿವೆ.

"ಇಂತಪ್ಪ ಅನಾದಿ ಜಂಗಮನೇ ಜಗದ್ಧಿತಾರ್ಥವಾಗಿ ಚರಿಸಿದ ಕ್ರಮವೆಂತೆಂದೊಡೆ:– ಜ್ಞಾನಕ್ರಿಯಾ ಸ್ವರೂಪನುಂ, ಸರ್ವಾಂಗಲಿಂಗಿ ಷಟ್‌ಸ್ಥಲಜ್ಞಾನಿ ಸರ್ವಾಚಾರ ಸಂಪನ್ನ ಪಾದೋದಕ ಪ್ರಸಾದ ಪ್ರತಿ

ಷ್ಠಾಚಾರ್ಯನುಂ ಅಷ್ಟಾವರಣಾಲಂಕರಣ ದ್ವೈತಾದ್ವೈತ ತಿಃಖರ ಮಾರ್ತಂಡನುಂ ಇಂತಪ್ಪ ದಿವ್ಯಶಿವಯೋಗಿ ಸಿದ್ಧಲಿಂಗೇಶ್ವರಂಗೆ ಸಮ್ಯಗ್ ಜ್ಞಾನೋದಯವಾಗಿ ಸಂಸಾಹ ಹ್ಯೇಯಮಂ ಮಾಡಿ ಶರಣ ಹೊಕ್ಕ ಶಿಷ್ಯಜನಗಳನಾಮ ಪರಿಕ್ರಮಂಗಳೆಂತೆಂದೊಡೆಃ— ಸಪ್ಪೆದೇವರು, ಉಪ್ಪಿನಹಳ್ಳಿಯ ಸ್ವಾಮಿ ಸಿದ್ಧದೇವರು, ನಂಜೇದೇವರು, ಚೋಳ ಬಸವರಾಜ ದೇವರು, ಗುಮ್ಮಳಾಪುರದ ಸಿದ್ಧಲಿಂಗದೇವರು, ಪಟ್ಟಣದೇವರು, ರೇವಣ ಸಿದ್ಧದೇವರು, ಸೀಲವಂತದೇವರು, ಬೆಟ್ಟಗದೇವರು ಇಂತೆ ಇವರು ಮುಖ್ಯವಾದ ಭಕ್ತ ಮಾಹೇಶ್ವರಗಳ್ ಷಟ್‌ಸ್ಥಲ ಜ್ಞಾನಲಿಂಗಾಂಗ ಸಂಬಂಧ ಸಮರಸೈಕ್ಯಾರ್ಥಮಂ ಬೋಧಿಸಿ ಮುಕ್ತರಂಮಾಡಿ ಷಟ್ ಸ್ಥಲೈಕಾರ್ಥವಾಗಿ ಮಾಡುವ ಕ್ರಿಯೆಗಳೆಲ್ಲ ನಿಷ್ಪತ್ತಿಯಾಗಿ ಎಡೆಯೂರಲ್ಲಿ ತಮಗೆ ಕಟ್ಟಿಸಿದ ಮಠದಲ್ಲಿ ಶಿವಯೋಗ ಸಮಾಧಿ ಸನ್ನದ್ಧರಾದರು. ತೋಂಟದ ಸ್ವಾಮಿಯ ಪಾದಪದ್ಮಾರಾಧಕರಾದ ದಾನಿವಾಸ ನಿವಾಸಿಗಳಾದ ಚನ್ನರಾಯ ಒಡೆಯರು ಚನ್ನರಾಯ ಒಡೆಯರ ಮಕ್ಕಳು ಲಿಂಗಪ್ಪ ಒಡೆಯರು, ಲಿಂಗಪ್ಪ ಒಡೆಯರ ಮಕ್ಕಳು, ಪಾದೋದಕ ಪ್ರಸಾದ ಸಂಪನ್ನರಾದ ಚನ್ನವೀರಪ್ಪ ಒಡೆಯರು, ಚನ್ನವೀರಪ್ಪ ಒಡೆಯರ ಸತಿ ಪರ್ವತಮ್ಮ ದಂಪತಿಗಳು ತಮ್ಮ ಭಕ್ತಿಯಿಂದ ತೋಂಟದ ಸ್ವಾಮಿಗೆ ಕಲ್ಲುಮಠವ ಕಟ್ಟಬೇಕೆಂದು ಬೆಟ್ಟಗ ದೇವರಿಗೆ ಪದಾರ್ಥಮಂ ಕೊಟ್ಟು ನಮಸ್ಕಾರವಂ ಮಾಡಲಾಗಿ ಭಕ್ತಿ ಪದಾರ್ಥಮಂ ಕೈಕೊಂಡು ಎಡೆಯೂರಿಗೆ ಬಿಜಯಂಗೈದು ತೋಂಟದ ಸ್ವಾಮಿಗೆ ಕಲ್ಲುಮಠವನು ಎಂಟು ಜಡೆಯ ಬಗೆಯ ಕಿರಿಯರು ಬೆಟ್ಟಗ ದೇವರು ಕಟ್ಟಿಸಿದರು.

ಈ ಶಿಲಾಶಾಸನವು ತೋಂಟದಾರ್ಯರನ್ನು ಪ್ರತ್ಯಕ್ಷವಾಗಿ ಕಂಡು ಅವರ ಭಕ್ತಿಯಲ್ಲಿರ್ದ ಭಕ್ತರು ಬರೆಯಿಸಿದ್ದಾಗಿದೆ. ಇದರಿಂದ ಇದು ಹೆಚ್ಚಿಗೆ ವಿಶ್ವಾಸರ್ಹವಾದುದು. ಇದರಲ್ಲಿ ಬರೆದ ಹೇಳಿದ ವಿಷಯಗಳೂ ನಾವು ಹೇಳಿದ ಮೇಲಿನ ಸಂಗತಿಗಳನ್ನು ಸಮರ್ಥಿಸುತ್ತವೆ.

## ವಚನ ವಾಙ್ಮಯದ ಉದ್ಧಾರವು.

ತೋಂಟದಾರ್ಯರ ಕಾಲದಲ್ಲಿ ಜರಗಿದ ಮಹತ್ವದ ಕಾರ್ಯವೆಂದರೆ ಬಸವಾದಿ ಪ್ರಮಥರ ಕಾಲದಲ್ಲುದಯ ಹೊಂದಿದ ವಚನ ವಾಙ್ಮಯದ ಉದ್ಧಾರವು. ಬಸವೇಶ್ವರನಿಂದ ಉಂಟಾದ ಅದ್ಭುತ ಧಾರ್ಮಿಕ

ಕ್ರಾಂತಿಯು ವಚನ ವಾಙ್ಮಯದ ಮೂಲಕನೇ ಇರುತ್ತದೆ. ಆದರೆ ಅವನ ತರುವಾಯ ದೇಶದಲ್ಲಿ ಪರಧರ್ಮೀಯರ ಉಪಟಳವು ಹೆಚ್ಚಿ ಸುಖ ಶಾಂತಿಯಿಂದ ರಾಜ್ಯ ಮಾಡುತ್ತಿದ್ದ ರಾಜ ವಂಶಗಳು ಲಯ ಹೊಂದಿದವು. ಮೊದಲು ಮಲಿಕಕಾಫರನ ಅಭಿಯೋಗ, ಆಮೇಲೆ ತಗ ಲಖ ಮುಹಮ್ಮದನೊಡನೆ ಆದ ಕಡುಗಾಳಗಗಳು, ಇವುಗಳ ಮೂಲಕ ಕರ್ನಾಟಕ ಮತ್ತು ದಕ್ಷಿಣ ಹಿಂದುಸ್ತಾನದಲ್ಲೆಲ್ಲ ಮೊದಲು ವೈಭವಕ್ಕೆ ಬಂದಿದ್ದ ರಾಜ್ಯಗಳು ನಷ್ಟವಾದವು. ಇಂಥ ಕಾಲದಲ್ಲಿ ಧಾರ್ಮಿಕ ಮತ್ತು ಸಾಮಾಜಿಕ ಅಭಿವೃದ್ಧಿಯ ಕಾರ್ಯಗಳು ಸಡಿಲಾಗಿ ಹೋಗುವದು ಸ್ವಾಭಾವಿಕವಾಗಿದೆ. ಈ ತೆರದ ಸ್ಥಿತಿಯು ಕರ್ನಾಟಕಕ್ಕೆ ಪ್ರಾಪ್ತವಾದುದರಿಂದ ಬಸವೇಶ್ವರನ ಕಾಲದಲ್ಲಿ ಉಂಟಾದ ಧರ್ಮಪ್ರಸಾರದ ಮತ್ತು ಸಮಾಜೋದ್ಧಾರದ ಪ್ರಯತ್ನಗಳು ೧೩ನೆಯ ಮತ್ತು ೧೪ನೆಯ ಶತಮಾನಗಳಲ್ಲಿ ಮುಂದುವರಿಯುವದು ಅಶಕ್ಯವಾಯಿತು.

ಆದರೆ ವಿಜಯನಗರದ ಸಾಮ್ರಾಜ್ಯವು ನೆಲೆಗೊಂಡ ಬಳಿಕ ದೇಶದಲ್ಲಿ ಸುಖಶಾಂತಿಗಳು ಪುನಃ ನೆಲಿಸಿದವು. ಪ್ರೌಢ ನರೇಂದ್ರನ ಕಾಲದಲ್ಲಿ ವೀರಶೈವ ಸಮಾಜದಲ್ಲಿ ಅನೇಕ ವಿಖ್ಯಾತ ಮಹಾಪುರುಷರು ಉದಯವಾದರು. ಆಗ ಉತ್ಪನ್ನರಾದ ಜಕ್ಕಣಾಚಾರ್ಯ, ಚಾಮರಸ, ಕುಮಾರ ಬಂಕನಾಥ, ಕಲ್ಲುಮಠದ ಪ್ರಭುದೇವ ಇವರೇ ಮೊದಲಾದವರಿಂದ ವಚನಶಾಸ್ತ್ರವು ಪುನಃ ಅಭಿವೃದ್ಧಿಗೊಂಡಿತು. ಮುಂದೆ ಈ ಕಾರ್ಯವು ತೋಂಟದಾರ್ಯರ ಕಾಲದಲ್ಲಿ ಮತ್ತಿಷ್ಟು ಪ್ರಬಲವಾಗಿ ಪ್ರವಹಿಸತೊಡಗಿತು.

ತೋಂಟದಾರ್ಯರು ಸ್ವತಃ ತಾವು ಒಂದು ವಚನಗ್ರಂಥವನ್ನು ರಚಿಸಿದ್ದಾರೆ. ಅವರು "ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೇ" ಎಂಬ ಮುದ್ರಿಕೆಯನ್ನು ಸ್ವೀಕರಿಸಿದ್ದಾರೆ. ಇದು ಪುರಾತನರ ವಚನಗಳಂತೆಯೇ ವೀರಶೈವ ಧರ್ಮತತ್ವದ ತಿರುಳನ್ನು ತಿಳಿಯಲು ಬಹು ಸಹಾಯಕರವಾಗಿದೆ. ಅವರಂತೆಯೇ ಘನಲಿಂಗ, ಬೋಳಬಸವೇಶ ಮರುಳುಸಿದ್ಧೇಶ್ವರ, ಶಾಂತಮಲ್ಲಿಕಾರ್ಜುನದೇವ, ಶೀಲವಂತಾರ್ಯ ಇವರೂ ವಚನಗ್ರಂಥಗಳನ್ನು ರಚಿಸಿದ್ದಾರೆ. ಇದಲ್ಲದೆ ಈ ೧೫ನೆಯ ಶತಮಾನದಲ್ಲಿ ೧೨ನೆಯ ಮತ್ತು ೧೩ನೆಯ ಶತಮಾನಗಳಲ್ಲಿ ಆಗಿಹೋದ ವಚನಗಳನ್ನು ಸುಸಂಬದ್ಧವಾಗಿ ಸಂಗ್ರಹಿಸುವ ಕಾರ್ಯಗಳೂ ಕೈಕೊ

ಳ್ಳಲ್ಪಟ್ಟವು. ಶೂನ್ಯಸಂಪಾದನೆ, ಲಿಂಗಲೀಲಾವಿಲಾಸ, ಗಣಭಾಷ್ಯ-ರತ್ನಮಾಲೆ ಈ ಬಗೆಯ ಗ್ರಂಥಗಳೂ ಅನೇಕ ವಚನಸಂಗ್ರಹಗಳೂ ಇದೇ ಕಾಲದಲ್ಲಿ ಉಂಟಾದವು. ಪ್ರಭುದೇವ, ಚನ್ನಬಸವ, ಸಿದ್ಧರಾಮ ಮೊದಲಾದವರ ವಚನಗಳು ಸಂಗ್ರಹಿಸಲ್ಪಟ್ಟವು. ಅನೇಕ ವಚನಗಳಿಗೆ ಟೀಕೆಗಳು ಬರೆಯಲ್ಪಟ್ಟವು. ಈ ಬಗೆಯ ವಾಙ್ಮಯವು ಈ ಕಾಲದಲ್ಲಿ ಉದ್ಭವಿಸಿತು ಮತ್ತು ಅದರ ಉಚ್ಚ ತತ್ವಗಳು ದೇಶದಲ್ಲೆಲ್ಲ ಪ್ರಸಾರ ಪಡಿಸಲ್ಪಟ್ಟವು. ಹೀಗೆ ವಚನ ವಾಙ್ಮಯವು ಪುನಃ ಅಭಿವೃದ್ಧಿಸ್ಥಿತಿಯನ್ನು ಈ ಕಾಲಕ್ಕೆ ಹೊಂದಿತು.

## ಧರ್ಮ ಪ್ರಸಾರ ಕಾರ್ಯ.

ಹೀಗೆ ತೋಂಟದಾರ್ಯರು ವೀರಶೈವ ಧಾರ್ಮಿಕ ವಾಙ್ಮಯ ಕ್ಷೇತ್ರದಲ್ಲಿ ಕಾರ್ಯವನ್ನೆಸಗಿದ್ದುದಲ್ಲದೆ ಅವರು ಅದರ ತತ್ವಗಳನ್ನು ದೇಶದಲ್ಲೆಲ್ಲ ಪ್ರಸಾರ ಮಾಡುವ ಕಾರ್ಯವನ್ನೂ ಕೈಕೊಂಡರು. ಪೀಠಾಧಿಪತಿಗಳು ಮಾಡತಕ್ಕ ಈ ಮಹತ್ವದ ಕಾರ್ಯವನ್ನು ಅವರು ಹಿಂದು ಸ್ತಾನದಲ್ಲಿ ಅನೇಕ ಕಡೆಗೆ ಸಂಚರಿಸಿ ನೆರವೇರಿಸಿದರು. ಅವರು ಸಂಚಾರ ಮಾಡಿದ ಸ್ಥಳಗಳು ತೋಂಟದಾರ್ಯ ರಗಳೆ ಮತ್ತು ಸಿದ್ಧೇಶ್ವರ ಪುರಾಣ ಇವುಗಳಲ್ಲಿ ಹೇಳಲ್ಪಟ್ಟಿವೆ. ಈ ಕಾಲದಲ್ಲಿ ಅವರು ೭೫ ಮಹಿಮೆಗಳನ್ನು ಮಾಡಿದರೆಂಬ ಆಖ್ಯಾಯಿಕೆಯು ಇದೆ. ಮತ್ತು ಇವುಗಳ ವರ್ಣನೆಯು ಅವರ ಪುರಾಣಗಳಲ್ಲಿಯೂ ಬಂದಿರುತ್ತದೆ.

ತೋಂಟದಾರ್ಯರು ಪೀಠಾಧಿಪತಿಗಳಾದ ಬಳಿಕ ಅವರು ಮೊದಲು ಚೋಳದೇಶದ ಕಡೆಗೆ ತೆರಳಿ, ಕಂಚಿ, ಕಾಳಹಸ್ತಿ, ಚಿದಂಬರ ಈ ಮೊದಲಾದ ಕ್ಷೇತ್ರಗಳಿಗೆ ಚಿತ್ತೈಸಿದರು. ಆಗ ಅವರು ಮಾಡಿದ ಕಾರ್ಯಗಳನ್ನು ನಿರಂಜನವಂಶರತ್ನಾಕರ ಗ್ರಂಥದಲ್ಲಿ ಹೇಳಿದ್ದು ಏನೆಂದರೆ:— "ಗಣಸಮೂಹಗಳಿಂದ ವಾಣಿಜ್ಯಪುರಮಂ ಬಿಟ್ಟು, ದೇಶ ದೇಶಗಳಲ್ಲಿ ಉತ್ಸಹಂಗೊಳ್ಳುತ್ತ ಅಲ್ಲಿರುವ ಜೋಗಿನಾಥರು, ಸಿದ್ಧರು, ವೈಷ್ಣವ, ಬೌದ್ಧ, ಜೈನ, ಕಾಳಾಮುಖ ಮುಂತಾದವರಂ ಶಾಸ್ತ್ರಮುಖದಿಂ ಮಹತ್ವದಿಂ ಗೆಲಿದು ಅವರಿಗೆ ಶಿವಭಕ್ತಿಯನುಂಟು ಮಾಡುತ್ತ, ಕೆಲವು ಜನರಿಗೆ ಲಿಂಗಧಾರಣವಂ ಮಾಡಿಸಿ ವೀರಶೈವವಂ ಉದ್ಧರಿಸುತ್ತ . . . . ಶರಣಗಣರಿಗೆ ಷಟ್‌ಸ್ಥಲ ಜ್ಞಾನೋಪದೇಶವಂ ಮಾಡಿ ಮೋಕ್ಷಮಾರ್ಗವ

ಸೀವೃತ ಸಕಲ ದೇಶಂಗಳ ಸಂಚರಿಸಿ” ಎಂದು ಇದರಲ್ಲಿ ಉಲ್ಲೇಖ ವಿದೆ. ದೇಶಮಧ್ಯದಲ್ಲಿ ಧಾರ್ಮಿಕ ಅವನತಿಯು ಪ್ರಾಪ್ತವಾದ ಕಾಲ ದಲ್ಲಿ ತೋಂಟದಾರ್ಯರು ಹೀಗೆ ಉದ್ಧಾರ ಕಾರ್ಯವನ್ನು ಮಾಡಿದ ರೆಂಬುದು ಇಲ್ಲಿ ಬಹು ಸ್ಪಷ್ಟವಾಗಿ ಹೇಳಲ್ಪಟ್ಟಿದೆ. ಇದರಲ್ಲಿ ನಿಜಾಂಶ ವಿರಬೇಕು. ಈ ಪ್ರಕಾರ ಅವರು ಕಾರ್ಯಮಾಡುತ್ತ ಸಂಚರಿಸಿದ ಸ್ಥಳ ಗಳು ಅನೇಕ ವಿರುತ್ತವೆ. ಅವುಗಳು ತೋಂಟದಾರ್ಯರ ರಗಳೆಯಲ್ಲಿ ಹೇಳಲ್ಪಟ್ಟಿವೆ. ಅವರು ಮೈಸೂರು ಪ್ರಾಂತದಲ್ಲಿ ಎಲ್ಲ ಕಡೆಗೂ ಸಂಚ ರಿಸಿದರು. ಅವರು ಕೊನ್ನಡಿಕೆ, ಚನ್ನಪಟ್ಟಣ, ಕಲುಗುಣಿಕೆ, ಹಂಚಿ ಹಟ್ಟಿ, ಲಿಂಗಪುರ, ಬಸವಪುರ, ತುಮಕೂರು, ದೇವರಾಯಪಟ್ಟಣ, ಮಂಗವಾಡ, ಬುರುಡುಗುಂಪೆ, ಹಲಕೂರು, ಬಸವಕೇತಶರಧಿ, ಕೋಡೀ ಹಳ್ಳಿ, ಕಡಬ, ಮೇಪರಾಳಿ, ಮೋದೂರು, ಹೆಬ್ಬೂರು, ಹೇರೂರು, ಎಡೆಯೂರು, ಕಗ್ಗೆರೆ ಈ ಗ್ರಾಮಗಳು ಮುಖ್ಯವಾಗಿ ಹೇಳಲ್ಪಟ್ಟಿವೆ. ಹಾಗೆಯೇ ಅವರು ಮೈಸೂರು ಸಂಸ್ಥಾನದ ನೆರೆ ಪ್ರಾಂತಗಳಾದ ಬಳ್ಳಾರಿ ಅನಂತಪುರ ಮತ್ತು ಮಂಗಳೂರು ಜಿಲ್ಲೆಗಳಲ್ಲಿಯೂ ಸಂಚರಿಸಿದರು. ಮಂಗಳೂರು ಜಿಲ್ಲೆಯಲ್ಲಿ ಗೋಣಿಬೀಡ, ಮಹಾಬಳೇಶ, ಕಾರ್ಕಳ ಈ ಗ್ರಾಮಗಳು ಮತ್ತು ಬಳ್ಳಾರಿ ಅನಂತಪುರ ಜಿಲ್ಲೆಗಳಲ್ಲಿ ಉರುವಕೊಂಡೆ, ಹೊಳಲು, ಹೇಮಗಿರಿ ಇವುಗಳು ಹೇಳಲ್ಪಟ್ಟಿವೆ. ಧಾರವಾಡ ಜಿಲ್ಲೆ ಯಲ್ಲಿ ವ್ಯಾಘ್ರಪುರ ಎಂದರೆ ಲಕ್ಷ್ಮೇಶ್ವರ ಮತ್ತು ಕಾರವಾರ ಜಿಲ್ಲೆಯಲ್ಲಿ ಉಳವಿ ಇವುಗಳೂ ಹೇಳಲ್ಪಟ್ಟಿವೆ. ಹೀಗೆ ಅವರು ಸಂಚರಿಸುವ ಕಾಲ ದಲ್ಲಿ ಅವರು ಅನೇಕ ಪವಾಡಗಳನ್ನು ಮಾಡಿದರು ಭಕ್ತರನ್ನು ಉದ್ಧ ರಿಸಿದರು ಮತ್ತು ವೀರಶೈವ ಮಾರ್ಗವನ್ನು ಬೋಧಿಸಿದರು.

ಆಮೇಲೆ ಅವರು ಉತ್ತರ ಹಿಂದುಸ್ತಾನದಲ್ಲಿ ಕಾಶಿ, ಗಯೆ, ಪ್ರಯಾಗ, ಇವುಗಳನ್ನು ಸಂದರ್ಶಿಸಿ ದಕ್ಷಿಣಕ್ಕೆ ತೆರಳಿ ಕೊಲ್ಲಿಪಾಕಿ, ಪರ್ವತ ಇವುಗಳನ್ನು ನೋಡಿ, ಮುಸಲ್ಮಾನ ರಾಜನಿದ್ದ ಬೇಡರ ಪಟ್ಟ ಣವನ್ನೂ ಸಹ ಕಂಡರೆಂದು ಅವರ ಚರಿತ್ರಾತ್ಮಕ ಗ್ರಂಥಗಳಲ್ಲಿ ಹೇಳ ಲ್ಪಟ್ಟಿದೆ.

## ಪೀಠಾಧಿಕಾರದ ತ್ಯಾಗ.

ಈ ಪ್ರಕಾರ ತೋಂಟದಾರ್ಯರು ಹಿಂದುಸ್ತಾನದಲ್ಲಿಯ ಮಹ ತ್ವದ ಸ್ಥಳಗಳನ್ನು ನೋಡುತ್ತ ತಿರುಣಾಮಲೆಗೆ ದಯಮಾಡಿಸಿದರು.

ಅಲ್ಲಿ ಅವರು ದಾಸೋಹ ಮಾಡುತ್ತಿರಲು ಆ ಕ್ಷೇತ್ರಕ್ಕೆ ಅಧಿಪತಿಯಾದ ದೀಕ್ಷಿತನು ಶ್ರೀ ಸ್ವಾಮಿಗಳಿಗೆ ಒಂದು ನವರತ್ನ ಹಾರವನ್ನು ಅರ್ಪಿಸಲು ಅವರು ಅದನ್ನು ತಮ್ಮೊಳಗಿದ್ದ ಒಬ್ಬ ಶಿಷ್ಯನಿಗೆ ಕೊಟ್ಟುಬಿಟ್ಟರು. ಇದನ್ನು ಉಳಿದವರು ನೋಡಿ ಸಹಿಸದೆ ಸ್ವಾಮಿಗಳು ತನಗೆ ಕೊಡಲಿಲ್ಲ, ನನಗೆ ಕೊಡಲಿಲ್ಲ ಎಂದು ತಮ್ಮ ತಮ್ಮೊಳಗೆ ಕಲಹಮಾಡಿದರಂತೆ. ಆಗ ಸ್ವಾಮಿಗಳು ಈ ಪಟ್ಟವೆಂಬುದು ಲಂಪಟತನವು, ಇದರಿಂದ ತಮಗೆ ೭೨ ಬಿರುದುಗಳು, ಇವಕ್ಕೆ ತಕ್ಕ ಆನೆ, ಕುದುರೆ, ಒಂಟೆ, ಕಾಲಾಳುಗಳು ಮುಂತಾದ ಸಂದಣಿ ಇರಬೇಕಾಯಿತು, ಆದ್ದರಿಂದ ಈ ಪಟ್ಟದಿಂದ ಕಾರಣವಿಲ್ಲವೆಂದು ತಿಳಿದು ತಮ್ಮ ಪಟ್ಟವನ್ನು ಬೋಳಬಸವೇಶ್ವರರೆಂಬ ಸ್ವಾಮಿಗಳಿಗೆ ಕೊಟ್ಟುಬಿಟ್ಟು, ಅವರನ್ನು ದೇಶಾಟಣಕ್ಕೆ ಕಳುಹಿಸಿ ಬಿಟ್ಟರು. ಮತ್ತು ತಾವೂ ಕೆಲವು ಗಣವರರನ್ನು ಜತೆಯಲ್ಲಿ ತೆಗೆದುಕೊಂಡು ದೇಶಾಂತರವನ್ನು ಮಾಡಹತ್ತಿದರು. ಈ ಪ್ರಕಾರ ತೋಂಟದಾರ್ಯರು ಆಚರಿಸಿದ್ದು ಅವರ ಉಚ್ಚತರ ವೃತ್ತಿಗೆ ಅನುರೂಪವಾದುದೇ ಇರುತ್ತದೆ.

ಈ ಪ್ರಕಾರ ತೋಂಟದಾರ್ಯರು ದೇಶದಲ್ಲಿ ಭಕ್ತೋದ್ಧಾರ ಕಾರ್ಯಗಳನ್ನು ಮಾಡುತ್ತ ಸಾಗಿದರು. ಹೀಗೆ ಅವರು ಮಾಡುವಲ್ಲಿ ಅವರ ಉದ್ದೇಶವು ಉತ್ಸವಾದಿಗಳನ್ನು ನೆರವೇರಿಸಿಕೊಂಡು ಕಪ್ಪಗಾಣಿಕೆಗಳನ್ನು ಸ್ವೀಕರಿಸುವದರಲಿಲ್ಲ. ಆದರೆ ತಾವು ಕೈಕೊಂಡ ಧರ್ಮೋದ್ಧಾರ ಕಾರ್ಯವು ನೆರವೇರಬೇಕು, ಅದು ದೇಶದಲ್ಲೆಲ್ಲ ಸ್ಥಿರತರವಾಗಿ ನಡೆದುಕೊಂಡು ಹೋಗಬೇಕು ಎಂದು ಮಾತ್ರ ಬಯಸಿದರು. ಇದಕ್ಕೋಸ್ಕರ ಅವರು ಸಮಾಜದಲ್ಲಿ ಹಿಂದೆ ಎಂದಿಗೂ ಇಲ್ಲದ ಒಂದು ಹೊಸದಾದ ಮತ್ತು ಬಲವಾದ ತಳಹದಿಯನ್ನು ಹಾಕಿದರು. ಇದರಿಂದ ಅವರ ಸಂಘಟನಾ ಶಕ್ತಿಯು ಎಷ್ಟು ಮಿಗಿಲಾಗಿದ್ದಿತೆಂಬುದು ವ್ಯಕ್ತವಾಗುತ್ತದೆ. ಈ ಸಂಘಟನೆಯಿಂದ ವೀರಶೈವ ಸಮಾಜದ ಸಾಮರ್ಥ್ಯವು ಆಗಿನ ಅತ್ಯಂತ ದುರ್ಧರ ಪ್ರಸಂಗದಲ್ಲಿ ಅಚ್ಚಳಿಯದೆ ಉಳಿಯಿತು. ಶ್ರೀ ಸ್ವಾಮಿಗಳವರು ಮಾಡಿದ ಈ ಕಾರ್ಯವು ವೀರಶೈವ ಸಮಾಜೇತಿಹಾಸದಲ್ಲಿ ಅಪೂರ್ವವಾಗಿದ್ದಾಗಿದೆ. ಅದನ್ನು ನಾವು ಕೆಳಗೆ ವಿವರಿಸುತ್ತೇವೆ.

## ಮಠಗಳ ಹೊಸ ವ್ಯವಸ್ಥೆ.

ತೋಂಟದಾರ್ಯರು ಆಗಿನ ವೀರಶೈವ ಮಠಗಳಲ್ಲಿ ಹೊಸ ವ್ಯವಸ್ಥೆಯನ್ನು ಮಾಡಿದರು. ಇದರಿಂದ ದೇಶದಲ್ಲೆಲ್ಲ ಧರ್ಮಜಾಗ್ರತೆಯ ಕಾರ್ಯಗಳು ನಿರಂತರವಾಗಿ ನಡೆಯಲು ಸಾಧ್ಯವಾಯಿತು. ಅವರು ಎರಡು ಬಗೆಯ ಮಠಗಳನ್ನು ಮಾಡಿದರು. (೧) ಪುರಾಣ ಚರಂತಿಕೆ ಅಥವಾ ಪಳ್ಳೀಚರಂತಿಕೆಯ ಮಠಗಳು (೨) ಮತ್ತು ವಿರಕ್ತಮಠಗಳು ಎಂದು ಇವು ಇರುತ್ತವೆ. ತೋಂಟದಾರ್ಯರೊಡನೆ ಇದ್ದ ೭೦೦ 'ಗಣವರ'ರ ಮೂಲಕವಾಗಿಯೇ ಅವರು ಈ ಬಗೆಯ ವ್ಯವಸ್ಥೆಯನ್ನು ಮಾಡಿದರು. ಈ ೭೦೦ ಗಣಂಗಳು ಸ್ಥಾಪಿಸಿದ ಮಠಗಳು ಒಂದೊಂದು ಬುಡಕಟ್ಟಿನ ಮಠಕ್ಕೆ ಹೊಂದಿದವು ಎಂದು ತಿಳಿಯಲ್ಪಟ್ಟಿವೆ. ಈ ಬುಡಕಟ್ಟಿನ ಹೆಸರುಗಳಲ್ಲಿ ಕೆಲವುಗಳ ಹೆಸರುಗಳು, "ಶಿವಪೂಜಾ ಬುಡಕಟ್ಟು, ಕಂಥೆ ಬುಡಕಟ್ಟು, ಬಿಸಿ ಅಗ್ಗಣಿ ಬುಡಕಟ್ಟು" ಈ ವಿಧವಾಗಿ ಇವೆ. ಆದರ ಈ ಬಗೆಯ ವ್ಯವಸ್ಥೆಯು ಈಗಿನ ಕಾಲದಲ್ಲಿ ನಮ್ಮ ಅವಲೋಕನೆಯಲ್ಲಿ ಬಂದಿಲ್ಲ. ಇಲ್ಲವೆ ಅವುಗಳ ಅವಶೇಷಗಳು ಕರ್ನಾಟಕದ ಕೆಲವೊಂದು ಭಾಗದಲ್ಲಿ ಒಂದು ವೇಳೆ ಇದ್ದರೂ ಇರಬಹುದು. ಆದರೆ ಈಗ ಪ್ರಚಾರದಲ್ಲಿ ದೇಶದಲ್ಲೆಲ್ಲ ವಿರಕ್ತಮಠಗಳು ಎಂಬ ಹೆಸರು ಮಾತ್ರ ಉಳಿದಿದೆ. ಮತ್ತು ಅವುಗಳು ಇಂಥಿಂಥ ಸಮಯದವುಗಳೆಂಬುದಾಗಿ ಮಾತ್ರ ಹೇಳಲ್ಪಡುತ್ತವೆ. ಆದರೆ ಈ ಸಮಯಗಳು ಉತ್ಪನ್ನವಾಗುವ ಮೊದಲು "ಬುಡಕಟ್ಟಿನ ಮಠಗಳು" ಎಂಬ ಹೆಸರು ಅಸ್ತಿತ್ವದಲ್ಲಿ ಇದ್ದಿರಬೇಕೆಂದು ನಮಗೆ ತೋರುತ್ತದೆ. ಇಂಥ ಮಠಗಳನ್ನು ಸ್ಥಾಪಿಸಿದ ತೋಂಟದಾರ್ಯರ ಶಿಷ್ಯರಾದ ೭೦೦ ಗಣಗಳು ಪುನಃ ಅನೇಕರನ್ನು ವಿರಕ್ತರನ್ನು ಮಾಡಿದರು. ಇವರೆಲ್ಲರೂ ಕೂಡಿ ೩ ಸಾವಿರ ವಿರಕ್ತರಾದರೆಂದು ನಿರಂಜನವಂಶ ರತ್ನಾಕರದಲ್ಲಿ ಹೇಳಲ್ಪಟ್ಟಿರುತ್ತದೆ. ಈ ವಿರಕ್ತರೆಲ್ಲರೂ ಈ ಕಾಲದಲ್ಲಿ ದೇಶದಲ್ಲೆಲ್ಲ ಒಂದು ಅದ್ಭುತವಾದ ಧರ್ಮಜಾಗ್ರತಿಯ ಕಾರ್ಯಗಳನ್ನು ಕೈಕೊಂಡರು. ಇದರಿಂದ ದೇಶದಲ್ಲಿ ಆಗ ಉಂಟಾಗಿದ್ದ ಅವ್ಯವಸ್ಥೆಗಳು ಹೊರಟುಹೋದವು, ವಾಙ್ಮಯವು ಬೆಳೆಯಿತು, ಮತ್ತು ಸಮಾಜದಲ್ಲಿ ಭದ್ರತೆಯುಂಟಾಯಿತು.

## ಪುರಾಣ ಚರಂತಿಕೆಯ ಮಠಗಳು

ಆಗ ನಿರ್ಮಿಸಲ್ಪಟ್ಟ ಮಠಾಧಿಕಾರಿಗಳಲ್ಲಿ ಪುರಾಣ ಚರಂತಿಕೆ ಅಥವಾ ಪಳ್ಳೀ ಚರಂತಿಕೆಯುಳ್ಳವರನ್ನು ನಿರ್ಮಿಸುವ ಕ್ರಮವು ಹೇಗೆಂ

ವರೆಃ— "ಬುಡಕಟ್ಟಿನ ಮಠಸ್ಥರಾದ ಆ ಮೂರ್ತಿಗಳಲ್ಲಿ ಸ್ಥಲ ಕೂಡಿ ಶಾಸ್ತ್ರಸಂಪಾದನೆಯಂ ಮಾಡಿಕೊಂಡ ಗಣವರರು ಈ ಬುಡಕಟ್ಟಿನ ಚರ ಮೂರ್ತಿಗಳಿಂದ ಚರಂತಿಗೆ ಪುಸ್ತಕವೆಂದರೆ, ಚನ್ನಬಸವ ಪುರಾಣ, ಬಸವ ಪುರಾಣ ಮುಂತಾದ ಶಿವಪುರಾಣಗಳನ್ನು ತಮ್ಮಿಂದ ಷಟ್‌ಸ್ಥಲ ಜ್ಞಾನೋಪದೇಶವಂ ಪಡೆದು ಷಟ್‌ಸ್ಥಲಾಶ್ರಮವಂ ಹೊಂದಿದ ತಮ್ಮಯ ಶಿಷ್ಯೋತ್ತಮನಿಗೆ ಭಕ್ತಗಣವರರ ಮಧ್ಯದಿ ಆ ಪುಸ್ತಕಗಳಂ ಕೊಟ್ಟು ತಮ್ಮ ಸ್ವಯಾಸನವಂ ಕೊಟ್ಟರೆ ಪುರಾಣ ಚರಂತಿಕೆ ಎಂತಲೂ ಪಳ್ಳೀಚರಂತಿಗೆ ಎಂತಲೂ ಈ ಎರಡು ನಾಮಗಳು ಬರುತ್ತವೆ." ಎಂದು ಹೇಳಲ್ಪಟ್ಟಿದೆ. (ನಿರಂಜನವಂಶ ರತ್ನಾಕರ ಪುಟ ೪೧) ಇದರ ಮೇಲಿಂದ ಈ ಪಳ್ಳೀ ಚರಂತಿಕೆಯವರು ಗ್ರಾಮಾಂತರಗಳಲ್ಲಿಯು ಜನರಿಗೆ ಶಿವಶರಣರ ಪುರಾಣಗಳನ್ನು ಹೇಳುತ್ತ ಧರ್ಮ, ನೀತಿಗಳನ್ನು ಬೋಧಿಸುತ್ತ ಧರ್ಮೋದ್ಧಾರ ಕಾರ್ಯಗಳನ್ನು ಮಾಡುವದು ಅವರ ಕರ್ತವ್ಯವಾಗಿತ್ತೆಂದು ತೋರುತ್ತದೆ. ಈ ವಿಧದ ಕಾರ್ಯಗಳನ್ನು ಮಾಡುತ್ತಿದ್ದದರಿಂದಲೇ ಈ ಕಾಲದಲ್ಲಿ ಅನೇಕ ಪುರಾಣಗಳು ಹುಟ್ಟಿದವು ಮತ್ತು ವೀರಶೈವ ವಾಙ್ಮಯದಲ್ಲಿ ಈ ಪೌರಾಣಿಕ ವಾಙ್ಮಯವು ಅಸ್ತಿತ್ವದಲ್ಲಿ ಬಂದಿತು.

## ಚರಮೂರ್ತಿಗಳ ಮಠಗಳು ಅಥವಾ ವಿರಕ್ತಮಠಗಳು

ಈ ವರ್ಗವಲ್ಲದೆ ಚರಮೂರ್ತಿಗಳ ವರ್ಗವೆಂದು ಇನ್ನೊಂದು ಮಹತ್ವದ ವರ್ಗವು ಈ ಕಾಲದಲ್ಲಿ ಕಲ್ಪಿಸಲ್ಪಟ್ಟಿತು. ಇವರ ಬಗ್ಗೆ ಇಟ್ಟ ನಿಯಮಗಳು ಮೇಲ್ಕಂಡ ಗ್ರಂಥದಲ್ಲಿ ಹೇಳಿದ್ದು ಏನೆಂದರೆಃ— "ಪ್ರಭು ಚನ್ನಬಸವರಾಜೇಂದ್ರರು . . . . ಸಿದ್ಧರಾಮೇಶಂಗೆ ನಿರೂಪಿಸಿದ ಗುಹೇಶ್ವರ ವಚನ, ಕರಣಹಸಿಗೆ, ಮಿಶ್ರಾರ್ಪಣ, ಸಿದ್ಧರಾಮೇಶ್ವರರ ಮಂತ್ರಗೋಪ್ಯ, ಅಕ್ಕಗಳ ಸೃಷ್ಟಿಯ ವಚನ, ಪ್ರಭುದೇವರ ಸೃಷ್ಟಿಯ ವಚನ, ಸಿದ್ಧೇಶ್ವರ ವಚನ, ಹಿರಿಯ ಮಂತ್ರ ಗೋಪ್ಯ, ಶೂನ್ಯಸಂಪಾದನೆಗಳನ್ನು ಸಂಗ್ರಹಿಸಿ . . . . ಶಿವಮಂತ್ರಗುರುಪ್ರಸಾದ ಅಂಗಲಿಂಗ ಸಾಮರಸ್ಯ ಮುಂತಾಗಿ ಅಂಗ ತತ್ವ ೨೫, ಲಿಂಗ ತತ್ವ ೧೧ ಕೂಡಿ ೩೬ ತತ್ವಂಗಳಂ ತಿಳಿದಾತನು . . . . ಆಶಿಷ್ಯೋತ್ತಮನಿಗೆ ಶಿವಾನುಭವ ಶಾಸ್ತ್ರವಂ ಶ್ರವಣಗೊಳಿಸಬೇಕು. ಆವೇಳೆಯಲಿ . . . . ಎರಡನೆಯವರು ಅಲ್ಲಿ ಇರಕೂಡದು. ಆ ಮೇಲೆ . . . . ಸಕಲಭಕ್ತಗಣದ ಸಾಕ್ಷಿಯಾಗಿ ಗೋತ್ರವಂ ಕೂಡಿಸಿಕೊಂಡು ಆ ಬಳಿಕ ಆ ಶಿಷ್ಯೋತ್ತಮನಲ್ಲಿ ಸಾಮರಸ್ಯವಂ ಮಾಡು

ವುದು ಈ ಪ್ರಕಾರ ಪಡೆದಾತನು ವಿರಕ್ತನಹನು" ಈ ಪ್ರಕಾರ ಹೇಳಿ ಮುಂದೆ ಇದರಲ್ಲಿ ಬರೆದುದು ಏನಂಪರೆ:— "ಈ ಶಿವಾನುಭವ ಚರ ಮೂರ್ತಿಯು ತಮ್ಮ ಶಿಷ್ಯರಾದ ಬ್ರಹ್ಮಚಾರಿಗಳಾದ ಮರಿಗಳು ಗುರು ಉಪದೇಶವಂ ಪಡೆದರೂ ಆ ಮರಿಗಳು ಕರಣಹಸಿಗೆ ಮುಂತಾದ ಶಿವಾನು ಭವ ಶಾಸ್ತ್ರದ ನುಡಿಕಟ್ಟುಗಳು ನೂರೊಂದು ಸ್ಥಲದ ವಿಚಾರಗಳು ಗುರುಗಳಿಂದ ಆ ಶಾಸ್ತ್ರವಂ ಸಂಪಾದನವ ಮಾಡಿಕೊಳ್ಳದವರಿಗೆ ಆ ಶಾಸ್ತ್ರದ ನುಡಿಗಳಂ ಹೇಳಕೂಡದು. ಈ ಐದು ಶಾಸ್ತ್ರ ಬಾರದೆ ನಿರ ಕ್ಷರಿಗಳಿಗೆ **ಶಿವಾನುಭವ ಚರಂತಿಗೆ** ಯಂ ಕೊಡಕೂಡದು. ಅಥವಾ ಅವರಿಗೆ ಕೊಡಬೇಕಾದರೆ ಪುರಾಣ ಚರಂತಿಗೆ ಪೂಜ್ಯದ ಪೂರ್ತಿಕೊಡು ವುದು' ಈ ಪ್ರಕಾರ ಇಲ್ಲಿ ವಿರಕ್ತಾಶ್ರಮಿಗಳ ಕಟ್ಟುಗಳು ಹೇಳಲ್ಪಟ್ಟಿವೆ. ಇವುಗಳ ಪ್ರಕಾರ ವಿರಕ್ತರು ಷಟ್‌ಸ್ಥಲ ಶಾಸ್ತ್ರದ ಮರ್ಮವನ್ನು ಗುರು ಗಳಿಂದ ತಿಳಿದುಕೊಳ್ಳಬೇಕು ಅವುಗಳಂತೆ ಆಚರಿಸಬೇಕು. ಮತ್ತು ಹೀಗೆ ಶ್ರೇಷ್ಠವಾದ ನಡೆಯುಳ್ಳವರಾಗಿ ಗ್ರಾಮಾಂತರಗಳಲ್ಲಿ ವಾಸಿಸುವ ಜನರಲ್ಲಿ ಉಚ್ಚತರದ ಧಾರ್ಮಿಕ ಭಾವನೆಯನ್ನು ಬೀರುತ್ತ ಇರಬೇಕು. ಇದೇ ಇವರ ಮುಖ್ಯ ಕರ್ತವ್ಯವಾಗಿದೆ.

## ಧರ್ಮಜಾಗ್ರತಿಯ ಕಾರ್ಯಗಳು.

ತೋಂಟದಾರ್ಯರು ಈ ಎರಡು ವರ್ಗಗಳನ್ನು ಕಲ್ಪಿಸಿ ಅವರು ದೇಶದಲ್ಲಿ ಧರ್ಮಜಾಗ್ರತೆಯನ್ನು ಮಾಡಿದರು. ಈ ಕಾರ್ಯಗಳು ಬಹು ಮಹತ್ವದವಾಗಿವೆ. ಇವುಗಳು ನಿರೂಪಿಸಲ್ಪಟ್ಟಿದ್ದು ಏನಂದರೆ:— "ಆ ಗಣವರರಿಗೆ ನಿರೂಪಿಸಿ ಆಶೀರ್ವಾದವಂ ಮಾಡಿ ಅಪ್ಪಣೆಯಂ ಕೊಟ್ಟು ದೇಶಾಟಣಕ್ಕೆ ಕಳುಹಿದರು. ಅನಂತರ ಆ ಚರವವರು ದೇಶಾಂತರವಂ ಮಾಡುತ್ತ ಗ್ರಾಮ, ಪೇಟೆ ಮನೆಗೆ ದಯಮಾಡಿಸಿ ಅಲ್ಲಿಯ ಭಕ್ತ ಗಣಂಗಳಿಗೆ ಷಟ್‌ಸ್ಥಲಜ್ಞಾನೋಪದೇಶವಂ ಮಾಡುತ್ತ ಅನ್ಯ ಮತಸ್ಥ ರಾದ ಪರವಾದಿಗಳಂ ಮಹತ್ವದಿಂ ಶಾಸ್ತ್ರ ಮುಖದಿಂ ಗೆಲಿವುತ್ತ ಶಿವ ಭಕ್ತಿಯನುಂಟುಮಾಡುತ್ತ ಆ ಭಕ್ತರ ಭಕ್ತಿಯಿಂ ದೇಶಮಧ್ಯದಿ ತಮ್ಮ ಮಠ ಮಾನ್ಯ ಕಾಣಿಕೆ ವರ್ಷಾಶನಗಳಂ ಪಡೆದು ಆ ಮಠಗಳಲ್ಲಿ ತಮ್ಮ ಸೂತ್ರಿಕರಾದ ಮರಿಗಳಂ ಇಡುತ್ತ ದೇಶಂಗಳಲ್ಲಿ ಭಕ್ತರಿಂ ಕಾಣಿಕೆಯಂ ಎತ್ತಿ ತಮ್ಮಯ ಗುರುಸನ್ನಿಧಿಗೆ ವಾಣಿಜ್ಯಪುರದ ಶೂನ್ಯಸಿಂಹಾಸನಕ್ಕೆ ಕಾರಣಕರ್ತರಾದ ತೋಂಟದಾರ್ಯ ಸ್ವಾಮಿಗಳವರ ದಾಸೋಹಕ್ಕೆ

ಕಳುಹಿಸುತ್ತಲಿದ್ದರು" ಎಂದು ಹೇಳಲ್ಪಟ್ಟಿದೆ. ಇದರಲ್ಲಿ ನಿಜಾಂಶವಿರುತ್ತದೆಂದು ನಮಗೆ ತೋರುತ್ತದೆ.

ಇದರಿಂದ ತೋಂಟದಾರ್ಯರು ವೀರಶೈವ ಸಮಾಜದಲ್ಲಿ ಹೇಗೆ ಒಂದು ಮಹತ್ತರವಾದ ಕ್ರಾಂತಿಯನ್ನುಂಟು ಮಾಡಿದರೆಂಬುದು ವ್ಯಕ್ತವಾಗುತ್ತದೆ. ಇವರ ಪ್ರಯತ್ನಗಳ ಮೂಲಕ ಆಗ ಗ್ರಾಮ, ಪಟ್ಟಣ, ಪ್ರಾಂತಗಳಲ್ಲೆಲ್ಲ ವೀರಶೈವ ಧರ್ಮವು ಬಲಪಟ್ಟಿತು. ತೋಂಟದಾರ್ಯರು ಮೊದಲು ವಚನಗ್ರಂಥಗಳನ್ನು ಸರಿಪಡಿಸಿದರು. ಸ್ವತಃ ವಚನಕಾರರಾದರು. ವಿದ್ವಾಂಸರನ್ನು ತಮ್ಮಲ್ಲಿ ಬರಮಾಡಿಕೊಂಡರು. ದೇಶಪರ್ಯಟಣ ಮಾಡಿದರು. ಜನಾಂಗದ ಸ್ಥಿತಿಯನ್ನು ಚನ್ನಾಗಿ ತಿಳಿದರು. ಸಮಾಜಕ್ಕೋಸ್ಕರ ಒಂದು ಕಟ್ಟನ್ನು ಮಾಡಿದರು. ಇದರ ಮೂಲಕ ಸಮಾಜದ ಶಿಥಿಲತೆಯನ್ನು ದೂರ ಮಾಡಿದರು. ಇದಕ್ಕೋಸ್ಕರ ಹೊಸ ಬಗೆಯ ಮಠಗಳನ್ನು ಸ್ಥಾಪಿಸಿದರು. ಈ ವ್ಯವಸ್ಥೆಯನ್ನು ಬರೇ ವಿಜಯನಗರದ ರಾಜ್ಯದಲ್ಲಷ್ಟೇ ಅಲ್ಲ, ಮುಸಲ್ಮಾನರ ಆಳಿಕೆಗೆ ಒಳಪಟ್ಟ ಉತ್ತರ ದೇಶದಲ್ಲಿಯೂ ಕೂಡ ಮಾಡಿದರು. ಆದುದರಿಂದಲೇ ಪರಧರ್ಮೀಯರ ಧಾರ್ಮಿಕ ಉಪಟಳಗಳು ದೇಶದಲ್ಲಿ ಏನೂ ನಡೆಯುವ ಹಿಂದೂ ಧರ್ಮವು ಇಲ್ಲಿ ಸ್ಥಿರತರವಾಗಿ ಉಳಿಯಲು ಕಾರಣವಾಯಿತು.

## ವಚನಶಾಸ್ತ್ರವನ್ನು ಗುಪ್ತವಾಗಿಟ್ಟುದುದು.

ತೋಂಟದಾರ್ಯರು ಮಾಡಿದ ಅನೇಕ ಕಟ್ಟುಗಳಲ್ಲಿ ವಚನಶಾಸ್ತ್ರದ ಮರ್ಮಗಳನ್ನು ಗುಪ್ತವಾಗಿ ಇಡಬೇಕೆಂದು ಅವರು ಮಾಡಿದ ನಿರ್ಬಂಧವು ಮಾತ್ರ ಯೋಗ್ಯವಾಯಿತೆಂದು ನಾವು ಅನ್ನಲಾರೆವು. ಅವರು ಕರಣಹಸಿಗೆ, ೩೬ ತತ್ವಗಳು, ಆಯಾ ಸ್ಥಲಗಳ ಪರಸ್ಪರ ಸಂಬಂಧ ನೂರೊಂದು ಸ್ಥಲಗಳ ಜ್ಞಾನ ಇವುಗಳ ನುಡಿಕಟ್ಟುಗಳನ್ನು ಬಹಿರಂಗಗೊಳಿಸಬಾರದೆಂದು ಅವರು ಗೊತ್ತುಪಡಿಸಿದರು. ಈ ವೃತ್ತಿಯು ಮಠಾಧಿಕಾರಿಗಳಲ್ಲಿ ಈಗಲೂ ನಡೆಯುತ್ತ ಬಂದಿದೆ. ನಾವು ವಚನ ಗ್ರಂಥಗಳನ್ನು ಸಂಶೋಧಿಸುವ ಕಾರ್ಯದಲ್ಲಿ ಮತ್ತು ಅವುಗಳ ಸಂಬಂಧವಾಗಿ ನಾವು ಕೇಳಿದ ಶಂಕೆಗಳಿಗೆ ಉತ್ತರ ಕೊಡುವಲ್ಲಿ ಉಪದೇಶಹೊಂದಿದ ಮಠಾಧಿಕಾರಿಗಳಿಂದ ಆವ ವಿವರಣೆಗಳೂ ನಮಗೆ ದೊರೆತಿಲ್ಲ, ಈಗಲೂ ದೊರೆಯುವದಿಲ್ಲ. ಆದರೆ ಈಚೆಗೆ ವಚನ ಶಾಸ್ತ್ರದ ಅರಿವು ಜನರಲ್ಲಿ

ಹೆಚ್ಚಿದ ಹಾಗೆ ಮತ್ತು ಅವುಗಳ ಪ್ರಶಂಸೆಯು ದೇಶದಲ್ಲಿ ನಡೆದ ಹಾಗೆ ಈ ಬಗೆಯಾಗಿ ಮುಚ್ಚುಮರೆ ಮಾಡುವ ವೃತ್ತಿಯು ಈಗ ಕ್ರಮೇಣ ಕಡಿಮೆಯಾಗಹತ್ತಿದೆ. ಆದರೆ ಬಸವೇಶ್ವರರ ಕಾಲದಲ್ಲಿ ಷಟ್‌ಸ್ಥಲ ಶಾಸ್ತ್ರವನ್ನು ಗುಪ್ತವಾಗಿ ಇಡುವ ಪದ್ಧತಿಯು ಇದ್ದಿಲ್ಲವೆಂದು ನಮಗೆ ತೋರುತ್ತದೆ.

## ಕಗ್ಗೆರೆಯಲ್ಲಿ ವಾಸ.

ತೋಂಟದಾರ್ಯರು ಬಹುಕಾಲ ಕಗ್ಗೆರೆ ಎಂಬ ಗ್ರಾಮದಲ್ಲಿದ್ದು ಕೊಂಡು ಅಲ್ಲಿಯ ನಿಂಬೆಣ್ಣಶೆಟ್ಟಿಯ ಆದರಾತಿಥ್ಯದಲ್ಲಿ ಕಾಲಕಳೆದ ರೆಂದು ತಿಳಿಯುತ್ತದೆ. ಅಲ್ಲಿ ಅವರು ಒಂದು ತೋಟದಲ್ಲಿಯೇ ತಮ್ಮ ವಾಸ ವನ್ನು ಕಲ್ಪಿಸಿಕೊಂಡರು. ಅವರು ಅಲ್ಲಿ ಇರುವ ಕಾಲಕ್ಕೆ ರತ್ನಗಿರಿಯ ಬೇಡರರಸು ಗ್ರಾಮದಲ್ಲಿ ಸುಲಿಗೆಯನ್ನು ಮಾಡಲು ಭಯದಿಂದ ಜನರು ಊರಬಿಟ್ಟು ಓಡಿಹೋದರು. ಆದರೆ ತೋಂಟದಾರ್ಯರು ಆ ಸ್ಥಾನ ವನ್ನು ಬಿಟ್ಟು ತೆರಳದೆ ತೋಟದಲ್ಲಿಯೇ ತಮ್ಮ ಶಿವಯೋಗ ಸಮಾ ಧಿಯಲ್ಲಿ ಉಳಿದರು. ಅವರು ಹೀಗೆ ತೋಟದಲ್ಲಿ ಬಹುದಿವಸ ಉಳಿದ ದ್ದರಿಂದ ಅವರಿಗೆ ತೋಂಟದಾರ್ಯರೆಂಬ ಹೆಸರು ಬಿದ್ದಿರಬಹುದು. ಮುಂದೆ ದಂಡಿನ ಹಾವಳಿಯ ಭೀತಿಯು ತಗ್ಗಿದ್ದರಿಂದ ಜನರು ತಮ್ಮ ಗೃಹಗಳಿಗೆ ಬಂದು ಇರಹತ್ತಿದರು. ಆದರೆ ಸ್ವಾಮಿಗಳು ಬಹುದಿನ ಸಮಾಧಿಸ್ಥರಾದ್ದರಿಂದ ಅವರ ಮೇಲೆ ಹುತ್ತ ಬೆಳೆದು ಜನರಿಗೆ ಕಾಣ ದಂತಾಗಿದ್ದರು. ಮುಂದೆ ಆ ಸ್ಥಳದಲ್ಲಿ ಒಂದು ಗೋವು ದಿನಾಲು ಹಾಲು ಕರೆಯುತ್ತಿರುವದನ್ನು ಜನರು ನೋಡಿ, ಅದೊಂದು ಮಹತ್ವದ ಸ್ಥಳವಿರಬಹುದೆಂದು ಎಣಿಸಿ ಆ ಹುತ್ತನ್ನು ಅಗಿದು ನೋಡಲಾಗಿ ಒಳಗೆ ತೋಂಟದಾರ್ಯರು ಸಮಾಧಿಯಲ್ಲಿರುವದನ್ನು ಕಂಡು ವಿಸ್ಮಯಬಟ್ಟು ಅವರನ್ನು ಅತ್ಯಂತವಾಗಿ ಮನ್ನಿಸಿ ಸತ್ಕರಿಸಿದರು. ಹೀಗೆ ತೋಂಟ ದಾರ್ಯರ ವಿಷಯದಲ್ಲಿ ಬಹು ಪ್ರಚುರವಾದ ಆಖ್ಯಾಯಿಕೆಯು ಇದೆ.

## ಐಕ್ಯ.

ಮುಂದೆ ಸ್ವಾಮಿಗಳು ಆ ಸ್ಥಳದಿಂದ ತೆರಳಿ ದೇಶಾಟಣ ಮಾಡುತ್ತ ಎಡೆಯೂರು ಎಂಬ ಗ್ರಾಮಕ್ಕೆ ಬಂದರು. ಅಲ್ಲಿ ಅವರು ಒಂದು ಮಠ

ವನ್ನು ಕಟ್ಟಿಸಿ ಒಂದು ಯೋಗಸಮಾಧಿಯನ್ನು ರಚಿಸಿ ಅಲ್ಲಿಯೇ ಬಯಲಾದರು. ಅವರು ಹೀಗೆ ಬಯಲಾದ ಸ್ಥಳವು ಈಗ್ಗೆಯೂ ಆ ಊರಲ್ಲಿದೆ. ಅಲ್ಲಿ ಈಗಲೂ ಪೂಜಾರಥೋತ್ಸವಗಳು ಪ್ರತಿವರುಷ ನಡೆಯುತ್ತಲಿವೆ.

ಹೀಗೆ ತೋಂಟದಾರ್ಯರ ಉಜ್ವಲ ಚರಿತ್ರೆಯು ಇದೆ. ಇದರಿಂದ ಅವರು ವೀರಶೈವ ಸಮಾಜಕ್ಕೆ ಎಂಥ ಮಹೋಪಕಾರ ಮಾಡಿರುವರೆಂಬದು ವಾಚಕರಿಗೆ ತಿಳಿಯದೆ ಇರಲಾರದು. ಅವರನ್ನು ಮಹಾಧಾರ್ಮಿಕ ಪುರುಷರಾದ ದಾಸಿಮಾರ್ಯ, ಬಸವೇಶ್ವರ, ರೇವಣಸಿದ್ಧ, ಪ್ರಭುದೇವ ಈ ಮಹಾಮಹಿಮರ ಮಾಲಿಕೆಯಲ್ಲಿ ನಾವು ನಿಶ್ಚಯವಾಗಿ ಸೇರಿಸಬಹುದು.

# ಶ್ರೀ ನಿಡುಮಾಮಿಡಿ ಮಠದ ಇತಿಹಾಸ.

ಲೇಖಾಂಕ ೫.

(ಲೇಖಕ:- ಎಂ. ಜಿ ನಂಜುಂಡಾರಾಧ್ಯ 'ವಿಶಾರದ' ಸಿದ್ಧಗಂಗಾ ಗುರುಕುಲಾಶ್ರಮ.)

ನಮ್ಮ ಹಿಂದಿನ ವಿವೇಚನೆಯಿಂದ ಶ್ರೀ ನಿಡುಮಾಮಿಡಿ ಮಠದ ಕೆಲವು ವಿಚಾರಗಳು ವಾಚಕರಿಗೆ ಅರಿಕೆಯಾಗಿರಬಹುದು. ಅದರಲ್ಲಿ ಆದಷ್ಟೂ ಚಾರಿತ್ರಕ ದೃಷ್ಟಿಯಿಂದ ವಿವೇಚಿಸಿದ ಶೋಧನಾತ್ಮಕ ವಿಚಾರಗಳು ಪ್ರಕಟವಾಗಿವೆ. ಈ ಮಠದ ಚರಿತ್ರೆಯನ್ನು ಪುಲ್ಲ ಕವಿಯ 'ಪಂಡಿತಾರಾಧ್ಯಚರಿತ್ರೆ' ಯಿಂದ ಮಾತ್ರವೇ ನಿರ್ಣಯಿಸಲು ಸಾಧ್ಯ ವಿಲ್ಲವೆಂತಲೂ, ಈ ಮಠದ ಚರಿತ್ರೆಯನ್ನು ಬರೆದವರಲ್ಲಿ ಆತನೇ ಮೊದ ಲಿಗನೆಂದೂ, ಆತನ ಅನುಕರಣವನ್ನೇ 'ಇಡಗೂರು ರುದ್ರಕವಿ' ಮತ್ತು 'ಅಪ್ಪಪ್ಪ' ಇವರು ಅನುಸರಿಸಿರುವರೆಂದೂ ಮತ್ತು ಪುಲ್ಲ ಕವಿಯು ಈ ಚರಿತ್ರೆಯ ಪ್ರಾರಂಭದಲ್ಲಿ ಕೊಟ್ಟಿರುವ ಪೀಠಿಕಾ ಪ್ರಕರಣವು ಕೇವಲ ಇತರ ಪುರಾಣಗಳಂತೆ ಪೌರಾಣಿಕವಲ್ಲದೆ ಅದರಲ್ಲಿ ಚಾರಿತ್ರಕ ದೃಷ್ಟಿಯು ಕಾಣುವದಿಲ್ಲವೆಂದೂ ಹೇಳಲಾಗಿದೆ. ಶ್ರೀ ವಿರೂಪಾಕ್ಷ ದೇಶಿಕರಿಂದ ಈ ಪೀಠದಲ್ಲಿ ಮಂಡಿಸಿದ ಮೂರ್ತಿಗಳ ಕಾಲದಲ್ಲಿ ನಡೆಯಿಸಿದ ಮಹತ್ಕಾ ರ್ಯಗಳು ಬಹಳವಾಗಿ ಚಾರಿತ್ರಕವೇ ಆಗಿದ್ದರೂ ಅದರಲ್ಲೂ ಅನೇಕ ಮೂರ್ತಿಗಳ ಚರಿತ್ರೆಗಳು ಬಿಟ್ಟು ಹೋಗಿವೆಯೆಂಬುದನ್ನೂ ಹೇಳಲಾ ಗಿದೆ. ಈತನು ಬ್ರಾಹ್ಮಣ ಕವಿ. ಆದರೂ ಈ ಚರಿತ್ರೆಯ ಸಂಗ್ರಹದ ಬಗ್ಗೆ ಮಾಡಿರುವ ಸಾಹಸ ಪ್ರಯತ್ನಗಳು ಸ್ತುತ್ಯವಾದುವಾಗಿವೆ. ಮತ್ತು ಈ ಚರಿತ್ರೆಯು ಹಿಂದೆ ಗದ್ಯರೂಪವಾಗಿದ್ದು ಅದನ್ನು ತಾನು ಪದ್ಯ ಕಾವ್ಯವಾಗಿ ಬರೆದಂತೆಯೂ ಕವಿಯು ಹೇಳುತ್ತಾನೆ.

ನಮ್ಮ ಹಿಂದಿನ ವಿವೇಚನೆಯಲ್ಲಿ ತಾಮ್ರಶಾಸನ, ಶ್ರೀಶೈಲಕ್ಷೇತ್ರದ ಇತಿಹಾಸ, ಶಿವಶರಣವಿಲಾಸ ಇತ್ಯಾದಿಗಳಿಂದ ಈ ಪೀಠವು 'ಧೇನು ಕರ್ಣ ಅಥವಾ ಗೋಕರ್ಣ ಇಲ್ಲವೆ ಪಂಡಿತಾರಾಧ್ಯ' ಇವರಿಂದ ಸ್ಥಾಪಿತ ವಾಗಿರಬೇಕು. ಅನಂತರ ವಿರೂಪಾಕ್ಷದೇಶಿಕ, ಚಂದ್ರಗುಂಡದೇಶಿಕ ಹೀಗೆ ನಡೆದಿರಬೇಕೆಂದು ಊಹಿಸಲಾಗಿದೆ. ಇದಕ್ಕೆ ಸರಿಯಾಗಿ ಶಿವ

ಶರಣವಿಲಾಸದಲ್ಲಿನ ಅವತರಣವು ಸರಿಯಾದ ಪ್ರಮಾಣವಾಗಿದೆಯೆನ್ನ ಬಹುದು. ಅದರಲ್ಲಿ ಕ್ರಮವಾಗಿ:—

"ಪಂಡಿತಾರಾಧ್ಯರೆನುತಿರ್ಪರ[೧]
ಕಂಡು ತದ್ದೀಕ್ಷೋಪದೇಶವ
ಗೊಂಡು . . . . . . ತದ್ಗುರು
ಕರಪಯೋರುಹ ಸಂಭವ ವಿರೂಪಾಕ್ಷದೇಶಿಕನ॥
ಪರಮಶಿಷ್ಯಾಗ್ರಣಿಯೆನ್ನಿಸಿ
ಮೆರೆಯುತಿಹ ಶಶಿಗುಂಡದೇಶಿಕ"

ಅವರ ಶಿಷ್ಯನೇ ದೇವರದಾಸಿಮಾರ್ಯನು ಎಂದು ಸ್ಪಷ್ಟವಾದ ಉಲ್ಲೇಖವಿದೆ. ಆದರೆ ಪುಲ್ಲಕವಿಯು ವಿರೂಪಾಕ್ಷದೇಶಿಕರೇ ಶ್ರೀ ಪಂಡಿತಾರಾಧ್ಯ ಸೂರ್ಯಸಿಂಹಾಸನವನ್ನು ಸ್ಥಾಪಿಸಿದರೆಂದು ಅಭಿಪ್ರಾಯ ಪಡುತ್ತಾನೆ. ವಿರೂಪಾಕ್ಷದೇಶಿಕರೂ ಗೋಕರ್ಣ ಶಿವಾಚಾರ್ಯರೂ ಒಬ್ಬರೇ ಇರಬಹುದೇ (?)

ಪುಲ್ಲಕವಿಯು, ತನ್ನ ಗ್ರಂಥಾದಿಯಲ್ಲಿ 'ವೀರಭದ್ರ, ಭದ್ರಕಾಳಿ, ಶಿವ, ವಿಷ್ಣು, ಲಕ್ಷ್ಮಿ, ವಾಣೀ, ಸುಬ್ರಂಹಣ್ಯ, ಗಣಪತಿ ಮುಂತಾದವರನ್ನು ಸ್ತುತಿಸಿ ಅನಂತರ ತನ್ನ ವಂಶಾನುಕ್ರಮವನ್ನು ಈ ರೀತಿ ಕೊಟ್ಟಿರುತ್ತಾನೆ.

ಸೀ॥ ಅವನಿಯೂರ್ಪೇಲಾನ್ವಯಂಬು ಭಾರದ್ವಾಜಗೋತ್ರ ಮಾಪ
ಸ್ತಂಭ ಸೂತ್ರಘನುಡು। ಸೂರನಾಮಾತ್ಯುನಿ ಸೂನುಂಡು
ಪುಲ್ಲಯ ಗ್ರಂಥ ಸಂಪೂರ್ತಿಗಾವಿಂಚುಟಕುನು। ಕೃತಿವೀರ
ಭದ್ರುನಕತಿಮೋದಮೊಪ್ಪಗಾನರ್ಪಣಂಬೊನರಿಂಚ ಸುಂಚು
ದಲಚಿ। ಆಂಧ್ರ ಸಂಸ್ಕೃತ ಭಾಷಲಿತುಲಿತಂಬುಗಜೇರ್ಚಿ
ಕಬ್ಬಂಬು ಚೆಪ್ಪೆದ ಕವುಲು ಮೆಚ್ಚ।

ಗೀ॥ ನವರಸಂಬುಲ ಸುಧಾಲೊಲ್ಕಿ ನವ್ಯ ವ್ಯೈನ
ಶಬ್ದಮುಲ ಚೇತನಾನಂದ ಸರಣಿಗಾಗ
ದಿವ್ಯ ಲಕ್ಷಣ ಲಕ್ಷ್ಯ ಮುತ್‌ಕೇಟ ಪಡಗ
ಪ್ರಾಕಟಂಬುಗ ಪದ್ಯ ಮುಲ್‌ಪ್ರಚುರ ಪರಕು॥

[೧] ಕಳೆದ ಸಂಚಿಕೆ ೫ ರಲ್ಲಿ ಈ ಪಙ್ತಿಯು ಬಿಟ್ಟು ಹೋಗಿದೆ.

ಭಾರದ್ವಾಜಗೋತ್ರ, ಅಪಸ್ತಂಭಸೂತ್ರಕ್ಕೆ ಸೇರಿದ ಸೂರ ನಾಮಾತ್ಯನ ಸುತನಾದ ಪುಲ್ಲಯ್ಯನು ಗ್ರಂಥಪರಿಸಮಾಪ್ತಿಯಾಗಿ ವೀರಭದ್ರ ದೇವರಿಗೆ ತನ್ನ ಕೃತಿಯನ್ನರ್ಪಿಸಲೆಳಸಿ ಆಂಧ್ರ ಸಂಸ್ಕೃತ ಮಿಶ್ರಿತವೂ ನವರಸಭರಿತವೂ ಆದ ತನ್ನ ಪ್ರಬಂಧವನ್ನು ಕವಿಗಳು ಮೆಚ್ಚುವ ರೀತಿಯಲ್ಲಿ ಬರೆಯುವುದಾಗಿ ಪ್ರತಿಜ್ಞೆಮಾಡುತ್ತಾನೆ.

ಈತನು ತನ್ನ ಕೃತಿಗೆ ಕಾರಣವನ್ನೂ ಈ ರೀತಿ ಹೇಳುತ್ತಾನೆ.

"ವ॥ ಈ ವಿಧಂಬುನನಭೀಷ್ಟ ದೇವತಾಸ್ತುತಿ ಪ್ರಾರಂಭಂಬುನು ಸರಸವಿದ್ಯಾ ವಿಜೃಂಭಮಾಣ ಗಂಭೀರ ಕವೀಂದ್ರ ಬೃಂದಂಬುನಕು ವಂದನಂಬುನುಗಾವಿಂಚಿಯೇನೊಕ್ಕ ಕೃತಿಶೇಯನುದ್ಯೋಗಿಂಚಿನವಾಡನೈ,

ಗೀ॥ ಯುನ್ನಸಮಯಂಬುನಂದೊಕ ರಾತ್ರಿಯಂದು
ಸ್ವಪ್ನ ಮುನವೀರಭದ್ರುಂಡು ಚಕ್ಕನಿಲಚಿ।
ಪಂಡಿತಾರಾಧ್ಯಚರಿತಂಬು ಪ್ರಥಿತಮುಗನು
ಪದ್ಯಕಾವ್ಯಂಬು ಕೃತಿಶೇಯು ಪಾಪರಹಿತ॥

ವ॥ ಅನಿಚೆಪ್ಪಿಯಮ್ಮಹಾದೇವುಂಡು ತಿರೋಹಿ ಕುಂಡಯ್ಯ ತದನಂತರಂಬುನಾ॥"

ಅಂದರೆ, ಕವಿಯು ಇಷ್ಟದೇವತಾಸ್ತುತಿಕವಿಸ್ತುತಿಯನ್ನು ಮಾಡಿ ಯಾವುದಾದರೊಂದು ಕೃತಿಯನ್ನು ಮಾಡಲೆಳಸಿರಲು ಆರಾತ್ರಿ ಸ್ವಪ್ನದಲ್ಲಿ ಶ್ರೀ ವೀರಭದ್ರನು ಪ್ರತ್ಯಕ್ಷವಾಗಿ 'ಪಂಡಿತಾರಾಧ್ಯ ಚರಿತ್ರೆ' ಯನ್ನಿ ಪದ್ಯ ಕಾವ್ಯದಲ್ಲಿ ರಚಿಸೆಂದು ಹೇಳಿ ತಿರೋಹಿತನಾದನು.

ಕವಿಸ್ತುತಿಯಲ್ಲಿ,

ಮ॥ ಘನವಾಲ್ಮೀಕಿನಿಗೊಲ್ಚಿ ವ್ಯಾಸುಲಿಕುವೇಟ್ಕಿರ್ಮ್ರೊಕ್ಕಿ ಶ್ರೀ ಕಾಳಿದಾ। ಸುನಿ ದಂಡಿನ್ಭವಭೂತಿನೆಂಚಿ ಜಗತಿರ್ ಶೋಭಿಲ್ಲಗಾ ಭಾರತಂ। ಬುನುತೆನ್ಗಿಂಚಿನ ಸತ್ಕವಿತ್ರಯಮುಭೂರಿ ಪ್ರೌಢಿ ಕೀರ್ತಿಂಚಿಯಾ। ಧುನಿಕ ಪ್ರಾಜ್ಞಕವೀಂದ್ರುಲರ್ದಲತು ಮುದ್ಬುದ್ಧಿನ್ವಚಸ್ಸಿದ್ಧಿಕೈ॥

ಎಂದು ವಾಲ್ಮೀಕಿ, ವ್ಯಾಸ, ಕಾಳಿದಾಸ, ದಂಡಿ, ಭವಭೂತಿ ಭಾರತವನ್ನು ಆಂಧ್ರೀಕರಿಸಿದ ಅನ್ನಮಾಮಾತ್ಯನೇ ಮೊದಲಾದ ಕವಿತ್ರಯ ಅಲ್ಲದೆ ನೂತನ ಪ್ರಾಜ್ಞಕವಿಗಳನ್ನೂ ಸ್ತುತಿಸಿದ್ದಾನೆ.

ಇಡಗೂರು 'ರುದ್ರಕವಿ' ಯು ತನ್ನ 'ವಿರೂಪಾಕ್ಷಮಾಹತ್ಮ್ಯ'[೧] ದ ಆದಿಯಲ್ಲಿ

ಸೀ॥ ರಮಣೀಯ ವೃಷಭ ಪುರಾಣಂಬು ಜೆಪ್ಪಿನ ಸೋಮನಾರಾಧ್ಯುಲಿ ಸ್ತುತಿಯೊಸ್ಗಿ। ಅಲಗಿರಿಜಾ ವಿವಾಹಂಬು ನಿರ್ಮಿಂಚಿನ ಹರಿಹರ ದೇವುನಿಯಭಿನುತಿಂಚಿ। ಕರಮರ್ಥಿ ರಾಜಶೇಖರಮುರಚಿಂಚಿನ ಸರಸಷಡಕ್ಷರ ಸ್ವಾಮಿನೆಂಚಿ। ವೇದಾಂತಮುಲನೆಲ್ಲಿ ವಿವರಿಂಚಿ ದೆಲ್ಪಿನ ನಿಜಗುಣಾಯ್ಯರ್ಲಚಲನಿಸ್ಮ್ರಲಚಿ। . . . . . ॥

ಎಂದು ಸೋಮನಾರಾಧ್ಯ, ಹರಿಹರ, ಷಡಕ್ಷರಿ ಮತ್ತು ನಿಜಗುಣಾರಾಧ್ಯರನ್ನು ಸ್ತುತಿಸಿರುತ್ತಾನೆ.

## ಕವಿಕಾಲ ವಿಚಾರ.

ಪುಲ್ಲಕವಿಯ ಮೇಲಣ ಶ್ಲೋಕಗಳಿಂದ ಈತನು ಸ್ಮಾರ್ತಬ್ರಾಹ್ಮಣನಿದ್ದಿರಬೇಕೆಂದು ಸ್ಪಷ್ಟವಾಗುತ್ತದೆ. ಈತನು ಆಂಧ್ರದಲ್ಲಿ ಪ್ರಸಿದ್ಧ ಕವಿಯಾಗಿದ್ದು ಅನೇಕ ಗ್ರಂಥಕತೃವಾಗಿಯೂ ಇದ್ದಂತೆ ತಿಳಿದುಬರುತ್ತದೆ. ಈತನ ಕಾವ್ಯಶೈಲಿಯು ಬಹಳ ಗಂಭೀರವಾಗಿಯೂ ವಿದ್ವತ್ತಾಪೂರ್ಣವಾಗಿಯೂ ಇರುವುದರಿಂದ ಸಂಸ್ಕೃತದಲ್ಲಿಯೂ ಆತನಿಗೆ ಸರಿಯಾದ ಜ್ಞಾನವಿದ್ದಂತೆ ತಿಳಿದುಬರುತ್ತದೆ.

ಈತನು ತನ್ನ ಗ್ರಂಥದ ಆದಿಯಲ್ಲಿ ಶ್ರೀ ವಿರೂಪಾಕ್ಷದೇಶಿಕೇಂದ್ರರ ಉದ್ಭವದ ಬಗ್ಗೆ ಕೊಟ್ಟಿರುವ ಪೀಠಿಕೆಯಲ್ಲಿ ನಾರದನ ಮುಖಾಂತರ ಹೇಳಿಸಿರುವ,

"ವ॥ ಕಲ್ಯಾಣ ಪಟ್ಟಣಂಬುನ ನೆಂತಕಾಲಂಬುನ ಬಸವೇಶ್ವರುಂಡು ಮಹಾಪ್ರಭಾವವಿಭಾಸಮಾನುಂಡೈ ಅಖಂಡ ಮಹಿಮಾತಿಶಯಂಬುನ ಸಾಂಮ್ರಾಜ್ಯ ವೈಭವಂಬುನನೇಲು ಚುಂಡೆನಂತ ವಟ್ಟು ತದಧಿಷ್ಠಿತಂಬೈ ವೀರಶೈವಂಬು ಪ್ರಸಿದ್ಧಂಬೈಯುಂದೆನತಂಡು ಸಪರಿವಾರುಂಡೈ ಮರಲಿ ಕೈಲಾಸಂಬುನಕು ವಚ್ಚಿನ

---

೧ ಈತನು ಈ ಪಂಡಿತಾರಾಧ್ಯ ಚರಿತ್ರೆಯನ್ನೆ 'ವಿರೂಪಾಕ್ಷಮಾಹತ್ಮ್ಯ' ವೆಂದು ಕರೆದಿದ್ದಾನೆ.

ನಾಟನುಂಡಿಯುನು, ತದುಚಾರ ವ್ಯವಹಾರಂಬುಲು ಜೂಡಂ
ಬಡವುಗಾವುನ. ”

ಎಂಬ ಈ ವಾಕ್ಯದಿಂದ ಪುಲ್ಲಕವಿಯು ೧೨ ನೇ ಶತಮಾನದಿಂದಿ ತ್ತೀಚಿನವನೆಂಬುದು ಸ್ಪಷ್ಟವಾಗಿಯೇ ಇದೆ. ಆದರೂ ಪಂಡಿತಾರಾಧ್ಯ ಚರಿತ್ರೆಯು ಐದನೆಯ ಉಚ್ಛ್ವಾಸದ ಕೆಲವು ಭಾಗದ ವರೆಗೆ ಮಾತ್ರ ಬರೆದು ಅಪೂರ್ಣವಾಗಿಯೇ ಬಿಟ್ಟಿರುವುದರಿಂದಲೂ ಮತ್ತು ಪೆನುಗೊಂಡೆಯ ಕೃಷ್ಣರಾಯ ಅಚ್ಯುತರಾಯ ಇವರ ಹೆಸರನ್ನೆತ್ತಿರುವುದರಿಂದಲೂ ಈತನು ೧೫ ನೆಯ ಶತಾಬ್ದಿಯಿಂದೀಚಿನವನೆಂದು ಹೇಳಬಹುದಾಗಿದೆ.

‘ವಿರೂಪಾಕ್ಷ ಮಾಹಾತ್ಮ್ಯ’ ವನ್ನು ಬರೆದಿರುವ ‘ರುದ್ರಕವಿ’ ಯು ತನ್ನ ಗ್ರಂಥಾಂತ್ಯದಲ್ಲಿ ಬರೆದಿರುವ ಈ ಪದ್ಯದಿಂದ ಆತನ ವಿಷಯವು ವ್ಯಕ್ತವಾಗುತ್ತದೆ.

॥ಸೀ॥ ಶ್ರೀ ಮಿಂಚು ಮಧುಗಿರಿ ಶೀಮಲೋಘನೆತರ ಪ್ರಖ್ಯಾತಿಚಂನೊಂದಿ
ಬರಗುಚುನ್ನ। ಮಹಿತಮೌಯಿಡ್ಗೂರಿ ಮಠನಿವಾಸುಡು ಪಂಡಿತಾ
ರಾಧ್ಯ ವಂಶವರ್ಧನುಡುವೀರ । ಮಾಹೇಶ್ವರುಡುನಿಡಿಮಾಮಿಡಿ
ವಾಸುತಾ ಶ್ರೀ ಗುರುಮೂರ್ತಿಕಿ ಶಿಷ್ಯುಡಾಂಧ್ರ। ಕರ್ನಾಟಕೋ
ಭಯ ಕವಿತಾ ವಿಚಾರುಡು ವಿದ್ವಜ್ಜನಾನಂದ ವಿನಯಪರುಡು।
ಚಾರು ಸದಾಚಾರ ಸಾಮ್ರಾಂಜ್ಯಧುರ್ಯುಡು ಅನಘುಡು ಪುಷ್ಪದೈ
ಯಾರ್ಯ ಸುತುಡು। ಘನಶೀಲ ರಾಜಾಂಬ ಗರ್ಭಾಬ್ಧಿಚಂದ್ರುಡು
ರುದ್ರಕವೀಂದ್ರುಡಾರೂಢಿಮೆರಯ । ಸರಸ ಶಾಲೀವಾಹ ಶತಕ
ವರ್ಷಂಬುಲು ಕರದಿವಿಕರಿ ಸುಧಾಕರುಲಸಂಖ್ಯ। ವಿಕ್ರಮ ವತ್ಸ
ರಾಶ್ವೀಜ ಪ್ರಥಮಪಕ್ಷ ಸಪ್ತಮಿದ್ಯುಮಣಿವಾಸರ ಮುವರಕು।
ವಿರಮಿಂಚೆ ವಿರುಪಾಕ್ಷ ಗುರು ಮಹಾತ್ಮ್ಯಂ ”

ಮಧುಗಿರಿ ಪ್ರಾಂತದ ಇಡಗೂರೆಂಬ ಗ್ರಾಮದ ಮಠಸ್ಥನೂ, ಪಂಡಿತಾರಾಧ್ಯ ವಂಶವರ್ಧನ ನಿಡುಮಾಮಿಡಿ ಸ್ವಾಮಿಗಳ ಶಿಷ್ಯನೂ, ಆದ ವೀರಮಾಹೇಶ್ವರ ಪುಷ್ಪದಯ್ಯ ಮತ್ತು ರಾಚಾಂಬ ಇವರ ಪುತ್ರನಾದ ಕರ್ನಾಟಕಾಂಧ್ರ ಕವಿತಾ ವಿಚಾರನಾದ ‘ರುದ್ರಕವಿ’ ಯು ಶಾಲಿವಾಹನ ಶಕ ೧೮೦೨ ವಿಕ್ರಮ ಸಂ। ಆಶ್ವೀಜ ಶು. ೭. ಭಾನುವಾರ

(ಸನ್ ೧೮೮೧) ರಲ್ಲಿ ಈ ಗ್ರಂಥವನ್ನು ವಿರಚಿಸಿದಂತೆ ಹೇಳುತ್ತಾನೆ. ಕವಿಚರಿತೆಯಲ್ಲಿಯೂ ಈತನ ಉಲ್ಲೇಖವಿದೆ.[೧]

ಪುಲ್ಲಕವಿಯು ಗ್ರಂಥದಲ್ಲಿದ್ದ ಬರಹದ ತಪ್ಪುಗಳನ್ನು ಶುದ್ಧ ಮಾಡಲು ಹೋಗಿ ಹೊಸದಾಗಿಯೇ 'ಪಂಡಿತಾರಾಧ್ಯ ಚರಿತ್ರೆಯು' ನ್ನು ಬರೆದೆನೆಂದು ಹೇಳುವ 'ಅಪ್ಪಪ್ಪ' ನೆಂಬ ಕವಿವರ್ಯನು ಸಹ ೧೯ನೆಯ ಶತಕದವನೆಂದು ತಿಳಿದುಬಂದಿದೆ.

ಹಿಂದಿನ ಲೇಖನಗಳಲ್ಲಿ ಪ್ರಸಂಗಾನುಗುಣವಾಗಿ ವಿರೂಪಾಕ್ಷದೇಶಿಕೇಂದ್ರರೇ ಮುಂತಾದವರು ನಡೆಯಿಸಿದ ಪ್ರಭಾವಗಳನ್ನು ಕೊಡಲಾಗಿದೆ. ಮತ್ತೆ ಅವುಗಳನ್ನು ಇಲ್ಲಿ ಹೇಳುವುದು ಅನವಶ್ಯಕ. ಪಂಡಿತಾರಾಧ್ಯಚರಿತ್ರೆಯಲ್ಲಿ 'ಶ್ರೀಗಿರಿ ರಾಜಸೂರ್ಯ ಸಿಂಹಾಸ' ನಾರೋಹಣ ಮಾಡಿದ 'ಮೂರ್ತಿಗಳ ಮಹತ್ಕಾರ್ಯಗಳ ವಿಪುಲವಾದ ವರ್ಣನೆಯು ಮನೋಹರವಾಗಿ ಚಿತ್ರಿತವಾಗಿದೆ. ಅದನ್ನು ವಿಮರ್ಶಾತ್ಮಕ ಲೇಖನದಲ್ಲಿ ಸಂಗ್ರಹಿಸಿದರೆ ಮಾತ್ರ ಸಾಕೆನಿಸುತ್ತದೆ. ಕವಿಯು ಪ್ರತಿ ಉಚ್ಛ್ವಾಸದ ಕಡೆಯಲ್ಲಿಯೂ ಕೊಟ್ಟಿರುವ ಗದ್ಯವು ಅನುಕ್ರಮಣಿಕಾ ರೂಪವಾಗಿರುವುದರಿಂದ ಅದನ್ನು ಉದಾಹರಿಸಿ ಅವಶ್ಯವಿದ್ದೆಡೆಗಳಲ್ಲಿ ವಿಸ್ತರಿಸುವುದು ಉಚಿತವೆನಿಸುತ್ತದೆ.

ಪ್ರಥಮಾಶ್ವಾಸದ ಕಡೆಯಲ್ಲಿ ಈ ಗದ್ಯವಿದೆ.

"ಗದ್ಯ" ಇತಿ ಶ್ರೀ. ವೀರಭದ್ರಕಾರುಣ್ಯಾಮೃತ ಸಂವರ್ಧಿತ ಕವಿತಾಲತಾ ಸಮುತ್ಫುಲ್ಲ ವಚೋವಲ್ಲರೀ ಮತಲ್ಲಜ ಸಮುಲ್ಲಸತ್ಫುಲ್ಲಕವಿ ಪ್ರಣೀತಂ ಬೈನ ಪಂಡಿತಾರಾಧ್ಯಚರಿತ್ರಾಂಬುನು ಮಹಾಪ್ರಬಂಧಂಬುನಂದು ಶ್ರೀ ಕೈಲಾಸಂಬುನ ಪರಮೇಶ್ವರುಂಡು ಕೊಲುವುಂಡುಟಯು ನಾರದಾಗಮನಂಬುನು, ಮಹಾಪುರುಷೋತ್ಪತ್ತಿಯುನಕಡು ಶ್ರೀಶೈಲ ಭೀಮೇಶ್ವರುನಿ ದಿವ್ಯತೇಜೋ ವಿಶೇಷಂಬುನ ಪ್ರಕಾಶಿಂಚುಟಯು, ದುರ್ಗಾವೀರಭದ್ರಭೈರವುಲ ಸಮಾಗಮುಂಬುನು, ವೀರಭಿಕ್ಷಾವಂತು ನಿಗ್ರಹಾನುಗ್ರಹಂಬುನು, ಕಾಶಿಕಾಪುರ ಪ್ರವೇಶಂಬುನು, ಅಮಾವಾಸ್ಯಯುಂದು ಚಂದ್ರೋದಯಂಬುಗಾವಿಂಚುಟಯು, ಶ್ರೀಪತಿ ಪಂಡಿತುನಿ ವಂಶಜುಲಗು ಬ್ರಾಹ್ಮಣುಲಕು ಲಿಂಗಧಾರಣಂಬುಗಾವಿಂಚುಟಯು,

---

೧ ಕವಿಚರಿತೆ ಭಾಗ ಪು. ೨೨೬.

ಪಂಡಿತಾರಾಧ್ಯ ನಿರ್ಮಾಣಂಬುನು, ಪಾಂಚಾಲಬರ್ಭರಾದಿ ದೇಶ ಸಂಚಾರಂಬು ಶೇಯುಟಯು, ಶ್ರೀಶೈಲಮುನಕೇಕೆಂಚಿ 'ಸೂರ್ಯಸಿಂಹಾಸನ' ನಿರ್ಮಾಣಂಬುನು, ಚಂದ್ರಗುಂಡದೇಶಿಕೇಂದ್ರ ಸ್ವಾಮುಲವಾರಿಕಿ ಪಟ್ಟಾಭಿಷೇಕಂಬುನು, ವಿರೂಪಾಕ್ಷದೇಶಿಕೇಂದ್ರ ಸ್ವಾಮುಲವಾರು ಶ್ರೀ ಭೀಮಲಿಂಗಮುನಂದು ಲಿಂಗೈಕ್ಯಂಬಗುಟಯು, ಚಂದ್ರಗುಂಡಸ್ವಾಮುಲವಾರಿ ಪ್ರಕಾಶಮಾನಂಬುನನು ಕಥಲುಂಗಲ ಪ್ರಥಮಾಶ್ವಾಸಂ"

ಕೈಲಾಸದಲ್ಲಿ ಪರಮೇಶ್ವರನು ಒಡ್ಡೋಲಗದಲ್ಲಿರುತ್ತಿರಲು ಅಲ್ಲಿಗೆ ನಾರದನು ಬಂದು ಭೂಲೋಕದಲ್ಲಿ ಶಿವಭಕ್ತಿಯು ದಿನೇ ದಿನೇ ಕೃಶವಾಗುತ್ತಿದೆಯೆಂದೂ ವೀರಶೈವ ಮತವನ್ನು ಉದ್ಧಾರ ಮಾಡಲು ಓರ್ವ ಗಣಾಧೀಶ್ವರನನ್ನು ಕಳುಹಿಸಬೇಕೆಂದೂ ಮೊರೆಯಿಡುತ್ತಾನೆ. ಆಗ ಪರಮಾತ್ಮನ ಇಚ್ಛೆಯನ್ನರಿತ ಓರ್ವ ಗಣವರನು (ಧೌನುಕರ್ಣಗಣಾಧೀಶರು) ಪರಮೇಶ್ವರನ ಸಮೀಪಕ್ಕೆ ಬಂದು ಅವನ ಅನುಜ್ಞೆಯನ್ನು ಪಡೆದು ಭೂಲೋಕದಲ್ಲಿ ಜಗತ್ಪ್ರಸಿದ್ಧವಾದ ಶ್ರೀಶೈಲಪರ್ವತದಲ್ಲಿ ವಿರಾಜಿಸುವ ಭೀಮಲಿಂಗದಲ್ಲಿ ತೇಜೋಮೂರ್ತಿಯಾಗಿ ಆವಿರ್ಭವಿಸುತ್ತಾನೆ. ಅವರ ಜನ್ಮಸಮಯದಲ್ಲಿ ಸಮಸ್ತ ದೇವಾಧಿ ದೇವತೆಗಳೂ ಸಮಸ್ತ ಋಷಿಗಳೂ ಅನೇಕವಾಗಿ ಸ್ತುತಿಸುತ್ತಾರೆ. ಆಗ ಪರ್ವತಾಧಿಪನಾದ ಶ್ರೀಮಲ್ಲಿಕಾರ್ಜುನ ಸ್ವಾಮಿಯು ಅಲ್ಲಿಗೆ ಬಂದು ಸ್ವಾಮಿಗಳನ್ನು ಹೊಗಳಿ ಹೀಗೆ ಹೇಳುತ್ತಾನೆ.

(೧) ಗೀ॥ ಪರಮಪಂಚಾಕ್ಷರೀ ಮಂತ್ರಪ್ರಭಾವಂಬು ।
ಬುದ್ಧಿಹೀನುಲಕೆಲ್ಲ ಬೋಧಪರಚಿ ॥
ವಾಸಿ ಮೀರಂಗ ವಿರುಪಾಕ್ಷದೇಶಿಕೇಂದ್ರ ।
ಸ್ವಾಮಿಯನಿಪೇರುವಹಿಯಿಂಚಿ ಭೂಮಿಯಂದು ॥

(೨) ಕಂ॥ ಶಿವಮತಮುನುಸ್ಥಾಪಿಂಚುಚು ।
ಭವಹರ ಮಗುನಟ್ಲು ಸಕಲ ಭಕ್ತುಲನೆಲ್ಲ ।
ವಿವರಿಂಚಿ ಪುಣ್ಯ ಕಥಲನು ।
ಶಿವಲೋಕಮುಚೇರುನಟ್ಲುಚೇಯು ಮಹಾತ್ಮಾ ॥

(೧) ಪರಮ ಪಂಚಾಕ್ಷರಿಯ ಪ್ರಭಾವದ ಶಕ್ತಿಯಿಂದ ಬುದ್ಧಿ ಹೀನರಾದ ಮನುಷ್ಯರಲ್ಲಿ ಜ್ಞಾನವನ್ನು ಪ್ರಚೋದನಗೊಳಿಸಿ ನೀವು ವಿರೂಪಾಕ್ಷ ದೇಶಿಕೇಂದ್ರರೆಂಬಭಿಧಾನದಿಂದ ಪ್ರಸಿದ್ಧರಾಗುವಿರಿ.

(೨) ಭೂಲೋಕದಲ್ಲಿರುವ ಸಕಲ ಭಕ್ತಶ್ರೇಣಿಗೂ ಶಿವತತ್ತ್ವ ಶಿವಕಥಾ ಶಿವಾನುಸಂಧಾನ ಪುರಸ್ಸರ ಶಿವಮತವನ್ನು ಸ್ಥಾಪಿಸಿ ಅವರಿಗೆ ಸದ್ಗತಿಯನ್ನನುಗ್ರಹಿಸಬೇಕು.

ಹೀಗೆ ಶ್ರೀ ಮಲ್ಲಿಕಾರ್ಜುನ ಸ್ವಾಮಿಯಿಂದ ಅಪ್ಪಣೆಯಂಕೊಂಡು ಆ ಪರ್ವತದ ಅನೇಕ ಋಷ್ಯಾಶ್ರಮಗಳಲ್ಲಿ ಅನೇಕ ವರ್ಷಗಳಿಂದ ತಪಸ್ಸನ್ನಾಚರಿಸುತ್ತಿದ್ದ ಮುನಿಗಳಿಗೆ ದರ್ಶನವನ್ನಿತ್ತು ಅವರಿಗೆ ವೀರಶೈವ ತತ್ತ್ವ ರಹಸ್ಯಗಳನ್ನು ಬೋಧೆಮಾಡುತ್ತಿದ್ದರು. ಆ ಸಮಯಕ್ಕೆ ಜಗದೀಶನ ಅಪ್ಪಣೆಯಿಂದ ದುರ್ಗಾ, ವೀರಭದ್ರ ಮತ್ತು ಭೈರವ ಈ ಮೂವರೂ ಶ್ರೀಯವರ ಸೇವೆಯಲ್ಲಿ ಬಂದು ನಿರತರಾಗುತ್ತಾರೆ. ಈಗಲೂ ಈ ಮಠದ ಎಲ್ಲಾ ಶಾಖೆಗಳಲ್ಲಿಯೂ ವೀರಭದ್ರ ಪ್ರತಿಷ್ಠೆಯಾಗಿರುತ್ತದೆ. ಈ ಗ್ರಂಥವೂ ಕೂಡ ಶ್ರೀ ವೀರಭದ್ರನ ಅಂಕಿತದಿಂದಲೇ ಪ್ರಸಿದ್ಧವಾಗಿರುವುದು ಇದಕ್ಕೊಂದು ನಿದರ್ಶನವಾಗಿದೆ.

ಆನಂತರ ಶ್ರೀ ವಿರೂಪಾಕ್ಷದೇಶಿಕೇಂದ್ರರು ಉಜ್ವಲತೋಜೋವಿರಾಜಮಾನರಾಗಿ ಪರ್ವತ ಪ್ರಾಂತ್ಯದಲ್ಲಿ ಸಂಚರಿಸುತ್ತಿರಲು ಅಲ್ಲಿಗೆ ಪಾಳೆಯಗಾರನಾಗಿದ್ದ 'ವೀರಭಿಕ್ಷಾಪತಿ' ಎಂಬುವನು ಶ್ರೀಯವರಿಗೆ ಹಿಂಸೆಯನ್ನೀಯುತ್ತಾನೆ. ಆನಂತರ ಜಗದ್ಗುರುಗಳ ಆತ್ಮಶಕ್ತಿಯಿಂದ ಆಕರ್ಷಿತನಾಗಿ ಆತನು ಶರಣಾಗತನಾಗುತ್ತಾನೆ. ಆಗ ಶ್ರೀಯವರು ಅವನಿಗೆ ಶಿವತತ್ವಗಳನ್ನುಪದೇಶಿಸಿ ಅಲ್ಲಿಯೇ ಶಿವಯೋಗದಲ್ಲಿರಲು ನಿಯಮಿಸುತ್ತಾರೆ.

ಅನಂತರ ವಿರೂಪಾಕ್ಷದೇಶಿಕೇಂದ್ರರು ತಮ್ಮ ಶಿಷ್ಯರಾದ ವೀರಭದ್ರ ಭೈರವರೊಂದಿಗೆ ಕಾಶೀಪಟ್ಟಣಕ್ಕೆ ದಯಮಾಡಿಸಿ ಅಲ್ಲಿ ಅನೇಕ ಬ್ರಾಹ್ಮಣರ ಶ್ರೇಣಿಯಲ್ಲಿ ಅನೇಕ ಅನೇಕ ಪ್ರಭಾವಗಳನ್ನು ತೋರಿಸುವುದಲ್ಲದೆ ಶಾಸ್ತ್ರಾರ್ಥದಲ್ಲಿ ವಿಜಯಿಗಳಾಗುತ್ತಾರೆ. ಬ್ರಾಹ್ಮಣ ಜನಾಂಗಕ್ಕೆ ಮುಂದಾಳಾಗಿದ್ದ 'ಶ್ರೀಪತಿ' ಎಂಬ ಆರಾಧ್ಯ ಬ್ರಾಹ್ಮಣನನ್ನು ಜಯಿ

ಸಲು ಆತನು ವೀರಶೈವ ದೀಕ್ಷೆಯನ್ನು ಸ್ವೀಕರಿಸುತ್ತಾನೆ. ಅನಂತರ ಆತನ ಸಂಗಡದವರಿಗೆಲ್ಲರಿಗೂ ಲಿಂಗಧಾರಣೆಯನ್ನು ಮಾಡುತ್ತಾರೆ. ಆವರೆ 'ಪಂಡಿತಾರಾಧ್ಯ' ರೆಂದು ಕರೆಯಲ್ಪಟ್ಟು ಮುಂದೆ ಈ ವಿರೂಪಾಕ್ಷ ದೇಶಿಕೇಂದ್ರರು ಸ್ಥಾಪಿಸಿದ ಪೀಠಕ್ಕೆ ಉತ್ತರಾಧಿಕಾರಿಗಳಾಗಲು ಶ್ರೀ ವಿರೂಪಾಕ್ಷದೇಶೀಕರಿಂದ ನಿಯುಮಿಸಲ್ಪಡುತ್ತಾರೆ. ಅಲ್ಲಿಯೂ ಅನೇಕ ಮಹಿಮೆಗಳನ್ನು ಪ್ರಕಟಿಸಿ ಜಗದ್ವಂದ್ಯರಾಗಿ ಅನೇಕ ದೇಶಗಳಲ್ಲಿ ರಾಜಾಧಿರಾಜರಿಂದ ಮನ್ನಣೆಯನ್ನೂ ಪಡೆದು ಶ್ರೀಶೈಲಕ್ಕೆ ದಯಮಾಡಿಸುತ್ತಾರೆ.

ಶ್ರೀಶೈಲದಲ್ಲಿ ಪಂಚವನ್ನಾಗಿಯ ಸ್ಥಳದಲ್ಲಿ ಒಂದು ಬೃಹನ್ಮಠವನ್ನು ಕಟ್ಟಿಸಿ ಅಲ್ಲಿ 'ಸೂರ್ಯಸಿಂಹಾಸನ' ವನ್ನು ಸ್ಥಾಪಿಸುತ್ತಾರೆ. ಅದೇ ನಾವು ಹಿಂದೆ ಹೇಳಿದ ಶ್ರೀ ಗೋಕರ್ಣ ಸೂರ್ಯಸಿಂಹಾಸನವು. ಇವರ ಉಲ್ಲೇಖವುಳ್ಳ ತಾಮ್ರ ಪತ್ರವೊಂದು ಈ ಮಠದಲ್ಲಿ ಇರುತ್ತದೆ.

ಸೀ॥ ಅಂತಟನೊಕಮಠಂ ಬಚ್ಚಟ ಗಲ್ಪಿಂಚಿಯದಿ ಸೂರ್ಯಸಿಂಹಾಸನಂಬಟಂಚು। ಅಭಿಧಾನಮೊನಚಿ ಶಿಖಾಮು ಮುದ್ರಲ ನಿರ್ಮಿಂಚಿ ಪರಪಂಡಿತಾರಾಧ್ಯವಂಶಮುನನು। ಸಕಲ ಲಕ್ಷಣ ಮುಲುಚಲುಗಿನ ನೊಕಪಿನ್ನನಾನಿಗ್ಯೆ ಕೊನಿಚಾಲ ವಾಂಛಮೀರ।......."

ಎಂದು ಆ ವಟುವಿಗೆ ಸಕಲ ವಿದ್ಯಾಭ್ಯಾಸವನ್ನು ಮಾಡಿಸಿ ಆತನಿಗೆ ಶ್ರೀ. ಚಂದ್ರಗುಂಡದೇಶಿಕೇಂದ್ರನೆಂಬ ಅಭಿಧಾನವನ್ನಿಟ್ಟು ಶ್ರೀ ಗೋಕರ್ಣ ಸೂರ್ಯಸಿಂಹಾಸನದಲ್ಲಿ ವಿದ್ಯುಕ್ತವಾಗಿ ಪಟ್ಟಾಭಿಷಿಕ್ತನನ್ನಾಗಿ ಮಾಡಿ ಶಿಖಾಮುದ್ರೆಗಳನೊಪ್ಪಿಸಿ,

ಗೀ॥ ಆರ್ಯ ಗುರುವುಲು ನಿಜಕಳಾಂಶಂಬುವಲನ।
ಕರ್ತಲನುನಾಹ್ವಯುಂಬುನುಗಲುಗಜೇಸಿ॥
ಪಟ್ಟಪಟ್ಟಂಬುವಾರುನು ಪರಮ ನಿಯತಿ।
ಪೂಜಗಾವಿಂಚುಡನಿಯಿಚ್ಚಿ ಬುಧಗುರುಂಡು॥

ಅನಂತರದಲ್ಲಿ ವಿದ್ಯಾಜ್ಞಾನಿಗಳಾದ ಶ್ರೀ. ವಿರೂಪಾಕ್ಷದೇಶಿಕರು ತಮ್ಮ ನಿಜಕಲಾಂಶವನ್ನು ಆಹ್ವಾನಿಸಿ ತುಂಬಿದ ಕೆಲವು ಪವಿತ್ರ ವಸ್ತುಗಳನ್ನು ಶ್ರೀ. ಚಂದ್ರಗುಂಡುದೇಶಿಕವರನಿಗೆ ಕೊಟ್ಟು ಆಶೀರ್ವದಿಸಿ ಇಲ್ಲಿಂದ ಮುಂದೆ ಈ ಪೀಠಾಸೀನರಾದ ಪ್ರತಿಯೊಬ್ಬ ಮೂರ್ತಿಯೂ ಈ ಕರ್ತರ

ಸೇವೆಯನ್ನು ತ್ರಿಕಾಲದಲ್ಲಿಯೂ ನಿಷ್ಠೆಯಿಂದ ಆರಾಧಿಸಿದಲ್ಲಿ ಅವರ ಇಷ್ಟಾರ್ಥವು ನೆರವೇರಿ ಅವರು ಕೃತಕೃತ್ಯರಾಗುವರೆಂದು ಆಜ್ಞಾಪಿಸಿ ಆ ಮಹನೀಯ ಮೂರ್ತಿಯು ಮತ್ತೆ ಶ್ರೀ. ಭೀಮಲಿಂಗದಲ್ಲಿಯೇ ಐಕ್ಯವಾದನು. ಅವರಿತ್ತ ಪವಿತ್ರ ವಸ್ತುಗಳು ಪರಂಪರೆಯಾಗಿ ಈ ಪೀಠಾಧೀಶ್ವರರಿಂದ ಆರಾಧಿಸಲ್ಪಡುತ್ತ ಇಂದಿಗೂ "ಹಿರಿಯಕರ್ತರು" ಎಂಬಭಿಧಾನದಿಂದ ಮಠದಲ್ಲಿವೆ.

ಕಂ॥ ವಿರುಪಾಕ್ಷದೇಶಿಕೇಂದ್ರನಿ।
ಕರಪುಷ್ಕರ ಸಂಭವುಂಡು ಕಲಿಯ ಗಮುಂದುರ್ ॥
ಸ್ಥಿರ ಮುಗ ಭಕ್ತುಲಕಲ್ಪಕ।
ತರುವನಗಾ ಚಂದ್ರಗುಂಡ ದೇವಂಬಲರೆ ॥

ಅನಂತರ ಕವಿಯು ಶ್ರೀ ಚಂದ್ರಗುಂಡದೇಶಿಕರ ಪ್ರಭವಗಳನ್ನು ಬಣ್ಣಿಸುತ್ತಾನೆ.

(ಮುಂದೆ.)

# ೩೬ ತತ್ವಗಳು.

ಜಗತ್ತಿನ ಉತ್ಪತ್ತಿಗೆ ಮತ್ತು ಅದರ ವ್ಯವಹಾರಕ್ಕೆ ತತ್ವಗಳು ಮುಖ್ಯಾಧಾರವೆಂದೆನಿಸಿಕೊಂಡಿರುತ್ತವೆ. ಈ ತತ್ವಗಳು ಮೂವತ್ತಾರು ಇರುವವೆಂದು ವಚನಕಾರರು ಭಾವಿಸಿರುವರು. ಕೆಲವು ಆಗಮಗಳಲ್ಲಿಯೂ ತತ್ವ ವಿವೇಚನೆಯು ಇದ್ದು ಇಲ್ಲಿಯೂ ಇವುಗಳ ಸಂಖ್ಯೆಯು ಮೂವತ್ತಾರು ಎಂದು ಹೇಳಲ್ಪಟ್ಟಿದೆ. ಆದರೆ ವಚನಕಾರರ ಮತ್ತು ಆಗಮ ಸಿದ್ಧಾಂತಗಳ ವಿವರಣೆಯಲ್ಲಿ ಕೆಲವು ಕಡೆ ಪರಸ್ಪರ ಭಿನ್ನತೆಯುಂಟು. ವಚನಕಾರರಲ್ಲಿಯು ಕೆಲವು ತತ್ವಗಳು ಈ ಶಿವಸಿದ್ಧಾಂತಿಗಳಲ್ಲಿಲ್ಲ. ಆದರೂ ಈ ಉಭಯತರ ಸಿದ್ಧಾಂತದ ವಿವರಣೆಗಳಲ್ಲಿ ೩೬ ತತ್ವಗಳ ವಿವೇಚನೆಗೆ ಉನ್ನತ ಸ್ಥಾನವಿದೆ. ಇವುಗಳ ರೀತಿ ಮತ್ತು ಮರ್ಮಗಳನ್ನು ಅರಿಯದ ಹೊರತು ಆತ್ಮಪ್ರಗತಿಯ ಮಾರ್ಗವು ತಿಳಿಯಲಾರದೆಂದು ಈ ಉಭಯ ವರ್ಗದ ಶಾಸ್ತ್ರಕಾರರು ದೃಢವಾಗಿ ಹೇಳುತ್ತಾರೆ. ಆದುದರಿಂದ ಈ ವಿಷಯವನ್ನು ಕುರಿತು ಈ ಲೇಖದಲ್ಲಿ ವಿವೇಚಿಸಲು ಪ್ರಯತ್ನಿಸುವೆವು.

ಆದರೆ ಇಲ್ಲಿ ನಾವು ವೀರಶೈವ ವಚನಕಾರರ ಅಭಿಪ್ರಾಯದ ಪ್ರಕಾರ ೩೬ ತತ್ವಗಳಾವವು ಎಂಬದನ್ನು ವಿವರಿಸುವೆವು. ವಚನಕಾರರು ಆಗಮಕಾರರ ಸಿದ್ಧಾಂತಗಳನ್ನು ಸ್ವೀಕರಿಸಿದರೂ ಕೂಡ ಅವರು ತಮ್ಮ ಷಟ್‌ಸ್ಥಲ ಶಾಸ್ತ್ರಕ್ಕೆ ಹೊಂದಿಕೆಯಾಗುವಂತೆ ಕೆಲವು ವ್ಯತ್ಯಾಸಗಳನ್ನು ಮಾಡಿ ಅವುಗಳ ತತ್ವಗಳನ್ನು ವಿವರಿಸುವದುಂಟು.

ವೀರಶೈವ ವಚನಕಾರರು ತಮ್ಮ ೩೬ ತತ್ವಗಳಲ್ಲಿ ಮೂರು ಮುಖ್ಯ ವಿಭಾಗಗಳನ್ನು ಮಾಡಿರುವರು. ಅವು ಯಾವವೆಂದರೆ:— (೧) ಆತ್ಮ ತತ್ವಗಳು:— ಇವು ದೇಹಕ್ಕೆ ಸಂಬಂಧಪಟ್ಟವಿರುತ್ತವೆ. ಇವುಗಳ ಮೂಲಕವಾಗಿಯೇ ದೇಹದ ಬಹಿರಂಗದ ಮತ್ತು ಅಂತರಂಗದ ವ್ಯಾಪಾರಗಳು ನಡೆಯುತ್ತವೆ. ಇವುಗಳ ಸಂಖ್ಯೆಯು ೨೫ ಇರುತ್ತದೆ. (೨) ವಿದ್ಯಾತತ್ವಗಳು:— ಇವು ಬಹು ಸೂಕ್ಷ್ಮವಾದವುಗಳು. ಇವು ಪಿಂಡವನ್ನೂ ಬ್ರಹ್ಮಾಂಡವನ್ನೂ ಕೂಡ ವ್ಯಾಪಿಸಿರುತ್ತವೆ. ಇವುಗಳಿಗೆ ಲಿಂಗತತ್ವಗಳೆಂತಲೂ ಬೇರೊಂದು ಹೆಸರು ಇದೆ. ಇವುಗಳ ಸಂಖ್ಯೆ ೧೦

ಇರುತ್ತದೆ. ಶಿವತತ್ವಃ— ಇದು ಒಂದೇ ಇರುತ್ತದೆ. ಯಾವ ಮೂಲ ತತ್ವದಿಂದ ಈ ಜಗತ್ತು ಉದಯವಾಗಿರುತ್ತದೆಯೋ ಅದೇ ಈ ಶಿವ ತತ್ವವಿರುತ್ತದೆ. ಈ ಶಿವತತ್ವದಿಂದಲೇ ಉಳಿದ ತತ್ವಗಳೆಲ್ಲವೂ ಹೊರ ಹೊರಟಿರುತ್ತವೆ. ಇದಾದರೂ ಲಿಂಗತತ್ವವು. ಹೀಗೆ ವೀರಶೈವ ವಚನ ಕಾರರು ೩೬ ತತ್ವಗಳನ್ನು ಕಲ್ಪಿಸಿರುವರು.

ಈ ೩೬ ತತ್ವಗಳನ್ನು ಕಲ್ಪಿಸುವದರ ಉದ್ದೇಶವೇನೆಂಬದನ್ನು ವಚನಕಾರರು ಬಹು ಸರಸಾಗಿ ವರ್ಣಿಸುತ್ತಾರೆ. ಲಿಂಗಾಂಗ ಸಾಮರಸ್ಯ ಜ್ಞಾನವನ್ನು ಪಡೆಯಲು ಈ ತತ್ವಗಳ ಜ್ಞಾನದಿಂದ ಆಗಬೇಕಾದು ದೇನು ಎಂಬುದನ್ನು ಅವರು ಬಹು ಕಡೆಗೆ ಹೇಳಿರುತ್ತಾರೆ. ದೇಹಕ್ಕೆ ಸಂಬಂಧಪಟ್ಟ ೨೫ ತತ್ವಗಳನ್ನು ಕಡೆಯದಾದ ಶಿವತತ್ವದಲ್ಲಿ ಅಡಗಿ ಸುವದೇ ಶಿವತತ್ವದಲ್ಲಿ ಲಿಂಗಾಂಗಿಯ ಮುಖ್ಯ ಕಾರ್ಯವಾಗಿರುತ್ತದೆ. ಇದರ ಜ್ಞಾನಮಾಡಿಕೊಳ್ಳುವದೇ ಲಿಂಗಾಂಗ ಸಾಮರಸ್ಯ ಜ್ಞಾನವು. ಈ ಸಾಮರಸ್ಯವನ್ನು ಹೊಂದಲು ವಿದ್ಯಾತತ್ವಗಳು ಮನುಷ್ಯನಿಗೆ ಸಹಾಯಕಾರಿಗಳಾಗಿವೆ. ಈ ವಿದ್ಯಾತತ್ವಗಳು ೨೫ ಆತ್ಮತತ್ವಗಳನ್ನು ಶಿವ ತತ್ವದಲ್ಲಿ ಅಡಗಿಸಲು ಸಹಾಯಕವಾಗಿರುತ್ತವೆ. ತತ್ ಪದವೇ ೧೧ ಲಿಂಗ ತತ್ವಗಳು ತ್ವಂ ಪದವೇ ೨೫ ತತ್ವಗಳುಳ್ಳ ಅಂಗವು ಈ ಎರಡರ ಐಕ್ಯವೇ ಅಸಿ ಪದವು. ಹೀಗೆ "ತತ್ ತ್ವಮಸಿ" ಎಂಬ ಮಹಾ ವಾಕ್ಯವನ್ನು ವಚನಕಾರರು ಈ ತತ್ವಗಳಲ್ಲಿ ಕಾಣುತ್ತಾರೆ.

## ಆತ್ಮ ತತ್ವಗಳು.

ಹಿಂದೆ ಹೇಳಿದಂತೆ ಆತ್ಮತತ್ವಗಳು ೨೫ ಇವೆಯಷ್ಟೇ. ಇವುಗಳಲ್ಲಿ ಪುನಃ ಮುಖ್ಯ ಐದು ವಿಭಾಗಗಳಿದ್ದು ಈ ಪ್ರತಿಯೊಂದು ವಿಭಾಗದಲ್ಲಿ ಐದು ಐದು ತತ್ವಗಳಿರುತ್ತವೆ. ಹೀಗೆ ಎಲ್ಲವೂ ಕೂಡಿ ಒಟ್ಟು ೨೫ ತತ್ವಗಳಾಗುತ್ತವೆ. ಅವು ಯಾವವೆಂದರೆಃ—

(೧) ಕರ್ಮೇಂದ್ರಿಯಗಳುಃ— ಇವು ವಾಕ್, ಪಾದ, ಪಾಣಿ, ಪಾಯು, ಗುಹ್ಯ ಇವುಗಳೇ ಇರುತ್ತವೆ. ಇವೆಲ್ಲವೂ ಕ್ರಿಯಾರೂಪಾಗಿವೆ. ಇವುಗಳಿಂದಲೇ ಮನುಷ್ಯನು ತನ್ನ ನಿತ್ಯದ ಕ್ರಿಯೆಗಳನ್ನು ಮಾಡುತ್ತಾನೆ ಆದ್ದರಿಂದ ಇವುಗಳಿಗೆ ಕರ್ಮೇಂದ್ರಿಯಗಳೆಂಬ ಹೆಸರುಂಟಾಗಿದೆ.

(೨) ಜ್ಞಾನೇಂದ್ರಿಯಗಳುಃ— ಇವು ಘ್ರಾಣ, ಜಿಹ್ವೆ, ನೇತ್ರ ತ್ವಚೆ, ಮತ್ತು ಶ್ರೋತ್ರ ಇವುಗಳೇ ಇರುತ್ತವೆ. ವಾಸಿಸುವದು, ರುಚಿಸುವದು, ನೋಡುವದು, ಸ್ಪರ್ಶಿಸುವದು, ಮತ್ತು ಕೇಳುವದು ಇವುಗಳು ಅನುಕ್ರಮವಾಗಿ ಈ ಇಂದ್ರಿಯಗಳ ಮೂಲಕವಾಗಿಯೇ ನಡಿಯುತ್ತವೆ. ಇವುಗಳನ್ನು ಬುದ್ಧೀಂದ್ರಿಯಗಳೆಂತಲೂ ಕರೆಯುವದುಂಟು.

(೩) ವಿಷಯಗಳುಃ— ಇವು ಗಂಧ, ರಸ, ರೂಪ, ಸ್ಪರ್ಶ ಮತ್ತು ಶಬ್ದ ಇವುಗಳು ಇರುತ್ತವೆ. ಇವುಗಳು ಐದು ಜ್ಞಾನೇಂದ್ರಿಯಗಳಿಗೆ ಅನುಕ್ರಮವಾಗಿ ಸಂಬಂಧಪಟ್ಟು ಮನುಷ್ಯನ ಜ್ಞಾನಾಭಿವೃದ್ಧಿಗೆ ಕಾರಣವಾಗಿರುತ್ತವೆ.

(೪) ವಾಯುಗಳುಃ— ಇವು ಪ್ರಾಣ, ಅಪಾನ, ವ್ಯಾನ, ಉದಾನ ಸಮಾನ ಎಂದು ಐದು ಇರುತ್ತವೆ. ಪ್ರಾಣವಾಯುವು ಉಚ್ಛ್ವಾಸ ನಿಶ್ವಾಸಗಳನ್ನುಂಟುಮಾಡಿ ಜೀವನು ಜೀವಿಸಲು ಕಾರಣವಾಗಿರುತ್ತದೆ. ಅಪಾನವಾಯುವು ದೇಹದಲ್ಲಿಯ ಮಲವನ್ನು ಹೊರಗೆಡಹಿ ಅನ್ನರಸವನ್ನು ವ್ಯಾಪ್ತಿಯನ್ನು ಮಾಡುತ್ತಿರುವದು. ವ್ಯಾನವಾಯುವು ಸರ್ವಸಂಧಿಯಲ್ಲಿದ್ದು ನೀಡುವದೂ ಮುದುಡುವದೂ ಮೊದಲಾದ ಕಾರ್ಯಗಳನ್ನು ಮಾಡಿಸುವದು. ಉದಾನವಾಯುವು ಅನ್ನರಸ ಆಹಾರ ಸ್ಥಾಪನೆಯನ್ನು ಮಾಡಿಸುತ್ತಿರುತ್ತದೆ. ಸಮಾನ ವಾಯುವು ಅನ್ನರಸವನ್ನು ಶರೀರದಲ್ಲೆಲ್ಲ ವ್ಯಾಪಿಸಿ ರೋಮನಾಳಂಗಳಿಗೆ ಸಹ ಹಂಚಿಕ್ಕುತ್ತಿರುತ್ತದೆ. ಹೀಗೆ ವಾಯುಗಳು ಶರೀರದಲ್ಲಿರುವ ಇಂದ್ರಿಯಗಳನ್ನು ಪರಸ್ಪರ ಸಂಬಂಧಿಸಿ ಅವವುಗಳ ಕಾರ್ಯಗಳಿಗೆ ಸಹಾಯಕವಾಗಿ ವರ್ತಿಸುತ್ತವೆ.

(೫) ಕರಣ ಚತುಷ್ಟಯಗಳು ಮತ್ತು ಜೀವಃ— ಈ ಐದು ಐದನೆಯ ವರ್ಗದಲ್ಲಿ ಬರುವವು. ಇವು ಅಹಂಕಾರ, ಚಿತ್ತ, ಬುದ್ಧಿ, ಮನ ಇವುಗಳಿದ್ದು ಇವುಗಳಲ್ಲದೆ ಜೀವನೂ ಇವುಗಳಲ್ಲಿ ಬರುತ್ತಾನೆ. ಈ ಯಾವತ್ತು ತತ್ವಗಳು ಮನುಷ್ಯನ ಕಾರ್ಯಗಳಿಗೆ ಮೂಲ ಕಾರಣವಾಗಿ ಅವನಿಗೆ ಪ್ರೇರಣೆಯನ್ನುಂಟು ಮಾಡುತ್ತ ವ್ಯವಹರಿಸುತ್ತವೆ.

ಈ ೨೫ ತತ್ವಗಳೆಲ್ಲವೂ ದೇಹಕ್ಕೆ ಸಂಬಂಧಪಟ್ಟಿರುವುದರಿಂದ ಆತ್ಮ ತತ್ವಗಳಾಗಿವೆ. ಇವುಗಳಿಂದ ಮನುಷ್ಯನು ಕೂಡಿಕೊಂಡು ಜಗತ್ತಿನಲ್ಲಿ ಅನೇಕ ಬಗೆಯ ಕಾರ್ಯಗಳನ್ನು ಮಾಡುತ್ತಾನೆ.

## ವಿದ್ಯಾತತ್ವಗಳು.

ಈ ತತ್ವಗಳು ಒಟ್ಟು ೧೦ ಇದ್ದು ಅವುಗಳಲ್ಲಿ ಎರಡು ವರ್ಗಗಳು ಕಲ್ಪಿಸಲ್ಪಟ್ಟಿವೆ. ಅವು ಸಾದಾಖ್ಯಗಳು ಮತ್ತು ಕಲೆಗಳಿರುತ್ತವೆ. ಈ ಪ್ರತಿಯೊಂದರಲ್ಲಿ ಐದು ಐದು ತತ್ವಗಳಿರುತ್ತವೆ.

ಸಾದಾಖ್ಯಗಳು:— ಇವು ಕರ್ಮಸಾದಾಖ್ಯ ಕರ್ತೃಸಾದಾಖ್ಯ, ಮೂರ್ತಿಸಾದಾಖ್ಯ, ಅಮೂರ್ತಿಸಾದಾಖ್ಯ ಮತ್ತು ಶಿವಸಾದಾಖ್ಯ ಇವುಗಳು ಇರುತ್ತವೆ.

ಕಲೆಗಳು:— ಇವು ನಿವೃತ್ತಿಕಲೆ, ಪ್ರತಿಷ್ಠಾಕಲೆ, ವಿದ್ಯಾಕಲೆ, ಶಾಂತಿಕಲೆ, ಶಾಂತ್ಯಾತೀತಕಲೆ ಇವುಗಳಿರುತ್ತವೆ.

ಜಗತ್ತಿನ ರಚನೆಯ ಕಾಲದಲ್ಲಿಯೂ ಕೂಡ ಈ ತತ್ವಗಳು ಹೊರಹೊಮ್ಮಿ ಪದಾರ್ಥಗಳ ಅಸ್ತಿತ್ವಕ್ಕೆ ಕಾರಣವಾಗುತ್ತವೆ ಎಂಬದನ್ನು ನಾವು ವಚನಕಾರರ ಉಕ್ತಿಗಳಿಂದಲೇ ಇಲ್ಲಿ ವಿವರಿಸುವದು ಯೋಗ್ಯವಾಗಿದ್ದು ಅವುಗಳನ್ನು ವಾಚಕರು ವಿಚಾರ ಮಾಡಿ ತಿಳಿಯಬೇಕು.

ಕರ್ಮಸಾದಾಖ್ಯ:— ಕುಚಿತ್ತ ಮುಂದುಗೊಂಡು ಅಜ್ಞಾನ ದೆಸೆಯಿಂದ ಗುರುಭಕ್ತಿಯ ಮಾಡ ಗುರುಕರುಣವ ಪಡೆದು ಬಹು ಜನ್ಮದ ಘಾತಕ ಸೂತಕ ಕರ್ಮಾದಿಗಳ ಕಳೆಯಬೇಕೆಂಬವರಿಗೆ ಅಸಾಧ್ಯವಾಗಿ ಸರ್ವಸಂಗ ಪರಿತ್ಯಾಗದಿಂದ ನಿರ್ವಾಣಿಯಾಗಿ ಸಂಚಿತ ಪ್ರಾರಬ್ಧ ಆಗಾಮಿ ಎಂಬ ಕರ್ಮತ್ರಯಂಗಳನ್ನು ನಷ್ಟವ ಮಾಡಿದ ಜ್ಞಾನಕಲಾತ್ಮಂಗೆ ಕರ್ಮತ್ರಯವ ನೀಗಿರುವದು ಎಂಬುದೀಗ ಕರ್ಮಸಾದಾಖ್ಯವೆಂಬ ಶಬ್ದಕ್ಕರ್ಥ.

ಕರ್ತೃಸಾದಾಖ್ಯ:— ಕುಬುದ್ಧಿ ಅತಿಯಾಸೆ ಅಜ್ಞಾನ ಮುಂದುಗೊಂಡು ಲಿಂಗಪೂಜೆಯ ಮಾಡಿ ಲಿಂಗದೊಲುಮೆಯ ಪಡೆದು ಷಣ್ಮತಂಗಳಿಗೆ ಉಪರಿಯಾಗಿರಬೇಕೆಂಬುವರಿಗೆ ಅಸಾಧ್ಯವಾಗಿ ಕಿಂಕುರ್ವಾಣ ಸತ್ಕಾಯಕ, ಸದ್ಭಕ್ತಿ, ಸದಾಚಾರ ಮುಂದುಗೊಂಡು ನಿಷ್ಪ್ರಪಂಚಿಯಾಗಿ ಚಿದಂಗ ಚಿದ್ಘನಲಿಂಗದ ವರ್ಮಾವರ್ಮವನರಿದು ಅರ್ಚಿಸಿ ಲಿಂಗಾಂಗ ಸಂಬಂಧಿಯಾದ ಲಿಂಗನಿಷ್ಠಾಪರತ್ವದಿಂದ ಇಹಪರಂಗಳಿಗ ಮೀರಿ ತೋರುವದೆಂಬುದೀಗ ಕರ್ತೃಸಾದಾಖ್ಯವೆಂಬುದೀಗ ಕರ್ತೃಸಾದಾಖ್ಯವೆಂಬ ಶಬ್ದಕ್ಕರ್ಥ.

ಮೂರ್ತಿಸಾದಾಖ್ಯ:— ಅಹಂಬ್ರಹ್ಮವೆಂಬ ಅಹಂಕಾರದಿಂದ ಅಷ್ಟ ಭೋಗದ ಮದ ತಲೆಗೇರಿ ಅಜ್ಞಾನ ಮುಂದುಗೊಂಡು ದಾಸೋಹವ ಮಾಡಿ ಉಪೇಯಾದ ಸೋಹಂ ಭಾವಿಯಾದೆನೆಂಬವರಿಗೆ ಅಸಾಧ್ಯ ವಾಗಿ ಇಂದು ನಾಳಿಂಗೆಂಬ ಸಂದೇಹದ ಕೀಲನು ಕಳೆದು ನಿರಹಂಕಾ ರಿಯಾಗಿ ಈಷಣತ್ರಯದಲಾಸೆಯು ಮಾಡದೆ ನಿರಾಶಿಕನಾಗಿ ತನುವು ನವ ಸಮರ್ಪಿಸಿ ಸೋಹಂಭಾವಿಯಾಗಿರುವದು ಎಂಬುದೀಗ ಮೂರ್ತಿ ಸಾದಾಖ್ಯವೆಂಬ ಶಬ್ದಕ್ಕರ್ಥ.

ಅಮೂರ್ತಿಸಾದಾಖ್ಯ:— ಭೋರೆಂಬ ನಾದವೇ ಬ್ರಹ್ಮನೆಂಬ ಕುಮ ನದಿಂದ ತೊಳಲುವವರಿಗೆ ಅಂತರಂಗದ ಪ್ರಸನ್ನಮೂರ್ತಿ ಪ್ರಾಣಲಿಂಗವು ಅಸಾಧ್ಯವಾಗಿ ನಿಜನೈಷ್ಠೆ ಕರಿಗೊಂಡು ಸ್ವಯಂಚರಪರವೇ ತಾನಾಗಿ ಆ ಅರಿದುದೇ ತಾನು ತನ್ನರಿವು ಶಿವತತ್ವವೆಂದು ತಿಳಿದು ಪರಮಾಮೃತ ಸ್ವರೂಪವಾಗಿ ಜ್ಯೋತಿರ್ಮಯ ಲಿಂಗದಲ್ಲಿ ಬೆರೆದಿರುವದು ಎಂಬುದೀಗ ಅಮೂರ್ತಿ ಸಾದಾಖ್ಯವೆಂಬುದೀಗ ಅಮೂರ್ತಿಸಾದಾಖ್ಯವೆಂಬ ಶಬ್ದಕ್ಕರ್ಥ.

ಶಿವಸಾದಾಖ್ಯ:— ಕುಲಛಲವೆಂಬ ನಾಮರೂಪು ಕ್ರಿಯೆಗಳಿಂದ ಮತಿಗೆಟ್ಟು ಅಜ್ಞಾನಪಾಶಬದ್ಧತ್ವದಿಂದೆ ಶಿವಾಚಾರ ಮಾರ್ಗವನರಿಯದೆ ವೀರಶೈವದ ಗೊತ್ತು ತಿಳಿಯದೆ ಶಿವಭಕ್ತರೆಂದು ವಾಗ್ಜಾಲದಿಂದ ನುಡಿವ ಜಾಣರಿಗೆ ಅತ್ಯತಿಷ್ಠದ್ದಶಾಂಗುಲದಿಂದ ಸಾಧ್ಯವಾಗಿ ಶ್ರೀಗುರು ಕರುಣಿಸಿ ಕೊಟ್ಟ ಲಿಂಗಾಂಗ ವಿಚಾರವ ನಿಜ ಜಂಗಮದಿಂದೆ ಬೆಸ ಗೊಂಡು ಶರಣಸತಿ ಲಿಂಗಪತಿಭಾವದಿಂದೆ ನಡೆದಂತೆ ನುಡಿದು ನುಡಿ ದಂತೆ ನಡೆದು ಲಿಂಗಾಚಾರದಲ್ಲಿ ಎನೆಹಳಚದೆ ಪರತತ್ವ ಜ್ಯೋತಿ ರ್ಮಯ ಜಂಗಮದ ಕರುಣಾಜಲ ಕೃಪಾಪ್ರಸಾದದಲ್ಲಿ ಮುಳುಗಿರು ವುದು ಎಂಬುದೀಗ ಶಿವಸಾದಾಖ್ಯವೆಂಬ ಶಬ್ದಕ್ಕರ್ಥ.

ಈ ವಚನಗಳಲ್ಲಿ ೧೦ ವಿದ್ಯಾತತ್ವಗಳನ್ನು ಒಳಕೊಳ್ಳಲು ಹೇಗೆ ಆಚ ರಿಸಬೇಕು, ಹೀಗೆ ಆಚರಿಸಿದ್ದಾದರೆ ಅವನಲ್ಲಿ ಬೇರೆ ಬೇರೆ ಪ್ರಗತಿಗಳು ಹೇಗುಂಟಾಗುತ್ತವೆ ಎಂಬುದು ವಿಶದವಾಗಿ ವಿವರಿಸಲ್ಪಟ್ಟಿದೆ. ಈ ಪ್ರತಿ ಯೊಂದು ವಚನದಲ್ಲಿ ಬಹು ಆಳವಾದ ವಿಚಾರಗಳು ಅಡಕವಾಗಿವೆ. ಕರ್ಮಸಾದಾಖ್ಯದಲ್ಲಿ ಕರ್ಮಗಳು ಹೇಗೆ ದೂರೀಕರಿಸಲ್ಪಡಬೇಕೆಂಬುದು ಹೇಳಲ್ಪಟ್ಟಿದೆ. ಕರ್ತೃಸಾದಾಖ್ಯದಲ್ಲಿ ಕರ್ಮಗಳು ನಷ್ಟವಾದ ಬಳಿಕ

ಲಿಂಗನಿಷ್ಠಾಪರತ್ವದಿಂದ ಹೇಗೆ ಆಚರಿಸಬೇಕೆಂಬುದು ಹೇಳಲ್ಪಟ್ಟಿದೆ. ಮೂರ್ತಿಸಾದಾಖ್ಯ ಮತ್ತು ಅಮೂರ್ತಿಸಾದಾಖ್ಯಗಳಲ್ಲಿ ಭಕ್ತನು ಸಮರ್ಪಣಭಾವವುಳ್ಳವನಾಗಿ ಲಿಂಗದೊಡನೆ ಹೇಗೆ ಬೆರೆಯಬೇಕೆಂಬುದು ಹೇಳಲ್ಪಟ್ಟಿದೆ. ಹೀಗೆ ಆಚರಿಸುವವನು ಅಮೂರ್ತಿ ಸಾದಾಖ್ಯವನ್ನು ಹೊಂದುತ್ತಾನೆ. ಆಮೇಲೆ ಶಿವಸಾದಾಖ್ಯವನ್ನು ಹೊಂದಲು ಅರ್ಹನಾಗುವನು. ಆಗ ಅವನು ಜ್ಯೋತಿರ್ಮಯ ಪರತತ್ವ ಪ್ರಸಾದದಲ್ಲಿ ಮುಳುಗುವನು. ಇವು ಪಂಚಸಾದಾಖ್ಯಗಳು. ಇವು ವಿದ್ಯಾತತ್ವಗಳೆಂದೆನಿಸಿಕೊಳ್ಳುತ್ತವೆ.

ಹೀಗೆ ಸಾದಾಖ್ಯಗಳನ್ನು ಒಳಕೊಂಡ ಹಾಗೆ ಅವನಲ್ಲಿ ಕ್ರಮವಾಗಿ ಪಂಚ ಕಲೆಗಳು ಅಥವಾ ಶಕ್ತಿಗಳು ಉತ್ಪನ್ನವಾಗುತ್ತವೆ. ಕರ್ಮಸಾದಾಖ್ಯದಲ್ಲಿ ನಿವೃತ್ತಿಕಲೆಯು, ಕರ್ತೃ ಸಾದಾಖ್ಯದಲ್ಲಿ ಪ್ರತಿಷ್ಠಾಕಲೆಯು ಮೂರ್ತಿಸಾದಾಖ್ಯದಲ್ಲಿ ವಿದ್ಯಾಕಲೆಯು, ಅಮೂರ್ತಿಸಾದಾಖ್ಯದಲ್ಲಿ ಶಾಂತಿಕಲೆಯು ಮತ್ತು ಕಡೆಯದಾದ ಶಿವಸಾದಾಖ್ಯದಲ್ಲಿ ಶಾಂತ್ಯಾತೀತ ಕಲೆಯು ಹೀಗೆ ಆಯಾ ಕಲೆಗಳು ಅನುಕ್ರಮವಾಗಿ ಉತ್ಪನ್ನವಾಗುತ್ತವೆ. ಹೀಗೆ ಇವೆಲ್ಲವುಗಳೂ ಕೂಡಿ ಹತ್ತು ವಿದ್ಯಾತತ್ವಗಳಾಗುತ್ತವೆ. ಈ ತತ್ವಗಳಮೂಲಕ ಮನುಷ್ಯನು ಉನ್ನತಸ್ಥಾನಗಳನ್ನು ಕ್ರಮೇಣ ಹೊಂದುತ್ತ ಹೋಗುತ್ತಾನೆ.

ಮೊದಲು ಆತ್ಮತತ್ವಗಳಲ್ಲಿ ಉಚ್ಚತಮವಾದ ವರ್ತನೆ, ನಡೆನುಡಿಗಳನ್ನು ಹೊಂದಿ ಶ್ರೇಷ್ಠವಾದ ಕಲೆಗಳನ್ನು ತಂದುಕೊಳ್ಳಬೇಕು. ಈ ಕಲೆಗಳು ನಿವೃತ್ತಿ, ಪ್ರತಿಷ್ಠಾ ಮೊದಲಾದವುಗಳೇ ಇರುತ್ತವೆ. ಈ ಕಲೆಗಳು ಉದಯವಾದ ಹಾಗೆ ಮನುಷ್ಯನು ಆಯಾ ಸಾದಾಖ್ಯಗಳೊಡನೆ ಕ್ರಮವಾಗಿ ಕೂಡತೊಡಗುವನು. ಈ ಸಾದಾಖ್ಯಗಳು ಯಾವ ಯಾವ ತರಗತಿಗಳಿಂದ ಉಚ್ಚ ಸ್ಥಾನಗಳನ್ನು ಹೊಂದುತ್ತ ಹೋಗುತ್ತವೆಂಬುದು ಮೇಲೆಯೇ ಹೇಳಲ್ಪಟ್ಟಿದೆ. ಹೀಗೆ ಆಯಾ ಸಾದಾಖ್ಯಗಳೊಡನೆ ಕೂಡುತ್ತ ಹೋದಹಾಗೆ ಮನುಷ್ಯನಲ್ಲಿಯ ಪಂಚಭೂತಗಳು ಬಯಲಾಗುತ್ತ ಹೋಗುತ್ತವೆ. ಹೀಗೆ ಬಯಲಾದ ಕೂಡಲೆ "ಮಹಾಘನ ಪರಾತ್ಪರವಪ್ಪ ದಿವ್ಯಲಿಂಗವು ವಾರಿಕಲ್ಲು ಕರಗಿ ನೀರಾದಂತೆ ತನ್ನ ಪರಮಾನಂದದಿಂದವೇ ಸರ್ವಶೂನ್ಯವಾಯಿತ್ತು" ಎಂಬ ಭಾವವನ್ನು ಅನೇಕ ವಚನಕಾರರು ತಮ್ಮ ನುಡಿಗಳಲ್ಲಿ ಹೇಳಿರುತ್ತಾರೆ.

ವಚನಕಾರರಲ್ಲಿ ಅಗ್ರಸ್ಥಾನವನ್ನು ಹೊಂಡಿದ ಅಲ್ಲಮಪ್ರಭುವಿನ ವಾಕ್ಯವು ಈ ವಿಷಯದ ಬಗ್ಗೆ ಇರುವದು ಏನಂದರೆಃ—

“ಪ್ರಥಮದಲ್ಲಿ ವಸ್ತು ಏನೇನೂ ಇಲ್ಲದಂದು ಮಹಾಘನಶೂನ್ಯ ಬ್ರಹ್ಮವಾಗಿದ್ದಡೂ ಅಂತಿರ್ದ ಪರವಸ್ತು ತಾನೇ ತನ್ನ ದಿವ್ಯಾನಂದ ಸ್ವಲೀಲಾ ಭಾವದಿಂದಾದುದು. ಆತ್ಮತತ್ವವೆಂಬ ಅಂಗಸ್ಥಲ, ಅಂತಪ್ಪಜೀವಾತ್ಮನೆಂಬ ಅಂಗಸ್ಥಲಕ್ಕೆ ಸೇರಿದ ತತ್ವಂಗಳಿಪ್ಪತ್ತೈದು, ಅವಾವೆಂದಡೆ, ಶ್ರೋತ್ರಾದಿ ಜ್ಞಾನೇಂದ್ರಿಯಂಗಳೈದು, ನಾಗಾದಿ ಕರ್ಮೇಂದ್ರಿಯಂಗಳೈದು, ಪ್ರಾಣಾದಿ ವಾಯುಗಳೈದು, ಶಬ್ದಾದಿ ವಿಷಯಂಗಳೈದು, ಮನ ಬುದ್ಧಿ ಚಿತ್ತಹಂಕಾರ ಜೀವಂಗಳೈದು ತನ್ನೊಳಗೆ ಸಾಮರಸ್ಯೈಕ್ಯವನ್ನೈದಲೋಸ್ಕರ ಭಕ್ತಿತದರ್ಥವಾಗಿ ಮಹಾಘನ ಪರಾತ್ಪರವಪ್ಪ ದಿವ್ಯಲಿಂಗವು ಹನ್ನೊಂದು ತತ್ವವಾಯಿತ್ತು. ಹನ್ನೊಂದು ತತ್ವವಾದ ಪರಿಕ್ರಮವೆಂತೆಂದೊಡೆ, ಶಾಂತ್ಯಾದಿ ಶಕ್ತಿಗಳೈದು ಶಿವಾದಿಕರ್ತೃಗಳೈದು ಪರಶಿವತತ್ವ ಒಂದು ಇಂತೀ ಅಂಗತತ್ವ ಇಪ್ಪತ್ತೈದು, ಲಿಂಗತತ್ವ ಹನ್ನೊಂದು, ಅಂಗತತ್ವ ಲಿಂಗತತ್ವವೆಂಬ ಉಭಯತತ್ವ ಮೂವತ್ತಾರು, ಇಂತಿವರ ಸಾಮರಸ್ಯದ ಐಕ್ಯವೆಂತುಟಯ್ಯ ಎಂದೊಡೆ ನಿವೃತ್ತಿಶಕ್ತಿಯನ್ನೈದಿ ವಾಗಾದಿ ಕರ್ಮೇಂದ್ರಿಯಗಳೈದು ಕರ್ಮಸಾದಾಖ್ಯವನೊಡಗೂಡಿದಲ್ಲಿ ಪೃಥ್ವೀತತ್ವ ಬಯಲಾಯಿತ್ತು. ಪ್ರತಿಷ್ಠಾಶಕ್ತಿಯನ್ನೈದಿ ಶಬ್ದ ವಿಷಯಗಳೈದು ಕರ್ತೃ ಸಾದಾಖ್ಯವನೊಡಗೂಡಿದಲ್ಲಿ ಅಪ್ಪು ತತ್ವ ಬಯಲಾಯಿತ್ತು. ವಿದ್ಯಾಶಕ್ತಿಯನ್ನೈದಿ ಶ್ರೋತ್ರಾದಿ ಜ್ಞಾನೇಂದ್ರಿಯಗಳೈದು ಮೂರ್ತಿಸಾದಾಖ್ಯವನೊಡಗೂಡಿದಲ್ಲಿ ತೇಜತತ್ವ ಬಯಲಾಯಿತ್ತು. ಶಾಂತಿಶಕ್ತಿಯನ್ನೈದಿ ಪ್ರಾಣಾದಿ ವಾಯುಗಳೈದು ಅಮೂರ್ತಿ ಸಾದಾಖ್ಯವನೊಡಗೂಡಿದಲ್ಲಿ ವಾಯುತತ್ವ ಬಯಲಾಯಿತ್ತು. ಶಾಂತ್ಯಾತೀತ ಶಕ್ತಿಯನ್ನೈದಿ ಮನ ಬುದ್ಧಿ ಚಿತ್ತಹಂಕಾರ ಜೀವಂಗಳೈದು ಶಿವಸಾದಾಖ್ಯವನೊಡಗೂಡಿದಲ್ಲಿ ಆಕಾಶತತ್ವ ಬಯಲಾಯಿತ್ತು. ಇಂತೀ ಪಂಚವಿಂಶತಿ ತತ್ವಂಗಳು ಲಿಂಗೈಕ್ಯವಾಗಲೊಡನೆ ಆ ಲಿಂಗತತ್ವ ಹನ್ನೊಂದು ತಾವು ಒಂದೊಂದನೊಡಗೂಡಿ ಏಕಾರ್ಥವಾದಲ್ಲಿ ಕುಳಸ್ಥಳವಡಗಿತು. ಇಂತೀ ಕುಳಸ್ಥಳವಡಗಲೊಡನೆ ಮಹಾಘನ ಪರಾತ್ಪರವಪ್ಪ ದಿವ್ಯಲಿಂಗವು ವಾರಿಕಲ್ಲು ಕರಗಿ ನೀರಾದಂತೆ ತನ್ನ ಪರಮಾನಂದದಿಂದಲೇ ಸರ್ವಶೂನ್ಯವಾಯಿತ್ತು. ಇಂತೀ ಅಂಗತತ್ವ ಇಪ್ಪತ್ತೈದು ಲಿಂಗತತ್ವ ಹನ್ನೊಂದು

ಇಂತೀ ಉಭಯತತ್ವ ಮೂವತ್ತಾರು ಏಕಾರ್ಥವಾಗಿ ಸರ್ವಶೂನ್ಯವನ್ನೈದಿ ಪರಿಕ್ರಮದ ನಿರ್ಣಯದ ಬೆಡಗು ತತ್ವಮಸ್ಯಾದಿ ವಾಕ್ಯಾರ್ಥಂಗಳಲ್ಲಿ ಕಾಣಲಾಯಿತ್ತು. ತತ್ ಪದವೇ ಲಿಂಗ ತ್ವಂ ಪದವೇ ಅಂಗ ಈ ಎರಡರ ಐಕ್ಯವೇ ಅಸಿ ಪದವೆಂದುದಾಗಿ ಇಂತು ಸಕಲವಾಗಬಲ್ಲ, ನಿಃಕಲವಾಗಬಲ್ಲ, ಸಕಲನಿಃಕಲಾತೀತನಾಗಿ ಏನೂ ಇಲ್ಲದ ಮಹಾ. ಘನ ಶೂನ್ಯಬ್ರಹ್ಮವಾಗಿರಬಲ್ಲನಯ್ಯ ನಮ್ಮ ಗುಹೇಶ್ವರಲಿಂಗವು"

ಈ ಪ್ರಕಾರ ಅಲ್ಲಮಪ್ರಭು ೩೬ ತತ್ವಗಳಾವವು, ಅವುಗಳ ಕಾರ್ಯಗಳೇನು, ಅವುಗಳ ಕೂಡುವಿಕೆಯು ಹೇಗಾಗುತ್ತದೆ ಎಂಬದನ್ನು ಬಹು ವಿಶದವಾಗಿ ವಿವರಿಸಿದ್ದಾನೆ.

ಈ ಪ್ರಕಾರ ವಚನಕಾರರು ೩೬ ತತ್ವಗಳನ್ನು ಷಟ್‌ಸ್ಥಲಕ್ಕೆ ಸಂಬಂಧಿಸಿ ಅವುಗಳಮೂಲಕ ಲಿಂಗಾಂಗ ಸಾಮರಸ್ಯವನ್ನು ಹೇಗೆ ಹೊಂದಬೇಕೆಂಬುದನ್ನು ವಿವರಿಸಿದ್ದಾರೆ. ವಚನಕಾರರಿಗೂ ಆಗಮವಾದಿಗಳಿಗೂ ಇವರಲ್ಲಿ ಕೆಲವು ಮತಾಂತರಗಳಿರುವದು ಕಂಡುಬರುತ್ತದೆ. ಇವುಗಳನ್ನು ತಿಳಿಯುವದು ಬಹು ಬೋಧಪ್ರದವಾಗಿದೆ. ಇದರಿಂದ ವಚನಕಾರರು ಆಗಮ ಮಾರ್ಗದಲ್ಲಿ ಹೇಗೆ ಬದಲಾವಣೆಮಾಡಿ ತಮ್ಮ ಮತವನ್ನು ಪ್ರಸ್ಥಾಪಿಸಿದ್ದಾರೆಂಬುದು ವ್ಯಕ್ತವಾಗುತ್ತದೆ. ಈ ವಿಷಯವನ್ನು ನಾವು ಕ್ರಮಶಃ ವಿವರಿಸುತ್ತ ಹೋಗುವೆವು.

# ಬಸವೇಶ್ವರನ ಘನತೆ.

(ಲೇಖಕಃ— ಎಸ್. ವ್ಹಿ. ಹಂಜಿ, ಬಿ. ಎ. ಬೆಳಗಾವ.)

ಬಸವೇಶ್ವರನು ಜಗತ್ತಿನ ಮಹಾಪುರುಷರಲ್ಲಿ ಒಬ್ಬನೆಂದು ಹೇಳಲಿಕ್ಕೆ ಏನೂ ಅಡ್ಡಿಯಿಲ್ಲ. ಇವನು ಗತಿಸಿಹೋಗಿ ಸುಮಾರು ೮೦೦ ವರ್ಷಗಳಾದರೂ ಸಹ ಇವನ ಹೆಸರು ಅಚ್ಚಳಿಯದೆ ಸ್ವಚ್ಛವಾಗಿದ್ದದ್ದನ್ನು ನೋಡಿದರೆ ಇವನು ಮಾಡಿದಂಥ ಕಾರ್ಯಗಳು ಸಾಮಾನ್ಯವಲ್ಲವೆಂದು ಹೇಳಬಹುದು. ಇವನು ಇದ್ದ ಕಾಲವು ಇವನ ಕೀರ್ತಿಯನ್ನು ಎಲ್ಲ ಕಡೆಗೂ ಹಬ್ಬಿಸಲಿಕ್ಕೆ ಅನಾನುಕೂಲವಾಗಿತ್ತು. ಆದರೂ ಕೂಡ ಕಲ್ಯಾಣದಲ್ಲಿಯೇ ನಿಂತು ಸುತ್ತುಮುತ್ತಿನ ಎಲ್ಲ ನಾಡುಗಳಿಂದ ಜನರನ್ನು ಅವರಲ್ಲಿ ಮುಖ್ಯವಾಗಿ ಅಲ್ಲಮಪ್ರಭು, ಸಿದ್ಧರಾಮೇಶ್ವರ, ಮಹಾದೇವಿಯಕ್ಕ ಮೊದಲಾದ ಸುಪ್ರಸಿದ್ಧ ವ್ಯಕ್ತಿಗಳನ್ನು ತನ್ನ ಭಕ್ತಿಯ ಪ್ರಭಾವದ ಮೂಲಕ ಎಳೆದುಕೊಂಡು ಅನೇಕ ಕಾರ್ಯಗಳನ್ನು ನೆರವೇರಿಸಿದನು. ನಮ್ಮ ಜನರ ಅಜ್ಞಾನದ ಇಲ್ಲವೆ ಐತಿಹಾಸಿಕ ಶೋಧದ ಅಭಾವದ ಮೂಲಕ ಬಸವೇಶ್ವರನ ನಿಜವಾದ ಚರಿತ್ರವು ನಮಗೂ ಕೂಡ ಗೊತ್ತಿಲ್ಲದೆ ಇರುವದು ನಮ್ಮ ದುರ್ದೈವವೇ ಸರಿ. ಆದರೂ ಇತ್ತಿತ್ತಲಾಗಿ ಐತಿಹಾಸಿಕ ಶೋಧವು ಭರದಿಂದ ನಡೆದದ್ದರಿಂದ ಬಸವೇಶ್ವರನ ಚರಿತ್ರದ ಸಂಬಂಧ ಗ್ರಂಥಗಳು, ಪುರಾಣಗಳು, ವಚನಗಳು, ಶಿಲಾಶಾಸನಗಳು, ತಾಡವಾಲೆಯ ಪತ್ರಗಳು ಮತ್ತು ಕೈಬರಹದ ಪತ್ರಿಕೆಗಳು ದೊರೆತು ಅವನ ಬಗ್ಗೆ ಇದ್ದ ಅಜ್ಞಾನವು ಏನೋ ಸ್ವಲ್ಪ ದೂರವಾಗುತ್ತಲಿದೆ. ಅವನ ವಿಷಯವಾಗಿ ಪಕ್ಷಪಾತವಿಲ್ಲದೆ ವಿಮರ್ಶಕ ಬುದ್ಧಿಯಿಂದ ಬರೆದ ಕೆಲವು ಗ್ರಂಥಗಳು ಅವನ ಘನತೆಯನ್ನು ಸ್ಪಷ್ಟವಾಗಿ ತೋರಿಸುತ್ತವೆ.

ಬಸವೇಶ್ವರನು ಚಿಕ್ಕಂದಿನಿಂದಲೇ ಧರ್ಮದ ನಿಜವಾದ ತತ್ವಗಳನ್ನು ಚನ್ನಾಗಿ ಅಭ್ಯಾಸ ಮಾಡಿ ಸರ್ವರಿಗೂ ಅನ್ವಯಿಸುವ ವೀರಶೈವ ಮತವನ್ನು ಪುನರುಜ್ಜೀವನಗೊಳಿಸಿದನು. ಧರ್ಮದ ಅವನ ಕಲ್ಪನೆಯು ಎಷ್ಟು ಉದಾತ್ತನಾಗಿತ್ತೆಂದು ಕೆಳಗಿನ ವಚನದಿಂದ ಕಂಡು ಬರುವದು

**"ದಯುವಿಲ್ಲದ ಧರ್ಮವದಾವುದಯ್ಯ? ದಯುವೇ ಬೇಕು ಸಕಲ ಪ್ರಾಣಿಗಳೆಲ್ಲರಲ್ಲಿ. ದಯುವೇ ಧರ್ಮದ ಮೂಲವಯ್ಯ!"...** ಉಳಿದ ಮತಗಳಲ್ಲಿಯು ಹಿಂಸೆ ಮೊದಲಾದ ಉಪಯೋಗವಿಲ್ಲದ ಅಂಶಗಳನ್ನು ಬಿಟ್ಟು ಉಪಯುಕ್ತವಾದ ಹೊಸತತ್ವಗಳನ್ನು ಸೇರಿಸಿ ಸರ್ವಸಂಗ್ರಾಹ್ಯವಾದ ಈ ಮತವನ್ನು ಪ್ರಚಾರಗೊಳಿಸಿದನು. "ಸರ್ವಂ ಶಿವಮಯುಂ ಜಗತ್" ಎಂದು ಸಾರಿ ಲಿಂಗದೀಕ್ಷೆಯಾದ ಕೂಡಲೆ ಹಿಂದಿನ ಕರ್ಮಗಳು ಅಳಿಯುವವೆಂದು ಉಪದೇಶ ಮಾಡಿದನು. ಉಳಿದ ಮತಗಳು ಈ ಜನ್ಮದಲ್ಲಿಯು ಸುಖದುಃಖಗಳು ಪೂರ್ವಜನ್ಮದ ಕರ್ಮಗಳ ಫಲಗಳು ಎಂದು ಹೇಳಿದ್ದವು. ಅವು ಮುಗಿಯುವ ವರೆಗೆ ಮೋಕ್ಷ ಸಿಗುವದಿಲ್ಲೆಂದು ಸಾರಿದ್ದವು. ಆದರೆ ಬಸವೇಶ್ವರನು ಆಚಾರಕ್ಕೆ ಮಹತ್ವಕೊಟ್ಟು ಬೇಕಾದ ಮನುಷ್ಯನು ಸದಾಚಾರದಿಂದ ಈ ಲೋಕದಲ್ಲಿ ವರ್ತಿಸಿದರೆ ಅವನಿಗೆ ನಿಜವಾಗಿಯೂ ಮೋಕ್ಷವಾಗುವದೆಂದು ತಿಳಿಸಿಕೊಟ್ಟನು.

**"ಅಯ್ಯಾ ಎಂದರೆ ಸ್ವರ್ಗ, ಎಲವೋ ಎಂದರೆ ನರಕ."**
**"ಪುಣ್ಯ ಪಾಪಗಳೆಂಬವು ತಮ್ಮ ಇಷ್ಟವು ಕಂಡಿರಯ್ಯ"**
**"ಆಚಾರವೇ ಸ್ವರ್ಗ ಅನಾಚಾರವೇ ನರಕ."**

ಇವನ ಈ ನುಡಿಗಳಿಂದ ಸ್ವರ್ಗ ನರಕಗಳ ಕಲ್ಪನೆಯೂ ಸ್ವರ್ಗವನ್ನು ಪಡೆಯಲಿಕ್ಕೆ ನರಕವನ್ನು ತಪ್ಪಿಸಲಿಕ್ಕೆ ನಾವು ಪುಣ್ಯ ಮಾಡಬೇಕು, ಪಾಪವನ್ನು ಮಾಡಬಾರದು ಎಂಬ ವಿಚಾರವೂ ಮತ್ತು ಇವು ಪ್ರತಿಯೊಬ್ಬನ ಕೈಯಲ್ಲಿವೆ ಎಂಬ ನೂತನ ಮಾತೂ ಕಂಡುಬರುತ್ತವೆ. ಇವನು ಹಿಂದಿನ ವರ್ಣಾಶ್ರಮಗಳ ಪದ್ಧತಿಯನ್ನು ತೆಗೆದುಹಾಕಿ ಎಲ್ಲರೂ ಲಿಂಗದೀಕ್ಷೆಯಾಗಲಿಕ್ಕೆ ಯೋಗ್ಯರು ಮತ್ತು ಅವರೆಲ್ಲರು ಸಮಾನರು ಎಂಬ ಭಾವನೆಯನ್ನುಂಟು ಮಾಡಿದನು. ಇದರಿಂದ ಶೂದ್ರರಿಗೆ ಮತ್ತು ಉಳಿದ ಕೀಳು ಕುಲದವರಿಗೆ ಸಮಾಜದಲ್ಲಿ ಒಂದು ಉಚ್ಚ ಸ್ಥಾನವನ್ನು ಕಲ್ಪಿಸಿದನು. ಬಸವೇಶ್ವರನು ವೀರಶೈವ ಮತವನ್ನು ಪ್ರಸಾರಗೊಳಿಸುತ್ತ ಅದರ ಕೂಡ ಮತ್ತೊಂದು ಅದ್ಭುತ ಕಾರ್ಯವನ್ನು ನೆರವೇರಿಸಿದನು. ಅದೇ ಔದ್ಯೋಗಿಕ ಕ್ರಾಂತಿಯು. (*Industrial Revolution*). ಪ್ರತಿಯೊಬ್ಬ ವೀರಶೈವನು ಸ್ವಾವಲಂಬಿಯಾಗಿ ಒಂದು ಸ್ವಂತ ಉದ್ಯೋಗವನ್ನು ಮಾಡಿಯೇ ಉಪಜೀವಿಸಬೇಕೆಂದು ಕಟ್ಟುಮಾಡಿದನು. ಮತ್ತು

ಅದಕ್ಕೆ ಧಾರ್ಮಿಕ ಸ್ವರೂಪವನ್ನು ಕೊಟ್ಟು "ಕಾಯಕವೇ ಕೈಲಾಸ" ವೆಂದರೆ ಸ್ವಂತ ಉದ್ಯೋಗದಿಂದಲೇ ಮೋಕ್ಷವೆಂದು ಹೇಳಿದ್ದರಿಂದ ಎಲ್ಲರೂ ಸ್ವಂತ ಉದ್ಯೋಗಗಳನ್ನು ಮಾಡಹತ್ತಿದರು. ಈ ಉದ್ಯೋಗ ಗಳು ಮೊದಲು ಇದ್ದಿಲ್ಲವೆಂತಲ್ಲ. ಆದರೆ ಅವುಗಳಿಗೆ ಹೊಸ ಅರ್ಥ ಕೊಟ್ಟು ಅವುಗಳ ಮಹತ್ವವನ್ನು ತಿಳಿಸಿಕೊಟ್ಟದ್ದರಿಂದ ಮೊದಲು 'ಕೀಳು' ಎಂದು ತಿಳಿದು ಬಿಟ್ಟ ಉದ್ಯೋಗಗಳನ್ನು ಈಗ ಭರದಿಂದ ಮಾಡಹ ತ್ತಿದರು. ಇದರಿಂದ ವೀರಶೈವರಲ್ಲಿ ಎಲ್ಲ ತರದ ಉದ್ಯೋಗಗಳು ಬಂದು ಅನ್ಯಮತದವರಿಗೆ ಬಾಯಿ ತೆರೆಯದಂತಾಗಿ ವೀರಶೈವ ಸಮಾಜವು ಸರ್ವಾಂಗ ಪರಿಪೂರ್ಣವಾಯಿತು.

ಬಸವೇಶ್ವರನು ಎಲ್ಲರಿಗೂ ಲಿಂಗದೀಕ್ಷೆಯನ್ನು ಕೊಟ್ಟು ವೀರಶೈವ ಮತವನ್ನು ಪ್ರಚಾರ ಮಾಡುವಾಗ ಇನ್ನೊಂದು ಅಪೂರ್ವವಾದ ಸಾಹ ಸದ ಕಾರ್ಯವನ್ನು ಮಾಡಿದನು. ಬಹುಕಾಲ ಪರಂಪರೆಯಿಂದ ನಡೆದು ಬಂದ ಅಸಹ್ಯವಾದ ಪದ್ಧತಿಯನ್ನು ತೆಗೆದುಹಾಕಿದನು. ಒಮ್ಮೆ ಲಿಂಗ ದೀಕ್ಷೆಯಾದ ಕೂಡಲೆ ಹೊಲೆಯನೂ ಕೂಡ ಉಳಿದವರ ಸಮಾನನು ಎಂದು ಹೇಳಿ ಅಸ್ಪೃಶ್ಯನಿವಾರಣೆಯನ್ನು ಮಾಡಿದನು. ಅವರಿಗೆ ಮೊದಲು ಸಮಾಜದಲ್ಲಿ ಸ್ಥಾನವಿರಲಿಲ್ಲ. ಇಷ್ಟೇ ಅಲ್ಲ, ಅವರು ಊರ ಹೊರಗೆ ಹೊಲಸು ಸ್ಥಳದಲ್ಲಿದ್ದು ಹೇಳಿದ ಕೆಲಸಗಳನ್ನು ಮಾಡಿ, ಉಳಿದವರು ಉಪಯೋಗಿಸುವ ನೀರನ್ನು ಕೂಡ ಮುಟ್ಟದೆ ಬಹಳ ಹೀನಾವಸ್ಥೆಯ ಲ್ಲಿದ್ದರು. ಇವರನ್ನು ಬಸವೇಶ್ವರನು ಉದ್ಧಾರ ಮಾಡಿದನಲ್ಲದೆ ಹರ ಳಯ್ಯನೆಂಬ ಮೊಚ್ಚಿಗಾರನ ಮಗನಿಗೆ ಮಧುವಯ್ಯನೆಂಬ ಬ್ರಾಹ್ಮಣನ ಮಗಳನ್ನು ಮದುವೆ ಮಾಡಿ ಮಿಶ್ರವಿವಾಹವನ್ನು ಪ್ರಚಾರದಲ್ಲಿ ತಂದು ಒಳ್ಳೇ ಸಾಹಸದ ಕೃತ್ಯವನ್ನು ಮಾಡಿದನು. ಇದರಿಂದ ಅವನಿಗೆ ಅನೇ ಕರು ವಿರೋಧಿಗಳಾದರು. ಆದರೂ ವಿಶಾಲ ಹೃದಯವುಳ್ಳ ಬಸವೇ ಶ್ವರನು

**"ಕೊಲ್ಲುವನೇ ಮಾದಿಗ. ಹೊಲಸು ತಿಂಬುವನೇ ಹೊಲೆಯ. ಕುಲವೇನೋ, ಅವಂದಿರ ಕುಲವೇನೋ? ಸಕಲ ಜೀವಾತ್ಮರಿಗೆ ಲೇಸನೇ ಬಯಸುವ ನಮ್ಮ ಕೂಡಲಸಂಗನ ಶರಣರೇ ಕುಲಜರು"**

ಎಂದು ಹೇಳಿ ಅಸ್ಪೃಶ್ಯರ ಉದ್ಧಾರವನ್ನು ಆಗಲೇ ಮಾಡಿದನು.

ಇನ್ನು ಬಸವೇಶ್ವರನು ಸ್ತ್ರೀಯರ ಉನ್ನತಿಗಾಗಿ ಏನು ಮಾಡಿದ ನೆಂದು ನೋಡೋಣ. ನಿಜವಾಗಿ ಇವನಲ್ಲಿ ಅವರ ಬಗ್ಗೆ ಬಹಳ ಉಚ್ಚ ವಿಚಾರಗಳಿದ್ದವು. ಪುರುಷನೇ ದೊಡ್ಡವನು, ಅವನೇ ದೀಕ್ಷೆಗೆ ಯೋಗ್ಯನು, ಅವನ ಮುಖಾಂತರವೇ ಸ್ತ್ರೀಯಳು ಮೋಕ್ಷವನ್ನು ಪಡೆ ಯಬೇಕು ಎಂಬ ಕೀಳು ವಿಚಾರಗಳನ್ನು ತೆಗೆದುಹಾಕಿ ಸ್ತ್ರೀಯರು ಪುರುಷರ ಸಮಾನರು, ಅವರೂ ದೀಕ್ಷೆಗೆ ಯೋಗ್ಯರು, ಮತ್ತು ಮೋಕ್ಷ ವನ್ನೂ ಮತ್ತು ತಮ್ಮ ಪತಿಗಳ ಸದ್ಗತಿಯನ್ನೂ ಪಡೆಯಲು ಸಮ ರ್ಥರು ಎಂದು ಹೇಳಿ ಅವರ ಉನ್ನತಿಗೆ ಪ್ರೋತ್ಸಾಹನ ಕೊಟ್ಟನು. ಗಂಡಹೆಂಡರಿಬ್ಬರೂ ಒಬ್ಬರಿಗೊಬ್ಬರು ಸಹಾಯಕರಾಗಿ ಸದ್ಗತಿಯನ್ನು ಪಡೆಯಬೇಕೆಂದು ಬೋಧಿಸಿದನು.

ಕೊನೆಗೆ ಬಸವೇಶ್ವರನು ಕನ್ನಡ ಸಾಹಿತ್ಯಸೇವೆಯನ್ನು ಮಾಡಿದ್ದಾ ನೆಂದು ಹೇಳಿದರೆ ನಮ್ಮ ಆಧುನಿಕ ಸಾಹಿತಿಗಳು ಬೆರಗಾಗಬಹುದು. ಅವನು ಸಾಹಿತ್ಯಸೇವೆಯನ್ನು ಮಾಡಬೇಕೆಂದು ಹೊರಟವನಲ್ಲ. ಆದರೆ ಉಳಿದ ಅವನ ಕಾರ್ಯಗಳೊಡನೆ ಸಾಹಿತ್ಯಸೇವೆಯು ಸಹಜವಾಗಿಯೇ ಆಗಿಹೋ ಯಿತು. ಅವನು ವೀರಶೈವ ಮತದ ತತ್ವಗಳನ್ನು ಪ್ರಚಾರ ಮಾಡುವಾಗ ಅವನ ಮುಂದೆ ಸಂಸ್ಕೃತ ಬಲ್ಲ ಪಂಡಿತರಿದ್ದರೂ ಸಾಮಾನ್ಯ ಜನರು ಕೂಡ ಅಸಂಖ್ಯಾತರಾಗಿದ್ದರು. ಇಂಥವರಿಗೆ ಸಂಸ್ಕೃತದಲ್ಲಿ ಹೇಳಿದರೆ ಏನು ತಿಳಿ ಯಬೇಕು? ಆದುದರಿಂದ ಅವರ ಸಾಮಾನ್ಯ ಭಾಷೆಯಾದ ಕನ್ನಡದಲ್ಲಿ ಸುಲಭವಾದ ಶಬ್ದಗಳನ್ನು ಉಪಯೋಗಿಸಿ ಸಹಜವಾಗಿ ತಿಳಿಯುವ ಸರಳ ವಾದ ಶೈಲಿಯಿಂದ ತನ್ನ ವಿಚಾರಗಳನ್ನು ತಿಳಿಸಿದನು. ದೊಡ್ಡ ದೊಡ್ಡ ತತ್ವಜ್ಞಾನದ ವಿಚಾರಗಳನ್ನು ಕೂಡ ತಿಳಿಗನ್ನಡದಲ್ಲಿ ಸಾಮಾನ್ಯ ಜನ ರಿಗೂ ಸಹ ತಿಳಿಯುವಂತೆ ಹೇಳಿದನು. ಬಸವೇಶ್ವರನ ಹೃದಯವು ಕೋಮಲವಾಗಿದ್ದು ಜನಸೇವೆಗಾಗಿ ಅವನಲ್ಲಿ ಭಕ್ತಿ ಪ್ರೇರಿತವಾದ ಒಂದು ತರದ ಸ್ಫೂರ್ತಿಯುಂಟಾಗಿ ಅಂತಃಕರಣಪೂರ್ವಕವಾಗಿ ಅವನಿಂದ ಕೆಲವು ನುಡಿಗಳು ಹೊರಟವು. ಈ ನುಡಿಗಳೇ ವಚನಗಳು. ಇವು ಸಹಜ ವಾಗಿ ಅವನ ಹೃದಯದಿಂದ ಹೊರಹೊಮ್ಮಿದವಾದುದರಿಂದ ಇವುಗ ಳನ್ನು ಶುದ್ಧ ಸಾಹಿತ್ಯದಲ್ಲಿ ಸೇರಿಸಲಿಕ್ಕೆ ಯಾವ ಅಡ್ಡಿಯೂ ಇಲ್ಲ. ಬಸವೇಶ್ವರನೂ ಮತ್ತು ಶಿವಾನುಭವ ಮಂಟಪದಲ್ಲಿದ್ದ ಚನ್ನಬಸವೇಶ್ವರ, ಅಲ್ಲಮಪ್ರಭು, ಸಿದ್ಧರಾಮೇಶ್ವರ, ಮಹಾದೇವಿಯಕ್ಕ ಮೊದಲಾದವರೆ

ಲ್ಲರೂ ಸಹ ಇಂಥ ವಚನಗಳನ್ನು ರಚಿಸಿದ್ದಾರೆ. ಈ ವಚನಕಾರರ ಮತ್ತು ಅವರ ವಚನಗಳ ಸಂಖ್ಯೆಯು ಬಹಳವಿದ್ದು ಅವುಗಳ ಬಗ್ಗೆ ಶೋಧವು ಇನ್ನೂ ನಡೆದದೆ. ಈ ವಚನಗಳು ಬಿಡಿಬಿಡಿಯಾದ ಶಬ್ದಗಳಿಂದ ಕೂಡಿ ಸಣ್ಣ ಸಣ್ಣ ವಾಕ್ಯಗಳಾಗಿ ಕನ್ನಡ ಗದ್ಯದ ಬೆಳವಣಿಗೆಗೆ ತಳಹದಿಯಾಗಿದೆ. ಮುಂದೆ ಈ ವಚನಗಳ ಮೇಲೆ ಟೀಕೆಗಳನ್ನು ಬರೆಯುಹತ್ತಿದ್ದರಿಂದ ಕನ್ನಡದಲ್ಲಿ ಗದ್ಯ ಲೇಖನವು ಹೆಚ್ಚಾಯಿತು. ಈ ವಚನಗಳು ಗದ್ಯದಲ್ಲಿದ್ದರೂ ಕಾವ್ಯಾಂಶಗಳಿಂದ ಕೂಡಿದ್ದರಿಂದ ಕಾವ್ಯಮಯವಾದ ಗದ್ಯ *(Poetic Prose)* ದಲ್ಲಿ ಇರುತ್ತವೆ. ಇವುಗಳನ್ನು ಓದುವಾಗ ಕಾವ್ಯದಲ್ಲಿರುವ ಶಬ್ದಮಾಧುರ್ಯವು *(music)* ಹೊರಡುತ್ತದೆ. ಇವೆಲ್ಲ ಕಾರಣಗಳಿಂದ ಕನ್ನಡ ಸಾಹಿತ್ಯದಲ್ಲಿ ವಚನಗಳಿಗೆ ಒಂದು ವಿಶಿಷ್ಟವಾದ ಮಹತ್ವದ ಸ್ಥಾನವು ಉಂಟಾಗಿದೆ.

ಒಟ್ಟಿನ ಮೇಲೆ ಬಸವೇಶ್ವರನು ತನ್ನ ಅಲ್ಪ ಅವಧಿಯಲ್ಲಿ ಯಾವ ಅಲೌಕಿಕ ಪುರುಷನೂ ಮಾಡದ ಕಾರ್ಯಗಳನ್ನು ನೆರವೇರಿಸಿದನು. ಉಚ್ಚನೀಚ ಕುಲಗಳೆಂಬ ಭೇದಭಾವವಿಲ್ಲದೆ ಎಲ್ಲರಿಗೂ ಲಿಂಗ ದೀಕ್ಷೆಯನ್ನು ಕೊಟ್ಟು ಡಂಭಾಚಾರಗಳನ್ನು ಕಡಿಮೆಮಾಡಿ ಆಚಾರಕ್ಕೆ ಹೆಚ್ಚು ಮಹತ್ವಕೊಟ್ಟನು. ಅದರೊಂದಿಗೆ ಪ್ರತಿಯೊಬ್ಬ ವೀರಶೈವನು ಒಂದು ಸ್ವಂತ ಉದ್ಯೋಗವನ್ನು ಮಾಡಿಯೇ ಜೀವಿಸಬೇಕೆಂದು ತಿಳಿಸಿಕೊಟ್ಟು ಆರ್ಥಿಕ ಸ್ಥಿತಿಯನ್ನು ಸುಧಾರಿಸಿದನು. ಉಳಿದ ಯಾವ ಮತದವರೂ ಅಸ್ಪೃಶ್ಯರಿಗೆ ಸಮಾಜದಲ್ಲಿ ಸ್ಥಾನ ಕೊಟ್ಟದ್ದಿಲ್ಲ. ಆದರೆ ಬಸವೇಶ್ವರನು ಆ ತರದ ಭೇದವನ್ನೇ ತೆಗೆದುಹಾಕಿ ಎಲ್ಲರೂ ಸಮಾನರು; ಶಿವಭಕ್ತರು ಎಂದು ಹೇಳಿದನು. ಸ್ತ್ರೀಯರಿಗೂ ಪುರುಷರ ಸಮಾನ ಹಕ್ಕುಗಳನ್ನು ಒದಗಿಸಿಕೊಟ್ಟು ಅವರ ನಿಜವಾದ ಮಹತ್ವವನ್ನು ತಿಳಿಸಿಕೊಟ್ಟನು. ಈ ಎಲ್ಲ ಸುಧಾರಣೆಗಳಿಂದ ಸಮಾಜದಲ್ಲಿ ಸ್ವಾತಂತ್ರ್ಯ, ಸಮಾನತ್ವ, ಭ್ರಾತೃತ್ವ *(Liberty, Equality, Fraternity)* ಗಳು ಉಂಟಾದವು. ಇವನು ವೀರಶೈವ ಮತಕ್ಕೆ ಮಹತ್ವಕೊಟ್ಟ ಮುಖ್ಯ ಕಾರಣವೇನಂದರೆ ಇದರಲ್ಲಿ ಇಡೀ ಮಾನವ ಧರ್ಮಕ್ಕೆ ಅನ್ವಯಿಸುವ ಉಚ್ಚ ವಿಚಾರಗಳಿರುತ್ತವೆ. ಧರ್ಮಸುಧಾರಕರಲ್ಲಿ ಇದಕ್ಕೂ ಹೆಚ್ಚಿಗಿನ್ನೇನು ಬೇಕು? ಇವನು ಅನ್ಯಮತದವರನ್ನು ಹಳಿದಿಲ್ಲ, ನಿಂದಿಸಿಲ್ಲ.

ಮತ್ತು ಇವನು ಈ ಜಗತ್ತು ಇರುವ ವರೆಗೂ ನೆನಪಿರುವಂತೆ ಮಾಡಿದ ಕಾರ್ಯವೆಂದರೆ ಕನ್ನಡ ಸಾಹಿತ್ಯಸೇವೆಯು.

ನಾವು ಯಾರಿಗಾದರೂ ಉಚ್ಚಸ್ಥಾನವನ್ನು ಕೊಡಬೇಕಾದರೆ ಅವರನ್ನು ವಿಶಾಲವಾದ ಹೃದಯದಿಂದ ಕಂಡು, ವಿಶಾಲವಾದ ದೃಷ್ಟಿಯಿಂದ ನೋಡಿ, ನಿಷ್ಪಕ್ಷಪಾತ ಮತ್ತು ವಿಮರ್ಶಕ ಬುದ್ಧಿಯಿಂದ ಅವರ ಗುಣ ದೋಷಗಳನ್ನು ಚನ್ನಾಗಿ ವಿಚಾರಮಾಡಬೇಕಾಗುವದು. ಕೆಲವರು ಇವನನ್ನು ಭಗವಾನ್ ಬುದ್ಧ, ಮಹಾತ್ಮಾ ಗಾಂಧಿ ಮೊದಲಾದ ಮಹಾ ಪುರುಷರೊಡನೆ ಹೋಲಿಸುವರು. ಆದರೆ "*Comparisons are always odious*" ಅಂದರೆ ಹೋಲಿಸಿ ನೋಡುವದು 'ಯಾವಾಗಲೂ ತಿರಸ್ಕರಣೀಯವು' ಎಂಬದನ್ನು ನೆನಪಿನಲ್ಲಿಟ್ಟು ಬಸವೇಶ್ವರನು ಸಾಮಾನ್ಯರಲ್ಲಿಯು ಅಸಾಮಾನ್ಯನು; ಲೌಕಿಕರಲ್ಲಿ ಅಲೌಕಿಕನು; ಜಗತ್ತಿನ ಇತಿಹಾಸಲ್ಲಿ ಒಂದು ವಿಶಿಷ್ಟ ಸ್ಥಾನವುಳ್ಳವನು ಎಂದು ಹೇಳಿದರೆ ಸಾಕು. ಮತ್ತು ಕೆಳಗಿನ ವಚನದಿಂದ ಆತನಲ್ಲಿ ಎಳ್ಳಷ್ಟು ಆತ್ಮಸ್ತುತಿಯು ವಿಚಾರವಿಲ್ಲೆಂದು ತಿಳಿಯುವದು.

**"ಎನಗಿಂತ ಕಿರಿಯರಿಲ್ಲ. ಶಿವಭಕ್ತರಿಗಿಂತ ಹಿರಿಯರಿಲ್ಲ. ಎನ್ನ ಮನ ಸಾಕ್ಷಿ. ನಿಮ್ಮ ಪಾದ ಸಾಕ್ಷಿ. ಕೂಡಲಸಂಗಮದೇವಾ ಎನಗಿದೇ ದಿವ್ಯ."**

ಇದರಿಂದ ಸಹಜವಾಗಿ ಇವನ ಘನತೆಯು ಒಡೆದು ಕಾಣುವದು.

# ಶಿವಶರಣೆ ಲಿಂಗಮ್ಮನು.

ಲಿಂಗಮ್ಮನು ಬಸವೇಶ್ವರನ ಕಾಲದಲ್ಲಿ ಆಗಿಹೋದ ಒಬ್ಬ ಮಹಾ ಶಿವಶರಣೆಯು. ಇವಳು ಹಡದಪ್ಪಣ್ಣನ ಭಾರ್ಯೆಯಾಗಿದ್ದಾಳೆ. ಅವನಂತೆಯೇ ಈಕೆಯಾದರೂ ಬಹು ವಿದ್ವಾಂಸಳು ಮತ್ತು ಶಿವಾನುಭವಿಯು. ಈಕೆಯ ವಚನಗಳಾದರೂ ಶ್ರೇಷ್ಠತರಗತಿಯವು ಇರುತ್ತವೆ. ಅವುಗಳಲ್ಲಿ ಗಾಂಭೀರ್ಯವಿದೆ, ಪ್ರತಿಯೊಂದು ವಚನದಲ್ಲಿ ಉಚ್ಚ ವಿಚಾರಗಳು ತುಂಬಿರುತ್ತವೆ. ಆದರೆ ಅಕ್ಕಮಹಾದೇವಿಯ ವಚನಗಳು ಈಗ ಜನರ ಮನಸ್ಸನ್ನು ಪ್ರಬಲವಾಗಿ ಆಕರ್ಷಿಸಿರುವದರಿಂದ ಲಿಂಗಮ್ಮನ ವಚನಗಳ ತೇಜಸ್ಸು ಅಷ್ಟು ಪ್ರಕಾಶಕ್ಕೆ ಬಂದಿರುವದಿಲ್ಲ. ಆದರೆ ಅವುಗಳಲ್ಲಿ ವೀರಶೈವ ಮತದ ಸಾರವಿರುತ್ತದೆ. ಇವುಗಳನ್ನು ವೀರಶೈವರು ಅವಶ್ಯವಾಗಿ ಪರಿಶೀಲಿಸಬೇಕು.

ಕೆಳಗಿನ ವಚನಗಳಲ್ಲಿ ಲಿಂಗಮ್ಮನು ತನ್ನ ಸ್ವಂತದ ವಿಷಯವಾಗಿ ಉಲ್ಲೇಖಿಸಿಕೊಂಡಿರುವಳು. ಅದು ಹೇಗೆಂದರೆ:—

ಬಸವಣ್ಣ, ಚನ್ನಬಸವಣ್ಣ, ಮಡಿವಾಳಯ್ಯ, ಅಲ್ಲಮಪ್ರಭು, ಚನ್ನಮಲ್ಲೇಶ್ವರ, ಹಡಪದಪ್ಪಣ್ಣ, ತಮ್ಮೆಲ್ಲರ ತೊತ್ತಿನ ತೊತ್ತಿನ ಪಡಿದೊತ್ತಿನ ಮಗಳೆಂದು ಹೊತ್ತುಹೊತ್ತಿಗೆ ಎಚ್ಚರವ ಪಾಲಿಸಿ ರಕ್ಷಣೆಯ ಮಾಡಿದ ಕಾರಣದಿಂದ ತಮ್ಮೆಲ್ಲರ ಪಾದದಲ್ಲಿಯೇ ನಿಜ ಮುಕ್ತಳಾದೆನಯ್ಯ ಅಪ್ಪಣ್ಣಪ್ರಿಯ ಚನ್ನಬಸವಣ್ಣಾ.

ಇದರಮೇಲಿಂದ ಬಸವ, ಚನ್ನಬಸವ, ಅಲ್ಲಮಪ್ರಭು, ಇಂಥ ಮಹಾನುಭಾವರ ಸನ್ನಿಧಿಯಲ್ಲಿ ಲಿಂಗಮ್ಮನು ಇದ್ದು ಅವರಿಗೆ ಬಹು ಪ್ರಿಯಳಾಗಿದ್ದಳೆಂದು ಕಂಡುಬರುತ್ತದೆ.

ಲಿಂಗಮ್ಮನ ದೀಕ್ಷಾಗುರುವು ಚನ್ನಮಲ್ಲೇಶ್ವರನೆಂದು ಆಕೆಯ ಅನೇಕ ವಚನಗಳಿಂದಲೇ ಕಂಡುಬರುತ್ತದೆ. ಚನ್ನಮಲ್ಲೇಶ್ವರನೇ ತನಗೆ ಗುರುವೆಂದು ಮೇಲಿಂದಮೇಲೆ ಅವಳು ಹೇಳಿಕೊಂಡಿರುತ್ತಾಳೆ. ಈ ಬಗ್ಗೆ ಕೆಳಗಿನ ವಚನವನ್ನು ವಾಚಕರು ನೋಡಬೇಕು.

ಅಯ್ಯಾ ನಾ ಕಾಂಬುದಕ್ಕೆ ನನ್ನ ಶಕ್ತಿಯಿಲ್ಲ. ನಿಮ್ಮಿಂದಲೇ ಕಂಡೆನಯ್ಯ. ಅದೇನು ಕಾರಣವೆಂದರೆ, ತನುವ ತೋರಿದಿರಿ, ಮನವ

ತೋರಿದಿರಿ. ಧನವ ತೋರಿದಿರಿ. ತನುವ ಗುರುವಿಗಿತ್ತು, ಮನವ ಲಿಂಗಕ್ಕಿತ್ತು, ಧನವ ಜಂಗಮಕ್ಕಿತ್ತು, ಇವೆಲ್ಲವು ನಿಮ್ಮೊಡವೆ ಎಂದು ನಿಮಗಿತ್ತು, ತಳ್ಳಿಬಳ್ಳಿಯನೆ ಹರಿದು ನಿಮ್ಮಲ್ಲಿಯೇ ನೆಲೆಗೊಂಡ ಕಾರಣ ಚನ್ನಮಲ್ಲೇಶ್ವರನ ಪಾದದಲ್ಲೇ ನಿರ್ಮುಕ್ತಳಾದೆನಯ್ಯ ಅಪ್ಪಣ್ಣ ಪ್ರಿಯ ಚನ್ನಬಸವಣ್ಣಾ.

ಲಿಂಗಮ್ಮನು ಕೆಳಗೆ ಕಾಣಿಸಿದ ವಚನದಲ್ಲಿ ತನ್ನ ಪತಿಯು ತನ್ನ ಕರಸ್ಥಲದ ಇಷ್ಟಲಿಂಗವೆಂತಲೂ ಚನ್ನಮಲ್ಲೇಶ್ವರನು ತನ್ನ ಮನಸ್ಥಲಕ್ಕೆ ಪ್ರಾಣವಾಗಿ ಮೂರ್ತಗೊಂಡನೆಂತಲೂ ಹೇಳಿ ತಾನು ಚನ್ನಬಸವಣ್ಣನ ಕರುಣದ ಶಿಸುವು ಎಂದು ಹೇಳಿಕೊಂಡಿದ್ದಾಳೆ. ಇದರ ಮೇಲಿಂದ ಲಿಂಗಮ್ಮನು ಶಿವಾನುಭವ ಮಂಟಪದಲ್ಲಿದ್ದುಕೊಂಡು ಅಲ್ಲಿ ನಡೆಯುತ್ತಿದ್ದ ಶಿವಾನುಭವದ ಬೋಧೆಯನ್ನು ಆಲಿಸುತ್ತ ಕಾಲ ಕಳೆಯುತ್ತಿದ್ದಳೆಂದು ತೋರುತ್ತದೆ.

ಏನೇನೂ ಇಲ್ಲದಾಗ ನೀವಿಲ್ಲದಿದ್ದರೆ ನಾನಾಗಬಲ್ಲೆನೇ ಅಯ್ಯ? ಆದಿ ಅನಾದಿ ಇಲ್ಲದಂದು ನೀವಿಲ್ಲದಿದ್ದರೆ ನಾನಾಗಬಲ್ಲೆನೇ ಅಯ್ಯ? ಮುಳುಗಿ ಹೋದವರ ತೆಗೆದುಕೊಂಡು ನಿಮ್ಮ ತೊತ್ತಿನ ತೊತ್ತಿನ ಪಡಿದೊತ್ತಿನ ಮಗ ಳೆಂದು ರಕ್ಷಣೆಯ ಮಾಡಿದ ಶಿಸುವಾದ ಕಾರಣ ಹಡಪದಪ್ಪಣ್ಣನೇ ಎನ್ನ ಕರಸ್ಥಲಕ್ಕೆ ಲಿಂಗವಾಗಿ ಬಂದು ನೆಲೆಗೊಂಡರು. ಚನ್ನಮಲ್ಲೇಶ್ವರನೇ ಎನ್ನ ಮನಸ್ಥಲಕ್ಕೆ ಪ್ರಾಣವಾಗಿ ಮೂರ್ತಗೊಂಡರು. ಆ ಕರಸ್ಥಲದ ಲಿಂಗ ವನರ್ಚಿಸಿ ಪೂಜಿಸಿ ವರವ ಬೇಡಿದರೆ, ತನುವ ತೋರಿದರು. ಆ ತನು ವಿಡಿದು ಮಹಾಘನವ ಕಂಡೆ. ಆ ಘನವಿಡಿದು ಮನವ ನಿಲ್ಲಿಸಿದೆ. ಮನವ ನಿಲ್ಲಿಸಿ ನೋಡುವನ್ನಕ್ಕ ಪ್ರಾಣದ ನೆಲೆಯನರಿದೆ. ಪ್ರಾಣವ ನೊಂದುಗೂಡಿದೆ. ಕಾಣಬಾರದ ಕದಳಿಯನೆ ಹೊಕ್ಕಾನೂನ ಕದ ಳಿಯ ದಾಂಟಿದೆ. ಜ್ಞಾನಜ್ಯೋತಿಯ ಕಂಡೆ. ತಾನುತಾನಾಗಿಪ್ಪ ಮಹಾ ಬೆಳಗಿನಲ್ಲಿ ಓಲಾಡಿ ಸುಖಿಯಾದೆನಯ್ಯ ಚನ್ನಬಸವಣ್ಣನ ಕರುಣದ ಶಿಸುವಾದ ಕಾರಣದಿಂದ ಅಪ್ಪಣ್ಣಪ್ರಿಯ ಚನ್ನಬಸವಣ್ಣಾ.

ಲಿಂಗಮ್ಮನ ಪತಿಯಾದ ಹಡಪದಪ್ಪಣ್ಣನು ಬಸವೇಶ್ವರನಿಗೆ ಅತ್ಯಂತ ವಿಶ್ವಾಸಿಕನಾಗಿದ್ದನು. ಅವನು ಬಸವೇಶ್ವರನನ್ನು ಎಂದಿಗೂ ಬಿಟ್ಟಿರದೆ ಅವನ ಸೇವೆಯಲ್ಲಿಯೇ ಇರುತ್ತಿದ್ದನೆಂದು ಅವನ ಚರಿತ್ರೆ ಯಿಂದ ತಿಳಿದುಬರುತ್ತದೆ. ಲಿಂಗಮ್ಮನು ಇಂಥವನ ಪತ್ನಿಯಾಗಿ ಕಲ್ಯಾಣ

ದಲ್ಲಿ ಸದ್ಗೋಷ್ಠಿಯನ್ನು ಮಾಡುತ್ತ ಹೊಂದುತ್ತ ಕಾಲಕಳೆಯುತ್ತಿದ್ದಳೆಂದು ಆಕೆಯ ವಚನಗಳಿಂದ ತೋರುತ್ತದೆ. ಈ ಕಾಲದಲ್ಲಿ ಬಸವೇಶ್ವರನಕೂಡ ಅನೇಕ ಬಗೆಯ ಚಿಕ್ಕ ಪುಟ್ಟ ಹೋರೆಗಳನ್ನು ಮಾಡುತ್ತಿದ್ದ ಕ್ಷುಲ್ಲಕರು ಕಲಿತಿದ್ದರೆಂದು ಅನೇಕರ ತಿಳುವಳಿಕೆ ಇದೆ. ಇದರೆ ನಿಜ ಸ್ಥಿತಿಯು ಹೀಗಿರದೆ ಇವರು ಉಚ್ಚ ನಡೆವಳಿಯುವರು ಇದ್ದರೆಂಬುದು ಈ ಕಾಲಕ್ಕೆ ಉತ್ಪನ್ನವಾದ ಉದಾರ ವಚನವಾಙ್ಮಯದಿಂದ ಊಹಿಸಬಹುದಾಗಿದೆ. ಮಧ್ಯಕಾಲದಲ್ಲಿ ಉತ್ಪನ್ನವಾದ ಪುರಾಣಗಳಲ್ಲಿ ವರ್ಣಿಸಲ್ಪಟ್ಟಂಥ ಜಂಗ ಮರಂತೆ ಬಸವೇಶ್ವರನ ಕಾಲದ ಜಂಗಮರು ನಿಜವಾಗಿಯೂ ಇರಲಿಲ್ಲ. ಅವರು ಉಚ್ಚ ವರ್ತನೆಯುಳ್ಳವರಿದ್ದುದರಿಂದಲೇ, ಆ ಕಾಲಕ್ಕೆ ವೀರ ಶೈವ ಧರ್ಮವು ಬಲಪಟ್ಟಿತು.

ಲಿಂಗಮ್ಮನ ವಚನಗಳಲ್ಲಿ ನೈತಿಕ ತತ್ವಗಳನ್ನು ನಿರೂಪಿಸುವ ಅನೇಕ ವಚನಗಳಿರುತ್ತವೆ. ಅವುಗಳನ್ನು ವಾಚಕರು ಮೂಲ ಗ್ರಂಥ ದಲ್ಲಿಯೇ ನೋಡಬೇಕು. ಈ ವಿಷಯದಬಗ್ಗೆ ಕೆಲವುಗಳನ್ನುಮಾತ್ರ ನಾವು ಇಲ್ಲಿ ಉದಹರಿಸುತ್ತೇವೆ.

ಆಸೆಯನಳಿದು ರೋಷವ ನಿಲಿಸಿ ಜಗದ ಪಾಶವನರಿದು ಈಶ್ವರ ನೆನಿಸಿಕೊಂಬ ಶರಣರ ಜಗದ ಹೇಸಿಗಳೆತ್ತ ಬಲ್ಲರೋ ಅಪ್ಪಣ್ಣಪ್ರಿಯ ಚನ್ನಬಸವಣ್ಣಾ?

ತನುವ ಕರಗಿಸಿ, ಹರಿವ ಮನವ ನಿಲ್ಲಿಸಿ, ಅಂಗ ಗುಣವನೇ ಅಳಿದು ಲಿಂಗ ಗುಣವನೇ ನೆಲಿಸಿ ಭಾವವಳಿದು ಭವಕೆ ಸವಿದು ಮಹಾ ದೇವನಾದ ಶರಣರ ಜಗದ ಮಾನವರೆತ್ತಬಲ್ಲರು ಅಪ್ಪಣ್ಣ ಪ್ರಿಯ ಚನ್ನ ಬಸವಣ್ಣಾ? ಇತ್ಯಾದಿ.

ಕೆಳಗಿನ ವಚನಗಳಲ್ಲಿ ಲಿಂಗಮ್ಮನು ಕೈಲಾಸವಾವುದು, ಮರ್ತ್ಯ ಲೋಕವಾವುದು ಎಂಬುದನ್ನು ಬಹು ಸರಸಾಗಿ ವರ್ಣಿಸಿ ಮನು ಷ್ಯನು ಭವವನ್ನು ಹೇಗೆ ದಾಂಟಬೇಕೆಂಬುದನ್ನು ಹೇಳಿದ್ದಾಳೆ.

ಕೈಲಾಸ ಮರ್ತ್ಯಲೋಕವೆಂಬರು. ಕೈಲಾಸವೆಂದರೇನೋ? ಮರ್ತ್ಯಲೋಕವೆಂದರೇನೋ? ಅಲ್ಲಿಯ ನಡೆಯು ಒಂದೇ. ಇಲ್ಲಿಯ ನಡೆಯು ಒಂದೇ ಕಾಣಿರಯ್ಯ. ಕೈಲಾಸದವರೇ ದೇವರ್ಕಳೆಂಬರು. ಮರ್ತ್ಯಲೋಕದವರೇ ಮಹಾ ಗಣಂಗಳೆಂಬರು. ಸುರಲೋಕದೊಳಗೆ ಸಾಸಿರಕಾಲಕ್ಕಲ್ಲದೆ ಅಳಿವಿಲ್ಲವೆಂಬರು. ನರಲೋಕದೊಳಗೆ ಸತ್ತು

ಸತ್ತು ಹುಟ್ಟುತಿಹರೆಂಬರು. ಇದ ಕಂಡು ನಮ್ಮ ಶಿವಶರಣರು ಸುರ ಲೋಕವನು ನರಲೋಕವನು ತೃಣವೆಂದು ಭಾವಿಸಿ ಭವವ ದಾಂಟಿ ತಮ್ಮ ತಮ್ಮ ಹುಟ್ಟನರಿದು ಮಹಾ ಬೆಳಗನೇ ಕೂಡಿ ಬೆಳಗಿನಲ್ಲಿ ಬಯಲಾದರಯ್ಯ ಅಪ್ಪಣ್ಣ ಪ್ರಿಯ ಚನ್ನ ಬಸವಣ್ಣ.

ಕೆಲವು ಸಾರೆ ಸ್ತ್ರೀಯರಿಗೆ ಉಚಿತವಾದ ಉದಾಹರಣೆಗಳ ಮೂಲಕ ಧಾರ್ಮಿಕ ವಿಚಾರಗಳನ್ನು ಲಿಂಗಮ್ಮನು ಬಹು ಸುಂದರವಾಗಿ ವಿವರಿಸುವದೂ ಉಂಟು. ನಾವು ಕೆಲವುಗಳನ್ನು ಮಾತ್ರ ಕೆಳಗೆ ಕೊಟ್ಟಿರುತ್ತೇವೆ.

ಮನ ಕತ್ತಲೆ ತನು ಹಮ್ಮು ನೆನಹು ಮರವೆ ಇವರೊಳಗೆ ಇದ್ದು ಘನವ ಕಂಡಿಹೆನೆಂಬ ಅಣ್ಣಗಳಿರಾ ನೀವು ಕೇಳಿರೋ. ಘನವ ಕಾಂಬುದಕ್ಕೆ ಮನವೆಂತಾಗಬೇಕೆಂದರೆ ಅಕ್ಕಿಯ ತಳಿಸಿದಂತೆ ಅಲ್ಲ ಸುಲಿದಂತೆ ಕನ್ನಡಿಯ ನೋಡಿದಂತೆ ಮನ ನಿರ್ಮಳವಾದಲ್ಲದೆ ಘನವ ಕಾಣಬಾರದು ನಮ್ಮ ಅಪ್ಪಣ್ಣ ಪ್ರಿಯ ಚನ್ನಬಸವಣ್ಣಾ.

ಅಯ್ಯ, ನಾ ಮರ್ತ್ಯದಲ್ಲಿ ಹುಟ್ಟಿ, ಕಷ್ಟ ಸಂಸಾರಿ ಎನಿಸಿಕೊಂಡೆ. ಕತ್ತಲೆಯಲ್ಲಿ ಮುಳುಗಿದೆ. ಕರ್ಮಕ್ಕೆ ಗುರಿಯಾಗುತ್ತಿದ್ದರೆ ಹೆತ್ತ ತಾಯಿ ಎಂಬ ಗುರುಸ್ವಾಮಿ ಎನ್ನ ಕೊರಳಿಗೆ ಗಂಡನೆಂಬ ಲಿಂಗವ ಕಟ್ಟಿದನು. ತಂದೆ ಜಂಗಮ ಲಿಂಗವು ಎನ್ನ ಪ್ರಾಣಕ್ಕೆ ಪ್ರಸಾದವ ಊಡಿದನು. ಪ್ರಾಣಕ್ಕೆ ಪ್ರಸಾದವನೂಡಲಾಗಲೆ ಕತ್ತಲೆ ಹರಿಯಿತ್ತು. ಕರ್ಮ ಹಿಂಗಿತ್ತು. ಮನ ಬತ್ತಲೆಯಾಯಿತ್ತು. ಚಿತ್ತ ಸುಯಿಧಾನವಾಯಿತ್ತು. ನಿಶ್ಚಿಂತವಾಯಿತ್ತು. ನಿಜವ ನೆಮ್ಮಿನೋಡುವನ್ನಕ್ಕ, ಎನ್ನ ಅತ್ತೆ ಮಾವನು ಅರತುಹೋದರು. ಅತ್ತಿಗೆ ನಾದಿನಿಯರು ಎತ್ತಲೋಡಿ ಹೋದರು. ಸುತ್ತಲಿರುವ ಬಂಧುಗಳೆಲ್ಲ ಬಯಲಾದರು. ಎನ್ನ ತಂದೆ ತಾಯಿ ಕಟ್ಟಿದ ಚಿಕ್ಕಂದಿನ ಗಂಡನ ದಿಟ್ಟಿಸಿ ನೋಡುವ ನೋಟ ಹೋಗಿ ಎನ್ನ ಮನಕ್ಕೆ ಸಿಲ್ಕಿತ್ತು. ಅಂಗ ಲಿಂಗವೆಂಬ ಉಭಯವಳಿಯಿತ್ತು. ಸಂಗಸುಖ ಹಿಂಗಿತ್ತು. ಮಂಗಳದ ಮಹಾ ಬೆಳಗಿನಲ್ಲಿ ಓಲಾಡಿ ಸುಖಿಯಾದೆನಯ್ಯ ಅಪ್ಪಣ್ಣ ಪ್ರಿಯ ಚನ್ನಬಸವಣ್ಣಾ.

ಮೇಲ್ಕಂಡ ವಚನದಲ್ಲಿ ಲಿಂಗಮ್ಮನು ತನ್ನ ಮನೆತನದ ಸಂಗತಿಗಳ ಮೂಲಕ ಮಹಾದೇವಿಯಕ್ಕನಂತೆ ತನ್ನ ವಿಚಾರಗಳನ್ನು ಹೇಳಿರುವಳು.

ಕಡೆಗೆ ಲಿಂಗಮ್ಮನು ತನ್ನ ಸಾಮರಸ್ಯದ ಸ್ವರೂಪವನ್ನು ಕೆಳಗಿನ ವಚನಗಳಲ್ಲಿ ಬಹು ಸುಂದರವಾಗಿ ನಿರೂಪಿಸಿದ್ದಾಳೆ.

ನೋಡಿಹೆನೆಂದರೆ ನೋಟವಿಲ್ಲ ಕೇಳಿಹೆನೆಂದರೆ ಕಿವಿ ಇಲ್ಲ. ವಾಸಿಸಿಹೆನೆಂದರೆ ನಾಸಿಕವಿಲ್ಲ. ನುಡಿದಿಹೆನೆಂದರೆ ಬಾಯಿ ಇಲ್ಲ. ಹಿಡಿದಿಹೆನೆಂದರೆ ಹಸ್ತವಿಲ್ಲ. ನಡೆದಿಹೆನೆಂದರೆ ಕಾಲಿಲ್ಲ. ನೆನೆದಿಹೆನೆಂದರೆ ಮನವಿಲ್ಲ. ಇಂತು ನೆನಹು ನಿಷ್ಪತ್ತಿಯಾಗಿ ಶರಣರ ಪಾದದಲ್ಲಿಯೆ ಬೆರೆದು ಸುಖಿಯಾದೆನಯ್ಯ ಅಪ್ಪಣ್ಣಪ್ರಿಯ ಚನ್ನಬಸವಣ್ಣ.

ಮನ ಮಂಕಾಯಿತ್ತು. ತನುವು ಮರೆಯಿತ್ತು. ವಾಯು ಬರತಿತ್ತು. ಉರಿ ಎದ್ದಿತ್ತು. ಹೊಗೆ ಉಃಯಿತ್ತು. ಸರೋವರವೆಲ್ಲ ಉರಿದು ಹೋಯಿತ್ತು. ಒಳಗೆ ಹೊಕ್ಕು ಕದವ ತೆಗೆದು ಬಯಲ ನೋಡಿ ಬೆಳಗ ಕೂಡಿದಲ್ಲದೆ ನಿಜಮುಕ್ತಿ ಇಲ್ಲವೆಂದರು ನಮ್ಮ ಅಪ್ಪಣ್ಣಪ್ರಿಯ ಚನ್ನಬಸವಣ್ಣ.

ಬೆಟ್ಟ ಬೆಂದಿತ್ತು. ಬಿದಿರುಗಣ್ಣು ಒಡೆಯಿತ್ತು. ಸುತ್ತನೋಡಿದರೆ ನಿರಾಳವಾಯಿತ್ತು. ಕತ್ತಲೆ ಹರಿಯಿತ್ತು. ಮನ ಬತ್ತಲೆಯಾಯಿತ್ತು. ಚಿತ್ತ ಮನ ಬುದ್ಧಿ ಏಕವಾದವು. ಎಚ್ಚತ್ತು ನೋಡಿದರೆ ಬಚ್ಚಬರಿಯ ಬೆಳಗಲ್ಲದೆ ಕತ್ತಲೆ ಕಾಣಬಾರದು ಕಾಣಾ ಅಪ್ಪಣ್ಣ ಪ್ರಿಯಚನ್ನಬಸವಣ್ಣಾ.

ತನು ಕರಗಿತ್ತು, ಮನ ನಿಂದಿತ್ತು, ಉಲುಹು ಅಡಗಿತ್ತು, ನೆಲೆಗೆ ನಿಂದಿತ್ತು, ಮನ ಪವನ ಬಿಂದು ಒಡಗೂಡಿತ್ತು, ಉರಿ ಎದ್ದಿತ್ತು, ಊರ್ಧ್ವಕ್ಕೇಡಿತ್ತು, ಶರಧಿ ಬತ್ತಿತ್ತು, ನೊರೆ ತೆರೆ ಅಡಗಿತ್ತು, ಅಷ್ಟಮದವೆಲ್ಲ ಹಿಟ್ಟುಗುಟ್ಟಿತ್ತು, ಕರಣಂಗಳೆಲ್ಲ ಉರಿದು ಹೋಯಿತ್ತು, ಸಪ್ತಧಾತು ಕೆಟ್ಟಿತ್ತು, ರಸವರತಿತ್ತು, ಅಪ್ಪು ಬರತಿತ್ತು, ಕಟ್ಟೆ ಹಾಯ್ದು ಬಿರಿನಂತೆ ತೊಟ್ಟುಬಿಟ್ಟು ಬಟ್ಟಬಯಲೊಳಗೆ ಬಿದ್ದು ನಾನೆತ್ತ ಹೋದೆನೆಂದರಿಯೆನಯ್ಯ ಅಪ್ಪಣ್ಣಪ್ರಿಯ ಚನ್ನಬಸವಣ್ಣ.

ಸತ್ತು ಹುಟ್ಟುತಿಹರೆಂಬರು. ಇದ ಕಂಡು ನಮ್ಮ ಶಿವಶರಣರು ಸುರ ಲೋಕವನು ನರಲೋಕವನು ತೃಣವೆಂದು ಭಾವಿಸಿ ಭವವ ದಾಂಟಿ ತಮ್ಮ ತಮ್ಮ ಹುಟ್ಟನರಿದು ಮಹಾ ಬೆಳಗನೇ ಕೂಡಿ ಬೆಳಗಿನಲ್ಲಿ ಬಯಲಾದರಯ್ಯ ಅಪ್ಪಣ್ಣ ಪ್ರಿಯ ಚನ್ನ ಬಸವಣ್ಣ.

ಕೆಲವು ಸಾರೆ ಸ್ತ್ರೀಯರಿಗೆ ಉಚಿತವಾದ ಉದಾಹರಣೆಗಳ ಮೂಲಕ ಧಾರ್ಮಿಕ ವಿಚಾರಗಳನ್ನು ಲಿಂಗಮ್ಮನು ಬಹು ಸುಂದರವಾಗಿ ವಿವರಿಸುವದೂ ಉಂಟು. ನಾವು ಕೆಲವುಗಳನ್ನು ಮಾತ್ರ ಕೆಳಗೆ ಕೊಟ್ಟಿರುತ್ತೇವೆ.

ಮನ ಕತ್ತಲೆ ತನು ಹಮ್ಮು ನೆನಹು ಮರವೆ ಇವರೊಳಗೆ ಇದ್ದು ಘನವ ಕಂಡಿಹೆನೆಂಬ ಅಣ್ಣಗಳಿರಾ ನೀವು ಕೇಳಿರೋ. ಘನವ ಕಾಂಬುದಕ್ಕೆ ಮನವೆಂತಾಗಬೇಕೆಂದರೆ ಅಕ್ಕಿಯ ತಳಿಸಿದಂತೆ ಅಲ್ಲ ಸುಲಿದಂತೆ ಕನ್ನಡಿಯ ನೋಡಿದಂತೆ ಮನ ನಿರ್ಮಳವಾದಲ್ಲದೆ ಘನವ ಕಾಣಬಾರದು ನಮ್ಮ ಅಪ್ಪಣ್ಣ ಪ್ರಿಯ ಚನ್ನಬಸವಣ್ಣಾ.

ಅಯ್ಯ, ನಾ ಮರ್ತ್ಯದಲ್ಲಿ ಹುಟ್ಟಿ, ಕಷ್ಟ ಸಂಸಾರಿ ಎನಿಸಿಕೊಂಡೆ. ಕತ್ತಲೆಯಲ್ಲಿ ಮುಳುಗಿದೆ. ಕರ್ಮಕ್ಕೆ ಗುರಿಯಾಗುತ್ತಿದ್ದರೆ ಹೆತ್ತ ತಾಯಿ ಎಂಬ ಗುರುಸ್ವಾಮಿ ಎನ್ನ ಕೊರಳಿಗೆ ಗಂಡನೆಂಬ ಲಿಂಗವ ಕಟ್ಟಿದನು. ತಂದೆ ಜಂಗಮ ಲಿಂಗವು ಎನ್ನ ಪ್ರಾಣಕ್ಕೆ ಪ್ರಸಾದವ ಊಡಿದನು. ಪ್ರಾಣಕ್ಕ ಪ್ರಸಾದವನೂಡಲಾಗಲೆ ಕತ್ತಲೆ ಹರಿಯಿತ್ತು. ಕರ್ಮ ಹಿಂಗಿತ್ತು. ಮನ ಬತ್ತಲೆಯಾಯಿತ್ತು. ಚಿತ್ತ ಸುಯಿಧಾನವಾಯಿತ್ತು. ನಿಶ್ಚಿಂತವಾಯಿತ್ತು. ನಿಜವ ನೆಮ್ಮಿನೋಡುವನ್ನಕ್ಕ, ಎನ್ನ ಅತ್ತೆ ಮಾವನು ಆರತುಹೋದರು. ಅತ್ತಿಗೆ ನಾದಿನಿಯರು ಎತ್ತಲೋಡಿ ಹೋದರು. ಸುತ್ತಲಿರುವ ಬಂಧುಗಳೆಲ್ಲ ಬಯಲಾದರು. ಎನ್ನ ತಂದೆ ತಾಯಿ ಕಟ್ಟಿದ ಚಿಕ್ಕಂದಿನ ಗಂಡನ ದಿಟ್ಟಿಸಿ ನೋಡುವ ನೋಟ ಹೋಗಿ ಎನ್ನ ಮನಕ್ಕೆ ಸಿಲ್ಕಿತ್ತು. ಅಂಗ ಲಿಂಗವೆಂಬ ಉಭಯವಳಿಯಿತ್ತು. ಸಂಗಸುಖ ಹಿಂಗಿತ್ತು. ಮಂಗಳದ ಮಹಾ ಬೆಳಗಿನಲ್ಲಿ ಓಲಾಡಿ ಸುಖಿಯಾದೆನಯ್ಯ ಅಪ್ಪಣ್ಣ ಪ್ರಿಯ ಚನ್ನಬಸವಣ್ಣಾ.

ಮೇಲ್ಕಂಡ ವಚನದಲ್ಲಿ ಲಿಂಗಮ್ಮನು ತನ್ನ ಮನೆತನದ ಸಂಗತಿಗಳ ಮೂಲಕ ಮಹಾದೇವಿಯಕ್ಕನಂತೆ ತನ್ನ ವಿಚಾರಗಳನ್ನು ಹೇಳಿರುವಳು.

ಕಡೆಗೆ ಲಿಂಗಮ್ಮನು ತನ್ನ ಸಾಮರಸ್ಯದ ಸ್ವರೂಪವನ್ನು ಕೆಳಗಿನ ವಚನಗಳಲ್ಲಿ ಬಹು ಸುಂದರವಾಗಿ ನಿರೂಪಿಸಿದ್ದಾಳೆ.

ನೋಡಿಹೆನೆಂದರೆ ನೋಟವಿಲ್ಲ ಕೇಳಿಹೆನೆಂದರೆ ಕಿವಿ ಇಲ್ಲ. ವಾಸಿಸಿಹೆನೆಂದರೆ ನಾಸಿಕವಿಲ್ಲ. ನುಡಿದಿಹೆನೆಂದರೆ ಬಾಯಿ ಇಲ್ಲ. ಹಿಡಿದಿಹೆನೆಂದರೆ ಹಸ್ತವಿಲ್ಲ. ನಡೆದಿಹೆನೆಂದರೆ ಕಾಲಿಲ್ಲ. ನೆನೆದಿಹೆನೆಂದರೆ ಮನವಿಲ್ಲ. ಇಂತು ನೆನಹು ನಿಷ್ಪತ್ತಿಯಾಗಿ ಶರಣರ ಪಾದದಲ್ಲಿಯೆ ಬೆರೆದು ಸುಖಿಯಾದೆನಯ್ಯ ಅಪ್ಪಣ್ಣಪ್ರಿಯ ಚನ್ನಬಸವಣ್ಣ.

ಮನ ಮಂಕಾಯಿತ್ತು. ತನುವು ಮರೆಯಿತ್ತು. ವಾಯು ಬರತಿತ್ತು. ಉರಿ ಎದ್ದಿತ್ತು. ಹೊಗೆ ಉರಿಯಿತ್ತು. ಸರೋವರವೆಲ್ಲ ಉರಿದು ಹೋಯಿತ್ತು. ಒಳಗೆ ಹೊಕ್ಕು ಕದವ ತೆಗೆದು ಬಯಲ ನೋಡಿ ಬೆಳಗ ಕೂಡಿದಲ್ಲದೆ ನಿಜಮುಕ್ತಿ ಇಲ್ಲವೆಂದರು ನಮ್ಮ ಅಪ್ಪಣ್ಣಪ್ರಿಯ ಚನ್ನಬಸವಣ್ಣ.

ಬೆಟ್ಟ ಬೆಂದಿತ್ತು. ಬಿದಿರುಗಣ್ಣು ಒಡೆಯಿತ್ತು. ಸುತ್ತನೋಡಿದರೆ ನಿರಾಳವಾಯಿತ್ತು. ಕತ್ತಲೆ ಹರಿಯಿತ್ತು. ಮನ ಬತ್ತಲೆಯಾಯಿತ್ತು. ಚಿತ್ತ ಮನ ಬುದ್ಧಿ ಏಕವಾದವು. ಎಚ್ಚತ್ತು ನೋಡಿದರೆ ಬಚ್ಚಬರಿಯ ಬೆಳಗಲ್ಲದೆ ಕತ್ತಲೆ ಕಾಣಬಾರದು ಕಾಣಾ ಅಪ್ಪಣ್ಣ ಪ್ರಿಯಚನ್ನಬಸವಣ್ಣಾ.

ತನು ಕರಗಿತ್ತು, ಮನ ನಿಂದಿತ್ತು, ಉಲುಹು ಅಡಗಿತ್ತು, ನೆಲೆಗೆ ನಿಂದಿತ್ತು, ಮನ ಪವನ ಬಿಂದು ಒಡಗೂಡಿತ್ತು, ಉರಿ ಎದ್ದಿತ್ತು, ಊರ್ಧ್ವಕ್ಕೋಡಿತ್ತು, ಶರಧಿ ಬತ್ತಿತ್ತು, ನೊರೆ ತೆರೆ ಅಡಗಿತ್ತು, ಅಷ್ಟಮದವೆಲ್ಲ ಹಿಟ್ಟುಗುಟ್ಟಿತ್ತು, ಕರಣಂಗಳೆಲ್ಲ ಉರಿದು ಹೋಯಿತ್ತು, ಸಪ್ತಧಾತು ಕೆಟ್ಟಿತ್ತು, ರಸವರತಿತ್ತು, ಅಪ್ಪು ಬರತಿತ್ತು, ಕಟ್ಟೆ ಹಾಯ್ದು ಬೆರಿನಂತೆ ತೊಟ್ಟುಬಿಟ್ಟು ಬಟ್ಟಬಯಲೊಳಗೆ ಬಿದ್ದು ನಾನೆತ್ತ ಹೋದೆನೆಂದರಿಯೆನಯ್ಯ ಅಪ್ಪಣ್ಣಪ್ರಿಯ ಚನ್ನಬಸವಣ್ಣ.

## ಶ್ರೀ ಚರಲಿಂಗಸ್ವಾಮಿಗಳವರ ಚರಿತ್ರೆ.

ಮ. ರಾ. ರಾ. ಮಹಾರುದ್ರಪ್ಪ ಮಹಾಲಿಂಗಪ್ಪ ಮಿರ್ಜಿ ಹುಬ್ಬಳ್ಳಿ ಈ ಮಹನೀಯರು ಹುಬ್ಬಳ್ಳಿಯ ಕಲಬುರ್ಗಿ ಮಠದ ಚರಲಿಂಗಸ್ವಾಮಿಗಳವರ ಚರಿತ್ರೆಯನ್ನು ಬರೆದು ಅದರ ೨೦೦ ಪ್ರತಿಗಳನ್ನು ಶಿವಾನುಭವ ಪತ್ರಿಕೆಯ ಪೋಷಣಾರ್ಥವಾಗಿ ನಮ್ಮಕಡೆಗೆ ಕಳಿಸಿಕೊಟ್ಟಿರುವರು. ಇದಕ್ಕೋಸ್ಕರ ನಾವು ಅವರಿಗೆ ಬಹಳ ಆಭಾರಿಯಾಗಿದ್ದೇವೆ. ಶ್ರೀಚರಲಿಂಗಸ್ವಾಮಿಗಳು ಕಲಬುರ್ಗಿ ಪಟ್ಟಣದಲ್ಲಿಯ ಗದ್ದಿಗೆಮಠಕ್ಕೆ ಸಂಬಂಧಿಸಿದವರು. ಅವರು ಸಮಾಜ ಹಿತದ ಅನೇಕ ಕಾರ್ಯಗಳನ್ನು ಮಾಡಿದ್ದು ಅವುಗಳು ಈ ಗ್ರಂಥದಲ್ಲಿ ವಿವರಿಸಲ್ಪಟ್ಟಿರುತ್ತವೆ. ಈ ಗ್ರಂಥವು ಮುಂದೆ ಶಿವಾನುಭವ ಪತ್ರಿಕೆಯಲ್ಲಿ ವಿಮರ್ಶಿಸಲ್ಪಡುವದು. ಮ. ರಾ. ರಾ. ಮಹಾರುದ್ರಪ್ಪನವರ ಈ ಪ್ರಯತ್ನವು ಅತ್ಯಂತ ಸ್ತೋತ್ರಾರ್ಹವೂ ಅನುಕರಣೀಯವೂ ಆಗಿರುತ್ತದೆ.

## ವಚನಶಾಸ್ತ್ರಸಾರ ಭಾಗ ೨.

### ( ವೀರಶೈವ ಸಿದ್ಧಾಂತ. )

ರಾ. ಸಾ. ಪಿ. ಜಿ. ಹಳಕಟ್ಟಿ ಇವರಿಂದ ಇದು ರಚಿಸಲ್ಪಟ್ಟಿದ್ದು ಇದರಲ್ಲಿ ವೀರಶೈವ ಸಿದ್ಧಾಂತವು ವಚನಕಾರರ ಉಕ್ತಿಗಳಮೂಲಕವಾಗಿಯೇ ಸಮಗ್ರವಾಗಿ ನಿರೂಪಿಸಲ್ಪಟ್ಟಿರುತ್ತದೆ. ಇದು ಅತ್ಯಂತ ಮಹತ್ವದ ಗ್ರಂಥವಿದ್ದು ಅದು ಬಸವಜಯಂತಿಯ ದಿವಸವೇ ಎಲ್ಲಕಡೆಗೂ ಪ್ರಸಿದ್ಧಿಸಲ್ಪಡುವದು.

## (೫) ಮಾಯೆಯನ್ನು ದೂರಮಾಡುವದು.

**ವಿವರಣೆ:**— ಸೋಽಹಂಭಾವದಲ್ಲಿ ವರ್ತಿಸಬೇಕಾದರೆ, ಸಂಸಾರವು ಅದಕ್ಕೆ ಪ್ರತಿಬಂಧಕವಾಗುತ್ತದೆ. ಸಂಸಾರವು ಮನುಷ್ಯರಲ್ಲಿ ಭಿನ್ನತೆಯನ್ನುಂಟು ಮಾಡಿ, ಲಿಂಗದ ನೆನಹು, ಲಿಂಗದ ನಡೆ ಇವುಗಳಿಂದ ದೂರಿರುವಂತೆ ಮಾಡುತ್ತದೆ. (ವಚನ ೩೨) ಮನುಷ್ಯನು ತನ್ನ ಪಂಚೇಂದ್ರಿಯಗಳ ವಶದಲ್ಲಿರುವ ವರೆಗೆ ಲಿಂಗದ ನಡೆಯು ಅವನಲ್ಲಿ ಉಂಟಾಗಲಾರದು. ಅನೇಕತರದ ಮರುಳಾಟಗಳಲ್ಲಿ ಕಂಗೆಡುವನು. (ವಚನ ೩೩) ಇದೇ ಮಾಯೆ ಎನಿಸುವದು. ಈ ಮಾಯೆಯು ಮನುಷ್ಯನನ್ನು ತರಕಟ ಕಾಡುತ್ತಿದೆ. (ವಚನ ೩೫) ಅದು ಬರಿಯ ವಾಗದ್ವೈತವನ್ನು ನುಡಿಸುವದಲ್ಲದೆ ನಿಜವನ್ನರುಹಲಾರದು. (ವಚನ ೩೮) ಅದು ಇಲ್ಲದ ಶಂಕೆಯನ್ನು ಹುಟ್ಟಿಸುತ್ತದೆ. ಮತ್ತು ತರತರದ ರೂಪದಿಂದ ಕಾಡುತ್ತದೆ. ಆದ್ದರಿಂದ ಈ ಮಾಯೆಯನ್ನು ಮೊದಲು ದೂರಮಾಡುವದು ಮನುಷ್ಯನ ಕರ್ತವ್ಯವಾಗಿದೆಂದು ವಚನಕಾರನು ಇಲ್ಲಿ ಹೇಳಿದ್ದಾನೆ.

### ವಚನಗಳು.

೩೨. ನಿಚ್ಚ ನಿಚ್ಚ ಮುಟ್ಟಿ, ನಿಚ್ಚ ನಿಚ್ಚ ಅಗಲುವರ ಕಂಡು, ನಾಚಿತ್ತಯ್ಯ ಎನ್ನ ಮನ. ನಾಚಿತ್ತಯ್ಯ. ಸಂದಿಲ್ಲದಲ್ಲಿ ಸಂದು ಮಾಡಿದವರು ಸಿಮ್ಮಲಿಗೆಯ ಚನ್ನರಾಮನೆಂಬ ಲಿಂಗದಲ್ಲಿ ಸಂಸಾರ ಸಂಬಂಧಿಗಳಿವರು.

೩೩. ಪಂಚೇಂದ್ರಿಯವೆಂಬ ಪಾಪದ ಕೂಸು ಘಾಸಿ ಮಾಡಿ ಕಾಡುತ್ತಿದೆ. ಶಿವಶಿವಾ! ಏಸು ಪರಿಯ ಸಂತೈಸಿದಡೂ ಸೆಂತವಾಗದು. ಮುದ್ದು ತೋರಿ ಬುದ್ಧಿಗೆಡಿಸಿತ್ತು. ಅಲ್ಲಿ ಹುಸಿಯನೇ ಮುಸುಕಿ ಮುಸಿಮಣ್ಣ ಮಾಡಿತ್ತು. ನಮ್ಮ ಸಿಮ್ಮಲಿಗೆಯ ಚನ್ನರಾಮನೆಂಬ ಲಿಂಗದ ಸಂಗಿಗಳಲ್ಲದ ಅಧಮ ಮಾನವರ ಮರುಳಾಟವನಾಡಿಸಿ ಕಾಡಿತ್ತು ನೋಡಾ.

೩೪. ಮನವ್ಯಸನ ಕಂಗಳಲ್ಲಿ ಗರ್ಭವಾಗಿ ಕೈ ಪ್ರಸೂತವಾದ ಪ್ರಪಂಚವ ನೇನೆಂಬೆ? ಮಾಡಿದರಾಯಿತ್ತು, ಮಾದಲ್ಲಿ ಹೋಯಿತ್ತು.

ನೆಚ್ಚದಿರು. ನಿಶ್ಚಯುವಲ್ಲ ಸಿಮ್ಮಲಿಗೆಯ ಚನ್ನರಾಮ ಲಿಂಗವೆಂಬ ಸಂಸಾರ ಕೇಳಾ.

೩೫. ಯತಿಗಳ ವ್ರತಿಗಳ ಧೃತಿಗೆಡಿಸಿತ್ತು ಮಾಯೆ. ಕಲಿಗಳ ಬಲಗಳ ಬಲುಹ ಮುರಿಯಿತ್ತು ಮಾಯೆ. ಹರಿ ಬ್ರಹ್ಮ ರುದ್ರಾದಿಗಳೆಲ್ಲರ ತರಕಟ ಕಾಡಿತ್ತು ಮಾಯೆ. ಹೋ ಹೋ, ಸಿಮ್ಮಲಿಗೆಯ ಚನ್ನರಾಮ ನೆಂಬ ಲಿಂಗದಲ್ಲಿ ಮಾಯೆ, ಮರ್ಕಟ ವಿಧಿಯೇ.

೩೬. ವ್ಯಾಸ, ವಾಲ್ಮೀಕಿ, ಶುಕ. ಮೊದಲ್ಗೊಂಡು ಋಷಿಗಳು. ದೇಹಭಾವವುಳ್ಳವರಿಗೆ ಜಾರಿಕೆ, ಧಾರುಣಿಯು ಮೇಲಾದ ಜಾರಿಕೆ. ಅಳವುಗೆಟ್ಟಳವೆಯ ಅಳವೆಯಾ ಸಿಮ್ಮಲಿಗೆಯ ಚನ್ನರಾಮನಲ್ಲಿ?

೩೭. ಹುಸಿಯು ವ್ಯಾಧನ ನಿಜದಿಂದ ಕ್ಷತ್ರಿಯನೆಂದು ಬೋಧಿಸಲು ಹೊದೆ ದೊರೆಕೊಂಬುದಲ್ಲದೆ ಬೋಧೆ ದೊರಕೊಂಬುದೇ ಹೇಳಾ! ಜೀವ ಭೋಕ್ತೃ, ನಿಜ, ಪರಮನೆಂದೆನ್ನದೆ ಪರಮನೇ ಹುಸಿ ಜೀವನೇ ದಿಟವೆಂದು ಬೋಧಿಸಲು ಬೋಧೆ ದೊರಕೊಳ್ಳದು ನೋಡಾ. ಜ್ಞಾತೃ ಜ್ಞಾನ ಜ್ಞೇಯ ಜ್ಞಪ್ತಿ ಸುಖ ಪರಿಪೂರ್ಣನಲ್ಲ ಸಿಮ್ಮಲಿಗೆಯ ಚನ್ನರಾಮಾ.

೩೮. ಮನ ರಥದ ಮೇಲೆ ನಿಂತುದ ಭೇದಿಸಬಾರದಯ್ಯ ಸ್ವರ ಶಬ್ದವಾದಿಗಳು ಹರಿಯ ತಾವರಿಯರಾಗಿ. ಹರಿ ವಿರಿಂಚಿಗಳಿಗೆ ತೂರ್ಯ ವೆಲ್ಲಿಯದೋ? ತನು ಮುಖದನುಭಾವಿಗಳಿವರು. ಸಿಮ್ಮಲಿಗೆಯ ಚನ್ನ ರಾಮನೆಂಬ ಲಿಂಗದಲ್ಲಿ ವಾಗದ್ವೈತವ ನುಡಿವರಲ್ಲದೆ ನಿಜವೆಲ್ಲಿಯದೋ?

೩೯. ಹುಲ್ಲುಮನುಷ್ಯನ ಕಂಡು ಹುಲ್ಲೆ ತಾ ಬೆದರುವಂತೆ, ಇಲ್ಲದ ಶಂಕೆಯನುಂಟೆಂಬನ್ನಕ್ಕ ಅದಲ್ಲಿಯೇ ರೂಪವಾಯಿತ್ತು. ಹೇಡಿ ಗಳನೇಡಿಸಿ ಕಾಡಿತ್ತು ಸಿಮ್ಮಲಿಗೆಯ ಚನ್ನರಾಮನೆಂಬ ಭಾವದ ಗಸಣಿ.

## (೭) ಮಾಯೆಯನ್ನು ದೂರಮಾಡುವ ಉಪಾಯಗಳು.

**ವಿವರಣೆ** - ಮಾಯೆಯನ್ನು ದೂರಮಾಡುವ ಉಪಾಯಗಳನ್ನು ಇಲ್ಲಿ ವಚನಕಾರನು ಹೇಳಿರುವನು. ಮನುಷ್ಯನು ಮೊದಲು ಗುರುವಿನಲ್ಲಿ ಶರಣುಹೋಗಬೇಕು. (ವಚನ ೪೦) ಹುಡಿ ಹತ್ತದ ಗಾಳಿಯಂತೆ, ಕಾಡಿಗೆ ಹತ್ತದ ಆಲಿಕಲ್ಲಿನಂತೆ ಅವನು ಜಗತ್ತಿನ ವಿಕೃತಿಗಳು ತನಗೆ ಅಂಟದಂತೆ ನಡೆಯಬೇಕು. (ವಚನ ೪೧) ನಾನು ಜ್ಞಾನಿ ಎಂಬ ಅಭಿಮಾನವನ್ನು ತೊರೆಯಬೇಕು. (ವಚನ ೪೨) ದೇಹದಿಚ್ಛೆಗೆ ಹರಿಯಬಾರದು. ದುರ್ವಿಷಯವನ್ನು ಬಿಡಬೇಕು. (ವಚನ ೪೪) ಧನ, ವನಿತೆ ವಿಷಯ, ರಾಗ, ದ್ವೇಷ, ಭಯ, ಅಹಂಮಮತೆ ಇವುಗಳನ್ನು ಬಿಡಬೇಕು. (ವಚನ ೪೫) ಗುರುಪಾದವನ್ನು ನಂಬಬೇಕು. (ವಚನ ೪೬) ಆದರೆ ಗುರುವು ಮತ್ತು ಶಿಷ್ಯನು ತಿಳುವಳಿಕೆಯುಳ್ಳವರಾಗಿರಬೇಕು. (ವಚನ ೪೭) ಪ್ರಸಾದ ಭೋಗಿಯಾಗಬೇಕು. (ವಚನ ೪೮) ಸಾಮರಸ್ಯಭಾವದಿಂದ ಪ್ರಸಾದವನ್ನು ಭೋಗಿಸಬೇಕು. (ವಚನ ೪೯) ಹೀಗೆ ನಡೆದಲ್ಲಿ ಮಾಯೆಯ ಸಿಲ್ಕು ಬಿಡುವದೆಂದು ವಚನಕಾರನು ಇಲ್ಲಿ ಹೇಳಿದ್ದಾನೆ.

### ವಚನಗಳು.

೪೦. ಸಂಸಾರವೆಂಬತ್ತಿಗೆ ನಿರ್ಬುದ್ಧಿ ಸೊಸೆಯೊಬ್ಬಳು ಅಟ್ಟುಂಡಿಹೆನೆಂದು ಒಲೆಯ ಬೂದಿಯ ತೊಡುವನಕ, ಒಳಗೊಂದು ಕಿಡಿ ಇದ್ದು ಕೈ ಬೆಂದು, ಮರುಗುವಂತಾಯಿತ್ತಲ್ಲಾ ಎನಗೆ. ನಿಸ್ಸಂಗತಿಯ ಒಡಲೊಲೆಯ ಬೂದಿಯ ಕೆದಕುವನಕ ಒಳಗೊಂದು ಸುಜ್ಞಾನವೆಂಬ ಕಿಡಿ ಇದ್ದು ಎನ್ನ ಮನ ಬೆಂದು ಹೃದಯದಲ್ಲಿ ಮರುಗುತ್ತಿದ್ದೆನೇ? ಇದಕ್ಕೆ ಸಿತಾಳ ಮಂತ್ರ ಉಂಟೇ ಅಯ್ಯ? ಸಿಮ್ಮಲಿಗೆಯ ಚನ್ನರಾಮನೆಂಬ ಲಿಂಗದಲ್ಲಿ ನಿಜಗುಣ ಶರಣೆಂಬುದೇ ಮಂತ್ರ.

೪೧. ಇಹ ಪರವೆಂಬ ಇದ್ದೆಸೆಯಾದವನ ಪರಿ ಹೊಸತು. ನೆಯಿ ಹತ್ತದ ನಾಲಿಗೆಯಂತೆ, ಹುಡಿ ಹತ್ತದ ಗಾಳಿಯಂತೆ, ಕಾಡಿಗೆ ಹತ್ತದ ಆಲಿಯಂತಿರ್ದೆನಯ್ಯಾ. ಸಿಮ್ಮಲಿಗೆಯ ಚನ್ನರಾಮನೆಂಬ ಲಿಂಗದಲ್ಲಿ ಆಚರಿಸುತ್ತ ಆಚರಿಸದಂತಿರ್ದೆನಯ್ಯಾ.

**ಆಲಿ= ಕಣ್ಣು, ಕನೀನಿಕೆ.**

೪೨. ಕುರುಡ ಕಾಣನೆಂದು, ಕಿವುಡ ಕೇಳನೆಂದು, ಹೆಳವ ಹಿಡಿಯನೆಂದು, ಮರುಳ ಬೈದನೆಂದು, ಪಿಶಾಚಿ ಹೋದನೆಂದು ಮನ ಕದನ ಬಿಡುವನೇ ತಾನರಿವುಳ್ಳಾತ? ತತ್ವವನರಿಯದವರಲ್ಲಿ ಗುಣದೋಷವ ನರಸುವರೇ ಹೇಳಾ ಸಿಮ್ಮಲಿಗೆಯ ಚನ್ನರಾಮಾ?

**ಕದನಬಡು= ರೇಗು.**

೪೩. ಅಯ್ಯ ಹೊಂದಿಹನಲ್ಲ ಸಂಸಾರಿ ಜಂಗಮವಲ್ಲ. ಸಂಸಾರಿಗೂ ಜ್ಞಾನಿಗೂ ಸರಿ ಎನ್ನಬಹುದೆ ಸಿಮ್ಮಲಿಗೆಯ ಚನ್ನರಾಮಾ?

೪೪. ಸಾವು ತಡವಿಲ್ಲ. ನರಕ ದೂರವಿಲ್ಲ. ದೇಹದಿಚ್ಛೆಗೆ ಹರಿದು ಕೆಮ್ಮನೆ ಕೆಡಬೇಡ. ದುರ್ವಿಷಯವ ಬಿಡು ಬೇಗ. ಗುರುಪದವ ನಂಬು. ನಮ್ಮ ಸಿಮ್ಮಲಿಗೆಯ ಚನ್ನರಾಮನಲ್ಲಿ ನೀನು ಸುಖಿಯಪ್ಪೆ ಮರುಳೇ.

೪೫. ಸಂಸಾರವೆಂಬ ಹೇರಡವಿಯಂಧಕಾರದಲಿ ತೊಳಲುವ, ಆಧಿವ್ಯಾಧಿಗಳುಳ್ಳ, ಧನವನಿತೆ ವಿಷಯದ ರಾಗದ್ವೇಷದ ಭಯದ ತಾಪತ್ರಯದ ಕಾಳ್ಗಿಚ್ಚಿನಲ್ಲಿ ಸಾವ ಕೆಡುವ, ಅಹಂ ಮಮತೆಯ ಹೊತ್ತು ನಡೆವ ನರಗುರಿಗಳಾದ ಜೀವರಿಗೆ ಭವಬಂಧನ ಹರಿದು ಗುರುಪಥವಪ್ಪುದು. ನಿಜಗುಣನ ಶ್ರೀಪಾದವ ಶರಣುಹೊಕ್ಕಡೆ, ನಿತ್ಯ ಸುಖಪೂರಿತ ಸಿಮ್ಮಲಿಗೆಯ ಚನ್ನರಾಮ ತಾನಹೆ, ನಿಜಗುಣನ ಶ್ರೀಪಾದವ ನೆರೆ ನಂಬಿದಡೆ.

೪೬. ಕನ್ನಡಿ ತನ್ನದಾದಡೇನು? ಅನ್ಯರದಾದಡೇನು? ತನ್ನ ಮುಖವ ಕಾಣಬಂದರೆ ಸಾಲದೇ? ಸದ್ಗುರುವಾರಾದಡೇನು? ತನ್ನ ನರುಹಿದಡೆ ಸಾಲದೇ ಸಿಮ್ಮಲಿಗೆಯ ಚನ್ನರಾಮಾ?

೪೭. ಅರಿಯದ ಗುರು ಅರಿಯದ ಶಿಷ್ಯಂಗೆ ಅನುಗ್ರಹವ ಮಾಡಿ ಮೊಡೇನಪ್ಪುದು ಎಲವೋ? ಅಂಧಕನ ಕೈ ಅಂಧಕ ಹಿಡಿದಂತೆ. ಮುಂದೇನಪ್ಪುದು ಹೇಳಲೆ ಮರುಳೇ. ಬರುಮಾತಿನ ರಂಜನೆಯ ನಾಡದಿರು. ಸಿಮ್ಮಲಿಗೆಯ ಚನ್ನರಾಮನೆಂಬ ಲಿಂಗವು ಹುಸಿಯ ಹಸುಕವವನಲ್ಲ.

೪೮. ಹೆಡತಲೆಯ ಮಾತ ಬಲ್ಲರೆ ಪ್ರಸಾದಿ. ನಡುನೆತ್ತಿಯ ಮರ್ಮವ ಬಲ್ಲರೆ ಪ್ರಸಾದಿ. ಕಂಗಳ ಮಾಲೆಯ ಕೂರ್ಮನಾಪ್ಯಾಯನವ ಬಲ್ಲರೆ

ಪ್ರಸಾದಿ. ಅಂಗೇಂದ್ರಿಯುವನೊಂದು ಮುಖವ ಮಾಡಬಲ್ಲರೆ ಪ್ರಸಾದಿ. ನಿರಂಜನ ಜಂಗಮುವನಾರಾಧಿಸಬಲ್ಲರೆ ಪ್ರಸಾದಿ. ನಿರಾಲಂಬದ ಪ್ರಣವವನುಚ್ಚರಿಸಬಲ್ಲರೆ ಪ್ರಸಾದಿ. ಹ್ರೀಂ ಶಕ್ತ್ಯಾರೂಢನಾದ ಚರಪಾದಾಂಬುವ ಹ್ರೇಂ ಶಕ್ತಿಬದ್ಧನಾದ ಲಿಂಗಕ್ಕೆ ಶಾಂತಿಯ ಮಾಡಬಲ್ಲರೆ ಪ್ರಸಾದಿ. ಆಧಾರ ಬ್ರಹ್ಮರಂಧ್ರದೊಳಗಡಗಿದಕ್ಷರವ ನೋಡಿ ಓದಬಲ್ಲರೆ ಪ್ರಸಾದಿ. ಭಾವವ ಕ್ರಿಯುಲ್ಲಿಗೆ ತಂದು ಕ್ರಿಯಾಭಾವದಲಿ ನೆಲೆಗೊಳಿಸಬಲ್ಲರೆ ಪ್ರಸಾದಿ. ಒಳ ಹೊರಗೆಂಬ ಭಾವಗೆಟ್ಟು ಸುಳುಹಿನ ಪ್ರಸಾದದ ಕಳೆ ಬೆಳಗ ನುಂಗಿದ ಲಿಂಗಕ್ಕರ್ಪಿಸಿ ಸುಖಿಸಬಲ್ಲರೆ ಪ್ರಸಾದಿ. ಸ್ಥಾವರವ ಜಂಗಮದೊಳಗಡಗಿಸಿ ಜಂಗಮುವ ಸ್ಥಾವರವ ಮಾಡಬಲ್ಲರೆ ಪ್ರಸಾದಿ. ಇದು ಕಾರಣ ನಿಜಗುಣನೆಂಬ ಮಹಾಜಂಗಮ ನಿಜಾನಂದವೆಂಬ ಒಕ್ಕು ಮಿಕ್ಕ ಘನ ಪ್ರಸಾದವ ಕೊಟ್ಟನಾಗಿ ಸಿಮ್ಮಲಿಗೆಯ ಚನ್ನರಾಮನೆಂಬ ಲಿಂಗಕ್ಕೆ ಕೊಟ್ಟು ಕೊಳಲು ಎನ್ನ ಹಿಂಗದಾಲಿಂಗಿಸಿದನಾಗಿ ಪ್ರಸಾದಿಯಾದೆ.

೪೯. ಕಂಡುದು ಕೇಳಿದುದು ಲಿಂಗಕ್ಕೆ ತಾಕಿತ್ತು ಸೋಂಕಿತ್ತು. ಕಾಯುದ ಕೈಯ್ಯಲ್ಲಿ ಲಿಂಗಾರ್ಪಿತವಾಯಿತ್ತೆಂದರೆ ತಪ್ಪಿತ್ತು ನೋಡಾ. ತಾನರಿವುತ್ತ ಕೊಡಲುಂಟೇ ಲಿಂಗಕ್ಕೆ? ಸಿಮ್ಮಲಿಗೆಯ ಚನ್ನರಾಮನೆಂಬ ಲಿಂಗದಲ್ಲಿ ಶರಣನಲ್ಲ, ಆತ ಸಂದೇಹಿ.

## (೭) ಸಾಮರಸ್ಯ.

**ವಿವರಣೆ:—** ಮನುಷ್ಯನು ಹಿಂದೆ ಹೇಳಿದಂತೆ ನಡೆದಲ್ಲಿ ಅವನು ಇಹಲೋಕದ ಯಾತ್ರೆಯನ್ನು ಸುಖವಾಗಿ ಮುಗಿಸಿಕೊಂಡು ಅಖಂಡಿತ ಪದವನ್ನು ಹೊಂದುವನು. ಇದು ಸಾಮರಸ್ಯವೆನಿಸಿಕೊಳ್ಳುವದು. ಆಗ ಬಾಹ್ಯ ಕ್ರಿಯೆಗಳು ನಿಲ್ಲುವವು. ಭಾಷೆಗಳು ಅನಾವಶ್ಯಕವಾಗುವವು. ಲಿಂಗ ಜಂಗಮಕ್ಕೆ ಕೊಟ್ಟೆಹೆನೆಂಬ ಭಾವವಡಗುವದು. ( ವಚನ ೫೦ ) ಸಂಸಾರ ರತಿಯು ಅಡಗುವದು. ಸುಖದ ಸಾರವು, ನೆಚ್ಚಿಕೆಯು, ಮೆಚ್ಚಿಕೆಯು ನಿಲ್ಲುವವು. ನಿಷ್ಠೆಯು ನಿಃಸಂದೇಹವಾಗುವದು. ಪರಮಾತ್ಮನ ಸಾಮರಸ್ಯ ಪೂಜೆಯು ಒದಗಿ ಪ[illegible]ನಲ್ಲಿಯೇ ಅವನು ಅಡಗುವನು. (ವಚನ ೫೧) ಜನನ, ಗುಣಕರ್ಮ, ಬಂಧನಗಳು ಇವಾವೂ ಇಲ್ಲವಾಗುವವು. (ವಚನ ೫೨) ಮಾಯೆಯ ಕೃತಕವು ಅಳಿದು ಹೋಗುವದು. ಹೋದಕೂಡಲೆ ನಿಜವು ನಿಲ್ಲುವದು. ಅದೇ ಲಿಂಗೈಕ್ಯವು.

### ವಚನಗಳು.

೫೦. ಸಿರದ ಕಂಗಳ ಕರದ ಶಿಸುವನಿಕ್ಕಿ ಮೆರೆದರು. ಭಾಷೆಗಳ ಹಂಗು ಹಳಸಿ ಹೋಯಿತ್ತು. ಸಿಮ್ಮಲಿಗೆಯ ಚನ್ನರಾಮನೆಂಬ ಲಿಂಗಜಂಗಮಕ್ಕೆ ಕೊಟ್ಟೆಹೆನೆಂಬ ಶಬ್ದವಳಿಯಿತ್ತು.

೫೧. ರತಿಯುಡಗಿತ್ತು. ಸಾರ ಸವೆಯಿತ್ತು. ನಚ್ಚಿಕೆ ನಾಚಿತ್ತು. ಮೆಚ್ಚಿಕೆ ಮರೆಯಿತ್ತು. ನಿಷ್ಠೆ ನಿಃಸಂದೇಹಕ್ಕೊಳಗಾಯಿತ್ತು. ನಮ್ಮ ಸಿಮ್ಮಲಿಗೆಯ ಚನ್ನರಾಮನೆಂಬ ಲಿಂಗದಲ್ಲಿ ಖಂಡಿತ ಪೂಜೆ ಭಂಡಾಯಿತ್ತು.

೫೨. ಜನನಾದಿಯಿಲ್ಲದವನಿಗೆ ಜನನವನೇಕೊಡಂಬಡುವೆ? ಗುಣಕರ್ಮವಿಲ್ಲದ ನಿನಗೆ ನಿರ್ವಿಷಯವನೇಕೊಡಂಬಡುವೆ? ಬಂಧವಿಲ್ಲದ ನಿನಗೆ ಮೋಕ್ಷವನೇಕೊಡಂಬಡುವೆ? ಇವೇನೂ ಇಲ್ಲದ ಒಡಂಬಡಿಕೆ ನಿನಗೆ ಸಿಮ್ಮಲಿಗೆಯ ಚನ್ನರಾಮ.

೫೩. ಹೆರದ ಮುನ್ನವೇ ಹುಟ್ಟಿ ಹೆತ್ತಲ್ಲಿಯೇ ಸತ್ತುದು ನೋಡಾ. ಅದು ಮಾಯೆಯ ಕೃತಕದ ಗರ್ಭದ ನೆಳಲತಿ ಸುಳುಹು. ಅದಲ್ಲಿಂದ ಹೋಯಿತ್ತು. ಹೋದಲ್ಲಿ ನಿಂದಿತ್ತು ಸಿಮ್ಮಲಿಗೆಯ ಚನ್ನರಾಮನೆಂಬ ಲಿಂಗೈಕ್ಯವು.

# ಆರುವಿನ ಮಾರಿತಂದೆಗಳ ವಚನಗಳು.

ಆರುವಿನ ಮಾರಿ ತಂದೆ ಎಂಬ ಹೆಸರಿನ ವಚನಕಾರನು ರಚಿಸಿದ ವಚನಗಳು ಕೆಳಗೆ ಕೊಡಲ್ಪಟ್ಟಿವೆ, ಈತನು ೧೧೬೦ರಲ್ಲಿ ಇದ್ದಿರಬಹುದೆಂದು ರಾ॥ ಬ॥ ಆರ್. ನರಸಿಂಹಾಚಾರ್ಯರು ಅಭಿಪ್ರಾಯ ಪಟ್ಟಿರುತ್ತಾರೆ. ಆದರೆ ಈತನು ಬಸವೇಶ್ವರನ ಕಾಲದಲ್ಲಿ ಶಿವಾನುಭವ ಮಂಟಪದಲ್ಲಿದ್ದನೆಂದು ವೀರಶೈವರಲ್ಲಿ ಐತಿಹ್ಯವಿರುವದಿಲ್ಲ. ಆದ್ದರಿಂದ ಬಸವೇಶ್ವರನಕಿಂತಲೂ ಈಚಿನವನಿರಬೇಕು. ಆದರೆ ೧೫ ನೇ ಶತಮಾನದ ಅಂತ್ಯಭಾಗದಲ್ಲಿ ಪ್ರಸಿದ್ಧಿ ಹೊಂದಿದ ಗುಬ್ಬಿ ಮಲುಹಣನು ಈ ಆರುವಿನ ಮಾರಿತಂದೆಯ ಉಕ್ತಿಗಳನ್ನು ತನ್ನ ಗಣಭಾಷ್ಯ ರತ್ನಮಾಲೆಯಲ್ಲಿ ಉದಹರಿಸಿದ್ದಾನೆ. ಅಲ್ಲದೆ ಅನೇಕ ವಚನಸಂಗ್ರಹಗಳಲ್ಲಿ ಈತನ ವಚನಗಳೂ ಆಗಿಂದಾಗ್ಗೆ ಬರುತ್ತಿರುತ್ತವೆ. ಆದ್ದರಿಂದ ಈತನನ್ನು ನಾವು ವೀರಶೈವರಲ್ಲಿ ಆಗಿಹೋದ ಪುರಾತನಕಾಲದ ಮಹತ್ವದ ವಚನಕಾರರಲ್ಲಿ ಗಣಿಸಲು ಏನೂ ಅಡ್ಡಿ ಇಲ್ಲ.

ಇವನ ಹೆಸರಿಗೆ ಸರಿಯಾಗಿ ಇವನು ಬಹು ಜ್ಞಾನಿಯಾಗಿದ್ದನೆಂಬದು ಈತನ ವಚನಗಳಿಂದಲೇ ತೋರಿಬರುತ್ತದೆ. ಈ ಗ್ರಂಥದಲ್ಲಿ ಅವನ ಅನೇಕ ವಚನಗಳಿಗೆ ಟೀಕೆ ಇದ್ದುದನ್ನು ವಾಚಕರು ಕಾಣಬಹುದು. "ಬೆಡಗಿನ ವಚನಗಳು" ಎಂಬ ಗ್ರಂಥದಲ್ಲಿ ಈತನ ವಚನಗಳು ಅನೇಕವಾಗಿ ಉದಹರಿಸಲ್ಪಟ್ಟಿದ್ದು ಅವುಗಳಿಗೆ ಟೀಕೆ ಇದ್ದುದನ್ನೇ ನಾವು ಇಲ್ಲಿ ಎತ್ತಿಬರೆದಿರುತ್ತೇವೆ.

ಈ ವಚನಕಾರನ ವಚನಗ್ರಂಥವು ನಮಗೆ ಸಮಗ್ರವಾಗಿ ದೊರೆತಿಲ್ಲಾದ್ದರಿಂದ ನಮಗೆ ದೊರೆದ ವಚನಗಳನ್ನಷ್ಟೇ ನಾವು ಒತ್ತಟ್ಟಿಗೆ ಸಂಗ್ರಹಿಸಿ ಈ ಗ್ರಂಥಮೂಲಕ ಪ್ರಸಿದ್ಧಿಸಿದ್ದೇವೆ.

## ಪರಮಾತ್ಮನ ಅರಿವು.

**ವಿವರಣೆಃ—** ಪರಮಾತ್ಮನು ಜಗತ್ತಿನಲ್ಲೆಲ್ಲ ವ್ಯಾಪಿಸಿರುತ್ತಾನೆ. ಆದರೆ ಅವನು ತನ್ನನರಿವವರ ಹೃದಯದಲ್ಲಿ ಮಾತ್ರ ಇದ್ದು ಅವರನ್ನು ಪ್ರೇರಣೆ ಮಾಡುತ್ತಾನೇ ಹೊರ್ತು ಉಳಿದವರಲ್ಲಿ ಕಾಣಿಸಿಕೊಂಬುದಿಲ್ಲ. (೧) ಅನೇಕರು ಮನುಷ್ಯನು ಅಂಗವನ್ನಳಿದ ಬಳಿಕ ಪರಮಾತ್ಮನು ಕಾಣುವನೆಂದು ತಿಳಿಯುತ್ತಾರೆ. ಆದರೆ ಇದು ನಿಜವಾದುದಲ್ಲ. ಅಂಗದಲ್ಲಿಯೇ ಲಿಂಗವನ್ನು ಕಾಣಬೇಕು. ಆದರೆ ಹೀಗೆ ಕಾಣುವಲ್ಲಿ ಅರಿವುದೂ ಮರೆವುದೂ ಇವುಗಳ ಸಂದವನ್ನು ತಿಳಿದು ವರ್ತಿಸಿದಲ್ಲಿ ಪರಮಾತ್ಮನ ಬೆಳಗು ಕಾಂಬುವುದು. (೨) ಅದರಂತೆಯೇ ಆದಿ, ಮಧ್ಯ, ಅವಸಾನ ಎಂಬ ಭೇದವನ್ನು ಮಾಡಿಕೊಂಡರೂ ಪರಮಾತ್ಮನು ಕಾಣಲಾರನು. ಅವನನ್ನು ಅರಿಯುವಲ್ಲಿ ಹೀಗೆ ಭೇದಭಾವಮಾಡಲು ಬರಲಾರದು. (೩) ಆದರೆ ಜ್ಞಾನದಲ್ಲಿ ಭಕ್ತನು ಶರಣಹೊಕ್ಕು ಮರವೆಯನ್ನು ಬಿಟ್ಟು ಬಿಡಬೇಕು. (೪) ತನ್ನ ಅರಿವೆಯಮೂಲಕ ಮಲವನ್ನು ಬಿಟ್ಟು ಆಚರಿಸಬೇಕು. ಈ ವಿಚಾರಗಳು ವೇದಾಂತಿಗಳಲ್ಲಿಯೂ ಸಿದ್ಧಾಂತಿಗಳಲ್ಲಿಯೂ ಒಂದೆ ಇವೆ. (೫) ಎಂದು ವಚನಕಾರನು ಹೇಳಿ ಅಹಂಕಾರವನ್ನು ದೂರಮಾಡಿ, ಸುಜ್ಞಾನದಿಂದ ಜೀವಭಾವವನ್ನು ನಿವೃತ್ತಿಮಾಡಿ, ಗುರುಕಾರುಣ್ಯದಿಂದ ಸರ್ವಾಂಗಲಿಂಗ ಸಂಬಂಧಿಯಾಗಬೇಕೆಂದು ಕಡೆಗೆ ಬೋಧಿಸುತ್ತಾನೆ.

### ವಚನಗಳು.

೧. ಸಿದ್ಧರಸ ಲೇಸೆಂದಡೆ ತಾನಿದ್ದ ಕುಡಿಕೆ ಹೇಮವಾದುದಿಲ್ಲ, ಲೋಹಕ್ಕಲ್ಲದೆ ವೇದಿಪುದಿಲ್ಲ. ವಸ್ತು ಸರ್ವದಲ್ಲಿ ಸಂಪೂರ್ಣವಾಗಿರ್ದಡೇನು? ತನ್ನನರಿವರ ಹೃದಯದಲಲ್ಲದೆ ಇರ ಸದಾಶಿವಮೂರ್ತಿ ಲಿಂಗದ ಇರವು.

೨. ಅಂಗವ ಮರೆದು ಲಿಂಗವನರಿಯಬೇಕೆಂಬರು. ಕರಣಂಗಳರತು ಘನಲಿಂಗವನರಿಯಬೇಕೆಂಬರು. ಅದು ನಾ ಸಿಕ್ಕಿದ ತಡೆ ಕೇಳಿರಣ್ಣಾ. ಆಕಾರ ಬಯಲಾದಡೆ ಮುಗಿಲು ರೂಪ ತೋರಿ ಅಳಿವ ಪರಿ ಇನ್ನೆಂತೋ? ನಕ್ಷತ್ರ ಚಂದ್ರ ಸೂರ್ಯಾದಿಗಳು ಗ್ರಹ ಪ್ರವರ್ತನವಹ ಪರಿ ಇನ್ನೆಂತೋ? ಅದು ಕಾರಣದಲ್ಲಂಗವಿದ್ದಂತೆ ಲಿಂಗವನರಿಯಬೇಕು.

ಕರಣಂಗಳಿದ್ದಂತೆ ಘನಲಿಂಗವ ಭೇದಿಸಬೇಕು. ಹೀಗಲ್ಲದೆ ಮರಿವಾ ಯುಲಿಲ್ಲ. ಅರದು ಮರೆಯುಲಿಲ್ಲ. ಈ ಉಭಯದ ಸಂದಿಯಲ್ಲಿ ಬೆಳಗು ತೋರುತ್ತಿದೆ ಸದಾಶಿವಮೂರ್ತಿಲಿಂಗದಲ್ಲಿ.

**ಅರತು = ಒತ್ತಿ, ನಾಶವಾಗಿ; ತಡೆ = ಪ್ರತಿಬಂಧ**

೩. ಆದಿ ಮಧ್ಯಾವಸಾನವನರಿಯಬೇಕೆಂಬರು. ಆದಿಯಲ್ಲಿ ನಿಂದು ಮಧ್ಯದಲ್ಲಿ ಕಂಡು ಅವಸಾನದಲ್ಲಿ ಅರಿಯಬೇಕೆಂಬರು. ಅರಿವುದೊಂದೋ ಮೂರೋ ಎಂದಲ್ಲಿ ನಿಂದಿತ್ತು. ನಿಂದುದ ಕಳೆದು ಸಂದ ಹರಿ ಸದಾ ಶಿವಮೂರ್ತಿಲಿಂಗವನರಿವುದಕ್ಕೆ.

೪. ಕೆಯಿ ಬೆಳೆವಲ್ಲಿ ಸರಿಗೆ ಮುನಿವರಲ್ಲದೆ ಬೆಳೆಗೆ ಮುನಿವರೇ ಅಯ್ಯ? ಅರಿದಂಗವ ತಾಳಿದವರಲ್ಲಿ ಮರವೆಗೆ ಮುನಿವರಲ್ಲದೆ ಅರಿವಿಗೆ ಮುನಿವರುಂಟೆ ಅಯ್ಯ? ಖುಲ್ಲ ಆವಿಂಗೆ ಕಾಲ ಕಟ್ಟುವರಲ್ಲದೆ ಮೊಲೆಗೆ ಕಟ್ಟಿದರುಂಟೆ ಅಯ್ಯ? ಗುರುವಾದಡಾಗಲಿ, ಲಿಂಗವಾದಡಾಗಲಿ, ಜಂಗಮವಾದಡಾಗಲಿ, ಅರಿವಿಂಗೆ ಶರಣು, ಮರವಿಂಗೆ ಮಥನವ ಮಾಡ ಬಲ್ಲರೆ, ಅದು ನೀವು ಕೊಟ್ಟ ಅರವಿನ ಮಾರಸಿರಲು ಸದಾಶಿವ ಮೂರ್ತಿಲಿಂಗದ ಬರವು.

**ಕೆಯಿ = ಹೊಲ; ಸರಿ = ಮಳೆ;**

೫. ವೇದವೇದಾಂತಂಗಳಿಂದ, ಸಿದ್ಧಿಸಿದ್ಧಾಂತಂಗಳಿಂದ ಎಲ್ಲಿ ನೋಡಿದರೂ ವಿಚಾರ ಒಂದೇ ಭೇದ. ಅರಿದಲ್ಲಿ ಮಲಕ್ಕೆ ಹೊರಗು. ಮರೆತಲ್ಲಿ ಮಲಕ್ಕೊಳಗು. ಅರಿವು ಮರವು ನಿಂದಲ್ಲಿ ಸದಾಶಿವಮೂರ್ತಿ ಲಿಂಗದ ಬೆಳಗು.

೬. ಬ್ರಹ್ಮಾಂಡದ ಧರೆಯ ಮೇಲೆ ಅರಿಬಿರಿದಿನ ಮಂತಣದ ಗಿರಿ ಹುಟ್ಟಿತ್ತು. ಆ ದುರ್ಗಕ್ಕೆ ಮೂವರು ಧೊರೆಗಳು ಹುಟ್ಟಿದರು. ಒಬ್ಬ ನರಪತಿ, ಒಬ್ಬ ಸುರಪತಿ. ಒಬ್ಬ ಸಿರಿಮುರಿಗೊಡೆಯ. ಮೂವರ ದುರ್ಗ ಒಂದೇಯಾಗಿ ಸಂದೇಹಕ್ಕೀಡಾಗುತ್ತಿದೆ. ಸದಾಶಿವ ಮೂರ್ತಿಲಿಂಗಸಂಗ ವಾಗಿಯಲ್ಲದೆಯಾಗದು.

ಟೀಕು — ಆ ಪ್ರಪಂಚ ಬ್ರಹ್ಮಾಂಡದಿಂದುದಯವಾದ ಪೃಥ್ವಿಯಂ ಶದ ತನುವೆಂಬದೀಗ ಬ್ರಹ್ಮಾಂಡದ ಧರೆಯ ಮೇಲೆ ಎಂಬ ಶಬ್ದಕ್ಕರ್ಥ.

ಅಂತಪ್ಪ ದೇಹದಲ್ಲಿ ಆರಿಗೂ ಸಾಧ್ಯವಲ್ಲದ ಭಿನ್ನಭಾವ ಯುಕ್ತವಾದ ಹಂಕಾರವೆಂಬ ಗಿರಿ ಹುಟ್ಟಿತ್ತೆಂಬುದೀಗ ಅರಿಬಿರಿದಿನ ಮಂತಣದ ಗಿರಿ ಪುಟ್ಟಿತ್ತೆಂಬ ಶಬ್ದಕ್ಕರ್ಥ. ಅಂತಪ್ಪಹಂಕಾರವೆಂಬ ದುರ್ಗಕ್ಕೆ ಜೀವತ್ರಯಂಗಳೆ ಕರ್ತರಾಗಿಹರೆಂಬುದೀಗ ಆ ದುರ್ಗಕ್ಕೆ ಮೂವರು ಧೊರೆಗಳು ಹುಟ್ಟಿದರು ಎಂಬ ಶಬ್ದಕ್ಕರ್ಥ. ಕರ್ಮೇಂದ್ರಿಯಂಗಳ ವ್ಯವಹಾರಕ್ಕೆ ಕರ್ತನಾಗಿಹನು ವಿಶ್ವನೆಂಬುದೀಗ ಒಬ್ಬ ನರಪತಿ ಎಂಬ ಶಬ್ದಕ್ಕರ್ಥ. ಜ್ಞಾನೇಂದ್ರಿಯಂಗಳ ವ್ಯವಹಾರಕ್ಕೆ ಕರ್ತನಾಗಿಹನು ತೈಜಸನೆಂಬುದೀಗ ಒಬ್ಬ ಸುರಪತಿ ಎಂಬ ಶಬ್ದಕ್ಕರ್ಥ. ತಾಪತ್ರಯಾಗ್ನಿಸಂಬಂಧವಾದ ಮಾಯಾ ಭೋಗಕ್ಕೆ ಕರ್ತನಾಗಿಹನು ಪ್ರಾಜ್ಞನೆಂಬುದೀಗ ಒಬ್ಬ ಸಿರಿಮುರಿಗೊಡೆಯನೆಂಬ ಶಬ್ದಕ್ಕರ್ಥ. ಆ ಜೀವತ್ರಯಂಗಳಿಗೆ ಆಧಾರವಾದ ಅಹಂಕಾರವೆಂಬ ದುರ್ಗ ಒಂದೇಯಾಗಿ ಜೀವಭಾವದ ಸಂಕಲ್ಪಕ್ಕೊಳಗಾಗುತ್ತಿಹುದೆಂಬುದೀಗ ಮೂವರ ದುರ್ಗ ಒಂದೇಯಾಗಿ ಸಂದೇಹಕ್ಕೀಡಾಗುತ್ತದೆ ಎಂಬ ಶಬ್ದಕ್ಕರ್ಥ. ಸುಜ್ಞಾನೋದಯದಿಂ ಜೀವಭಾವ ನಿವೃತ್ತಿ ಮಾಡಿ ಶ್ರೀಗುರುಕಾರುಣ್ಯದಿಂ ಸರ್ವಾಂಗಲಿಂಗ ಸಂಬಂಧಿಯಾದ ಶರಣಂಗಲ್ಲದೆ ಅಹಂಕಾರವಳಿದು ನಿರಹಂಕಾರವಾಗಬೇಕೆಂಬುದೀಗ ಸದಾಶಿವಮೂರ್ತಿಲಿಂಗಸಂಗವಾಗಿಯಲ್ಲದೆಯಾಗದು ಎಂಬ ಶಬ್ದಕ್ಕರ್ಥ.

## ಮಾಯೆಯನ್ನು ದೂರಮಾಡುವದು.

**ವಿವರಣೆ**:-- ಮಾಯೆಯು ಭೇದಭಾವವನ್ನು ಹುಟ್ಟಿಸುತ್ತದೆ. ಈ ಭೇದಭಾವವಡಗಲು ಪರಮಾತ್ಮಲಿಂಗವು ಪ್ರಕಾಶಿಸಹತ್ತುವದು. (೭) ಇಂಥ ಮಾಯೆಯನ್ನು ಸಂಹರಿಸುವದು ಜೀವನ ಮುಖ್ಯ ಕರ್ತವ್ಯವು. ಸುಜ್ಞಾನ ಪ್ರಕಾಶದಿಂದಲೇ ಈ ಮಾಯೆಯ ಸಂಹಾರವಾಗುವದು. (೮) ಆದರೆ ಮನುಷ್ಯನ ದೇಹದಲ್ಲಿ ಮನಸ್ಸೆಂಬುದಿದ್ದು ಅದು ಅಜ್ಞಾನದ ಕಡೆಗೆ ಅವನನ್ನು ಹೊರಳಿಸುತ್ತದೆ. ಆದರೆ ಸುಜ್ಞಾನೋದಯವಾಗಲು ಮನೋವರ್ತನೆಯಲ್ಲಿ ಚಿದ್ಬಿಂದುವು ಪ್ರಭಾವಿಸುತ್ತದೆ. ಅದು ಪ್ರಪಂಚವನ್ನು ನಿವೃತ್ತಿಮಾಡಿ ಮನವನ್ನು ಅವಗ್ರಹಿಸುತ್ತದೆ. ಆದರೆ ಇದು ಗುರುಕಾರುಣ್ಯದಿಂದ ಪ್ರಾಪ್ತವಾಗುತ್ತದೆ. (೯-೧೧) ಈ ಮಾಯೆಯನ್ನು ಹೋಗಲಾಡಿಸುವದು ಬಹು ದುಸ್ತರವಾದದ್ದು. ಬ್ರಹ್ಮ, ವಿಷ್ಣು, ರುದ್ರರೆಲ್ಲರೂ ಅದರ ಪಾಶಕ್ಕೆ ಒಳಗಾಗಿರುವರು. (೧೪)

೭. ಸಕಲವೆಂಬನ್ನಕ್ಕ ನಿಃಕಲ ಉಂಟು. ನಿಃಕಲವೆಂಬುದು ನಾಮ ರೂಪು. ಅದೆಂತೆಂದೊಡೆ ತ್ರಿವಿಧವ ಕೂಡಿ ಬೆಳಗುವ ಜ್ಯೋತಿಯ ಒಡವೆ ಘಟವಾಗಿ ಬೆಳಗೆ ಪ್ರಾಣವಾಗಿ ತೋರುವನ್ನಕ್ಕ ಮಾಯಾಪಂಗವಾಗಿಹುದು. ಆದರ ಬೆಡಗಡಗೆ ಸದಾಶಿವಮೂರ್ತಿ ಲಿಂಗವು ನಿರ್ಮಾಯ.

೮. ಕೊಂಬಿನ ಮೇಲಣ ಹಕ್ಕಿಯು ಆಕಾಶದ ಮೇಲಣ ಗಿಡಗ ಹಿಡಿಯಿತ್ತು. ಕೊಂಬು ಹಕ್ಕಿಯ ಕೂಡದೆ ಗಿಡಗನ ಕಡಿಯಿತ್ತು ಹಕ್ಕಿಯು ಗಿಡಗನ ಕೂಡೆ ಕಡಿವ ಕೊಂಬ ಚಿಟ್ಟೆಯ ಮರಿ ನುಂಗಿತ್ತು ಸದಾಶಿವಮೂರ್ತಿ ಲಿಂಗವನರಿಯಿತ್ತು.

ಟೀಕು:— ಶಿವಜ್ಞಾನೋದಯವಾದ ಶರಣನ ಶಿವಭಾವದಲ್ಲಿ ಸನ್ನಿಹಿತವಾಗಿರ್ಪ ಪರಮಾತ್ಮನೆಂಬುದೀಗ ಕೊಂಬಿನ ಮೇಲಣ ಹಕ್ಕಿ ಎಂಬ ಶಬ್ದಕ್ಕರ್ಥ. ಆತ್ಮಾಕಾಶದಲ್ಲಿರ್ಪ ಮಾಯೆಯು ಆ ಪರಮಾತ್ಮನನುಗ್ರಹಿಸಿತ್ತೆಂಬುದೀಗ ಆಕಾಶದ ಮೇಲಣ ಗಿಡಗ ಹಿಡಿಯಿತ್ತೆಂಬ ಶಬ್ದಕ್ಕರ್ಥ. ಆ ಶಿವಭಾವವು ಪರಮಾತ್ಮನೆಂಬ ಪಕ್ಷಿಯು ಮಾಯೆಗೆ ಕೂಡದೆ ಎಂಬುದೀಗ ಕೊಂಬು ಹಕ್ಕಿಯ ಕೂಡದೆ ಎಂಬ ಶಬ್ದಕ್ಕರ್ಥ. ಆ ಶಿವಭಾವವು ಮಾಯೆಯ ಸಂಹರಿಸಿತ್ತೆಂಬುದೀಗ ಗಿಡಗನ ಕಡಿಯಿತ್ತೆಂಬ ಶಬ್ದಕ್ಕರ್ಥ. ಆ ಪರಮಾತ್ಮನೆಂಬ ಪಕ್ಷಿಯನು ಮಾಯೆ ಎಂಬ ಗಿಡಗನು

ಆ ಸಕಲ ಪ್ರಪಂಚ ನಿವೃತ್ತಿಯ ಮಾಡುವ ಶಿವಭಾವವನು ಸೂಕ್ಷ್ಮಪ್ರಾವ ಚಿತ್ತಿನಿಂದುದಿಸಿದ ಸುಜ್ಞಾನ ಪ್ರಕಾಶವನವಗ್ರಹಿಸಿತ್ತೆಂಬುದೀಗ ಹಕ್ಕಿಯು ಗಿಡಗನ ಕೂಡೆ ಕಡಿವ ಕೋಂಬ ಚಿಟ್ಟೆಯು ಮರಿ ನುಂಗಿತ್ತು ಸದಾಶಿವ ಮೂರ್ತಿಲಿಂಗವನರಿಯಿತ್ತೆಂಬ ಶಬ್ದಕ್ಕರ್ಥ.

೯. ಧರೆಯ ಹಾವು ಆಕಾಶದೊಳಗಣ ಕಪ್ಪೆ ಒಡಗೂಡಿ ಊರವೆಯಾಗಿ ಹಾವು ಗಾರುಡವ ನುಂಗಿ ಕಪ್ಪೆ ಹಿಡಿವ ಜೋಗಿಯ ನುಂಗಿತ್ತು. ಮತ್ತೆ ಕಪ್ಪೆಗೆ ಸರ್ಪಗೆ ವಿರೋಧವಾಗಿ ಕಪ್ಪೆ ಜೋಗಿಯನುಗುಳಿ ಘಟ ಸರ್ಪನ ನುಂಗಿತ್ತು. ಕಪ್ಪೆಯ ವಿಷ ತಾಗಿ ಜೋಗಿ ಮತ್ತನಾದ. ಇಂತೀ ಭೇದದಿಂದಿರವು ತಾನೆ ಸದಾಶಿವಮೂರ್ತಿಲಿಂಗವು ತಾನು ತಾನೆ.

ಟೀಕು:— ಪಂಚಭೂತಾಶ್ರಯವಾದ ದೇಹದಲ್ಲಿರ್ಪ ಮನಸ್ಸೆಂಬುದೀಗ ಧರೆಯ ಹಾವು ಎಂಬ ಶಬ್ದಕ್ಕರ್ಥ. ಆತ್ಮಾಕಾಶದಲ್ಲಿರ್ಪ ಅಜ್ಞಾನ ಸ್ವರೂಪಿಣಿಯಾದ ಮಾಯೆಯೆಂಬುದೀಗ ಆಕಾಶದೊಳಗಣ ಕಪ್ಪೆ ಎಂಬ ಶಬ್ದಕ್ಕರ್ಥ. ಅಂತಪ್ಪ ಮನ ಮಾಯೆ ಎರಡೂ ದೇಹದಲ್ಲಿ ಒಂದೇ ಸ್ವರೂಪಿನಿಂದಿರುತ್ತಿಹವೆಂಬುದೀಗ ಒಡಗೂಡಿ ಊರವೆಯಾಗಿ ಎಂಬ ಶಬ್ದಕ್ಕರ್ಥ. ಅಂತಪ್ಪ ಮನಸ್ಸನು ಆಹ್ವಾನಿಸಿ ಹಿಡಿಯಬೇಕೆಂಬ ಭಿನ್ನ ಜ್ಞಾನಿಗಳ ಸರ್ವಾಂಗವನು ಸಂಕಲ್ಪ ಭಾವದಿಂದವಗ್ರಹಿಸಿತ್ತೆಂಬುದೀಗ ಹಾವು ಗಾರುಡವ ನುಂಗಿ ಎಂಬ ಶಬ್ದಕ್ಕರ್ಥ. ಆ ಮಾಯೆ ಮನವ ಆಹ್ವಾನಿಸಿ ಹಿಡಿಯಬೇಕೆಂಬ ಖಂಡಿತ ಜ್ಞಾನಿಗಳ ತಾನೇ ಅವಗ್ರಹಿಸಿತ್ತೆಂಬುದೀಗ ಕಪ್ಪೆ ಹಿಡಿವ ಜೋಗಿಯ ನುಂಗಿತ್ತೆಂಬ ಶಬ್ದಕ್ಕರ್ಥ. ಇಂತಪ್ಪ ಪಿಂಡದಲ್ಲಿ ಸುಜ್ಞಾನೋದಯವಾಗಲು ಆ ಮಾಯೆಯುಳಿದು ನಿವೃತ್ತಿಮುಖದಿಂ ಚಿದ್ಬಿಂದುವೆ ಪ್ರಭಾವಿಸಿ ಮನೋವರ್ತನೆಯ ನಿವೃತ್ತಿ ಮಾಡಿತ್ತೆಂಬುದೀಗ ಮತ್ತೆ ಕಪ್ಪೆಗೆ ಸರ್ಪಗೆ ವಿರೋಧವಾಗಿ ಎಂಬ ಶಬ್ದಕ್ಕರ್ಥ. ಆ ಪರಮ ಶಾಂತಿಯ ಚಿದ್ಬಿಂದು ಶಂಕಾವಿಷ ಸಂಬಂಧಿಯಪ್ಪ ಜೀವನ ಪ್ರಪಂಚಿನಿಂ ಬೇರ್ಪಡಿಸಿತ್ತೆಂಬುದೀಗ ಕಪ್ಪೆ ಜೋಗಿಯನುಗಳಿ ಎಂಬ ಶಬ್ದಕ್ಕರ್ಥ. ಆ ಜೀವಭಾವ ಪ್ರಪಂಚ ನಿವೃತ್ತಿಮಾಡಿದ ಚಿದ್ಬಿಂದುಪ್ರಕಾಶವು ಮನವನವಗ್ರಹಿಸಿತ್ತೆಂಬುದೀಗ ಸರ್ಪನ ನುಂಗಿತ್ತೆಂಬ ಶಬ್ದಕ್ಕರ್ಥ. ಆ ಪರಮಶಾಂತಿಯ ಚಿದ್ಬಿಂದುವಿನಲ್ಲಿರ್ದ ಚಿದಮೃತ ರಸವೆ ಶ್ರೀಗುರು ಕಾರುಣ್ಯದಿಂ ಸತ್ಕ್ರಿಯಾಲಿಂಗವಾಗಿ ಬಂದು ಶರಣನ ಸರ್ವಾಂಗದಲ್ಲಿ ದಷ್ಟವಾಗಲು ಆ ಸಜ್ಜೀವನು ಚಿದ್ಘನಲಿಂಗ

ದಲ್ಲಿ ಪರಮುಕಾಷ್ಠಿಯಗಾದನೆಂಬುದೀಗ ಕಪ್ಪೆಯು ವಿಷ ತಾಗಿ ಜೋಗಿ ಮತ್ತನಾದ ಇಂತೀ ಭೇದದಿಂದಿರವು ತಾನೆ ಸದಾಶಿವಮೂರ್ತಿ ಲಿಂಗವು ತಾನು ತಾನೇ ಎಂಬ ಶಬ್ದಕ್ಕರ್ಥ.

೧೦. ನಾ ತೋಡಿದ ಬಾವಿಯಲ್ಲಿ ದುಂಡುಕ ಭೇಕ ಒಂದೇ ಆಗಿರ್ದವು. ದುಂಡುಕ ಹಸಿದು ಭೇಕನ ನುಂಗಿತ್ತು. ಭೇಕ ಸಾಯದೇ? ದುಂಡುಕನ ಕರುಳು ತಿಂದು ಒಣಗಲಾಗಿ ಅಂಗ ಬಿಗಿದು ಭೇಕನಲ್ಲಿಯೇ ಸತ್ತಿತ್ತು ಎನ್ನ ಬಾವಿ ಕೆಟ್ಟಿತ್ತು. ಸದಾಶಿವಮೂರ್ತಿಲಿಂಗದ ಕುರುಹಡಗಿತ್ತು.

ಟೀಕು:— ಆತ್ಮಂಗೆ ದೇಹ ಸಂಬಂಧವಾದಲ್ಲಿ ಸಂಸಾರ ವಿಷಯು ರಸ ಕೂಪವನುಂಟುಮಾಡಿಕೊಂಡನೆಂಬುದೀಗ ನಾ ತೋಡಿದ ಬಾವಿಯಲ್ಲಿ ಎಂಬ ಶಬ್ದಕ್ಕರ್ಥ. ಅಂತಪ್ಪ ತನುವೆಂಬ ಕೂಪದ ಮಧ್ಯದಲ್ಲಿ ಶಂಕಾ ವಿಷಯು ಸಂಬಂಧಿಯಪ್ಪ ಜೀವನು ಪರಮ ಶಾಂತಿಯು ಬಿಂದು ಅಡಗಿರುತ್ತಿಹುದೆಂಬುದೀಗ ದುಂಡುಕ ಭೇಕ ಒಂದೇ ಆಗಿದ್ದವು ಎಂಬ ಶಬ್ದಕ್ಕರ್ಥ. ಅಂತಪ್ಪ ಜೀವನು ಆ ತೃಷ್ಣೆಯಿಂದ ಆ ಪರಮ ಶಾಂತಿಯು ಬಿಂದುವನವಗ್ರಹಿಸಿತ್ತೆಂಬುದೀಗ ದುಂಡುಕ ಹಸಿದು ಭೇಕವನುಂಗಿತ್ತೆಂಬ ಶಬ್ದಕ್ಕರ್ಥ. ಅಂತು ಜೀವನವಗ್ರಹಿಸಲು ಆ ಪರಮ ಶಾಂತಿಯು ಬಿಂದು ಮರವೆಯಿಂ ನಷ್ಟವಾಗದೆಂಬುದೀಗ ಭೇಕ ಸಾಯದೆ ಎಂಬ ಶಬ್ದಕ್ಕರ್ಥ. ಅಂತಪ್ಪ ಜೀವಂಗೆ ಜ್ಞಾನೋದಯವಾಗಲು ಆ ಜೀವನ ಸಕಲ ಕರಂಗಳನು ಆ ಪರಮ ಶಾಂತಿಯು ಬಿಂದುವೇ ಅವಗ್ರಹಿಸಿತ್ತೆಂಬುದೀಗ ದುಂಡುಕನ ಕರುಳ ತಿಂದು ಎಂಬ ಶಬ್ದಕ್ಕರ್ಥ. ಆ ಪರಮ ಶಾಂತಿಯು ಬಿಂದು ಅವಗ್ರಹಿಸಲು ಜೀವಭಾವವಳಿದು ಸಂಸಾರ ವಿಷಯು ರಸವರತು ಹೋಯಿತ್ತೆಂಬುದೀಗ ದುಂಡುಕ ಸತ್ತು ಒಣಗಲಾಗಿ ಎಂಬ ಶಬ್ದಕ್ಕರ್ಥ. ಆ ಸಂಸಾರ ವಿಷಯು ರಸವರತು ಹೋದಲ್ಲಿ ತನ್ನ ನಿಜವಪ್ಪ ಪರಬ್ರಹ್ಮದಲ್ಲಿ ಕೂಡಬೇಕೆಂದು ಗುರೂಪಾವಸ್ಥೆಯ ಮಾಡಲು ಶ್ರೀಗುರು ಕರುಣಿಸಿ ಅಂಗದಲ್ಲಿ ಲಿಂಗ ಸಂಬಂಧವ ಮಾಡಲು ಪಂಚಾಚಾರವಿಡಿದಾಚರಿಸಿ ದೇಹಭಾವ ನಷ್ಟವಾಗಿ ಆತ್ಮನು ಮಹಾಘನದಲ್ಲಿಯೇ ಸರಸವಾದನೆಂಬುದೀಗ ಅಂಗ ಬಿಗಿದು ಭೇಕನಲ್ಲಿಯೆ ಸತ್ತಿತ್ತು ಎಂಬ ಶಬ್ದಕ್ಕರ್ಥ. ಅಂತು ಆತ್ಮನು ಲಿಂಗದಲ್ಲಿ ಸಮರಸೈಕ್ಯವಾಗಲು ವಿಷಯು

ಕೂಪ ನಷ್ಟವಾಗಿ ಲಿಂಗ ಶರಣನೆಂಬುಭಯ ಭಾವವಡಗಿ ಹೋಯಿ ತ್ತೆಂಬುದೀಗ ಎನ್ನ ಬಾವಿ ಕೆಟ್ಟಿತ್ತು ಸದಾಶಿವಮೂರ್ತಿ ಲಿಂಗದ ಕುರು ಹಡಗಿತ್ತು ಎಂಬ ಶಬ್ದಕ್ಕರ್ಥ.

೧೧. ಉರಿಯ ಮಡುವಿನಲ್ಲಿ ಒಂದು ಜಲದ ಕುಸುಮ ಹುಟ್ಟಿತ್ತು. ಹರಿಸುರ ಬ್ರಹ್ಮಾದಿಗಳಿಗೆ ವಶವಲ್ಲ ನೋಡಾ. ಆ ಕುಸುಮದ ಎಸ ಳಿನ ಕೂಟಸ್ಥಲದಲ್ಲಿ ಕಪ್ಪು, ನಡುಮಧ್ಯದಲ್ಲಿ ತಮ ಕಪೋತ ವರ್ಣ, ಅದರ ತುದಿಯಲ್ಲಿ ನಾನಾವರ್ಣದ ಛಾಯೆ ಕೂಡಿ ಅಳಿವುತ್ತಿಹುದು. ಆ ಹೂವ ಒಂದೇ ಭೇದದಲ್ಲಿ ಕಿತ್ತು ಸದಾಶಿವ ಮೂರ್ತಿಲಿಂಗದ ಪಾದ ದಲ್ಲಿರಿಸಲಾಗಿ ಪದಕ್ಕೆ ಹೊರಗೊಂಡು ಮುಕುಟದ ಮೇಲೇರಿತ್ತು. ಇದ ಬಲ್ಲವರಾರು ಚೋದ್ಯವ ಹೇಳಿರಣ್ಣಾ.

ಟೀಕು:-- ತಾಪತ್ರಯಾಗ್ನಿ ಸಂಬಂಧವಾದ ಸಂಸಾರ ವಿಷಯ ರಸದ ಘಾತವ ಕಾಣಬಾರದೆಂಬುದೀಗ ಉರಿಯ ಮಡುವಿನಲ್ಲಿ ಎಂಬ ಶಬ್ದಕ್ಕರ್ಥ. ಆ ಸಂಸಾರ ವಿಷಯ ರಸದ ಮಧ್ಯದಲ್ಲಿ ಸಂಚಲರೂ ಪವಾದ ಮನೋ ಕುಸುಮ ಹುಟ್ಟಿತ್ತೆಂಬುದೀಗ ಒಂದು ಜಲದ ಕುಸುಮ ಹುಟ್ಟಿತ್ತೆಂಬ ಶಬ್ದಕ್ಕರ್ಥ. ಅಂತಪ್ಪ ಮನೋ ಪ್ರಕೃ ತಿಯ ನಿಲಿಸಿಹನೆಂದೊಡೆ ಬ್ರಹ್ಮ ವಿಷ್ಣು ಮೊದಲಾದ ಸಮಸ್ತ ದೇವತೆ ಗಳಿಗೆ ಅಸಾಧ್ಯವೆಂಬುದೀಗ ಹರಿ ಸುರ ಬ್ರಹ್ಮಾದಿಗಳಿಗೆ ವಶವಲ್ಲ ನೋಡಾ ಎಂಬ ಶಬ್ದಕ್ಕರ್ಥ. ಆ ಮನೋ ಕುಸುಮದ ಎಸಳೆಂ ದೊಡೆ ಇಂದ್ರಿಯಂಗಳು, ಅಂತಪ್ಪ ಇಂದ್ರಿಯಂಗಳನೊಳಗೊಂಡಿರ್ಪ ಸ್ಥೂಲ ದೇಹವಲ್ಲ ಅಜ್ಞಾನಮಯವಾಗಿಹುದೆಂಬುದೀಗ ಆ ಕುಸುಮದ ಎಸಳಿನ ಕೂಟಸ್ಥಲದಲ್ಲಿ ಕಪ್ಪು ಎಂಬ ಶಬ್ದಕ್ಕರ್ಥ. ಆ ಮನಸ್ಸು ಸೂಕ್ಷ್ಮದೇಹದಲ್ಲಿ ಮರವೆಯನೆಯ್ದಿ ಷಡ್ವರ್ಣ ಸ್ವರೂಪವಾಗಿಹುದೆಂ ಬುದೀಗ ನಡುಮಧ್ಯದಲ್ಲಿ ತಮ ಕಪೋತ ವರ್ಣವೆಂಬ ಶಬ್ದಕ್ಕರ್ಥ. ಕಾರಣ ದೇಹದಗ್ರದಲ್ಲಿ ಆ ಮನಸ್ಸು ಸಕಲ ಕರಣಂಗಳ ವ್ಯವಹಾರ ದಲ್ಲಿ ಕೂಡಿ ಪ್ರಪಂಚಿನಲ್ಲಿ ಲಯವಾಗುತ್ತಿಹುದೆಂಬುದೀಗ ಅದರ ತುದಿಯಲ್ಲಿ ನಾನಾ ಛಾಯೆ ಕೂಡಿ ಅಳಿವುತ್ತಿಹುದೆಂಬ ಶಬ್ದಕ್ಕರ್ಥ. ಅಂತಪ್ಪ ಮನೋಮಧ್ಯದಲ್ಲಿ ಶಿವಕೃಪೆಯಿಂದ ಸುಜ್ಞಾನ ಪ್ರಕಾಶವಾ ಗಲು ಅಂತಪ್ಪ ಸುಜ್ಞಾನ ಪ್ರಕಾಶದಿಂ ಮನೋ ವರ್ತನೆಯಳಿದು ಸದ್ವಾ ಸನ ಸ್ವರೂಪವನೆಯ್ದಲು ಆ ಪುಷ್ಪವ ಕೃತನಿಶ್ಚಯ ಹಸ್ತದಲ್ಲಿ ಪಿಡಿದು

ಸತ್ಕ್ರಿಯಾ ಸ್ವರೂಪವಾದ ಇಷ್ಟಲಿಂಗದಲ್ಲಿ ಸಮರ್ಪಿಸುತ್ತಿರ್ದನೆಂಬುದೀಗ ಆ ಹೂವ ಒಂದೇ ಭೇದದಲ್ಲಿ ಕಿತ್ತು ಸದಾಶಿವ ಮೂರ್ತಿಲಿಂಗದ ಪಾದದಲ್ಲಿರಿಸಲಾಗಿ ಎಂಬ ಶಬ್ದಕ್ಕರ್ಥ. ಆ ಇಷ್ಟಲಿಂಗದಲ್ಲಿ ಸಂಬಂಧವಾದ ಉನ್ಮನಿತತ್ವ ಸ್ವರೂಪವಾದ ಮನಸ್ಸು ಚತುರ್ವಿಧ ಖಂಡಿತ ಪದವ ಮುಟ್ಟದೆ ಜ್ಞಾನ ಸ್ವರೂಪವಾದ ಪರಶಿವ ತತ್ವದಲ್ಲಿ ನಿಷ್ಪತ್ತಿಯಾಯಿತ್ತೆಂಬುದೀಗ ಪದಕ್ಕೆ ಹೊರಗೆಂದು ಮಕುಟವ ಮೇಲೇರಿತ್ತು. ಇದ ಬಲ್ಲವರಾರು ಚೋದ್ಯವ ಹೇಳಿರಣ್ಣಾ ಎಂಬ ಶಬ್ದಕ್ಕರ್ಥ.

೧೨. ಅಂಧಕಾರವೆಂಬ ಮನೆಯ ಬಾಗಿಲಲ್ಲಿ ಅಂಗದ ಕರಡೆ ಕಟ್ಟಿ ಮೂರಂಗದ ಕೋಡಗಯೋಡಿಸಿ ಕಾಡುತ್ತಿದೆ. ಮೀರಿದನೆಂಬುವರೆಲ್ಲರು ಕರಡಿಯ ನಿಲಿಸಿ ನಿನ್ನಲ್ಲಿ ಸತ್ತು ಕೋಡಗದ ಚೇಷ್ಟೆಯಲ್ಲಿ ಸಿಕ್ಕಬೇಡ ನಿಮುಗಾರೂಢನ ಮಾತು ಇಂತಿವ ಮೀರಿ ನಿಂದವಂಗಲ್ಲದೆ ಸದಾಶಿವ ಮೂರ್ತಿ ಲಿಂಗವಿಲ್ಲ.

ಟೀಕು :— ಅಜ್ಞಾನ ಸಂಬಂಧವಾದ ದೇಹವೆಂಬುದೀಗ ಅಂಧಕಾರವೆಂಬ ಮನೆಯಲ್ಲಿ ಎಂಬ ಶಬ್ದಕ್ಕರ್ಥ. ಆ ದೇಹವನಾಶ್ರೈಸಿಕೊಂಡಿರ್ಪ ಇಂದ್ರಿಯ ದ್ವಾರಂಗಳಲ್ಲಿ ಎಂಬುದೀಗ ಬಾಗಿಲಲ್ಲಿ ಎಂಬ ಶಬ್ದಕ್ಕರ್ಥ. ಅಂತಪ್ಪ ದೇಹವನಾಶ್ರೈಸಿಕೊಂಡಿರ್ಪ ಮಾಯೆ ಭವಪಾಶದಲ್ಲಿ ಬಿಗಿವಡೆದಿತ್ತಿಹಳೆಂಬುದೀಗ ಅಂಗದ ಕರಡಿ ಕಟ್ಟಿ ಎಂಬ ಶಬ್ದಕ್ಕರ್ಥ. ಆ ತನುತ್ರಯಂಗಳ ವ್ಯವಹಾರದಲ್ಲಿ ಸಿಕ್ಕಿರ್ಪ ಮನಸ್ಸು ಆ ಮಾಯಾವಶಗತರಾಗಿರ್ಪ ಜೀವರ ಹಾಸ್ಯಕ್ರೀಡು ಮಾಡಿ ಕಾಡುತ್ತಿಹುದೆಂಬುದೀಗ ಮೂರಂಗದ ಕೋಡಗಯೋಡಿಸಿ ಕಾಡುತ್ತಿದೆ ಎಂಬ ಶಬ್ದಕ್ಕರ್ಥ. ಆ ಸಂಕಲ್ಪರೂಪವಾದ ಮನೋವರ್ತನೆಯ ನಿಲಿಸಿಹನೆಂಬ ಒಣ ವಾಗದ್ವೈತಿಗಳೆಲ್ಲರೂ ಮಾಯಾ ಪ್ರಪಂಚಿನ ಸುಖಕ್ಕೆ ಸಿಲ್ಕಿಲಯವಾಗಿ ಹೋದರೆಂಬುದೀಗ ಮೀರಿದನೆಂಬುವರೆಲ್ಲರೂ ಕರಡಿಯ ನಿಲಿಸಿ ನಿನ್ನಲ್ಲಿ ಸತ್ತು ಎಂಬ ಶಬ್ದಕ್ಕರ್ಥ. ಆ ಮನೋವರ್ತನೆಯಲಿ ಸಿಲ್ಕಿರ್ಪ ಅದ್ವೈತ ಜ್ಞಾನಿಗಳು ಇಲ್ಲದ ಪರಬ್ರಹ್ಮವನುಂಟು ಮಾಡಿಕೊಂಡು ನುಡಯುತ್ತಿಹರು. ಅದು ಸಲ್ಲದೆಂಬುದೀಗ ಕೋಡಗದ ಚೇಷ್ಟೆಯಲ್ಲಿ ಸಿಕ್ಕಬೇಡ, ನಿಮುಗಾರೂಢದ ಮಾತು ಎಂಬ ಶಬ್ದಕ್ಕರ್ಥ. ಈ ಸಕಲ ಪ್ರಪಂಚು ದಾಂಟಿದವಗಲ್ಲದೆ ಅಂಗದ ನಿಜವು

ಕಾಣಬಾರದು ಎಂಬುದೀಗ ಇಂತಿವ ಮೀರಿ ನಿಂದವಗಲ್ಲದೆ ಸದಾಶಿವ ಮೂರ್ತಿ ಲಿಂಗವಿಲ್ಲ ಎಂಬ ಶಬ್ದಕ್ಕರ್ಥ.

೧೩. ಉರಿಯು ಸಿರಿಯು ನಡುವೆ ಒಂದು ಸರೋವರದಲ್ಲಿ ನರಿ ತಿರುಗಾಡುತ್ತಿದೆ. ಬಾಲ ಉಡುವಿನಂದ. ನಡು ಬಳ್ಳುವಿನ ಜೊಲ್ಲೆಯು ದಂದ. ತಲೆ ಕೋಡಗದಂತೆ ರೂಪು ನರಿಯಾಗಿ, ಆತ್ಮ ಕುಕ್ಕುರನಾಗಿ, ಏತಕ್ಕೂ ಸಿಕ್ಕದೆ ಸರೋವರದಲ್ಲಿ ಹರಿದಾಡುತ್ತಿದೆ. ಅದು ಸದಾಶಿವ ಮೂರ್ತಿಲಿಂಗವನರಿದವರಿಗಲ್ಲದೆ ಸಿಕ್ಕದು ಆ ಜೀವ.

ಟೀಕು :— ತಾಪತ್ರಯಾಗ್ನಿ ಸಂಬಂಧವಾದ ಸ್ಥೂಲದೇಹದ ಪ್ರಾರಬ್ಧಭೋಗ ಸಂಬಂಧವಾದ ಸೂಕ್ಷ್ಮದೇಹದ ಮಧ್ಯದಲ್ಲಿ ಎಂಬುದೀಗ ಉರಿಯು ಸಿರಿಯು ನಡುವೆ ಎಂಬ ಶಬ್ದಕ್ಕರ್ಥ. ಅಂತಪ್ಪ ಸೂಕ್ಷ್ಮದೇಹದ ಮಧ್ಯಸ್ಥವಾದ ಹೃದಯ ಕಮಲದಲ್ಲಿ ಜೀವನು ಹಂಸಗತಿಗಳಿಂ ಸಂಚರಿಸುತ್ತಿಹನೆಂಬುದೀಗ ಸಂದು ಸರೋವರದಲ್ಲಿ ನರಿ ತಿರುಗಾಡುತ್ತಿದೆ ಎಂಬ ಶಬ್ದಕ್ಕರ್ಥ. ಅಂತಪ್ಪ ಜೀವನ ಭವನಾಶವು ತಮೋಗುಣದಲ್ಲಿ ಕೂಡಿರುತ್ತಿಹುದೆಂಬುದೀಗ ಬಾಲ ಉಡುವಿನಂದವೆಂಬ ಶಬ್ದಕ್ಕರ್ಥ. ಆ ಜೀವನ ಅಂತರ್ದೇಹವು ಸತ್ವಗುಣವುವನೊಳಗೆ ಕೊಂಡಿಹುದೆಂಬುದೀಗ ನಡು ಬಳ್ಳುವಿನ ಜೊಲ್ಲಹದಂದವೆಂಬ ಶಬ್ದಕ್ಕರ್ಥ. ಆ ಜೀವವೃತ್ತಿ ಜ್ಞಾನವೆಂಬ ಶಿರಸ್ಸು ಮನೋವರ್ತನೆಯಲ್ಲಿ ಕೂಡಿರುತ್ತಿಹುದೆಂಬುದೀಗ ತಲೆ ಕೋಡಗದಂದ ಎಂಬ ಶಬ್ದಕ್ಕರ್ಥ ಆ ದೇಹವು ಜೀವನ ವ್ಯವಹಾರದಲ್ಲಿ ಕೂಡಿರುತ್ತಿಹುದೆಂಬುದೀಗ ರೂಪು ಸರಿಯಾಗಿ ಎಂಬ ಶಬ್ದಕ್ಕರ್ಥ. ಆ ಜೀವನು ಇಂದ್ರಿಯಗಳ ವ್ಯವಹಾರದಲ್ಲಿ ಚರಿಸುತ್ತಿಹನೆಂಬುದೀಗ ಆತ್ಮ ಕುಕ್ಕುರನಾಗಿ ಎಂಬ ಶಬ್ದಕ್ಕರ್ಥ. ಆ ಜೀವನ ನಿಲವು ಭಿನ್ನಯೋಗಾಭ್ಯಾಸಂಗಳಿಂ ಗ್ರಹಿಸಿಹೆನೆಂದೊಡೆ ಅಸಾಧ್ಯವೆಂಬುದೀಗ ಯಾತಕ್ಕು ಸಿಕ್ಕದೆ ಎಂಬ ಶಬ್ದಕ್ಕರ್ಥ. ಆ ಜೀವನು ಅಷ್ಟದಳ ಕಮಲದಲ್ಲಿ ಮನ ಪವನಂಗಳೆಂಬ ರೆಕ್ಕೆಗಳಿಂ ಚರಿಸುತ್ತಿಹುದಾಗಿ ಸುಜ್ಞಾನೋದಯದಿಂ ತನ್ನ ನಿಜವ ತಿಳಿದ ಶರಣಂಗೆ ಜೀವಭಾವವಳಿದು ಸಜ್ಜೀವ ಸ್ವರೂಪವಾಗುತ್ತಿಹುದಲ್ಲದೆ ಉಳಿದವರಿಗೆ ಅಸಾಧ್ಯವೆಂಬುದೀಗ ಸರೋವರದಲ್ಲಿ ಹರಿದಾಡುತ್ತಿದೆ, ಅದು ಸದಾಶಿವಮೂರ್ತಿ ಲಿಂಗವನರಿದವನಿಗಲ್ಲದೆ ಸಿಕ್ಕದು ಜೀವ ಎಂಬ ಶಬ್ದಕ್ಕರ್ಥ.

# ಶಿವಾನುಭವ.


ಸಂಪಾದಕ.

ರಾ. ಸಾ. ಫ. ಗು. ಹಳಕಟ್ಟಿ ಬಿ. ಎ. ಎಲ್. ಎಲ್. ಬಿ.



ಸಂಪುಟ ೧೨ ] ಮೇ ೧೯೩೮. [ ಸಂಚಿಕೆ ೮


## ವಿಷಯಾನುಕ್ರಮಣಿಕೆ.

# ವಚನಶಾಸ್ತ್ರಸಾರ ಭಾಗ ೨.

## ( ವೀರಶೈವ ಸಿದ್ಧಾಂತ. )

# ಶಿವಾನುಭವ.

ವರ್ಷ ೧೨] ಮೇ ೧೯೩೮ [ಸಂಚಿಕೆ ೮


## ಮಹಾದೇವಿಯಕ್ಕನ ಮದುವೆಯ ವಿವಾದ.

(ಹಿಂದಿನಿಂದ ಸಾಗಿದುದು.)


(ಲೇ:— ಶ್ರೀ ಚಂದ್ರಶೇಖರದೇವರು ಅಡ್ನೂರು, ಮುಕ್ಕಾಂ ಬೆಂಗಳೂರು.)


ಪ್ರೊ. ಎಸ್. ಎಸ್. ಮಾಳವಾಡ ಎಮ್. ಎ. ಇವರ ಕೆಲವು ಪ್ರಶ್ನೆಗಳಿಗೆ ಹಿಂದಿನ ಲೇಖನದಲ್ಲಿ ಕೆಲವು ಉತ್ತರ ಹೇಳಿರುವೆನಾದರೂ ಇನ್ನೂ ಕೆಲವು ಅವರ ಆಕ್ಷೇಪಣೆಗಳಿಗೆ ನನಗೆ ತಿಳಿದಮಟ್ಟಿಗೆ ಇಲ್ಲಿ ಉತ್ತರಿಸುವದು ಉಚಿತವೆನಿಸದಿರದು.

ಇವರು 'ಹೀಗೆ (ಲಗ್ನವಾಗಿಲ್ಲೆಂದು) ವಾದಿಸುವವರಿಗೆ ಶೈವಭಕ್ತಿ ಸಾಮ್ರಾಜ್ಞಿಯು ಭವಿಯೊಡನೆ ಮದುವೆಯಾಗುವ ಕಲ್ಪನೆ ಸಹ್ಯವಾಗಿ ತೋರುವದಿಲ್ಲ, ಎಂದು ಬರೆದಿರುವರು. ಅಕ್ಕನವರ ವಚನಗಳನ್ನು ವಿಚಾರಿಸಿದರೆ ಅವರಿಗೆ ಕೇವಲ ಭವಿಯೊಬ್ಬನೊಡನಲ್ಲ, ಭಕ್ತರೊಡನೆಯೂ ಮದುವೆಯಾಗುವ ಇಷ್ಟವಿದ್ದಂತೆ ತೋರುವದಿಲ್ಲ ಎಂದು ಊಹಿಸಬಹುದಾಗಿದೆ. ಅವಳಲ್ಲಿ ಆವಿರ್ಭವಿಸಿದ ವಿರತಿಯೇ ಆ ತೆರನಾಗಿದೆ.

ನಾನು ಉದಹರಿಸಿದ "ಮಿಕ್ಕಿನ ಲೋಕದ ಗಂಡರ ಸಂಬಂಧವೆನಗಿಲ್ಲವಯ್ಯ" ಎಂಬ ಮಾತಿಗೆ ಇವರು 'ಅದೇ ಉಕ್ತಿಯಿಂದ ಮದುವೆಯಾಗಿದ್ದರೂ ಲೋಕದ ಗಂಡರ ಸಂಬಂಧವನ್ನು ತಡೆದುಹಾಕಿದ್ದಾಳೆಂಬ ಅಭಿಪ್ರಾಯವನ್ನೂ ಕೂಡ ನಾವು ಪಡೆಯಬಹುದಾಗಿದೆ.' ಎಂದು ಊಹಿಸಿದ್ದಾರೆ. ಆದರೆ ಇವರು 'ಗಂಡರ' ಎಂಬ ಬಹುವಚನಕ್ಕೆ

ಯಾವ ಅರ್ಥವನ್ನು ಹೇಳುವರು? ಸಾಮಾನ್ಯವಾಗಿ ಸರ್ವವ್ಯಾಪಕ ವಾದ 'ಲೋಕದ ಗಂಡರ' ಎಂಬ ಪದಕ್ಕೆ ಸಂಕುಚಿತಾರ್ಥ ಮಾಡಿ ಕೌಶಿಕನೊರ್ವನನ್ನೇ ಏಕೆ ಗುರಿಮಾಡಬೇಕು? ಭವಿಯ ಲಗ್ನವನ್ನು ಒಲ್ಲೆನೆಂದು ಬಿಟ್ಟುಹೋಗುವಾಗ ಅವಳ ತಾಯ್ತಂದೆಗಳು ಬಂದು ಭವಿಯಾಗಿದ್ದರೂ ಭಕ್ತನನ್ನಾದರೂ ಮಾಡಿಕೊ ಎಂದು ಹೇಳುವಾಗ ಅಕ್ಕನು ಈ ಮಾತನ್ನು ಅಂದಿರಬೇಕು. ಒಂದು ಪಕ್ಷ ಇವರು ಹೇಳುವಂತೆ ಲಗ್ನವಾಗಿ ಅನಂತರ ಕೌಶಿಕನ ಸಂಬಂಧವನ್ನು ತಡೆದುಹಾಕಿದಳೆಂದು ಹೇಳುವದಾದರೆ ಏಕವಚನವನ್ನು ಹೇಳಿದ್ದರೆ ನಡೆಯುತ್ತಿರಲಿಲ್ಲವೇ? ಮತ್ತು ಇದೇ ಲೇಖಕರು ಮುಂದೆ 'ಲೋಕದ ಗಂಡನನ್ನು ಪಡೆದಿದ್ದರೂ ಅವನು 'ಸಾವು ಕೆಡುವ' ಗಂಡನಾದುದರಿಂದ ಅವನನ್ನು ಒಲೆಯೊಳಗಿಕ್ಕು' ಎಂದು ಹೇಳಿ ಬಾಲ್ಯದ ತನ್ನ ಕನಸಿನ ...ದಿವ್ಯಸ್ವರೂಪನನ್ನು ಕಾಣುವ ಬಯಕೆಯಿಂದ ಹೊರಟುಹೋಗಿರಬೇಕೆಂದು ಊಹಿಸುವದು ತಪ್ಪಾಗಲಾರದು ಎಂದು ಹೇಳಿರುವರು. ಅಕ್ಕಗಳ ವಚನವು "ಈ ಸಾವ ಕೆಡುವ ಗಂಡರನೊಯ್ದು ಒಲೆಯೊಳಗಿಕ್ಕು" ಎಂದು ಇರುವದು. ಇಲ್ಲಿಯೂ ಬಹುವಚನ ಪ್ರಯೋಗವೇ ಇದೆ. ಆದರೆ ಈ ಲೇಖಕರು ಏಕವಚನವನ್ನಾಗಿ ಮಾರ್ಪಡಿಸಿ 'ಅವನನ್ನು ಒಲೆಯೊಳಗಿಕ್ಕು' ಎಂದು ಕೌಶಿಕನೊರ್ವನನ್ನೇ ಆ ಬಿರುನುಡಿಗೆ ಗುರಿಮಾಡುವದು ಅಷ್ಟೊಂದು ಸಮಂಜಸವಾಗಿ ತೋರುವದಿಲ್ಲ. ಇದಲ್ಲದೆ ಈ ಲೇಖಕರು "ಹರಿಹರನು ಹೇಳಿದ ಮಾತು ಸತ್ಯವಾಗಿ ತೋರದ್ದರಿಂದ ಚಾಮರಸನು ಅದನ್ನು ಮಾರ್ಪಡಿಸಲು ಪ್ರಯತ್ನಿಸಬೇಕೆಂಬ ಊಹೆ ತಪ್ಪಾಗಲಿಕ್ಕಿಲ್ಲ ಎಂದು ಹೇಳುವ ಮಾತನ್ನು ಒಂದು ದೃಷ್ಟಿಯಿಂದ ಒಪ್ಪಬಹುದಾಗಿದೆ. ಏಕೆಂದರೆ ಹರಿಹರನ ಕಲ್ಪನೆಯ ಭಾಗಗಳನ್ನು ಕಿತ್ತುಹಾಕಿದ್ದರೆ ಚಾಮರಸನಿಗೆ ಬರುವ ದೋಷವಾದರೂ ಏನು?

ಇವರ ಮತ್ತೊಂದು ಪ್ರಶ್ನೆ— 'ಕಾರಿಕಾಲಮ್ಮೆ ತಾಂ ಭವಿಯೊಡನೆ ಬಾಳಳೇ? ಹೇರೂರ ಹೆಂಗೂಸು ಭವಿಗೆ ಸತಿಯಾಗಳೇ? ಎಂಬ ಹರಿಹರನ ವಾದವು ಸಮಂಜಸವೆಂದು ಏಕೆ ಹೇಳಬಾರದು? ಈ ಉದಾಹರಣೆಗಳನ್ನು ತಾಯಿತಂದೆಗಳು ಅಕ್ಕನಿಗೆ ಹೇಳಿರಬಹುದೇ? ಒಂದು ವೇಳೆ ಹೇಳಿದ್ದರೆ ಆ ಮಾತಿಗೆ ಅಕ್ಕನು ಒಡಂಬಟ್ಟಿರಬಹುದೇ? ಇದಕ್ಕೆ ಹರಿಹರನೇ ಮುಂದೆ "ಪಿರಿಯರ್ ಪುರಾತನರನೆನಗೆ ಸಮಗಟ್ಟುವರೆ?

ಪರಮೈಶ್ವರ್ಯಾಂಬುರಾಶಿಗಳನಿಂತು ಎಣಿಸುವರೆ ? ” ಎಂದು ಅಕ್ಕಗಳಿಂದಲೇ ಉತ್ತರ ಹೇಳಿಸುವನು. ಇದರಿಂದ ಇವೆಲ್ಲ ಕವಿಯ ಕಾವ್ಯಕೌಶಲತೆಯೇ ಹೊರತು ಅದರಿಂದಲೇ ಅವಳು ಲಗ್ನವಾದಳೆಂದು ಹೇಳುವದು ಸಯುಕ್ತಿಕವಾಗುವದಿಲ್ಲ. ಅಥವಾ ಹರಿಹರನು ಮುಂದೆ ಕಾಲ್ಪನಿಕ ವಿವಾಹ ಮಾಡುವ ತನ್ನದುಗುಡತೆಯಿಂದಲೇ ಮೊದಲು ಈ ಉದಾಹರಣೆಗಳನ್ನು ಕೊಟ್ಟು ಕೊಂಚ ಧೈರ್ಯಸ್ಥನಾಗಿರುವನೆಂದು ಹೇಳಲು ಬರುವದಿಲ್ಲವೇ ?

ಈ ಲೇಖಕರು “..... ಶಿವಭಕ್ತರಾದ ತಾಯಿತಂದೆಗಳನ್ನು ರಕ್ಷಿಸಲಿಕ್ಕೆ ತನ್ನ ಆತ್ಮದ ಉಜ್ವಲತೆಯನ್ನು ತಾನು ಕಾಯ್ದುಕೊಳ್ಳಬಲ್ಲೆನೆಂಬ ಆತ್ಮ ವಿಶ್ವಾಸದಿಂದ ಪಾರ್ವತಿಯ ಸಂಕೇತಕ್ಕಾಗಿ ಹರಿಹರನ ಮಹಾದೇವಿಯು ಮದುವೆಯಾದುದು ಅಯೋಗ್ಯವಲ್ಲ ಎಂದು ಅಭಿಪ್ರಾಯಪಡುತ್ತಾರೆ.

ಶಿವಭಕ್ತರನ್ನು ಸಲುಹಬಾರದೆಂಬ ಭಾವ ಚಾಮರಸನದೇನೂ ಇಲ್ಲ. ಅಕ್ಕನ ಆತ್ಮವಿಶ್ವಾಸಕ್ಕೂ ಯಾವ ಕೊರತೆಯನ್ನು ತಂದಿಲ್ಲ. ಈತನೂ ತಾಯಿತಂದೆಗಳ ರಕ್ಷಣೆಗೆ ಯತ್ನಿಸಿದ್ದಾನೆ. ಹರಿಹರನ ಯತ್ನಕ್ಕಿಂತಲೂ ಈತನ ಯತ್ನವು ಸುಗಮವಾಗಿದೆ, ಸಹಜವಾಗಿದೆ, ಸುಂದರವಾಗಿದೆ. ಆದ್ದರಿಂದ ಇದನ್ನಾದರೂ ಏಕೆ ನಂಬಬಾರದು ?

## ಹರಿಹರನ ಅಕ್ಕನು ಲಿಂಗೈಕ್ಯವಾಗಿಲ್ಲ.

ಹರಿಹರಕವಿಯು ಮಹಾದೇವಿಯಕ್ಕನನ್ನು ತನ್ನ ಕಲ್ಪನೆಯಿಂದ ಮುನ್ನಿನಂದದಿ “ರುದ್ರಕನ್ನಿಕೆಯರೊಳು ಸಲಿಸಿ ಕರುಣಾಕರಂ” ಎಂಬುದಾಗಿ ರುದ್ರಕನ್ನಿಕೆಯನ್ನಾಗಿಯೇ ಮಾಡುತ್ತಾನೆ. ಆದರೆ ಅಕ್ಕಗಳೇ ತಮ್ಮ ವಚನದಲ್ಲಿ “ಚನ್ನಮಲ್ಲಿಕಾರ್ಜುನನ ಹೃದಯಕಮಲದಲ್ಲಿ ಅಡಗಿದೆನು. ” “ಎನ್ನ ದೇವ ಮಲ್ಲಿಕಾರ್ಜುನ ದೇವರ ಬೆರಸಿದ ಬಳಿಕ ಎನ್ನ ನಾನು ಏನೆಂದು ಅರಿಯೆನಯ್ಯ” “ಚನ್ನಮಲ್ಲಿಕಾರ್ಜುನನಲ್ಲಿ ಲಿಂಗೈಕ್ಯವಾದ ಬಳಿಕ ಏನೂ ಅನ್ನೆ” ಎಂದು ಮುಂತಾಗಿ ಹೇಳಿಕೊಂಡಿರುವರು. ಇವರಲ್ಲಿ ಯಾರ ಮಾತನ್ನು ಸತ್ಯವೆಂದು ಗ್ರಹಿಸಬೇಕು ?

## ಹರಿಹರನು ಹೇಳುವ ನಗ್ನ ಕಾರಣವು ಯೋಗ್ಯವಲ್ಲ.

ಹರಿಹರನು ಹೇಳುವ ಕೊನೆಯ ಕಾರಣವು ಸಯುಕ್ತಿಕವಾಗಿ ತೋರುವದಿಲ್ಲ. ಏಕೆಂದರೆ ಯೋಗಾಂಗ ತ್ರಿವಿದಿಯಲ್ಲಿ "ಉಟ್ಟ ಸೀರೆಯ ಬಿಟ್ಟು। ಕೊಟ್ಟ ತೊಡಗೆಯ ಹರಿದು।" ಎಂದು ಅಕ್ಕಗಳೇ ತಾವು ಕೌಶಿಕನ ಮನೆಯಿಂದ ಹೊರಟ ಸನ್ನಿವೇಶದ ಸ್ವಭಾವವನ್ನು ವರ್ಣಿಸಿದ್ದಾಳೆ. ಇದರಲ್ಲಿರುವ ಇವೆರಡೂ ವಿಶೇಷಣಗಳು ಹರಿಹರನ ಮಾತಿಗೆ (ಕಾರಣಕ್ಕೆ) ಸರಿಬರುವದಿಲ್ಲ. ಹರಿಹರನು ಹೇಳುವಂತೆ ಗುರುವಿಗೆ ದಿಗಂಬರೆಯಾಗಿ ನಮಿಸುವ ಅಕ್ಕನು ಉಟ್ಟುದನ್ನು ಬಿಡುವ ಬಗೆ ಹೇಗೆ? ಭವಿಯ ಸಂಗದಲ್ಲಿರುವ ಅಕ್ಕನು ತೊಡಗೆ ತೊಡುವ ಪ್ರಸಂಗವಾದರೂ ಎಲ್ಲಿ? ಯಾವಾಗ ತೊಡಿಗೆಯೇ ಮೈಯಲ್ಲಿಲ್ಲವೋ ಅವನ್ನು ಹರಿದುಬಿಡುವದಾದರೂ ಹೇಗೆ? ಈ ಕಾರಣಗಳಿಂದಲೇ ಹರಿಹರನು ಈ ಗೋಜಿಗೆ ಹೋಗದೆ ಕೇವಲ ಕೇಶಾಂಬರೆಯಾಗಿ ಹೋದಳೆಂದು ವರ್ಣಿಸಿರುವದು ಅವನ ಕಲ್ಪನೆಯಂತೆ ಅದು ಸಮಂಜಸವಾಗಿದೆ. ಆದರೆ ಈ ಅಕ್ಕನ ಮಾತಿಗೆ ಹೋಲಿಸಿ ನೋಡುವಾಗ ಅದು ಸಟಿಯಾಗಿ ನಿಲ್ಲಬಹುದಲ್ಲವೇ?

ಚಾಮರಸನ ಚರಿತ್ರೆಯು ಭಾವನಾವಶ ಭಕ್ತರಿಗೆ ಒಗ್ಗುವಂತಿದ್ದರೆ ಹರಿಹರನ ರೀತಿಯನ್ನಾದರೂ (ಬಾಸಿಗ ಕಟ್ಟುವದೊಂದನ್ನು ಮಾತ್ರ ಬಿಟ್ಟು) ಇನ್ನಿತರ ವಿಜ್ಞಾನವಾದಿಗಳು ಇತಿಹಾಸಜ್ಞರು ಬಿಟ್ಟುಬಿಡುವ ಕಾರಣವೇನು? ಅಕ್ಕನು ಲಗ್ನವಾಗಿ ಭವಿಯೊಡನೆ ಅಂಗಸಂಗವನ್ನನುಭವಿಸಿರುವಳೆಂದು ಹೇಳಿದಾಕ್ಷಣವೇ ಎಲ್ಲರೂ ಭಾವುಕರ ವರ್ಗವನ್ನು ಬಿಟ್ಟಂತಾಗುವದೋ ಹೇಗೆ? ಇದರಿಂದ ಅಕ್ಕನು ಲಗ್ನವಾಗಿರಲೇ ಇಲ್ಲೆಂದು ಸಾಧಿಸಲು ಬಯಸುವದಿಲ್ಲ. ಒಂದು ಪಕ್ಷ ಅವಳು ಲಗ್ನವಾಗಿದ್ದರೆ ಅವಳ ಚರಿತೆಯು ಇನ್ನಾವುದೋ ಒಂದು ರೀತಿಯಲ್ಲಿದ್ದಿರಬಹುದೆಂದು ಮಾತ್ರ ನನ್ನ ಭಾವನೆ.

ಈ ಲೇಖಕರು ಅಭಿಪ್ರಾಯಪಡುವಂತೆ "ಹನ್ನೆರಡು ವರುಷದ ಹಿರಿಯಳು ಮಹಾದೇವಿಯಕ್ಕ" ಎಂಬ ಮಾತನ್ನು ಸಾಮಾನ್ಯವಾಗಿ ಅವಳ ಕಿರಿಯತನದ ಅರುಹಿನ ಬಣ್ಣನೆಯೆಂದು ಭಾವಿಸಿಕೊಳ್ಳೋಣ. ಸಿದ್ಧವೀರಣ್ಣೊಡೆಯನು "ಷೋಡಶಪ್ರಾಯದ ಯೌವನದ ಸುಖದ ಸುಗ್ಗಿ"

ಎಂದು ಹೇಳಿದ ಮಾತನ್ನೂ ಅಂಗೀಕಾರಮಾಡಿಕೊಳ್ಳೋಣ. ಆದರೆ ನೀವು ಸಿದ್ಧವೀರಣ್ಣೊಡೆಯನ ಮಾತನ್ನು ಎರಡಿಲ್ಲದೆ ಒಪ್ಪುವದಾದರೆ ಅಕ್ಕನಿಗೆ ಆದಕ್ಕೂ ಮೊದಲು (ಕೌಶಿಕನೊಡನೆ ರಗಳೆಯ ಅಭಿಪ್ರಾಯದಂತೆ ಲಗ್ನವಾಗುವಾಗ) ಎಷ್ಟು ವಯಸ್ಸಿರಬಹುದೆಂಬುದನ್ನು ಕೊಂಚ ಊಹಿಸಿ ಉಲ್ಲೇಖಿಸಬಲ್ಲಿರಾ? ಲಗ್ನವಾದ ಮೇಲೆ ಅರಮನೆಯಲ್ಲಿ, ಮತ್ತು ವೈರಾಗ್ಯಪರಳಾಗಿ ಹೊರಟ ಮೇಲೆ ಹಾದಿಯಲ್ಲಿ ಸಂದಿದ ಸಮಯವನ್ನು ಕಳೆಯಲು ಮಾತ್ರ ಮರೆಯಬೇಡಿ.

ವಚನದಲ್ಲಿ "ಚನ್ನ" ಎಂಬ ಪದವಿಲ್ಲದ ಮೂಲಕ ಬಸವಣ್ಣನೆಂದು ಬರೆದ ನನ್ನ ಮಾತನ್ನು ಖಂಡಿಸಲು ಹೊರಟು "ಪ್ರಭುವಾರೋಗಣೆಯ ಸಂಪಾದನೆಯ" ವಿಮರ್ಶೆಯನ್ನೇ ಮಾಡಿಬಿಟ್ಟಿದ್ದಾರೆ. ಒಂದೇ ಒಂದು ಮಾತಿನಲ್ಲಿ ಒಪ್ಪಿಕೊಳ್ಳುವ ಈ ವಿಚಾರವನ್ನು ಒಂದು ಪುಟದಷ್ಟು ವಿವರಿಸಿದ್ದನ್ನು ನೋಡಿದರೆ "ತೋಟ ಮೂರು ಮೊಳ, ಕಾಯಿ ಆರು ಮೊಳ" ಎಂಬ ನಾಣ್ಣುಡಿಗೆ ಸಮವಾಗುವಂತಿದೆ.

ಅಕ್ಕನು ಕೌಶಿಕನೊಡನೆ ಅಂಗಸುಖವನ್ನು ಅನುಭವಿಸಿದಳೆಂದು ಹೇಳಿದ ಹರಿಹರ ದೇವನ ಮಾತಿನಮೇಲೆ 'ಅಕ್ಕನಿಗೆ ಮಕ್ಕಳಾರು?' ಎಂದು ನಾನು ಪ್ರಶ್ನೆ ಮಾಡಿದರೆ, ಇದು ಹುರುಳಿಲ್ಲದ ತಿರುಳಿಲ್ಲದ ಪ್ರಶ್ನೆಯಾಗಿ ಪರಿಣಮಿಸಿತೆ? "ಹರದದ್ದೇ ಹಳ್ಳ ನಿಂತದ್ದೇ ತೀರ್ಥ" ಎಂಬ ಗಾದಿಯಂತೆ ನೀವು ಮಾತ್ರ ಬರೆದದ್ದೇ ಶಿಲಾಶಾಸನ; ಸಾಧಿಸಿದ್ದೇ ಸತ್ಯ; ಎಂದು ಹೇಳುವದಾದರೆ ನಾವಿಲ್ಲಿ ಮೂಕರಾಗುತ್ತೇವೆ; ಮೌನರಾಗುತ್ತೇವೆ.

ಚನ್ನಬಸವಾಂಕನ ಅಭಿಪ್ರಾಯದಂತೆ ಕೇವಲ ಬಾಸಿಗ ಕಟ್ಟಿಕೊಳ್ಳುವದೊಂದನ್ನು ಮಾತ್ರ ನೀವು ಒಪ್ಪುವದಾದರೆ, ನೀವು ಇನಿತೊಂದು ಲಂಬವಾಗಿ ಲೇಖ ಬರೆಯುವದೂ ವ್ಯರ್ಥವೆ. ಏಕೆಂದರೆ ಅಕ್ಕನು ಸಂಸಾರಿಯಾಗಿ, ಸಂಸಾರದಲ್ಲಿ ಬೇಸರಹುಟ್ಟಿ, ವೈರಾಗ್ಯವಂತಳಾದಳೆಂದರೆ ಒಳ್ಳೇ ಒಳಿತಾಗುವದೆಂಬ ನಿಮ್ಮ ಭಾವನೆಯೇ ಇಲ್ಲಿ ಹಾರಿಹೋಗುವದು. ಮತ್ತು ಕೌಶಿಕನ ಕಾಮದ ದೌಡು ಅನಿತಕ್ಕೆ ತೀರುವಂತಹದೂ ಅಲ್ಲ. ಆದ್ದರಿಂದ ಆತನನ್ನು ನಿಮ್ಮ ಪಕ್ಷದಲ್ಲಿ ಸೇರಿಸಿಕೊಂಡು ಬರೀ ಬಾಸಿಗ ಕಟ್ಟಿಸಿಬಿಡುವದರಲ್ಲಿ ನಿಮ್ಮ ಇತ್ಯರ್ಥವೇನು? ಬರೀ ವಿವಾಹ ಮಾತ್ರದಿಂದ ಇಂತಹ ವೈರಾಗ್ಯ ಉದಯವಾಗುವದೆಂದೋ?

## ಕೇಳಿಕೆ.

ಅಕ್ಕನು ಕೇವಲ ಕೌಶಿಕರಾಜನ ಮನೆಗೆ ಹೋದದ್ದನ್ನೇ ಲಗ್ನವಾಗಿರುವದೆಂದು ಬರೆದು ಬಿಟ್ಟದ್ದರಿಂದ, ಅಲ್ಲಿಯು ಜನಗಳು ಹಾಗೆ ಊಹಿಸಿ ಹಬ್ಬಿಸಿರಲು ಸಾಕಷ್ಟು ಅವಕಾಶವಿದೆ ಎಂಬ ನನ್ನ ಬರವಣಿಗೆಗೆ— ಅಕ್ಕಗಳು ಪ್ರಥಮತಃ ಕೌಶಿಕನ ವಸತಿಗೆ ಹೋಗಿದ್ದರೆಂಬುವಕ್ಕೆ ಪ್ರಮಾಣವೆಲ್ಲಿ? ಹರಿಹರದೇವನು ಮಾತ್ರ ಹೇಳಿಲ್ಲ. ಕಾರಣ ಈ ಲೇಖಕರ ಪ್ರಶ್ನೆಯು ತಳವಿಲ್ಲದುದಾಗಿದೆ ಎಂದು ವಿಚಾರದ ಒರಗಲ್ಲಿಗೆ ಹಚ್ಚದೆ ಬರೆದುಬಿಟ್ಟಿದ್ದಾರೆ.

## ಮಾರುತ್ತರ

ಅಕ್ಕನು ಕೌಶಿಕನ ಅರಮನೆಗೆ ಹೋಗದೆ, ಹರಿಹರನು ಮದುವೆ ಮಾಡಿದನೆ? ಭೋಗ ಮಾಡಿಸಿದನೇ? ೬ ನೇ ಸ್ಥಲದ ೫೦-೫೪ ನೇ ಪುಟಗಳಲ್ಲಿ ಬರುವ ಭೋಗ ವರ್ಣನೆಯು ಅರಮನೆಯಲ್ಲಿಯೋ? ಶರಣರ ಮನೆಯಲ್ಲಿಯೋ? ಹೀಗೆ ರಗಳೆಯಲ್ಲಿ ಅಕ್ಕನು ಅರಮನೆಯಲ್ಲಿದ್ದ ವಿಚಾರ ಸಿಕ್ಕುತ್ತಿರಲಿಕ್ಕೂ ಹರಿಹರದೇವನು ಮಾತ್ರ ಇದನ್ನು ಹೇಳಿಲ್ಲವೆಂದು ಹೇಳುವುದು ಸಮಂಜಸವಲ್ಲ. ಹೀಗೆ ಸುಳ್ಳು ಸಾಧಿಸುವದಕ್ಕಿಂತಲೂ ಸುಮ್ಮನಿರುವುದು ಲೇಸಲ್ಲವೇ? ಮತ್ತು ಅಕ್ಕಗಳು ಪ್ರಥಮತಃ ಕೌಶಿಕನ ವಸತಿಗೆ ಹೋಗಿದ್ದರೆಂಬುದಕ್ಕೆ ಪ್ರಮಾಣವೆಲ್ಲಿ?" ಎಂಬ ನಿಮ್ಮ ಪ್ರಶ್ನೆಯಲ್ಲಿರುವ 'ಪ್ರಥಮತಃ' ಎಂಬ ಶಬ್ದದ ಅಭಿಪ್ರಾಯವೇನು ದಯವಿಟ್ಟು ತಿಳಿಸುವಿರಾ?

## ಇವರ ಗುರಿಯಿಲ್ಲದ ಉತ್ತರ.

ನಾನು ಹರಿಹರನು, ಉಡುತಡಿಯ ನಾಡನ್ನೂ, ರಾಜನ ಮತವನ್ನೂ ತಾಯ್ತಂದೆಗಳ ಹೆಸರನ್ನೂ ಹೇಳಿಲ್ಲವಾದ್ದರಿಂದ ಈತನ ಕಾವ್ಯವು ಸಂಪೂರ್ಣ ನಿರ್ದುಷ್ಟವಾದುದಲ್ಲವು ಎಂದು ಬರೆದುದಕ್ಕೆ— ರಾಜನ ಮತವನ್ನೂ, ಉಡುತಡಿಯ ನಾಡನ್ನೂ ಹರಿಹರನಂತೆ ಚಾಮರಸನೂ ಹೇಳಿಲ್ಲ. ಚನ್ನಬಸವಾಂಕನು ಮಾತ್ರ ಇವುಗಳನ್ನೆಲ್ಲಾ ವಿವರಿಸಿದ್ದಾನೆ. ಈತನಿಗೆ ಹರಿಹರನ ಕಾವ್ಯದ ಪರಿಚಯವಿದ್ದಿತು. ಇಂತು ನೋಡಿದರೆ ಚನ್ನಬಸವಾಂಕನ ಪುರಾಣವೇ ದಿಟವಾಗುವದು, ಚಾಮರಸನ ಪುರಾ

ಣವೇ ಸಟಿಯಾಗುವದು ಎಂದು ಅಸಮಂಜಸವಾಗಿ ಉತ್ತರಕೊಟ್ಟಿರುವದನ್ನು ನೋಡಿದರೆ ಪರಮ ವಿಷಾದವೆನಿಸುತ್ತದೆ.

## ಇದಕ್ಕೆ ನನ್ನ ಮಾರುತ್ತರ.

ಇವರ ಈ ಉತ್ತರದಲ್ಲಿ ಕಾತರತೆಯು ಎಡೆಯಾಡುತ್ತಿದೆ; ಕಳವಳವು ಒಡಮೂಡುತ್ತಿದೆ. ಏಕೆಂದರೆ ಹರಿಹರನ ವಿಷಯವನ್ನು ಕೇಳಿದರೆ ಚನ್ನಬಸವಾಂಕನನ್ನು ತಂದು ನಿಲ್ಲಿಸಬೇಕೆ? ಹರಿಹರನಂತೆ ಚಾಮರಸನು ಹೇಳಿರದಿದ್ದರೂ, ಚಾಮರಸನು ಅಕ್ಕನ ಪುರಾಣವನ್ನು ಬರೆಯ ಹೊರಟವನಲ್ಲ. ಆದ್ದರಿಂದ ಆತನು ಹೇಳಿರುವಲ್ಲಿ ದೋಷವಿಲ್ಲ. ಇನ್ನು ಚನ್ನಬಸವಾಂಕನು ಇವನ್ನೆಲ್ಲಾ ವಿವರಿಸಿದ್ದಾನೆ. ಈತನಿಗೆ ಹರಿಹರನ ಕಾವ್ಯದ ಪರಿಚಯವಿದ್ದಿತು ಎಂದು ಸಾಧಿಸುವಲ್ಲಿ ನಿಮಗೆ ಯಾವ ಪ್ರಯೋಜನವಿದೆ? ಏನು ಉದ್ದೇಶವಿದೆ? ಚನ್ನಬಸವಾಂಕನು ಹರಿಹರನ ಕಾವ್ಯದ ಪರಿಚಯ ಮಾಡಿಕೊಂಡಿದ್ದರೆ ಹರಿಹರನು ಹೇಳದಿರುವದನ್ನೂ ಸಹ ಹೇಳಿದಂತಾಗುತ್ತದೆಯೆ? ಚನ್ನಬಸವಾಂಕನ ಪುರಾಣವು ದಿಟವಾಗಿ, ಚಾಮರಸನ ಪುರಾಣವು ಸಟಿಯಾದರೆ, ಹರಿಹರದೇವನ ರಗಳೆಯು ಏನಾಗಬೇಕಾಯಿತು ಕೊಂಚ ಹೇಳಬಲ್ಲಿರಾ? "ವಿನಾಯಕಂ ಪ್ರಕುರ್ವಾಣೋ ರಚಯಾಮಾಸ ವಾನರಂ" ಎಂಬಂತೆ ಚಾಮರಸನನ್ನು ಸುಳ್ಳುಮಾಡಲು ಹೊರಟು ನಿಮಗೆ ಪ್ರಬಲ ಪ್ರಮಾಣವಾದ ರಗಳೆಯನ್ನೂ ನೀವೇ ಸುಳ್ಳುಮಾಡಿದಂತಾಗಲಿಲ್ಲವೇ? ತಾವು ಹೀಗೆಲ್ಲ ಬರೆದು ಕೊನೆಗೆ 'ಅಂತೋ ನಾಸ್ತಿ ಇಂತೋ ನಾಸ್ತಿ' ಎಂಬ ತತ್ವಕ್ಕೆ ಬರಬಾರದೆಂದು ನನ್ನ ಆಶಯ.[೧]

## ಮತ್ತೆನ್ನರಿಯದ ಮತ್ತೊಂದು ಪ್ರಶ್ನೆ.

ಹರಿಹರನು ಐತಿಹಾಸಿಕ ದೃಷ್ಟಿಯನ್ನು ಬಿಟ್ಟು, ಸ್ವತಂತ್ರ ಮಾರ್ಗವನ್ನು ಕಲ್ಪಿಸಿಕೊಳ್ಳುವನೆಂಬ ಕೊಂಚ ಭಾವವನ್ನಾದರೂ ಈ ಲೇಖ

---

೧ ಇಲ್ಲಿ ಈ ಲೇಖಕರು ಹೊಸದಿನ ವಿಚಾರವನ್ನು ಕೊಂಚ ಎತ್ತಿದ್ದಾರೆ. ಈ ವಿಚಾರವಾಗಿ ನಾನು ಜನವರಿ ಸಂಚಿಕೆಯ ೨೪೨ ನೇ ಪುಟದಲ್ಲಿ ವಿಸ್ತಾರವಾಗಿ ವಿವರಿಸಿದ್ದೇನೆ. ಇಲ್ಲಿ ಪುನಃ ವಿವರಿಸುವ ಬಯಕೆಯು ಈ ಲೇಖಕನಿಗಿಲ್ಲ.

ಕರು ಆ ನನ್ನ ಬರವಣಿಗೆಯನ್ನೇ ಎತ್ತಿ ಇನ್ನು ಮುಂದಾದರೂ ತೋರಿಸಿಕೊಡಲು ಸಿದ್ಧರಿರುವರೋ? ಎಂದು ಧುಮುಕಿ ಧೈರ್ಯವಾಗಿ ಕೇಳಿರುತ್ತಾರೆ.

## ಇದಕ್ಕೆ ನನ್ನ ಮಾರುತ್ತರ.

೩೭ ನೇ ಇಸ್ವಿಯ ಎಪ್ರೇಲ ತಿಂಗಳ 'ಶಿವಾನುಭವ' ದ ೨೮೬ ನೇ ಪುಟದಲ್ಲಿ— "ಆತುರದ ಪ್ರೇಮಮಂ ತಾನೆಯಾರೋಗಿಪಂ। ಭೂತಸಂಕುಳಕೆ ಮಾಂಸವನಿತ್ತು ತಣಿಯಿಪಂ"॥ ಎಂಬ ಶ್ಲೋಕವನ್ನು ವಿಮರ್ಶಿಸುತ್ತಃ— 'ಪ್ರೇಮವು ಪರಿಶುದ್ಧವಿದ್ದರೆ ಆ ಪ್ರೇಮದೊಡನೆ ತಂದ ವಸ್ತುವು ಮಂಗಲವೋ ಅಮಂಗಲವೋ ಎಂತಹದಾದರೂ ಗ್ರಾಹ್ಯವೇ. ಅದು ಕಾರಣ ಈಶನು ಸ್ವೀಕರಿಸಬೇಕಾಯಿತು.' ಎಂದು ಸ್ವೀಕಾರವನ್ನು ನಿರ್ಧಾರ ಮಾಡಿ ಮುಂದೆ— ಹಾಗಾದರೆ ಕವಿಯು, ಮಾಂಸವನ್ನು ಸ್ವೀಕರಿಸದೆ ಭೂತಗಳಿಗೆ ಕೊಟ್ಟು ಪ್ರೇಮದಿಂದ ತಣಿದನೆಂದು ಹೇಳುವನು. ಮಾಂಸವನ್ನೆಲ್ಲಿ ಭಕ್ಷಿಸಿದ? ಎನ್ನಬಹುದು, ಎಂದು ನೀವೇ ಪ್ರಶ್ನೆ ಮಾಡಿಕೊಂಡು— "ಕವಿಯು ಮಾಂಸಭಕ್ಷಣದ ಧರ್ಮದವನಾಗದಿರುವದರಿಂದ ಹೀಗೇ ತೋರಿರುವನು." ಎಂದು ಉತ್ತರ ಕೊಟ್ಟಿರುವಿರಿ. ಈ ಉತ್ತರದಿಂದ, ಶಿವನು ಮಾಂಸಭಕ್ಷಣ ಮಾಡಿದ್ದರೂ ಅದನ್ನು ಕವಿಯು ಮುಚ್ಚಿಟ್ಟಿರುವನೆಂಬ ಅಭಿಪ್ರಾಯವು ಅಭಿವ್ಯಕ್ತವಾಗುವದಿಲ್ಲವೇ? ಶಿವನ ಮಾಂಸಭಕ್ಷಣದ ನಿಜವಾದ ಐತಿಹ್ಯವು ತನ್ನ ಧರ್ಮಕ್ಕೆ ವಿರೋಧವೆಂದು ಭಾವಿಸಿ, ಭೂತಸಂಕುಳಕ್ಕೆ ಹಂಚಿದನೆಂಬ ಸ್ವತಂತ್ರ ಮಾರ್ಗವನ್ನು ಕಲ್ಪಿಸಿಕೊಂಡನೆಂಬ ಭಾವವು ಎಗ್ಗಳವಾಗಿ ತೋರುವದಿಲ್ಲವೇ? ಹೀಗೆ ಬರೆದೂ ಬರೆದಿಲ್ಲವೆಂದು ತೋರಿಸಲು "ಈ ಲೇಖಕರ ಸುಳ್ಳು ಹೇಳಿಕೆ" ಎಂದು ತಲೆಕಟ್ಟಿನಲ್ಲಿ ಬರೆದು ಬೀರಿದರೆ, ಇದರಲ್ಲಿ ಯಾರ ಅನಭಿಜ್ಞತೆಯು ಅಭಿವ್ಯಕ್ತವಾಗುತ್ತದೆಂಬುದನ್ನು ವಿಚಾರಿಸಬಲ್ಲಿರಾ? ಇನ್ನಾದರೂ "ಮುಟ್ಟಿ ತಿಳಿದು ಮಾತಾಡಬೇಕು. ಗುಟ್ಟು ತಿಳಿದು ಗುದ್ದಾಡಬೇಕು" ಎಂಬ ನಾಣ್ಣುಡಿಯೊಂದನ್ನೂ ನೆನವಿಗೆ ತಂದುಕೊಳ್ಳುವಿರಾ?

## ಲೇಖಾಂಕ ೩ ಕ್ಕೆ ಮಾರುತ್ತರ.

ಈ ಲೇಖಕರು ಲೇಖಾಂಕಗಳನ್ನು ಬಳಿಸಲು ಇಡೀ ಗ್ರಂಥಗಳನ್ನೇ ಅನುವಾದಿಸಲು ಅನುವಾಗಿದ್ದಾರೆ; ಹಿಂಜಿದ್ದನ್ನೇ ಹಿಂಜಲು ಹೊರಟ

ದ್ದಾರೆ; ಅಟ್ಟಿಟ್ಟದ್ದನ್ನೇ ಆಡಲು ಆರಂಭಮಾಡಿದ್ದಾರೆ. ಹೀಗೆ ಹುರಳಿಲ್ಲದ ಹೊಸತನವಿಲ್ಲದ ಲೇಖಾಂಕಗಳನ್ನು ಎಷ್ಟು ಬರೆದರೇನು? "ಸಾವಿರ ಮಡಿಕೆಗಳಿಗೆ ಸಾಲದೇ ಒಂದು ಡೊಣ್ಣೆ"

## ಅಧಿಕ ಪ್ರಸಂಗದ ಪ್ರಶ್ನೆ.

...... ಆಗ ಅಕ್ಕನ ಮನದಲ್ಲಿ ಕೌಶಿಕನು ಶಿವಭಕ್ತನಾದ ಪಕ್ಷದಲ್ಲಿ ಅವನನ್ನು ಲಗ್ನವಾಗಬೇಕೆಂಬ ಹಂಬಲವಿತ್ತೆಂದು (ಚಾಮರಸನ ದೃಷ್ಟಿಯಿಂದ) ಹೇಳಲ್ಪಡಬೇಕಾಗುತ್ತದೆ. ಮತ್ತೂ ಈ ಮಾತಿನಿಂದ ಆಗ ಒಟ್ಟು ಶಿವಭಕ್ತನನ್ನು ಮದುವೆಯಾಗುವ ಇಷ್ಟವು ಅಕ್ಕನಿಗೂ ಇದ್ದೇ ಇತ್ತೆಂದು ಬಹು ಸ್ಪಷ್ಟವಾಗಿ ತೋರುತ್ತದೆ ಎಂದು ಬರೆದಿರುವರು.

## ಮಾರುತ್ತರ.

ಈ ಪ್ರಶ್ನೆಗೆ ಉತ್ತರ ಬರೆಯಲು ಇಷ್ಟವಿಲ್ಲವಾದರೂ ಬಿಟ್ಟರೆ ನಾವು ಬರೆದಿದ್ದೇ ಸಿದ್ಧಾಂತವೆಂದು ಭಾವಿಸಿಗೊಳ್ಳುವರೆಂದು ಭಾವಿಸಿ ಬರೆಯಬೇಕಾಗಿದೆ. ಅರಸನನ್ನು ಶಿವಭಕ್ತನನ್ನಾಗಿ ಮಾಡಿ ಅಕ್ಕನಿಗೆ ಬಾಸಿಗ ಕಟ್ಟುವ ಹಂಬಲವು ಚಾಮರಸನಿಗೂ ಇಲ್ಲ. ಕಟ್ಟಿಕೊಳ್ಳುವ ಹಂಬಲವು ಅಕ್ಕನಿಗೂ ಇಲ್ಲ. ಆದರೆ ಆ ದೃಷ್ಟಿಯನ್ನಿಟ್ಟು ನೋಡುವ ನಿಮ್ಮ ಹೃದಯದಲ್ಲಿ ಮಾತ್ರ ಇದೆ. ಕೌಶಿಕರಾಜನು ಶಿವಭಕ್ತನಾಗಲಾರನು. ಆತನು ಶಿವಭಕ್ತನಾಗದಿದ್ದರೆ ಅಕ್ಕನ ವ್ರತವೂ ಹಾಳಾಗಲಾರದು. ಮತ್ತು ಆಕೆಯನ್ನು ಹೆತ್ತವರ ಮರಣಶಾಸನವೂ ತಪ್ಪಿಹೋಗುವದು ಎಂದು ಉದಾತ್ತವಾದ ಭಾವನೆಯು ಚಾಮರಸನದು. ಅಕ್ಕನ ಮನದಲ್ಲಿಯೂ ಇವೇ ಭಾವನೆಗಳು ಒಡಮೂಡಿರಬೇಕು. ಮತಾಭಿಮಾನಿಯಾದ ಅರಸನು ಶಿವಭಕ್ತನಾಗುವದಿಲ್ಲೆಂದು ಅವಳಿಗೆ ಆಗ ಚನ್ನಾಗಿ ಗೊತ್ತಾಗಿರಲಿಕ್ಕೆಬೇಕು. ಆದ್ದರಿಂದಲೇ ಅವಳು ಹಾಗೇ ಹೇಳಿರುವಳು. ನೀವಾದರೂ ನಿಮ್ಮ ಬರಹದ ಕೊನೆಯ ಅಡಿಟಿಪ್ಪಣಿಯಲ್ಲಿ 'ವಿಷಯಿಯೂ, ಚಪಲಚಿತ್ತನೂ, ನಿಷ್ಠುರನೂ ಆದ ಕೌಶಿಕನು ಈ ಮೂರು ನಿಯಮಗಳಿಗೆ ಅಧೀನನಾಗಿ ವರ್ತಿಸುವದು ಅಸಾಧ್ಯವೆಂದೇ ಅಕ್ಕನ ಬಗೆಯಲ್ಲಿ ನಿಶ್ಚಯವಾಗಿರಬೇಕು, ಎಂದು ಹೇಳಿ ಮೂರು ಕರಾರುಗಳನ್ನು ಸಾಧುವನ್ನಾಗಿ ಸಾಧಿಸಿರುವಿರಿ. ಹೀಗೆಯೇ ಇಲ್ಲಿ ನಮ್ಮಿಂದಲೂ ಮಾರುತ್ತರ

ಬಂದೀತೆಂದು ನಿಮಗೆ ಈ ಪ್ರಶ್ನೆಮಾಡುವಾಗ ಹೊಳೆಯಲಿಲ್ಲವೇ? ಹೊಳೆದಿದ್ದರೆ ಹೀಗೆ ಪ್ರಶ್ನೆಮಾಡಿದ್ದು ಅಧಿಕ ಪ್ರಸಂಗವಲ್ಲದೆ ಮತ್ತೇನು? ಒಟ್ಟಿನಲ್ಲಿ ಅಕ್ಕನಿಗೆ (ಚಾಮರಸನ ಕಾವ್ಯದಲ್ಲಿ) ಶಿವಭಕ್ತರನ್ನು ವರಿಸುವ ಇಚ್ಛೆಯಿಲ್ಲ. ಭವಿಯನ್ನು ಬಿಡುವ ಸಾಹಸವಿದೆ. ರಗಳೆಯಂತೆ ಅಕ್ಕನು ಮೂರು ನಿಯಮಗಳನ್ನು ಹಾಕಿಕೊಂಡು, ಮದುವೆಯಾಗಿ, ಭವಿಯ ಸಂಗಮಾಡಿ, ತಾಯ್ತಂದೆಗಳನ್ನು ಉಳಿಸುವ ಇನಿತೊಂದು ದೀರ್ಘವಾದ ಕಟ್ಟಿಗೆ ಬೀಳುವವಳಲ್ಲ. ಮೊತ್ತ ಮೊದಲೇ ಭವಿಯನ್ನು ತೊರೆದು, ಭವವನ್ನು ಹರಿದು, ಹೆತ್ತವರ ಪೊರೆದು, ವೀರವಿರತಳಾಗುವ ಸ್ವತಂತ್ರ ವಿಚಾರವುಳ್ಳವಳು; ವಿಲಕ್ಷಣವಾದ ವ್ಯವಹಾರವುಳ್ಳವಳು.

## ಇವರ ಇನ್ನೊಂದು ಸಂದೇಹ.

ಅರಸನು ಶಿವಭಕ್ತನಾಗಲು ಒಪ್ಪದಿರುವಾಗ ಬೇರೊಬ್ಬ ವೀರಶೈವನನ್ನು ವಿವಾಹವಾಗಲಿಲ್ಲವೆಂದ ಮೇಲೆ, ಆ ಅಕ್ಕನಿಗೆ ರಾಜನನ್ನೇ ವರಿಸಬೇಕೆಂಬ 'ಆಶೆ' ಏನಾದರೂ ಇತ್ತೋ ಎಂದು ಸಂಶಯವು ಬಂದೇ ಬರುತ್ತದೆ ಎಂದು ಶಂಕೆಯ ಶೃಂಖಲೆಯನ್ನು ಸುತ್ತಿಕೊಂಡಿರುವರು.

## ಆ ಶೃಂಖಲೆಯ ಖಂಡನ.

ಅಕ್ಕನು ಲಗ್ನವಾಗದೆ ನಗ್ನಳಾಗಿ ಮನೆಯಿಂದ ಹೊರಟುಹೋಗುವಾಗ, ನೀವು ಮೇಲೆ ಹೇಳುವಂತೆ ಅಕ್ಕನ ತಾಯಿಯ ಮನಸ್ಸಿನಲ್ಲಿ (ಅಕ್ಕನ ಮನಸ್ಸಿನಲ್ಲಿ ಅಲ್ಲ.) ಸಂಶಯ ಬಂದು ಎಲೋ ಪುತ್ರಿಯೆ! ಭವಿಯನೊಲ್ಲದಿದ್ದರೆ ಭಕ್ತರನ್ನಾದರೂ ಮಾಡಿಕೊಳ್ಳುವಿಯಾ? ಎಂದು ಕೇಳಿರಬೇಕು. ಅದಕ್ಕೆ ಅಕ್ಕಗಳು ಸಾಮಾನ್ಯವಾಗಿ ನಾನು ಈ ಲೋಕದ ಯಾವ ಗಂಡರನ್ನೂ ಒಲ್ಲೆ. ಕೌಶಿಕನಿಗೆ ಶಿವಭಕ್ತನಾದರೆ ಆಗುವೆನೆಂದು ಹೇಳಿದ್ದು, ಕೇವಲ ನನ್ನ-ನಿಮ್ಮಗಳ ಮೇಲೆ ಬಂದ ದುಃಖ ಪ್ರಸಂಗವು ದೂರಾಗಲಿಕ್ಕೆ ಮಾತ್ರ. ಎಲೆ ಅವ್ವಾ! ನನ್ನ ಮನಸಿನ ನಿಶ್ಚಲಸ್ಥಿತಿಯನ್ನಾದರೂ ತಿಳಿ.

"ಸಾವಿಲ್ಲದ, ಕೇಡಿಲ್ಲದ, ರೂಹಿಲ್ಲದ ಚಲುವಂಗಾನೊಲಿದೆನವ್ವಾ!
ಎಡೆಯಿಲ್ಲದ, ಕಡೆಯಿಲ್ಲದ, ತೆರಹಿಲ್ಲದ, ಕುರುಹಿಲ್ಲದ ಚಲುವಂಗಾ

ನೊಲಿದೆ ಎಲೆ ಅವ್ವಾ! ನೀನು ಕೇಳಾ ತಾಯೆ. ಭವವಿಲ್ಲದ, ಭಯವಿಲ್ಲದ, ನಿರ್ಭಯ ಚಲುವಂಗೊಲಿದೆ ನಾನು. ಕುಲಸೀಮೆಯಿಲ್ಲದ ನಿಸ್ಸೀಮ ಚಲುವಂಗೆ ನಾನೊಲಿದೆ. ಇದು ಕಾರಣ ಚನ್ನಮಲ್ಲಿಕಾರ್ಜುನ ಚಲುವ ಗಂಡ ನೆನಗೆ. ಈ ಸಾವ ಕೆಡುವ ಗಂಡರ ನೊಯ್ದು ಒಲೆಯೊಳಗಿಕ್ಕು. ”

ಎಂದು ಸಾಮಾನ್ಯವಾಗಿ ವಿವಾಹದ ಸುದ್ದಿಯನ್ನೇ ಎತ್ತಬೇಡೆಂಬ ಅಭಿಪ್ರಾಯದಲ್ಲಿ ಹೇಳಿಬಿಟ್ಟಿದ್ದಾಳೆ. ಒಂದು ಪಕ್ಷ ಅರಸನನ್ನೇ ಆಗುವ ಅಪೇಕ್ಷೆಯು ಅಕ್ಕನಿಗೆ ಇದ್ದಿದ್ದರೆ 'ನಿಮ್ಮ ಮತ ನಮಗಳವಡದು' ಎಂದು ಅರಸನು ಹೇಳಿದೊಡನೆಯೇ 'ನಮಗೆ ನಿಮ್ಮ ಸಂಗವಳವಡದು' ಎಂದು ಖಂಡತುಂಡವಾಗಿ ಎಂದೂ ಉತ್ತರಿಸುತ್ತಿರಲಿಲ್ಲ. ಹೀಗಿದ್ದೂ ನಿಮಗೆ ಸಂಶಯ ಬಂದದ್ದು ಬಹಳೇ ಅಚ್ಚರಿಯಾಗಿದೆ. ಇನ್ನಾದರೂ ತೊಲಗಲಿ.

## ಮತ್ತೊಂದು ಕೇಳಿಕೆ.

ತನ್ನ ಉಡಿಗೆ ತೊಡಿಗೆಗಳನ್ನೆಲ್ಲ ಅರಸನಿಗೆ ಬಿಚ್ಚಿಕೊಟ್ಟು, ವೈರಾಗ್ಯದಿಂದ ದಿಗಂಬರೆಯಾಗಿ ಹೋಗುವಷ್ಟು ಕಾರಣವು ಅಥವಾ ಕಷ್ಟವು ಆ ಅಕ್ಕನಿಗೆ ಅಲ್ಲಿ ಅಂತಹದೇನಿತ್ತು ? ಎಂದು ಹುಡುಕಿದರೆ ಪ್ರಭುಲಿಂಗಲೀಲೆಯಲ್ಲಿ ಉತ್ತರ ದೊರೆಯಲಾರದೆಂದು ನನ್ನ ತಿಳವಳಿಕೆಯಲ್ಲಿದೆ. ಮತ್ತು ಆಭರಣಾದಿಗಳನ್ನು ಅರಸನಿಗೇಕೆ ಕೊಡಬೇಕಾಗಿತ್ತು ? ಎಂಬ ಸಂಶಯವೂ ವಿಚಾರಿಸಲ್ಪಡತಕ್ಕದ್ದಾಗಿದೆ ಎಂದು ಮತ್ತೊಂದು ಸಂಶಯದಲ್ಲಿ ಸಿಲ್ಕಿದ್ದಾರೆ.

## ಇದಕ್ಕೆ ನನ್ನ ಹೇಳಿಕೆ.

ಚಾಮರಸ ಕವಿಯು ಕಾವ್ಯದಲ್ಲಿ ಅಕ್ಕನು ದಿಗಂಬರೆಯಾಗಲು ಕಾರಣವಿಲ್ಲವೆಂಬುದೇನೋ ಒಪ್ಪತಕ್ಕ ಮಾತಾದರೂ, ಆತನ ಅಂತರಂಗದಲ್ಲಿ ಅದಿಲ್ಲದಿಲ್ಲ. ಕಾರಣವನ್ನು ಕಾರ್ಯದಲ್ಲಿ ಅಡಗಿಸಿದ್ದಾನೆಯೇ ಹೊರ್ತು ಪ್ರತ್ಯೇಕವಾಗಿ ಚಿತ್ರಿಸಿಲ್ಲ. ಅವನ್ನೆಲ್ಲ ಚಿತ್ರಿಸಲು ಚಾಮರಸನು ಇಡೀ ಚರಿತ್ರೆಯನ್ನು ಬರೆಯಹೊರಟಿಲ್ಲ. ಸಂಕ್ಷಿಪ್ತವಾಗಿ ಸಾಗಿದ್ದಾನೆ. ಆದರೂ ಕಾರ್ಯವನ್ನು ಹೇಳಿದ ಮೇಲೆ ಕಾರಣವನ್ನು ಊಹಿ

ಸಲಾಗವೇ? ಒಂದು ವೇಳೆ ಹೇಳಲೇಬೇಕೆಂದರೆ ರಾಜನು ಅಕ್ಕನ ಮಾತಿಗೆ ಶಿವಭಕ್ತನಾಗಲು ಒಪ್ಪದಿರುವಾಗ ಅಕ್ಕಗಳಾದರೂ ನಿರ್ಭಿಡೆಯಿಂದ ನಿಮ್ಮ ಸಂಗ ನಮಗೊಲ್ಲವೆಂದು ಹೇಳಿ ಎದ್ದು ಹೊರಟಿರಬೇಕು. ಆಗ ಆತನು ತನ್ನ ಮೋಹಾವೇಶದಿಂದಲೂ ರಾಜದರ್ಪದಿಂದಲೂ ಅವಳನ್ನು ಎಳೆಯಲು ಮುಂದಾಗಿರಬೇಕು. ಆಗ ಅವಳು ಉಡಿಗೆ ತೊಡಿಗೆಗಳನ್ನು ಬಿಟ್ಟುಕೊಟ್ಟಿರಬೇಕು. ಇದು ಚಾಮರಸನು ಚಿತ್ರಿಸಿದ ಚರಿತ್ರೆಯಿಂದ ಊಹಿಸಲ್ಪಡುತ್ತದೆ ಈ ಊಹೆಯು ಸತ್ಯವಾಗಿ ಪರಿಣಮಿಸುವದಲ್ಲದೆ ಚಾಮರಸನ ಅಭಿಪ್ರಾಯವೂ ಸತ್ಯವಾದುದೆಂದು ಕೆಳಗಿನ ದೃಷ್ಟಾಂತದಿಂದ ಸ್ಪಷ್ಟವಾಗುತ್ತದೆ.

"ಉಟ್ಟಸೀರೆಯು ಸೆಳೆದು | ತೊಟ್ಟ ತೊಡಿಗೆಯು ಹರಿದು।
ಬಿಟ್ಟೆನೋ ನಾನು ಬಿಡುಮುಡಿಯು ಎಲೆ ದೇವ!।
ಕೊಟ್ಟೆನೋ ಎನ್ನ ತನು ಮನವ ॥೪೨॥

— ಯೋಗಾಂಗತ್ರಿವಿಧಿ.

ಈ ಅಕ್ಕನ ಉಕ್ತಿಯನ್ನು ವಿಮರ್ಶಿಸಿದರೆ ಚಾಮರಸನ ಮಾತು ಸತ್ಯವೆಂದೂ ಹರಿಹರನದು ಕಾಲ್ಪನಿಕವೆಂದೂ ನಿರ್ಧರವಾಗುತ್ತದೆ. ಮತ್ತು ಹರಿಹರನ ನಗ್ನತೆಯ ಕಾರಣವನ್ನು ಇದಕ್ಕೆ ಸ್ವಲ್ಪ ಸರಿಹಚ್ಚಿ ದಿಟ್ಟಿಸುವ. ಹರಿಹರನ ಅಕ್ಕನು ಉಡಿಗೆತೊಡಿಗೆಗಳನ್ನು ಬಿಡುವಂತಹ ಸನ್ನಿವೇಶವೇ ಇಲ್ಲ. ಏಕೆಂದರೆ ಪವಡಿಸುವಾಗ ತೊಡಿಗೆಗಳನ್ನು ಹಾಕಿಕೊಳ್ಳುವದೇ ಅನುಚಿತ. ಹಾಗು ಮೊದಲೇ ಸೀರೆಯನ್ನು ಬಿಟ್ಟು ಬಂದು ಗುರುವಿಗೆ ನಮಸ್ಕರಿಸಿದ್ದರಿಂದ ಹೊರಡುವಾಗ ಸೀರೆಯನ್ನು ಮರಳಿ ಬಿಡುವ ಪ್ರಸಂಗವೂ ಇಲ್ಲ. ಆದಕಾರಣ ಹರಿಹರನು ತನ್ನ ಕಲ್ಪನೆಗೆ ತಕ್ಕಂತೆ "ಆಶಾರಹಿತೆ ಕೇಶಾಂಬರೆಯಾಗಿ" ಹೊರಟುಹೋದಳೆಂದು ಬಣ್ಣಿಸಿಬಿಡುತ್ತಾನೆ. ಹೀಗೆ ಹೇಳಿದಲ್ಲಿ 'ಉಟ್ಟ ಸೀರೆಯು ಸೆಳೆದು। ತೊಟ್ಟತೊಡಿಗೆಯು ಹರಿದು।' ಎಂಬ ಅಕ್ಕನ ಮಾತಿಗೇನೆ ಅತ್ಯಂತ ವಿರೋಧವಾಗುವದಿಲ್ಲವೇ? "ಕ್ರಮದಲುಟ್ಟುಡುಗೊರೆಯು ತೊಡಿಗೆಯು ಸಿತ್ತಳರಸಂಗೆ" ಎಂಬ ಚಾಮರಸನ ನುಡಿಗೂ ಈ ಅಕ್ಕನ ಹಾಡಿಗೂ ವಿಶೇಷ ವಿರೋಧವಿಲ್ಲವಾದ್ದರಿಂದ ಚಾಮರಸನು ಹೇಳುವದೇ ಸತ್ಯ. ಇದೊಂದು ಪ್ರಬಲವಾದ ಉದಾಹರಣೆಯಿಂದಲೇ ಹರಿಹರನ ಮಾರ್ಗವು

ಕಾಲ್ಪನಿಕವೆಂದು ಚನ್ನಾಗಿ ಕಾಣಬರುವದಿಲ್ಲವೇ? ಮತ್ತು ಅರಸನು ಬಲಾತ್ಕರಿಸಿದಾಗ ವಿರತಿಭಾವವನ್ನು ತಳೆದ ಮಹಾದೇವಿಯಕ್ಕನು ಅರಸನಿಗಲ್ಲದೆ ಆಭರಣದ ಆಶೆಯಿಂದ ಮನೆಯುವರನ್ನು ಕರೆದು ಕೊಡಬೇಕಾಗಿತ್ತೆ? ವಿರತಿಯಲ್ಲಿ ಯಾರಾದರೇನು? ಯಾವುದಾದರೇನು? ಬಿಸುಟಿ ಬಿಡುವದೇ ಒಂದು ಸ್ವಭಾವ. ಆದ್ದರಿಂದ ಆಭರಣಾದಿಗಳನ್ನು ಅರಸನಿಗೆ ಏಕೆ ಕೊಡಬೇಕಾಗಿತ್ತು? ಎಂಬ ನಿಮ್ಮ ಸಂಶಯವು ತಾನೇ ಸಡಲಿಹೋಗುತ್ತದೆ.

## ವಿಚಾರವಿಲ್ಲದ ಇನ್ನೊಂದು ವಿಮರ್ಶೆ.

ಚಾಮರಸನು ಹೇಳುವಂತೆ ಮೊದಲಿಗೆ ಯಾವದೊಂದೂ ಬಲಾತ್ಕಾರವಿಲ್ಲದೆ ಮದುವೆಯಾಗುವೆನೆಂದು (ಲಿಂಗವಂತನಾದರೆ) ಮನವಮಾಡುವಂತಹ, ಸಮ್ಮತಿಕೊಡುವಂತಹ ಸ್ವಭಾವವು ಅಕ್ಕಗಳದಾಗಿರಲಿಲ್ಲ. ಇದನ್ನು ಆಕೆಯ ವಚನಗಳಿಂದಲೇ ತಿಳಿಯುಬಹುದು.

## ಇದಕ್ಕೆ ಸಮಾಧಾನ.

ಆಹಾ! ಏನು ವಿಚಾರ! ಏನು ವಿಮರ್ಶೆ!! ಇವರ ಈ ಪ್ರಶ್ನೆ ಸಂಸ್ಕೃತದಲ್ಲಿರುವ "ಕಂಬಲವಂತೆಂ ನ ಬಾಧತೇ ಶೀತಲಂ?" "ಕಾ ಶೀತಲ ವಾಹಿನೀ" ಎಂಬ ಪ್ರಶ್ನೆಗಳಂತೆಯೇ ಇದೆ. ಆದರೆ ಇವುಗಳಲ್ಲಿ ಪಾಂಡಿತ್ಯಪ್ರದರ್ಶನವಿದೆ. ಇವರ ಪ್ರಶ್ನೆಯುಲ್ಲಿ ಮಾತ್ರ........." ನೋಡಿ ಈ ಲೇಖಕರು ಬಲಾತ್ಕಾರವಿಲ್ಲದೆ ಮದುವೆಯಾಗಲು ಮನವಮಾಡಿದಳೆಂದು ಚಾಮರಸನ ಮೇಲೆ ದೋಷ ಹೊರಿಸಲು ಹೊರಟು, ಕಂಸಿನಲ್ಲಿ (ಲಿಂಗವಂತನಾದರೆ) ಎಂಬ ಬಲಾತ್ಕಾರ ಸೂಚಕಪದವನ್ನೂ ತಾವೇ ತೋರಿಸಿ, ಚಾಮರಸನನ್ನು ತಾವೇ ನಿರ್ದೋಷಿಯನ್ನಾಗಿ ಮಾಡಿದ್ದಾರೆ. ಮತ್ತು ನನ್ನಿಂದ ಬಯಿಸಿದ ಉತ್ತರವನ್ನು ಆ ಸಂಸ್ಕೃತ ಪದ್ಯಗಳಲ್ಲಿರುವಂತೆ ತಾವೇ ಸೇರಿಸಿಬಿಟ್ಟಿದ್ದಾರೆ. ಅವರೊಂದು ವಿಧದಲ್ಲಿ ಜಾಣರು. ಇವರೊಂದು ವಿಧದಲ್ಲಿ............ರು.

## ನೆಲೆಯಿಲ್ಲದ ನುಡಿ

ಕೌಶಿಕನು ಕಾರ್ಯಾಕಾರ್ಯವಿವೇಕಿಯೂ ತಕ್ಕಮಟ್ಟಿಗೆ ಗುಣವಂತನೂ ಇದ್ದನು ಎಂಬ ನನ್ನ ಮಾತಿಗೆ— ತರುಣಿಯಾದ ಅಕ್ಕನು, ಲಗ್ನ

ಆದವಳೋ ಆಗದವಳೋ ಎಂಬದನ್ನು ವಿಚಾರಿಸದೆ ನೋಡಿದೊಡನೆ ಅದೆಂದಿಗೂ ಕಾಮಾತುರನಾಗುತ್ತಿರಲಿಲ್ಲ (ದೂರದಿಂದ ಪರನಾರಿಯರನ್ನು ಕನ್ನೆ ಅಥವಾ ಸತಿಯೆಂದು ನಿರ್ಧರಿಸುವದು ತಿಣ್ಣ.) ಪರಸ್ತ್ರೀ ಎಲ್ಲಿರುವಳೋ ಎಂಬ ಸಂಶಯದಿಂದ ಅಂಜದೇ ಅಳುಕದೇ ಹೋಗುತ್ತಿರಲಿಲ್ಲ. ಆದ್ದರಿಂದ ಆ ಗುಣಗಳು ಮುಚ್ಚಿಹೋಗಿದ್ದವು, ಎಂಬಂಶದಲ್ಲಿ ಉತ್ತರಕೊಟ್ಟಿರುವರು.

## ಮರುತ್ತರ.

ವಿಚಾರಿಸಿದರೆ ಇದರಲ್ಲಿ ಏನೊಂದೂ ತಿರುಳಿಲ್ಲ. ಏಕೆಂದರೆ ಯಾವ ಕಾರ್ಯವಾದರೂ ತ್ರಿಕರಣಗಳಿಂದ ಸಾಗುತ್ತವೆ ಎಂಬದನ್ನು ನೆನವಿನಲ್ಲಿಡಬೇಕು. ಹಾಗೆ ಕೌಶಿಕನು ಅಕ್ಕನನ್ನು ನೋಡಿ ಮನಸ್ಸಿನಲ್ಲಿ ಮೋಹಿಸಿದಾಗ ಮಾತ್ರ ಮನೋಧೈರ್ಯವು ಅಳಿದಿರಬಹುದು. ಗುಣ ಹರಿದಿರಬಹುದು. ಬುದ್ಧಿ ಸರಿದಿರಬಹುದು. ಆದರೆ ಆತನು ಅದೇ ಅವಿವೇಕವನ್ನೇ ಕಾರ್ಯದಲ್ಲಿ ತರಲಿಲ್ಲ. ಆಗ ವಿಚಾರ ಮಾಡಿದನು. ಈಗಲೇ ಬಲಾತ್ಕಾರಮಾಡುವದು ಅನುಚಿತವು. ಆದ್ದರಿಂದ ಅರಮನೆಗೆ ಹೋಗಿ ಹೇಳಿ, ಕೇಳಿ ವರಿಸುವದು ಉಚಿತವೆಂದು ಭಾವಿಸಿ ಹಾಗೆಯೇ ಅರಮನೆಗೆ ತೆರಳಿದನು. ಇದು ಆತನ ಕಾರ್ಯಾಕಾರ್ಯವಿವೇಕವಲ್ಲದೆ ಮತ್ತೇನು? ತರುಣೆಯಾದ ಅಕ್ಕನು, ಕನ್ನೆಯೋ, ಸತಿಯೋ ಎಂಬದನ್ನು ವಿಚಾರಿಸದೆ ಅದೆಂದಿಗೂ ಕಾಮಾತುರನಾಗುತ್ತಿರಲಿಲ್ಲ ಎಂಬುದಾಗಿ ಈ ಲೇಖಕರದೊಂದು ದೊಡ್ಡ ಪ್ರಶ್ನೆಯಿದೆ. ಕಾಮುಕರಿಗೆ ಇವಳು ಲಗ್ನವಾದವಳು ಆಗದವಳು ಎಂಬ ನಿರ್ಬಂಧವಿದೆಯೇ? ಇದರಿಂದ ನಿಮ್ಮ ಅಭಿಪ್ರಾಯವೇನು? ಹಾಗೆ ಕಾಮವಾಸನೆ ಜನಿಸಿದರೆ ಗುಣವಂತರಲ್ಲವೆಂದೋ? ಅಥವಾ ಕನ್ನೆಯರನ್ನು ಬಯಿಸಿ ತರುಣರು ವಿವಾಹವಾಗಬಾರದೆಂದೋ? ಇವೆರಡರಲ್ಲಿ ನೀವು ಯಾವ ಅಭಿಪ್ರಾಯವನ್ನಿಟ್ಟುಕೊಂಡಿದ್ದರೂ ಅದು ತಪ್ಪು. ಕೌಶಿಕನು ಪುರುಷ ಸಾಮಾನ್ಯವಾಗಿ ಮೋಹಿಸಿದ್ದರೂ ಪರಸ್ತ್ರೀಯೆಂಬ ಅಂಜಿಕೆಯಿಂದಲೂ ಅಳುಕಿನಿಂದಲೂ ಬಲಾತ್ಕರಿಸುವದನ್ನು ಬಿಟ್ಟು ಅರಮನೆಗೆ ತೆರಳಿದನು. ಕನ್ನೆಯಿರಲಿ ಸತಿಯಿರಲಿ ಸೌಂದರ್ಯವತಿಯಿದ್ದರೆ ಮನಸೋಲುವದು ಸಹಜವಾದ ಮಾತು. ಆದರೆ ಅದನ್ನು ಹಾಗೆಯೇ ಹರಿಬಿಟ್ಟು ತತ್‌ಕ್ಷಣವೇ ಕಾರ್ಯ

ದಲ್ಲಿ ತಾರದಿರುವದೇ ಗುಣ; ಇದೇ ಕಾರ್ಯಾಕಾರ್ಯವಿವೇಕ. ಇವು ಈ ರಾಜನಲ್ಲಿ ಇವೆ. ಆದ್ದರಿಂದ ಈತನೂ ಕಾರ್ಯಾಕಾರ್ಯವಿವೇಕಿ, ತಕ್ಕ ಮಟ್ಟಿಗೆ ಗುಣಿ ಎಂದು ಹೇಳುವಲ್ಲಿ ಯಾವ ದೋಷವೂ ಇಲ್ಲ.

## ದೃಷ್ಟಿಕೋನವಿಲ್ಲದ ದೃಷ್ಟಾಂತ.

ಕರಾರನ್ನು ಮಿಕ್ಕಿ ಕೊಲ್ಲುವಷ್ಟು ಕೌಶಿಕನು ಕಟುಕನಿದ್ದಿಲ್ಲ ಎಂಬ ನನ್ನ ವಿಚಾರಕ್ಕೆ ಈ ಲೇಖಕರು, ಒಂದು ಅನುಚಿತವಾದ ದೃಷ್ಟಾಂತ ವನ್ನು ಕೊಟ್ಟು ಕೃತಾರ್ಥರಾಗಲು ಹೆಣಗಿದ್ದಾರೆ. ಆದರೆ ಅದರಿಂದ ಅವರು ಕೃತಾರ್ಥರಾಗಲು ಶಕ್ಯವಿಲ್ಲ. ಆ ಕತೆಯ ಸನ್ನಿವೇಶಗಳನಷ್ಟು ವಿವೇಚಿಸುವ.

ಇವರು ದೃಷ್ಟಾಂತಕ್ಕಾಗಿ ಎತ್ತಿಕೊಂಡ ಕಥಾನಾಯಕನು ಕಡಲೇ ಮಟ್ಟಿ ಸ್ಟೇಶನ್ ಮಾಸ್ತರನು. ಈತನಿಗಿರುವ ಸನ್ನಿವೇಶಗಳಾವು? ಕೌಶಿಕನಿಗಿರುವ ಸನ್ನಿವೇಶಗಳಾವು? ಎಂಬದನ್ನು ಸ್ವಲ್ಪೂ ಯೋಚಿಸದೆ ಈತನನ್ನು ಉದಹರಿಸಿಬಿಟ್ಟಿದ್ದಾರೆ. ಈ ಕ್ಷುಲ್ಲಕ ಉದಾಹರಣೆಯಿಂದ ಇವರ ಬರಹದ ಬಿಗುವೇ ಸಡಲಿಹೋದಂತಾಗಿದೆ. ಇವರ ಕಥಾನಾ ಯಕನಿಗೆ ಪಾತ್ರವು ಏಕಾಂತದಲ್ಲಿ ಲಭ್ಯವಾಗಿದೆ. ಅದರಲ್ಲಿ ಕೈಯಲ್ಲಿ. ಮತ್ತು ಆತನ ಮನೋಭಾವ ಕ್ಷಣಕಾಲ ಕಾಮೋಚ್ಛೆಯೊಂದನ್ನು ತೀರಿಸಿ ಕೊಂಡು ಕೈಬಿಡುವದು. ಇಲ್ಲಿ ಇವಾವೂ ಸನ್ನಿವೇಶಗಳಿಲ್ಲ. ಹಾಗು ಲೋಕವರಿಯುವಂತೆ ವಿವಾಹಿತನಾಗಿ, ಸತಿಯನ್ನಾಗಿ ಕೈವಿಡಿದು, ಸಂಸಾರ ಸುಖವನ್ನು ಅನುಭವಿಸಬೇಕೆಂಬುದು ಕೌಶಿಕನ ಇಷ್ಟ. ಆದ್ದ ರಿಂದ ಈತನು ಗುಣವಂತ, ಉಚಿತಜ್ಞ. ನಿಮ್ಮ ಕಥಾನಾಯಕನು ಕಿಂಚಿಜ್ಞ, ಕಿಂಚಿತ್ಕಾಲ ಅಂಗಸುಖದ ಹಂಬಲುಳ್ಳವ ಮತ್ತು ಅನುಚಿ ತಜ್ಞ. ಆದ್ದರಿಂದ ಈ ಉದಾಹರಣೆಯು ಇಲ್ಲಿ ಸಲ್ಲದು.

## ಇನ್ನೊಂದು ಪ್ರಶ್ನೆ.

ಅರಸನ ಭೀಕರವಾದ ಬೆದರಿಕೆಗೆ ಅಳುತ್ತಲಿರುವ ಹೆತ್ತವರನ್ನು ರಕ್ಷಿಸದಷ್ಟು ಅಕ್ಕನ ಚಿತ್ತವು ದಾರುಣವಾದುದಿರಲಿಲ್ಲ ....." ಆಗ ಇಂತು ವಿಚಾರಿಸಿದರೆ ಅಕ್ಕನು ತನಗೆ ಅನಿಷ್ಟವಾದ ಭವಿಯ ವಿವಾಹವನ್ನು ಒಪ್ಪಿಕೊಳ್ಳಬೇಕು ........" "........ ಇಂತು ಅನಧಿಕಾರಿಯಾದ

ಕೌಶಿಕ ರಾಜನನ್ನು ತತ್‍ಕ್ಷಣವೇ 'ನೀನು ಶಿವಭಕ್ತನಾದರೆ ಲಗ್ನವಾಗುವೆ' ಎಂದು ನುಡಿಯಲು, ಒಪ್ಪಿಕೊಳ್ಳಲು ಅಕ್ಕಗಳೇನೂ ಅಜ್ಞಾನಿಗಳಿದ್ದಿಲ್ಲ; ಅನುಭವಿಗಳಿದ್ದಿಲ್ಲ. ಆದ್ದರಿಂದಲೇ ಈ ನಿಜವಾದ ಲಿಂಗವಂತಿಕೆಯ ತತ್ವವನ್ನರಿತ ಹರಿಹರನೂ ತನ್ನ ಕಾವ್ಯದಲ್ಲೆಲ್ಲಿಯೂ 'ಶಿವಭಕ್ತನಾಗು' ಎಂಬ ಮಾತನ್ನೇ ಎತ್ತಿಲ್ಲ ಎಂದು ಏನೊಂದೂ ಹುರುಳಿಲ್ಲದ ಉತ್ತರವನ್ನು ಕೊಟ್ಟಿದ್ದಾರೆ.

## ಮಾರುತ್ತರ.

ವಸಂತಕನ ಬಿರುನುಡಿಯನ್ನು ಕೇಳಿದೊಡನೆ ಬಯುಪಟ್ಟು, ಕಣ್ಣೀರಿಟ್ಟು ಮಗಳಿಗೆ ಬೆಂಬಿಡಿದು ಬೀಳ್ಕೊಳ್ಳುವಷ್ಟು ಬಲಹೀನರಿದ್ದರೇ ಆ ಶಿವಭಕ್ತರು? ಅವರಲ್ಲಿ ಮತದ ಛಲವೇ ಇರಲಿಲ್ಲವೇ? ಸ್ವತಃ ಅಭಿಪ್ರಾಯಪಡುವಷ್ಟು ಶಕ್ತಿಯಿರಲಿಲ್ಲವೇ? ಅಕ್ಕನು ಭವಿಯ ವಿವಾಹವನ್ನು ಒಪ್ಪುವದರಿಂದಲೇ ಅವರ ಬಾಧೆಯು ನಿವಾರಣೆಯಾಗುತ್ತಿತ್ತೆಂದು ಹೇಳುವಲ್ಲಿ ಗಮಕವೇನು? ಭವಿಯ ವಿವಾಹವನ್ನು ಒಪ್ಪಿ ಜೀವಿಸುವಷ್ಟು ಆತ್ಮಬಲಹೀನರಿದ್ದರೇ? ಆಚಾರಭ್ರಷ್ಟರಿದ್ದರೇ? ಹಾಗಾದರೆ ಪಂಚಾಚಾರವೇ ಪ್ರಾಣವೆಂಬ ಮಾತಿಗೆ ಗತಿಯೇನು? ಸಮಯಕ್ಕೆ ತಕ್ಕಂತೆ ಶೀಲ (ಸ್ವಭಾವ) ವನ್ನು ತಿದ್ದಿಕೊಳ್ಳುವ ಸ್ವಭಾವದವರೇ ನಮ್ಮ ಶರಣರು? ದೇಹ ಹೋದರೂ ಧರ್ಮವನ್ನು ಬಿಡರೆಂಬುದನ್ನು ನೀವರಿಯಿರಾ? ತಮ್ಮ ಮತದವನಲ್ಲದವನು, ತಮ್ಮೊಳಗೆ ವ್ಯವಹರಿಸಬಂದರೆ ಮೊದಲು ಮತವನ್ನು ಕೇಳದೆ ಜೊಳ್ಳು ಕರಾರಗಳನ್ನು ಕೇಳುವರೋ? ವಿದ್ಯಾರ್ಥಿಯಾಗದ ಉಂಡಾಡಿಗನಿಗೆ (ದನಗಾಯಿಗೆ) ನೀನು ಫೀ ಕೊಡು, ಪುಸ್ತಕ ಕೊಳ್ಳು, ಓದು ಎಂದು ನಿರ್ಬಂಧಪಡಿಸುವದರಿಂದ ಏನು ಪ್ರಯೋಜನ? ಶಿವಭಕ್ತನಾದಲ್ಲಿ ಒರಿಸುವನೆಂದು ಛಲತೊಟ್ಟರೆ ಇದು ಅಜ್ಞಾನವೇ? ಭವಿಯನ್ನು ಒರಿಸಿ, ಅನಂತರ ಜೊಳ್ಳು ಕರಾರುಗಳನ್ನು ಕೇಳುವದು ವಿಜ್ಞಾನವೇ? ಶಿವಭಕ್ತನಾದರೆ ವಿವರಿಸುವೆನೆಂಬ ಉಚಿತಪ್ರಶ್ನೆಯಿಲ್ಲದೆ ಕೇವಲ ಜೀವನದ ಹಂಗಿಗಾಗಿ, ಸುಮ್ಮನೆ ಭವಿಯುಸಂಗ ಮಾಡಿಸಿದ ಹರಿಹರನ ರೀತಿಯು ನಿಜವಾದ ಲಿಂಗತತ್ವವೇ? ಭವಿಯ ಸಂಗವನ್ನು ಬಿಡಿಸಿದ ಚಾಮರಸನದು ಲಿಂಗ ಬಾಹ್ಯ ತತ್ವವೇ? ವಿಚಿತ್ರ! ಎಲ್ಲವೂ ವಿಚಿತ್ರ!!

ಹೆತ್ತವರನ್ನು ಅಪಮೃತ್ಯುವಿನ ತುತ್ತಾಗುವಂತೆ ಕಾಪಾಡುವದು ಅನುಚಿತವೆಂದು ಚಾಮರಸನು ಹೇಳಿರುವನೇ ? ಇಲ್ಲವಾದರೆ ಈ ಅನುಚಿತವಾದ ಅಪ್ರಸ್ತುತವಾದ ವಿಷಯುವನ್ನು ಇಲ್ಲಿ ಇಷ್ಟೊಂದು ಲಂಬವಾಗಿ ಏಕೆ ಬರೆದಿರುವದು ? ವಚನಾಗಮಗಳ ಉದಾಹರಣೆಯನ್ನಾದರೂ ಯಾರು ಕೇಳಿದ್ದರು ? ಹೀಗೆ ಸಲ್ಲದ ವಿಚಾರವನ್ನು ಬಲ್ಲಂತೆ ಬರೆದು ಲೇಖಾಂಕಗಳನ್ನು ಬೆಳೆಸುವ ಬಯಕೆಯನ್ನು ಬಿಟ್ಟುಕೊಟ್ಟು, ಇನ್ನಾದರೂ ಮಿತವಾಗಿ ಉಚಿತವಿದ್ದಷ್ಟನ್ನೇ ದಯವಿಟ್ಟು ಬರೆಯುವಿರಾ ? ಮತ್ತು ಹಿಂಜಿದ್ದನ್ನೇ ಹಿಂಜಬೇಡಿ, ಹೊಸದೇನಾದರೂ ಇದ್ದರೆ ಬರೆದು ಬೀರಿರಿ, ಎಂದು ಕೋರುವೆನು.

ಇಷ್ಟೊಂದು ದೀರ್ಘವಾದ ಈ ವಾದಕ್ಕೆ ತಮ್ಮ ಪತ್ರಿಕೆಯಲ್ಲಿ ಸಂತೋಷದಿಂದ ಸ್ಥಲಕೊಟ್ಟು ಪ್ರೋತ್ಸಾಹಿಸಿದ, 'ಶಿವಾನುಭವ' ಸಂಪಾದಕರಾದ ಶ್ರೀಮಾನ್ ರಾ. ಸಾ. ಪಿ. ಜಿ. ಹಳಕಟ್ಟಿಯವರಿಗೆ ನಾನು ತುಂಬಾ ಕೃತಜ್ಞನಾಗಿದ್ದೇನೆ.

# ಓ ಕುಮಾರ!

(ಒಲವಿನ ಹಾಡು.)

ಶ್ರೀಗುರು ಸಾರ್ವಭೌಮ ಸುವಿರಾಟ್ಪುರನಾಯಕ ವೀರಶೈವ ಮ- ।
ಹಾಗುರುವರ್ಗದಾಚರಣೆಯಂ ಸರಿಗೈಯ್ಯಲು ಕಜ್ಜಮಂಗಳೊಳ್ ॥
ರಾಗವ ಪೆರ್ಚಿಸುತ್ತಿಹ ಮಹಾಸಭೆ ನಿರ್ಮಿಸಿ ರಾಜತೇಜದಿಂ ।
ಯೋಗಸುಮಂದಿರಂ ರಚಿಸಿ ರಂಜಿಪ ಯೋಗಿಯೆ ಪೋದೆಯಕ್ಕಟಾ! ॥೧॥

ಮೆರೆಯುವ ಹಾನಗಲ್ಲಮಠವಂ ತೊರೆದಂದಿನ ವೀರಶೈವರು ।
ಕೊರಗುವ ಧರ್ಮಹೀನತೆಯ ಕೃತ್ಯಗಳಂ ನೆರೆ ನೋಡಿ ಭಾವದೊಳ್ ॥
ಮರುಗುತ ವೀರಶೈವಮತ ಧರ್ಮದ ಗುಟ್ಟನು ಬೋಧಿಸಲ್ ಸದಾ ।
ಸ್ಮರಿಸದೆ ದೇಹ ದುಃಖವನು ಯತ್ನಿಸಿದೈ ಸುಕುಮಾರ ಯೋಗಿಯೇ ॥೨॥

ನಿನ್ನಯ ಬೋಧೆಯಿಂದಲಿ ಕುಬೋಧಕರಂಜಿದರಾಗ ತಮ್ಮೊಳು ।
ನಿನ್ನಯ ನೀತಿತೇಜಕೆ ಕುನೀತಿಗಳಂಜಿದವಾಗ ನಾಡಿನೊಳ್ ॥
ನಿನ್ನಯ ಕರ್ಮತತ್ಪರತೆಯಿಂದಲಿ ಸೈವೆರಗಾದರಾಲಸರ್ ।
ನಿನ್ನಯ ಶಾಂತಿಸದ್ಗುಣಕೆ ಬಾಗದ ಭಕ್ತರೊಳೊಬ್ಬರಿಲ್ಲವೈ ॥೩॥

ಎಲಲೇ! ದೈವವೆ! ಸಾಧ್ಯವೇ ಗುರುವರಂ ಕೊಂಡೊಯ್ದು
ನೆಂದೆಂಬುದಂ ।
ಮಲಿನಾಚಾರವಿದೂರನಂ ಗುಣಧನಂ ಯೋಗೀಂದ್ರನಂ ತ್ಯಾಗಿಯಂ ॥
ಬಲದಿಂದೊಯ್ದಿಹೆನೆಂದು ನೀಂ ಸೆಟೆಯದಿರ್ ಲಿಂಗೈಕ್ಯನೇಂ ಸಾಧ್ಯನೇ? ।
ವಿಲಸತ್ಕೀರ್ತಿಯ ದೇಹವಾಂತು ಜಗದೊಳ್ ತಾ ಜೀವಿಸಿರ್ಪಂ ವಲಂ ॥೪॥

ಜಗಸೊಗವೆನ್ನದಾ ಜಗದ ದುಃಖವದೆನ್ನಯ ದುಃಖವೆನ್ನುತಂ ।
ಜಗಸೊಗಕಾಗಿ ಸಂತತದಿ ಕಾಯಕ-ವಾಚಕ-ಮಾನಸಂಗಳಿಂ- ॥
ದಗಣಿತ ಕಜ್ಜಮುಜ್ಜುಗಿಸಿ ದೈಹಿಕ ಸೌಖ್ಯಕೆ ನೀರ ನೀಡುತಂ ।
ಮಿಗೆ ಜಗದೊಳ್ ವಿರಾಜಿಪ ವಿರಕ್ತ ಶಿಖಾಮಣಿ ಧನ್ಯನಲ್ತೆ ನೀಂ ॥೫॥

**ಶ್ರೀಚಂದ್ರಶೇಖರದೇವರು ಅಡ್ನೂರು.**

# ಶ್ರೀ. ನಿಡುಮಾಮಿಡಿ ಮಠದ ಇತಿಹಾಸ.

ಲೇಖಾಂಕ ೬.

(ಲೇಖಕ:— ಎಂ. ಜಿ. ನಂಜುಂಡಾರಾಧ್ಯ 'ವಿಶಾರದ' ಸಿದ್ಧಗಂಗಾ ಗುರುಕುಲಾಶ್ರಮ.)

ಶ್ರೀ. ವಿರೂಪಾಕ್ಷದೇಶಿಕೇಂದ್ರರು ನಡೆಯಿಸಿದ ಪ್ರಭಾವಗಳು ದಿಗ್ದರ್ಶನವಾಗಿ ಹಿಂದೆ ಹೇಳಲಾಗಿದೆ. ಅವರು ಕಡೆಯಲ್ಲಿ ಶ್ರೀಗಿರಿಯ ಭೀಮಲಿಂಗದಲ್ಲಿಯೇ ಅಡಗಿದರೆಂದು ಹೇಳಿದೆ. ಆದರೆ ಓಲೆಗರಿಯ 'ಪಂಡಿತಾರಾಧ್ಯ ಚರಿತ್ರೆ' ಯಲ್ಲಿ ವಿರೂಪಾಕ್ಷದೇಶಿಕರು ಶ್ರೀ ಮಲ್ಲಿಕಾರ್ಜುನಲಿಂಗದಲ್ಲಡಗಿದರೆಂದು ಸ್ಪಷ್ಟವಾಗಿ ಉಲ್ಲಿಖಿತವಾಗಿದೆ. ಮತ್ತು ಅನೇಕ ಹಳೆಯ ಕಾಪಿಗಳಲ್ಲಿಯೂ ಇದೇ ಉಲ್ಲೇಖಗಳು ಕಂಡು ಬರುತ್ತವೆ.

ವಿರೂಪಾಕ್ಷದೇಶಿಕರು ದುರ್ಗಾ ವೀರಭದ್ರ ಮತ್ತು ಭೈರವ ಈ ಮೂವರೂ ಕಲಿಯುಗ ಮುಗಿಯುವ ವರೆಗೂ ಈ ಪೀಠಕ್ಕೆ ಸಹಾಯಕರಾಗಿರಬೇಕೆಂದು ಹೇಳುವಾಗ್ಗೆ:—

> ಏಕಚ್ಛಿಂಹಾಸನಂಬು ಪ್ರಬಲಿಂಪ ಸೇಯುವಾರಲ್ಲೈಯುಡತೆಗಕನೀ ಕಲಿಯುಗಂ ಬೆಂತಕಾಲಂಬುಂಡುನಂತವಟ್ಟು ಮೀರು ನಿರಸಾಯು ಲಯ್ಯೈಯುಂಡುಡನಿಯಾಜ್ಞಾಪಿಂಚಿ, ಯುತಂಡು ಮಲ್ಲಿಕಾರ್ಜುನ ಲಿಂಗಂಬುನಂ ದೈಕ್ಯಂಬುನೊಂದೆನಂತ"

ಆಗಮೋಕ್ತರಾದ ಪಂಡಿತಾರಾಧ್ಯರು ಶ್ರೀಶೈಲದಲ್ಲಿ ಪ್ರಸಿದ್ಧವಾದ ಮಲ್ಲಿಕಾರ್ಜುನ ಲಿಂಗದಲ್ಲಿ ಉದ್ಭವವಾಗಿ ಅಲ್ಲಿಯೇ ಅಡಗಿದರೆಂಬುದು ಆಗಮ ಪ್ರಸಿದ್ಧವಾಗಿದೆ. ಆದರೆ ಅದೇ ಪೀಠಕ್ಕೆ ಸಂಬಂಧಿಸಿದ ಶ್ರೀ. ವಿರೂಪಾಕ್ಷದೇಶಿಕರು ಭೀಮಲಿಂಗದಲ್ಲಿ ಉದಯಿಸಿ ಮಲ್ಲಿಕಾರ್ಜುನ ಲಿಂಗದಲ್ಲಡಗಿದರೆಂಬುದು ವಿಚಾರಣೀಯವಾಗಿದೆ. ಲಿಂಗೋದ್ಭವವನ್ನು ಅಂಗೀಕರಿಸುವ ಪುಲ್ಲಕವಿಯು ಈ ವ್ಯತ್ಯಾಸವನ್ನು ಯಾವ ಕಾರಣದಿಂದ ಮಾಡಿದನೆಂಬುದು ತಿಳಿದುಬಂದಿಲ್ಲ. ಆದರೂ ಈ ಚರಿತ್ರೆಯಲ್ಲಿ ಶ್ರೀ ಮಲ್ಲಿ

ಕಾರ್ಜುನ ಸ್ವಾಮಿಯ ಸಂಬಂಧವು ವಿಶೇಷವಾಗಿ ಬಂದಿದೆಯಾದ್ದರಿಂದ ಶ್ರೀ ವಿರೂಪಾಕ್ಷದೇಶಿಕರೇ ಮಲ್ಲಿಕಾರ್ಜುನ ಲಿಂಗದಲ್ಲಿ ಅವತರಿಸಿ ಕಾಲ ಕ್ರಮದಲ್ಲಿ ಪಂಡಿತಾರಾಧ್ಯರೆಂದು ಪ್ರಸಿದ್ಧರಾಗಿರಬಹುದೇ (?) ಎಂಬ ಸಂಶಯಕ್ಕೆ ಅವಕಾಶವಿದೆ. ಅಸ್ತು.

## ಶ್ರೀ ಚಂದ್ರಗುಂಡದೇಶಿಕೇಂದ್ರ ಶಿವಾಚಾರ್ಯರು.

ಈ ಮಠದ ಇತಿಹಾಸದಲ್ಲಿ ಇವರ ಚರಿತ್ರೆಯು ಬಹಳ ಪ್ರಭಾವ ಶಾಲಿಯಾಗಿದೆ. ಇವರು ತಮ್ಮ ತಪಃ ಪ್ರಭಾವದಿಂದ ಅನೇಕ ಮಂದಿ ರಾಜಾಧಿರಾಜರನ್ನು ತಮ್ಮ ಶಿಷ್ಯರನ್ನಾಗಿ ಮಾಡಿಕೊಂಡು, ಅನೇಕ ಜನಾಂಗಗಳವರಿಗೆ ವೀರಶೈವಸಿದ್ಧಾಂತವನ್ನುಪದೇಶಿಸಿ ಲಿಂಗಾಂಗಿಗಳ ನ್ನಾಗಿ ಮಾಡಿ, ಕೀರ್ತಿಶಾಲಿಗಳಾಗಿದ್ದಾರೆ. ಇವರ ಕಾಲದಲ್ಲಿ ಅನೇಕ ಮಠಮಾನ್ಯಗಳೂ ಬಿರುದುಬಾವಲಿಗಳೂ ರಾಜಮರ್ಯಾದೆಗಳೂ ಈ ಮಠಕ್ಕೆ ನಡೆಯುವಂತೆ ವ್ಯವಸ್ಥೆಯಾಗಿತ್ತೆಂದು ತಿಳಿದುಬಂದಿದೆ.

" ಕ॥ ಯೀ ಸಿಂಹಾಸನಮಭಿವೃದ್ಧಿನ
ಜೇಸಿ ಮಹಾಮಹಿಮ ಚೇತಶಿರಿಬೆಂಪೊಂದನ್॥
ಭಾಸಿಲ್ಲುಚುಕ್ಷ್ಮಾತಲಮುನ
ದಾಸುಲುಗಂ ಜೇಸು ಕೊನುಮು ಧರಣೀಶ್ವರುಲ್ ॥"

ಎಂದು ಇವರೇ ನಮ್ಮ ಶಿಷ್ಯರಿಗೆ ಉಪದೇಶಿಸುವುದರಿಂದ ಅವರ ಪೀಠಾನುರಾಗವೂ ಶಿಷ್ಯಪ್ರೇಮವೂ ವ್ಯಕ್ತವಾಗುತ್ತದೆ.

ಶ್ರೀ ಚಂದ್ರಗುಂಡದೇಶಿಕೇಂದ್ರರು ಪಟ್ಟಾಭಿಷಕ್ತರಾದನಂತರ.

" ಗೀ॥ ......ಅಂಚಿತ ವೀರಶೈವಾಚಾರ ಧರ್ಮಂ ಬುಲತಿಮು
ದಂಬೊದವಗಾನಾನಕಿಚ್ಚಿ। ಶಿಷ್ಯಜನಮುಲಧನ್ಯುಲಜೇಸಿ
ಸ್ವಾಮಿ । ಲಕುಲಿತಂ ಬೈನ ಶ್ರೀಪರ್ವತಂಬುನಂದು।
ಭಾನುಸಿಂಹಾಸನಮುನಯಾಸೀನುಡಗುಚು । ಭಕ್ತುಲ
ಕೋಕ್ಕೈಲೊಸಗುಚು ಬಿರಗುಚುಂಡೆ॥"

ಹೀಗೆ ಶ್ರೀಶೈಲ ಸೂರ್ಯಸಿಂಹಾಸನಾಸೀನರಾಗಿ ಭಕ್ತರಿಷ್ಟಾರ್ಥಂ ಗಳಂ ನೆರವೇರಿಸುತ್ತಿರುವಲ್ಲಿ ದೇವರದಾಸಿಮಾರ್ಯರು ಅವರಲ್ಲಿಗೆ ಬಂದು

ದೀಕ್ಷೆಯಂ ಪಡೆಯುವರು. ಈ ವಿಷಯದಲ್ಲಿ ಹಿಂದಿನ ಲೇಖನದಲ್ಲಿ ವಿಸ್ತಾರವಾಗಿ ಹೇಳಿರುವುದರಿಂದ ಇಲ್ಲಿ ಪುಲ್ಲಕವಿಯ ಮೂಲವನ್ನಾದರೂ ಬರೆಯುವುದು ಅನಿವಾರ್ಯವಾಗಿದೆ.

ಓರ್ವ ಗಣಾಧೀಶನು ಪರಮೇಶ್ವರನಿಂದ ಭೂಲೋಕದಲ್ಲಿ ವೀರಶೈವ ಮತವನ್ನುದ್ಧಾರಮಾಡಲು ಆಜ್ಞಪ್ತನಾಗಿ ಶ್ರೀಶೈಲದಲ್ಲಿ ಕಮಲೋದ್ಭವನಾಗುವನು. ಈತನಿಗೆ ಪರಮೇಶ್ವರನು ಹೀಗೆ ಆಜ್ಞಾಪಿಸುತ್ತಾನೆ.

> " ........ಶ್ರೀಶೈಲವುನಬರಗು। ನಮ್ಮಮಹಾಸ್ಥಲಮುನಂದಬ್ಜಮುಂದುದಯ ವೈವಸ್ತ್ರಕಾರುಂಡನವಾಶ್ತಕೆಕ್ಕಿ। ಮಲ್ಲಿಕಾರ್ಜುನಕಾರುಣ್ಯಮುಹಿಮವಲ್ಲ।............ಅಂಬರಂಬುಲುನೇತಜೇತನಿರ್ಮಿಂಚಿ ಖ್ಯಾತಿಗಾಂಚಿ॥
>
> ಗೀ॥ ಶ್ರೀ ಚಂದ್ರಗುಂಡಾಖ್ಯಗುರುವುಲಶರಣಂಜೊಚ್ಚಿ।
> ನವ್ಯ ವಸ್ತ್ರಂಬುಲರ್ಪಿಂಚಿ ದಿವ್ಯವೈನ।
> ಮೋಕ್ಷಮಾರ್ಗಂಬುವೇಡಿನ ಮುದಮು ತೋಡಾ।
> ಬೋಧಗಾವಿಂಚು ವೇಗಮೇ ಪೊಮ್ಮಟಂಚು॥"

ಅದರಂತೆ ಆ ಮಹಾಪುರುಷನು ಅಲ್ಲವತರಿಸಿ ಶ್ರೀ ಚಂದ್ರಗುಂಡ ದೇಶಿಕೇಂದ್ರನ ಶರಣು ಪಡೆದಿರಲು. ಅವರು ಅನುಗ್ರಹಿಸಿ ಅವರಿಗೆ ವೀರಶೈವ ಸಿದ್ಧಾಂತವನ್ನು ಬೋಧಿಸಿ ವಿಧ್ಯುಕ್ತವಾಗಿ ಲಿಂಗಧಾರಣವನ್ನು ಮಾಡಿ ಹೀಗೆ ಆಜ್ಞಾಪಿಸುತ್ತಾರೆ.

> " ವ॥ ವೀರಶೈವಾಚಾರಂಬುವಡಿಸಿ ಈ ಸಿಂಹಾಸನಂಬುಸಕು
> ಶಿಷ್ಯಲೈದೇವಾಂಗಮುವಾರನಿ ಪ್ರಸಿದ್ಧಿನೊಂದಿವರ್ಧಿಲ್ಲು
> ಮುನಿಯಾನ ಕಿಚ್ಚಿನ ಮಡು ಪರಮ ಸಂತೋಷ ಭರಿ
> ತುಡೈಯೊಪ್ಪು ಚುಂಡೆಸಂತ."

'ವೀರಶೈವ ಧರ್ಮಪರಾಯಣನಾಗಿ ವಂಶಪಾರಂಪರ್ಯವಾಗಿ ವಸ್ತ್ರಕಾರಕ ಪ್ರಭುವೆನಿಸಿ ಆ ದಾಸಿಮಯ್ಯನ ವಂಶೀಯರು 'ದೇವಾಂಗ ಶಿವಾಚಾರಸ್ಥ' ರೆಂದು ಪ್ರಸಿದ್ಧಪಡೆದು ವಸ್ತ್ರಗಳನ್ನು ಶ್ರೀಮಠಕ್ಕೆ ನೆಯಿದು ಕಳುಹಿಸುವಂತೆ ಅಪ್ಪಣೆ ಕೊಡುತ್ತಾರೆ. ಅದರಂತೆ ಪ್ರತಿವರ್ಷ ಮಾಘ ಶು. ೭ ಯಲ್ಲಿ ಆರ್ಯ ಗುರುಗಳಿಗೆ ವಸ್ತ್ರವನ್ನುಡಿಸುವ ಪದ್ಧತಿಯು ಇಲ್ಲಿ ಅನೂ

ಚಾನವಾಗಿ ನಡೆದುಬಂದಿದೆ. ಮತ್ತು ತದ್ವಂಶೀಯರೇ ಅದನ್ನು ಒದಗಿಸುತ್ತಿದ್ದರೆಂದೂ ತಿಳಿದುಬಂದಿದೆ.

ಶಿವಶರಣ ವಿಲಾಸದಲ್ಲಿಯೂ ಸಹ ಈ ವಿಷಯಗಳು ಬಹಳ ವಿಸ್ತಾರವಾಗಿ ವರ್ಣಿತವಾಗಿರುವುವಲ್ಲದೆ ಈತನೇ ಜಯಸಿಂಹ ಕಾಲದವನೆಂಬುದೂ ಅದರಲ್ಲಿ ಸ್ಪಷ್ಟವಾಗಿದೆ.

ಅನಂತರ ಚಂದ್ರಗುಂಡದೇಶಿಕರು ಕಾರ್ತವೀರ್ಯಾರ್ಜುನ ವಂಶೀಯರಾಗಿದ್ದ ಒಂದು ಜನಾಂಗದವರಿಗೆ ಲಿಂಗಧಾರಣೆಯನ್ನು ಮಾಡುತ್ತಾರೆ. ಅವರೆಲ್ಲರೂ 'ಸಜ್ಜನ ಶಿವಾಚಾರಸ್ಥ' ರೆಂದು ಪ್ರಸಿದ್ಧರಾಗಿ ಈ ಪೀಠಕ್ಕೆ ವಂಶಪಾರಂಪರ್ಯವಾಗಿ ನಡೆದುಕೊಳ್ಳುವಂತೆ ವರ್ಣಿತವಾಗಿದೆ.

ಅನಂತರ ಶ್ರೀ ಸ್ವಾಮಿಗಳು ದಕ್ಷಿಣ ದೇಶವನ್ನು ಕುರಿತು ಪ್ರಯಾಣವನ್ನು ಬೆಳೆಯಿಸಿ ಇತಿಹಾಸ ಪ್ರಸಿದ್ಧನಾದ ರಾಜೇಂದ್ರಚೋಳ ಭೂಪಾಲನ ರಾಜಧಾನಿಗೆ ಸಮೀಪದಲ್ಲಿದ್ದ ಉದ್ಯಾನವನದಲ್ಲಿದ್ದ ಶ್ರೀ ಚಂದ್ರಮೌಳೀಶ್ವರ ಲಿಂಗದ ಸಾನ್ನಿಧ್ಯದಲ್ಲಿ ಶಿವಾರ್ಚನೆಯನ್ನು ಮಾಡುತ್ತಾರೆ. ಅಲ್ಲಿ ಅವರು ಲಿಂಗಾರ್ಪಿತಕ್ಕೆ ನಾರಿಕೇಳ ವೃಕ್ಷದಿಂದ ಫಲಗಳನ್ನು ಬೇಡಿ ಅರ್ಪಿಸುವರೆಂದೂ ಅನಂತರ ಈ ಮಹಿಮಾ ಪ್ರಭಾವದ ವಿಷಯವು ಅರಸನಿಗೆ ಅರಿಕೆಯಾಗಿ ಆತನು ಪರಿವಾರ ಸಮೇತನಾಗಿ ಶ್ರೀಯವರ ದರ್ಶನಕ್ಕೆ ಬಂದು ಅವರ ಅನುಗ್ರಹದಿಂದ ತನ್ನ ಬ್ರಹ್ಮಹತ್ಯಾದೋಷವಿನಿರ್ಮುಕ್ತನಾಗುವನೆಂಬ ವಿಷಯವು ಬಹಳ ಚನ್ನಾಗಿ ವರ್ಣಿತವಾಗಿದೆ. ಈ ವಿಷಯ ನಮ್ಮ ಮೊದಲನೆಯ ಲೇಖದಲ್ಲಿಯೇ ಸಂಕ್ಷೇಪಿಸಲಾಗಿದೆ. ಪಂಡಿತಾರಾಧ್ಯ ಚರಿತ್ರೆಯಲ್ಲಿ ಈ ಸಂದರ್ಭದಲ್ಲುಕ್ತವಾದ ಕೆಲವು ಪದ್ಯಗಳನ್ನು ಇಲ್ಲಿ ಕೊಡಲಾಗಿದೆ.

" ಕಂ॥ ಸ್ಥಾವರ ಮುಲೈನ ಭೂಜಮು
ಲಾವನಮುನ ಜಂಗಮುಂಬುಲ ಗುಚುಧರಿತ್ರಿನ್ ॥
ಕೇವಲನಮ್ರತತ್ವಮು ತೋ
ಪಾವನಮುಗು ಸ್ವಾಮಿಪಾದ ಪದ್ಮಂಬುಲಕುನ್ ॥

ಗೀ॥ ಶಾಖಲನು ಬಾಹುವುಲಕೋಡಸಾಗಿಮ್ರೊಕ್ಕಿ ।
ಪುಷ್ಪಮುಲುಗಲ್ಗ ವೃಕ್ಷಮುಲ್ ಪುವ್ವುಲೊಸಗೆ ॥

ಪಕ್ವಫಲಮುಲತೋನುನ್ನಪಾದಪಮುಲು ।
ಫಲಮುಲಿಂದಂದ ರಾಸುಲಪಗಿದಿನಿಡಿನ ॥

ಗೀ॥ ಇಷ್ಟಲಿಂಗಾರ್ಪಣಂಬುಜೇಸಿ ನಿಷ್ಠತೋಡ ।
ನಂದು ಲೋಕೊನ್ನ ಗುರುಡುಕಾಸಾರಗಿಂಚಿ ॥
ಫಲಮುಲಾನೋದಮುನಶಿಷ್ಯಪಙ್ತಿಕೊಸಗಿ
ಭಕ್ಷಣಮುಶೇಯ ಶೆಲವಿಚ್ಚೆಭದ್ರಮೂರ್ತಿ ॥ ”

ಅಂದರೆ ‘ ಆ ವನದಲ್ಲಿನ ಸ್ಥಾವರಾತ್ಮಕವಾದ ಓಷಧಿಗಳೆಲ್ಲವೂ ಜಂಗಮತ್ವವನ್ನು ವಹಿಸಿ ಕೇವಲ ನಮ್ರಭಾವದಿಂದ ಶ್ರೀಯವರ ಪಾದಪದ್ಮಂಗಳಿಗೆ ಶಾಖೆಗಳೆಂಬ ಬಾಹುಗಳಿಂದ ಫಲಪುಷ್ಪ ಪತ್ರಾದಿಗಳನ್ನು ಅರ್ಪಿಸಿದವು. ಅನಂತರ ಶ್ರೀಗುರುದೇವನು ನಿಷ್ಠೆಯಿಂದ ಲಿಂಗಾರ್ಪಿತವಂ ಮಾಡಿ ಶಿಷ್ಯಕೋಟಿಗೆ ಅರ್ಪಣಮಾಡಲು ಅಪ್ಪಣೆಯನೊಸಗುವನು. ಆಗ ಸಮೀಪದಲ್ಲಿದ್ದ ನಾರಿಕೇಳ ವೃಕ್ಷವುಃ—

“ ಸೀ॥ ತನ ಚಂತನತಿಯುನ್ನತಮುಗಲ್ಗು ಟೆಂಕಾಯಚೆಟ್ಟು ನಿರೀಕ್ಷಣ ಜೇಸಿಯಪುಡು । ಹರಹರಾಯನುಚುಸದ್ಗುರು ಪದಾಬ್ಜಮುಲನು ಸ್ಥಿರಭಕ್ತಿತೋನುತಿ ಜೇಸುಕೊನುಚು ‘ ಘನು ಗುರುಧರ್ಮಕೋರಾಣ್ಯ ಭಿಕ್ಷಾಯನ ವೃಕ್ಷಮಾಕ್ಷಣಮೆಮುಮೂಕ್ಷುನಕುನು । ವಿಲ್ಲುವಂಚಿನ ರೀತಿ ವಿಪುಲಂಬು ಸೋಕಗ ಬಿವ್ವುನತಲವಂಚಿ ಶ್ರೀಘ್ರಮುಗನು । ವಂದನಂಬುಗ ತನಯಂದುನ್ನ ಫಲಮುಲನು ಮುಂದರನುನಚಿತಾ ಮುಂದು ನುನ್ನ । ವಿದ್ಧಮುನ ನಿಲ್ವನಪುಡು............”

(ವಿರೂಪಾಕ್ಷಮಾಹಾತ್ಮ್ಯರು)

ಶ್ರೀಯವರು ನಾರಿಕೇಳವೃಕ್ಷವನ್ನು ನಿರೀಕ್ಷಿಸಿ ‘ ಗುರುಧರ್ಮಕೋರಾಣ್ಯ ಭಿಕ್ಷಾ’ ಎಂದು ನುಡಿದಾಕ್ಷಣವೆ ನಾರಿಕೇಳವೃಕ್ಷವು ಬಿಲ್ಲಿನೋಪಾದಿಯಲ್ಲಿ ಬಾಗಿ ಫಲಗಳನ್ನರ್ಪಿಸಿ ಮೊವಲಿನಂತೆಯೇ ನಿಲ್ಲುವುದು.

ಈ ಸನ್ನಿವೇಶವು ಕವಿಸಾರ್ವಭೌಮನಾದ ಕಾಳಿದಾಸನ; —

ವೃ॥ ಕ್ಷೌಮಂ ಕೇನ ಚಿದಿಂದು ಪಾಂಡು ತರುಣಾಮಾಂಗಲ್ಯ ಮಾವಿಷ್ಕೃತಮ್ । ನಿಷ್ಠ್ಯೂತಶ್ಚರಣೋಪಭೋಗಸುಲಭೋಲಾಕ್ಷಾರರಸಃ ಕೇನಚಿತ್ ॥ ಅನ್ಯೇಭ್ಯೋ ವನದೇವತಾ ಕರತಲೈರಾಪರ್ವ ಭಾಗೋತ್ಥಿತೈಃ । ದತ್ತಾನ್ಯಾಭರಣಾನಿತತ್ಕಿಸಲಯೋದ್ಭೇದಪ್ರತಿದ್ವಂದ್ವಿಭಿಃ ॥

ಮಹಾ ತಪಸ್ವಿಯಾದ ಕಣ್ವಮಹರ್ಷಿಯ ಪ್ರಭಾವದಿಂದೆ ವನದೇವತೆಯು ನಚ್ಚಿನ ಕುವರಿಯಂತಿದ್ದ ಶಕುಂತಲೆಯು ದುಷ್ಯಂತನಲ್ಲಿಗೆ ಪಯಣವಾಗಿದ್ದಾಗ ವನತರುಗಳು ದಿವ್ಯಾಂಬರಗಳನ್ನೂ ಮಂಗಲದ್ರವ್ಯಗಳನ್ನೂ ಲೇಪನ ಪ್ರವ್ಯಗಳನ್ನೂ ನಾನಾಭರಣಗಳನ್ನೂ ಅತಿಪ್ರೀತಿಯಿಂದ ಅರ್ಪಿಸಿದುವೆಂಬ ಸನ್ನಿವೇಶವನ್ನು ಸಂಪೂರ್ಣವಾಗಿ ಹೋಲುತ್ತದೆ. ಅಸ್ತು.

ಅದರಂತೆ ಈ ಪೀಠಕ್ಕೆ ಕೇಂದ್ರಸ್ಥಾನವಾಗಿರುವ ಗುಳೂರು (ಗುಯುಲೂರು) ಗ್ರಾಮದ ಬಳಿ ಅದೇ ಚಂದ್ರಮೌಳೀಶ್ವರ ದೇವಾಲಯವೂ ರಾಜದತ್ತವಾದ ಮಾನ್ಯಗಳೂ ಇಂದಿಗೂ ಇವೆ. ಇದೇ ರಾಜೇಂದ್ರ ಚೋಳನ ಉದ್ಯಾನವಿತ್ತು. ಅನಂತರ ಶ್ರೀ ಜಗದ್ಗುರುಗಳು ಅಲ್ಲಿಯೇ ಒಂದು ಭಾವಿಯಲ್ಲಿ ಆವಿರ್ಭವಿಸಿದ ಬಸವೇಶ್ವರನನ್ನೂ ಶ್ರೀ ವೀರಭದ್ರ ದೇವರನ್ನೂ ಪ್ರತಿಷ್ಠಿಸಿದರೆಂದು ಕವಿಯು ವರ್ಣಿಸಿರುವಂತೆ ಇಂದಿಗೂ ಮಠದಲ್ಲಿ ಭಾರೀ ಶಿಲಾಮೂರ್ತಿಯಾದ ವೃಷಬೇಶ್ವರನನ್ನೂ 'ಗುಂಡಿನಲ್ಲಿ ಪ್ರಕಟವಾಗಿರುವ ಶ್ರೀ ವೀರೇಶ್ವರನನ್ನೂ ನೋಡಬಹುದು.

ನಾರಿ ಕೇಳ ವೃಕ್ಷವಂ ಬಿಕ್ಕೆ ಬೇಡಿದ ವಿಷಯವು ವಿರುಪಾಕ್ಷ ಪಂಡಿತಾರಾಧ್ಯನ ಚನ್ನಬಸವ ಪುರಾಣದಲ್ಲೂ ಉಕ್ತವಾಗಿದೆ ಎಂಬದು ಮೊದಲನೆಯ ಲೇಖನದಲ್ಲಿ ಹೇಳಲಾಗಿದೆ.

ಅನಂತರ ಶ್ರೀಯವರು ಅಲ್ಲಿಂದ ಮುಂದಕ್ಕೆ ಪ್ರಯಾಣಮಾಡಲು ವ್ಯಕ್ತರಾಗಲು ರಾಜನ ಪಟ್ಟ ಮಹಿಷಿಯಾದ ಕನಕವಲ್ಲೀ ದೇವಿಯು ಶ್ರೀಯವರು ಇಲ್ಲಿಯೇ ನೆಲಿಸಿ ತಮ್ಮನ್ನು ಅನುಗ್ರಹಿಸಬೇಕೆಂದು ಪ್ರಾರ್ಥಿಸುತ್ತಾಳೆ. ಅನಂತರ ಭೂಪಾಲನು ಅಲ್ಲಿಯೇ ಒಂದು ಭಾರೀ ಮಠವನ್ನು ಕಟ್ಟಿಸಿ ಕೊಡುತ್ತಾನೆ. ಅಲ್ಲಿಂದ ಶ್ರೀಯವರು ಲೋಕೋದ್ಧಾರ

ನಿಮಿತ್ತದಿಂದ ಅನೇಕ ರಾಜ ಮರ್ಯಾದೆಗಳಿಂದ ಪ್ರಸಿದ್ಧವಾದ ರಾಜ ವೀಡು ಪ್ರಾಂತ್ಯಕ್ಕೆ ದಯಮಾಡಿಸುತ್ತಾರೆ. ಅಲ್ಲಿ ಅರಣ್ಯ ಮಧ್ಯವಲ್ಲಿ ಒಂದು ಬಂಡೆಯಲ್ಲಿ ತಮ್ಮ ಪ್ರಭಾವದಿಂದ ಗಂಗೋದ್ಭವವನ್ನು ಮಾಡಿಸಿ ರಾಯಚೋಟಿಯಲ್ಲಿ ಶ್ರೀ ವೀರಭದ್ರ ದೇವರ ಪ್ರತಿಷ್ಠೆಯನ್ನು ಮಾಡಿಸಿ ಒಂದು ಮಠವನ್ನು ಕಟ್ಟಿಸಿ ಅಲ್ಲಿ ಓರ್ವ ಮೂರ್ತಿಗಳಿಗೆ ಅನುಗ್ರಹ ವಿತ್ತು ಅದರ ಅಧಿಕಾರವನ್ನು ಅವರ ವಶಕ್ಕೆ ಅರ್ಪಿಸುತ್ತಾರೆ. ಈ ಸಂದರ್ಭದಲ್ಲಿ:—

"ಸೀ ಗುರುಮೂರ್ತಿಯಾ ವೀಟ ಕೋವೆಲಗಟ್ಟಿಂಚಿ ವೀರಶೈವಾ ಚಾರ ವಿಧುಲಚೇತ। ವೀರಭದ್ರ ಪ್ರತಿಷ್ಠ ವೇಡುಕಶೋಚೇಸಿ ಶಾಸ್ತ್ರ ಸಂಮತ ಮುಗ ಶಾಂತಿಕ್ರಮಮು। ಜರಿಪಿಂಚಿ ಲಿಂಗಾಂಗುಲಚ ಯ್ಯನರಪ್ಪಿಂಚಿ ನಿತ್ಯಪೂಜ ಕುವಾರಿನಿನಿರ್ಣಯಿಂಚಿ ......" ಇತ್ಯಾದಿ ವರ್ಣಿತವಾಗಿದೆ. ಆ ದೇವಾಲಯ ವೀರಶೈವ ಮೂರ್ತಿಗಳ ಅಧೀನದಲ್ಲಿ ರುವಂತೆ ವ್ಯವಸ್ಥೆ ಮಾಡಿದರೆಂಬ ವಿಷಯಗಳು ಹಿಂದೆಯೇ ಹೇಳಲಾಗಿದೆ.

ಅನಂತರ ಶ್ರೀಯವರು ಪುನಃ ಗುಯಲೂರಿಗೆ ದಯಮಾಡಿಸಿ ತಮ್ಮ ಅಧಿಕಾರವನ್ನು ಓರ್ವ ಸದ್ವಂಶೀಯ ವಟುವಿಗೆ ಅನುಗ್ರಹಿಸಿ ಇಮ್ಮಡಿ ಕರಿಬಸವ ದೇಶಿಕೇಂದ್ರನೆಂದು ಹೆಸರಿಟ್ಟು

॥ಗೀ॥ ಪಂಡಿತಾರಾಧ್ಯ ಸಂಭವುನಿ ಸುಗುಣ।  
ಶಾಲಿನಿವೀಕ್ಷಿಂಚಿ ಲಾಲಿತ ಮುಗ।  
ಹಸ್ತಪಂಕಜ ಮುನುಶೀರ್ಷಮುಂಟನಿವಿರಿ।  
ವಾಸಿ ಮೂರಂಗ ಮಂತ್ರಮುಪದೇಶ ಮೊಸಗಿ ॥

ಮುಂತಾಗಿ ಉಪದೇಶಮಾಡಿ ತಾವು ಅಲ್ಲಿಯೇ ಲಿಂಗದಲ್ಲಿ ಬೆರೆಯು ತ್ತಾರೆ. ಇಲ್ಲಿಗೆ ಎರಡನೆಯ ಆಶ್ವಾಸವು ಮುಗಿದಿದೆ.

ಒಟ್ಟಿನಲ್ಲಿ ಶ್ರೀ ಚಂದ್ರಗುಂಡ ದೇಶಿಕೇಂದ್ರರ ಚರಿತ್ರೆಯಲ್ಲಿ ಅನೇಕ ಚರ್ಚಾತ್ಮಕವಾದ ಐತಿಹಾಸಿಕ ವಿಷಯಗಳು ಬಹಳವಾಗಿ ಉಲ್ಲಿಖಿತ ವಾಗಿವೆ. ಅವೆಲ್ಲವೂ ಸಿದ್ಧಾಂತವಾಗಬೇಕಾದರೆ ಇನ್ನೂ ಅನೇಕ ಶೋಧ ನೆಗಳಾಗುವುದು ಅವಶ್ಯಕವೆಂದು ಭಾವಿಸಬೇಕಾಗಿದೆ. ಪುಲ್ಲ ಕವಿಯು

ಈ ಚರಿತ್ರೆಯನ್ನು ಪುರಾಣ ರೂಪವಾಗಿ ಆರಂಭಿಸಿದರೂ ಅದರಲ್ಲಿನ ಅನೇಕ ವಿಚಾರಗಳು ಐತಿಹಾಸಿಕವಾಗಿಯೂ ಗಮನಾರ್ಹವಾಗಿಯೂ ಇವೆ.

ಜಗದ್ಗುರು ಚಂದ್ರಗುಂಡದೇಶಿಕೇಂದ್ರರು ಮಹಾ ಪ್ರಭಾವಶಾಲಿಗಳಾಗಿದ್ದು ವೀರಶೈವ ಮತದ ಉದ್ಧಾರ ಕಾರ್ಯವನ್ನು ಬಹಳವಾಗಿ ಮುಂದುವರಿಸಿ ವೀರಶೈವ ಮತದ ಚರಿತ್ರೆಯಲ್ಲಿ ವಂದ್ಯರಾಗಿದ್ದಾರೆ. ಇವರಿಂದ ಪುನೀತರಾದ ಜನಾಂಗಗಳು ಅನೇಕವಾಗಿ ಇಂದಿಗೂ ಈ ಮತದ ಶಿಷ್ಯಕೋಟಿಯಲ್ಲಿ ಸೇರಿದ್ದಾರೆ. ಇವರ ಸೂತ್ರವಿಡಿದು ನಡೆದ ಮುಂದಿನ ಮೂರ್ತಿಗಳ ಪ್ರಭಾವಗಳನ್ನು ಮುಂದೆ ಪರಿಶೀಲಿಸುವ.

(ಕ್ರಮಶಃ)

# ವಚನಸಾಹಿತ್ಯದ ಮಹತ್ವ.

(ಲೇಖಕ— ಶ್ರೀಯುತ ಜೀರಗೆ ಕ. ಬಸವಪ್ಪ, ಬಿ. ಎ. ಬೆಂಗಳೂರ.)

---

ಶಿವಶರಣರ ವಚನಸಾಹಿತ್ಯವು ಕನ್ನಡಸಾಹಿತ್ಯದಲ್ಲಿ ಒಂದು ಉನ್ನತ ಸ್ಥಾನವನ್ನು ಪಡೆದಿರುತ್ತದೆಂಬ ವಿಷಯದಲ್ಲಿ ದ್ವಿಮತಗಳಿಲ್ಲ. ಕನ್ನಡ ಸಾಹಿತ್ಯದ ಇತಿಹಾಸದಲ್ಲಿ ಒಂದು ವಿಚಾರಕ್ರಾಂತಿಯ ಯುಗವನ್ನು ನಿರ್ಮಿಸಿ ಜನತೆಯಲ್ಲಿ ನವಚೇತನವನ್ನುಂಟುಮಾಡಿ ಜನತೆಯ ಜೀವನಾಧಾರವಾದ ಸಾಹಿತ್ಯವೆಂದರೆ ಶರಣರ ವಚನಸಾಹಿತ್ಯ. ಶರಣರ ನಂತರ ಕೆಲವು ಸಲದ ಮೇಲೆ ಕನ್ನಡಸಾಹಿತ್ಯಕ್ಕೆ ಮತ್ತೆ ಚೇತನವನ್ನು ಕೊಟ್ಟು ಜನಜಾಗ್ರತಿಯನ್ನುಂಟು ಮಾಡಿದವರೆಂದರೆ ದಾಸರು. ಈ ರೀತಿ ಶರಣಕೂಟದವರಿಂದಲೂ ದಾಸಕೂಟದವರಿಂದಲೂ ಕನ್ನಡ ಸಾಹಿತ್ಯಕ್ಕೆ ಮಹೋಪಕಾರವಾಗಿದೆ. ಕನ್ನಡ ಸಾಹಿತ್ಯದ ಇಂಪನ್ನು ಸೊಂಪನ್ನು ಪೆಂಪನ್ನು ಅರಿತುಕೊಳ್ಳಬೇಕೆಂಬುವವರು ಶರಣರ ವಚನಸಾಹಿತ್ಯವನ್ನು ದಾಸರ ಕೀರ್ತನಸಾಹಿತ್ಯವನ್ನೂ ಪಾನಮಾಡಿಯೇ ತೀರಬೇಕು.

ದಾಸಕೂಟದವರಂತೆಯೇ ಶರಣಕೂಟದವರೂ ಸಕ್ಕದದ ಮೋಹಕ್ಕೆ ಬೀಳದೆ ಜನರ ಮನೆಮಾತಾದ ಕನ್ನಡದಲ್ಲೇ ಒಂದು ಭವ್ಯವಾದ ಸಾಹಿತ್ಯಮಂದಿರವನ್ನು ನಿರ್ಮಿಸಿ ಪಂಡಿತಪಾಮರರೆನ್ನದೆ ಸರ್ವರಿಗೂ, ಸಾಹಿತ್ಯ ಮಂದಿರ ಪ್ರವೇಶಕ್ಕೆ ಅವಕಾಶವನ್ನಿತ್ತು ಜನತೆಯ ಬಾಳನ್ನು ಉತ್ತಮಗೊಳಿಸಿದರು. ಶರಣರ ವಚನಸಾಹಿತ್ಯ ನಿರ್ಮಾಣವು ಪಂಡಿತರಾದ ಕೆಲವರಿಗಾಗಿ ಮಾತ್ರವಲ್ಲ; ಪಾಮರರಾದ ಹಲವರಿಗಾಗಿ. ಅವಿದ್ಯಾವಂತರನ್ನು ವಿದ್ಯಾವಂತರನ್ನಾಗಿಯೂ ಅಜ್ಞಾನಿಗಳನ್ನು ಜ್ಞಾನಿಗಳನ್ನಾಗಿಯೂ, ಅನೀತಿವಂತರನ್ನು ನೀತಿವಂತರನ್ನಾಗಿಯೂ, ಮಾಡಬೇಕೆಂಬ ಪವಿತ್ರೋದ್ದೇಶದಿಂದಲೇ ವಚನಸಾಹಿತ್ಯದ ಸೃಷ್ಟಿಯಾಯಿತು. ಕೆಲವರು ಭಾವಿಸುವಂತೆ ಸಾಮಾನ್ಯರಿಗಾಗಿ ನಿರ್ಮಿಸಿದ ಈ ವಚನಸಾಹಿತ್ಯವು ಸಾಮಾನ್ಯವಾದ ಸಾಹಿತ್ಯವೆಂದು ಭಾವಿಸುವುದಾದರೆ ಆ ಭಾವನೆಯೂ ಸಾಮಾನ್ಯವಾದದ್ದೇ ಸರಿ. ಸಾಹಿತ್ಯವು ಭಾಷೆಯನ್ನು ಅವಲಂಬಿಸುವುದಿಲ್ಲ. ಭಾವವನ್ನು ಅವಲಂಬಿಸುತ್ತದೆ. ಜೀವನವನ್ನು ಪ್ರತಿ

ಬಿಂಬಿಸುತ್ತದೆ. ಜೀವನಕ್ಕೆ ಸಂಬಂಧವಿಲ್ಲದ ಸಾಹಿತ್ಯ, ಜೀವವಿಲ್ಲದ ಸಾಹಿತ್ಯ, ರುಂಡವಿಲ್ಲದ ಮುಂಡದಂತೆ. ಭಾವವು ಕ್ಷೀರದಂತೆಂದರೆ ಭಾಷೆಯು ಕ್ಷೀರವನ್ನೊಳಗೊಂಡ ಪಾತ್ರೆಯಂತೆ ನಾವು ಪಾನ ಮಾಡುವುದು ಕ್ಷೀರವನ್ನು, ಪಾತ್ರೆಯನ್ನಲ್ಲ. ಭಾಷೆಯು ಎಷ್ಟು ಸರಳವೂ ಸುಲಭವೂ ಆಗಿರುವುದೋ ಅಷ್ಟೂ ಸಾಹಿತ್ಯಕ್ಕೆ ತೇಜಸ್ಸು ಓಜಸ್ಸು. "ರೋಗಿಗಳಿಗೆ ವೈದ್ಯನ ಅವಶ್ಯಕತೆ ಎಂತೋ, ಪಾಪಿಗಳಿಗೆ ನನ್ನ ಅವಶ್ಯಕತೆ ಅಂತು" ಎಂದು ಹೇಳಿದ ಮಹಾತ್ಮಾ ಏಸುಕ್ರಿಸ್ತನಂತೆ ಶರಣರು ಪಾಮರರ, ಅಜ್ಞಾನಿಗಳ, ಪಾಪಿಗಳ ಉದ್ಧಾರಕ್ಕಾಗಿ ವಚನಸಾಹಿತ್ಯವನ್ನು ನಿರ್ಮಿಸಿ ತನ್ಮೂಲಕ ಧರ್ಮಪ್ರಸಾರ ಮಾಡಿದ್ದಾರೆ.

ಶರಣರ ವಚನಸಾಹಿತ್ಯದ ಸರಣಿಯನ್ನು ಸ್ವಲ್ಪ ಅವಲೋಕಿಸುವ:-

"ಕಾಗೆ ಒಂದಗುಳ ಕಂಡರೆ ಕರೆಯದೇ ತನ್ನ
ಬಳಗವನು? ಕೋಳಿ ಒಂದು ಗುಟಕವ
ಕಂಡರೆ ಕರೆಯದೇ ತನ್ನ ಕುಲವೆಲ್ಲವನು?"

"ಅರ್ಥರೇಖೆ ಇದ್ದಲ್ಲಿ ಫಲವೇನೋ
ಆಯುಷ್ಯ ರೇಖೆ ಇಲ್ಲದನ್ನಕ್ಕ"

"ಸಗಣಿಯ ಬೆನಕಂಗೆ ಸಂಪಿಗೆಯರ
ಳಿನಲ್ಲಿ ಪೂಜಿಸಿದರೆ ರಂಜನೆಯಲ್ಲ
ದೆ ಅದರ ಗಂಜಳ ಬಿಡದಣ್ಣ"

"ಹೊನ್ನ ನೇಗಲುತ್ತು ಎಕ್ಕೆಯ
ಬೀಜವ ಬಿತ್ತುವರೇ? ಕರ್ಪುರ
ದ ಮರನ ಕಡಿದು ಕಳ್ಳಿಗೆ ಬೇಲಿಯ
ನಿಕ್ಕುವರೇ?"

ಎಂತಹ ಮಧುರ ಸಾಹಿತ್ಯವಿದು! ಎಂತಹ ಸಹಜಭಾವ! ಎಂತಹ ಕಲಾನೈಪುಣ್ಯ! ನೈಜೋಪಮಾನಗಳನ್ನು ಕೊಟ್ಟು ಭಾವಗಳನ್ನು ವಿಜೃಂಭಿಸುವ ಪರಿ ಎಂತಹದು!

ಇನ್ನು ಸಮಾಜ ಸುಧಾರಣೆಯಲ್ಲಿ ವಚನಸಾಹಿತ್ಯವು ಹೇಗೆ ಪ್ರವಹಿಸಿದೆ ಎಂಬುದನ್ನೂ ಸ್ವಲ್ಪ ನೋಡುವ.

ಕುಲ ಅಕುಲಗಳೆಂದು ಹೆಮ್ಮೆಪಡುವವರ ಮುಖಕ್ಕೆ ಕನ್ನಡಿಯನ್ನು ತಂದೊಡ್ಡುವ ಬಗೆಯನ್ನು ನೋಡಿ!

"ಕುಲವನರಸದಿರಿ ಭೋ! ಕುಲವಿಂದ
ಮುನ್ನೇನಾದಿರಿಂ ಭೋ!"

"ವ್ಯಾಸ ಬೋಯಿತಿಯ ಮಗ
ಮಾರ್ಕಂಡೇಯ ಮಾತಂಗಿಯ
ಮಗ, ಮಂಡೋದರಿ ಕಪ್ಪೆಯ
ಮಗಳು...... ಸಾಕ್ಷಾತ್ ಅಗಸ್ತ್ಯ
ಕಬ್ಬಿಲ, ದೂರ್ವಾಸ ಮುಚ್ಚಿಗ,
ಕಶ್ಯಪ ಕಮ್ಮಾರ, ಕೌಂಡಿಲ್ಯ
ನೆಂಬ ಋಷಿ ಮೂರು ಭುವನವರಿ
ಯೆ ನಾಯಿದ ಕಾಣಿ ಭೋ"

"ಹೊಲೆಗಂಡಲ್ಲದೆ ಪಿಂಡದ ನೆಲೆ
ಗಾಶ್ರಯವಿಲ್ಲ, ಜಲಬಿಂದುವಿನ
ವ್ಯವಹಾರ ಒಂದೇ, ಆಸೆಯಾ
ಮಿಷಹರುಷ ವಿಷಯಾದಿಗ
ಳೆಲ್ಲ ಒಂದೇ. ಏನನೋದಿ
ಏನ ಕೇಳಿ ಏನು ಫಲ? ಕುಲಜ
ನೆಂಬುದಕ್ಕೆ ಆವುದು ದೃಷ್ಟ?

* * *

ಕಾಸಿ ಕಮ್ಮಾರನಾದ, ಬೀಸಿ ಮಡಿ
ವಳನಾದ, ಹಾಸನಿಕ್ಕಿ ಸಾಲಿಗನಾದ,
ವೇದವನೋದಿ ಹಾರುವನಾದ.
ಕರ್ಣದಲಿ ಜನಿಸಿದವರುಂಟೇ
ಜಗದೊಳಗೆ? ಇದು ಕಾರಣ
ಕೂಡಲಸಂಗಮದೇವ ಲಿಂಗಸ್ಥಲವ
ನರಿದವನೇ ಕುಲಜನು"

ಯಜ್ಞದ ಹೋತನನ್ನು ನೋಡಿ ವಚನಕಾರರು ಅಳುವುದನ್ನು ಕೇಳಿದರೆ ನಮಗೂ ಅಳುಬರುವುದು.

"ಎಲೆ ಹೋತೆ ಅಳು ಕಂಡೆಯಾ! ವೇ
ದವನೋದಿದವರ ಮುಂದೆ ಅಳು
ಕಂಡೆಯಾ ಹೋತೆ. ಶಾಸ್ತ್ರವ
ನೋದಿದವರ ಮುಂದೆ ಅಳು ಕಂಡೆ
ಯಾ ಹೋತೆ. ನೀನತ್ತುದಕ್ಕೆ ತಕ್ಕು
ದ ಮಾಡುವ ಕೂಡಲ ಸಂಗಮ
ದೇವನವರ"

ಪಾಮರನೂ ಧರ್ಮದ ನೆಲೆಯನ್ನು ಅರಿತು ಆಚರಿಸುವಂತೆ ಧರ್ಮದ ನಿರ್ಣಯವನ್ನು ಎಷ್ಟು ಸುಲಭವಾಗಿ ಮಾಡಿಕೊಟ್ಟಿದ್ದಾರೆಂಬುದನ್ನು ಈ ವಚನದಲ್ಲಿ ನೋಡಬಹುದಾಗಿದೆ:—

"ದಯವಿಲ್ಲದ ಧರ್ಮವದಾವುದ
ಯ್ಯ? ದಯೆ ಬೇಕು ಸಕಲ
ಪ್ರಾಣಿಗಳಲ್ಲಿ. ದಯವೇ
ಧರ್ಮದ ಮೂಲವಯ್ಯ"

ಲೋಕದ ಆಚಾರ ವ್ಯವಹಾರಗಳ ಅಂತರವು ಎಷ್ಟಿದೆ ಎಂಬುದನ್ನು ಎತ್ತಿ ಹಿಡಿದು ತೋರಿಸಿ ಎಲ್ಲರೂ ನಾಚಿ ತಲೆ ಬಾಗುವಂತೆ ಮಾಡುವ ಈ ವಾಕ್ಯವನ್ನು ನೋಡಿ:—

"ಕಲ್ಲನಾಗರ ಕಂಡರೆ ಹಾಲನೆರೆ
ಎಂಬರು! ದಿಟದ ನಾಗರ ಕಂಡರೆ
ಹೊಡೆ ಎಂಬರಯ್ಯ! ಉಂಬ
ಜಂಗಮ ಬಂದರೆ ನಡೆ ಎಂಬರು!
ಉಣ್ಣದ ಲಿಂಗಕ್ಕೆ ಬೋನವ
ಹಿಡಿ ಎಂಬರಯ್ಯ!"

ಏನಿಲ್ಲದಿದ್ದರೂ ಒಳ್ಳೆಯ ಮಾತನ್ನಾದರೂ ಏಕೆ ಆಡುವುದಿಲ್ಲವೆಂದು ಪ್ರಶ್ನಿಸುವ ವೈಖರಿಯನ್ನು ನೋಡಿ:—

"ಏನಿ ಬಂದಿರಿ, ಹದುಳವಿದ್ದಿರೆಂದರೆ
ನಿಮ್ಮ ಸಿರಿ ಹಾರಿಹೋಹುದೇ?
ಕುಳ್ಳಿರೆಂದರೆ ನೆಲ ಕುಳಿ ಹೋ
ಹುದೇ? ಒಡನೆ ನುಡಿದರೆ
ಶಿರ ಹೊಟ್ಟೆ ಒಡೆವುದೇ?
ಕೊಡಲಿಲ್ಲದಿದ್ದಡೊಂದು ಗುಣ
ವಿಲ್ಲದಿದ್ದೊಡೆ ಮೂಗ
ಕೊಯ್ಯದೆ ಮಾಣ್ಬನೇ?
ಕೂಡಲಸಂಗಮದೇವ"

ಕನ್ನಡ ಬಾಂಧವರೇ, ಇದುವರೆಗೂ ಕೊಟ್ಟ ಉದಾಹರಣೆಗಳಿಂದ ಶರಣರ ವಚನಸಾಹಿತ್ಯದ ಸೂಕ್ಷ್ಮ ಪರಿಚಯ ಮಾಡಿಕೊಟ್ಟಂತಾಗಿದೆ. ಒಟ್ಟಿನಲ್ಲಿ ಹೇಳಬೇಕೆಂದರೆ ವಚನಸಾಹಿತ್ಯವು ಆಬಾಲವೃದ್ಧರಿಗೂ ಅರ್ಥವಾಗುವ ಪಂಡಿತರನ್ನೂ ತಲೆದೂಗುವಂತೆ ಮಾಡುವ ಎಲ್ಲರನ್ನೂ ಮುಗ್ಧರನ್ನಾಗಿ ಮಾಡುವ ಪತಿತೋದ್ಧಾರ ಸಾಹಿತ್ಯವಾಗಿದೆ.

ಇಂಥ ಶೋಭಾಯಮಾನವಾದ ಅಮರ ಸಾಹಿತ್ಯದ ಪ್ರಚಾರದ ಕಡೆಗೆ ಎಲ್ಲ ಕನ್ನಡಿಗರೂ ಲಕ್ಷಕೊಡಬೇಕಾಗಿದೆ.

# ಶ್ರೀ ವಿಶ್ವ ವಿಭೂತಿ ಬಸವೇಶ.

ರಾಗಃ— ಕೇದಾರ. ತಾಳಃ— ಝಂಪಾ.

( "ಉದಯವಾಗಲಿ ನಮ್ಮ ಚೆಲುವ ಕನ್ನಡ ನಾಡು" ಎಂಬಂತೆ )

ಶ್ರೀ ಬಸವರಾಜ! ಘನತೇಜ!! ಅಹ! ಸುರಭೂಜ!!
ಬಾ! ಬಾರೊ!! ಗುಣಸಿಂಧು!!! ಮರಳಿ ಮಹಿಗಿಂದು ॥ಪ॥

ವಿನುತ ಬಸವನ ಉದಯು ಬಾಗವಾಡಿಯೊಳಾಯ್ತು।
ಜನನಿ-ಜನಕರು ಮಾದಲಾಂಬೆ-ಮಾದರಸ್ ॥
ಎನಿತು ಪೇಳಲಿ! ದ್ವಿಜನು ಶಿವದೀಕ್ಷೆ ಹೊಂದಿದನು।
ತನಗೆ ಕೂಡಲಸಂಗಮೇಶ ಗುರುವೆಂದು ॥೧॥

ಶ್ವಪಚರನು, ಪತಿತರನು ಸುಪಥಕೆಳಿಸಿದ ಶಾಂತಿ-।
ನಿಪುಣನಾತನು ಸ್ತ್ರೀಸಮಾಜ-ಪಾಲಕನು ॥
ಅಪರಿಮಿತ ಪಾಂಡಿತ್ಯದಿಂ ಮಂತ್ರಿ ತಾನಾಗಿ।
ಶಪಥಗಳ ಪಾಲಿಸಿದ ಆತ್ಮಬಲದಿಂದ ॥೨॥

ವಿಮಲ ಖಾದಿಯು ಮೆರಿಸಿ, ಕೈಗಾರಿಕೆಯು ಬರಿಸಿ।
ಅಮಮ! ಮಾಯೆಯು ಮೀರಿ, ಮಹಿಮೆಗಳ ತೋರಿ॥
ಅಮಿತ-ಅನುಪಮ-ಅಮರ-ಅನುಭವದ ವಚನಗಳ।
ನಮಗಾಗಿ ಬೋಧಿಸಿದ ಸರಳಗನ್ನಡದಿ ॥೩॥

ಭೂರಿ ಕರುಣಾಭರಣ! ಕಲ್ಯಾಣ ಬಸವಣ್ಣ।
ಚಾರುಧರ್ಮದ ಮೂರ್ತಿ! ಪೂರ್ತಿ!! ಬಸವಣ್ಣ।
ವೀರಶೈವ ವಿಭವ! ಪ್ರತಿ ಅಭವ!! ಬಸವಣ್ಣ।
ಪಾರಮಾರ್ಥಿಕ ಪಾಠ-ಪೀಠ ಬಸವಣ್ಣ ॥೪॥

ತಿಳಿಸಿದನು ಜಗಕೆಲ್ಲ ಶರಣಸಂದೇಶವನು।
ಗಳಿಸಿದನು ಗಡ! ವಿಶ್ವಪ್ರೀತಿ-ನೀತಿಯನು॥
ಬೆಳಿಸಿದನು ತಾಯ್ನುಡಿಯನುಳಿಸಿದನು ಹರಮತವ।
ನಳಿಸಿದನು ಬಲಗೊಂಡ ಬರಿನಂಬಿಕೆಗಳ ॥೫॥

ಬಸವೇಶ! ತತ್ವಖನಿ!! ಸನ್ಯಾನಿ! ಮಾದಾನಿ!!
ಪೆಸರಾಂತ ಚರಮೋಹಿ! ವರಲಿಂಗದೇಹಿ ॥
ಬಸವ ಭಾಸ್ಕರ! ಭಾಪುರೇ!! ಭಕ್ತಿಭಾಂಡಾರಿ!!!
ಎಸೆದ ಕಾಯಕಭೋಗಿ! ಭಲೆ!! ಕರ್ಮಯೋಗಿ ॥೬॥

ಸಕಲ ಮಾನ್ಯರೇ! ಸಾಧುಸಜ್ಜನರ ಸಂಸ್ಮರಣ।
ವಖಿಲ ಜೀವಿತ-ಧ್ಯೇಯುಗಳಲಿ ಮಿಗಿಲಲ್ತೆ? ॥
ಶಕಪುರುಷ ಬಸವೇಶ್ವರನ ಜನ್ಮದಿನವಿಂದೆ।
ಸುಖಮಾಸ- ವೈಶಾಖ ಶುದ್ಧ ಬಿದಿಗೆಯಿರೆ ॥೭॥

ವೇದ-ವಾದಗಳೇಕೆ? ಶಸ್ತ್ರ-ಶಾಸ್ತ್ರಗಳೇಕೆ?।
ಸೋದರರೆ! ನುಡಿಯಂತೆ ನಡೆಯೊಂದೆ ಸಾಕು ॥
ಈ ದಿನವು ಕರುನಾಡ ಅಲ್ಲಲ್ಲ-ಭಾರತದ।
ಮೇದಿನಿಯು ಪಾವಿತ್ರ್ಯದಿನವಾಗಬೇಕು ॥೮॥

ಶಶಿಧರಗೆ-ಶಾಂಭವಿಗೆ-ಶಿವಸುತ-ವಿನಾಯಕಗೆ।
ಅಸಮ ಕವಿತಿಲಕರಿಗೆ-ಮುನಿವರೇಣ್ಯರಿಗೆ ॥
ಬಸವಾದಿ ಪ್ರಮಥರಿಗೆ-ನಿಜರಾಷ್ಟ್ರವೀರರಿಗೆ।
ಒಸೆದು ನುಡಿಸಿದ "ಮಹಾಂತ" ಯತಿಗೆ ಮಂಗಲವು ॥೯॥

**ತುಂಗ ಬಸವಪಾದಾಬ್ಜ ಭೃಂಗ, "ಶ್ರೀ ಸಂಗ."**

# ಶ್ರೀಕರ ಭಾಷ್ಯ ವಿಮರ್ಶನವು.

(ಲೇ:— ಶ್ರೀ ಸಿದ್ಧರಾಮಪ್ಪ ದಂಡಪ್ಪ ಪಾವಟೆ)

"ಶ್ರೀ ಪಂಡಿತಾಚಾರ್ಯನು ಪ್ರಾಕೃತಕ್ರಿಯಾತ್ಮಕ ಧರ್ಮಪ್ರತಿಪಾದಕ ಪೂರ್ವ ತಂತ್ರಸ್ಯ ಸಿದ್ಧಬ್ರಹ್ಮಪ್ರತಿಪಾದಕತ್ವಾ ಸಂಭವಾಚ್ಚ" ಪ್ರಾಕೃತ ಕ್ರಿಯಾಮಯವಾದ ಧರ್ಮವನ್ನು ಪ್ರತಿಪಾದಿಸುವ ಪೂರ್ವ ತಂತ್ರವು ಸಿದ್ಧ ಸ್ವರೂಪವಾದ ಬ್ರಹ್ಮವನ್ನು ಪ್ರತಿಪಾದಿಸಲಾರದಾಗಿ ಧರ್ಮ ಮೀಮಾಂಸಾಧಿಗಮಾನಂತರದಲ್ಲಿ ಬ್ರಹ್ಮಮೀಮಾಂಸಾಧಿಕಾರವಹುದೆಂಬುದು ಆಗದು. ಆದರೆ ಮಲತ್ರಯ ನಿವಾರಣಕ್ಕಾಗಿ ಲಿಂಗಧಾರಣವಾದ ಬಳಿಕ ಬ್ರಹ್ಮಮೀಮಾಂಸಾಧಿಕಾರವು ಎಂದು ಹೇಳುವನು. ಈ ಮತವನ್ನು ನಾವು ವ್ಯಾಕರಣದಿಂದಲು, ಶಿಕ್ಷೆಯಿಂದಲು, ಸೂತ್ರಪೌರ್ವಾಪರ್ಯದಿಂದಲು, ತೈತ್ತಿರಿಯೋಪನಿಷತ್ತಿನ ಪೌರ್ವಾಪರ್ಯದಿಂದಲು ಪರೀಕ್ಷಿಸಿದೆವು. ಇದಹುದಾದರೆ ವೀರಶೈವವೆಂದು ನಾವು ಆಚರಿಸುವ ಧರ್ಮವು ಧರ್ಮವಲ್ಲ, ಧರ್ಮದ ಹೆಸರಿನದಲ್ಲ ಎಂದು ತೋರಿಸಿದೆವು. ಶ್ರೀ ಪಂಡಿತಾಚಾರ್ಯನ ಅಭಿಪ್ರಾಯವು ನಿಲ್ಲಲಾರದೆಂದು ತೋರಿಸುವಲ್ಲಿ ನಮ್ಮ ಆಗ್ರಹವು ಲಿಂಗಸಂಗದ ಈ ವೀರಶೈವವು ಸ್ವಕೀಯ ಅತಿ ಪ್ರಸ್ಥಾನ ವಿಶೇಷವನುಳ್ಳದು ಚಾತುರ್ವರ್ಣ್ಯವನ್ನು ಅತಿಗಳೆದುದು ವಿಧಿವಿಹಿತವಲ್ಲದುದು ಭಾವಪ್ರಧಾನವಾದುದು. ಅತ್ಯುದಾರ ತತ್ವಗಳನು ಹಿಡಿದುದು ಮಾನವನ ಉದಾತ್ತ ಜೀವನಕ್ಕೆ ಹೊಲಬಾದುದು ಎಂಬಿದನೆಲ್ಲ ತೋರಿಸಬಹುದು.

ಆದುದರಿಂದ ಇಲ್ಲಿ ಮಲತ್ರಯ ನಿವಾರಣ ದೀಕ್ಷಾ ವಿಚಾರದಿಂದಲು ಶಿವಭಕ್ತಿಯ ಸಾಮಾನ್ಯ ನಿರೂಪಣದಿಂದಲು ಶ್ರೀ ಪಂಡಿತಾಚಾರ್ಯನ ಲಿಂಗಧಾರಣ ವಿವರಣವನ್ನು ಅಳುಕಿಸಬಹುದಾಗಿದ್ದಿತು. ಆದರೆ ಆಚಾರ್ಯನ ಸಿದ್ಧಾಂತವು ಆಶ್ರಯಿಸಬಹುದಾದ ಹಲವು ಯುಕ್ತಿಗಳನು ಹರಿಯದೆ ಮುಂದುವರಿವುದು ಉಚಿತವಲ್ಲವೆಂದು ಆಯುಕ್ತಿಗಳನು ಪರಿಕಿಸತೊಡಗುವೆವು

## ಪ್ರಾಕೃತಧರ್ಮ ಸಿದ್ಧಬ್ರಹ್ಮಗಳು

ಆಚಾರ್ಯ ಪಕ್ಷಪಾತಿಗಳು ನಮಗೆ ಇಂತೆನಬಹುದು. ಆಚಾರ್ಯನು ಭಾಷ್ಯದಲ್ಲಿ ತನ್ನ ಸಿದ್ಧಾಂತಕ್ಕೆ ಮುಂಡಕೋಪನಿಷತ್ತಿನ ಶ್ರುತಿ

ಯನ್ನುದಾಹರಿಸಬೇಕಾಗಿದ್ದಿತು. ಆ ಉಪನಿಷತ್ತಿನಲ್ಲಿ ಯಜ್ಞಯಾಗಾದಿಗಳು ಅನಿತ್ಯ ಫಲಗಳೆಂದೂ ಅಕೃತವಾದ ಬ್ರಹ್ಮವು ಕ್ರಿಯಾಮಯವಾದ ಯಾಗಗಳಿಂದ ತಿಳಿಯದೆಂದೂ ಹೇಳಿಯದೆ. ಮತ್ತು ಬ್ರಹ್ಮಪ್ರಾಪ್ತಿಗೆ ಸಲಿಂಗಕವಾದ ತಪಸ್ಸನ್ನು ಆ ಉಪನಿಷತ್ತು ಒತ್ತಿ ಹೇಳುವುದು. ಆಚಾರ್ಯನು ಎಲ್ಲ ವಾಕ್ಯಗಳಲ್ಲಿ ಉದಾಹರಿಪುದಾವಶ್ಯಕವಲ್ಲ. ಮುಂಡಕ ಶ್ರುತಿಯು ಆಚಾರ್ಯಸಿದ್ಧಾಂತಕ್ಕೆ ಪ್ರಮಾಣವಾಗಿದೆ.

ಪ್ಲವಾಹ್ಯೇತೇ ಅದೃಢಾಯಜ್ಞರೂಪಾ ಅಷ್ಟಾದಶೋಕ್ತಮವರಂಯೇಷುಕರ್ಮ। ಏತಚ್ಛ್ರೇಯೋ ಯೇಭಿನಂದಂತಿ ಮೂಢಾಜರಾ ಮೃತ್ಯುಂತೇಪುನರೇವಾ ಪಿಯಂತಿ. ಮು. ೧ ಖ ೨ ಮಂತ್ರ ೭ ಪರಿಕ್ಷ್ಯಲೋಕಾನ್ಕರ್ಮಚಿ ತಾನ್ಬ್ರಾಹ್ಮಣೋನಿರ್ವೇದಮಾಯಾನ್ನಾಸ್ತ್ಯಕೃತಃ ಕೃತೇನ ತದ್ವಿಜ್ಞಾನಾರ್ಥಂ ಸಗುರುಮೇವಾಭಿಗಚ್ಛೇತ್ಸ್ಯಮಿತ್ಪಾಣಿಃ ಶ್ರೋತ್ರಿಯಂ ಬ್ರಹ್ಮನಿಷ್ಠಂ ಮು. ೧ ಖ. ೨ ಮ. ಸ್ತಿ. ನಾಯಮಾತ್ಮಾ ಬಲಹೀನೇನ ಲಭ್ಯೋನಚ ಪ್ರಮಾದಾತ್ತ ಪಸೋ ವಾಪ್ಯ ಲಿಂಗಾತ್ । ಏತೈರುಪಾಯೈರ್ಯತತೇಯಸ್ತು ವಿದ್ವಾಂಸ್ತಸ್ಯೈಷ ಆತ್ಮಾ ವಿಶತೇ ತನುಂ ಸ್ವಾಂ ಮು. ೩ ಖ. ೨ ಮ. ೪

ಹದಿನೆಂಟು ಋತ್ವಿಜರು ಪತ್ನೀ ಯಜಮಾನರೀರ್ವರು ಹದಿನೆಂಟು ಜನದಿಂದ ಆಗುವ ಹೀನ ಕರ್ಮಗಳನು ಹೇಳಿದ ಯಜ್ಞಗಳು ಗಟ್ಟಿಯಲ್ಲ. ಆವ ಮೂಢರು ಇದು ಕಲ್ಯಾಣವೆಂದು ನಂಬುವರೊ ಅವರು ಅಲ್ಲಿಂದಾಗ ಮುಪ್ಪು ಸಾವುಗಳಿಗೀಡಹರು.

ಕರ್ಮದಿಂದ ಸಂಗ್ರಹಿಸಿದ ಲೋಕಗಳನ್ನು ಚನ್ನಾಗಿ ನೋಡಿ ಹೇಸುತ್ತಲು ಅಕೃತ (ನಿತ್ಯಸಿದ್ಧವಾದು) ವಾದುದು ಕೃತದಿಂದ (ಕರ್ಮದಿಂದ) ಆಗದೆಂದು ಆ ಅಕೃತವನ್ನು ತಿಳಿಯಲು ಸಮಿತ್ತುಗಳನು ಕೆಯ್ಕೊಂಡು ಶ್ರೋತ್ರಿಯ ಬ್ರಹ್ಮನಿಷ್ಠ ಗುರುವನು ಹೊಂದತಕ್ಕುದು.

ಈ ಆತ್ಮನು ಬಲಹೀನನಿಂದ ದೊರಕಿಸಲಾಗಸು. ಎಚ್ಚರಗೇಡಿತನದಿಂದ ಸಿಲುಕನು. ಲಿಂಗವಿಲ್ಲದ ತಪಸ್ಸಿನಿಂದಲು ಸಿಲುಕನು. ಆವನು ಈ ಉಪಾಯಗಳಿಂದ ಯತ್ನಿಸುವನೋ ಆ ವಿದ್ವಾಂಸನಿಗೆ ಈ ಆತ್ಮನು ತನ್ನ ಸ್ವರೂಪವನು ಪ್ರಕಟಿಸುವನು. ಇಂತು ಮುಂಡಕೋಪನಿಷತ್ತಿನಲ್ಲಿ ಪ್ರಾಕೃತವಾದ ಸ್ವರ್ಗಸಾಧನ ಯಾಗಗಳಿಗೆ ನಿಲುಕದ ಬ್ರಹ್ಮಜಿಜ್ಞಾಸಕ್ಕೆ ಶಿವಲಿಂಗ ಧಾರಣ ಸಂಸ್ಕಾರವನ್ನು ವಿಧಿಸಿದೆ.

## ಇದನೀಗ ನೋಡುವಣ.

ಮೊದಲನೆಯ ಮುಂಡಕದ ಮೊದಲನೆಯ ಖಂಡದಲ್ಲಿ ಒಂಬತ್ತು ಮಂತ್ರಗಳಿವೆ. ಮೊದಲನೆಯ ಎರಡು ಮಂತ್ರಗಳಲ್ಲಿ ಬ್ರಹ್ಮವಿದ್ಯಾಪರಂಪರೆಯು ಬ್ರಹ್ಮನಿಂದ ಅಂಗಿರಸನ ವರೆಗೆ ಬರುವುದು. ಮೂರನೆಯ ಮಂತ್ರದಲ್ಲಿ ಶೌನಕನು ಅಂಗಿರಸನಲ್ಲಿ ಬ್ರಹ್ಮವಿದ್ಯೆಯನ್ನು ಬೆಸಗೊಂಬನು. ನಾಲ್ಕನೆಯ ಐದನೆಯ ಆರನೆಯ ಮಂತ್ರಗಳಲ್ಲಿ ಅಂಗಿರಸನು ಶೌನಕನಿಗೆ ಪರಾಪರವೆಂಬ ಬ್ರಹ್ಮವಿದ್ಯೆಯೂ ಋಗ್ವೇದಾದಿ (ಕರ್ಮಸಾಧಕ) ಅಪರ ವಿದ್ಯೆಯೂ ಉಂಟೆಂದು ಅದುಃ ಪರವಿದ್ಯೆಯಿಂದ ತಿಳಿವ ಬ್ರಹ್ಮವು ಇಂದ್ರಿಯಾಗೋಚರವೆಂದು ಹೇಳುವನು. ಏಳನೆಯ ಎಂಟನೆಯ ಒಂಬತ್ತನೆಯ ಮಂತ್ರಗಳಿಂದ ಬ್ರಹ್ಮವು ಜಗತ್ತಿಗೆ ಉತ್ಪತ್ತಿ ಸ್ಥಾನವೆಂದೂ ಆ ಬ್ರಹ್ಮದ ಉತ್ಪತ್ತಿ ಪ್ರಕಾರದ ಜ್ಞಾನದಿಂದ ಅವ್ಯಾಕೃತವೆಂಬ ಜಗದ್ಬೀಜವು ಹುಟ್ಟುವದೆಂದೂ ಆ ಬೀಜದಿಂದ ಮನ ಆದಿಗಳೂ ಕರ್ಮಗಳೂ ಕರ್ಮಫಲಗಳೂ ಬರುತ್ತವೆಂದೂ ನಾಮರೂಪಗಳೂ ಅದರಿಂದಲೆ ಹುಟ್ಟುವುವೆಂದೂ ತಿಳಿಸುವುನು.

ಎರಡನೆಯ ಮುಂಡಕದ ಹತ್ತು ಮಂತ್ರಗಳಲ್ಲಿ ಅಗ್ನಿ ಹೋತ್ರಾದಿ ಕರ್ಮಗಳು ಕಷ್ಟಸಾಧ್ಯವೆಂದೂ, ವಿಕಲವಾದಲ್ಲಿ ಯಜಮಾನನ ಸಪ್ತ ಲೋಕಗಳಲ್ಲಿ ಕೆಡಿಪುವೆಂದೂ, ಸಾಂಗವಾದಲ್ಲಿ ಯಜಮಾನನಿಗೆ ಇಂದ್ರಲೋಕ ಪ್ರಾಪ್ತಿಯಹುದೆಂದೂ, ಹಾಗಾದರು ಅದು ಶಾಶ್ವತವಲ್ಲೆಂದೂ, ಕರ್ಮೋಪಾಸಕರು ಅಜ್ಞಾನ ಮೂಢರೆಂದೂ ಅಂಗಿರನು ಶೌನಕನಿಗರುಹುವನು. ಹನ್ನೊಂದನೆಯ ಮಂತ್ರದಲ್ಲಿ ಕರ್ಮಜ್ಞಾನ ಸಮುಚ್ಚಯದಿಂದ ಸೂರ್ಯದ್ವಾರವಾಗಿ ಉಪಾಸಕರು ಅವ್ಯಯಾತ್ಮನಾದ ಪುರುಷನ ಲೋಕವನ್ನು ಹೊಂದುವರೆಂದು ತಿಳಿಸುವನು.

ಹನ್ನೆರಡನೆಯ ಮಂತ್ರದಲ್ಲಿ ಈ ಎಲ್ಲ ಲೋಕಗಳು ಅಸ್ಥಿರವೆಂದು ತಿಳಿಸಿ ಅವುಗಳಿಂದ ಹೇಸಿ ಗ್ರಂಥಾರಂಭದಲ್ಲಿ ವಿವರಿಸಿದ ಅದ್ರೇಶ್ಯತ್ವಾದಿ ವಿಶಿಷ್ಟ ಅಕೃತಬ್ರಹ್ಮವನರಿಯಲು ಬ್ರಹ್ಮನಿಷ್ಠನಾದ ಶ್ರೋತ್ರಿಯ ಗುರುವನ್ನು ಹೊಂದತಕ್ಕುದೆಂದು ಉಪದೇಶಿಸುವನು.

ಇಷ್ಟು ಸಂದರ್ಭದಿಂದ ಬ್ರಹ್ಮವಿದ್ಯಾಧಿಕಾರಿಯು ಅಗ್ನಿಹೋತ್ರಾದಿಗಳನ್ನೆಸಗಿದವನು ಅಥವಾ ಕರ್ಮಜ್ಞಾನ ಸಮುಚ್ಚಯದಿಂದ ಹಿರಣ್ಯಗರ್ಭೋಪಾಸಕನಾಗಿ ಅವುಗಳು ಅನಿತ್ಯಫಲಕ್ಕೆ ಹೇಸಿದವನಿರಬೇಕೆಂದು

ಸೂಚನೆಯಾಯ್ತು. ಗುರುವು ಶ್ರೋತ್ರಿಯ ಬ್ರಹ್ಮನಿಷ್ಠನೆಂದು ಕಂಡು ಬಂದಿತು.

ಹದಿಮೂರನೆಯ ಮಂತ್ರವಿದು—ತಸ್ಮೈಸವಿದ್ವಾನುಪಸನ್ನಾಯ ಸಮ್ಯಕ್‌ಪ್ರ ಶಾಂತಚಿತ್ತಾಯ ಶಮಾನ್ವಿತಾಯ। ಯೇನಾಕ್ಷರಂ ಪುರುಷಂ ವೇದಸತ್ಯಂ ಪ್ರೋವಾಚತಾಂ ತತ್ವತೋ ಬ್ರಹ್ಮವಿದ್ಯಾಂ.

ಆ ವಿದ್ವಾಂಸನು (ಅಂಗೀರನು) ತನ್ನನ್ನು ವಿಧಿವತ್ತಾಗಿ ಬಳಿಸಾರಿದ ದರ್ಪಾದಿದೋಷಗಳೇನು ಇಲ್ಲದ ಶಾಂತಿಯಿಂದೊಡಗೂಡಿದ ಅವನಿಗೆ (ಶೌನಕನಿಗೆ) ಆವುದರಿಂದ ನಾಶರಹಿತನಾದ ಪುರುಷನ ತಿಳಿವೆಯಹುದೊ ಆ ಬ್ರಹ್ಮ ವಿದ್ಯೆಯಲ್ಲಿ ಯಥಾರ್ಥವಾಗಿ ಹೇಳಿದನು.

ಬ್ರಹ್ಮ ವಿದ್ಯೆಗೆ ಲಿಂಗಧಾರಣವು ಬೇಕೆಂದು ಉಪನಿಷತ್ಸಿದ್ಧಾಂತವಾಗಿದ್ದರೆ ಶೌನಕನಿಗೆ ಲಿಂಗಧಾರಣವು ಬರುತ್ತಿದ್ದಿತು. ಅದು ಬಂದಿಲ್ಲ. ಹಿಂದಿನ ಸಂದರ್ಭದಿಂದ ಶೌನಕನು ಅಗ್ನಿ ಹೋತ್ರಾದಿಗಳನ್ನನುಷ್ಠಿಸಿ ಶಮಾನ್ವಿತನಾದವನೆಂದು ತೋರುವುದು. ಅವನಿಗೆ ಲಿಂಗಧಾರಣವಿದ್ದಿಲ್ಲ. ಅಂಗಿರನು ಅವನಿಗೆ ಲಿಂಗಧಾರಣಂಗೆಯ್ಯಲಿಲ್ಲ.

## ಮತ್ತೊಂದು ಮಾತು.

ಬ್ರಹ್ಮಜಿಜ್ಞಾಸುವು ಬಳಿಸಾರ್ವಗುರುವಿನ ಲಕ್ಷಣವು ಶ್ರೋತ್ರಿಯನೆಂದೂ ಬ್ರಹ್ಮನಿಷ್ಠನೆಂದೂ ಬಂದಿದೆ. ಲಿಂಗವನ್ನು ಧರಿಸಿದವನೆಂದೂ ಲಿಂಗಪೂಜಾ ನಿಷ್ಠನೆಂದೂ ಬಂದಿಲ್ಲ. ಇವೆರಡು ಪದಗಳಲ್ಲಿ ಲಿಂಗಧಾರಣವನುಳ್ಳವನೆಂದಾಗಲಿ ಇತರವಾವುದೊಂದು ವೀರಶೈವ ಲಕ್ಷಣವನುಳ್ಳವನೆಂದಾಗಲಿ ಭಾವವು ತೋರುವದೋ ? ಇಲ್ಲ. ಶಿವೈಕಾಹಿತ ಚಿತ್ತಶ್ಚ ಶಿವಲಿಂಗಾರ್ಚನಾಪರಃ॥ ಸೂಕ್ಷ್ಮಾಗಮ ೫-೮ ಎಂಬಿದು ಪ್ರತ್ಯುದಾಹರಣವು

ಶ್ರೋತ್ರೀಯ ಶಬ್ದವು « **ಶ್ರೋತ್ರಿಯ ಶ್ಛಂದೋಽಧೀತೇ**» (೫-೨-೮೪) ಪಾಣಿನಿ ಸೂತ್ರದಿಂದಲೂ "ಶ್ರೋತ್ರಿಯಶ್ಛಂದಸಃ ಸಮೌ" ಎಂಬ ಅಮರ ವಾಕ್ಯದಿಂದಲು ವೇದಾಧ್ಯಯನ ಸಂಪನ್ನನೆಂಬರ್ಥದಲ್ಲಿ ವರ್ತಿಪುದು. ಬ್ರಹ್ಮನಿಷ್ಠ ಶಬ್ದದಲ್ಲಿ ಲಿಂಗನಿಷ್ಠನೆಂಬ ಅರ್ಥವಹುದೆಂದು ಆಚಾರ್ಯ ಪಕ್ಷಪಾತಿಗಳು ವಾದಿಸಬಹುದು. ಪ್ರಸ್ತುತ ವಿಮರ್ಶದ ಪ್ರಾರಂಭದಲ್ಲಿ ಬ್ರಹ್ಮಲಿಂಗ ಪದ್ಯಗಳ ವಿಷಯದಲ್ಲಿ ನಾವು ಬರೆದುದನ್ನು ಓದುಗರು ನೋಡಲೆಂದು ಬಯಸುತ್ತೇವೆ.

ಆದುದರಿಂದ ಶ್ರೀ ಪಂಡಿತಾಚಾರ್ಯರ ಮತಕ್ಕೆ ಮುಂಡಕದಲ್ಲಿ ಇಂಬಿಲ್ಲ.

## ಇಲ್ಲೊಂದು ಆಶಾಂಕುರವು.

ಮೂರನೆಯ ಮುಂಡಕದ ನಾಲ್ಕನೆಯ ಮಂತ್ರವಿದು. ನಾಯ ಮಾತ್ಮಾ ಬಲಹೀನೇನ ಲಭ್ಯೋನಚ ಪ್ರಮಾದಾತ್ತಪಸೋವಾಪ್ಯಲಿಂ ಗಾತ್ ಏತ್ಯೈರುಪಾಯೈರ್ಯತತೇಯಸ್ತು ವಿದ್ವಾಂಸ್ತಸ್ಯೈಷ ಆತ್ಮಾ ವಿಶತೇ ಬ್ರಹ್ಮಧಾಮ.

ಇದರಲ್ಲಿ ಅಲಿಂಗವಾದ ತಪಸ್ಸಿನಿಂದ ಆತ್ಮನು ಲಭ್ಯನಲ್ಲೆನ್ನುವು ದರಿಂದ ಲಿಂಗಧಾರಣವು ಆತ್ಮಪ್ರಾಪ್ತಿಗೆ ಬೇಕಾದುದೆಂದು ಹಸನಾಗಿ ಕಾಣುತ್ತಿದೆ ಎಂದು ಭಾಷ್ಯ ಪಕ್ಷಪಾತಿಗಳು ನಮ್ಮನ್ನು ಎದುರಿಸಬ ಹುದು. ಇದವರ ಮನೋರಥಮಾತ್ರವು ನೋಡಿರಿ. ಈ ಆತ್ಮನು ಬಲಹೀನನಿಂದ (ಆತ್ಮ ನಿಷ್ಠೆಯಲ್ಲಿ ಬಲವು) ದೊರಕಿಸಪಡನು. ಎಚ್ಚರ ಗೇಡಿತನದಿಂದ ದೊರಕನು. ಲಿಂಗವಿಲ್ಲದ ತಪಸ್ಸಿನಿಂದಲು ದೊರಕನು. ಬಲದಿಂದಲು ಎಚ್ಚರದಿಂದಲು ಲಿಂಗ ರಹಿತವಾದ ತಪಸ್ಸಿನಿಂದಲು ಈ ಎಲ್ಲ ಉಪಾಯಗಳಿಂದ ಆವ ವಿದ್ವಾಂಸನುಯತ್ನಿಸುವನೊ ಅವನ ಆತ್ಮನು ಪ್ರಕಾಶಮಯವಾದ ಬ್ರಹ್ಮವನು ಸೇರುವನು. ಇಂತಿದು ಮಂತ್ರಾರ್ಥವು. ಚಾತಕವು ಮಳೆವನಿಗಳನ್ನು ಮುಗಿಲಿಂದ ನೋಡುವಂತೆ ವೇದದಲ್ಲಿ ಉಪನಿಷತ್ತಿನಲ್ಲಿ ಲಿಂಗಶಬ್ದವನ್ನು ದಾರಿ ನೋಡುವ ಆಕ್ಕರತೆಗಾರರು ನಮ್ಮನ್ನು ಈ ಮಂತ್ರದಿಂದ ಎದುರಿಸುವಲ್ಲಿ ಸಂಶಯವಿಲ್ಲ. ನಾವೀಗ ಇದನ್ನು ತೆರೆದು ವಿವರಿಸುವಣ.

ಈ ಮಂತ್ರದಲ್ಲಿ ಲಿಂಗವಿಲ್ಲದ ತಪಸ್ಸಿನಿಂದ ಆತ್ಮನು ದೊರೆಯ ನೆಂದು ಹೇಳುವುದರಿಂದ ಕಂಠದಿಂದಲೆ ಉಪನಿಷತ್ತು ಲಿಂಗಧಾರಣದ ಅವಶ್ಯಕತೆಯಲ್ಲಿ ಹೇಳುವುದಾಗಿ ಶೌನಕನಿಗೆ ಲಿಂಗಧಾರಣವಾದ ಬಳಿಕ ಅಂಗಿರನು ಬ್ರಹ್ಮೋಪದೇಶವ ಮಾಡಿದನೆನಬೇಕು. ಇಂತಿದು ಭಾಷ್ಯಾ ಭಿಮಾನಿಗಳ ಪೂರ್ವವಾದವು.

ಈ ವಾದಕ್ಕೆ ಭಾಷ್ಯಪಂಕ್ತಿಯು ಅನುಕೂಲವಾಗಿಲ್ಲ. ಯತ್ಪೂರ್ವ ಭಾವಿತ್ವಂ ನಿಯಮನಿಯತ ಪ್ರಯೋಜಕತಯಾ ಮುಮುಕ್ಷೂಣಾಂ ಮಲತ್ರಯ ವಿಧ್ವಂಸನೇ ವಿಧೀಯತೇ ತತ್ಪೂರ್ವಭಾವಿತ್ವಂ ಬ್ರಹ್ಮವಿಚಾರ ಶಾಸ್ತ್ರಸ್ಯೇತಿ ನಿರ್ಣೀಯತೇ ಅತೋಸ್ಯ ವಿಷಯಃಶ್ರೂಯತೇ ತೈತ್ತಿರೀಯ ಶಾಖಾಯಾಂ ಬ್ರಹ್ಮಮೇಧಾಕಾಮಸ್ಯ ತತ್ಪ್ರಾಪ್ತಿಸಾಧನಂ ಕಿಮಿತ್ಯಾಕಾಂ

ಕ್ಷಾಯಾಮಾಹ-ಯಶ್ಛಂದಸಾಮಿತಿ ಪುಟ ೭ ಈ ವಾಕ್ಯದಿಂದ ಬ್ರಹ್ಮಜಿಜ್ಞಾಸುವಿಗೆ ಬೇಕಾದ ಮೇಧೆಯ ಪರಿಪೋಷಕಕ್ಕಾಗಿ ಲಿಂಗಧಾರಣವು ವಿಹಿತವಾಗಿದೆಯೆಂದು ಭಾಷ್ಯಾಭಿಪ್ರಾಯವು.

ಮೂರನೆಯ ಮುಂಡಕದ ಮಂತ್ರವಿದು: – ನಾಯಮಾತ್ಮಾ ಪ್ರವಚನೇನ ಲಭ್ಯೋನಮೇಧಯಾನ ಬಹುನಾಶ್ರುತೇನ ಯಮೇವೈಷವೃಣುತೇತೇನ ಲಭ್ಯಸ್ತಸ್ಯೈಷ ಆತ್ಮಾ ವಿವೃಣುತೇ ತನುಸ್ವಾಮ್ –

ಈ ಆತ್ಮನು ಪ್ರವಚನದಿಂದ (ವೇದಶಾಸ್ತ್ರಾಧ್ಯಯನದಿಂದ) ದೊರೆವನಲ್ಲ. ಮೇಧೆಯಿಂದ ದೊರೆವನಲ್ಲ. ವಿಪುಲ ಶ್ರವಣದಿಂದ ದೊರೆವನಲ್ಲ. ಆವನನ್ನು ಈ ಆತ್ಮನು ಆರಿಸಿಕೊಳ್ವನೊ ಅವನಿಗೆಯೆ ಇವನು ದೊರೆವನು. ಅವನಿಗೆ ಈ ಆತ್ಮನು ತನ್ನ ಪೂರ್ಣಸ್ವರೂಪವನ್ನು ಪ್ರಕಟಿಸುವನು.

ಈ ಮಂತ್ರದಲ್ಲಿ ಮೇಧೆಯು ಮುಂತಾದವುಗಳು ಆತ್ಮನು ಸಾಧಕನನ್ನು ಅನುಗ್ರಹಿಸದೆ ಬ್ರಹ್ಮಾತ್ಮ ಜ್ಞಾನಕ್ಕೆ ಸಾಧನವಲ್ಲವೆಂದು ಬಂದಿದೆ. ಶ್ರೀಪಂಡಿತಾಚಾರ್ಯನ ಮತದಿಂದ ಲಿಂಗಧಾರಣವು ಮೇಧೆಗಾಗಿ ವಿಹಿತವಾಗಿದೆ. ಅದು ಅಹುದಾಗಿದ್ದರೆ ಈ ಮಂತ್ರದಲ್ಲಿ "ನಾಯಮಾತ್ಮಾ ಅಲಿಂಗಯಾ ಮೇಧಯಾ ಲಭ್ಯಃ" ಅಥವಾ "ನಾಯಮಾತ್ಮಾ ಅಲಿಂಗೇನ ಮೇಧಯಾ ಲಭ್ಯಃ" ಆತ್ಮನು ಲಿಂಗವಿಲ್ಲದ ಮೇಧೆಯಿಂದ ಅಥವಾ ಲಿಂಗವಿಲ್ಲದವನಿಂದ ಮೇಧೆಯಿಂದ ದೊರೆಯನು ಎಂದು ಬರುತ್ತಿತ್ತು.

ಭಾಷ್ಯಾಭಿಮಾನಿಗಳು ಆದರೇನಾಯ್ತು! ಲಿಂಗವಿಲ್ಲದ ತಪಸ್ಸಿನಿಂದ ಆತ್ಮನು ದೊರೆಯನೆಂಬುದು ಲಿಂಗಧಾರಣವಿಧಾಯಕವಾಗಿದೆ. ಮುಂಡಕವು ತಪಸ್ಸಿಗೆ ಲಿಂಗವನ್ನು ವಿಧಿಸಿದಪುದು ತೈತ್ತಿರೀಯವು ಮೇಧಾಪ್ರಾಪ್ತಿಗೆ ವಿಧಿಸಿದಪುದು ಇಂತಾಗಿ ಮುಂಡಕವು ತೈತ್ತಿರೀಯಕ್ಕೆ ಬಲವಾಗಿದೆ ಎನ್ನಬಹುದು.

## ತಪಸೋಽಪ್ಯ ಲಿಂಗಾದ್ವಿಚಾರವು

ಹಾಗಾದರೆ ತಪಸ್ಸಿನ ಸಿದ್ಧಿಗೆ ಲಿಂಗವು ವಿದಿಸಲ್ಪಡೆವುದರಿಂದ ಲಿಂಗಧಾರಣವು ತಪಸ್ಸಿಗೆ ಅಂಗಭೂತವಾಯ್ತು. ವೀರಶೈವ ಧರ್ಮವು

ಲಿಂಗ ಪ್ರಾಪ್ತಿಗೆ ತಪಸ್ಸಿನಲ್ಲಿ ಹೇಳುತ್ತಿದೆ. ಆ ಲಿಂಗವೆ ವೇದಾಂತಗಳು ಉದ್ಘೋಷಿಸುವ ಬ್ರಹ್ಮವೆನಿಸುತ್ತಿದೆ. "ಯಲ್ಲಿಂಗಮಪರಿಚ್ಛೇದ್ಯಮನಾದಿ ಮಧ್ಯಾಂತವರ್ಜಿತಂ ಪರಾನಂದಂ ಚಿದಾಕಾರಂ ಪುರುಷಂ ಕೃಷ್ಣಪಿಂಗಲಂ। ಹಿರಣ್ಯಪತಿಮೀಶಾನಂ ಪಶೂನಾಂ ಪತಿಮೀಶ್ವರಂ। ಊರ್ಧ್ವರೇತ ಮುಮಾಕಾಂತಂ ಸರ್ವವಿದ್ಯಾಧಿನಾಯಕಂ॥ ಬ್ರಹ್ಮಾದಿಪತಿ ಮದ್ವಂದ್ವಂ ನೀಲಕಂಠಂ ಸದಾಶಿವಂ। ವಿಶ್ವಾಧಿಕಂ ಮಹಾದೇವಂ ಜಗದ್ವ್ಯಾಪಕ ಮಚ್ಯುತಂ॥ ಪರಾತ್ಪರತರಂ ತತ್ವಮಕ್ಷರಂ ಸದಸಚ್ಚಯತ್। ಅಪ್ರತ ರ್ಕ್ಯಮಮೇಯಂಚ ವ್ಯೋಮಕೇಶಂ ದುರಾಸದಂ॥ ಭರ್ಗೋವರೇಣ್ಯಂ ಯದ್ರೂಪಂ ತಲ್ಲಿಂಗಮಿತಿಕೀರ್ತಿತಂ। ತಸ್ಮಾಲ್ಲಿಂಗಂ ಪರಂ ಬ್ರಹ್ಮ ಸದಾ ಧ್ಯಾಯಂತಿಯೋಗಿನಃ॥" ಸೂಕ್ಷ್ಮಾಗಮ ಪಟಲ ೬ ಶ್ಲೋಕ ೧೯-೨೩

ಶ್ಲೋಕಗಳು ಸುಬೋಧವಿಹವಾಗಿ ಕನ್ನಡಿಸಿಲ್ಲ. ಶ್ರೀಪಂಡಿತಾ ಚಾರ್ಯರ ಭಾಷ್ಯವು ಉಪನಿಷದ್ವಿಚಾರಕ್ಕೆ ಮೇಧೆಯನ್ನು (ಗ್ರಂಥಧಾರಣ ಶಕ್ತಿ) ಮೇಧೆಗೆ ಲಿಂಗಧಾರಣವನ್ನು ಹೇಳಿ ಉಪನಿಷದ್ವಿಚಾರದಿಂದ ಬ್ರಹ್ಮಜ್ಞಾನ ಮುಂಡಕೋಪನಿಷತ್ತಿನಿಂದ ಲಿಂಗಧಾರಣವ ಸಾಧಿಸಿದರೆ ಬ್ರಹ್ಮಜ್ಞಾನಕ್ಕೆ ತಪಸ್ಸು ಏನು ಹೇಳುವುದು. ತಪಃಸಿದ್ಧಿಗೆ ಲಿಂಗಧಾರಣವು ಬೇಕು. ಅಂತಾಗಿ ಲಿಂಗಧಾರಣವು ಈ ಮತದ್ವಯದಿಂದ ಬ್ರಹ್ಮ ಜ್ಞಾನಕ್ಕೆ ಸಾಧನವಲ್ಲದೆ ಲಿಂಗಪ್ರಾಪ್ತಿಯೆ ಪರಮ ಸಾಧ್ಯವಾಗಲಿಲ್ಲ. ಬ್ರಹ್ಮಜ್ಞಾನವು ಪರಮಸಾಧ್ಯವು.

ಮತ್ತೇನಂದರೆ ಮುಂಡಕದಲ್ಲಿ ಆಗಲಿ ತೈತ್ತಿರೀಯದಲ್ಲಾಗಲಿ ಲಿಂಗವು ಪರಬ್ರಹ್ಮರೂಪವಾದುದೆಂದು ಹೇಳಿಲ್ಲ. ಆದುದರಿಂದ ಮುಂಡಕದಲ್ಲಿಯ ಸಲಿಂಗಕ ತಪಸ್ಸು ಇಷ್ಟಲಿಂಗ ಧಾರಣಪರವಲ್ಲ. ಹಾಗೆಂದು ಹಿಡಿದರು ಇಷ್ಟಲಿಂಗವು ಪರಬ್ರಹ್ಮರೂಪವಲ್ಲಾಗಿ ಅದು ವೀರಶೈವ ಸಿದ್ಧಾಂತವಲ್ಲ.

ಇಷ್ಟಾದರು ಉಪನಿಷದ್ವಾಕ್ಯಲಾಲಸರು ಮುಂಡಕವು ವಿಧಿಸುವ ಸಲಿಂಗಕ ತಪಸ್ಸು ಇಷ್ಟಲಿಂಗಪರವೆಂದರೆ ಆ ಉಪನಿಷತ್ತೆ ಹಾಗಲ್ಲವೆನ್ನುವುದಕ್ಕೆ ಸಾಕ್ಷಿಯಾಗಿದೆ. ಈ ಉಪನಿಷದ್ವಿದ್ಯಾಧಿಕಾರವಿಂತು. ತದೇತದೃಚಾಭ್ಯುಕ್ತಂ ಕ್ರಿಯಾವಂತಃ ಶ್ರೋತ್ರಿಯಾ ಬ್ರಹ್ಮನಿಷ್ಠಾಃ ಸ್ವಯಂ ಜುಹ್ವತ ಏಕರ್ಷಿಂ ಶ್ರದ್ಧಯಂತಃ। ತೇಷಾಮೇವೈತಾಂ ಬ್ರಹ್ಮವಿದ್ಯಾಂ ವದೇತ ಶಿರೋವ್ರತಂ ವಿಧಿವದ್ಯೈಸ್ತು ಚೀರ್ಣಂ ॥

ಪ್ರಸಿದ್ಧವಾದ ಈ ವಿದ್ಯಾ ಸಂಪ್ರದಾಯವನು ಋಚೆಯು ಪ್ರಕಾಶಿ ಪುದೆಂವರೆ ಆವ ಶ್ರೋತ್ರಿಯರು ಕ್ರಿಯಾಸಂಪನ್ನತೆಯಿಂದ ಬ್ರಹ್ಮನಿಷ್ಠರಾಗಿ (ಏಕರ್ಷಿಂ) ಅಗ್ನಿಯನ್ನು (ಅಗ್ನಿಯಲ್ಲಿ) ಹವಿಸ್ಸನ್ನಿಡುವರೋ ಮತ್ತು ಶ್ರದ್ಧೆ ಯನ್ನುಳ್ಳಹರಾಗಿಹರೋ ಶಿರೋವ್ರತ (ಶಿರಸ್ಸಿನಲ್ಲಿ ಅಗ್ನಿಧಾರಣ ವ್ರತವು) ವನ್ನು ಯಥಾವಿಧಿಯಿಂದಾಚರಿಸಿದ ಅಂತಹ ಕ್ರಿಯಾಸಂಪನ್ನಶ್ರೋತ್ರಿ ಯರಿಗೆಯೆ ಈ ಬ್ರಹ್ಮವಿದ್ಯೆಯನ್ನು ತಿಳಿಸತಕ್ಕದ್ದು.

ಅಗ್ನಿಗಾಹುತಿಯನಿಕ್ಕುವ ಯಾಗಗಳೆ ಸನ್ಯಾಸಯೋಗದಿಂದ ಬ್ರಹ್ಮ ವಿದ್ಯೆಗೆ ಸಾಧನವೆಂದು ಮಂತ್ರವು ತಾನು ಹೇಳದ ಇತರ ಸಾಧನಗಳಲ್ಲಿ ನಿರಾಕರಿಪುದು. ತೇಷಾಮೇವ ಅವರಿಗೆಯೆ ಎಂಬ ಪದಗಳಿಂದ ಈ ನಿರಾಕರಣವು ಸ್ಪಷ್ಟವದೆ. ಆದುದರಿಂದ ವೀರಶೈವಸ್ಕಭಿಮತವಹ ಇಷ್ಟಲಿಂಗಧಾರಣವು ಮುಂಡಕಶ್ರುತಿಪ್ರತಿಷಿದ್ಧವು.

ಹಾಗಾದರೆ ಅಲಿಂಗಾತ್ ಪದದ ಅರ್ಥವೇನು? ಇದಕ್ಕಾಗಿ ಮುಂಡಕೋಪನಿಷತ್ತಿನ ಪೂರ್ವಾಪರಾನ್ವಯದಲ್ಲಿ ನೋಡತಕ್ಕುದು. ಬ್ರಹ್ಮಸಾಕ್ಷಾತ್ಕಾರಕ್ಕೆ ಶುದ್ಧಸತ್ವವು ಆದಕ್ಕಾಗಿ ಸನ್ಯಾಸಯೋಗವು ವಿಹಿ ತವಾಗಿದೆ. "ವೇದಾಂತ ವಿಜ್ಞಾನ ಸುನಿಶ್ಚಿತಾರ್ಥಾಃ ಸನ್ಯಾಸಯೋಗಾ ದ್ಯತಯಃ ಶುದ್ಧ ಸತ್ವಾಃ ತೇ ಬ್ರಹ್ಮಲೋಕೇಷು ಪರಾಂತಕಾಲೇ ಪರಾ ಮೃತಾಃ ಪರಿಮುಚ್ಯಂತಿ ಸರ್ವೆ" ಮುಂಡಕ ೩ ಖಂಡ ೨ ಮಂತ್ರ ೬ ಉಪನಿಷತ್ತುಗಳ ವಿಶೇಷ ಜ್ಞಾನದಿಂದ ಪರಮಾರ್ಥ ನಿಶ್ಚಯುವನ್ನುಳ ವರಹ ಸನ್ಯಾಸ ಯೋಗದಿಂದ ಶುದ್ಧಾಂತಃಕರಣರಹ ಯತ್ನಪರರು ಎಲ್ಲರು ದೇಹಾವಸಾನಕಾಲದಲ್ಲಿ ಬ್ರಹ್ಮದಲ್ಲಿ ಮರಣವ ಕಳೆದವರಾಗಿ ಎಲ್ಲ ಬಂಧಗಳಿಂದ ಬಿಡುಗಡೆಯು ಹೊಂದುವರು ಎಂದಿದು ಮಂತ್ರಾರ್ಥವು.

ನ ಚಕ್ಷುಷಾ ಗೃಹ್ಯತೇನಾಪಿವಾಚಾ ನಾನ್ಯೈರ್ದೇವೈಸ್ತಪಸಾಕರ್ಮ ಣಾ ವಾ ಜ್ಞಾನಪ್ರಸಾದೇನ ವಿಶುದ್ಧ ಸತ್ತ್ವಸ್ತತಸ್ತುತಂಪಶ್ಯತೇನಿಷ್ಕಲಂ ಧ್ಯಾಯಮಾನಃ ॥ ಮು. ೩ ಖ. ೧ ಶ್ಲೋಕ ೮ ಈ ಬ್ರಹ್ಮವು ಕಣ್ಣಿನಿಂದ ಕಾಣದು. ನುಡಿಯಿಂದ ನುಡಿಯಲಾಗದು. ಬೇರಾವ ಇಂದ್ರಿಯಗಳಿಂ ದಲು ತಪಸ್ಸಿನಿಂದಲು ಕರ್ಮದಿಂದಲು ಗೋಚರಿಸದು. ಜ್ಞಾನವು ನಿರ್ಮಲವಾಗಿ ವಿಶುದ್ಧಾಂತಃಕರಣದಿಂದ ಧ್ಯಾನಶೀಲನು ನಿಷ್ಕಲಬ್ರಹ್ಮ

ವನ್ನು ಕಾಂಬನು. ಇಲ್ಲಿಯೂ ವಿಶುದ್ಧ ಸತ್ವವು ಬ್ರಹ್ಮದರ್ಶನಕ್ಕೆ ವಿಹಿತವಾಗಿದೆ.

ಬರಿಯ ತಪಸ್ಸು ಸಾಕ್ಷಾತ್ಕಾರಕ್ಕೆ ಕಾರಣವಾಗದು. ಆದರೆ ಸಲಿಂಗವಾದ (ಲಿಂಗದಿಂದೊಡಗೂಡಿದ) ತಪಸ್ಸು ಮುಂತಾದವುಗಳು ಬ್ರಹ್ಮದರ್ಶನಕ್ಕೆ ಹೇತುವಾಗಿವೆ.—(ಏತೈರುಪಾಯೈರ್ಯತತೇಯಸ್ತು ವಿದ್ವಾಂಸ್ತಸ್ಯೈಷ ಆತ್ಮಾಶತೇ ಬ್ರಹ್ಮಧಾಮ) ಈ ಎಲ್ಲ ಉಪಾಯಗಳಿಂದ ಆವ ವಿದ್ವಾಂಸನು ಯತ್ನ ಪಡುವನೊ ಅವನ ಈ ಆತ್ಮನು ಬ್ರಹ್ಮತೇಜವನ್ನು ಹೊಂದುವುದು ಎಂದು ಇಹುದನ್ನು ನೋಡಿರಿ. ತಪಸೆಂದರೆ ಶರೀರ ವಚನ ಮನಗಳನ್ನು ಬ್ರಹ್ಮಲಾಭಕ್ಕಾಗಿ ನುರಿಸುವುದು. ಈ ನುರಿತಕ್ಕೆ ತಾನು ಮಾಡುವ ಕರ್ಮಫಲಗಳನ್ನು ಬಿಡುವುದೆಂಬ ಸನ್ಯಾಸವು ಬೇಕು. ಲಿಂಗಶಬ್ದಕ್ಕೆ ಸನ್ಯಾಸವೆಂಬರ್ಥವುಂಟು. ಶ್ರೀಶಂಕರಾಚಾರ್ಯನು ಅಲಿಂಗಾತ್ ಸನ್ಯಾಸರಹಿತಾತ್ ಎಂದು ಹೇಳುವನು. ಆ ಆಚಾರ್ಯನು ಸನ್ಯಾಸವೆಂದರೆ ಸರ್ವ ಕರ್ಮತ್ಯಾಗವು ಎನ್ನುವನು. ಮುಂಡಕದ ಸಮಗ್ರ ಪರ್ಯಾಲೋಚನದಿಂದ ಸನ್ಯಾಸವೆಂದರೆ ಕರ್ಮ ಸನ್ಯಾಸವಲ್ಲ. ಕರ್ಮ ಫಲ ತ್ಯಾಗವೆಂದು ನಮಗಭಿಮತವು. ಅಂದರೆ "ತಸ್ಯಫಲಾಭಿಸಂಧಿರಹಿತಸ್ಯ ಪಾಪಾಪನಯನರೂಪ ಚಿತ್ತಶುದ್ಧಿ ಸಂಪಾದನದ್ವಾರಾ ಬೋಧಹೇತುತ್ವಂ" ಯಾಗಾದಿಯು ಫಲಾಭಿಲಾಷೆಯಿಲ್ಲದೆ ಮಾಡಲ್ಪಟ್ಟುದಾಗಿ ಪಾಪವು ದೂರಾಗಿ ಚಿತ್ತ ಶುದ್ಧಿಯಿಂದ ಯಾಗಾದಿಕವು ಬೋಧಹೇತುವಾಗಿದೆ ಎಂಬ ಶ್ರೀಕಂಠಮತವು ಮುಂಡಕಸಮ್ಮತವಾಗಿದೆ. ಇಂತಾಗಿ ದೇವಧಾರಣ ವಾಕ್ಯದಿಂದ ಲಿಂಗಧಾರಣವು ವಿಹಿತವಾಗಿಲ್ಲ.

ಮುಂದಿನ ಲೇಖಗಳು ಮಲತ್ರಯ ನಿವಾರಣವಾದ ತ್ರಿವಿಧ ದೀಕ್ಷಾ ಸ್ವಭಾವವನ್ನು ತೋರಿಸಿ ಅದು ವಿಧಿ ಪ್ರಾಪ್ತವಲ್ಲ, ಕೇವಲ ಶಿವಾನುಗ್ರಹ ಪ್ರಾಪ್ತವು, ಮಲಾಪಕರ್ಷದಿಂದ ಒದಗುವ ಶುದ್ಧಿಯಿಂದ ಆತ್ಮನು ಆವ ವಿಧಿಗೂ ಒಳಗಾಗದೆ ಆತ್ಮೇಕ್ಷಣರೂಪದಿಂದ ಶಿವಧರ್ಮ ಶಿವಜ್ಞಾನಗಳನ್ನು ಪಡೆವನು, ದೀಕ್ಷಾಧಿಕಾರವು ಶಿವಾನುಗ್ರಹಮಾತ್ರ ಲಭ್ಯವಾದುದರಿಂದ ಅದನ್ನು ಪೊಂದಿದವರು ವರ್ಣಾತೀತರು ಅತಿವರ್ಣಿಗಳು ಕೃತಕೃತ್ಯರು ಎಂಬಂತಿವನೆಲ್ಲ ತೋರಿಸುವೆವು.

---

# ಮೃತಸ್ವಪ್ನ.

(ಶ್ರೀ ಈಶ್ವರ ಸಣಕಲ್ಲ ಬೆಳಗಾವ.)

ನಾನಿಲ್ಲಿ ನಿಂತಿರುವೆ, ಈ ಮಸಣಗಾಡಿನಲಿ,
ನನ್ನ ಮೃತಸ್ವಪ್ನದಾ ಅಂತ್ಯಕ್ರಿಯೆಗಾಗಿಂದು!
ಉದುರಿ ಬಿದ್ದಿಹ ಆಸೆ-ತರಗೆಲೆಗಳನು ಗೂಡಿ-
ಸುತ ಹೊದ್ದಿಸುವೆನಿಲ್ಲಿ! ಕಳಚಿ ಮಣ್ಣಾಗುತಿಹ
ಭಾವ-ಸುಮಗಳನೆಲ್ಲ ಹರಡಿ ಮಲಗಿಪೆನೆನ್ನ
ಮೃತ-ಸ್ವರ್ಣ-ಸ್ವಪ್ನವನು! ಒಡೆದು ಹೋದೆಯು? ಅಯ್ಯೊ!
ಸ್ವರ್ಗೀಯ-ಸ್ವಪ್ನವೇ! ಯಾವ **ಹೂಬಳ್ಳಿ**ಯೊಳ-
ಗಿನ ಸ್ವಾರ್ಥ-ಭೃಂಗವದು ನಿನ್ನ ಸತ್ವವ ಹೀರಿ,
ಹಾರಿ ಹೋಯಿತೊ! ಅಯ್ಯೊ! ಯಾವ ಉನ್ಮತ್ತ ಹ-
ಸ್ತಿಯು ನಿನ್ನ, ಕಾಲ್ಕೆಳಗೆ ಮೆಟ್ಟಿ ನಡೆಯಿತೊ! ಅಯ್ಯೊ!
ವಿಕಸಿತ-ಸಹಸ್ರ-ದಳ-ಕಮನೀಯ-ಕಮಲವೇ,
ರಸಪೂರ್ಣ-ಕಾಸಾರ-ಮಧ್ಯದಲಿ ರಾಜಿಸಿದ
ಓ ಸ್ವಪ್ನ-ಪದ್ಮವೇ, ಋಷಿವರರು, ಯೋಗಿಗಳು,
ಸಾಧುಗಳು, ಶರಣಪುಂಗವರಮರರವತಾರಿ-
ಗಳು, ನಿನ್ನ ದಳದಳದಿ, ದಳದಳದಿ ಪವಡಿಸಿದ-
ರೆಂತು ಆ ಮುಕ್ತಿ-ವಧು-ಪಾನದಾನಂದ-ನಿ-
ದ್ರೆಯಲಿ! ಹಾ! ಗೀರ್ವಾಣ ಕನ್ನಿಕೆಯರಿಂದ್ರ-ಚಾ-
ಪದ ಪ್ರಭೆಗೆ ಮೈಯೊಡ್ಡಿ, ಚಂದ್ರಿಕೆಯ ಹಾಸದಲಿ,
ಅತ್ತಿತ್ತ ಒಲೆದೊಲೆದು, ಮಣಿಮಣಿದು ಎಂತು ಕುಣಿ-
ದಾಡಿದರು ಕಲ್ಪತರುಸುಮಗಳಲಿ! ಕಾಲ-ದೇ-
ಶವ ಮೀರ್ದ ಅಮೃತ-ಸಂಗೀತವನು ಎಂತು ಹರಿ-
ಸಿದರಾಹ! ತಮ್ಮ ಇನಿಗೊರಲಿಂದೆ! ಶಶಿ-ಸೂರ್ಯ-
ತಾಳದಲಿ, ಆ ವಾಣಿ ಬಾಜಿಸಿದಳೆಂತಮರ-
ವೀಣೆಯನು! ಅದರ ಶೃತಿಯಲಿಯುವಳ ನವಿಲೆಂತು
ಗರಿಗೆದರಿ ನರ್ತಿಸಿತು? ಪಾಡಿದುದು ಪಕ್ಷಿಸಂ-
ಕುಲವೆಂತು! ನಿನ್ನ ಸುತ್ತಿಹ ಕೋಟಿ-ಕೋಟಿ-ನ-

ಕ್ಷತ್ರ-ಗಣ-ಮಣಿ ರಶ್ಮಿ-ಮಾಲೆಯಲಿ, ನಿನ್ನ ದಿ-
ವ್ಯತೆಯೆಂತು ಹರಡಿದುದು ನಭನಭಕೆ! ನಿನ್ನ ವೈ-
ಭವಕದೋ, ಈರೇಳು ಭುವನಗಳು ಎಂತು ತಲೆ-
ವಾಗಿದವು ಸುಮ್ಮಾನ-ಮೋನದಲಿ! ನಿನ್ನ ಸತ್ವದ ಕಳೆಯು
ಗಾಳಿಗುದುರೆಯನೇರಿ ತಾನೆಂತು ಚಿಮ್ಮಿದುದು
ದೆಸೆದೆಸೆಗೆ! ಭಾವಸುಮಗಳ ಮುಡಿದು ಕಲ್ಪನಾ-
ಸುಂದರಿಯರೆಂತಾಡಿದರು ನಿನ್ನ ವೃಂತವನು
ಬಳಸುತಲಿ! ನಿನ್ನಿನಿಸು ಕಂಪನೆಗೆ ಕಲ್ಪ-ಕ-
ಲ್ಪಗಳೆಂತು ಮೂಡಿ ಮುಳುಗಿದವಲ್ಲಿ! ಬ್ರಹ್ಮ-ಪ-
ಕ್ಷಿಯು ಮೇಲೆ ಗರಿಹರಡಿ, ಕೊಡೆಪಿಡಿದು ಎಂತು ರಾ-
ಜಿಸಿತಲ್ಲಿ! ಉರಿವಿಸಿಲು ಬೆಳ್ದಿಂಗಳಿರುಳು ಶಾಂ-
ತಿಯ ಪ್ರಭೆಯು, ಪ್ರತಿಭೆ ಮಂಗಲದಾರತಿಯದಾಗು-
ತೆಸೆದಿರ್ದವೆಂತಲ್ಲಿ! ನಡುಕಟ್ಟಿ, ಕೈಮುಗಿದು,
ನಿತ್ಯದಾಸಿಯ ತೆರದಿ, ನಮ್ರಭಾವದಿ ಸಿರಿಯು
ನಿಂತಿರ್ದಳೆಂತಲ್ಲಿ! ನಿನ್ನ ನರುಗಂಪಿನು-
ಚ್ಛ್ವಸಿತ-ಗರ್ಭದಿ ಬೆಳದ ವಿಶ್ವದಂಚಿನ ವರೆಗು
ಸುಕೃತಿ-ಮೌನವದೆಂತು ತೇಲಿದುದು ರಾಜಹಂಸಗಳಂತೆ!

ಅಯ್ಯೊ! ಮರೆಯಾಯ್ತಯ್ಯೊ! ಆ ವೈಭ-
ವೋತ್ಕರವು! ಆ ಸ್ವಪ್ನ-ಭಂಗದೊಡನೆನ್ನ ಸ-
ರ್ವಸ್ವವೂ ಭಂಗವಾಯಿತು! ಅಯ್ಯೊ! ನನ್ನ ಸುಧ್-
ಧ್ಯೇಯಗಳು ಮಣ್ಣಾಗೂಡಿದವಯ್ಯೊ! ಪರಹಿತದ
ಸೋಗಿನಲಿ, ಸರ್ವಸ್ವವನು ಸುಲಿವ, ಓ **ಸ್ವಾರ್ಥ-**
**ಭೂತವೇ,** ಎಂಥನಿಷ್ಟುವ ಗೈವೆ ಎನ್ನ ಜೀ-
ವನ-ಪಥದಿ! ಹಾ! ಎನ್ನ ಧ್ಯೇಯರಂಗದೊಳೆಂಥ
ಪ್ರಳಯ-ನಾಟ್ಯವ ಗೈದೆ ಪಾಪವೇತಾಳವೇ!
ಎನ್ನ ಜೀವದ ಕನಸು ನನಸಾಗುವನಿತರೊಳೆ,
ಒಡೆದು ಹೋಯಿತು! ಅಯ್ಯೊ! ಘೋರಾಂಧಕಾರವದು
ಕಂಗೆಡಿಸುತಿಹುದೆನ್ನ! ಬೇಸಗೆಯ ನಡುವಗಲ
ಕೋಟಿ-ಸೂರ್ಯರ ಬಿಸಿಲ ತಾಪವದು, ಅಯ್ಯಯ್ಯೊ!

ಕ್ರೌರ್ಯ-ನೈಷ್ಠುರಗಳಲಿ ದಹಿಸುತಿಹುದೆನ್ನನ್ನು!
ಯುಗ ಯುಗ-ದುರಂತ-ದುಃಖವು ನಿರುತ ನರಳುವದು!
ಓ ಸ್ವರ್ಣಸ್ವಪ್ನವೇ, ಒಡೆದು ಹೋದೆಯ ಇಂದು!
ಓ ದಿವ್ಯ-ಸ್ವಪ್ನವೇ, ಕರಗಿ ಹೋದೆಯ ಇಂದು!
ಓ ಧ್ಯೇಯ-ಸ್ವಪ್ನವೇ, ಅಳಿಸಿ ಹೋದೆಯ ಇಂದು!
ಶೋಕ ನಿರ್ಭರಹೃದಯನಾಗಿಲ್ಲಿ ನಿಂತಿಹೆನು,
ಓ ಎನ್ನ ಮೃತಸ್ವಪ್ನವೇ, ನಿನಗೆ ಬಾಷ್ಪಾಂಜ-
ಲಿಯನರ್ಪಿಸಲ್ಕೆಂದು! ನಿನ್ನನ್ನು ಮುದ್ದಿಟ್ಟು,
ಕೊನೆವರೆಗು ತಿಮಿರ-ಗರ್ಭದಿ ಲೀನನಾಗಲ್ಕೆ,
ನಾನಿಲ್ಲಿ ಬಂದಿಹೆನು! ನಿನಗಿಂದು, ಕಡೆಯ ಸಲ,
ತಲೆವಾಗಿ, ನೈರಾಶ್ಯ-ಕೂಪದಲಿ ಬೀಳಲ್ಕೆ,
ಬಂದಿಹೆನು! ಜಗದ ಜಂಗುಳಿಯಲ್ಲಿ, ಹುಚ್ಚನೊಲು,
ಶೂನ್ಯನೊಲು, ತಿರುಗುವೆನು! ದುಃಖ-ಗೀತೆಯ ಪಾಡಿ-
ಜೀವನದ ದುಃಖವನು ನಾ ನುಂಗಿಕೊಳ್ಳುವೆನು!
ಮತ್ತೊರ್ವೆ ನೀನುದಿಸಿ ಬರುವನ್ನೆಗಂ ನಾನು
ಇಂತೆಯೇ ತಿರುಗುವೆನು! ತೇಲು ಬಿಡುವೆನು ಬಾಷ್ಪ-
ಧುನಿಯಲ್ಲಿ ನಿನ್ನ ಈ ದಿವ್ಯವಹ ಸ್ಮೃತಿಯನ್ನು!
ಆಶಾಮೃತಾರ್ಣವದಿ ತಲೆಯೆತ್ತಿ ಮತ್ತೊಮ್ಮೆ
ಬರುವಂದು ಬಾ ನೀನು! ಅನ್ನೆಗಂ, ಇದೆ ನಿನಗೆ
ಸ್ವಾರ್ಥ-ಹತ-ಸ್ವಪ್ನವೇ, ಚರಮಗೀತೆ!

# ಹರಿಹರದೇವನ ರಕ್ಷಾಶತಕ.

(ಲೇ:— ಶ್ರೀ ಎಸ್. ಶಿವಯೋಗಿ ಶಿವಯೋಗಮಂದಿರ, ಬನಾರಸ್.)

ಕವಿಯೆನ್ನಬೇಕು ಆ ರಕ್ಷಾಶತಕವನ್ನು ರಚಿಸಿದ ರಸಿಕಚಕ್ರಿಗೆ; ಭಕ್ತಿಭಾಂಡಾರಿಗೆ. ಆಹಾ! ಅದೆಂತಹ ಪ್ರತಿಭೆ; ಅದೆಂತಹ ಭಾವ, ಅದೆಂತಹ ಭಕ್ತಿಲಹರೀ. ಹರಿಹರದೇವನು ನಿಜವಾಗಿಯೂ ನರನಲ್ಲ; ಹರನು. ಇಲ್ಲದಿರೆ ಆತನಲಿ ಈ ಬಗೆಯು ಕಲೆಯಿರಲು, ಬೆಲೆ ಬರಲು ಸಾಧ್ಯವಿಲ್ಲ. ಓದಬೇಕು ಆತನ ಆ ರಕ್ಷಾಶತಕವನ್ನು; ಜೀವನದಲ್ಲಿ ಒಮ್ಮೆಯಾದರೂ ಕಾಣಬೇಕು ಆ ರಸದ ರುಚಿಯನ್ನು; ಅನುಭವಿಸಬೇಕು ಆ ಶತಕ ಪಠನದ ಪರಮಾನಂದವನ್ನು. ಅದಿಲ್ಲದಿರೆ ಅವನ ಹುಟ್ಟು ಹುಟ್ಟೇ ಅಲ್ಲ; ಬಾಳು ಬಾಳುವೆಯಲ್ಲ. ಶತಕವೆಲ್ಲವೂ ಪ್ರತಿಭೆಯ ನೆಲಗಟ್ಟಿನಿಂದ ಬಲವಾಗಿದೆ; ಬಂಧುರವಾಗಿದೆ. ಅದರ ಮೇಲೆ ಭಕುತಿ ದೇವತೆಯ ಭವ್ಯ ನರ್ತನವಿದೆ. ಅಡಿಗಡಿಗೂ ರಸವು ಒತ್ತಿ ಒಸರುತ್ತಿದೆ.

ಮೊದಲು ಶತಕವನ್ನು ಪ್ರಾರಂಭಿಸುವಲ್ಲಿ ಕವಿಯು ತನ್ನ ಇಷ್ಟಮೂರ್ತಿಯಾದ ಹಂಪೆಯ ವಿರೂಪಾಕ್ಷನ ಮಂಗಲವನ್ನಾಚರಿಸಿ ಆ ದೇವದೇವನ ಅಪ್ರತಿಮ-ಮೂರ್ತಿತ್ವವನ್ನೂ ಅಸಾಧಾರಣ ಲಕ್ಷಣಗಳನ್ನೂ ಓದುಗರೆದುರಿಗೆ ಚೆನ್ನಾಗಿ ಚಿತ್ರಿಸುವನು. ಆ ವಿರೂಪಾಕ್ಷನಲ್ಲಿಯೇ ಆತನಿಗೆ ಮೀರಿದ ಅತುಲ ಭಕ್ತಿ. ವಿರೂಪಾಕ್ಷನಿಗಾಗಿ ತನ್ನ ತನುವನ್ನೂ ಮನವನ್ನೂ ಧನವನ್ನೂ, ಅನಿತೇ ಏಕೆ? ಬೇಕೆಂದಲ್ಲಿ ಸರ್ವಸ್ವವೆನಿಸಿದ ಪ್ರಾಣವನ್ನೂ ಸಹ ನೀಡಲು ಸಿದ್ಧನಿದ್ದನು. ಪ್ರತಿಕ್ಷಣವೂ ಆತನ ಸ್ಮರಣೆಯಲ್ಲಿಯೇ ಸರಿಯುತ್ತಿದ್ದಿತು. ಲೋಕೈಕ ಬಂಧುವೆನಿಸಿದ ಆ ವಿರೂಪಾಕ್ಷನಲ್ಲದೇ ಎನಗೆ ಬೇರೆ ಗತಿಯಿಲ್ಲ; ಮತಿಯಿಲ್ಲ. ಎನ್ನಯ ಜನನಿಯಾತ; ಎನ್ನ ಜನಕನಾತ. ಆ ವಿರೂಪಾಕ್ಷನಂ ಬಿಟ್ಟು ಎನಗೆ ಬೇರೆ ಗುರುವಿಲ್ಲ; ಗೋತ್ರವಿಲ್ಲ. ಆತನೇ ಎನಗೆ ಅನನ್ಯಶರಣು.

ಶರಣಾರ್ನೀಂ ಕಾವರಾರ್ನೀಂ ಗತಿಮತಿಪತಿಯಾರ್ನೀಂ
ಕಪಾಂಭೋಧಿಯಾರ್ನೀಂ। ಗುರುವಾರ್ನೀಂ ಗೋ

ತ್ರವಾರ್ನೀಂ ಜನನಿ ಜನಕರಾರ್ನೀಂ ಮಹಾ ಬಂಧುವಾರ್ನೀಂ॥
ಪರರಾರ್ನೀಂ ವಂದ್ಯರಾರ್ನೀನೆನಗತಿ ಹಿತರಾರ್ನೀಂ ಮಹಾ-
ದೇವ ನಿಮ್ಮಿಂ। ಪರರಾರ್ನೀಂ ನೀನೆ ಪಂಪಾಪುರದರಸ
ವಿರೂಪಾಕ್ಷ ರಕ್ಷಿಪ್ಪುದೆನ್ನಂ॥

ಹೀಗೆ ಬಲವಾಗಿ ನಂಬಿ ಆತನಿಗೆ ಶರಣು ಹೋಗಿದ್ದನು. ಇಂತು ಬರಿಬಾಯ ಮಾತಿನಲ್ಲಿ ಮಾತ್ರ ಹೇಳಿಕೊಳ್ಳುತ್ತಿರಲಿಲ್ಲ. ಆತನಿಗೆ ಅನಿತೊಂದು ಭರವಸೆ ಇದ್ದಿತು. ಆ ಎದೆಯ ನಂಬುಗೆಯು ನೈಜವಾಗಿತ್ತು. ನಿಬಿಡವಾಗಿತ್ತು. ಇದಲ್ಲವೇ ಭಕುತಿಯ ಕುರುಹು? ಒಂದು ಸಲ ದೇವನಲ್ಲಿ ಇರಿಸಿದ ವಿಶ್ವಾಸವು ಆದೆಂದಿಗೂ ಕುಂದದೇ ಕದಲದೇ ಸ್ಥಾಯಿಯಾಗಿರಬೇಕು ದೇವನ ಕರುಣೆಯಾಗಲಿ, ಕೋಪವಾಗಲಿ, ಒಳಿತಾಗಲಿ, ಇಲ್ಲವೇ ಕೇಡಾಗಲಿ, ಏನಾದರೆಯೂ ಎದೆಯ ನೆಚ್ಚು ಮಾತ್ರ ನಿಶ್ಚಲವಾಗಿರಬೇಕು. ದೇವರು ಭಕ್ತನನ್ನು ಹಿಂಡದೇ ಹಿಸುಕದೇ ಎಂದೂ ಬಿಡುವವನಲ್ಲ. ಅರೆದೊರೆದು ಪರಿಕಿಸದೇ ಇರುವವನಲ್ಲ. ಆತ "ನುಗ್ಗು ಮಾಡುವ ನುಸಿಯ ಮಾಡುವನಂತೆ?" "ಅರೆವನಯ್ಯ ಸಂಣವಾಗುವನ್ನಕ್ಕ. ವರೆವನಯ್ಯ ಬಂಣ ಗಾಂಬನ್ನಕ್ಕ " ಎಂಬ ಮಹಾತ್ಮಾ ಬಸವಂಣನವರ ಅನುಭವದ ಮಾತನ್ನು ಆ ಬಗೆಯಲ್ಲಿಯೇ ಅರಿಯಬೇಕು. ಅಂತಹ ಕಠಿಣ ಪರೀಕ್ಷೆಯಲ್ಲಿಯೂ ಸಹ ಭಕ್ತನು ಮನಗುಂದದಿರಬೇಕು; ಮೈಗುಂದದಿರಬೇಕು. ಹಾಗಿಲ್ಲದೇ "ಮಾಡುವ ಭಕ್ತಂಗೆ ಮನಹೀನವಾದೊಡೆ ಅದೇ ಕಡೆ" ಯಾಗುವದು. ಆಗಲೂ ಬೆಚ್ಚದೇ ಬೆದರದೇ ಭಕ್ತನು ಧೈರ್ಯದಿಂದ ಮುಂದಡಿಯಿಡಬೇಕು. ತನಗಾಗುವ ಸುಖಸಂಪತ್ತುಗಳನ್ನೂ ದುಃಖವಿಪತ್ತುಗಳನ್ನೂ ದೇವನಿಗಾಗಿ ವಂಚನೆಯಿಲ್ಲದೇ ಒಪ್ಪಿಸುತ್ತಿರಬೇಕು. ಆತನಿಗಾಗಿ ತಾನು ಮೊದಲು ಕಿರಿಯ ಗುಲಾಮನಾಗಿರಬೇಕು. ಆ ದೇವ-ದೇವನ ಸೇವೆಗಾಗಿ ಸತತವೂ ಹೃದಯವು ತವಕಿಸುತ್ತಿರಬೇಕು. ದೇವರಿಂದ ತನಗೆ ಸುಧಾ--ಸೇಚನೆಯಾಗಲಿ, ವಿಷವರ್ಷಣವಾಗಲಿ ಆದರೂ ಮೊದಲಿನ ನಂಬಿಗೆಯು ಮಂದವಾಗದಿರಬೇಕು. ಅದನ್ನಿಲ್ಲಿ ಕಾಣಿರಿ.

ಬಿಡೆನೀಶಾ ನಿಮ್ಮ ಪಾದಾಬ್ಜವನೆಲೆಲೆ ಬಿಡೆಂ ಸೀಳ್ದೊಡಂ
ಪೋಳ್ದೊಡಂ ಪೊ। ಯ್ದೊಡದಂತಿಂತೆಂದುಮೆಂಮುಂಬಿಡೆ.

> ನಭವ ಬಿಡೆಂ ಸರ್ವದಾ ಮಾಣೆ ನಾಂ ಬ॥ ಲ್ಪಿಡಿದೆಂ ಮ-
> ತ್ತೆತ್ತಮಿತ್ತಂ ಚಲಿಸೆನೆಲೆ ಮಮಸ್ವಾಮಿ ನಿಮ್ಮಾಜ್ಞೆ-
> ಯಿಂದಂ। ಮೃಡನೇ ಭಕ್ತ್ಯರ್ಥಿ ಪಂಪಾಪುರದರಸ
> ವಿರೂಪಾಕ್ಷ ರಕ್ಷಿಪ್ಪುದೆನ್ನಂ॥

ಆಹಾ! ಇದೆಂತಹ ಅತುಲಭಕ್ತಿ; ಇದೆಂತಹ ಮೀರಿದ ಅನನ್ಯ ಭಾವ. ಭಕ್ತನಿಗೆ "ತನ್ನದು ತಾನು ಕೊಡುವೆ" ನೆಂಬ ಭಾವವಳಿದು ಸರ್ವವನ್ನೂ ಶಿವಾರ್ಪಣಮಾಡುವ ಬುದ್ಧಿಯು ಬರಬೇಕು. ಅದು ಬೇರೂರಬೇಕು. ಮುಂದೆ ಮುಂದೆ ಹಾಗೆಯೇ ಆ ಭಕುತಿ ಆ ಭಾವ ಬಲಿದು ಬಲಿದು "ಶಿವೋಽಹಮ್" ಎಂಬ ಭಾವನೆಯುಂಟಾಗಬೇಕು. ಶಿವ–ಭಕ್ತರ ಸಹಜ ಸಮರಸವಾಗಬೇಕು. ಅಂದರೆ ಮಾತ್ರ ಅದು ಭಕ್ತಿ; ಆತ ಭಕ್ತ. "ಮಮ ಭಕ್ತಾ ಮಮಾಧಿಕಾಃ" ಎಂಬ ಆಗಮ ವಾಕ್ಯವು ಅನ್ವಯಿಸುವದಾದರೂ ಇಂತಹ ಭಕ್ತನಲ್ಲಿ; ಇಂತಹ ಮಹಾ ಶರಣನಲ್ಲಿ. ಈತನು ಮೆಟ್ಟಿದ ನೆಲವೇ ಮಹಾಕ್ಷೇತ್ರ; ಮಿಂದ ಜಲವೇ ಮಂಗಲಮಯ ತೀರ್ಥ. ಇಲ್ಲಿ ನೋಡಿ ಹರಿಹರದೇವನ ಭಕ್ತಿಯ ಪಾರ ವಶ್ಯವನ್ನು; ಆತನ ಅರ್ಪಣದ ಬಗೆಯನ್ನು—

> ನಿಮಗೆನ್ನಂ ಮಾರುಗೊಟ್ಟೆಂ ಹರಹರ ನಿಮಗೆನ್ನನ್ನೆತಾನೊತ್ತುಗೊಟ್ಟೆಂ
> ನಿಮಗೆನ್ನಂಸೂರೆಗೊಟ್ಟೆಂ ನಿಮಗೆ ಹರುಷದಿಂದೊಚ್ಚತಂ ಗೊಟ್ಟೆನಾಹಾ॥
> ನಿಮಗೆನ್ನಂಮಚ್ಚುಗೊಟ್ಟೆಂ ಗುರುವೆಘನವೆ ಸಂತೋಷದಿಂದೊಪ್ಪುಗೊಟ್ಟೆಂ
> ನಿಮಗೆನ್ನಂ. ದೇವ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ॥

ಈ ಜಗದಲ್ಲಿ ತನ್ನದೆಂಬುವದೆಲ್ಲವನ್ನೂ ತನ್ನನ್ನೂ ಶ್ರೀವಿರೂಪಾಕ್ಷ ನಿಗಾಗಿ ಸಲ್ಲಿಸಿದ್ದನು ಆ ಮಹಾಮಹಿಮ. ಹೀಗೆ ಮನದಿಂದ ಪೊರ ವೋದ ಹರೀಶ್ವರನಿಗೆ ಮೊದಲು ಈ ಸಂಸಾರದ ನಿಃಸಾರತೆಯು ಒಡೆದು ತೋರಿದೆ. ಕಾಮ-ಕ್ರೋಧಾದಿಗಳ ಬಾಧೆ ಮನವನ್ನು ಬಲವಾಗಿ ಬಾಧಿಸಿದೆ. ನಂತರ ಭಕ್ತಿ–ಜ್ಞಾನ–ವೈರಾಗ್ಯಗಳ ಅರಿವುಂಟಾಗಿದೆ. ಅದೆ ಲ್ಲವನ್ನೂ ಶತಕದಲ್ಲಿಯೇ ವಿಶದವಾಗಿ ಕಾಣಬೇಕು ಇಲ್ಲಿ ಇದೊಂ ದನ್ನು ಮಾತ್ರ ಉದಹರಿಸುವೆ. ವಿರೂಪಾಕ್ಷನಲ್ಲಿ ಮಾಡುವ ವಿರತಿಯಾ ಚನೆಯ ಬಗೆಯನ್ನಿಲ್ಲಿ ಕೊಂಚ ಮನವಿಟ್ಟು ನೋಡಿ.—

ಪ್ರತ್ಯಕ್ಷಂ ಸತ್ತುಹೋಗುತ್ತಿದೆ ನರನಿಕರಂ ತಾನಿದಂ ಕಂಡು ಕಂಡುಂ
ನಿತ್ಯತ್ವಂಬೆತ್ತು ಪಾಂಗಿಂ ಪಳಿವ ಮುಳಿವ ಕಾಮಿಪ್ಪ ಕೋಪಿಪ್ಪ ಲೋಭಿ।
ಪ್ಪತ್ಯಂ ವಿತಂ ಗರ್ಬಪೆನ್ನೀ ಮನಕೆ ಪರಮವೈರಾಗ್ಯಮಂಗೊಟ್ಟು ತಂದೇ
ಸತ್ಯಂ ಸತ್ಯಾತ್ಮ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ॥

ಮಹಾತ್ಮರ ಜೀವನ–ಸಂಗ್ರಾಮದ ಗಂಭೀರ ದರ್ಶನವು ಜನದ ಜೀವನವನ್ನೂ ಮನವನ್ನೂ ಮಾರ್ಪಡಿಸಲೊಂದು ಪ್ರಬಲ ಕಾರಣವಾಗಿದೆ. ಅವರ ಆ ರೀತಿ–ನೀತಿಗಳನ್ನರಿಯಲು: ಅಂತಹ ಆತ್ಮ--ಗೀತೆಗಳನ್ನು ಕಾಣಬೇಕು. ಕಲಿಯಬೇಕು. ಒಂದೆರಡು ಸಲ ಮನವಿಟ್ಟು ಪಠಿಸಬೇಕು. ಅದನ್ನೇ ಮತ್ತೊಮ್ಮೆ ಹೇಳಬೇಕು; ಮಗುದೊಮ್ಮೆ ಹೇಳಬೇಕು. ಅಂದರೆ ಆಗ ಅದರ ರಸಾನುಭವವು ದೊರಕೊಳ್ಳುವದು. ಅದು ಜೀವನದ ಬೆಳಕಿಗೆ ಬೆಂಬಲವಾಗುವದು. ಸಂತರ–ಶರಣರ--ಕವಿಗಳ ಆತ್ಮ--ಗೀತೆಗಳೆಂದರೆ ಅವು ಮಾಯಾ ಪ್ರಪಂಚಕ್ಕೆ ಸೇರಿದ ಮಿಥ್ಯಾ–ಗೀತೆಗಳಲ್ಲ; ಸತ್ಯಪ್ರಪಂಚಕ್ಕೆ ಒಳಪಟ್ಟ ಸ್ಥೂಲರೂಪದ ಸೊಗಸಾದ ಸಾಹಸಗಳು. ಈ ಬಗೆಯಲ್ಲಿರುವ ಆ ಕವಿ ಸಾರ್ವಭೌಮ ಶ್ರೀಹರಿಹರದೇವನ ಆ ಮುದ್ದು ರಕ್ಷಾಶತಕವನ್ನು ಜೀವನದಲ್ಲಿ ಒಮ್ಮೆಯಾದರೂ ಓದಿ ತಿಳಿದು ಆದರಾನಂದವನ್ನನುಭವಿಸಿದಲ್ಲಿ ಈ ಎನ್ನ ಚಿಕ್ಕ ಕೃತಿ ಕೃತಾರ್ಥ.

# ವಿಶ್ವವಿದ್ಯಾಲಯಗಳಲ್ಲಿ ವೀರಶೈವ ಸಂಸ್ಕೃತಿಯ ಅಭ್ಯಾಸ.

ಕರ್ನಾಟಕ ಸಂಸ್ಕೃತಿಯು ಜೈನ ವೀರಶೈವ ಮತ್ತು ಬ್ರಾಹ್ಮಣ ಸಂಸ್ಕೃತಿಗಳಿಂದೊಡಗೂಡಿ ಬೆಳೆದಿರುತ್ತದೆ. ಇವುಗಳ ಇತಿಹಾಸವೇ ಕರ್ನಾಟಕ ಸಂಸ್ಕೃತಿಯ ಇತಿಹಾಸವಾಗಿದೆ. ಈ ಮೂರೂ ಸಮಾಜಗಳಲ್ಲಿ ಕಾಲಕಾಲಕ್ಕೆ ಅನೇಕ ಧಾರ್ಮಿಕ ಪುರುಷರು ಉದಯವಾದರು. ಮತ್ತು ಅವರು ತಮ್ಮ ಉಚ್ಚ ವಿಚಾರಗಳನ್ನು ಅನೇಕ ಗ್ರಂಥಗಳ ಮೂಲಕ ಪ್ರಕಟಿಸಿರುವರು. ಇವುಗಳ ಅಭ್ಯಾಸವು ಪ್ರತಿಯೊಬ್ಬ ಕನ್ನಡಿಗನಿಗೆ ಅವಶ್ಯವಾದುದು. ಇಂಥ ಗ್ರಂಥಗಳನ್ನು ವಿಶ್ವವಿದ್ಯಾಲಯದ ಪರೀಕ್ಷೆಗಳಿಗೋಸ್ಕರ ನಿಯಮಿಸಿದಲ್ಲಿ ಅವುಗಳ ಅಭ್ಯಾಸವು ಸುಸಾಧ್ಯವೆಂಬುದನ್ನು ನಾವು ಹೇಳುವ ಅವಶ್ಯವಿಲ್ಲ. ಈ ಧೋರಣವನ್ನು ಮೈಸೂರು ಮತ್ತು ಮುಂಬಯಿ ವಿಶ್ವವಿದ್ಯಾಲಯಗಳು ಅನುಸರಿಸಿ ಈ ಬಗೆಯ ಅನೇಕ ಗ್ರಂಥಗಳನ್ನು ಪಠ್ಯ ಪುಸ್ತಕಗಳಾಗಿ ಈಚೆಗೆ ನಿಯಮಿಸುತ್ತಿರುವದು ಕಂಡುಬರುತ್ತದೆ. ಇದು ಬಹು ಸಮಾಧಾನಕರವಾದದ್ದು.

ಈ ವರೆಗೆ ವೀರಶೈವ ಧಾರ್ಮಿಕ ಸಂಸ್ಕೃತಿ ಮತ್ತು ವಾಙ್ಮಯವನ್ನು ತಿಳಿಯಪಡಿಸುವ ಗ್ರಂಥಗಳು ಹೆಚ್ಚಾಗಿ ಉಪಲಬ್ಧವಾಗಿರಲಿಲ್ಲ. ಆದರೆ ಶಿವಾನುಭವ ಪತ್ರಿಕೆಯದ್ವಾರಾ ಅನೇಕ ವಚನ ಗ್ರಂಥಗಳು ಈಗ ಹೊರಪಟ್ಟವು. ಇವುಗಳಲ್ಲಿ ಅನೇಕವು ಕಾಲಕಾಲಕ್ಕೆ ವಿಶ್ವವಿದ್ಯಾಲಯಗಳಲ್ಲಿ ನಿಯಮಿಸಲ್ಪಡುವದು ತೋರಿಬರುತ್ತದೆ. ಇದರಿಂದ ವಿದ್ಯಾರ್ಥಿಗಳು ಇವುಗಳನ್ನು ಚನ್ನಾಗಿ ಅಭ್ಯಾಸಮಾಡಲಿಕ್ಕೆ ಸಂಧಿಯು ದೊರೆಯುತ್ತದೆ. ಈ ವರ್ಷದ ಮುಂಬಯಿ ವಿಶ್ವವಿದ್ಯಾಲಯದ ಎಮ್. ಏ. ಪರೀಕ್ಷೆಯಲ್ಲಿ ವೀರಶೈವಧರ್ಮ, ವಾಙ್ಮಯ ಮತ್ತು ಸಂಸ್ಕೃತಿಗೆ ಸಂಬಂಧಿಸಿದ ಕೆಳಗೆ ಕಾಣಿಸಿದ ಪ್ರಶ್ನೆಗಳು ಕೇಳಲ್ಪಟ್ಟಿವೆ. ಶಿವಾನುಭವ ಪತ್ರಿಕೆಯ ವಾಚಕರಿಗೆ ಅವು ಬೋಧಪ್ರದವಾಗಬಹುದೆಂದು ಎಣಿಸಿ ನಾವು ಅವುಗಳನ್ನು ಇಲ್ಲಿ ಕೊಟ್ಟಿರುತ್ತೇವೆ.

## ಪ್ರಶ್ನೆಗಳು.

(೧) ಮೊಗ್ಗೆಯ ಮಾಯಿದೇವರ ಶಿವಾನುಭವ ಸೂತ್ರದ ಮೇರೆಗೆ ಮುಖ್ಯ ಸ್ಥಲಭೇದಗಳಾವವು? ಮತ್ತು ಅವುಗಳ ಆಚರಣೆಗಳು ಮನುಷ್ಯನ ಅಂಗಗಳಲ್ಲಿ ವಿಕಾಸತೆಯನ್ನು ಹೇಗೆ ಉಂಟು ಮಾಡುತ್ತವೆಂಬುದನ್ನು ನಿರೂಪಿಸಿರಿ.

(೨) ವೀರಶೈವ ಧರ್ಮದ ವಿಶಿಷ್ಟ ಲಕ್ಷಣಗಳಾವವು? ಹಿಂದೂ ಧರ್ಮದಲ್ಲಿಯ ಆವ ತತ್ವಗಳನ್ನು ಅದು ಸ್ವೀಕರಿಸಿ ತನ್ನ ಸಿದ್ಧಾಂತವನ್ನು ನೆಲೆಗೊಳಿಸಿರುತ್ತದೆಂಬುದನ್ನು ವಿವೇಚಿರಿ. ಮತ್ತು ಅವುಗಳ ಮೂಲಕ ಆವ ಸಾಮಾಜಿಕ ಪರಿಣಾಮಗಳುಂಟಾದವೆಂಬುದನ್ನೂ ವಿವರಿಸಿರಿ.

(೩) ಷಡ್ಲಿಂಗಗಳು ಆವವು? ಅವುಗಳ ಲಕ್ಷಣಗಳೇನು? ಮತ್ತು ಮನುಷ್ಯನ ಪ್ರಗತಿಯಲ್ಲಿ ಅವುಗಳಿಂದಾಗುವ ಕಾರ್ಯಗಳಾವವೆಂಬುದನ್ನು ವಿವೇಚಿಸಿರಿ.

(೪) ವೀರಶೈವ ಧರ್ಮದ ಪ್ರಕಾರ ಪರಮಾತ್ಮನ ಬಗ್ಗೆ ಆವ ವಿಚಾರಗಳಿರುತ್ತವೆ? ಅದು ಮೂರ್ತಿ ಪೂಜೆಯನ್ನು ಸ್ವೀಕರಿಸುತ್ತದೆಯೋ ಹೇಗೆ? ಸ್ವೀಕರಿಸದಿದ್ದರೆ, ಅದು ಎಷ್ಟರ ಮಟ್ಟಿಗೆ ಎಂಬುದನ್ನು ಚರ್ಚಿಸರಿ.

ಇಷ್ಟಲಿಂಗ, ಪ್ರಾಣಲಿಂಗ, ಭಾವಲಿಂಗ ಇವುಗಳ ಪರಸ್ಪರ ಸಂಬಂಧವನ್ನೂ ಅವುಗಳ ಕ್ರಿಯೆಗಳನ್ನೂ ವಿವರಿಸಿರಿ.

(೫) ಷಟ್ ಸ್ಥಲಗಳ ಮುಖ್ಯ ಲಕ್ಷಣಗಳಾವವು? ಮತ್ತು ಅವುಗಳ ತತ್ವ ಮತ್ತು ಆಚರಣೆಗಳ ಮೂಲಕ ಲಿಂಗಾಂಗ ಸಾಮರಸ್ಯ ಸ್ಥಿತಿಯು ಹೇಗೆ ಲಭಿಸುತ್ತದೆಂಬುದನ್ನು ವಿವರಿಸಿರಿ.

(೬) ಪ್ರಭುದೇವರ ವಚನಗಳ ವಿಶಿಷ್ಟತೆ, ಆತನ ನಿರೂಪಣಾ ಪದ್ಧತಿ, ಶೈಲಿ ಇವುಗಳನ್ನು ಕುರಿತು ನಿರೂಪಿಸಿರಿ.

(೭) ವಚನಕಾರರು "ವಿಚಾರ ವಾದಿಗಳು" ಎಂದೆನ್ನಬಹುದೋ ಹೇಗೆ? ಅವರು ವಿಚಾರ ವಾದಿಗಳೆಂದು ನಿಮ್ಮ ಅಭಿಪ್ರಾಯವಿದ್ದರೆ,

ಇದನ್ನು ಸೋದಾಹರಣ ಪೂರ್ವಕವಾಗಿ ಚರ್ಚಿಸಿರಿ. ಮತ್ತು ಇದರಿಂದ ಅವರು ಸಮಾಜ ಸುಧಾರಣೆ ಮಾಡಲು ಹೇಗೆ ಶಕ್ತರಾದರೆಂಬುದನ್ನು ವಿವರಿಸಿರಿ.

(೮) ಪ್ರಭುದೇವರ ಅಭಿಪ್ರಾಯದ ಪ್ರಕಾರ ಪ್ರಸಾದದ ಉದ್ದೇಶವೇನು? ಮತ್ತು ಅದರ ಕಾರ್ಯಗಳಾವವು?

(೯) ವೀರಶೈವರ ೩೬ ತತ್ವಗಳಾವವು? ಅವುಗಳ ಲಕ್ಷಣ ಮತ್ತು ಪರಸ್ಪರ ಸಂಬಂಧ ಇವುಗಳನ್ನು ಕುರಿತು ವಿವೇಚಿಸಿರಿ.

(೧೦) ವಿರೂಪಾಕ್ಷ ಪಂಡಿತನ ಅಭಿಪ್ರಾಯದ ಮೇರೆಗೆ ಮನುಷ್ಯನ ಪ್ರಗತಿಯಲ್ಲಿ ಗುರು, ಲಿಂಗ, ಜಂಗಮಗಳ ಸ್ಥಾನವಾವುದು ಮತ್ತು ಅವು ಅವನ ಮೇಲೆ ಆವ ಪರಿಣಾಮಗಳನ್ನುಂಟು ಮಾಡುತ್ತವೆಂಬುದನ್ನು ವಿವರಿಸಿರಿ.

(೧೧) ಪಂಚಸಾದಾಖ್ಯಗಳಾವುವೆಂಬುದನ್ನು ವಿವರಿಸಿ ಅವುಗಳ ಸ್ವರೂಪನ್ನು ಕುರಿತು ಚರ್ಚಿಸಿರಿ.

# ವಚನಶಾಸ್ತ್ರಸಾರ ಭಾಗ ೨.

## ( ವೀರಶೈವ ಸಿದ್ಧಾಂತ. )

ವಚನಶಾಸ್ತ್ರಸಾರ ಭಾಗ ೨ (ವೀರಶೈವ ಸಿದ್ಧಾಂತ):— ಈ ಗ್ರಂಥವು ಈ ವರ್ಷ ಶ್ರೀ ಬಸವಜಯಂತಿಯ ದಿನ ರಾ॥ ಸಾ॥ **ಫ. ಗು. ಹಳಕಟ್ಟಿ** ಯವರಿಂದ ಪ್ರಕಟವಾಗಿರುತ್ತದೆ. ಮೊದಲನೆಯ ಭಾಗವು ಮೊದಲು ೧೯೨೩ನೇ ಇಸ್ವಿಯಲ್ಲಿ ಅವರಿಂದ ಪ್ರಸಿದ್ಧವಾಯಿತು. ವಚನವಾಙ್ಮಯದ ಮೊದಲನೇ ಗ್ರಂಥವೆಂದರೆ ಇದೇ ಆಗಿರುತ್ತದೆ. ಅಂದಿನಿಂದ ಈ ವರೆಗೆ ಶಿವಾನುಭವ ಪತ್ರಿಕೆಯ ದ್ವಾರಾ ೧೫ ವರ್ಷಗಳ ವರೆಗೆ ಅನೇಕ ವಚನ ಗ್ರಂಥಗಳು ಪ್ರಕಾಶಕ್ಕೆ ಬಂದವು. ಇವುಗಳ ಮೂಲಕ ವಚನ ವಾಙ್ಮಯದ ಮಹತ್ವವು ಎಷ್ಟಿರುತ್ತದೆಂಬದು ಕರ್ನಾಟಕಸ್ತರಿಗೆಲ್ಲ ಚನ್ನಾಗಿ ಈಗ ತಿಳಿದದ್ದಾಗಿದೆ. ಇದನ್ನು ನಾವು ಇಲ್ಲಿ ಹೆಚ್ಚಿಗೆ ವಿಸ್ತರಿಸುವ ಅವಶ್ಯವಿಲ್ಲ.

ಈಗ ಪ್ರಸಿದ್ಧವಾದ ವಚನಶಾಸ್ತ್ರಸಾರ ಭಾಗ ೨ ಈ ಗ್ರಂಥವು ಈ ವರೆಗೆ ಅಚ್ಚಾದ ಗ್ರಂಥಗಳಂತಿರದೆ ಅದು ತೀರ ಹೊಸತರದ್ದಾಗಿ ರುತ್ತದೆ. ಇದರಲ್ಲಿ ಸಂಪೂರ್ಣವಾಗಿ ವೀರಶೈವ ಸಿದ್ಧಾಂತವು ವಿವೇಚಿಸಲ್ಪಟ್ಟಿರುತ್ತದೆ.

ಈ ವರೆಗೆ ಪ್ರಕಟವಾದ ವಚನ ಗ್ರಂಥಗಳಲ್ಲಿ ಷಟ್‌ಸ್ಥಲಗಳ ಸಾಮಾನ್ಯ ವಿವೇಚನೆ, ವೀರಶೈವ ಧರ್ಮ ತತ್ವಗಳ ಸ್ಥೂಲ ನಿರೂಪಣೆ ಮತ್ತು ವೀರಶೈವರ ಸಾಮಾಜಿಕ ಮತ್ತು ನೈತಿಕ ತತ್ವಗಳು ಇವುಗಳೇ ಹೆಚ್ಚಾಗಿ ನಿರೂಪಿಸಲ್ಪಟ್ಟಿರುತ್ತವೆ. ಆದರೆ ಅವುಗಳಲ್ಲಿ ವೀರಶೈವ ಧರ್ಮದಲ್ಲಿ ವಿಶಿಷ್ಟ ಸ್ಥಾನವನ್ನು ಹೊಂದಿದ ಷಟ್‌ಸ್ಥಲ ಶಾಸ್ತ್ರದ ಸಾದ್ಯಂತ ವೃತ್ತಾಂತವಿರುವದಿಲ್ಲ ಆದರೆ ಈ ವಿಷಯವು ಈ ೨ನೇ ಭಾಗದಲ್ಲಿ ಸವಿಸ್ತಾರವಾಗಿ ನಿರೂಪಿಸಲ್ಪಟ್ಟಿರುತ್ತದೆ.

ಈ ಗ್ರಂಥದಲ್ಲಿ ಐದು ಮುಖ್ಯ ವಿಭಾಗಗಳು ಮಾಡಲ್ಪಟ್ಟಿವೆ. ಅವು ಯಾವವೆಂದರೆ:— (೧) ಸೃಷ್ಟಿಯ ರಚನೆ (೨) ಕರಣಹಸಿಗೆ (೩)

ಕ್ರಿಯೆಗಳು ಮತ್ತು ಸಕೀಲಗಳು (೪) ಷಟ್‌ಸ್ಥಲಗಳು, ಪ್ರವೃತ್ತಿ ಮತ್ತು ನಿವೃತ್ತಿ (೫) ಮತ್ತು ಏಕೋತ್ತರಶತಸ್ಥಲ. ಈ ಕಡೆಯ ೫ನೇ ವಿಭಾಗದಲ್ಲಿ ನೂರಾ ಒಂದು ಸ್ಥಲಗಳು ಸವಿಸ್ತಾರವಾಗಿ ವಿವೇಚಿಸಲ್ಪಟ್ಟಿರುತ್ತವೆ. ಅಲ್ಲದೆ ಅಂತ್ಯದಲ್ಲಿ ೧೪ ಅನುಬಂಧಗಳಿದ್ದು ಅವುಗಳಲ್ಲಿ ವೀರಶೈವ ಧರ್ಮಕ್ಕೆ ಸಂಬಂಧಿಸಿದ ಅನೇಕ ಮಹತ್ವದ ವಿಷಯಗಳ ಸಂಬಂಧವಾಗಿ ಗ್ರಂಥಕಾರರ ಅಭಿಪ್ರಾಯಗಳೂ ಸಮಾಲೋಚನೆಗಳೂ ಕಾಣಿಸಲ್ಪಟ್ಟಿವೆ. ಈ ವಿವರಣೆಯ ಮೇಲಿಂದ ಈ ಗ್ರಂಥದ ವಿಸ್ತಾರವೂ ಮಹತ್ವವೂ ಎಷ್ಟಿರುತ್ತದೆಂಬುದು ವಾಚಕರ ನಿದರ್ಶನಕ್ಕೆ ಬರದೆ ಇರಲಾರದು.

ಭಾಗ ೧, ಸೃಷ್ಟಿಯ ರಚನೆ:— ಈ ಭಾಗದಲ್ಲಿ ಮಹಾಲಿಂಗವೆಂದರೇನು, ಪ್ರಣವದ ಸ್ವರೂಪ, ಪಂಚಸಾದಾಖ್ಯಗಳ ವೃತ್ತಾಂತ, ಷಡಧ್ವಗಳ ವಿವೇಚನೆ ಇವುಗಳು ಬಂದದ್ದಲ್ಲದೆ, ಮೂವತ್ತಾರು ತತ್ವಗಳಾವವು ಇವೇ ಮೊದಲಾದ ವಿಷಯಗಳು ವಿವರಿಸಲ್ಪಟ್ಟಿರುತ್ತವೆ. ಮತ್ತು ಕಡೆಗೆ ಮಹಾದೇವಿಯಕ್ಕ, ಪ್ರಭುದೇವ ಮೊದಲಾದ ಮಹತ್ವದ ವಚನಕಾರರ ಜಗದುತ್ಪತ್ತಿಯ ವಚನಗಳು ಕೊಡಲ್ಪಟ್ಟಿವೆ. ಇವುಗಳ ಜ್ಞಾನವು ಷಟ್‌ಸ್ಥಲ ಶಾಸ್ತ್ರವನ್ನು ಅರಿಯಲು ಬಹು ಸಹಾಯಕಾರಿಯಾಗಿದೆ.

ಭಾಗ ೨, ಕರಣಹಸಿಗೆ:— ಇದರಲ್ಲಿ ದೇಹದ ಜ್ಞಾನ ಪಂಚಭೂತಗಳ ಪಂಚೀಕೃತಿಗಳು, ೨೫ ತತ್ವಗಳ ವಿಚಾರ, ದೇಹದ ವ್ಯಾಪಾರಗಳು, ಅದರ ಗುಣಗಳು, ಅದರ ಅವಸ್ಥೆಗಳು ಈ ವಿಷಯಗಳಲ್ಲದೆ, ಮನುಷ್ಯನ ಅನೇಕ ಬಗೆಯ ದುರ್ವ್ಯಾಪಾರಗಳು ಮತ್ತು ಮನೋವೃತ್ತಿಗಳು ವರ್ಣಿಸಲ್ಪಟ್ಟಿರುತ್ತವೆ. ಷಟ್‌ಸ್ಥಲದಲ್ಲಿ ಇವುಗಳ ಜ್ಞಾನದ ಅವಶ್ಯಕತೆ ಏನೆಂಬುದನ್ನು ತಿಳಿಯಪಡಿಸಲು ಅನೇಕ ವಚನಗಳು ಗ್ರಂಥದಲ್ಲಿ ಕೊಡಲ್ಪಟ್ಟಿರುತ್ತವೆ.

ಭಾಗ ೩, ಕ್ರಿಯೆಗಳು ಮತ್ತು ಸಕೀಲಗಳು:— ವೀರಶೈವ ಧರ್ಮದ ಪ್ರಕಾರ ಕ್ರಿಯೆಗಳಲ್ಲಿ ಮಾರ್ಗಕ್ರಿಯೆಗಳು ಮತ್ತು ಮೀರಿದ ಕ್ರಿಯೆಗಳು ಎಂದು ೨ ಭಾಗಗಳಿವೆ. ಇವುಗಳನ್ನು ವೀರಶೈವರು ಅರಿಯುವದು ಬಹು ಅವಶ್ಯವಾದದ್ದು. ಈ ಕ್ರಿಯೆಗಳಲ್ಲಿ ೧೨ ವಿಭಾಗಗಳಿದ್ದು ಪ್ರತಿಯೊಂದು ವಿಭಾಗಕ್ಕೆ ಸಂಬಂಧಿಸಿದ ಕ್ರಿಯೆಯು ೯ ತರಗತಿಗಳುಳ್ಳ

ದಾಗಿ ಪ್ರವೃತ್ತಿಯನ್ನು ಹೊಂದುತ್ತ ಹೋಗುತ್ತದೆ. ಹೀಗೆ ಎಲ್ಲವೂ ಕೂಡಿ ೨೧೬ ಬಗೆಯ ಕ್ರಿಯೆಗಳಾಗುತ್ತವೆ. ಇವುಗಳ ವರ್ಣನೆಗಳು ಈ ಭಾಗದಲ್ಲಿ ಬಂದಿರುತ್ತವೆ. ಅಲ್ಲದೆ ಈ ಕ್ರಿಯೆಗಳ ಪರಸ್ಪರ ಸಂಬಂಧವನ್ನು ಅರಿಯಲು ಸಕೀಲಗಳು ಬಹು ಸಹಾಯಕಾರಿಗಳಾಗಿವೆ. ಆದ್ದರಿಂದ ಇವುಗಳಲ್ಲಿ ಬಹು ಮುಖ್ಯವಾದ ಅಷ್ಟವಿಧ ಸಕೀಲಗಳು, ೧೦೮ ಸಕೀಲಗಳು, ೨೧೬ ಸಕೀಲಗಳು ವಿವರಿಸಲ್ಪಟ್ಟಿರುತ್ತವೆ.

ಭಾಗ ೪ ಷಟ್‌ಸ್ಥಲಗಳು:— ಹಿಂದೆ ವಿವರಿಸಿದ ವಿಷಯಗಳ ಜ್ಞಾನವಾದಲ್ಲಿ ಷಟ್‌ಸ್ಥಲಗಳ ತಿಳುವಳಿಕೆಯು ಮನುಷ್ಯನಿಗೆ ಉಂಟಾಗಹತ್ತುತ್ತದೆ. ಈ ಷಟ್‌ಸ್ಥಲ ವಿವೇಚನೆಯಲ್ಲಿ ೧, ೨, ೩, ೬ ಈ ಸ್ಥಲಗಳ ನಿರೂಪಣೆಗಳು ಬರುತ್ತವೆ. ಈ ಪ್ರತಿಯೊಂದು ಸ್ಥಲದಲ್ಲಿ ಅಂಗಸ್ಥಲಗಳು, ಲಿಂಗಸ್ಥಲಗಳು ಎಂಬ ಭಾಗಗಳು ಮಾಡಲ್ಪಡುತ್ತವೆ. ಇವಲ್ಲದೆ ೧೮ ಅಂಗಸ್ಥಲಗಳು ೧೮ ಲಿಂಗಸ್ಥಲಗಳು ಮತ್ತು ೩೬ ಅಂಗಸ್ಥಲಗಳು, ೩೬ ಲಿಂಗಸ್ಥಲಗಳು ಇದ್ದು ಇವುಗಳ ತಾತ್ವಿಕ ವಿವೇಚನೆಯೂ ಈ ಭಾಗದಲ್ಲಿ ಮಾಡಲ್ಪಟ್ಟಿರುತ್ತವೆ. ಈ ಭಾಗವಾದರೂ ಅತ್ಯಂತ ಮಹತ್ವದ್ದಾಗಿರುತ್ತದೆ.

ಭಾಗ ೫. ಏಕೋತ್ತರ ಶತಸ್ಥಲ:— ವೀರಶೈವ ಧರ್ಮದಲ್ಲಿ ಇದಕ್ಕೆ ಮಹತ್ವದ ಸ್ಥಾನವಿದೆ. ಆದರೆ ಷಟ್‌ಸ್ಥಲಗಳಲ್ಲಿ ಇವರ ಕಾರ್ಯಗಳಾವವೆಂಬುದನ್ನು ಕಂಡುಹಿಡಿಯುವದು ಬಹು ದುಸ್ತರವಾಗಿರುತ್ತದೆ. ಆದಾಗ್ಯೂ ಈ ವಿಷಯವು ಈ ಗ್ರಂಥದಲ್ಲಿ ವಿಸ್ತಾರವಾಗಿ ನಿರೂಪಿಸಲ್ಪಟ್ಟಿರುತ್ತದೆ. ಈ ನಿರೂಪಣೆಯ ಮೂಲಕ ಷಟ್‌ಸ್ಥಲಗಳ ಆಚರಣೆಗಳ ಮೇಲೆ ಮಹತ್ವದ ಪ್ರಕಾಶವು ಬೀಳದೆ ಇರಲಾರದೆಂದು ನಾವು ಭಾವಿಸಿದ್ದೇವೆ.

ಈ ಯಾವತ್ತು ವಿವೇಚನೆಗಳು ಬಸವಾದಿ ಪ್ರಮಥರ ಅಸಂಖ್ಯ ಉಕ್ತಿಗಳ ಮೂಲಕವಾಗಿಯೇ ಈ ಗ್ರಂಥದಲ್ಲಿ ಮಾಡಲ್ಪಟ್ಟಿರುತ್ತವೆ. ಅಲ್ಲಲ್ಲಿ ಸೂಚನಾತ್ಮಕ ವಿವರಣೆಗಳು ಗ್ರಂಥಕಾರರಿಂದ ಮಾಡಲ್ಪಟ್ಟಿವೆ. ವಚನಶಾಸ್ತ್ರಸಾರ ಭಾಗ ೧ ಈ ಗ್ರಂಥವು ಯಾವ ಪದ್ಧತಿಯನ್ನನುಸರಿಸಿ ರಚಿಸಲ್ಪಟ್ಟಿತೋ ಅದೇ ಪದ್ಧತಿಯೇ ಇದರಲ್ಲಿಯೂ ಸ್ವೀಕರಿಸಲ್ಪಟ್ಟಿರುತ್ತದೆ.

ಬಸವಾದಿ ಪ್ರಮಥರ ಕಾಲದಲ್ಲಿ ಷಟ್‌ಸ್ಥಲಶಾಸ್ತ್ರವು ಅತ್ಯಂತ ಉನ್ನತ ಸ್ಥಾನವನ್ನು ಹೊಂದಿತು. ಅವರ ವಿಚಾರಗಳನ್ನು ಈ ಕಾಲಕ್ಕೆ ಅರಿಯುವದು ಬಹು ಅವಶ್ಯವಾಗಿರುತ್ತದೆ. ಇದನ್ನು ಅರಿತಾಗಳೇ ವೀರ ಶೈವ ಸಂಸ್ಕೃತಿಯ ತಿಳವಳಿಕೆಯು ಶಕ್ಯವಾಗುತ್ತದೆ. ಈ ಸಂಗತಿಯನ್ನು ವೀರಶೈವರು ವಿಚಾರ ಮಾಡಿದಲ್ಲಿ ಈ ಗ್ರಂಥದ ಮಹತ್ವವು ಈ ಕಾಲ ದಲ್ಲಿ ಎಷ್ಟಿದೆ ಎಂಬುದು ವಾಚಕರಿಗೆ ಗೊತ್ತಾಗದೆ ಇರದು. ಈ ಗ್ರಂಥವು ಒಟ್ಟು ೬೩೧ ಪುಟಗಳುಳ್ಳದಾಗಿದೆ.

ಈ ಗ್ರಂಥದ ಮಹತ್ವವನ್ನು ಅರಿತು ಶ್ರೀಯುತ ಮಂಜಪ್ಪ ಹರ್ಡೇ ಕರ ಇವರು ವಿಜಾಪುರ ಜಿಲ್ಹೆಯಲ್ಲಿ ಸಂಚರಿಸಿ ಅದರ ಮುದ್ರಣ ವೆಚ್ಚಕ್ಕಾಗಿ ಹಣವನ್ನು ಶೇಖರಿಸಿದರು ಮತ್ತು ಅದು ಬಾಗಲಕೋಟೆ ಯಲ್ಲಿ ರಾ॥ ಸಾ॥ ಹಳಕಟ್ಟಿಯವರಿಗೆ ಸಾರ್ವಜನಿಕ ಸಭೆಯಲ್ಲಿ ಸನ್ಮಾನ ಪೂರ್ವಕವಾಗಿ ಅರ್ಪಿಸಲ್ಪಟ್ಟಿತು. ಇದರ ಮೇಲಿಂದ ಈ ಗ್ರಂಥದ ಮಹ ತ್ವವು ವಾಚಕರಿಗೆ ಗೋಚರವಾಗದಿರಲಾರದೆಂದು ಭಾವಿಸಿದ್ದೇವೆ.

## ಜ್ಞಾನದಿಂದಲೇ ಮಾಯೆಯು ನಿವೃತ್ತಿಯು.

**ವಿವರಣೆ:**— ಮಾಯಾ ಪಾಶವು ಲಿಂಗಜ್ಞಾನದಿಂದ ನಿವೃತ್ತಿಯಾಗುತ್ತದೆ. (೧೪) ಮನುಷ್ಯನ ಕರ್ಮತ್ರಯಗಳೂ ಕೂಡ ಜ್ಞಾನದಿಂದಲೇ ದೂರಾಗುತ್ತವೆ. (೧೫) ಜ್ಞಾನಿಯಾದವನು ಸಮರಸಾಚಾರದಿಂದ ವರ್ತಿಸಬೇಕು. (೧೬) ಹೀಗೆ ಆಚರಿಸಿದಲ್ಲಿ ಅವನಿಗೆ ಬಚ್ಚಬರಿಯ ಬಯಲು ಎಂದರೆ ಮೋಕ್ಷವು ಪ್ರಾಪ್ತವಾಗುತ್ತದೆ. (೧೭) ಮತ್ತು ಮಾಯೆಯು ಅಳಿದು ಇಷ್ಟ ಪ್ರಾಣ ಭಾವಲಿಂಗಗಳು ಅಳವಡುವವು. (೧೮) ಆದರೆ ಭಿನ್ನಾಚಾರದಿಂದ ವರ್ತಿಸುವವರಿಗೆ ಇದು ಅಳವಡಲಾರದು. (೧೯) ಮಾಯಾಪ್ರಪಂಚು ನಿವೃತ್ತಿಮಾಡಿದಲ್ಲಿ ಚಿದ್ಘನ ಪ್ರಕಾಶವು ದೊರೆಕೊಳ್ಳುವದು. (೨೦-೨೧)

### ವಚನಗಳು.

೧೪. ಗಂಡನಿಲ್ಲದ ಸತಿ ಯೋನಿ ಇಲ್ಲದೆ ಮಕ್ಕಳ ಹಡೆದು ನಾಲಿಗೆ ಇಲ್ಲದ ಬಾಯಲ್ಲಿ ಜೋಗುಳವಾಡುತ್ತೈದಾಳೆ. ತೊಟ್ಟಿಲಿಲ್ಲದ ನೇಣು ಹೊರತೆಯಾಗಿ ಗಂಟೆ ಕಟ್ಟಿ ಮಗುವಿಲ್ಲದೆ ಶಿಶುವಳುತ್ತಿದೆ. ಅದಕ್ಕೆ ಮೊಲೆ ಇಲ್ಲ. ಹಾಲ ಬೇಕು. ಸದಾಶಿವಮೂರ್ತಿ ಲಿಂಗವ ನರಿತಲ್ಲದಾಗದು.

ಟೀಕು:— ಜೀವನ ವ್ಯವಹಾರವಿಲ್ಲದ ಜ್ಞಾನಶಕ್ತಿ ಸ್ವರೂಪನಾದ ಶರಣನೆಂಬುದೀಗ ಗಂಡನಿಲ್ಲದ ಸತಿ ಎಂಬ ಶಬ್ದಕ್ಕರ್ಥ. ಆ ಸುಜ್ಞಾನ ಸಹಿತವಾದ ಶರಣ ಸತಿಗೆ ಉತ್ಪತ್ತಿ ನಾಸ್ತಿಯಾಯಿತ್ತೆಂಬುದೀಗ ಯೋನಿ ಇಲ್ಲದೆ ಎಂಬ ಶಬ್ದಕ್ಕರ್ಥ. ಆ ಉತ್ಪತ್ತಿ ನಾಸ್ತಿಯಾಗಿರ್ಪ ಚಿತ್ ಸ್ವರೂಪನಾದ ಶರಣ ಸತಿಯಲ್ಲಿ ಸದ್ರೂಪವಾದಲ್ಲಿ ಶ್ರೀಗುರು ಅವಿರಳ ಸಂಗವ ಮಾಡಲು ಅಲ್ಲಿ ಚಿದ್ಗರ್ಭ ತಲೆದೋರಿ ಸಚ್ಚಿದಾನಂದ ಸ್ವರೂಪನಾದ ಲಿಂಗತ್ರಯವು ಉದಯಿಸಿದವೆಂಬುದೀಗ ಮಕ್ಕಳ ಹಡೆದು ಎಂಬ ಶಬ್ದಕ್ಕರ್ಥ. ಆ ಲಿಂಗತ್ರಯದಲ್ಲಿ ಸಮರಸ ಭಾವವ ಘಟಿಸಿದ ಶರಣ ಸತಿಗೆ ಶಬ್ದ ಜಾಲಂಗಳಿಲ್ಲದೆ ಶಿವಾಪೇಕ್ಷೆಯಿಂ ಶಿವೋಹಂ ಎಂದು ಉಚ್ಚರಿಸುತ್ತಿಹಳೆಂಬುದೀಗ ನಾಲಿಗೆ ಇಲ್ಲದ ಬಾಯಲ್ಲಿ ಜೋಗಳವಾಡುತ್ತೈದಾಳೆ ಎಂಬ ಶಬ್ದಕ್ಕರ್ಥ. ಆ ಶಿವೋಹಂ ಭಾವ ಘಟಿಸಿದ ಶರಣ ಸತಿಗೆ ದೇಹಭಾವ ನಾಸ್ತಿಯಾಗಿ ಮಾಯಾಪಾಶ ನಿವೃತ್ತಿಯಾಯಿತ್ತೆಂ

ಬುದೀಗ ತೊಟ್ಟಿಲಿಲ್ಲದ ನೇಣು ಹೊರತೆಯಾಗಿ ಎಂಬ ಶಬ್ದಕ್ಕರ್ಥ. ಆ ಮಾಯಾಪಾಶ ನಾಸ್ತಿಯಾಗಲು ಶರಣನು ತನ್ನ ಆಚಾರಾಂಗವ ಸ್ವಾನುಭಾವ ಸೂತ್ರದಲ್ಲಿ ಸಂಬಂಧಿಸಿದನೆಂಬುದೀಗ ಗಂಟೆ ಕಟ್ಟಿ ಎಂಬ ಶಬ್ದಕ್ಕರ್ಥ. ಆ ಸರ್ವಾಚಾರ ಸಂಪತ್ತಿನಲ್ಲಿ ಸ್ವಾನುಭಾವ ಸೂತ್ರವ ಸಂಬಂಧಿಸಿಕೊಂಡಿರ್ಪ ಶರಣಂಗೆ ಮನೋವರ್ತನೆ ಇಲ್ಲದೆ ಆ ಪರ ಬ್ರಹ್ಮದಲ್ಲಿ ಶಿವೋಹಂ ಶಿವೋಹಂ ಎನುತಿರ್ದನೆಂಬುದೀಗ ಮಗುವಿಲ್ಲದೆ ಶಿಶು ಆಳುತ್ತಿದೆ ಎಂಬ ಶಬ್ದಕ್ಕರ್ಥ. ಆ ಶಿವೋಹಂ ಎನುತಿರ್ದ ಶರಣನೆಂಬ ಶಿಶುವಿಂಗೆ ಸಂಸಾರ ವಿಷಯ ರಸವ ತುಂಬಿಕೊಂಡಿರ್ಪ ಘಟ ಸ್ವರೂಪಿನ ಸ್ಥಾನವಿಲ್ಲದೆ ಜ್ಞಾನಾಮೃತ ರಸವನೇ ಸ್ವೀಕರಿಸುತ್ತಿಹುದೆಂಬುದೀಗ ಅವಕ್ಕೆ ಮೊಲೆ ಇಲ್ಲದ ಹಾಲು ಬೇಕು. ಸದಾಶಿವ ಮೂರ್ತಿ ಲಿಂಗವನರಿತಲ್ಲದಾಗದು ಎಂಬ ಶಬ್ದಕ್ಕರ್ಥ.

೧೫. ಸುಖದುಃಖದ ನಡುವೆ ಒಂದ ತಿರುಕದ ಕೂಸು ಹುಟ್ಟಿ ಹಾಲನೊಲ್ಲದೆ ಮೂರು ಕೂಳು ಬೇಡುತ್ತಿದೆ. ಕೂಳು ಕುಡಿವುದಕ್ಕೆ ಮೊದಲೆ ಗಂಜಿಯು ಕುಡಿದು ಕೂಸು ಹೇಳದೇ ಹೋಯಿತ್ತು ಸದಾಶಿವಮೂರ್ತಿಲಿಂಗವನರಿದು.

ಟೀಕು:— ದೇಹಾತ್ಮರ ಮಧ್ಯದಲ್ಲಿ ನಾನಾ ದುಶ್ಚರಿತವನುಳ್ಳ ಮನಸ್ಸು ಹುಟ್ಟಿತ್ತೆಂಬುದೀಗ ಸುಖದುಃಖದ ನಡುವೆ ತಿರುಕದ ಕೂಸು ಹುಟ್ಟಿ ಎಂಬ ಶಬ್ದಕ್ಕರ್ಥ. ಆ ದೇಹಾತ್ಮರ ಮಧ್ಯದಲ್ಲಿ ಹುಟ್ಟಿದ ಮನಸ್ಸು ಜ್ಞಾನಾಮೃತ ರಸವನಿಚ್ಛೈಸಿತ್ತೆಂಬುದೀಗ ಹಾಲನೊಲ್ಲದೆ ಎಂಬ ಶಬ್ದಕ್ಕರ್ಥ. ಆ ಸುಜ್ಞಾನ ನಷ್ಟವಾದ ಮನಸ್ಸು ಸಂಚಿತ ಪ್ರಾರಬ್ಧ ಆಗಾಮಿ ಎಂಬ ಕರ್ಮತ್ರಯಂಗಳ ಭಿನ್ನಾಪೇಕ್ಷೆಯಿಂದ ಇಚ್ಛೈಸುತ್ತಿಹುದೆಂಬುದೀಗ ಮೂರು ಕೂಳು ಬೇಡುತ್ತಿದೆ ಎಂಬ ಶಬ್ದಕ್ಕರ್ಥ. ಆ ಮನೋ ಮಧ್ಯದಲ್ಲಿ ಜ್ಞಾನಾಗ್ನಿ ಪ್ರಭಾವಿಸಲು ಆ ಜ್ಞಾನಾಗ್ನಿಯು ಪ್ರಕಾಶದಿಂ ಕರ್ಮತ್ರಯಂಗಳು ಸಮರಸಪಾಕವಾದಾಕ್ಷಣವೆಂಬುದೀಗ ಕೂಳು ಕುಡಿವುದಕ್ಕೆ ಮೊದಲೆ ಎಂಬ ಶಬ್ದಕ್ಕರ್ಥ. ಆ ಕರ್ಮತ್ರಯಂಗಳು ಜ್ಞಾನಾಗ್ನಿಯಲ್ಲಿ ದಗ್ಧವಾಗಲು ಆ ಮನಸ್ಸು ಚಿದಮೃತ ರಸವನವಗ್ರಹಿಸಿ ಮಹಾಘನಲಿಂಗದಲ್ಲಿ ನಿಷ್ಪತ್ತಿಯಾದಲ್ಲಿ ಶಬ್ದಜಾಲವಳಿದು ಹೋಯಿತ್ತೆಂಬುದೀಗ ಗಂಜಿಯ ಕುಡಿದು ಕೂಸು ಹೇಳದೆ ಹೋಯಿತ್ತು ಸದಾಶಿವ ಮೂರ್ತಿ ಲಿಂಗವನರಿದು ಎಂಬ ಶಬ್ದಕ್ಕರ್ಥ.

೧೬. ಹುತ್ತದೊಳಗಣ ಉಡು ಹೊಳೆಯೊಳಗಣ ಮೊಸಳೆಯ ನುಂಗಿತ್ತು. ನುಂಗಿ ಹೋಗುವಾಗ ಅಂಗನೆ ಎಂಬ ಹೆಂಗುಸು ಉಡುವ ಕಂಡು ತಾ ಹೊತ್ತಿರ್ದ ಕೊಡನ ಕೂಡಿ ಮುಂಡೆಯ ಮೇಲಿರಿಸಲಾಗಿ ತಾ ಸತ್ತು ಕೊಡನೊಡೆದು ಆ ಉಡುವಡಗಿತ್ತು, ಹಿಡಿಯಲಿಲ್ಲ, ಬಿಡಲಿಲ್ಲ, ಬೇರೊಂದಡಿ ಇಡಲಿಲ್ಲ ಸದಾಶಿವಮೂರ್ತಿ ಲಿಂಗವನರಿತಲ್ಲಿ.

ಟೀಕುಃ— ನವದ್ವಾರಯುಕ್ತವಾದ ದೇಹದಲ್ಲಿ ಸೂಕ್ಷ್ಮವಾಗಿರ್ಪ ಸುಜ್ಞಾನ ಪ್ರಕಾಶವೆಂಬುದೀಗ ಹುತ್ತದೊಳಗಣ ಉಡು ಎಂಬ ಶಬ್ದಕ್ಕರ್ಥ. ಅಂತಪ್ಪ ಸುಜ್ಞಾನ ಪ್ರಕಾಶವು ಸಂಸಾರ ವಿಷಯ ಜಲಪ್ರವಾಹದಲ್ಲಿ ಕ್ರೀಡಿಸುತ್ತಿರ್ಪ ಮಾಯೆಯನವಗ್ರಹಿಸಿತ್ತೆಂಬುದೀಗ ಹೊಳೆಯೊಳಗಣ ಮೊಸಳೆಯ ನುಂಗಿತ್ತು ಎಂಬ ಶಬ್ದಕ್ಕರ್ಥ. ಅಂತು ಮಾಯೆಯನವ ಗ್ರಹಿಸಿ ನಿವೃತ್ತಿ ಮಾರ್ಗದಿಂ ಪರಶಿವತತ್ವದತ್ತಲೆಯ್ದುತ್ತಿರಲು ಎಂಬು ದೀಗ ನುಂಗಿಹೋಗುವಾಗ ಎಂಬ ಶಬ್ದಕ್ಕರ್ಥ. ಅಂತು ಮೋಕ್ಷಮಾರ್ಗ ವಿಡಿದೈದಿಹ ಚಿಚ್ಛಕ್ತಿ ಸ್ವರೂಪವಾದ ಶರಣಸತಿಯು ಆ ಸುಜ್ಞಾನ ಪ್ರಕಾ ಶವ ಪ್ರತ್ಯಕ್ಷ ಕಂಡು ತನ್ನಲ್ಲಿರ್ಪ ಚಿದ್ಭಾಂಡದೊಳಗೆ ಸಾಹಿತ್ಯವ ಮಾಡಿ ಕೊಂಡಳೆಂಬುದೀಗ ಅಂಗನೆ ಎಂಬ ಹೆಂಗಸು ಉಡುವ ಕಂಡು ತಾ ಹೊತ್ತಿರ್ದ ಕೊಡನ ಕೂಡಿ ಎಂಬ ಶಬ್ದಕ್ಕರ್ಥ. ಆ ಸುಜ್ಞಾನ ಪ್ರಕಾಶ ನೊಳಕೊಂಡಿರ್ಪ ಚಿದ್ಭಾಂಡವ ಜ್ಞಾನಸ್ವರೂಪವಾವ ಪರಬ್ರಹ್ಮದಲ್ಲಿ ಸಂಬಂಧಿಸಿದಳೆಂಬುದೀಗ ಮುಂಡೆಯ ಮೇಲಿರಿಸಲಾಗಿ ಎಂಬ ಶಬ್ದಕ್ಕರ್ಥ. ಆ ಚಿಚ್ಛಕ್ತಿ ಸ್ವರೂಪವಾದ ಶರಣ ಸತಿಯು ಚಿದ್ಘನಲಿಂಗದಿಂ ಸಮ ರಸ ಭಾವದಿಂ ನಿಷ್ಪತ್ತಿಯಾಗಲು ಆ ಚಿದ್ಭಾಂಡವು ವಿಕ್ರಮಿಸಿ ಆ ಸುಜ್ಞಾನ ಪ್ರಕಾಶವು ನಿರಾಳ ಲಿಂಗದಲ್ಲಿ ನಿರ್ವಯಲಾಯಿತ್ತೆಂಬುದೀಗ ತಾ ಸತ್ತು ಕೊಡನೊಡೆದು ಉಡುವಡಗಿತ್ತು ಎಂಬ ಶಬ್ದಕ್ಕರ್ಥ. ಆ ಸುಜ್ಞಾನ ಪ್ರಕಾಶ ನಿಷ್ಪತ್ತಿಯಾದ ಶರಣನು ಪರವಸ್ತುವನಾಹ್ವಾನ ವಿಸರ್ಜ ನಕ್ಕೆ ತರಲಿಲ್ಲವೆಂಬುದೀಗ ಹಿಡಿಯಲಿಲ್ಲವೆಂಬುದೀಗ ಹಿಡಿಯಲಿಲ್ಲ ಬಿಡ ಲಿಲ್ಲವೆಂಬ ಶಬ್ದಕ್ಕರ್ಥ. ಆ ಶರಣನು ಎರಡಿಟ್ಟು ಭಿನ್ನಕ್ರಿಯೆಯನಾ ಚರಿಸಲಿಲ್ಲವೆಂಬುದೀಗ ಬೇರೊಂದು ಅಡಿ ಇಡಲಿಲ್ಲ ಸದಾಶಿವಮೂರ್ತಿ ಲಿಂಗವನರಿತಲ್ಲಿ ಎಂಬ ಶಬ್ದಕ್ಕರ್ಥ.

೧೭. ಹುತ್ತದೊಳಗಿನ ಹಾವ ಹದ್ದಿನ ಹೊಟ್ಟೆಯೊಳಗಣ ತತ್ತಿ ನುಂಗಿತ್ತು. ಗಿಡುಗನ ಉಡು ನುಂಗಿ ಹೊಡೆವವನ ದಡೆ ನುಂಗಿತ್ತು.

ಹಾವಿನ ಹದ್ದಿನ ತತ್ತಿಯ ಗಿಡುಗನ ಉಡುವ ಹೊಡೆವವನ ದೊಣ್ಣೆಯ ಬಾಯಿಲ್ಲದ ಇರುಹೆ ನುಂಗಿತ್ತ ಕಂಡೆ. ಸದಾಶಿವಮೂರ್ತಿಲಿಂಗವು ಬಚ್ಚ ಬಯಲಾಯಿತ್ತು.

ಟೀಕು:— ನವದ್ವಾರ ಯುಕ್ತವಾದ ದೇಹದಲ್ಲಿರ್ಪ ಶಂಕಾವಿಷ ಸಂಬಂಧಿಯಾದ ಜೀವನೆಂಬುದೀಗ ಹುತ್ತದೊಳಗಣ ಹಾವೆಂಬ ಶಬ್ದ ಕ್ಕರ್ಥ. ಅಂತಪ್ಪ ಜೀವನ ಪರಮಾತ್ಮನ ಅಂತರಂಗದಲ್ಲಿರ್ಪ ಸ್ವಯ ಜ್ಞಾನವ ಗ್ರಹಿಸತ್ತೆಂಬುದೀಗ ಹದ್ದಿನ ಹೊಟ್ಟೆಯೊಳಗಣ ತತ್ತಿ ನುಂ ಗಿತ್ತೆಂಬ ಶಬ್ದಕ್ಕರ್ಥ. ಅಂತು ಶಿವಜ್ಞಾನ ಪ್ರಕಾಶವ ಗ್ರಹಿಸಲು ಸಕಲ ಪ್ರಪಂಚಿಗೆ ಲಂಘಿಸುತ್ತಿರ್ಪ ಮಾಯೆಯನು ಸೂಕ್ಷ್ಮವಾದ ಚಿತ್‌ಪ್ರಕಾ ಶವು ಗ್ರಹಿಸಿತ್ತೆಂಬುದೀಗ ಗಿಡುಗನ ಉಡು ನುಂಗಿ ಎಂಬ ಶಬ್ದಕ್ಕರ್ಥ. ಅಂತು ಚಿತ್‌ಪ್ರಕಾಶವ ಗ್ರಹಿಸಲು ಸಕಲ ಕರಣಂಗಳ ನಿವೃತ್ತಿಯ ಮಾಡುತ್ತಿರ್ದ ಶರಣನ ಶಿವಭಾವವ ಗ್ರಹಿಸಿತ್ತೆಂಬುದೀಗ ಹೊಡೆವವನ ದಡೆ ನುಂಗಿತ್ತು ಎಂಬ ಶಬ್ದಕ್ಕರ್ಥ. ಜೀವನ ಪರಮಾತ್ಮ ಸ್ವಯಜ್ಞಾ ನವ ಮಾಯೆಯ ಸೂಕ್ಷ್ಮವಾದ ಚಿತ್‌ಪ್ರಕಾಶವ ಸಕಲ ಕರಣಂಗಳ ನಿವೃತ್ತಿ ಮಾಡುತ್ತಿರ್ದ ಶರಣನ ಶಿವಾನುಭಾವ ಭಿನ್ನಾಪೇಕ್ಷೆಯಿಂದ ಸೂಕ್ಷ್ಮ ವಾದ ಪರಿಪೂರ್ಣ ಜ್ಞಾನವೇ ಆ ಸಮೂಹವನವಗ್ರಹಿಸಿ ಪರಶಿವ ತತ್ವ ದಲ್ಲಿ ನಿರ್ವಯಲಾಯಿತ್ತೆಂಬುದೀಗ ಹಾವಿನ ಹದ್ದಿನ ತತ್ತಿಯ ಗಿಡುಗನ ಉಡುವ ಹೊಡೆವವನ ಡೊಣ್ಣೆಯ ಬಾಯಿಲ್ಲದ ಇರುಹೆ ನುಂಗಿತ್ತ ಕಂಡೆ ಸದಾಶಿವಮೂರ್ತಿಲಿಂಗವು ಬಚ್ಚ ಬಯಲಾಯಿತ್ತು.

೧೮. ಕೊಟ್ಟ ಕೂಗಿತ್ತು. ಹಾಲುವಕ್ಕಿಯ ಬಳಿಯಿತ್ತು. ಹಂಗ ಕಟ್ಟಿತ್ತು. ಅವನ ಅವಳ ಮದುವೆ ನಿಂದಿತ್ತು. ಇವನಿಗಾಯಿತ್ತು. ತಂದ ಮರುದಿನಕ್ಕೆ ಸತ್ತವಳು ಮದವಳಿಗ ಮುಂಡೆಯ ಮೇಲೆ ಸೀರೆಯ ಹಾಕಿಕೊಂಡು ಕೆಟ್ಟ ಕೆಟ್ಟನೆಂದು ಹೋಗುತ್ತಿರ್ದನು ಸದಾಶಿವಮೂರ್ತಿ ಲಿಂಗದಲ್ಲಿಗೆ.

ಟೀಕು:— ಅಂತರಂಗದಲ್ಲಿ ಚಿತ್‌ಪ್ರಣವ ಜ್ಞಾನ ಉದಯವಾಗಿ ಶಿವೋಹಂ ಶಿವೋಹಂ ಎನುತ್ತಿದ್ದಿತ್ತೆಂಬುದೀಗ ಕೊಟ್ಟ ಕೂಗಿತ್ತು ಎಂಬ ಶಬ್ದಕ್ಕರ್ಥ. ಆ ಶಿವೋಹಂ ಭಾವವಳವಡಲು ಅಂತರಂಗದಲ್ಲಿರ್ದ ತೈಜ ಸನು ಸಮಸ್ತ ಪ್ರಪಂಚ ಸುಜ್ಞಾನ ಮುಖದಿಂ ನಿವೃತ್ತಿ ಮಾಡಿತ್ತೆಂಬುದೀಗ

ಹಾಲುವಕ್ಕಿ ಬಳಿಯಿತ್ತೆಂಬ ಶಬ್ದಕ್ಕರ್ಥ. ಆ ಪ್ರಪಂಚು ನಾಸ್ತಿಯಾಗಲು ಸಂಕಲ್ಪರೂಪವಾದ ಪೂರ್ವಕ್ರಿಯಾ ಚರಿತ್ರೆಯ ಬಿಟ್ಟು ಉತ್ತರವಾದ ಜ್ಞಾನದಲೆಯ್ದಿತ್ತು ಮನಸ್ಸೆಂಬುದೀಗ ಹಂಗ ಕಟ್ಟಿತ್ತು ಎಂಬ ಶಬ್ದಕ್ಕರ್ಥ. ಶಿವಜ್ಞಾನೋದಯವಾದಲ್ಲಿ ಜೀವನು ಮಾಯೆಯಲ್ಲಿ ಕೂಡಿ ಸಕಲ ವಿಷಯಂಗಳ ಭೋಗಿಸಬೇಕೆಂಬ ಅದೇ ನಿವೃತ್ತಿಯಾಯಿತ್ತೆಂಬುದೀಗ ಅವನ ಅವಳ ಮದುವೆ ನಿಂದಿತ್ತು ಎಂಬ ಶಬ್ದಕ್ಕರ್ಥ. ಆ ಮಾಯಾ ಸಂಭ್ರಮವಳಿಯಲು ಜೀವಭಾವ ಭ್ರಾಂತಳಿದು ಸಜ್ಜೀವ ಸ್ವರೂಪನಾದ ಶರಣನು ನಿರ್ಮಾಯ ಸ್ವರೂಪವಾದ ಜ್ಞಾನ ಶಕ್ತಿಯಲ್ಲಿ ಸಮರಸ ಸಂಯೋಗವ ಮಾಡುತ್ತಿರ್ದನೆಂಬುದೀಗ ಇವನಿಗಾಯಿತ್ತೆಂಬ ಶಬ್ದಕ್ಕರ್ಥ. ಶರಣನ ಮಾರ್ಗ ಕ್ರಿಯಲ್ಲಿ ಸಂಬಂಧವಾದ ಜ್ಞಾನ ಶಕ್ತಿಯು ಮೀರಿದ ಕ್ರಿಯೆಯನೊಳಕೊಂಡಿರ್ಪ ಪ್ರಾಣಲಿಂಗದಲ್ಲಿ ನಿಷ್ಪತ್ತಿಯಾದಳೆಂಬುದೀಗ ತಂದ ಮರುದಿನಕ್ಕೆ ಸತ್ತವಳು ಎಂಬ ಶಬ್ದಕ್ಕರ್ಥ. ಆ ಜ್ಞಾನಶಕ್ತಿಯು ನಿಷ್ಪತ್ತಿಯಾಗಲು ಅಷ್ಟದಳ ಕಮಲಂಗಳಳಿದ ಚಿತ್‌ಸ್ವರೂಪನಾದ ಶರಣನು ಜ್ಞಾನಸ್ವರೂಪವಾದ ಪರಶಿವತತ್ವದಲ್ಲಿ ತನ್ನ ಜ್ಞಾನಾಂಬರವನೇಕೀಕರಿಸಿ ತಾನೆಂಬ ಭಾವ ಮಹಾಘನ ಲಿಂಗದಲ್ಲಿ ನಿಷ್ಪತ್ತಿಯಾಯಿತ್ತೆಂಬುದೀಗ ಮದವಳಿಗ ಮಂಡೆಯ ಮೇಲೆ ಸೀರೆಯ ಹಾಕಿಕೊಂಡು ಕೆಟ್ಟ ಕೆಟ್ಟನೆಂದು ಹೋಗುತ್ತಿರ್ದನು ಸದಾಶಿವಮೂರ್ತಿಲಿಂಗದಲ್ಲಿಗೆ ಎಂಬ ಶಬ್ದಕ್ಕರ್ಥ.

೧೯. ಹುಲ್ಲು ಕೆಂಡವ ಮುಟ್ಟಿ ಹತ್ತದ ಪರಿಯ ನೋಡಾ. ಹಸಿದ ಸರ್ಪನ ಹೆಡೆಯ ನೆಳಲಲ್ಲಿ ಮಂಡೂಕ ನಿಂದ ತೆರ ನೋಡಾ. ಜೀವ ಪರಮನಲ್ಲಿ ಬಂದು ನಿಂದು ಒಂದಾಗದ ಸಂದೇಹವ ನೋಡಾ. ಇಂತೀ ಸಂದನರಿದಲ್ಲದೆ ಅಂಗ ಲಿಂಗ ಪ್ರಾಣ ಪರಮನೊಂದಾಗಲಿಲ್ಲ ಸದಾಶಿವಮೂರ್ತಿಲಿಂಗವನರಿವುದಕ್ಕೆ.

ಟೀಕು:— ವಿಷಯ ಪ್ರಪಂಚದಲ್ಲಿ ಕೂಡಿರ್ದಾತ್ಮನು ಚಿದಗ್ನಿ ಸ್ವರೂಪವಾದ ಇಷ್ಟಲಿಂಗವ ಭಿನ್ನವಿಟ್ಟು ಅಂಗದಲ್ಲಿ ಧರಿಸಿ ಎಂಬುದೀಗ ಹುಲ್ಲು ಕೆಂಡವ ಮುಟ್ಟಿ ಎಂಬ ಶಬ್ದಕ್ಕರ್ಥ. ಆ ಲಿಂಗಕ್ಕೆ ಭಿನ್ನ ಕ್ರಿಯೆಮಾಡಿ ಭಿನ್ನಭಾವಿಯಾಗಿ ಹೋದನಲ್ಲದೆ ಆ ಲಿಂಗದಲ್ಲಿ ಸಮರಸಭಾವ ಘಟಿಸಿದುದಿಲ್ಲವೆಂಬುದೀಗ ಹತ್ತದ ಪರಿಯ ನೋಡಾ ಎಂಬ

ಶಬ್ದಕ್ಕರ್ಥ. ಆ ಶಂಕಾ ವಿಷಯ ಸಂಬಂಧಿಯಪ್ಪ ಜೀವಾತ್ಮನು ಆ ತೃಷೆಯಲ್ಲಿರ್ದನೆಂಬುದೀಗ ಹಸಿದ ಸರ್ಪನ ಎಂಬ ಶಬ್ದಕ್ಕರ್ಥ. ಆ ಜೀವನ ಇಂದ್ರಿಯಂಗಳೆಂಬ ಶಿರಸ್ಸಿನಲ್ಲಿ ಅಜ್ಞಾನ ಮಾಯಾ ಛಾಯೆ ಇರುತ್ತಿಹುದೆಂಬುದೀಗ ಹೆಡೆಯ ನೆಳಲಲ್ಲಿ ಎಂಬ ಶಬ್ದಕ್ಕರ್ಥ. ಆ ಅಜ್ಞಾನ ಮಾಯಾ ಛಾಯೆಯ ಮಧ್ಯದಲ್ಲಿ ಪರಮ ಶಾಂತಿಯ ಬಂಧು ಅಡಗಿರುತ್ತಿಹವೆಂಬುದೀಗ ಮಂಡುಕ ನಿಂದ ತೆರನ ನೋಡಾ ಎಂಬ ಶಬ್ದಕ್ಕರ್ಥ. ಆ ಪರಮ ಶಾಂತಿಯ ಚಿದ್ಬಿಂದು ಅಡಗಿದ ಕಾರಣ ಆ ಜೀವನು ಪರಮಾತ್ಮನಲ್ಲಿರ್ದು ಸಮರಸ ಘಟಿಸಿದುದಿಲ್ಲ ಎಂಬುದೀಗ ಜೀವ ಪರಮನಲ್ಲಿ ಬಂದು ನಿಂದು ಒಂದಾಗದ ಸಂದೇಹವ ನೋಡಾ ಎಂಬ ಶಬ್ದಕ್ಕರ್ಥ. ಆ ಎರಡಿಟ್ಟು ಮಾಡುವ ಭಿನ್ನಕ್ರಿಯಾಚಾರವ ಳಿದು ಅಭಿನ್ನಕ್ರಿಯಾಜ್ಞಾನವಳವಟ್ಟ ಶರಣಂಗೆ ಲಿಂಗಾಂಗ ಸಂಬಂಧ ಘಟಿಸಿ ಜೀವ ಪರಮಾತ್ಮನಲ್ಲಿ ಏಕಾರ್ಥವಹುದಲ್ಲದೆ ಈ ಭೇದವನರಿ ಯದೆ ಇರ್ಪ ಭಿನ್ನಜ್ಞಾನಿಗಳಿಗೆ ಅಸಾಧ್ಯವೆಂಬುದೀಗ ಇಂತೀ ಸಂದನರಿದ ಲ್ಲದೆ ಅಂಗಲಿಂಗ ಪ್ರಾಣಪರಮನೊಂದಾಗಲಿಲ್ಲ ಸದಾಶಿವಮೂರ್ತಿಲಿಂಗ ವನರಿವುದಕ್ಕೆ ಎಂಬ ಶಬ್ದಕ್ಕರ್ಥ.

೨೦. ಮೂರು ಲೋಕವನೆಲ್ಲವ ಗಾಳಿಯಲ್ಲಿ ತೂರಿಬಂದ ಗುಂಗುರು ನುಂಗಿತ್ತು. ಮೂರು ಲೋಕದ ರಾಯರು ಕೂಡಿ ಆ ಗುಂಗುರ ಕೊಂದೆ ಹೆನೆಂದಡೆ ಆರಿಗೂ ಅಸಾಧ್ಯ. ಆ ಗುಂಗುರು ಬಾಯಲ್ಲಿ ಕತ್ತರಿ ವಾಣಿ ಕಾಲನಲ್ಲಿ ಖಂಡೆಯ ಅಂಡದಲ್ಲಿ ಕಾಳಕೂಟ ಪಿಂಡವೆಲ್ಲವು ಅಸಿಯ ಬಳಗ ಅದು ಕೊಂದು ನಿಂದವಂಗಲ್ಲದೆ ಸದಾಶಿಮೂರ್ತಿ ಲಿಂಗದ ಬೆಳಗು ದೊರೆ ಕೊಳ್ಳದು ಎಂಬ ಶಬ್ದಕ್ಕರ್ಥ.

ಟೀಕು:— ಸ್ವರ್ಗ ಮರ್ತ್ಯ ಪಾತಾಳದಲ್ಲಿರ್ಪ ದೇವ ದಾನವ ಮಾನ ವನೆಲ್ಲರನು ಪ್ರಾಣವಾಯು ವಿಕಾರದಿಂ ಸಂಚರಿಸುತ್ತಿರ್ದ ಸೂಕ್ಷ್ಮವಾದ ಮಾಯೆಯೇ ಆವಗ್ರಹಿಸಿದಳೆಂಬುದೀಗ ಮೂರು ಲೋಕವನೆಲ್ಲವ ಗಾಳಿ ಯಲ್ಲಿ ತೂರಿಬಂದ ಗುಂಗುರು ನುಂಗಿತ್ತೆಂಬ ಶಬ್ದಕ್ಕರ್ಥ. ಅಂತಪ್ಪ ತನು ತ್ರಯ ಸಂಬಂಧಿಗಳಾದ ದ್ವೈತಾದ್ವೈತ ಯೋಗ ಮಾರ್ಗಗಳಿಗೆ ಆ ಮಾಯೆಯ ಸಂಹರಿಸಿಹೆನೆಂದೊಡೆ ಅಸಾಧ್ಯವೆಂಬುದೀಗ ಮೂರು ಲೋಕದ ರಾಯರು ಕೂಡಿ ಆ ಗುಂಗುರ ಕೊಂದಿಹೆನೆಂದೊಡೆ ಆರಿಗೂ ಅಸಾಧ್ಯವೆಂಬ ಶಬ್ದಕ್ಕರ್ಥ. ಅಂತಪ್ಪ ಮಾಯೆಯನು ಭಿನ್ನಾಪೇಕ್ಷೆಯಲ್ಲಿ

ಸೋಂಕಿದವರ ಕಡಿದು ಕತ್ತರಿಸುವ ಅತಿ ವಿಷಾದಕವಪ್ಪ ಸಂಸಾರ ವಿಷಯ ರಸ ತುಂಬಿಹುದೆಂಬುದೀಗ ಆ ಗುಂಗುರು ಬಾಯಲ್ಲಿ ಕತ್ತರಿವಾಣಿ ಎಂಬ ಶಬ್ದಕ್ಕರ್ಥ. ಆ ಮಾಯೆಯು ದುಶ್ಚರಿತ್ರವೆಂಬ ಚರಣದಲ್ಲಿ ಖಂಡಿತ ಜ್ಞಾನವೆಂಬ ಶಸ್ತ್ರವಿರುತ್ತಿಹುದೆಂಬುದೀಗ ಕಾಲನಲ್ಲಿ ಖಂಡೆಯವೆಂಬ ಶಬ್ದಕ್ಕರ್ಥ. ಉತ್ಪತ್ತಿಗೆ ಕಾರಣವಾದ ತನುವೆಲ್ಲ ಅಜ್ಞಾನಮಯವಾಗಿಹು ದೆಂಬುದೀಗ ಅಂಡದಲ್ಲಿ ಕಾಳಕೂಟವೆಂಬ ಶಬ್ದಕ್ಕರ್ಥ. ಆ ಮಾಯೆಯ ಸೂಕ್ಷ್ಮದೇಹದಲ್ಲಿ ಸಕಲ ಕರಣಂಗಳೆಲ್ಲ ಅಜ್ಞಾನಸಂಬಂಧಿಗಳಾಗಿಹುದೆಂ ಬುದೀಗ ಪಿಂಡವೆಲ್ಲ ಅಸಿಯ ಬಳಗವೆಂಬ ಶಬ್ದಕ್ಕರ್ಥ. ಸುಜ್ಞಾನೋದ ಯವಾಗಿ ಸಕಲ ಮಾಯಾ ಪ್ರಪಂಚ ನಿವೃತ್ತಿ ಮಾಡಿದಲ್ಲದೆ ಚಿದ್ಘನ ಲಿಂಗದ ಚಿತ್ ಪ್ರಕಾಶ ದೊರೆಕೊಳ್ಳದೆಂಬುದೀಗ ಅದು ಕೊಂದು ನಿಂದವಂ ಗಲ್ಲದೆ ಸದಾಶಿವಮೂರ್ತಿ .ಲಿಂಗದ ಬೆಳಗು ದೊರೆಕೊಳ್ಳದು ಎಂಬ ಶಬ್ದಕ್ಕರ್ಥ.

(೨೧) ಎರಳೆಯ ಕೊಂಬಿನ ನುಲಿಕೆಯ ಬಳಸಿನಲ್ಲಿ ಅರುಹಿರಿ ಯರೆಲ್ಲರು ಬಳಿಸಿ ಆಡುತ್ತೈದಾರೆ. ಎರಳೆ ಸತ್ತು ಕೋಡಳಿದು ಕೊಂಬಿನ ನುಲುಹು ನೇರಿತವಾಗಿ ಬಳಸುವ ಅರುಹಿರಿಯರೆಲ್ಲರು ಒಬ್ಬುಳಿತವಾಗಿ ಸುಳುಹು ಸಿಂದಾಗವೇ ಸದಾಶಿವಮೂರ್ತಿ ಲಿಂಗದ ಅಂಗದಲ್ಲಿ ಲೀಯ ವಾಯಿತ್ತು.

ಟೀಕು:— ಜೀವಾತ್ಮನೆಂಬುದೀಗ ಎರಳೆಯೆಂಬ ಶಬ್ದಕ್ಕರ್ಥ. ಅಂತಪ್ಪ ಜೀವಂಗೆ ಅಹಂಕಾರ ಮಮಕಾರಗಳೇ ಕೋಡುಗಳಾಗಿಹು ದೆಂಬುದೀಗ ಎರಳೆಯ ಕೊಂಬಿನ ಎಂಬ ಶಬ್ದಕ್ಕರ್ಥ. ಅಂತಪ್ಪ ಅಹಂಕಾರ ಮಮಕಾರಂಗಳ ಸಂಕಲ್ಪ ಮಾರ್ಗವಿಡಿದು ಮಾಯಾ ಪ್ರಪಂಚಿನ ತಿರುಹುಮುರುವಿನಲ್ಲಿ ನಾ ಬಲ್ಲೆ ಬಲ್ಲಿದರೆಂಬ ಅದ್ವೈತ ಜ್ಞಾನಿಗಳೆಲ್ಲರು ಮಾಯಾಪ್ರಪಂಚಿನಲ್ಲಿ ವರ್ತಿಸುತ್ತಿಹರೆಂಬುದೀಗ ನುಲಿ ಕೆಯ ಬಳಿಸಿನಲ್ಲಿ ಅರುಹಿರಿಯರೆಲ್ಲರು ಬಳಿಸಿಯಾಡುತ್ತೈದಾರೆ ಎಂಬ ಶಬ್ದಕ್ಕರ್ಥ. ಅಂತು ಪ್ರಪಂಚಿನಲ್ಲಿ ಕೂಡಿ ಪರಿಭವಕ್ಕೆ ಬರುತ್ತಿದ್ದಾ ತ್ಮಂಗೆ ಶಿವಕೃಪೆಯಿಂ ಸುಜ್ಞಾನೋದಯವಾಗಲು ಜೀವಭಾವ ನಿವೃತ್ತಿ ಯಾಯಿತ್ತೆಂಬುದೀಗ ಎರಳೆ ಸತ್ತು ಎಂಬ ಶಬ್ದಕ್ಕರ್ಥ. ಅಂತು ಜೀವ ಭಾವವಳಿಯಲು ಅಹಂಕಾರ ಮಮಕಾರಗಳು ನಷ್ಟವಾಯಿತ್ತೆಂಬುದೀಗ

ಕೋಡಳಿದು ಎಂಬ ಶಬ್ದಕ್ಕರ್ಥ. ಅಹಂಕಾರವಳಿದಲ್ಲಿ ಸಂಕಲ್ಪ ಮಾರ್ಗವಿಡಿದಿರ್ಪ ಸಕಲ ಮಾಯಾ ಪ್ರಪಂಚಿನ ತಿರುವು ಮುರುವುಗಳೆಲ್ಲ ನಿವೃತ್ತಿಯ ಮುಖವಿಂಗೆ ಸಮಾನವಾದವೆಂಬುದೀಗ ಕೊಂಬಿನ ನುಲುಹು ನೇರಿತವಾಗಿ ಎಂಬ ಶಬ್ದಕ್ಕರ್ಥ. ಅಂತು ಪ್ರಪಂಚಿನಲ್ಲಿ ಚರಿಸುತ್ತಿರ್ದ ಅದ್ವೈತಜ್ಞಾನಿಗಳೆಲ್ಲರು ಶಿವಜ್ಞಾನೋದಯವಾದಲ್ಲಿ ತಮ್ಮ ನಿಜವ ತಿಳಿದು ಶ್ರೀಗುರುಕಾರುಣ್ಯವಂ ಪಡೆದು ನಿವೃತ್ತಿ ಮಾರ್ಗವನೆಯ್ದುತ್ತಿಹರೆಂಬುದೀಗ ಬಳಸುವ ಅರುಹಿರಿಯರೆಲ್ಲರು ಒಬ್ಬುಳಿತವಾಗಿ ಎಂಬ ಶಬ್ದಕ್ಕರ್ಥ. ಅಂತು ನಿವೃತ್ತಿ ಮಾರ್ಗವನೆಯ್ದಲು ಸಕಲ ಪ್ರಪಂಚಿನ ವರ್ತನೆಗಳೆಲ್ಲ ಅಳಿದು ಮಹಾಘನಲಿಂಗದ ಚಿತ್ಪ್ರಭಾಂಗದಲ್ಲಿ ಏಕಾರ್ಥವಾದರೆಂಬುದೀಗ ಸುಳುಹು ನಿಂದಾಗಲೆ ಸದಾಶಿವ ಮೂರ್ತಿಲಿಂಗದ ಅಂಗದಲ್ಲಿ ಲೀಯವಾಯಿತ್ತು ಎಂಬ ಶಬ್ದಕ್ಕರ್ಥ.

R. N. B. 2554

# ಶಿವಾನುಭವ.

ಸಂಪುಟ ೧೨ ] ಜೂನ ೧೯೩೮. [ ಸಂಚಿಕೆ ೯

## ವಿಷಯಾನುಕ್ರಮಣಿಕೆ.

# ವಚನಶಾಸ್ತ್ರಸಾರಭಾಗ ೨.

## ( ವೀರಶೈವ ಸಿದ್ಧಾಂತ. )

ರಾ॥ ಸಾ॥ **ಫ. ಗು. ಹಳಕಟ್ಟಿ** ಇವರು ಹೊಸದಾಗಿ ವಿರಚಿಸಿದ ಈ ಉದ್ಗ್ರಂಥವು ನಮ್ಮಲ್ಲಿ ದೊರೆಯುವದು. ಇದರಲ್ಲಿಯ ಪುಟಗಳು ೬೩೧ ಡೇಮಿ. **ಬೆಲೆ** ೪--೮--೦

ವ್ಯಾನೇಜರ

**ಹಿತಚಿಂತಕ ಪ್ರಿಂಟಿಂಗ ಪ್ರೆಸ್**

**ವಿಜಾಪುರ.**

ಶ್ರೀ

# ಶಿವಾನುಭವ

ಸಂಪುಟ ೧೨ ]  ಸಪ್ಟಂಬರ ೧೯೩೮.  [ ಸಂಚಿಕೆ ೧೨

## ವಿಷಯಾನುಕ್ರಮಣಿಕೆ.

# ಶಿವಾನುಭವ.

ವರ್ಷ ೧೨] ಜೂನ ೧೯೩೮ [ಸಂಚಿಕೆ ೯

## ಬಸವೇಶ್ವರನ ನೀತಿತತ್ವ.

( ಲೇಖಕ:- ಎಸ್. ಬ್ಹಿ. ಹಂಜಿ, ಬಿ. ಎ, ಹಲಸಿ. )

ಈ ಜಗತ್ತಿನಲ್ಲಿ ಮನುಷ್ಯನು ಯಾವಾಗಲೂ ಸುಖದಿಂದ ಜೀವಿಸ ಬೇಕಾದರೆ ನೀತಿತತ್ವದ ನಿಯಮಗಳಿಗನುಸಾರವಾಗಿ ನಡೆಯಬೇಕಾಗು ವದು. ಇವುಗಳನ್ನು ನೀತಿವಿಶಾರದರಾದ ಹಿರಿಯರು, ಕವಿಗಳು, ತತ್ವ ಜ್ಞಾನಿಗಳು ಮತ್ತು ಇತಿಹಾಸಕಾರರು ಆ ಆ ಕಾಲಕ್ಕೆ ಮೇಲಿಂದ ಮೇಲೆ ಹೇಳುತ್ತ ಬಂದಿರುವರು. ಇಂಥವರ ನೀತಿತತ್ವಗಳಿಂದಲೇ ಜನಾಂಗವು ಸುಧಾರಿಸುತ್ತ ಈಗಿನ ಪ್ರಗತಿಯ ಸ್ಥಿತಿಗೆ ಬಂದಿರುವದು. ಜಗತ್ತಿನ ತತ್ವಬೋಧಕರಾದ ಜೀಸಸ್ ಕ್ರೈಸ್ಟ, ಮಹಮ್ಮದಪೈಗಂಬರ, ಭಗವಾನ ಬುದ್ಧ, ಸ್ವಾಮಿ ವಿವೇಕಾನಂದ, ಮಹಾತ್ಮಾ ಗಾಂಧಿ, ರವೀಂದ್ರನಾಥ ಟಾಗೋರ, ಟಾಲಸ್ಟಾಯ ಮೊದಲಾದ ಸುಪ್ರಸಿದ್ಧ ವ್ಯಕ್ತಿಗಳು ತಮ್ಮ ಅನುಭವಯುಕ್ತವಾದ ತತ್ವದ ಮಾತುಗಳನ್ನು ಹೇಳಿ ದ್ದಾರೆ. ಇಂಥ ಪ್ರಸಿದ್ಧ ನೀತಿಬೋಧಕರಲ್ಲಿ ಬಸವೇಶ್ವರನೂ ಒಬ್ಬ ನೆಂದು ಹೇಳಬಹುದು.

ಸಾಮಾನ್ಯವಾಗಿ ಧರ್ಮಸುಧಾರಕರು ತಮ್ಮ ತಮ್ಮ ಧರ್ಮದ ತತ್ವಗಳನ್ನು ಹೇಳುವಾಗ ನೀತಿತತ್ವಗಳನ್ನು ಹೇಳಿಯೇ ಹೇಳಿದ್ದಾರೆ. ಆದರೆ ಬಸವೇಶ್ವರನು ಮತೋದ್ಧಾರಕನಾದರೂ ಆತನು ಹೇಳುವ ರೀತಿಯೇ ಬೇರೆಯಾಗಿರುವದು. ಜನರಿಗೆ ಬೋಧಿಸುವದಕ್ಕಿಂತ ಮೊದಲು ಅವನು ಚಿಕ್ಕಂದಿನಿಂದಲೇ ಸದಾಚಾರದಿಂದ ನಡೆಯುತ್ತ ಸತ್ಯಮಾರ್ಗ

ವನ್ನು ಹಿಡಿದು ಸತತವಾದ ಸಾಧನದಿಂದ ಸಾಕ್ಷಾತ್ಕಾರವನ್ನು ಪಡೆದು ತನ್ನ ಅನುಭವದಲ್ಲಿ ಬಂದ ಎಲ್ಲ ಸಂಗತಿಗಳನ್ನು ತಿಳಿಸಿದನು. ಅವನು ತಾನು ನುಡಿದಂತೆ ನಡೆದು ಅನುಭವ ಪಡೆದು ಆಮೇಲೆ ಅದನ್ನು ಬೋಧಿಸಿದನು. ಅವನ ಮುಖ್ಯವಾದ ವೈಶಿಷ್ಟ್ಯವೇನಂದರೆ ಅವನು ಸತ್ಯಧರ್ಮದಿಂದ ನಡೆದು ಆತ್ಮಶುದ್ಧಿಯನ್ನು ಪಡೆದಿದ್ದನು. ಜಗತ್ತಿಗೆ ಬೋಧನೆ ಮಾಡಬೇಕಾದರೆ ಮೊದಲು ನಮ್ಮ ಅಂತರಂಗವನ್ನು ಶುದ್ಧ ಮಾಡಿಕೊಂಡು ಆತ್ಮವಿಶ್ವಾಸವನ್ನು ಪಡೆಯಬೇಕಾಗುವದು. ಇಲ್ಲದಿದ್ದರೆ ನಮ್ಮ ಆಚರಣೆಯಲ್ಲಿ ದೋಷವುಂಟಾಗಿ ನಮ್ಮ ತತ್ವಬೋಧನೆಯು ವ್ಯರ್ಥವಾಗಿ ನಮ್ಮ ಯಾವ ಮಾತಿಗೂ ಜನರ ನಂಬಿಗೆಯಾಗುವದಿಲ್ಲ. ಬಸವೇಶ್ವರನು ಈ ಪೂರ್ವಸಿದ್ಧತೆಯನ್ನು ಮಾಡಿಕೊಂಡು ಯಾರಾದರೂ ತನ್ನಲ್ಲಿ ತಪ್ಪನ್ನು ತೋರಿಸಿಕೊಟ್ಟರೆ ಅದಕ್ಕೆ ವಿನಯದಿಂದ ಒಪ್ಪಿ ಅದನ್ನು ತಿದ್ದಿಕೊಂಡು ನಡೆಯುತ್ತಿದ್ದನು. ಅವನು ತಾನು ದೊಡ್ಡವನೆಂದು ತಿಳಿಯದೆ ದುಷ್ಟರನ್ನೂ ದುರಾಚಾರಿಗಳನ್ನೂ ಪ್ರೇಮದಿಂದ ಹತ್ತರ ಕರೆದು ಮಧುರವಾದ ನುಡಿಗಳಿಂದ ಅವರ ಅಜ್ಞಾನವನ್ನು ತಿಳಿಸಿಕೊಟ್ಟು ಸನ್ಮಾರ್ಗಕ್ಕೆ ಹಚ್ಚುತ್ತಿದ್ದನು. ಪಾಪಿಗಳನ್ನು ಉದ್ಧಾರ ಮಾಡುವಾಗ ಅವನು ತೋರಿಸಿದ ವಿನಯವನ್ನೂ, ಪ್ರೇಮವನ್ನೂ, ಕುಶಲತೆಯನ್ನೂ ನೋಡಿದರೆ ಎಂಥವರಿಗಾದರೂ ಆನಂದವೂ ಆಶ್ಚರ್ಯವೂ ಆಗದೆ ಇರಲಿಕ್ಕಿಲ್ಲ. ತಮ್ಮಷ್ಟಕ್ಕೆ ತಾವು ಬೇಕಾದಷ್ಟು ನೀತಿವಿಶಾರದರಾಗಬಹುದು. ಆದರೆ ಇತರರನ್ನು ಅವರ ಅಜ್ಞಾನವನ್ನು ಹೋಗಲಾಡಿಸಿ ಯೋಗ್ಯ ದಾರಿಗೆ ಹಚ್ಚುವದು ಸಾಮಾನ್ಯ ಕಾರ್ಯವಲ್ಲ.

ಬಸವೇಶ್ವರನು ಮೊದಲಿನಿಂದ ಸತ್ಯಪ್ರೇಮಿಯು. ಅಸತ್ಯವೆನ್ನುವದು ಅವನ ಕನಸುಮನಸಿನಲ್ಲಿಯೂ ಸಹ ಇದ್ದಿಲ್ಲ. ಸತ್ಯವನ್ನು ನುಡಿದು ಸತ್ಯದಿಂದ ಆಚರಿಸುವದೇ ಆತನ ಧ್ಯೇಯವಾಗಿತ್ತು. ಮತ್ತು ಸತತವಾದ ಸಾಧನದಿಂದ ಸತ್ಯದ ಶೋಧವನ್ನು ಮಾಡಿದನು.

" ದೇವಲೋಕ, ಮರ್ತ್ಯಲೋಕವೆಂಬುದು ಬೇರಿಲ್ಲ ಕಾಣಿರೋ, ಸತ್ಯವ ನುಡಿವುದೇ ದೇವಲೋಕ, ಮಿಥ್ಯವ ನುಡಿವುದೇ ಮರ್ತ್ಯಲೋಕ, ಆಚಾರವೇ ಸ್ವರ್ಗ, ಅನಾಚಾರವೇ ನರಕ, ಕೂಡಲಸಂಗಮದೇವಾ ನೀವೇ ಪ್ರಮಾಣ "

"ಪುಣ್ಯ ಪಾಪಂಗಳೆಂಬುವು ತಮ್ಮ ಇಷ್ಟವು ಕಂಡಿರಯ್ಯಾ! 'ಆಯ್ಯಾ' ಎಂದಡೆ ಸ್ವರ್ಗ, 'ಎಲವೋ' ಎಂದಡೆ ನರಕ, 'ದೇವಭಕ್ತ ಜಯ ಜಯ' ಎಂಬ ನುಡಿಯೊಳಗೆ ಕೈಲಾಸ ವೈದುದು ಕೂಡಲಸಂಗಮದೇವಾ."

ಮೇಲಿನ ಆತನ ಮೊದಲನೆಯ ವಚನದಿಂದ ಸತ್ಯದ ಮಹತ್ವವು ಕಂಡುಬರುವದು. ನಾವು ಸ್ವರ್ಗವೆಂದು ಕರೆಯುವದು ಆಕಾಶದ ಕಡೆಗೆ ಅಥವಾ ಬೇರೆ ಯಾವ ಗುಪ್ತಸ್ಥಳದಲ್ಲಿ ಇಲ್ಲ. ಆದರೆ ಸ್ವರ್ಗ ನರಕಗಳೆರಡೂ ನಮ್ಮ ಈ ಜಗತ್ತಿನಲ್ಲಿಯೇ ಇರುವವು. ನಾವು ಸತ್ಯವನ್ನು ನುಡಿದು ಸದಾಚಾರದಿಂದ ವರ್ತಿಸಿದರೆ ಇದೇ ಸ್ವರ್ಗಲೋಕವಾಗುವದು. ಮತ್ತು ಅಸತ್ಯವನ್ನು ನುಡಿದು ಕೆಟ್ಟರೀತಿಯಿಂದ ನಡೆದರೆ ಇದೇ ನರಕವಾಗುವದು. ಎರಡನೆಯ ವಚನದಿಂದ ಪುಣ್ಯ ಪಾಪ ಸ್ವರ್ಗ ಮತ್ತು ನರಕಗಳನ್ನು ದೊರಕಿಸುವದು ನಮ್ಮ ಕೈಯಲ್ಲಿಯೇ ಇದೆ ಎಂದು ತಿಳಿಯುವದು. ಇವರ ಮೇಲಿಂದ ನಮಗೆ ಸ್ವರ್ಗವು, ಪುಣ್ಯವು ಇಲ್ಲವೆ ಸುಖವು ಸಿಗಬೇಕಾದರೆ ಸತ್ಯವನ್ನು ಪಾಲಿಸಿ ಸದಾಚಾರದಿಂದ ನಡೆಯಬೇಕು. ಈ ರೀತಿಯಿಂದ ಆತನು ಸತ್ಯ ಮತ್ತು ಸದಾಚಾರಕ್ಕೆ ಮಹತ್ವಕೊಟ್ಟು ತಾನೂ ಹಾಗೆ ನಡೆದು ತನ್ನ ಎಲ್ಲ ಬಂಧುಗಳು ಹಾಗೆ ನಡೆಯಬೇಕೆಂದು ಉಪದೇಶ ಮಾಡಿದನು.

ಸತ್ಯವನ್ನು ಪಾಲಿಸಿದ ಮೇಲೆ ಅದರ ಕೂಡ ಅಹಿಂಸೆಯು ಸಹಜವಾಗಿ ಬರುವದು. ಜಗತ್ತಿನಲ್ಲಿರುವ ಎಲ್ಲ ಜೀವಿಗಳು ಶಿವನ ದಯೆಯಿಂದ ಹುಟ್ಟಿದ ಮೇಲೆ ಆತನು ದಯೆ ತೋರಿಸುವಂತೆ ನಾವಾದರೂ ಅವುಗಳನ್ನು ನೋಯಿಸದೆ ರಕ್ಷಣ ಮಾಡತಕ್ಕದ್ದು. ಮನುಷ್ಯರಷ್ಟೇ ನಮ್ಮ ಬಂಧುಗಳಲ್ಲ. ಆದರೆ ಉಳಿದ ಎಲ್ಲ ಪ್ರಾಣಿಗಳೂ ಕೂಡ ನಮಗೆ ಒಂದು ರೀತಿಯಿಂದ ಸಂಬಂಧಿಸಿದ್ದು ಮನುಷ್ಯನ ಹಿತಕ್ಕಾಗಿಯೇ ಇರುತ್ತದೆ. ಆದುದರಿಂದ ನಾವು ಅವುಗಳ ಮೇಲೆ ಅಂತಃಕರಣವನ್ನೂ ಪ್ರೇಮವನ್ನೂ ತೋರಿಸಲೇಬೇಕು ಎಂದು ಬಸವೇಶ್ವರನು ಉಪದೇಶ ಮಾಡಿದನು. ಈ ಸಂಗತಿಯು ಆತನ ಕೆಳಗಿನ ವಚನದಿಂದ ಸ್ಪಷ್ಟವಾಗುವದು.

"ದಯವಿಲ್ಲದ ಧರ್ಮವದಾವುದಯ್ಯ? ದಯವೇ ಬೇಕು ಸಕಲ ಪ್ರಾಣಿಗಳಲ್ಲಿ. ದಯವೇ ಧರ್ಮದ ಮೂಲವಯ್ಯ. ಕೂಡಲಸಂಗಯ್ಯನಂತಲ್ಲದೊಲ್ಲನಯ್ಯ."

ಇದೇ ಕಾರಣದಿಂದ ಹಿಂಸಾಮಯ ಯಜ್ಞಯಾಗಾದಿಗಳನ್ನು ಮತ್ತು ಫಲಾಪೇಕ್ಷೆಯುಳ್ಳ ವಿಧಿನಿಷೇಧಗಳನ್ನು ಒಳಗೊಂಡ ವೇದದ ಕರ್ಮಕಾಂಡವನ್ನು ಬಿಟ್ಟು ಜ್ಞಾನಕಾಂಡವನ್ನು ಮಾತ್ರ ಸ್ವೀಕರಿಸಿದನು. ಭಗವಾನ್ ಬುದ್ಧನಾದರೂ ಇದೇ ತತ್ವದವನಿದ್ದು "ಅಹಿಂಸಾ ಪರಮೋ ಧರ್ಮಃ" ಎಂದು ಗಂಭೀರವಾಗಿ ಮೊದಲೇ ಸಾರಿಹೇಳಿದ್ದನು.

ಮನುಷ್ಯನಿಗೆ ದುರ್ವ್ಯಸನಗಳು ಬಹು ಸುಲಭವಾಗಿ ಹತ್ತುವವು. ಆದರೆ ಅವುಗಳನ್ನು ಬಿಡಿಸುವದು ಬಹಳ ಕಠಿಣ. ಬಸವೇಶ್ವರನು ಜನರ ಇಂಥ ಸ್ಥಿತಿಯನ್ನು ನೋಡಿ ಕನಿಕರಪಟ್ಟು ತನ್ನ ಕೈಲಾದಷ್ಟು ಸುಧಾರಿಸಿದನು ಮದ್ಯಪಾನ ಮಾಡುವದು, ಮಾಂಸಾಹಾರ ಮಾಡುವದು, ವ್ಯಭಿಚಾರ ಮಾಡುವದು ಮೊದಲಾದ ಭಯಂಕರ ದುರ್ವ್ಯಸನಗಳನ್ನು ಬಿಡಿಸಿ ಸದಾಚಾರದಿಂದ ವರ್ತಿಸಲಿಕ್ಕೆ ಹಚ್ಚಿದನು.

"ದುರ್ವ್ಯಸನಿ, ದುರಾಚಾರಿ ಎಂದೆನಿಸದಿರಯ್ಯಾ! ಎನ್ನ ಲಿಂಗ ವ್ಯಸನಿ ಜಂಗಮ ಪ್ರೇಮಿ ಎಂದೆನಿಸಯ್ಯ. 'ಅವಶ್ಯ ಮನುಭೋಕ್ತವ್ಯಂ' ಎಂದೆನಿಸದಿರಯ್ಯ! ಕೂಡಲಸಂಗಮದೇವಾ ಸೆರಗೊಡ್ಡಿ ಬೇಡುವೆನು."

ಈ ವಚನವನ್ನು ನೋಡಿದರೆ ಅವನು ಕೆಟ್ಟ ವ್ಯಸನಗಳಿಗೆ ಎಷ್ಟು ತಿರಸ್ಕರಿಸುತ್ತಿದ್ದನು ಮತ್ತು ತನ್ನನ್ನು ಸನ್ಮಾರ್ಗಕ್ಕೆ ಹಚ್ಚೆಂದು ಎಷ್ಟು ದೀನಸ್ವರದಿಂದ ಬೇಡಿಕೊಳ್ಳುತ್ತಿದ್ದನು ಎಂಬುದು ತಿಳಿಯುವದು.

ಬಸವೇಶ್ವರನು ಎಲ್ಲರನ್ನೂ ಮನ್ನಿಸುವಂತೆ ಸ್ತ್ರೀಯರಿಗೆ ಯೋಗ್ಯ ಮಾನ ಮರ್ಯಾದೆಗಳನ್ನು ಸಲ್ಲಿಸುತ್ತಿದ್ದನು. ಅವರಿಗೆ ಪುರುಷರ ಸಮಾನ ಹಕ್ಕುಗಳನ್ನು ಕೊಟ್ಟದ್ದಲ್ಲದೆ ದೇವತೆಯರ ಸ್ಥಾನವನ್ನು ಕೊಟ್ಟಿದ್ದನು. ಪರಸ್ತ್ರೀಯರನ್ನು ಅವನು ಯಾವಾಗಲೂ ತನ್ನ ಸಹೋದರಿಯರಂತೆ ಇಲ್ಲವೆ ಮಾತೆಯಂತೆ ಕಾಣುತ್ತಿದ್ದನು.

"ಎಲ್ಲಿ ನೋಡಿದಲ್ಲಿ ಮನವೆಳಿಸಿದೊಡೆ ಆಣೆ, ನಿಮ್ಮಾಣೆ, ನಿಮ್ಮ ಪ್ರಮಥರಾಣೆ. ಪರವಧುವನು ಮಹಾದೇವಿ ಎಂದು ಕಾಂಬೆನು ಕೂಡಲ ಸಂಗಮದೇವಾ."

"ನೋಡಲಾಗದು, ನುಡಿಸಲಾಗದು, ಪರಸ್ತ್ರೀಯರ ಬೇಡ, ಕಾಣಿರೋ. ತಗರ ಬೆನ್ನಲ್ಲಿ ಹರಿವ ಸೊಣಗನಂತೆ ಬೇಡ, ಕಾಣಿರೋ, ಒಂದಾಸೆಗೆ ಸಾಸಿರ ವರುಷ ನರಕದಲ್ಲದ್ದುವ ಕೂಡಲಸಂಗಮದೇವಾ"

ಈ ವಚನಗಳಿಂದ ಆತನ ಪರನಾರೀ ಸಹೋದರತ್ವದ ಭಾವವನ್ನು ಕಾಣಬಹುದು. ಪರಸ್ತ್ರೀಯರನ್ನು ಕಂಡು ಮೋಹಿಸುವ ಜನರು ಬಹಳ. ಆದುದರಿಂದ ಬಸವೇಶ್ವರನು ಇದನ್ನರಿತು,

"ಒಡೆಯರು ತಮ್ಮ ಮನೆಗೆ ಒಡಗೊಂಡು ಹೋದರೆ, ತುಡು ಗುಣಿತನವಲ್ಲಿ ಪರವಧುವ ನೋಡುವ ಸರಸ ಬೇಡ ಕಾಣಿರಣ್ಣಾ. ಒಡೆಯನರಸಿಯು ಸರಸ ಬೇಡ. ಕೂಳಸೊಕ್ಕು ತಲೆಗೇರಿ, ರಾಣೀವಾ ಸದೊಡನೆ ಸರಸಬೇಡ. ......." ಎಂದು ಪರವಧುಗಳನ್ನು ಪಾಪ ದೃಷ್ಟಿಯಿಂದ ನೋಡಬೇಡಿರೆಂದು ಹೇಳಿ ತಮ್ಮ ಪತ್ನಿಯರ ಕೂಡ ಸುಖದಿಂದ ಕಾಲಕಳೆಯಬೇಕೆಂದು ಬೋಧಿಸಿದನು. ಕೇವಲ ಹೆಸರಿಗೆ ಮಾತ್ರ ಬ್ರಹ್ಮಚಾರಿಗಳಂತೆ ಇದ್ದು ಕೆಟ್ಟ ವ್ಯಸನಗಳಿಗೆ ಈಡಾಗುವದ ಕ್ಕಿಂತ ವಿವಾಹಿತರಾಗಿ ಸದ್ವರ್ತನದಿಂದ ಇರುವದು ಲೇಸೆಂದು ಆತನು,

"ಇಂದ್ರಿಯ ನಿಗ್ರಹವ ಮಾಡಿದರೆ ಹೊಂದುವವು ದೋಷಂಗಳು. ಮುಂದೆ ಬಂದು ಕಾಡುವವು ಪಂಚೇಂದ್ರಿಯಂಗಳು. ಸತಿಪತಿ ರತಿ ಸುಖವ ಬಿಟ್ಟರೆ ಸಿರಿಯಾಳ ಚೆಂಗಳೆಯರು? ಸತಿಪತಿ ರತಿಸುಖ ಭೋಗೋಪಭೋಗ ಬಿಟ್ಟರೆ ಸಿಂಧು ಬಲ್ಲಾಳನವರು? ನಿಮ್ಮ ಮುಟ್ಟಿ ಪರಧನ, ಪರಸತಿಯರಿಗೆಳಸಿದರೆ, ನಿಮ್ಮ ಚರಣಕ್ಕೆ ದೂರ ಕೂಡಲ ಸಂಗಮದೇವಯ್ಯ."

ಎಂದು ಹೇಳಿ ಸದ್ಗೃಹಸ್ಥರಾಗಿ ಸದಾಚಾರದಿಂದ ವರ್ತಿಸಲಿಕ್ಕೆ ಯೋಗ್ಯ ದಾರಿಯನ್ನು ತೋರಿಸಿದನು.

ಇನ್ನು ನಿರುದ್ಯೋಗಿ ಮತ್ತು ಆಲಸ್ಯವುಳ್ಳ ಜನರಿಗೆ ಯೋಗ್ಯ ಕೆಲಸಕ್ಕೆ ಹಚ್ಚುವದು ಬಹಳ ಮಹತ್ವದ ಮತ್ತು ಕಠಿಣ ಕಾರ್ಯ ವಾಗಿರುತ್ತದೆ. ಆದರೆ ಬಸವೇಶ್ವರನು ಇದನ್ನು ಸಹ ಸುಲಭವಾಗಿ ತನ್ನ ನೂತನ ಬೋಧನೆಯಿಂದ ನೆರವೇರಿಸಿದನು. ಕೆಲವರು ಕೈಗೆ ಮೈಗೆ ಹತ್ತದ ಉದ್ಯೋಗಗಳನ್ನು ಮಾತ್ರ ಮಾಡಿ ಉಳಿದವುಗಳನ್ನು ಕೀಳು ಎಂದೂ ಅವುಗಳನ್ನು ಮಾಡುವದು ತಮ್ಮ ಮಾನ ಮರ್ಯಾ ದೆಗೆ ಸಾಲದೆಂದೂ ತಿಳಿದು ನಿರುದ್ಯೋಗಿಗಳಾಗುತ್ತಾರೆ. ಎಲ್ಲ ಉದ್ಯೋ ಗಗಳು ಅಷ್ಟೇ ಮಹತ್ವದವು ಮತ್ತು ಯಾವದೇ ಉದ್ಯೋಗ ಮಾಡಿ

ದರೂ ಸಹ ಅದು ಒಂದು ಪವಿತ್ರ ಕಾರ್ಯವೆಂದೂ ಮತ್ತು ಪ್ರತಿಯೊಬ್ಬನು ಒಬ್ಬರ ಹಂಗಿನೊಳಗಿರದೆ ತನ್ನ ಸ್ವಂತ ಶ್ರಮದಿಂದ ಗಳಿಸಿದ ಹಣವನ್ನೇ ಉಪಯೋಗಿಸಬೇಕು ಹೊರತು ಅನ್ಯರ ಧನವನ್ನು ಎಂದೆಂದಿಗೂ ಮುಟ್ಟಬಾರದೆಂದೂ ಉಪದೇಶ ಮಾಡಿದನು. ಇದರಿಂದ ಪ್ರತಿಯೊಬ್ಬನು ಒಂದೊಂದು ಉದ್ಯೋಗವನ್ನು ಮಾಡಹತ್ತಿದರು. "ಕಾಯಕವೇ ಕೈಲಾಸ" ವೆಂದು ತಿಳಿಸಿದ್ದರಿಂದ ಅವರಿಗೆ ಮೊದಲು 'ಕೀಳು' ಎನಿಸಿದ ಉದ್ಯೋಗಗಳು ಪವಿತ್ರವೆನಿಸಿ ಹೆಚ್ಚಿಗೆ ಪ್ರಚಾರದಲ್ಲಿ ಬಂದವು. ಹೀಗೆ ಬಸವೇಶ್ವರನು ಶ್ರಮದ ಗೌರವ (*Dignity of Labour*) ವನ್ನು ಆಚರಣೆಯಲ್ಲಿ ತಂದು ಜನರ ನಿರುದ್ಯೋಗತನ ಮತ್ತು ಆಲಸ್ಯತನವನ್ನು ಹೋಗಲಾಡಿಸಿದನು.

ಬಸವೇಶ್ವರನು ಸಾಮಾನ್ಯ ದಿನದ ವ್ಯವಹಾರಕ್ಕೆ ಉಪಯೋಗವುಳ್ಳ ಅನೇಕ ನೀತಿಯ ನುಡಿಗಳನ್ನು ಹೇಳಿರುವನು. ಅವುಗಳಲ್ಲಿ ಕಳವು ಮಾಡದೆ ಇರುವದು, ಸಮಾಧಾನಿಯಾಗಿರುವದು, ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರ ಮೊದಲಾದ ದುರ್ಗುಣಗಳನು ಬಿಡುವದು, ದಾನ ಮಾಡುವದು, ಸಜ್ಜನರ ಸಂಗ ಮಾಡುವದು, ಹಿರಿಯರನ್ನೂ ಜ್ಞಾನಿಗಳನ್ನೂ ಮನ್ನಿಸುವದು, ಕರ್ತವ್ಯದಕ್ಷನಾಗಿರುವದು, ಬಡತನದಲ್ಲಿ ಧೈರ್ಯಗುಂದದೆ ಇರುವದು--ಇವೇ ಮೊದಲಾದ ಅನೇಕ ಉಪಯುಕ್ತ ಸಂಗತಿಗಳನ್ನು ಬೋಧಿಸಿದ್ದಾನೆ. ಮಾದರಿಗಾಗಿ ಕೆಳಗಿನ ವಚನವನ್ನು ನೋಡಬಹುದು.

"ಕಳಬೇಡ, ಕೊಲಬೇಡ, ಹುಸಿಯ ನುಡಿಯಲುಬೇಡ, ಮುನಿಯಬೇಡ, ಅನ್ಯರಿಗೆ ಅಸಹ್ಯಬಡಬೇಡ, ತನ್ನ ಬಣ್ಣಿಸಬೇಡ, ಇದಿರ ಹಳಿಯಲುಬೇಡ, ಇದೇ ಅಂತರಂಗಶುದ್ಧಿ, ಇದೇ ಬಹಿರಂಗ ಶುದ್ಧಿ, ಇದೇ ನಮ್ಮ ಕೂಡಲಸಂಗನನೊಲಿಸುವ ಪರಿ."

ಬಸವೇಶ್ವರನು ಜನರ ಡಾಂಭಿಕತನವನ್ನೂ ಬಿಡಿಸಲಿಕ್ಕೆ ಬಹಳ ಪ್ರಯತ್ನಿಸಿದನು. ಕೆಲವರು ಜನರ ತೋರಿಕೆಗೆ ಮಾತ್ರ ಬಹಳ ಹೊತ್ತು ಶಿವಪೂಜೆಗೆ ಕೂಡ್ರುವದು, ಪತ್ರಿಯ ದಳಗಳನ್ನು ಅತಿಶಯವಾಗಿ ಉಪಯೋಗಿಸುವದು, ಹೆಚ್ಚಾಗಿ ರುದ್ರಾಕ್ಷಿಗಳನ್ನು ಧರಿಸುವದು, ಢಾಳವಾಗಿ ವಿಭೂತಿಯನ್ನು ವಿವಿಧ ರೀತಿಯಿಂದ ಧರಿಸುವದು, ದೊಡ್ಡ ದೊಡ್ಡ

ಶಾಸ್ತ್ರಗ್ರಂಥಗಳನ್ನು ಓದುವದು ಮೊದಲಾದ ಕಾರ್ಯಗಳನ್ನು ಮಾಡು ತ್ತಾರೆ. ಆದರೆ ಅವರ ಮನಸ್ಸು ಬೇರೆ ಕಡೆಗೆ ಇದ್ದು ಅವು ಮುಗಿದ ಮೇಲೆ ತಮ್ಮ ದುಷ್ಟ ಕಾರ್ಯಗಳನ್ನು ಪ್ರಾರಂಭಿಸುವರು. ಇವುಗಳನ್ನು ಜ್ಞಾನಿಯಾದ ಬಸವೇಶ್ವರನು ತಿಳಕೊಂಡು ಇಂಥ ಡಂಭಾಚಾರಗಳುಳ್ಳ ತಾಮಸ ಶಿವಪೂಜೆಯು ಅವಶ್ಯವಿಲ್ಲ ಮತ್ತು ಅದರಿಂದ ಯಾವ ಪ್ರಯೋ ಜನವೂ ಇಲ್ಲ ಎಂದು ಸ್ಪಷ್ಟವಾಗಿ ಹೇಳಿದನು. ಆತನ ಕೆಳಗಿನ ವಚ ನಗಳಿಂದ ಈ ಮಾತು ಒಡೆದು ಕಾಣುವದು.

"ಹಲವು ಮಣಿಯ ಕಟ್ಟಿ ಕುಣಿಕುಣಿದಾಡಿ, ಹಲವು ಪರಿಯಲಿ ವಿಭೂತಿಯ ಧರಿಸಿ, ಗಣಾಡಂಬರದ ನಡುವೆ ನಲಿನಲಿದಾಡಿ, ಉಂಡು ತಂಬುಲಗೊಂಡು ಹೋಹುದಲ್ಲ! ತನು ಮನ ಧನವ ಸಮರ್ಪಿಸದವರ ಕೂಡಲಸಂಗಮದೇವನೆಂತೊಲಿವ?"

''ಬಂಡಿ ತುಂಬಿದ ಪತ್ರೆಯ ತಂದು, ಕಂಡಕಂಡಲ್ಲಿ ಮಜ್ಜನಕ್ಕೆರೆ ವಿರಯ್ಯ. ತಾಪತ್ರಯವ ಕಳೆದು ಪೂಜಿಸಿ. ತಾಪತ್ರಯವ ಲಿಂಗನೊಲ್ಲ. ಕೂಡಲಸಂಗಮದೇವ ಬರಿಯುದಕವಲ್ಲಿ ನನೆವನೆ?"

"ಕಲ್ಲ ನಾಗರ ಕಂಡರೆ ಹಾಲನೆರೆ ಎಂಬರು. ದಿಟದ ನಾಗರ ಕಂಡರೆ ಕೊಲ್ಲೆಂಬರಯ್ಯ. ಉಂಬುವ ಜಂಗಮ ಬಂದರೆ ನಡೆ ಎಂಬರು. ಉಣ್ಣದ ಲಿಂಗಕ್ಕೆ ಬೋನವ ಹಿಡಿ ಎಂಬರಯ್ಯಾ! ನಮ್ಮ ಕೂಡಲ ಸಂಗನ ಶರಣರ ಕಂಡು ಉದಾಸೀನ ಮಾಡಿದರೆ ಕಲ್ಲ ತಾಗಿದ ಮಿಟ್ಟೆ ಯಂತಿಪ್ಪರಯ್ಯಾ."

ಕೊನೆಗೆ ಬಸವೇಶ್ವರನು ಉಪದೇಶ ಮಾಡುವ ಮಹಾತ್ಮರಿಗೂ ಒಂದು ಉಪದೇಶದ ಮಾತನ್ನು ಹೇಳಿದ್ದಾನೆ. ಈ ಜಗತ್ತಿನಲ್ಲಿ ಉಪದೇಶ ಮಾಡುವವರೇ ಬಹಳ ಜನರು. ಆದರೆ ಅವರೇ ಸ್ವತಃ ಆ ಉಪದೇಶ ದಂತೆ ನಡೆಯುವರೋ ಇಲ್ಲವೋ ಸಂಶಯದ ಮಾತು. ಆದುದರಿಂದ ಬಸವೇಶ್ವರನು,

"ಲೋಕದ ಡೊಂಕ ನೀವೇಕೆ ತಿದ್ದುವಿರಿ ? ನಿಮ್ಮ ನಿಮ್ಮ ತನುವ ಸಂತೈಸಿಕೊಳ್ಳಿ, ನಿಮ್ಮ ನಿಮ್ಮ ಮನವ ಸಂತೈಸಿಕೊಳ್ಳಿ, ನೆರೆಮನೆಯವರ ದುಃಖಕ್ಕೆ ಅಳುವರ ಮೆಚ್ಚ ಕೂಡಲಸಂಗಮದೇವಾ."

ಎಂದು ಹೇಳಿದನು. ಜಗತ್ತಿಗೆ ಉಪದೇಶ ಮಾಡುವ ಹಂಬಲವುಳ್ಳವರು ಮೊದಲು ತಮ್ಮ ದೋಷಗಳನ್ನು ತಿದ್ದಿಕೊಂಡು ನಿರ್ದೋಷಿಗಳಾಗಿ ಈ ಕೆಲಸದಲ್ಲಿ ಕೈಹಾಕಬೇಕು. ಪ್ರತಿದಿವಸ ಸಾವಿರಾರು ಪಾಪಗಳನ್ನು ಮಾಡುವಂಥವರು ಎಂದಾದರೂ ಇಂಥ ಕಾರ್ಯಕ್ಕೆ ಯೋಗ್ಯರೇ? ಜಗತ್ತಿಗೆ ಉಪದೇಶ ಮಾಡುವ ಕಾರ್ಯವು ದೊಡ್ಡ ದೊಡ್ಡ ಮಹಾತ್ಮರದು. ಅವರು ಅದನ್ನು ಮಾಡಿಯೇ ಮಾಡುವರು. ನಮ್ಮನ್ನು ನಾವು ತಿದ್ದಿಕೊಂಡು ಇದ್ದರೆ ಹೆಚ್ಚಿನ ಕಾರ್ಯ ಮಾಡಿದಂತಾಗುವದು.

ಹೀಗೆ ಅನೇಕ ನೀತಿಯ ತತ್ವಗಳನ್ನು ಉಪದೇಶ ಮಾಡಿದರೂ ಕೂಡ ಬಸವೇಶ್ವರನು, ತಾನು ಪರಿಪೂರ್ಣನು, ನಿರ್ದೋಷಿಯು ಎಂದು ಎಂದಿಗೂ ಹೇಳಿಕೊಂಡಿಲ್ಲ. ಅವನೂ ಕೂಡ ಸಾಮಾನ್ಯ ಮನುಷ್ಯರಂತೆ ಕಷ್ಟದಿಂದ ಬಳಲಿ ಬೆಂಡಾಗಿ ದೇವರನ್ನು ಮೊರೆಹೊಕ್ಕು ಹೀಗೆ ಬೇಡಿಕೊಂಡಿದ್ದಾನೆ.

"ಸಂಸಾರವೆಂಬ ಸರ್ಪ ಮುಟ್ಟಲು, ಪಂಚೇಂದ್ರಿಯ ವಿಷಯವೆಂಬ ವಿಷದಿಂದ ಆನು ಮುಂದುಗೆಟ್ಟೆನಯ್ಯಾ! ಆನು ಹೊರಳಿ ಬೀಳುತ್ತಿದ್ದೆನಯ್ಯಾ! 'ಓಂ ನಮಃ ಶಿವಾಯ' ಎಂಬ ಮಂತ್ರವ ಜಪಿಸುತ್ತಿದ್ದೆನಯ್ಯಾ ಕೂಡಲಸಂಗಮದೇವಾ"

"ತುಪ್ಪದ ಸವಿಗೆ ಅಲಗ ನೆಕ್ಕುವ ಸೊಣಗನಂತೆ ಎನ್ನಬಾಳುವೆ. ಸಂಸಾರಸಂಗವ ಬಿಡದು ನೋಡೆನ್ನ ಮನವು. ಈ ನಾಯಿತನವ ಮಾಣಿಸು, ಕೂಡಲಸಂಗಮದೇವ ನಿಮ್ಮ ಧರ್ಮ''

"ಅತ್ತಲಿತ್ತ ಹೋಗದಂತೆ ಹೆಳವನ ಮಾಡಯ್ಯಾ ತಂದೆ! ಸುತ್ತಿಸುಳಿದು ನೋಡದಂತೆ ಅಂಧಕನ ಮಾಡಯ್ಯಾ ತಂದೆ. ಮತ್ತೊಂದ ಕೇಳದಂತೆ ಕಿವುಡನ ಮಾಡಯ್ಯಾ ತಂದೆ. ನಿಮ್ಮ ಶರಣರ ಪಾದವಲ್ಲದೆ ಅನ್ಯ ವಿಷಯಕ್ಕೆಳಸದಂತೆ ಇರಿಸು ಕೂಡಲಸಂಗಮದೇವಾ.''

ಒಟ್ಟಿನ ಮೇಲೆ ಬಸವೇಶ್ವರನು ತನ್ನ ಮೃದುಮಧುರವಾದ ನುಡಿಗಳಿಂದ ನೀತಿಯ ಸೊಬಗನ್ನೂ ಮೇಲ್ಮೆಯನ್ನೂ ಸಾಮಾನ್ಯರೆಲ್ಲರಿಗೂ ತಿಳಿಯುವಂತೆ ತಿಳಿಸಿದ್ದಾನೆ. ಸಜ್ಜನರ ಸಹವಾಸದಲ್ಲಿದ್ದಂತೆ ದುಷ್ಟರ ದುರಾಚಾರಿಗಳ ಗುಂಪಿನೊಳಗೂ ಸೇರಿ, ಎಂಥ ಕಠಿಣ ಎಡರುಗಳು

ಬಂದರೂ ಸಹ ಶಾಂತರೀತಿಯಿಂದ ತಾಳಿಕೊಂಡು, ಅವರ ಬಲಿಗೆ ಒಳಗಾಗದೆ, ಅವರಿಗೆ ಮೃದು ವಚನಗಳಿಂದ ಅಂತಃಕರಣ ಕರಗುವಂತೆ ದೀನಸ್ವರದಿಂದ ಬೇಡಿಕೊಂಡು, ಅವರ ಅಜ್ಞಾನವನ್ನು ಹೊಡೆದೋಡಿಸಿ ಜ್ಞಾನವಂತರನ್ನಾಗಿಮಾಡಿ ಸನ್ಮಾರ್ಗಕ್ಕೆ ಹಚ್ಚಿ ಸಮಾಜದಲ್ಲಿ ಅವರಿಗೆ ಒಂದು ಸ್ಥಾನವನ್ನು ಒದಗಿಸಿಕೊಟ್ಟದ್ದನ್ನು ನೋಡಿದರೆ ಬಸವೇಶ್ವರನು ನಿಜವಾಗಿಯೇ ಒಬ್ಬ ಶ್ರೇಷ್ಠ ನೀತಿತತ್ವ ಬೋಧಕನು ಎಂದು ಸ್ಪಷ್ಟವಾಗುವದು.

# ವೀರಶೈವರ ಚರಿತ್ರೆ
# ಅದರ ಶುದ್ಧತೆ ಮತ್ತು ಭದ್ರತೆ.

( ಲೇಖಕ:-- ಜೀರಿಗೆ ಕ ಬಸವಪ್ಪ ಬಿ. ಎ, ಬೆಂಗಳೂರ ನಗರ )

ಯಾವ ಜನಾಂಗಕ್ಕೇ ಆಗಲಿ ಚರಿತ್ರೆಯು ಒಂದು ಅಮೂಲ್ಯ ವಾದ ಮತ್ತು ಪವಿತ್ರವಾದ ನಿಧಿಯಾಗಿದೆ. ಜನಾಂಗದ ಐಕ್ಯತೆಗೂ ಮತ್ತು ಅದರ ಅಭಿವೃದ್ಧಿಗೂ ಚರಿತ್ರೆಯು ಮೂಲಕಾರಣವಾಗಿದೆ. ನಮ್ಮ ಜನಾಂಗದಲ್ಲಿ ಹಿಂದೆ ಇಂಥಿಂಥ ಮಹಾ ಮಹಾ ವಿಭೂತಿಗಳು, ವೀರರು, ಯೋಧರು, ಸಾಹಿತಿಗಳು, ಸಾಹಸಿಗಳು ಬದುಕಿ ಬಾಳಿ ಹೋದರೆಂದು ಕೇಳಿದರೆ ನಮ್ಮಲ್ಲಿ ಒಂದು ತೆರನಾದ ಅಭಿಮಾನವು ಅಂಕುರಿಸುವುದು. ನಾವೂ ಅವರಂತೆ ಮಹತ್ಕಾರ್ಯಗಳನ್ನು ಮಾಡ ಬೇಕೆಂದೆನಿಸುವುದು. ಅಡಗಿರುವ ಶಕ್ತಿಯು ಸ್ಫುರಣಹೊಂದುವುದು. ಸಾಹಸವು ವ್ಯಕ್ತವಾಗುವುದು. ಪರಿಣಾಮವಾಗಿ ಮಹತ್ಕಾರ್ಯಗಳು ನಡೆಯುವುವು. ಇವೆಲ್ಲಕ್ಕೂ ಮೇಲೆ ಹೇಳಿದಂತೆ ಚರಿತ್ರೆಯೇ ಕಾರಣ ವಾಗಿದೆ. ಆದ್ದರಿಂದ ನಾವು ನಮ್ಮ ಚರಿತ್ರೆಯನ್ನು ಭದ್ರಪಡಿಸಿ ಅದನ್ನು ತಲೆತಲಾಂತರಕ್ಕೂ ಸಾಗಿಸಿಕೊಂಡು ಹೋಗಬೇಕಾಗಿದೆ. ಚರಿತ್ರೆಯು ಎಷ್ಟು ಶುದ್ಧವಾಗಿರುವುದೋ ಅಷ್ಟೂ ಅದು ಪವಿತ್ರವೂ ಅಮೂಲ್ಯವೂ ಆಗಿರುವುದು. ಚರಿತ್ರೆಯನ್ನು ಯಾವ ರೀತಿಯಲ್ಲೂ ಯಾವ ಕಾರಣಕ್ಕೂ ಮಾರ್ಪಡಿಸಬಾರದು. ಹಾಗೆ ಮಾರ್ಪಡಿಸುವುದು ಬಹು ತಪ್ಪಿನ ಕೆಲಸ. ಅದೊಂದು ಪಾಪಕರ್ಮವೆಂದೇ ಹೇಳಬೇಕಾಗುವುದು.

ಜಗತ್ತಿನ ಚರಿತ್ರಪ್ರಸಿದ್ಧಗಳಾದ ಕ್ರಿಶ್ಚಿಯನ್ ಇಸ್ಲಾಂ ಮೊದಲಾದ ಮತಗಳಂತೆ ವೀರಶೈವ ಅಥವಾ ಲಿಂಗಾಯತ ಮತವೂ ಒಂದು ಚರಿತ್ರಪ್ರಸಿದ್ಧ ಮತವಾಗಿದೆ. ವೀರಶೈವ ಮತದ ಚರಿತ್ರೆಯು ಪ್ರಬಲವಾದುದೂ ಅಲ್ಲದೆ ಪವಿತ್ರವಾದುದೂ ಆಗಿದೆ. ಶರಣರ ವೀರತ್ಯಾಗವೇ ಇದಕ್ಕೆ ಕಾರಣವಾಗಿದೆ. "*The blood of Saints is the future seed*" ಎಂಬ ಉಕ್ತಿಯಂತೆ ಶರಣರು ತಮ್ಮ ಯಾವತ್ತು ತನುಮನಧನಗಳನ್ನು ಲೋಕೋದ್ಧಾರಕ್ಕಾಗಿ ಧಾರೆ ಎರೆದು ಒಂದು

ಉನ್ನತ ಚರಿತ್ರೆಯನ್ನು ಕಟ್ಟಿದ್ದಾರೆ. ಇಂತಹ ಪವಿತ್ರ ಚರಿತ್ರೆಯನ್ನು ಕಾಪಾಡಿಕೊಂಡು ಬರತಕ್ಕದ್ದು ನಮ್ಮ ಬದ್ಧ ಕರ್ತವ್ಯವಾಗಿದೆ.

ಆದರೆ ವೀರಶೈವ ಮತದ ದುರ್ದೈವದಿಂದಲೋ ಏನೋ ಅದರ ಚರಿತ್ರೆಯ ರಕ್ಷಣೆಯ ಕಡೆಗೆ ವೀರಶೈವ ಮತಾನುಯಾಯಿಗಳು ಹೆಚ್ಚು ಲಕ್ಷಕೊಟ್ಟಂತೆ ಕಾಣುವದಿಲ್ಲ. ಅದಕ್ಕೆ ಬದಲು ವೀರಶೈವ ಮತದ ಚರಿತ್ರೆಯನ್ನು ಮನಸ್ಸಿಗೆ ಬಂದಂತೆ ಬದಲಾಯಿಸಲು ಪ್ರಯತ್ನಗಳು ಹಿಂದೆಯೂ ನಡೆದಿರುವುವಲ್ಲವೆ ಈಗಲೂ ಅಲ್ಲಲ್ಲಿ ನಡೆಯುತ್ತಿರುವುವಾಗಿ ಕಂಡುಬರುತ್ತದೆ. ಈ ಎಲ್ಲ ಬದಲಾವಣೆಗಳಿಗೂ ಚಾರಿತ್ರ ಪ್ರಮಾಣಗಳು ಆಧಾರವಾಗಿರದೆ ಯಾವುದೋ ಒಂದು ವಿಜಾತೀಯ ಅಭಿಮಾನವೋ ಇಲ್ಲವೇ ಸ್ವಾರ್ಥಸಾಧನೆಯೋ ಆಧಾರವಾಗಿರುವುದರಿಂದ ವೀರಶೈವ ಬಾಂಧವರು ಈ ವಿಚಾರದಲ್ಲಿ ಬಹಳ ಯೋಚಿಸಬೇಕಾಗಿರುವುದಲ್ಲದೆ ಇನ್ನು ಮುಂದೆಯಾದರೂ ಇಂಥ ಬದಲಾವಣೆಗಳು ನಡೆಯದಂತೆ ಎಚ್ಚರಿಕೆಯಿಂದಿರತಕ್ಕದ್ದು ಅವಶ್ಯಕವಾಗಿದೆ.

ಪ್ರಕೃತ ಈ ಲೇಖನದಲ್ಲಿ ಈ ವಿಚಾರದಲ್ಲಿ ಕೆಲವು ಎಚ್ಚರಿಕೆಗಳನ್ನು ಸೂಚಿಸಿದ್ದೇನೆ. ಈ ಎಚ್ಚರಿಕೆಗಳು ಎಲ್ಲರ ಮನಸ್ಸಿನಲ್ಲಿಯೂ ಮೂಡಿ ಸತ್ಪರಿಣಾಮವನ್ನುಂಟುಮಾಡಲೆಂದು ಬಯಸುತ್ತೇನೆ.

ಚರಿತ್ರೆಯ ಶುದ್ಧತೆ ಭದ್ರತೆಗಳು ಈ ಶತಮಾನದಲ್ಲಂತೂ ಬಹುಮಟ್ಟಿಗೆ ಗ್ರಂಥಪ್ರಕಾಶಕರನ್ನೇ ಅವಲಂಬಿಸಿವೆ ಎಂಬುದು ಎಲ್ಲರಿಗೂ ತಿಳಿದ ವಿಷಯವೇ ಆಗಿದೆ. ಇದರಿಂದ ಗ್ರಂಥಪ್ರಕಾಶಕರ ಕೆಲಸವು ಎಷ್ಟರ ಮಟ್ಟಿನ ಜವಾಬ್ದಾರಿಯ ಕೆಲಸವಾಗಿದೆ ಎಂಬುದು ಸುಲಭವಾಗಿ ಅರ್ಥವಾಗುವದು. ಗ್ರಂಥಪ್ರಕಾಶಕರು ಸತ್ಯಪ್ರೇಮಿಗಳೂ, ಪ್ರಾಮಾಣಿಕರೂ, ನಿರ್ದಾಕ್ಷಿಣ್ಯ ಬುದ್ಧಿಯುಳ್ಳವರೂ ಆಗಬೇಕು. ಪಕ್ಷಸಾಧಕರಾಗಬಾರದು. ಇದ್ದದ್ದನ್ನು ಇದ್ದಂತೆಯೇ ಹೇಳುವ ಎದೆಗಾರಿಕೆ ಅವರಿಗೆ ಇರಬೇಕು. ಚಾರಿತ್ರ ಪ್ರಮಾಣಗಳು ವಿಪುಲವಾಗಿ ಸಿಗದಿರುವ ನಮ್ಮ ಭರತಖಂಡದಲ್ಲಂತೂ ಗ್ರಂಥಪ್ರಕಾಶಕರ ಜವಾಬ್ದಾರಿಯು ಬಹಳವಾಗಿದೆ. ಗ್ರಂಥಗಳ ಮೂಲ ಪಾಠದ ಒಂದೊಂದು ಅಕ್ಷರವೂ ಎಷ್ಟೋ ಪ್ರಮಾಣವಾಗಿ ಕಂಡುಬರುತ್ತದೆ. ಗ್ರಂಥಕರ್ತನು ಸ್ತುತಿಸಿರುವ ಕವಿಗಳೇ ಮೊದಲಾದವರ ಹೆಸರುಗಳಿಂದಲೇ ಎಷ್ಟೋ ಕಡೆಗಳಲ್ಲಿ ಗ್ರಂಥ

ಕರ್ತನ ಕಾಲನಿರ್ಣಯು ಮಾಡಬೇಕಾಗಿದೆ. ಒಕ್ಕಣಿಕೆಗಳು, ವ್ಯಾಕರಣದ ಜೋಡಣೆಗಳು, ಶಬ್ದಪ್ರಯೋಗಗಳು, ಶೈಲಿ ಇವುಗಳಿಂದ ನಮಗೆ ಎಷ್ಟೋ ಚರಿತ್ರಾಂಶಗಳು ಗೊತ್ತಾಗುತ್ತವೆ. ಆದ್ದರಿಂದ ಗ್ರಂಥಪ್ರಕಾಶಕರು ಪೂರ್ವ ಗ್ರಂಥಗಳನ್ನು ಬಹು ಎಚ್ಚರಿಕೆಯಿಂದ ಇದ್ದಕ್ಕಿದ್ದಂತೆಯೇ ಪ್ರಕಟಿಸಬೇಕಾಗಿದೆ. ಅಂದಚಂದಕ್ಕಾಗಿಯೋ ಇಲ್ಲವೇ ಯಾವುದೋ ಒಂದು ಅಭಿಮಾನದಿಂದಲೋ ಗ್ರಂಥಗಳನ್ನು ತಿದ್ದಿ ಮುದ್ರಿಸಬಾರದು. ಇದರಿಂದ ಚರಿತ್ರೆಗೆ ಭಂಗಬರುವುದು. ಒಂದು ವೇಳೆ ತಿದ್ದುವುದು ಅನಿವಾರ್ಯವಾಗಿ ಕಂಡುಬಂದಲ್ಲಿ ಅಡಿಟಿಪ್ಪಣಿಯನ್ನು ಬರೆದು ಮೂಲ ಪಾಠವನ್ನು ಕಾಣಿಸುವುದೂ ಅಲ್ಲದೆ ತಿದ್ದಿಕೆಗೆ ಕಾರಣವನ್ನೂ ತೋರಿಸಬೇಕು.

ವೀರಶೈವ ಬಾಂಧವರೇ! ಮೇಲ್ಕಂಡ ಕಾರಣಗಳಿಂದ ಗ್ರಂಥ ಪ್ರಕಾಶನ ವಿಷಯದಲ್ಲಿ ನಾವು ಬಹಳ ಎಚ್ಚರದಿಂದಿರಬೇಕೆಂಬುದು ವಿದಿತವಾಗುತ್ತದೆ. ಗ್ರಂಥಗಳೇ ನಮ್ಮ ಪ್ರಾಣವಾಗಿವೆ. ನಮ್ಮ ವೀರಶೈವ ಧರ್ಮವೂ ಇಂದಿಗೂ ದಿಟ್ಟತನದಿಂದ ನಿಂತಿರುವುದು. ಕೇವಲ ಗ್ರಂಥಗಳ ಆಧಾರದಿಂದಲೇ ಎಂದು ಹೇಳಿದರೆ ಅತಿಶಯೋಕ್ತಿಯಾಗಲಾರದು. ಗ್ರಂಥಗಳು ಶಿಥಿಲವಾಗುತ್ತ ಬಂದಲ್ಲಿ ನಮ್ಮ ಧರ್ಮವೂ ಶಿಥಿಲವಾಗುತ್ತ ಬರುವುದು. ಧರ್ಮವು ಶಿಥಿಲವಾಗುತ್ತ ಬಂದಲ್ಲಿ ನಮ್ಮ ಸಮಾಜವೂ ಶಿಥಿಲವಾಗುತ್ತ ಬಂದು ಕೆಲವು ದಿನಗಳಲ್ಲೇ ಹೇಳಹೆಸರಿಲ್ಲದಂತಾಗುವುದರಲ್ಲಿ ಯಾವ ಸಂದೇಹವು ಇಲ್ಲ.

ಆದ್ದರಿಂದ ಬಂಧುಗಳೇ, ಗ್ರಂಥಪ್ರಕಾಶನ ವಿಷಯದಲ್ಲಿ ನಾವು ಬಹಳ ಎಚ್ಚರದಿಂದಿರಬೇಕು. ಗ್ರಂಥಗಳು ಶಿಥಿಲವಾಗದಂತೆ ನೋಡಿಕೊಳ್ಳಬೇಕು. ಗ್ರಂಥ ಶೋಧನೆಯ ಕೆಲಸದಲ್ಲಿ ಎಲ್ಲರೂ ತಕ್ಕಮಟ್ಟಿಗೆ ಪ್ರಯತ್ನಪಡಬೇಕು. ಮುಖ್ಯವಾಗಿ ನಮ್ಮ ತರುಣರು ವಿರಾಮಕಾಲಗಳಲ್ಲಿ ತಮ್ಮ ತಮ್ಮ ಪ್ರಾಂತಗಳಲ್ಲಿ ಸಂಚಾರಮಾಡಿ ಗ್ರಂಥಗಳನ್ನು ಶೇಖರಿಸಿ ಅವುಗಳನ್ನು ಪ್ರಕಾಶಕರ ಕಡೆಗೆ ಕಳಿಸಿಕೊಟ್ಟು ಅವುಗಳನ್ನು ಇದ್ದಕ್ಕಿದ್ದಂತೆಯೇ ಪ್ರಕಟಿಸುವ ಏರ್ಪಾಡು ಮಾಡಬೇಕು. ಪುರಾತನ ಗ್ರಂಥಗಳನ್ನು ಇದ್ದಕ್ಕಿದ್ದಂತೆಯೇ ಪ್ರಕಟಿಸುವುದು ಒಂದು ಮಹತ್ತರವಾದ ಸಮಾಜಸೇವೆ ಎಂಬುದನ್ನು ಸರ್ವರೂ ನೆನಪಿನಲ್ಲಿಡಬೇಕು. ಈ

ರೀತಿಯಲ್ಲಿ ನಾವೆಲ್ಲರೂ ಎಚ್ಚರದಿಂದಿದ್ದರೆ ಗ್ರಂಥಪ್ರಕಾಶಕರೂ ಎಚ್ಚರದಿಂದಿರುತ್ತಾರೆ. ಎಚ್ಚರದಪ್ಪಿದರೆ ತಮಗೆ ಬೇಕಾದ ಹಾಗೆ ವರ್ತಿಸುತ್ತಾರೆ. ಹಾಗೆ ಮಾಡಿದಲ್ಲಿ ಮೇಲೆ ಹೇಳಿದಂತೆ ಗ್ರಂಥಗಳು ಮಾರ್ಪಾಡಾಗುವುವದಲ್ಲದೇ ಇತಿಹಾಸವೂ ಧರ್ಮವೂ ಮಾರ್ಪಾಡಾಗಿ ನಮ್ಮ ವೀರಶೈವ ಸಮಾಜವು ಇಲ್ಲವೇ ಕುರೂಪಿಯಾಗುವುದು ಇಲ್ಲವೇ ನಿರ್ನಾಮವೇ ಆಗುವುದು. ಆದ್ದರಿಂದ ಬಂಧುಗಳೇ, ಗ್ರಂಥಪ್ರಕಾಶನ ವಿಷಯದಲ್ಲಿ ಎಚ್ಚರಿಕೆ! ಎಚ್ಚರಿಕೆ! ಎಚ್ಚರಿಕೆ!

# ಶ್ರೀ ಹಾನಗಲ್ಲ ಕುಮಾರ ಸ್ವಾಮಿಗಳ ಹಾಡು ಗಬ್ಬಗಳು.

(ಸಂಗ್ರಾಹಕರು:— ಶ್ರೀ ಚಂದ್ರಶೇಖರದೇವರು ಅಡ್ನೂರ)

ಜಾನೇವರಿ ೧೯೩೮ನೇ ಸಂಚಿಕೆಯಿಂದ ಮುಂದೆವರಿದದ್ದು.

---

ನಿರದೆ ಬೋಧಿಸಿ ಶಿಷ್ಯ ಭಕ್ತರನುದ್ಧರಿಸಿ।
ಚರತಿಂಥಿಣಿಯೊಳಾಡಿ ಗುರುವೆನಿಪ ಚರವರಗೆ ॥

೩

ಪಾಪ ಪುಣ್ಯಗಳ ಮೀರಿ ಸ್ವಾತಂತ್ರ್ಯದಿ।
ಕೋಪಾದಿ ಗುಣವ ತೂರಿ ॥
ತಾಪಗೊಳ್ಳದೆ ಜಗಜ್ಜಾಲವ ಧಿಕ್ಕರಿಸಿ।
ಕಾಪಟ್ಯವಳಿದು ಶಿವ ತಾನಹ ಪರತರಗೆ ॥

೪

ಅಷ್ಟಾವರಣವ ಸಾಧಿಸಿ ಸದ್ಭಕ್ತಿಯಿಂ।
ಶಿಷ್ಟ ಚರವರನೆನಿಸಿ ॥
ಶ್ರೇಷ್ಠ ಪ್ರಮಥನಾಮ ಪ್ರೇಮದಿಂದುಚ್ಚರಿಸಿ।
ಕಷ್ಟತರದ ಮಾಯೆಯನು ಗೆಲಿದ ಯತಿವರಗೆ ॥

೫

ಸಚ್ಚಿದಾನಂದವೆನಿಪ ಅಥಣೀಪುರಿ।
ಗಚ್ಚಿನಮಠ ಮಂಟಪ ॥
ಅಚ್ಚರಿಗೊಳಿಪ ಷಟ್‌ಸ್ಥಲ ಬ್ರಹ್ಮವಾಸದಿಂ।
ಬಿಚ್ಚಿ ಬೇರಿರಿಸಿದ ಮುರುಘ ಶಿವಯೋಗಿಗೆ ॥

---

## ಮಂಗಲ ೨೦

( ರಾಗ- ಜಂಗಲ್ )

ಮಂಗಳಾರತಿಯನು ನಾನು ಎತ್ತಿ ಪಾಡುವೆ ।
ಪೊಂಗಿ ಶ್ರೀಗುರು ಲಿಂಗ ಜಂಗಮರನು ಬೇಡುವೆ ॥ಪ॥

೧

ತುಂಗ ಶಿವನ ಮುಖದಿ ಜನಿಸಿ । ಮಂಗಲಾತ್ಮನಾಜ್ಞ ವಹಿಸಿ ।
ಲಿಂಗ ಮೂರ್ತಿ ಅಂಗಗೊಳಿಸಿ । ಸಂಗ ಶರಣರ ಭೋ ಪುಂಗ ಗುರುವರ ।
ಮಂಗಗುಣವ ಕಳೆದು ಜನರ ಹಂಗು ತೊಲಗಿಸೈ ॥

೨

ಭವ್ಯ ಶಿರದ ಲಿಂಗ ಮೂರ್ತಿ । ಸೇವ್ಯ ಗುರುವರನ ಕೀರ್ತಿ !
ದಿವ್ಯ ತರದ ರೂಪವೆತ್ತಿ । ಸರ್ವ ಭಕ್ತರ ಭೋ ಗರ್ವಸಂಹರ ।
ಪೂರ್ವದೋಷವನ್ನು ಕಳೆದು ಶರ್ವ ಪಾಲಿಸೈ ॥

೩

ದೈನ್ಯತನದಿ ಗುರುವು ತಾನು । ಚೆನ್ನ ಶಿವನ ಪ್ರಾರ್ಥಿಸಿಹನು ।
ಶೂನ್ಯ ಚಕ್ರ ಸ್ವಾಮಿಯೆನ್ನು । ಎನ್ನ ಪಾಲಿಸೈ ಭೋ ಮುನ್ನ ಲಾಲಿಸೈ ।
ಬನ್ನಗುಣವ ಕಳೆದು ಉನ್ನತದಿ ಪೋಷಿಸೈ ॥

---

## ಮಂಗಲ ೨೧

(ರಾಗ- ಪೂರ್ವಿ)

ಯೋಗಿರಾಡ್ಜಯ ಮಂಗಲಂ । ಪರತರ ಶಿವ ॥ಪ॥

೧

ಲಿಂಗಾಂಗೋಭಯ ಸಂಗ ಶರಣರ ಪುಂಗ । ಅಂಗಜ ಭವ ಭಂಗ ।
ಮಂಗಲಾತ್ಮಕ ಭಕ್ತತತಿ ಹೃದ್ವಾಸನೇ ಶ್ರೀಶನೇ ।
ಜಂಗಮಾರ್ಪಿತ ಸತ್ಕ್ರಿಯಂಗಳ ದಕ್ಷನೇ ನಿರಪೇಕ್ಷನೇ ॥

೨

ಈಡಪಿಂಗಳ ಜೋಡಿಸಿ ಹರಿದಾಡುವ। ಜೋಡಕ್ಕರವ ಕೂಡಿಸಿ।
ಕೂಡಿ ನಡು ನಾಡಿಯೊಳಡರ್ದತಿ ಶಾಂತನೇ ಕಾಂತನೇ।
ನಾಡೆ ದಶ ವಿಧ ದಿನದೊಳಗತಿ ಗುಪ್ತನೇ ಪರಮುಕ್ತನೇ ॥

೩

ಮಂಡಲತ್ರಯದಗ್ರದಿ ದೀಪಿಸುತಿಹ। ಖಂಡ ಜ್ಯೋತಿಯ ತೆರದಿ।
ಮಂಡಿಸಿಹ ಕುಮಾರಗುರು ಶಿವಯೋಗಿಯೇ ತ್ಯಾಗಿಯೇ।
ಕಂಡ ವಿಷಯವನೈಕ್ಯಗೊಂಡಿಹ ಧ್ಯಾನಿಯೇ ಸಂಧಾನಿಯೇ ॥

---

## ಮಂಗಲ ೨೨

(ರಾಗ- ಕಾಪಿ)

ರೇವಣಸಿದ್ಧ ಗುರುದೇವ। ಭಾವಜ ಹರಜೀವ।
ಓವಿನೀ ಕೊಡು ಮಂಗಲವ ॥ಪ॥

೧

ಕಾಮವೆನ್ನನು ಕೂಡಿ ಕಾಡಿ। ನೇಮ ಸೀಮೆಯ ಕೆಡಿಸದಾಡಿ।
ಪ್ರೇಮದಪ್ಪಿಯು ಭವದೊಳು ನೂಂಕುವ।
ನೀ ಮನಸಿಜನನು ಬಿಡಿಸು ಬೇಗ ॥

೨

ದುಷ್ಟವಾಸನೆಗಳ ಬಲದಿಂದ। ಭ್ರಷ್ಟ ಕಾಮನತಾಚ್ಛಲದಿಂದ।
ಮುಟ್ಟಿ ಕೊರಗಿಪೆ ದುರ್ವಾಸನೆಯ।
ಕುಟ್ಟಿ, ವರಸುಖವ ಕೊಡು ಜವದಿ ॥

೩

ಅಂಗಹೀನನ ಸೇವೆಯ ಬಿಡಿಸಿ। ಲಿಂಗದೇವನ ಪೂಜೆಯ ಹಿಡಿಸಿ।
ಕಂಗಳಾಲಯನೀಕ್ಷಿಸು ಭಾವದಿ।
ಮಂಗಲಮಯನೆನಿಸೋ ಯತಿವರ ॥

---

## ಮಂಗಲ ೨೩

(ರಾಗ- ದೇಸ್)

ಕೊಡು ಮಂಗಲವನು ಬೇಗನೆ ಶಿವನೆ ನೀನಿದನು ।
ಭವರೋಗವನು, ತವೆಹರಿಪುದನು ಸುವಿಲಾಸದೊಳು ॥ಪ॥

೧

ಘೋರವೆನಿಪವೃತ್ತಿ । ಸಾರಿ ಕಾಡುವದತಿ ।
ಕ್ರೂರತನದಿ ಮುತ್ತಿ । ಗಾರುಗೊಳಿಸಿ ಶಾಂತಿ ।
ಪೂರವಳಿದು ಗತಿ । ಸೇರದಿರುವೆ ॥

೨

ಮುತ್ತಿ ತಾಮಸವದು । ವೃತ್ತಿ ಮೂಢವದು ।
ಚಿತ್ತದಾವರಣದು । ಸತ್ಯ ಬ್ರಹ್ಮವ ಮರೆದು ।
ಅತ್ತಿತ್ತ ಲೋಗದಂತೆ । ಸುತ್ತಿಕೊಂಡಿರುವೆ ॥

೩

ಅಂತು ಸತ್ಸಂಗವನು । ಕಂತು ಮರ್ದನನನು ।
ಚಿಂತಿಸುತ್ತಿರುವದನು । ಭ್ರಾಂತಿ ನೀಗಿರುವದನು ।
ಕಾಂತಿ ಹೊಂದುವದನು । ಇಂತು ಬೇಡುವೆ ॥

# ಶತಕತ್ರಯವು.

ಲೇಖಕರು — ಮುರಿಗೆಪ್ಪ ಸಿದ್ದಪ್ಪ ಗುಡ್ಡದ .ವಿಜಾಪುರ

ಇದರಲ್ಲಿ ಶಿವಾಧವ, ಶಿವಾವಲ್ಲಭ, ಮಹದೈಪುರೀಶ್ವರ, ಎಂಬ ಮೂರು ಶತಕಗಳಿರುವದರಿಂದ ಇದಕ್ಕೆ "ಶತಕತ್ರಯ" ವೆಂಬ ಹೆಸರು ಬಂದಿದೆ. ಕ್ರಮವಾಗಿ ಆ ಮೂರರೂ ಶತಕಗಳಲ್ಲಿಯೂ ವೀರಶೈವಾಗ ಮೋಕ್ತಮಯರ್ಾದೆಯನ್ನನುಸರಿಸಿ ಭಕ್ತಿ ಜ್ಞಾನ ವೈರಾಗ್ಯಗಳ ಲಕ್ಷಣವು ನಿರೂಪಿಸಲ್ಪಟ್ಟಿರುವದು. ವೀರಶೈವ ಕವಿಗಳು ಅನೇಕ ಶತಕಗಳನ್ನು ರಚಿಸಿರುವರು. ಅವುಗಳಲ್ಲಿ ಭಕ್ತಿ ಮತ್ತು ನೀತಿ ಪ್ರಧಾನವಾದವುಗಳೇ ಹೆಚ್ಚು. ಆದರೆ ಈ ಶತಕತ್ರಯವು ವೀರಶೈವ ಧರ್ಮಾಚರಣೆಯ ಶಾಸ್ತ್ರ ದಂತಿರುವದು. ಆದುದರಿಂದ ಇದು ವೀರಶೈವ ಮತದತಿಳಿವಳಿಕೆಗೆ ಯೋಗ್ಯ ವಾದ ಗ್ರಂಥವಾಗಿರುವದು.

ಕೆಲಕೆಲವು ಕಡೆಗೆ ಈ ಗ್ರಂಥದ ವಿಚಾರ ಸರಣಿಯು ಬಹು ಮನೋಹರವಾಗಿರುವದು. ಮೊದಲು ವಿಚಾರವನ್ನು ಹೊರಡಿಸಿ ಅದಕ್ಕೆ ಸಂಶಯತೆಗೆದುಕೊಂಡು ಸಹಜವಾಗಿ ತಿಳಿಯುವ ಉಪಮಾನಗಳಿಂದ ನಿರ್ಣಯವನ್ನು ಹೇಳಿದ್ದಾರೆ. ಆದುದರಿಂದ ಓದುಗರು ಯಾವದಾದ ರೊಂದು ಪದ್ಯವನ್ನು ಓದಿ ನಿರ್ಣಯವನ್ನು ಹೇಳಹೋದರೆ ಕವಿಯ ನಿಜವಾದ ವಿಚಾರವು ತಿಳಿಯದು. ಆದರೆ ಒಂದು ವಿಚಾರಕ್ಕೆ ಸಂಬಂಧ ಪಟ್ಟ ಎಲ್ಲ ಪದ್ಯಗಳನ್ನು ಓದಿದರೆ ಕವಿಯ ನಿಜವಾದ ಅಭಿಪ್ರಾಯವು ಮನದಲ್ಲಿ ಬಿಂಬಿಸುವದು.

## ಮಗ್ಗೆಯ ಮಾಯಿದೇವರ ಚರಿತೆ

ಇದನ್ನು ರಚಿಸಿದವರು ಶ್ರೀ ಮಗ್ಗೆಯಮಾಯಿದೇವರು. ಇವರು ಐಪುರ ಅಂದರೆ ವಿಜಾಪುರ ಜಿಲ್ಲೆಗೆ ಸೇರಿದ ಐಹೊಳಿಯವರು. ಇವರ ಕಾಲಮಾನದ ವಿಷಯವಾಗಿಯೂ ಇವರು ಬರೆದಿರುವ ಗ್ರಂಥದ ವಿಷಯ ವಾಗಿಯೂ ಶ್ರೀ ವಿರೂಪಾಕ್ಷ ಪಂಡಿತರು ತಮ್ಮ ಚೆನ್ನಬಸವಪುರಾಣ ದಲ್ಲಿ ಹೇಳಿರುವ ವಿವೇಚನೆಯಿಂದ ಸ್ಪಷ್ಟೀಕರಿಸಿದ್ದು ಯೋಗ್ಯವಾಗಿದೆ. ಚನ್ನಬಸವಪುರಾಣದ ೫ ನೆಯಕಾಂಡದ ೧೦ ನೆಯಧ್ಯಾಯದಲ್ಲಿ.

"ಎಲೆರಾಮ ಕೇಳಿನ್ನು ಸಕಲಾಗಮಂಗಳಿಗೆ। ನೆಲೆಯೆನಿಸಿ ಪ್ರೌಢ ನಿಂಪೂಜೆಯಂಕೊಂಡುಷ। ಟ್ಸ್ಥಲಮಾರ್ಗಮಂ ಸಕಲ ಶಿವಭಕ್ತಸಂತತಿಗೆ ಕರತಳಾಮಳಕಮಾಗಿ॥ ತಿಳಿವೊಲನುಭವ ಸೂತ್ರವಾದಿ ಶಾಸ್ತ್ರಂಗಳಂ। ಗೆಲವಿನಿಂ ಪೇಳ್ದು ನಿಜ ಶಿವಸಮಾಧಿಯಲಿ ಮಿಗೆ। ನಲವಿನಿಂದಲ್ಲಿ ಮಗ್ಗೆ ಮಾಯಿದೇವ ಪ್ರಭುವರನಿರದೆ ಮುಕ್ತನಹನು."

ಈ ಪದ್ಯವನ್ನು ವಿಜಯನಗರದ ಚರಿತೆಯನ್ನು ಹೇಳುವಕಾಲಕ್ಕೆ ಹೇಳಿರುವದರಿಂದಲೂ ಅದರಲ್ಲಿ ಪ್ರೌಢನಿಂ ಪೂಜೆಯಂ ಕೊಂಡು ಎಂದಿರುವದರಿಂದಲೂ ವಿಜಯನಗರದ ಪ್ರೌಢರಾಯನಿಂದ ಸಂಪೂಜಿತರಾಗಿದ್ದರೆಂಬುದು ವ್ಯಕ್ತವಾಗುತ್ತದೆ. ಈ ರಾಯನ ಕಾಲವು ೧೫ನೇ ಶತಮಾನವಾಗಿರುವದು. ಅದೇ ಈ ಕವಿಯ ಕಾಲವಾಗಿದೆ. ಸಕಲಾಮಂಗಳಿಗೆ ನೆಲೆಯೆನಿಸಿ ಎಂದಿರುವದರಿಂದ ಆಗಮ ಪಂಡಿತರಾಗಿ ವೇದ ವೇದಾಂತಗಳ ಸಾರವನ್ನು ಹೀರಿ ವೀರಶೈವ ತತ್ವ ಪ್ರತಿಪಾದಿತವಾದ ಅನುಭವ ಸೂತ್ರ ಶತಕತ್ರಯ ಮೊದಲಾದ ಗ್ರಂಥಗಳನ್ನು ಪರಿಪಾಕ ಸ್ಥಿತಿಯಲ್ಲಿ ಬರೆದಿರುವದೇ ಸಾಕ್ಷಿಯಾಗಿದೆ. ಇವರು ಉಭಯ ಭಾಷಾಪಂಡಿತರಾಗಿ ಆ ಸ್ಥಿತಿಗೆ ತಕ್ಕಂತೆ ಗ್ರಂಥ ನಿರೂಪಣೆ ಮಾಡಿದ್ದಾರೆ. ಇವರು ಬರೆದ ಗ್ರಂಥಗಳು ವೀರಶೈವಾಚರಣೆಯನ್ನೇ ಸಮರ್ಥಿಸಿರುವದರಿಂದ ಆ ಆಚರಣೆಯ ವಿಚಾರವನ್ನು ತಿಳಿದುಕೊಳ್ಳುವ ಅಭಿಲಾಷೆಯುಳ್ಳವರಿಗೆ ಇವರ ಗ್ರಂಥಗಳ ಮಹತ್ವವು ಎಷ್ಟಿರುವದೆಂಬುದು ಗೊತ್ತಾಗುವದು. ಆದುದರಿಂದ ವೀರಶೈವರು ಈ ಕವಿಯ ಮತ್ತು ಗ್ರಂಥಗಳ ವಿಷಯವಾಗಿ ಹೆಚ್ಚಿಗೆ ಶೋಧಿಸುವದು ಯೋಗ್ಯವಾಗಿದೆ.

ಆದರೂ ಪರಧರ್ಮಿಯರಿಗೂ ಕೂಡ ಮಾರ್ಗದರ್ಶಕವಾದ ಎಷ್ಟೋ ಉಪಯುಕ್ತ ವಿಚಾರಗಳು ಇದರಲ್ಲಿ ಅಡಕವಾಗಿವೆ.

ಇವರು ಅನುಭವಸೂತ್ರದಲ್ಲಿ ಕಲ್ಯಾಣದ ಮಾಯಿದೇವರೆಂದೂ, ಮಗ್ಗಿಯ ಮಾಯಿದೇವರೆಂದೂ ಕರೆಯುತ್ತಿದ್ದರೆಂದು ಗೊತ್ತಾಗುತ್ತದೆ. ಇವರು ಶಿವಕವಿಗಳ ಮಾಲಿಕೆಯವರು ಎಂಬುದಕ್ಕೆ ಚನ್ನಬಸವಪುರಾಣದ ೧ನೆಯ ಕಾಂಡದ ೧ನೆಯ ಸಂಧಿಯಲ್ಲಿ ಕವಿಸ್ತುತಿಯಲ್ಲಿ,

"ಸರಸಕವಿ ಬಾಣಂ ಮಯೂರ ಭವಭೂತಿಸದ್ವರ ಕಾಳಿದಾಸ ಮಲುಹಣ ಮಳಯರಾಜನತಿ। ಬಿರುದಂಕ ಕವಿ ರಾಘವಾಂಕ ಹಂಪೆಯ

ಹರೀಶ್ವರ ಹಲಾಯುಧನುದ್ಭಟ ॥ ಗುರು ಪಂಡಿತೇಶ ಪಾಲ್ಕುರಿಕೆಯಾರಾಧ್ಯಭೀ । ಮರಸ **ಮೊಗ್ಗೆಯ ಮಾಯಿದೇವ** ಚಾಮರಸ ಶಂ । ಕಂಕೆರೆಯ ಪದ್ಮರಸರಾದಿ ಶಿವಕವಿಗಳಂ ಬಲಗೊಂಡು ಕೃತಿವೇಳ್ವೆನು. ॥

ಇವರ ವಿಷಯವಾಗಿ ತೋಂಟದ ಸಿದ್ಧಲಿಂಗ ಶಿವಯೋಗಿಗಳು ತಮ್ಮ ಪಾಲ್ಕುರಿಕೆಯ ಸೋಮನಾಥ ಪುರಾಣದ ಆದಿಯಲ್ಲಿ "ಮಾಯಿದೇವರು ನೆಳಲು ಭೂಮಿಯಮೇಲೆ ಬೀಳದಂತಹ ಜಯಸ್ತಂಭವನ್ನು ನಟ್ಟು ಇಷ್ಟಲಿಂಗವನ್ನು ಶರೀರದಮೇಲೆ ಧರಿಸಿದವರಿಗೆ ಭವಬಂಧವಿಲ್ಲೆಂಬದನ್ನು ಸಿದ್ಧಾಂತಮಾಡಿ ತೋರಿಸಿ ಷಟ್ಸ್ಥಲಮಾರ್ಗವನ್ನು ವಿಸ್ತರಿಸಿ ನಿರೂಪಿಸಿದರು" ಎಂದು ಬರೆದಿರುವರು.

ಇವರ ಗ್ರಂಥಗಳನ್ನು ಓದಿದ್ದಾದರೆ ಇದಕ್ಕಿಂತಲೂ ಹೆಚ್ಚಿನ ಪೂಜ್ಯಭಾವವು ಅವರಲ್ಲಿ ಹುಟ್ಟುವದೆಂಬುದಕ್ಕೆ ಸಂಶಯವಿಲ್ಲ.

ಇವರು ತಮ್ಮ ತಂದೆಯ ಹೆಸರು ಸಂಗಮೇಶ್ವರ ದೇವರೆಂದೂ ಅವರ ಗುರುಗಳಾದ ನಾಗರಾಜರು ಐಸೂರದ ಸೋಮನಾಥ ಭಕ್ತರಾದ ಉಪಮನ್ಯು ಶಿವಾಚಾರ್ಯರ ವಂಶೀಯರೆಂದೂ ಮಾತ್ರ ಬರೆದುಕೊಂಡಿದ್ದಾರೆ. ಇದಕ್ಕಿಂತಲೂ ಹೆಚ್ಚಿನ ಸಂಗತಿ ಗೊತ್ತಾಗಿಲ್ಲ. ಇವರು ವಚನಕಾರರೆಂದೂ ಕೇಳಿಕೆಯುಂಟು. ಆದರೆ ಆ ವಚನಗಳ ಮುದ್ರಿಕೆಯು ಯಾವುದೆಂಬುದು ತಿಳಿದಿರುವದಿಲ್ಲ. ಆದುದರಿಂದ ವಚನಗಳನ್ನು ಗುರ್ತಿಸಲು ಸಾಧ್ಯವಿಲ್ಲ

ಇನ್ನು ಈ ಶತಕತ್ರಯದ ವಿಷಯಗಳನ್ನು ವಿಚಾರಿಸಿದಲ್ಲಿ ಇವು ಕ್ರಮವಾಗಿ ಶಿವಾಧವ, ಶಿವಾವಲ್ಲಭ, ಮಹದೈಸುರೀಶ್ವರ ಎಂದಿರುವವು. ಇವುಗಳಲ್ಲಿಯ ವಿಷಯಗಳು ಕ್ರಮವಾಗಿ ಭಕ್ತಿ-ಜ್ಞಾನ-ವೈರಾಗ್ಯ ಇವುಗಳಿರುತ್ತವೆಂದು ಕಂಡುಬರುತ್ತದೆ.

## ಮುಗ್ಗೆಯ ಮಾಯಿದೇವರ ಧಾರ್ಮಿಕ ವಿಚಾರಗಳು.

ಪರಗತಿಯನ್ನು ಕುರಿತು ವಿಚಾರ ಮಾಡಿ ಸ್ಥಾಪಿಸಿರತಕ್ಕ ಮಾರ್ಗಗಳು ಒಂದೊಂದು ಮತಕ್ಕೆ ಒಂದೊಂದು ವಿಧವಾಗಿರುವವು. ಹಾಗೆ ಮಾರ್ಗಭೇದ ಉಂಟಾಗಿರುವದರಿಂದಲೇ ಮತಭೇದ ಮತ್ತು ವ್ಯವಹಾರ ಭೇದಗಳು ಉಂಟಾಗಿರುವವು. ಆರ್ಯಮತಗಳೊಳಗೆ ದ್ವೈತಾದ್ವೈತ

ಮತಗಳು, ಜೀವಸ್ವರೂಪ, ಆತ್ಮಸ್ವರೂಪ, ಮುಕ್ತಿಸ್ವರೂಪಗಳನ್ನು ಪಡೆದುಕೊಳ್ಳುವ ಮಾರ್ಗಗಳನ್ನು ಹೇಳುವಲ್ಲಿ ಒಂದಕ್ಕಿಂತ ಒಂದು ವಿಲಕ್ಷಣವಾದ ರೀತಿಯಿಂದ ಪ್ರತಿಪಾದಿಸುತ್ತಿರುವಂತೆ ವೀರಶೈವ ಮತವೂ ಆ ಮತಗಳಿಂದ ಭಿನ್ನವಾಗಿ ಮತ್ತೊಂದು ವಿಧದ ವೈಲಕ್ಷಣ್ಯವನ್ನು ಪಡೆದು ವ್ಯವಹಾರಿಕ ಸತ್ಯ ಶೋಧನೆಯಿಂದ ಸ್ವತಂತ್ರವಾಗಿರುವದು.

ಇದರಲ್ಲಿ ಷಟ್ಸ್ಥಲ ತಿಳಿವಳಿಕೆಯೇ ಬ್ರಹ್ಮವಿದ್ಯೆ ಎಂದೆನಿಸಿಕೊಳ್ಳಲ್ಪಡುತ್ತದೆ. ಇದರಲ್ಲಿ ಕಾಮ್ಯ ಕರ್ಮದ ಕಂಟಾಟವಿಲ್ಲ. ಅನಂತ ದೈವೋಪಾಸನೆಯ ಜಂಜಾಟವೂ ಇಲ್ಲ. ಶಿವೈಕ್ಯ ದೇವೋಪಾಸನೆಯ ಪರಮ ರಹಸ್ಯವಿದೆ. ಜೀವನ್ಮುಕ್ತಿಗೆ ಸುಖಕರವಾದ ಮಾರ್ಗವಿದೆ. ಕ್ರಿಯಾ ಜ್ಞಾನಗಳ ತವರೆನಿಸಿಕೊಂಡಿದೆ. ಭಕ್ತಿ ಜ್ಞಾನ ವೈರಾಗ್ಯಗಳ ನಿಧಿಯಾಗಿದೆ. ವೀರಶೈವ ಧರ್ಮದ ವಿವೇಚನೆಗಳೆಲ್ಲ ಈ ಷಟ್ಸ್ಥಲ ವಿದ್ಯೆಗೆ ಅಂಗವಾದವುಗಳು.

ಮಾನವನಿಗೆ ಜೀವತ್ವವಳಿದು ಸಾಮರಸ್ಯವು ಉಂಟಾಗಬೇಕಾದರೆ ಅವನು ನಡೆಯತಕ್ಕ ಮಾರ್ಗವಾವುದೋ ಅದೆಲ್ಲವೂ ಕ್ರಮವಾಗಿ ಈ ಶತಕತ್ರಯದಲ್ಲಿ ನಿರೂಪಿಸಲ್ಪಟ್ಟಿರುವದು. ಅದರಲ್ಲಿಯ ಕೆಲವು ಪದ್ಯಗಳಿಂದ ಷಟ್ಸ್ಥಲಮಾರ್ಗದ ಸ್ಥೂಲ ಸ್ವರೂಪವನ್ನು ಇಲ್ಲಿ ಹೇಳುತ್ತೇವೆ.

## ಕರ್ಮ ಮಾರ್ಗ.

ಲಿಂಗಭಕ್ತಿ ಸಂಪನ್ನನಾದ ಶರಣನು ಕೃಚ್ಛ್ರಚಾಂದ್ರಾಯಣಾದಿ ತಪಗಳನ್ನೂ ಪಂಚೇಂದ್ರಿಯಗಳ ನಿಗ್ರಹವನ್ನೂ ವಿಷಯ ವೈರಾಗ್ಯವನ್ನೂ ಯಮನಿಯಮಾದಿಗಳನ್ನೂ ಮೌನ ಮೊದಲಾದ ವ್ರತಗಳನ್ನೂ ಸವಿಕಲ್ಪ ನಿರ್ವಿಕಲ್ಪ ಸಮಾಧಿ ಹೋಮ ನೇಮ ತೀರ್ಥ-ಯಾತ್ರೆ ಮೊದಲಾದ ಪೂರ್ವಾಶ್ರಮದಲ್ಲಿ ಹಿಡಿದ ಯಾವ ನಿಯಮಗಳನ್ನೂ ಹಿಡಿದು ಆಚರಿಸುವ ಅವಶ್ಯವಿಲ್ಲ. ಇದಕ್ಕೆ ಮಾಯಿದೇವರು--

ತಪದ ಜಿತೇಂದ್ರಿಯತ್ವದ ವಿರಾಗದ ಯೋಗದ ಮೌನದ ವ್ರತ।
ಪ್ರವರದ ನಿತ್ಯ ಕರ್ಮದ ಸಮಾಧಿಯ ಸಂಜೆಯ ಮಂತ್ರ ಮಾಲಿಕಾ॥
ಜಪದ ಶರೀರ ನಿಗ್ರಹದ ಹೋಮದ ನೇಮದ ತೀರ್ಥಯಾತ್ರೆಯ-।
ಕ್ಷಪಿತ ಸಮಾಯ ಜಾಡ್ಯದೊಳಗಿಪ್ಪನೆ ಭಕ್ತಿಪರಂ ಶಿವಾಧವಾ ॥೧೦॥

## ಭಕ್ತಸ್ಥಲ.

ಕಿಂಕರಭಾವಮಂ ಬಲಿದು ಲಿಂಗಮುಖಂ ಚರಲಿಂಗಮೆಂದು ನಿ।
ಶ್ಶಂಕತೆಯಿಂ ಸುವರ್ಣ ವಸನಾನ್ನ ಪುರಸ್ಸರ ವಸ್ತುವಾಹನಾ ॥
ಲಂಕರಣಂಗಳಂ ಸಲೆ ಸಮರ್ಪಿಸಿ ವೀರಶಿವಾಗಮೋಕ್ತ ಚಿ ॥
ನ್ಹಾಂಕಿತರಾದವರ್ಗೆ ಮಣಿವಂತುಟೆ ಭಕ್ತಿಪದಂ ಶಿವಾಧವಾ ॥೧೩॥

ಭಾವಃ— ವಿನಯಶೀಲನಾಗಿ ತನ್ನೆದುರಿಗೆ ತಿರುಗುವ ಜೀವರುಗಳ ಮುಖವೇ ದೇವಮುಖವೆಂದು ಸಂಶಯವಿಲ್ಲದೆ ತಿಳಿದು ಆರಾರಿಗೆ ಆವುದರ ಕೊರತೆ ಇರುವದೋ ಅದನ್ನು ಕೋರುತ್ತಲೂ ಇಲ್ಲವೇ ಸಹಾಯ ಮಾಡುತ್ತಲೂ ಇಲ್ಲವೇ ಮನ ಕರಗಿ ಸೇವಿಸುತ್ತಲೂ ತನ್ನ ಸರ್ವಸ್ವವನ್ನೇ ಅವರಿಗೆ ಅರ್ಪಿಸಿದವನಾಗಿ ಶಿವಾಗಮೋಕ್ತ ಧರ್ಮಶೀಲರಾದವರಿಗೆ ಪೂಜ್ಯಭಾವದಿಂದ ನಮಸ್ಕರಿಸುವದೇ ಭಕ್ತಿಮಾರ್ಗವು, ಭಕ್ತಸ್ಥಲದ ಮಾರ್ಗವು.

## ಮಹೇಶ್ವರಸ್ಥಲ.

ಪರವಧುವಂ ಪರದ್ರವಿಣಮಂ ಪರಹಿಂಸೆಯ ನ್ನೈದೆ ದೂರದಿಂ।
ಪರಿಹರಿಸಿ ಸ್ವದೇಶಿಕ ನಿರೂಪಿತಮಪ್ಪ ಷಡರ್ಥಸಂಗ್ರಹಾ ॥
ಚರಣೆಯೊಳೇಕ ಲಿಂಗ ನಿಜನಿಷ್ಠೆ ಸಮಾಹಿತಮಾದೊಡಂತದೇ।
ಪರಮ ಮಹೇಶ್ವರಸ್ಥಲದ ಲಕ್ಷಣ ವೃತ್ತಿಪದಂ ಶಿವಾಧವಾ ॥೧೪॥

ಭಾವಃ—ಪರಸ್ತ್ರಿ ಪರದ್ರವ್ಯ ಪರಹಿಂಸೆಗಳನ್ನು ದೂರೀಕರಿಸಿ ತನ್ನ ಗುರುವು ಉಪದೇಶಿಸಿದ ಷಡರ್ಥ ಅಂದರೆ ಜ್ಞಾನ ಜ್ಞೇಯ ಅನುಷ್ಠೇಯ ಅಧಿಕಾರ ಸಾಧನ ಸಾಧ್ಯ ಎಂಬವುಗಳನ್ನು ಗಳಿಸುವದಲ್ಲಿಯೇ ಆಸಕ್ತಿಯುಳ್ಳವನಾಗಿ ಗುರುವಿನಿಂದ ಲಭ್ಯವಾದ ಲಿಂಗವಲ್ಲದೆ ಅನ್ಯಭಕ್ತಿಯನ್ನು ತೊರೆದು ನಡೆಯುವದೇ ಮಹೇಶ್ವರಸ್ಥಲವು.

## ಪ್ರಸಾದಿಸ್ಥಲವು.

ಲಿಂಗಮುಖಾರ್ಪಣೀಯವಹ ಸರ್ವ ವಿಶುದ್ಧಪದಾರ್ಥ ಜಾತಮಂ।
ಸ್ವಾಂಗವಚೋ ಮನಃ ಕಾರಣ ಕಾಯಕ ವಾಚಕ ಮಾನಸ ಕ್ರಿಯಾ ॥
ಸಂಗತ ಸಾವಧಾನ ಸುವಿವೇಕದಿನರ್ಪಿಸಿ ತತ್ಪ್ರಸಾದಮಂ।
ಪಿಂಗದೆ ಭೋಗಿಪಲ್ಲಿ ಬಳಿಕಾಸ್ಥಲಸಿದ್ಧಿ ದಿಟಂ ಶಿವಾಧವಾ ॥೧೫॥

ಭಾವಃ — ಇಷ್ಟ, ಪ್ರಾಣ, ಭಾವಲಿಂಗಗಳಿಗೆ ಅರ್ಪಿಸಲಿಕ್ಕೆ ಯೋಗ್ಯವಾದ ರೂಪ, ರುಚಿ ತೃಪ್ತಿಗಳೆಲ್ಲವನ್ನೂ ಸತ್ಯ ಮತ್ತು ಪ್ರಾಮಾಣಿಕತನದ ಗಳಿಕೆಯಿಂದ ಶುದ್ಧವೆನಿಸಿದ ಪದಾರ್ಥಗಳನ್ನೂ ವ್ಕೈ, ಮಾತು ಮನಗಳಿಂದ ಸ್ವಲ್ಪವೂ ಭೇದವಿಲ್ಲದೆ ಆಯಾಯ ಲಿಂಗಗಳಿಗೆ ವಿಚಾರಪೂರ್ವಕ ಅರ್ಪಿಸಿ ಸೇವಿಸುತ್ತಿರುವದೇ ಪ್ರಸಾದಿಸ್ಥಲವು.

## ಪ್ರಾಣಲಿಂಗಿಸ್ಥಲವು.

ಆಣವ ಮಾಯ ಕಾರ್ಮಿಕ ಮಲತ್ರಯ ಸಂಗತಿ ದೂರವಾಗಿ ನಿ।
ರ್ವಾಣ ಪದೈಕ ಹೇತುವಹ ಸದ್ಗುರುನಾಥ ನಿಜೋಪದೇಶದಿಂ॥
ಪ್ರಾಣದ ಲಿಂಗದ ಸ್ಥಿತಿ ಸಮಂಜಸವಾಗಿ ಸುಸಾಧ್ಯವಾದೊಡಾ।
ಪ್ರಾಣವೇ ಲಿಂಗವಾದ ಪರಮಸ್ಥಳ ಸಿದ್ಧಿ ಕಣಾ ಶಿವಾಧವಾ ॥೧೬॥

ಭಾವಃ— ಶ್ರೀಗುರುನಾಥನು ಮಾಡಿದ ಮುಕ್ತಿಗೆ ಮುಖ್ಯ ಕಾರಣವಾದ ದೀಕ್ಷಾತ್ರಯಗಳಲ್ಲಿ ವೇಧಾ ದೀಕ್ಷೆಯಿಂದ ಆಣವ ಮಲ ಎಂದರೆ ಗರ್ಭಸಂಬಂಧವಾದ ಮಲವೂ ಮನುದೀಕ್ಷೆಯಿಂದ ಮಾಯಮಲ ಎಂದರೆ ಜಾತಿಸಂಬಂಧವಾದ ಮೋಹವೆಂಬ ಮಲವೂ ಕ್ರಿಯಾದೀಕ್ಷೆಯಿಂದ ಕಾರ್ಮಿಕಮಲ ಎಂದರೆ ದ್ರವ್ಯ ಗಳಿಸುವ ಸಂಬಂಧವಾಗಿದ್ದ ದೋಷವೂ ಹೋಗುವವು. ಹೀಗೆ ಹುಟ್ಟು, ಜಾತಿ, ಗಳಿಕೆಗಳಲ್ಲಿದ್ದ, ಅಭಿಮಾನ ಅಹಂಕಾರಗಳು ನಷ್ಟವಾಗಿ ಪ್ರಾಣವೂ, ಲಿಂಗವೂ ಎರಡೂ ಒಂದಾಗಿ ಸಮನಿಸಿದ್ದರೆ ಅದೇ ಪ್ರಾಣಲಿಂಗಿಸ್ಥಲವು.

## ಶರಣಸ್ಥಲ.

ಪಂಚವಿಧೇಂದ್ರಿಯ ಪ್ರಕೃತಿ ಸಂಗಸುಖಂ ತನಗೆಂಬ ಬುದ್ಧಿಯಂ।
ವಂಚಿಸಿ ಲಿಂಗವೇ ಪತಿ ತದೀಯ ಮಹಾಸತಿ ತಾನೆನಿಪ್ಪ ನಿರ್॥
ವಂಚಕ ಭಾವಮಂ ಬಲಿದು ಚಿತ್ಪರಿಣಾಮ ಪರಾನುಭೂತಿಯಿಂ।
ದಂ ಚರಿಸಲ್ಪಿಶಿಷ್ಟ ಶರಣಸ್ಥಲ ಸಿದ್ಧಿ ಕಣಾ ಶಿವಾಧವಾ ॥೧೭॥

ಟಿಪ್ಪಣಿಃ— ಶ್ರೋತ್ರಾದಿ ಪಂಚೇಂದ್ರಿಯಂಗಳ ಮುಖದಿಂದ ಸ್ವಭಾವ ಸಿದ್ಧವಾಗಿ ಹುಟ್ಟುವ ವಿಷಯ ಸೌಖ್ಯವು ತನಗೆಂಬ ಭಾವನೆಯನ್ನು ಬಿಟ್ಟು ತಾನು ಸತಿ ಲಿಂಗವೇ ಪತಿಯೆಂಬ ನಿರ್ಮಲವಾದ

ಭಾವನೆಯನ್ನು ಹೊಂದಿ ಸಕಲ ಜಗತ್ತೂ ಚಿಚ್ಛಕ್ತಿವಿಕಾರವಾದುದೆಂಬ ಉತ್ಕೃಷ್ಟವಾದ ಅನುಭವದಿಂದ ಕೂಡಿರುವದೇ ಶರಣಸ್ಥಲವು.

## ಐಕ್ಯಸ್ಥಲವು.

ತನಗವಸಾನ ಭೂಮಿ ಶಿವಲಿಂಗ ಮದಕ್ಕವಸಾನ ಭೂಮಿ ತಾ ।
ನೆನಿಸಿ ಬಹಿಃ ಪ್ರಪಂಚ ರಚನಾ ಕ್ರಿಯೆಯಂ ನೆರೆ ಬಿಟ್ಟು ಚಿತ್ಪರಾ ॥
ಣ್ವನುಭವದಿಂದಹಂತ್ವಮಿತಿ ಶಬ್ದ ವಿಭೇದವಡಂಗಿ ತೋರ್ಪಡಾ ।
ತನೆ ಪರಮೈಕ್ಯ ನಿಷ್ಕಳ ಮಹಾಸ್ಥಲ ಯುಕ್ತಿ ಯುತಂ ಶಿವಾಧವಾ ॥೧೮॥

ಟಿಪ್ಪಣಿಃ— ತನಗೆ ಶಿವಲಿಂಗವೂ ಶಿವಲಿಂಗಕ್ಕೆ ತಾನೂ ನಿಲು ಕಡೆಯ ಸ್ಥಲವೆಂದು ತಿಳಿದು ಸ್ವಸ್ವರೂಪ ಜ್ಞಾನದಿಂದ ಭೇದ ಭಾವ ನೆಗೆ ಕಾರಣವಾದ ಮೂಲ ಜ್ಞಾನವು ನಷ್ಟವಾಗಿ ಸಕಲ ಜಗತ್ತೂ ಶಿವಾತಿರಿಕ್ತವಲ್ಲದೆ ಇರುವರೆಂದು ತೋರಿರುವ ಕಾರಣ ಪ್ರಪಂಚವನ್ನು ಬಾಹ್ಯವಾದುದೆಂದು ಪರಿಭಾವಿಸದೆ ಆದರಂತೆಯೇ ನಾನು ನೀನು ಎಂಬ ಭೇದ ಭಾವವು ಅಳಿದು ಹೋಗಿ ಇರುತ್ತಿರುವದೇ ಐಕ್ಯಸ್ಥಲ ಮಾರ್ಗ ವರ್ತನವು.

ಈ ಪ್ರಕಾರ ಷಟ್ ಸ್ಥಲಾಚರಣ ಯುಕ್ತನಾದ ಶರಣನ ಪಂಚೇಂದ್ರಿಯಗಳಲ್ಲಿಯೂ ಹೃದಯದಲ್ಲಿಯೂ ಲಿಂಗ ಸಂಬಂಧವು ಹೇಗಿರುವದೆಂಬದು ಕೆಳಗಿನ ಶ್ಲೋಕದಲ್ಲಿ ಹೇಳಲ್ಪಟ್ಟಿದೆ.

## ಷಡ್ಲಿಂಗಗಳ ಸಂಬಂಧವು.

ಆಚರಣಾದಿಲಿಂಗ ಗುರುಲಿಂಗ ಶಿವಾಹ್ವಯಲಿಂಗ ಜಂಗಮಾ ।
ಖ್ಯೋಚಿತಲಿಂಗ ನಿರ್ಮಳ ನಿರರ್ಗಳ ನಿಶ್ಚಲ ಮುಕ್ತಿದಪ್ರಸಾ ॥
ದಾಚಳಲಿಂಗ ನಿಷ್ಕಳ ಮಹಾಘನಲಿಂಗ ಮಹೇಂದ್ರಿಯ ಪ್ರಭಾ ।
ಸೂಚಿತ ಷಟ್‌ಸ್ಥಲಾತ್ಮಕ ಶರೀರಧರಂ ಶರಣಂ ಶಿವಾಧವಾ ॥೧೯॥

ಟಿಪ್ಪಣಿಃ— ಘ್ರಾಣೇಂದ್ರಿಯದಲ್ಲಿ ಆಚಾರಲಿಂಗ, ಜಿಹ್ವೇಂದ್ರಿಯದಲ್ಲಿ ಗುರುಲಿಂಗ, ನೇತ್ರೇಂದ್ರಿಯದಲ್ಲಿ ಶಿವಲಿಂಗ, ತ್ವಗಿಂದ್ರಿಯದಲ್ಲಿ ಜಂಗಮಲಿಂಗ, ಶ್ರೋತ್ರೇಂದ್ರಿಯದಲ್ಲಿ ಪ್ರಸಾದಲಿಂಗ, ಹೃದಯದಲ್ಲಿ ಮಹಾಲಿಂಗ, ಹೀಗೆ ಆರು ಇಂದ್ರಿಯಗಳಲ್ಲಿಯೂ ಲಿಂಗಗಳು ಪ್ರತಿಷ್ಠಿತವಾಗಿರುವದ

ರಿಂದ ಆವ ಮುಖದಿಂದ ಬಂದ ಪದಾರ್ಥವಾದರೂ ಲಿಂಗಮುಖವಾಗಿಯೇ ಪರಿಗ್ರಹಿಸಲ್ಪಡುವದು.

## ಇಷ್ಟಲಿಂಗ ವಿಚಾರ

ಹೀಗೆ ಲಿಂಗಸಂಬಂಧಿಯಾದ ಶರಣನು ತನ್ನ ಇಷ್ಟಲಿಂಗವನ್ನು ಹೇಗೆ ನೋಡುವನು, ಅದು ತನ್ನ ವ್ಯತಿರಿಕ್ತವಾಗಿರುವದಿಲ್ಲವೇ, ಎಂಬ ಪ್ರಶ್ನೆಗೆ ಮಾಯಿದೇವರು ಬಹು ಬೋಧಪ್ರದವಾಗಿ ವಿವರಿಸಿದ್ದಾರೆ. ಅದು ಹೇಗೆಂದರೆ,

ಮುಕುರವನೀಕ್ಷಿಪಂಗನೆಯ ಬುದ್ಧಿಯದೇಂ ವರರೂಪಹಾವಭಾ।
ವಕಲಿತ ವಿಭ್ರಮಾಪ್ತ ನಿಜಮಂಗಳ ಮೂರ್ತಿಯನೀಕ್ಷಿಪಲ್ಲಿಯೋ ॥
ಮುಕುರವನೇ ನಿರೀಕ್ಷಿಪೆಡೆಯಲ್ಲಿಯೊ ತನ್ನನೆ ನೋಳ್ಪಳೈಸೆ ಲೈಂ।
ಗಿಕನಿಯಮಾರ್ಚನಾನುಭವ ದರ್ಪಣದೊಳ್ ಶರಣಂ ಶಿವಾಧವಾ।

ಕನ್ನಡಿಯನ್ನು ನೋಡತಕ್ಕ ಸ್ತ್ರೀಯ ಉದ್ದೇಶವು ಸೌಂದರ್ಯ ಲಾವಣ್ಯ ವಿಲಾಸಾದಿಗಳಿಂದ ಕೂಡಿದ ತನ್ನ ದೇಹವನ್ನು ನೋಡಿಕೊಳ್ಳುವದಾಗಿರುವದೇ ಹೊರತು ಕನ್ನಡಿಯನ್ನೇ ನೋಡಬೇಕೆಂಬುದಾಗಿರುವದಿಲ್ಲ. ಆದರಂತೆ ಶರಣನು ಲಿಂಗಾರ್ಚನಾನಿಯಮವೆಂಬ ಕನ್ನಡಿಯ ನೋಟದಲ್ಲಿ ಸ್ವಸ್ವರೂಪ ಸಾಕ್ಷಾತ್ಕಾರವನ್ನೇ ಉದ್ದೇಶವಾಗಿಟ್ಟುಕೊಂಡಿರುವನು. ಇದಕ್ಕೆ ಕೆಲವರು–

ಕನ್ನಡಿಯಲ್ಲಿ ಕಂಡಂತೆ ತನ್ನ ಆತ್ಮಸ್ವರೂಪವು ಇಷ್ಟಲಿಂಗದಲ್ಲಿ ಹೇಗೆ ಕಾಣುವದು? ಪೂಜ್ಯ ದೈವವೆಂದು ಪ್ರತ್ಯೇಕಿಸಿ ಪೂಜಿಸುವದಿಲ್ಲವೆ? ಅದರ ಆಕಾರಗಳು ಬೇರೆಯಾಗಿ ಕಾಣುವದಿಲ್ಲ, ಎಂಬ ಪ್ರಶ್ನೆಗೆ ಮಾಯಿದೇವರು ಹೇಳುವದೇನಂದರೆ:–

ನೋಡದ ಮುನ್ನ ದರ್ಪಣದ ಭಾವಮುದುಂಟು ವಿಭ್ರಮಂ।
ಗೂಡಿ ವಿರಾಜಿಸುತ್ತಾಭಿಮುಖಾಸ್ಪದಮಾದ ನಿಜ ಸ್ವರೂಪಮಂ ॥
ನೋಡಿದ ನಂತರಂ ಮರಳಿ ದರ್ಪಣ ಭಾವಮುದುಂಟೆ ತತ್ವಮಂ।
ನೋಡದ ಮುನ್ನ ಮಾಯೆ ಬಳಿಕೆಲ್ಲಿಯ ಮಾಯೆ ಬಿಡಾ ಶಿವಾಧವಾ ॥

ಕನ್ನಡಿಯನ್ನು ದೂರಿಂದ ನೋಡಿದಾಗ ಇಲ್ಲವೆ ಮಗ್ಗುಲಾಗಿ ನೋಡಿದಾಗ ಇದು ಕನ್ನಡಿ, ಕಾಜು, ಚೌಕಟ್ಟು ಎಂಬ ಭಾವನೆ ಬರು

ವನು. ಎಂದರೆ ತನ್ನಿದಿರಾಗಿಟ್ಟುಕೊಂಡು ನೋಡುವದಕ್ಕೆ ಮುಂಚೆ ಕನ್ನಡಿಯೆಂಬ ಭಾವನೆಯು ತನಗುಂಟು. ಅದರಲ್ಲಿ ತನ್ನ ರೂಪನ್ನು ನೋಡಿದ ಬಳಿಕ ಕನ್ನಡಿಯ ವಿಚಾರವು (ಜ್ಞಾನವು) ತನಗಿಲ್ಲ. ತತ್ವಗಳನ್ನು ನೋಡಿ ತಿಳಿಯುವ ಮೊದಲು ಮಾಯೆ, ತಿಳಿದ ಬಳಿಕ ಎಲ್ಲಿಯು ವರೆಗೆ ಮಾಯೆ ಎಂದರೆ ಲಿಂಗಾರ್ಚನಾದಿ ಸ್ವಸ್ವರೂಪ ಸಾಕ್ಷಾತ್ಕಾರವಾಗುವ ವರೆಗೆ ಮಾತ್ರ. ಆದರೆ ತತ್ವ ಸಾಕ್ಷಾತ್ಕಾರವಾದ ಬಳಿಕ ಮಲಶಕ್ತಿಯಳಿವ ಕಾರಣ ಕ್ರಿಯೆಯಲ್ಲಿ ಹೊರಗಿನ ಆಕಾರದ ವಿಚಾರವು ಮಾಯವಾಗಿ ಸ್ವಸ್ವರೂಪಜ್ಞಾನವು ತನಗಾಗುವದೆಂಬ ಭಾವವು.

ಭಾಕ್ತಿಕವೇ ಮಹೇಶ್ವರ ಮಹಾಸ್ಥಲವಾ ಸ್ಥಲವೇ ಪ್ರಸಾದಸಂ।
ಯುಕ್ತಿವಿಶಾರದ ಸ್ಥಳಮದೇ ಘನಜೀವಕಳಾತ್ಮ ಲಿಂಗಭಾ॥
ವೋಕ್ತ ನಿಜಸ್ಥಳಾಖ್ಯಮದು ತಾನೆ ಲಸಚ್ಛರಣಸ್ಥಳತ್ವಮಾ।
ಮುಕ್ತಿವಿಶಿಷ್ಟ ದಿವ್ಯ ಶರಣಸ್ಥಳವೈಕ್ಯಪದಂ ಶಿವಾಧವಾ॥

ಭಕ್ತಸ್ಥಲವೇ ವಿಶಿಷ್ಟಾಚರಣಸಂಪನ್ನತೆಯಿಂದ ಮಹೇಶ್ವರ ಸ್ಥಲವಾಗುವದು. ಆ ಮಹೇಶ್ವರಸ್ಥಲವೇ ಮನೋನೈರ್ಮಲ್ಯದ ಸಂಬಂಧದಿಂದ ಪ್ರಸಾದಿಸ್ಥಲವಾಗುವದು ಆ ಪ್ರಸಾದಿಸ್ಥಲವೇ ಜ್ಞಾನಯೋಗದಿಂದ ಪ್ರಾಣಲಿಂಗಸ್ಥಲವಾಗುವದು. ಆ ಪ್ರಾಣಲಿಂಗಿಸ್ಥಲವೇ ಶರಣಸತಿ ಲಿಂಗಪತಿ ಭಾವದಿಂದ ಲಿಂಗಾಂಗ ಸಾಮರಸ್ಯ ಸೌಖ್ಯವನ್ನನುಭವಿಸುತ್ತ ಬಾಹ್ಯ ವ್ಯಾಪಾರವನ್ನು ಮರೆತಿರುವದರಿಂದ ಶರಣಸ್ಥಲವಾಗುವದು. ಆ ಶರಣಸ್ಥಲವೇ ಶಿವಲಿಂಗದಲ್ಲಿ ಐಕ್ಯವನ್ನೈದಿ ಭಿನ್ನಭಾವವನ್ನಳಿದಿರುವದರಿಂದ ಐಕ್ಯಸ್ಥಲವಾಗುವದು. ಹೀಗೆ ಅವುಗಳೆಲ್ಲವನ್ನೂ ಪಡೆದಿರುವದರಿಂದ ಸ್ವಸ್ವರೂಪಸಾಕ್ಷಾತ್ಕಾರವುಳ್ಳ ಶರಣನಿಗೆ ಮೇಲೆ ಹೇಳಿದ ಷಟ್ಸ್ಥಲಾಚರಣೆಯೆಲ್ಲಾ ಒಂದೇ ಆಗಿರುವದು.

ನಿಜವಾದ ವೀರಶೈವಧರ್ಮಾಚರಣೆಯು ಹೀಗಿರುತ್ತಿದ್ದರೂ ನಮ್ಮಲ್ಲಿಯ ಕೆಲವರು ಧರ್ಮಶೀಲರೆಂಬವರು ಇದಕ್ಕೆ ತೀರ ಭಿನ್ನವಾಗಿರುವ ಆಚರಣೆಗಳಿಂದ ನಡೆಯುತ್ತಿರುವರು. ಅವರು ತಮ್ಮ ಸುತ್ತಲಿನ ಕರ್ಮಾಚರಣೆಯುವಂತೆ ಅಸ್ಪೃಶತೆ, ಚಾಂದ್ರಾಯಣಾದಿ ವ್ರತಗಳು, ಪ್ರಾಣಾಯಾಮಾದಿ ಕಾಮ್ಯಕರ್ಮಗಳು ಇವುಗಳನ್ನು ಆಚರಿಸುತ್ತಿರುವರು. ಅವರಿಗೆ ಮಾಯಿದೇವರು:—

ಶ್ವಪಚನ ದೈವದಂತರವುನೊರ್ವೋ ವಿಚಾರಿಸಿ ನೋಡೆಲೋಕ
ದೊಳ್ ।
ಶ್ವಪಚನೆ ಬಲ್ಪಿನಾಜನದ ಬುದ್ಧಿಗೆ ದೈವವುನೊಲ್ದು ಮುಟ್ಟಿದ॥
ಲ್ಲಿ ಪರಮಶುದ್ಧತಾ ಸ್ಮರಣೆಯಿಲ್ಲದ ಶುದ್ಧಸಲೇಪಭಾವವಾ।
ಶ್ವಪಚನ ತಟ್ಟು ಮುಟ್ಟನೆಡೆಯಲ್ಲಿಯೇ ಬರ್ಪುದರಿಂ ಶಿವಾಧವಾ॥

ಭಾವಾರ್ಥ— ಕರ್ಮ ಭ್ರಾಂತರಾದ ಜನರ ಆಚರಣೆಯನ್ನು ನೋಡಿದರೆ ಅವರಿಗೆ ದೇವರಿಗಿಂತಲೂ ಹೊಲೆಯನೇ ಹೆಚ್ಚಿನವನೆಂದು ತೋರುವಂತೆ ಕಾಣುತ್ತದೆ. ಯಾಕಂದರೆ ತನ್ನಲ್ಲಿ ಇಷ್ಟಲಿಂಗ ಸಂಬಂಧ ವಿರುವಾಗ ಆದರಿಂದ ತಾನು ಪರಿಶುದ್ಧನಾಗಿರುವೆನೆಂಬ ಭಾವವಿರು ತ್ತಿರುವಲ್ಲಿ ಅದನ್ನು ಮರೆತು ಹೊಲೆಯನು ತನ್ನನ್ನು ಮುಟ್ಟಿದ ಕೂಡಲೇ ತಾನು ಪತಿತನಾದೆನೆಂದು ಇಲ್ಲವೆ ತನಗೆ ಅರುಚಿತ್ವವು ಬರುವದೆಂದು ತಿಳಿದರೆ ದೇವಸ್ಪರ್ಶನಕ್ಕಿಂತಲೂ ಹೊಲೆಯನ ಮುಟ್ಟೋಣವು ಹೆಚ್ಚಿನ ದಾಗಲಿಲ್ಲವೇ? (ಅಂಗದ ಮೇಲೆ ಲಿಂಗಸಂಬಂಧವಾಗಿ ಲಿಂಗಭಾವವಡೆ ಗೊಳ್ಳದೆ ಮಲಿನಭಾವಿಯಾಗಿರ್ಪೊಡೆ ಆ ಲಿಂಗಧಾರಣಂ ವ್ಯರ್ಥವೆಂದು ತೋಂಟದ ಸಿದ್ಧಲಿಂಗ ಶಿವಯೋಗಿಗಳ ಅಭಿಪ್ರಾಯವು)

ಇನ್ನು ಅವರು ಆಚರಿಸತಕ್ಕ ಆಚರಣೆಗಳ ಸಂಬಂಧವಾಗಿ ವಿಚಾರ ಮಾಡಿ ನೋಡಿದರೆ ಚಾಂದ್ರಾಯಣಾದಿ ವ್ರತಗಳು ಪ್ರಾಣಾಯಾಮಾದಿ ನಿಯಮಗಳು ಉಪವಾಸ ಮೊದಲಾದ ಕಾಮ್ಯಕರ್ಮ ಸಂಬಂಧವಾದ ಆಚರಣೆಗಳು ಲಿಂಗವಿಹೀನರಾದ ಭವಿಗಳಿಗೆ ಉತ್ಕೃಷ್ಟವಾದ ಧರ್ಮ ವಾಗಿರುವವೇ ಹೊರತು ಲಿಂಗಾಂಗಸಂಗಿಗಳಿಗೆ ಅವು ತತ್ವಾರ್ಥ ವಿಚಾ ರದಿಂದ ಸಿದ್ಧಾಂತವಾದ ಆಚರಣೆಗಳಾಗಿರುವದಿಲ್ಲ. ಅದು ಹೇಗೆಂದರೆ—

ಆದೊಡೆ ನಿಲ್ಲು ತೀರ್ಥ ಜಲ ಮಜ್ಜನ ಮುಂಡನದಂತಧಾವನಾ।
ಚ್ಛಾದನ ಧೋತ್ರದೇಹ ಪರಿಶುದ್ಧ್ಯುಪವಾಸ ಸಹಸ್ರಪಾರಣಾ॥
ಪಾದಿತನಿತ್ಯಕರ್ಮ ವಿಧಿ ನೋಳ್ಪೊಡೆ ಮುಂಡೆಗೆ ಯೋಗ್ಯವೈಸೆ ಮು।
ತ್ತೈದೆಗೆ ಯೋಗ್ಯವಲ್ಲ ಸತತಂ ಪತಿಭಕ್ತಿಯಿರಲ್ ಶಿವಾಧವಾ॥

ಭಾವಾರ್ಥಃ— ಆ ಉಪವಾಸಾದಿ ವ್ರತಗಳೇ ಕರ್ತವ್ಯಗಳೆಂದು ಹೇಳುವದಾದರೆ ಪತಿಯೇ ದೈವವೆಂದು ತಿಳಿದಿರುವ ಮುತ್ತೈದೆಯು ಪತಿಯ ಅಪ್ಪಣೆಯ ಹೊರತು ತೀರ್ಥಜಲ ಸ್ನಾನ ತಲೆಬೋಳಿಸುವಿಕೆ ಉಪವಾಸ

ಪಾರಣೆ ಎಂದಿಗೂ ಮಾಡುವದಿಲ್ಲವಾದ್ದರಿಂದ ಅವೆಲ್ಲ ಮುಂಡೆಯಾಚ ರಿಸತಕ್ಕ ಧರ್ಮಗಳು. ಅದರಂತೆ ತಾನು ಸತಿ ಲಿಂಗ ಪತಿ ಯೆಂದು ತಿಳಿ ದಿರುವ ಶರಣರಿಗೆ ಶಿವೈಕಾಯತ್ತವಾದ ಆಚರಣೆಯು ಹೊರತು ಬೇರೆ ವ್ರತೋಪವಾಸಾದಿಗಳನ್ನು ಮಾಡುವುದು ಅಧರ್ಮವೆಂಬ ಭಾವವು.

ಇದರಂತೆ ಅರಿಸಿನ ಹೂವು ಗಂಧ ಒಡವೆ ವಸ್ತ್ರ ಮೊದಲಾದವು ಗಳನ್ನಲಂಕರಿಸಿ ಮೆರೆಯುವುದು ಗಂಡನುಳ್ಳ ಮುತ್ತೈದೆಗೆ ಒಪ್ಪುವದೇ ಹೊರತು ಮುಂಡೆಗೆ ಯೋಗ್ಯವಲ್ಲದಿರುವಂತೆ ಲಿಂಗಾಂಗ ಸಂಬಂಧ ಯುಕ್ತವಾಗಿರುವ ಶರಣನು ಸಕಲೇಂದ್ರಿಯ ಮುಖಾಗತವಾದ ಸೌಖ್ಯ ವನ್ನು ಅನುಭವಿಸುವದಕ್ಕೆ ಯೋಗ್ಯನಾಗಿರುವನು. (ಅಸ್ಥಿರ ಮನಸ್ಸೋ ಯದ ಪ್ರಾಮಾಣಿಕ ಸಂಪಾದನೆಯ ಸುಖದಲ್ಲಿ ವೈರಾಗ್ಯವನ್ನು ತಾಳದೆ ಎಲ್ಲವೂ ಪರಮಾತ್ಮನದೇ ಎಂದು ಭಾವಿಸಿ ಪ್ರಾಮಾಣಿಕವಾದ ಎಲ್ಲ ಉದ್ಯೋಗ ವ್ಯವಹಾರಗಳಲ್ಲಿ ತೊಡಗಿರುವದು ಧರ್ಮವಾಗಿರುವದು.)

ಹೀಗಿದ್ದು ಕೆಲವು ವೀರಶೈವರು ವೇದಾಂತದ ಬೆನ್ನುಹತ್ತಿ ಒಣ ವಾಗದ್ವೈತಿಗಳಾಗಿ ಪ್ರತ್ಯಕ್ಷ ಶಿವಯೋಗವಾಗಿರುವ ಲಿಂಗಧಾರಣ, ಪೂಜನೆ, ಧ್ಯಾನ ಮೊದಲಾದವುಗಳಿಗೆ ಆಶ್ರಯವಾಗಿರುವ ಶಿವದೀಕ್ಷೆ ಯನ್ನು ಹೊಂದದೆ, ಗರ್ವಾಂಧತೆಯಿಂದ ಲಿಂಗಸುಖಪರಿಣಾಮಿಗಳಾ ಗುವ ರೀತಿಯನ್ನರಿಯದೆ, ಶೂನ್ಯಬ್ರಹ್ಮವೇ ತಾವಾದೆವೆಂಬ ಅಹಂಕಾರ ದಿಂದ ತಾವು ಯೋಗಿಗಳೆಂದು ಹೇಳಿಕೊಳ್ಳುತ್ತಿರುವರು. ಇಂಥವರಿಗೆ ಮಾಯಿದೇವರು ಹೇಳಿದ್ದೇನಂದರೆ—

ದೃಷ್ಟದ ಲಿಂಗಧಾರಣ ಸಮರ್ಚನಚಿಂತನಮಿಲ್ಲದಾಗಮ ।
ಭ್ರಷ್ಟರಿಗಂತರಾನುಪಮ ಚಿದ್ಘನರೂಪ ಮಹಾತ್ಮ ಲಿಂಗಮ ॥
ಸ್ಪಷ್ಟಮದೃಶ್ಯಮಧ್ರುವಮಪೂಜ್ಯಮಗೋಚರಮಿಷ್ಟಲಿಂಗನಿ ।
ರ್ದಿಷ್ಟ ಬಹಿಷ್ಕ್ರಿಯಾಪರರಿಗಂತರಸಿದ್ಧಿ ದಿಟಂ ಶಿವಾಧವಾ ॥

ಭಾವಾರ್ಥಃ— ಪ್ರತ್ಯಕ್ಷವಾದ ಇಷ್ಟಲಿಂಗವನ್ನು ಧರಿಸಿಕೊಂಡು ಅದರ ಪೂಜಾಧ್ಯಾನಗಳನ್ನು ಮಾಡದಿರುವ ಶಿವಾಗಮ ದೂರರಾದವರಿಗೆ ಅಸ ದೃಶವಾದ ಜ್ಞಾನಸ್ವರೂಪವಾದ ಅಂತರ್ಗತವಾದ ಪ್ರಾಣಲಿಂಗವು ವ್ಯಕ್ತ ವಾಗುವದಿಲ್ಲ, ಕಾಣಿಸುವದಿಲ್ಲ, ಸ್ಥಿರವಾಗುವದಿಲ್ಲ, ಪೂಜಾಯೋಗ್ಯ ವಾಗುವದಿಲ್ಲ, ಮನಸ್ಸಿಗೆ ನಿಲುಕುವದಿಲ್ಲ. ಮತ್ತೇನೆಂದರೆ— ಯಾರು

ಬಾಹ್ಯವ್ಯಾಪಾರಗಳನ್ನೆಲ್ಲಾ ಇಷ್ಟಲಿಂಗಕ್ಕೆ ಅರ್ಪಿಸುವ ಅವಧಾನವುಳ್ಳವರೋ ಅಂಥವರಿಗೆ ಮಾತ್ರ ಪ್ರಾಣಲಿಂಗವು ಗೋಚರಿಸುವದು ಎಂಬ ಭಾವವು.

ಇದಕ್ಕೆ ಕೆಲವರು ಆಕ್ಷೇಪಿಸುವದೇನಂದರೆ— ಯೋಗಸಾಧನದಿಂದ ಇಲ್ಲವೆ ಮನಸ್ಸಿನ ಧ್ಯಾನದಿಂದ ಸಮಾಧಿಸ್ಥರಾಗಿ ಪ್ರಾಣಲಿಂಗದಲ್ಲಿ ತಲ್ಲೀನರಾಗಿರುವಾಗ ಇಷ್ಟಲಿಂಗದಿಂದ ಪ್ರಯೋಜನವೇನು? ಇಷ್ಟೇಕೆ? ಬಾಹ್ಯಕ್ರಿಯೆಗಳಿಂದ ಅಂತರ್ಧ್ಯಾನಕ್ಕೆ ಒಂದು ರೀತಿಯಿಂದ ಬಾಧಕವೇ ಆಗುವದು ಎನ್ನುವರು. ಇದಕ್ಕೆ ಅನುಭಾವಿಗಳಾದ ಮಾಯಿದೇವರು ಎಲ್ಲರಿಗೂ ತಿಳಿಯುವಂತೆ ಉತ್ತರಕೊಟ್ಟಿರುವರು. ಅದೇನಂದರೆ—

ಚಿರಸುಖಿ ಜಾಗ್ರದೊಳ್ ನೆರೆ ಮನೋರಮೆಯಪ್ಪ ನಿಜಪ್ರಿಯಾಂಗನಾ।
ಸರಸ ರತಿಪ್ರಸಂಗ ಪರಿಣಾಮದೊಳಿರ್ಪನೆಗಂ ತದೀಯನಿ॥
ರ್ಭರಸುಖ ತೃಪ್ತಿ ಸುಪ್ತಿ ಯೆಡೆಗೊಂಡಿರಲಲ್ಲಿಯು ವೇಧೆಯಿಂದಮಾ।
ಪರಿಯೆ ಧಿಟಂ ಪ್ರಬುದ್ಧತೆಯೊಳಂತುಮವೇ ಸಹಜಂ ಶಿವಾಧವಾ॥

ಟೀಕೆ— ಜಾಗ್ರದವಸ್ಥೆಯಲ್ಲಿ ತನ್ನ ಪ್ರಿಯೆಯೊಡನೆ ಕೂಡಿ ರಮಿಸಿ ಸುಖಪಡುತ್ತಿರುವವನು ನಿದ್ರೆಯಲ್ಲಿಯೂ ಕೂಡ ಆ ಜಾಗ್ರದವಸ್ಥೆಯ ಸುಖಸಂಸ್ಕಾರದಿಂದ ಕನಸಿನಲ್ಲಿಯೂ ಅವೇ ತರದ ಸುಖಪರಿಣಾಮಿಯಾಗಿಯೇ ಇರುವನು. ಮತ್ತು ಎಚ್ಚರುಗೊಂಡಾಗಲೂ ಹತ್ತಿರ ನಿಜಸತಿ ಇರುವದರಿಂದ ಆ ಸ್ವಪ್ನಾವಸ್ಥೆಯ ಸುಖಭೋಗವನ್ನೇ ಸಹಜವಾಗಿ ಹೊಂದುತ್ತಿರುವನು. ಅದರಂತೆಯೇ ಇಷ್ಟಲಿಂಗಧಾರಣ ಪೂಜಾಸ್ಮರಣಾದಿಗಳಿಂದ ಸುಖಿಸುತ್ತಿರುವನು. ಆ ಸಂಸ್ಕಾರಬಲದಿಂದ ಪ್ರಾಣಲಿಂಗಜ್ಞಾನಿಯಾಗಲೂ ಶಕ್ತನಾಗುವನು.

ಈ ಪ್ರಕಾರ ಮಗ್ಗೆಯ ಮಾಯಿದೇವರು ಷಟ್‌ಸ್ಥಲ ವಿಚಾರಗಳನ್ನೂ ಇಷ್ಟಲಿಂಗ ಪ್ರಾಣಲಿಂಗಗಳ ಸಂಬಂಧವನ್ನೂ, ಕರ್ಮಮಾರ್ಗದ ಅನಾವಶ್ಯಕತೆಯನ್ನೂ ಬಹು ಸರಸಾಗಿ ನಿರೂಪಿಸಿದ್ದಾರೆ.

(ಮುಂದೆ)

# ಬೇಡಿಕೆ.

—:—

ಸಕಲ ಜೀವಾತ್ಮರಿಗೆ
ಲೇಸ ಬಯಸುವ ತೆರದ
ಅಕಳಂಕ ಬುದ್ಧಿಯನು
ಕರುಣಿಸೆಲೆ ದೇವಾ ॥ಪ॥

ಲೋಕ ಸೇವೆಯು ಗೈವೆ
ನೆಂದಹಂಕರಿಸುವಾ
ಕಾಕು ಬುದ್ಧಿಯನೆನ್ನೊ
ಳಿರದಂತೆ ತೊಲಗಿಸುತೆ ॥ಸ॥ ೧॥

ಕಳವು, ಕೊಲೆ, ಹಿಂಸೆಗಳ
ಗೈವರಾ ಸಹವಾಸ
ದೊಳಗೆನ್ನ ನಿರಿಸದಲೆ
ಕರುಣಾಳು ಪಾಲಿಸುತೆ ॥ಸ॥ ೨॥

ಚಂದನವ ತುಂಡರಿಸಿ
ತೇದರು ಗಂಧ ಕೆಡದೊಲು
ಕುಂದದ ಧೈರ್ಯ ಕರುಣಿಸಿ
ಬಂದೆಡರ ಸಹಿಸಲ್ಕೆ ನೀಂ ॥ಸ॥ ೩॥

ಜನತೆಯೊಳು ಮೇಲು ಕೀ
ಳುಗಳೆಂದು ಭೇದಿಸುವ
ಮನವ ನೆನಗೀಯದಲೆ
ಸಮತೆಯನು ಕರುಣಿಸುತೆ ॥ಸ॥ ೪॥

ಸತ್ಯ, ಶಮ, ದಮ, ಶಾಂತಿ
ಧೈರ್ಯ ಸ್ಥೈರ್ಯಗಳ
ನತ್ಯಧಿಕದಿಂ ಕರುಣಿಸುತೆ
ಜಗವನು ಪೊರೆಯುತಲಿ ನೀಂ ॥ಸ॥ ೫॥

ಶ್ರೀ ವೀರೇಶ್ವರ ಬೆಂಗಳೂರು ನಗರ.

# ಪುರಾಣಗಳು ಸಾಕು, ವಚನಗಳು ಬೇಕು.

(ಲೇಖಕ:— ಓರ್ವ ಶಿಕ್ಷಕ ಬಳಗಾನೂರ )

ಶ್ರಾವಣಮಾಸದಲ್ಲಿ ಜನರಿಗೆ ಕೆಲಸ ಕಡಿಮೆ. ಧಾರ್ಮಿಕ ವಿಧಿಗಳು ಹೆಚ್ಚು. ಆ ಮಾಸದಲ್ಲಿ ಹಲಕೆಲವು ಕಡೆ ಒಂದೊಂದು ದೇವರ ಹೆಸರಿನಿಂದ ಪುರಾಣಗಳು ನಡೆಯುವವು. ಆದರೆ ಪುರಾಣ ಬೋಧನೆಯಿಂದ ಜನರಲ್ಲಿ ಧಾರ್ಮಿಕ ಉಚ್ಚತತ್ವಗಳು ಆಚಾರವಿಚಾರಗಳು ನಿಶ್ಚಯವಾಗಿ ಉತ್ಪನ್ನವಾಗುವವೆಂದು ಹೇಳಲಿಕ್ಕೆ ಬರಲಾರದು. ಅವುಗಳಲ್ಲಿ ಅದ್ಭುತ ವರ್ಣನೆಗಳಿದ್ದು ಇವು ಬಹುಸಾರೆ ಅನೈಕ್ಯತೆಯನ್ನು ಬೆಳೆಸತಕ್ಕವುಗಳಾಗಿವೆ.

ಧಾರ್ಮಿಕ ವಿಷಯದಲ್ಲಿ ಪುರಾಣಗಳು ಪ್ರಮಾಣ ಗ್ರಂಥಗಳೆನಿಸಿಕೊಳ್ಳಲಾರವು. ಹಿಂದುಧರ್ಮಕ್ಕೆ ಹೇಗೆ ವೇದಗಳೋ ಹಾಗೆ ವೀರಶೈವ ಧರ್ಮಕ್ಕೆ ವಚನಗಳು ಮಹತ್ವದ ಗ್ರಂಥಗಳಾಗಿವೆ. ಇವುಗಳನ್ನು ನಿಂದಿಸಿ ಸ್ವಾರ್ಥಸಾಧಕರು ರಚಿಸಿರುವ ಹಲಕೆಲವು ಪುರಾಣ ಗ್ರಂಥಗಳನ್ನೇ ಪ್ರಮಾಣಗಳನ್ನಾಗಿ ಸಮಾಜವು ನಂಬಿದ್ದರಿಂದ ಅದು ಮೋಸ ಹೋಗಿ ಸಂಕಟದಲ್ಲಿ ಬಿದ್ದಿದೆ. ಉದಾಹರಣಾರ್ಥವಾಗಿ, ದೇವರು ಒಬ್ಬನೇ ಎಂದು ಎಲ್ಲರೂ ತಿಳಿದಿರುವಾಗ, ಬ್ರಹ್ಮ ವಿಷ್ಣು ರುದ್ರರೆಂದೂ, ಇವರಲ್ಲಿ ಪರಸ್ಪರ ಹೆಚ್ಚುಕಡಿಮೆಗಳು ಇರುವವೆಂದೂ ಹೇಳಿ, ತ್ರಿಮೂರ್ತಿಗಳ ತಿಕ್ಕಾಟವನ್ನು ಪುರಾಣಗಳು ಬೋಧಿಸುತ್ತವೆ. ಈ ವಿಷಯದಲ್ಲಿ ಧಾರ್ಮಿಕ ವರ್ಗದವರು ಶಿವ ಎಂದರೆ ವಿಷ್ಣು ದ್ರೋಹ ಮಾಡಿದಂತಾಗುತ್ತದೆ, ಹರಿ ಎಂದರೆ ಹರದ್ರೋಹವಾಗುತ್ತದೆ, ಎಂದು ಬೋಧಿಸಿ ಸ್ಮಾರ್ತ ವೈಷ್ಣವ, ಶೈವ ವೈಷ್ಣವ ಎಂಬ ಕಲಹಾಗ್ನಿಯನ್ನು ಎಬ್ಬಿಸಿದ್ದಾರೆ. ನಮ್ಮ ಜನರು ಇಂಥ ಮೋಸದ ಬಲೆಗೆ ಬೀಳಬಾರದು. ಆದರೆ ವಚನಗಳಲ್ಲಿ ಹೀಗೆ ತ್ರಿಮೂರ್ತಿಗಳ ತಿಕ್ಕಾಟವಿಲ್ಲ. ದೇವರು ಒಬ್ಬನೇ ಎಂದು ಅವು ಬೋಧಿಸುತ್ತವೆ.

ಬಸವಪುರಾಣದಲ್ಲಿ ಮುಗ್ಧಸಂಗಯ್ಯನು ಒಬ್ಬ ವೇಶ್ಯಾಸ್ತ್ರೀಯಳ ಮನೆಗೆ ಹೋದಾಗ ಆಕೆಯ ಕುಚಗಳನ್ನೇ ಪೂಜಿಸಿದನೆಂದು ವರ್ಣಿತವಾಗಿದೆ. ಇದು ಎಂಥ ಅಲೌಕಿಕ ವರ್ಣನೆಯು! ಆಕೆಯಾದರೂ

ಕುಚಗಳನ್ನು ಹೇಗೆ ಪೂಜಿಸಿಕೊಂಡಾಳು !! ಹೀಗೆ ಪುರಾಣಗಳಲ್ಲಿ ವೇಶ್ಯೆಯರ ವರ್ಣನೆಗಳು ಅತ್ಯಧಿಕವಾಗಿ ಬರುತ್ತವೆ. ಅವುಗಳಲ್ಲಿ ಅಶ್ಲೀಲತೆಯು ತುಂಬಿರುತ್ತದೆ. ಪುರಾಣಿಕರು ಮನರಂಜನೆಗಾಗಿ ನಾನಾತರದ ಇಂಥ ಕಥೆಗಳನ್ನು ಹೇಳುವದುಂಟು. ಅವುಗಳು ನೈತಿಕ ಅಥವಾ ಧಾರ್ಮಿಕ ತತ್ವಗಳನ್ನು ಬೋಧಿಸುವಂಥವೇ ಇರುತ್ತವೆಂದು ಹೇಳಲಿಕ್ಕೆ ಬರುವದಿಲ್ಲ. ಬೀಭತ್ಸವೂ ಇರುವದುಂಟು. ಆದರೆ ವಚನಗಳಲ್ಲಿ ಇಂಥ ಅನೈತಿಕ ಆಚಾರ ವಿಚಾರಗಳಿಗೆ ಇಂಬು ಇಲ್ಲ. ಆದುದರಿಂದ ಜನರಲ್ಲಿ ಇಂಥ ಕಡಿಮೆ ವಿಚಾರದ ಪುರಾಣ ಪುಸ್ತಕಗಳನ್ನು ಪಠಣ ಮಾಡಿಸಿ ದೇವರ ಹಾಗು ಧರ್ಮದ ಬಗ್ಗೆ ತಪ್ಪು ಕಲ್ಪನೆಗಳನ್ನು ತುಂಬಿಸಬಾರದು. ವಚನಗಳ ಪಾರಾಯಣ ನಡಿಸಿ ಧಾರ್ಮಿಕ ಮೂಢಭಾವನೆಗಳನ್ನು ತೆಗೆಯಿಸಬೇಕು. ಹೀಗೆ ಮಾಡದಹೊರ್ತು ನಮ್ಮಲ್ಲಿ ಸಮಾಜ ಸುಧಾರಣೆಯಾಗುವದು ಶಕ್ಯವಿಲ್ಲ.

# ಮುಗಿಲ ಜೇನು.

ಮರದ ಕೊಂಬೆಗೆ ಒಂದು
ತೊಟ್ಟಿಲವ ಕಟ್ಟಿಹುದು
ತೊಟ್ಟಿಲಲಿ ಆಡುತಿದೆ
ಕೈಕಾಲುಗಳ ಬಿಚ್ಚಿ
ಈಗ ಕಣ್ತೆರೆದಿರುವ
ಹೊಚ್ಚ ಹೊಸ ಎಳೆಯ ಕೂಸು ॥

ಮರದ ಮೇಲ್ಬದಿಯಲ್ಲಿ
ಮರಜೇನು ಹುಟ್ಟಿಹುದು
ದೇವರಾಯನ ಕರುಣೆ
ಯಿಂದ ಹುಟ್ಟಿಗೆ ಸಣ್ಣ
ಹುಗಿಲು ಕೊರೆದಿಹುದಲ್ಲಿ
ಹನಿಯುತಿದೆ ಸವಿಜೇನು
ಒಂದೊಂದು ಹನಿಯಾಗಿ
ಧಾರೆಯಾಗಿಳಿಯುತಿದೆ
ಹನಿಗಡಿದು ಆಧಾರೆ
ಮತ್ತೆ ಮೇಲಕೆ ಏರಿ
ಹನಿಗೊಂಡು ಇಳಿಯುತಿಹುದು ॥

ತೂಗುತಿದೆ ತೊಟ್ಟಿಲವು
ಬಿಡದೆ ತೂಗಲು ಬೇಕು
ತೂಗು ನಿಂತರೆ ಹಸುಳೆ
ಕಿರಚಿ ಕೂಗುವದೆನಿತೊ
ಹುಟ್ಟಿರುವ ರೆಂಬೆಯುದು
ಅಂತರದಿ ತೇಲುತಿದೆ
ರೆಂಬೆಯಲಿ ಹುಟ್ಟಿಹುದು
ಹುಟ್ಟಿನಲಿ ಜೇನಿಹುದು
ಜೇನಿನಲಿ ಸವಿಯಿಹುದು

ಸವಿಯಲ್ಲಿ ಸುಧೆಯಿಹುದು
ಅದು ಒಸರಿ ಇಳಿವಂತೆ
ದೇವರಾಯನ ಕರುಣೆ
ಹುಗಿಲು ಕೊರೆದಿಹುದಲ್ಲಿ
ಹನಿಹನಿದು ಹನಿಯುತಿದೆ
ಇತ್ತ ಈ ತೊಟ್ಟಿಲಲಿ
ಅಮರಶಿಶು ಅಳುತಲಿದೆ
ತಿನ್ನಲಿಕೆ ಬಾಯಿಹುದು
ಅರಗಿಸಲು ಒಡಲಿಹುದು
ಸಹಿಸಲಾಗದೆ ಅಳುತ
ತೊಟ್ಟಿಲಲಿ ತೂಗುತಿದೆ
ಇಂತಿರಲು ಆ ಅಮೃತ
ತನ್ನಬಾಯಿಗೆ ಎಂದು
ಎಂತು ಬೀಳುವದದನು
ತಿಳಿಯುವದೆ ಆ ಕೂಸು ?
ಜೇಕು ನಿಂತಿರಲಾಗ ಲೇಸು ಲೇಸು ॥

—ಸಿಂಪಿ ಲಿಂಗಣ್ಣ.

---

ಟೀಪು:— ಈ ಕವಿತೆಯಲ್ಲಿ ಬಂದ 'ಹುಟ್ಟು' ಎಂಬುದು 'ಜೇನುಹುಟ್ಟು' ಎಂಬರ್ಥದಲ್ಲಿ ಉಪಯೋಗಿಸಿದೆ.

# ಬೌದ್ಧಧರ್ಮ.

(ಲೇಖಕ:— ವೀರಪ್ಪ ಯಗಟ ಬಿ. ಏ. ಎಲ್. ಎಲ್ ಬಿ. ಹಾವೇರಿ.)

ಬೌದ್ಧಧರ್ಮವು ಜಗತ್ತಿನ ಮುಖ್ಯ ಧರ್ಮಗಳಲ್ಲಿ ಒಂದಾಗಿರುವದು. ಇದರ ಉಗಮವು ಭರತಖಂಡದಲ್ಲಿಯೇ ಆಯಿತು. ಆದರೆ ಈ ದೇಶದಲ್ಲಿ ಈಗ ಇದು ನಾಮಶೇಷವಾಗಿರುವದು. ಈಗ ಇದು ತಿಬೇಟ್, ಚೈನಾ, ಜಪಾನ, ಸಿಲೋನ ದೇಶಗಳಲ್ಲಿ ಮುಖ್ಯ ಧರ್ಮವಾಗಿರುವದು. ಈ ಧರ್ಮ ಸ್ಥಾಪಕನು ಗೌತುಮಬುದ್ಧನು. ಇವನು ಕಪಿಲ ವಸ್ತುವೆಂಬ ಪಟ್ಟಣದಲ್ಲಿ ಮಾಯಾ ಮತ್ತು ಶುದ್ಧೋದನರೆಂಬ ತಾಯಿತಂದೆಗಳ ಹೊಟ್ಟೆಯಲ್ಲಿ ಕ್ರೈಸ್ತ ಪೂರ್ವ ೫೬೭ ರಲ್ಲಿ ಜನ್ಮವೆತ್ತಿದನು. ಶುದ್ಧೋದನನು ಶಾಕ್ಯವಂಶದ ರಾಜನಾಗಿದ್ದನು. ಬುದ್ಧನು ಹುಟ್ಟಿದ ಏಳು ದಿನಗಳಲ್ಲಿಯೇ ಅವನ ತಾಯಿಯು ಮರಣಹೊಂದಿದಳು. ಈತನ ಮಲತಾಯಿಯು ಈತನನ್ನು ಜೋಪಾನ ಮಾಡಿದಳು. ಇವನು ಎಶೋಧರೆ ಎಂಬವಳನ್ನು ಲಗ್ನವಾದನು. ರೋಹಿಲನೆಂಬ ಪುತ್ರಸಂತಾನವೂ ಆಯಿತು. ಬುದ್ಧನು ಚಿಕ್ಕವನಿರುವಾಗಲೇ ಜಗತ್ತಿನಲ್ಲೆಲ್ಲ ದುಃಖವು ಪಸರಿಸಿರುವದನ್ನು ನೋಡಿ ಬಹು ಕಳವಳಪಟ್ಟನು. ಮುಪ್ಪಿನಿಂದ ಸಡುಬಾಗಿ ಕೋಲು ಊರುತ್ತ ಬರುತ್ತಿದ್ದ ಮನುಷ್ಯನ ಮತ್ತು ಮೃತವಾದ ಮನುಷ್ಯನ ದೃಶ್ಯವು ಇವನಿಗೆ ಗೋಚರವಾದಾಗ ಇವನ ದುಃಖವು ಮಿತಿಮೀರಿತು. ಆಗ ಅವನು ಜಗತ್ತು ಶಾಶ್ವತವಲ್ಲವೆಂದು ಭಾವಿಸಿದನು. ದುಃಖವನ್ನು ಅಳಿದುಹಾಕಲು ರಾಜ್ಯ ಸಂಪತ್ತು ಬಂಧುಬಳಗವನ್ನು ತ್ಯಾಜ್ಯ ಮಾಡಿ ಶಾಶ್ವತ ಶಾಂತಿಮಾರ್ಗವನ್ನು ಶೋಧಿಸಬೇಕೆಂದು ನಿರ್ಧರಿಸಿದನು.

ಬುದ್ಧನು ಇಪ್ಪತ್ತೊಂಭತ್ತು ವಯಸ್ಸಿನವನಿರುವಾಗ ಅವನಿಗೆ ಸಂಪೂರ್ಣ ವೈರಾಗ್ಯವುಂಟಾಗಿ ಒಂದು ದಿನ ರಾತ್ರಿಯಲ್ಲಿ ಯಾರಿಗೂ ತಿಳಿಯದಂತೆ ನಿದ್ರೆಯಿಂದೆಚ್ಚತ್ತು ತನ್ನ ಐದು ಜನ ಸ್ನೇಹಿತರೊಂದಿಗೆ ಕಾವಿಯ ವೇಷವನ್ನು ಹಾಕಿಕೊಂಡು ರಾಜಧಾನಿಯನ್ನು ಬಿಟ್ಟು ಹೊರಹೊರಟನು ಇದು ಸಾಧಾರಣವಾದ ತ್ಯಾಗವಲ್ಲ. ಆತನ ಹೃದಯ ಮನಸ್ಸುಗಳು ಸಂಪೂರ್ಣವಾಗಿ ಪಕ್ವವಾಗಿದ್ದವು. ವಿಧವಿಧವಾದ ರಾಜವೈ

ಭವ, ಪಕ್ವಾನ್ನ ಮೃದುವಾದ ಕುತ್ತನಿಯ ಶಯನಗಳನ್ನು ತ್ಯಾಜ್ಯ ಮಾಡಿ ಮನೆ ಮನೆ ತಿರುಗಿ ತಿರಿದನ್ನವನ್ನೂ, ಉರುಟಾದ ಹರಕು ಕಾವಿಯನ್ನೂ, ನೆಲವನ್ನೇ ಹಾಸಿಗೆಯನ್ನೂ ಮಾಡಿಕೊಂಡದ್ದು ಅಗ್ರ್ಯಾಧವಾದ ವೈರಾಗ್ಯದ ದೃಷ್ಟಾಂತವಲ್ಲವೇ? ಕೆಲವು ಕಾಲ ಹೀಗೆ ಸಂಚರಿಸುತ್ತ ಆತನು ಉರುವೆಲವೆಂಬ ಆರಣ್ಯವನ್ನು ಆಶ್ರಯಿಸಿದನು. ಅವನು ಸತ್ಯಶೋಧನೆಗಾಗಿ ಅನೇಕ ದಿನಗಳ ವರೆಗೆ ಉಪವಾಸವಿದ್ದು ಕಠಿಣವಾದ ತಪಸ್ಸು ಮಾಡಿದನು. ಆದರೂ ಸತ್ಯದ ಬೆಳಕು ಅವನಿಗೆ ಗೋಚರವಾಗಲಿಲ್ಲ. ಆಗ ಆತನು ಈ ಪದ್ಧತಿಯು ಸರಿಯಾದುದಲ್ಲವೆಂದು ಮನಗಂಡು ಧ್ಯಾನಮಾರ್ಗವನ್ನು ಸ್ವೀಕರಿಸಿದನು. ಬುದ್ಧನು ಒಂದು ಗಿಡದ ಅಡಿಯಲ್ಲಿ ಕುಳಿತು ಧ್ಯಾನ ಮಾಡಲುದ್ಯುಕ್ತನಾದನು. ಅನೇಕ ದಿನಗಳು ಧ್ಯಾನದಲ್ಲಿ ಕಳೆಯಲಾಗಿ ಒಂದು ದಿನ ಬುದ್ಧನಿಗೆ ಜ್ಞಾನಪ್ರಕಾಶವುಂಟಾಯಿತು. ಅವನ ಉದ್ದೇಶವು ಸಾಧ್ಯವಾಯಿತು.

ಹೀಗೆ ಅವನಿಗೆ ಜ್ಞಾನೋದಯವುಂಟಾಗಲು ಆತನು ಅದನ್ನು ಜಗತ್ತಿನ ಮಾನವರಿಗೆ ಬೋಧಿಸುವುದು ತನ್ನ ಕರ್ತವ್ಯವೆಂದು ತಿಳಿದನು. ಅವನ ಸೌಮ್ಯವಾದ ಮುಖಮುದ್ರೆಯು, ಆತನ ಗಾಂಭೀರ್ಯವಾದ ಜೀವಿತವು ಆತನ ಸರಳವಾದ ಪ್ರೇಮವು ಮತ್ತು ಗೂಢವಾದ ಉಪದೇಶಗಳು ಸ್ತ್ರೀಪುರುಷರ ಹೃದಯಗಳನ್ನು ಆಕರ್ಷಿಸಿದವು. ಅವನ ಪ್ರಥಮ ಶಿಷ್ಯರೆಂದರೆ ಅವನ ಐದು ಜನ ಸ್ನೇಹಿತರು. ಕ್ರಮೇಣ ಅವನ ಶಿಷ್ಯವರ್ಗವು ಹೆಚ್ಚಾಗುತ್ತ ಹೋಯಿತು. ಅವರಲ್ಲಿ ಮುಖ್ಯರಾದವರೆಂದರೆ ಉಪಾಲಿ, ಕಾಶ್ಯಪ, ಆನಂದ ಮುಂತಾದವರು. ಬ್ರಾಹ್ಮಣರನೇಕರು ಬೌದ್ಧಧರ್ಮ ಸ್ವೀಕಾರ ಮಾಡಿದರು. ಒಂದು ಸ್ತ್ರೀ ಸನ್ಯಾಸಿವರ್ಗವೂ ಪ್ರಾರಂಭವಾಯಿತು. ಆತನ ಕಾಲದಲ್ಲಿ ಭಾರತದ ಧರ್ಮವು ಹೀನಾವಸ್ಥೆಯಲ್ಲಿದ್ದಿತು. ಒಂದುಕಡೆಯಲ್ಲಿ ಅನೇಕ ದೇವತೆಗಳ ಕಲ್ಪನೆಯೂ ಇನ್ನೊಂದು ಕಡೆ ಹಿಂಸಾಮಯವಾದ ಯಜ್ಞಗಳೂ ವರ್ಣಭೇದ ಜಾತಿಭೇದಗಳನ್ನು ಕಲ್ಪಿಸಿದ ಮನುಸ್ಮೃತಿಯಲ್ಲಿ ನಂಬಿಗೆಯೂ ಬುದ್ಧನ ಹೃದಯವನ್ನು ಭೇದಿಸಿದವು. ಅಂಧಶ್ರದ್ಧೆಯ ಮೂಲಕ ಮನುಷ್ಯನ ನೈತಿಕವೃತ್ತಿಗೆ ಕುಂದುಕೊರತೆಗಳುಂಟಾಗುವವು. ಧರ್ಮದ ಹೆಸರಿನಲ್ಲಿ ಅನೇಕ ಪಾಪಗಳು ಘಟಿಸುತ್ತಿರುವದನ್ನು ನೋಡಿ ಬುದ್ಧನು ಪುರೋಹಿತರ ಸಹಾಯವಿಲ್ಲದೆ ಅಥವಾ ದೇವರಲ್ಲಿ ನಂಬಿಗೆಯಿಡದೆ ಮೋಕ್ಷ

ವನ್ನು ಸಂಪಾದಿಸಬಹುದೆಂದು ಹೇಳಿದನು. ಆದರಿಂದ ಅವನು ಮಾನವ ವರ್ಗದ ಯೋಗ್ಯತೆಯನ್ನೂ ನೈತಿಕ ನಿಯಮದ ಬೆಲೆಯನ್ನೂ ಹೆಚ್ಚಿಸಿದನು. ಬುದ್ಧನು ಜಗತ್ತಿನ ಕಾರಣವನ್ನು ವಿವರಿಸುವಾಗ ಕರ್ಮ ನಿಯಮದಿಂದ ವಿವರಿಸುವನಲ್ಲದೆ ದೇವರ ಸಹಾಯವು ಅವನಿಗೆ ಅವಶ್ಯವಾಗಿಲ್ಲ.

ಬುದ್ಧನು ಜನರ ಮೂಢನಂಬಿಕೆಯನ್ನು ನೋಡಿ ಅಸಮಾಧಾನಪಟ್ಟನು. ಪುರೋಹಿತರು ಜನರಲ್ಲಿ ಧರ್ಮದ ವಿಷಯದಲ್ಲಿ ಅಂಧಶ್ರದ್ಧೆಯನ್ನು ಹುಟ್ಟಿಸಿ ದ್ರವ್ಯಸಂಪಾದಿಸುವದನ್ನು ಕಂಡು ವ್ಯಥೆಪಟ್ಟನು. ಜನರು ಆಗ ಅನೇಕ ದೇವತೆಗಳನ್ನು ಆರಾಧನೆಮಾಡುತ್ತಿರುವದನ್ನೂ, ದೇವತೆಗಳು ತಮಗೆ ತೊಂದರೆ ಕೊಡಬಾರದೆಂದು ಅವರಿಗೆ ಅನೇಕ ಹವಿಸ್ಸು ಪೂಜೆ ಪುನಸ್ಕಾರಗಳನ್ನು ಅರ್ಪಿಸುತ್ತಿರುವದನ್ನೂ ಕಂಡು ಬುದ್ಧನು ಇಂತಹ ದೇವರನ್ನು ಮತ್ತು ವೇದಗಳನ್ನು ನಿರಾಕರಿಸಿದನು. ವೇದವು ದೇವೋಕ್ತವೆಂದು ನಂಬಲ್ಪಟ್ಟ ಗ್ರಂಥದ ಆಧಾರದ ಮೇಲಿಂದ ಅವನು ತನ್ನ ಧರ್ಮವನ್ನು ಸ್ಥಾಪಿಸಲು ಇಚ್ಛಿಸಲಿಲ್ಲ. ದೇವರ ಕೋಪವನ್ನು ಹೋಗಲಾಡಿಸಲು ಪ್ರಾರ್ಥನೆ ಮಾಡುವದರಿಂದ ಮೋಕ್ಷವು ಲಭಿಸುವದೆಂದು ಅವನು ನಂಬಲಿಲ್ಲ. ಸ್ವಕರ್ತವ್ಯದ ಯೋಗ್ಯತೆಯ ಮೇಲೂ ಉದಾತ್ತವಾದ ನೈತಿಕ ಧ್ಯೇಯದ ಮೇಲೂ, ವಿಚಾರಯುಕ್ತವಾದ ನಂಬಿಗೆಯ ತಳಹದಿಯ ಮೇಲೂ, ಅವನು ತನ್ನ ಧರ್ಮಮಂದಿರವನ್ನು ರಚಿಸಿದನು. ಮೋಕ್ಷವು ಪ್ರತಿಯೊಬ್ಬನ ಸದಾಚರಣೆಯ ಮೇಲೂ ಸತ್ಯದ ಮೇಲೂ ಅವಲಂಬಿಸಿರುವದೆಂದು ಆತನ ನಂಬಿಗೆ. ಸತ್ಯವನ್ನು ಅರಿಯದಿರುವದೇ ದುಃಖದ ಕಾರಣವೆಂದು ಆತನು ಹೇಳಿದನು. ಬುದ್ಧನ ಕಾಲದಲ್ಲಿದ್ದ ಧರ್ಮದ ಮತ್ತು ಸಮಾಜದ ಸ್ಥಿತಿಗತಿಗಳೇ ವೀರಶೈವ ಮತೋದ್ಧಾರಕನಾದ ಬಸವೇಶ್ವರನ ಕಾಲದಲ್ಲಿದ್ದವು. ಬುದ್ಧನಂತೆಯೇ ಬಸವಣ್ಣನವರು ಅನೇಕ ದೇವತೆಗಳಲ್ಲಿಯ ನಂಬಿಕೆಯನ್ನು ಪ್ರಬಲವಾಗಿ ನಿರಾಕರಿಸಿರುವನು. ವೇದದ ಮೂಗ ಕೊಯ್ಯುವೆ ಎಂದು ಮುಂತಾಗಿ ನಿಷ್ಠುರವಾಗಿ ಹೇಳಿರುವರು. ಬಸವಣ್ಣನವರು ತಮ್ಮ ಧರ್ಮಬೋಧೆಯಲ್ಲಿ ಮತ್ತು ಆಚರಣೆಯಲ್ಲಿ ದಯಾ, ಸರ್ವಸಮಾನತ್ವ, ನೀತಿಗಳಿಗೆ ಪ್ರಾಮುಖ್ಯತೆಯನ್ನು ಕೊಟ್ಟಿರುವರು. ಭರತಭೂಮಿಯಲ್ಲಿ ಧರ್ಮ, ನೀತಿಗಳಲ್ಲಿ ಯಥಾರ್ಥವಾದ ಬೋಧೆಯನ್ನು ಮಾಡಿ ಅಸದೃಶವಾದ

ಕ್ರಾಂತಿಯನ್ನುಂಟು ಮಾಡಿದವರೆಂದರೆ ಬುದ್ಧ ಬಸವರೇರ್ವರೇ ಹೊರತು ಮತ್ತಾರೂ ಇರುವದಿಲ್ಲ.

ಬುದ್ಧನು ವಿಚಾರವಾದಿಯು. ದೈವೀ ಕಲ್ಪನೆಯ ಸಹಾಯವಿಲ್ಲದೆ ಆಧುನಿಕ ವಿಜ್ಞಾನವಾದಿಗಳಂತೆ ಸೃಷ್ಟಿ ಕ್ರಮವನ್ನು ಅರಿಯಲು ಈತನು ಇಚ್ಛಿಸಿದನು. ತರ್ಕದ ಆಧಾರದ ಮೇಲೆ ಧರ್ಮವನ್ನು ಸ್ಥಾಪಿಸಿದನು. ಬುದ್ಧನು ನಾಲ್ಕು ಸತ್ಯಮಾರ್ಗಗಳನ್ನು ಪ್ರತಿಪಾದಿಸಿದನು. ಜೀವಿತವು ದುಃಖಮಯವಾದದ್ದು. ಜನನ, ಜರಾ, ರೋಗ ಮತ್ತು ಮರಣಗಳು ದುಃಖಮಯವಾದವುಗಳು. ತೃಪ್ತಿಹೊಂದದ ಆಶೆಯು ಸಹ ದುಃಖಾಸ್ಪದವಾದದ್ದು. ಧಮ್ಮಪದದ ಗ್ರಂಥದಲ್ಲಿ ಬುದ್ಧನು ಹೀಗೆ ಹೇಳಿದ್ದಾನೆ. "ಸಮುದ್ರ ಮಧ್ಯದಲ್ಲಿ ಅಡಗಿ ಕುಳಿತರೂ, ಗಿರಿಕಂದರಗಳಲ್ಲಿ ಮರೆಮಾಜಿಕೊಂಡರೂ, ಆಕಾಶದಲ್ಲಿ ಸಂಚರಿಸುತ್ತಿದ್ದರೂ ಮರಣವು ತಪ್ಪದು. ಎಲ್ಲ ವಸ್ತುಗಳು ಹೆಸರಿಲ್ಲದಂತೆ ನಾಶವಾಗುವವು." ಸಂಸಾರ ದುಃಖದಿಂದ ಪಾರಾಗಿ ನಿರ್ವಾಣವನ್ನು ಹೊಂದುವದೇ ಇದಕ್ಕೆ ಮುಖ್ಯೋಪಾಯವು. ಬೌದ್ಧಧರ್ಮವು ನೈತಿಕಮಾರ್ಗವನ್ನು ತೋರಿಸುವದರಿಂದಲೂ, ಜೀವಿತದ ಪರಿಪೂರ್ಣತೆಯನ್ನು ಬೋಧಿಸುತ್ತಿರುವದರಿಂದಲೂ ಇದಕ್ಕೆ ನಿರಾಶಾವಾದವೆಂದು ಹೆಸರಿಡಲು ಬರುವಂತಿಲ್ಲ. ಪಾಪಮಯವಾದ ಜೀವಿತವನ್ನು ತ್ಯಾಗಮಾಡಿ ಉತ್ತಮ ಜೀವಿತವೆಂದರೆ ಅರ್ಹತಸ್ಥಿತಿಯನ್ನು ಹೊಂದಬೇಕೆಂದು ಬುದ್ಧನು ಬೋಧಿಸುತ್ತಾನೆ. ಎಲ್ಲ ವಸ್ತುಗಳು ಕ್ಷಣಿಕವಾದ್ದರಿಂದ ಮತ್ತು ಕ್ಷಣಿಕ ವಸ್ತುಗಳನ್ನು ನಾವು ಅಪೇಕ್ಷೆಮಾಡುವದರಿಂದ ದುಃಖವು ಘಟಿಸುವದು. ಆಶೆಗಳ ಉತ್ಪತ್ತಿಗೆ ಅಜ್ಞಾನವೇ ಕಾರಣವು. ಜ್ಞಾನೋದಯವಾದ ಕೂಡಲೇ ದುಃಖವು ಇಲ್ಲದಂತಾಗುವದು. ಜೀವಿತವು ದುಃಖಮಯವಾದುದೆಂಬ ತತ್ವವನ್ನು ಬುದ್ಧನು ಉಪನಿಷತ್ತಿನಿಂದಲೇ ಸ್ವೀಕರಿಸಿದನು. ಇವನು ಹೆರಾಕ್ಲೈಟಸನಂತೆ ಪ್ರಪಂಚವು ಅಸ್ಥಿರವಾದುದೆಂದು ಪ್ರತಿಪಾದಿಸಿದನು. ಜಗತ್ತಿನ ಸ್ಥಿತಿಗೆ ಸಾರ್ವತ್ರಿಕವಾದ ಕಾರಣನಿಯಮವೇ (*Law of universal causation*) ಆಧಾರವೆಂದು ಬುದ್ಧನು ಹೇಳುತ್ತಾನೆ. ಭಾರತೀಯರ ವಿಚಾರಕ್ಷೇತ್ರದಲ್ಲಿ ಬುದ್ಧನು ಪ್ರತಿಪಾದಿಸಿದ ಇದೊಂದು ಮಹತ್ವವಾದ ತತ್ವವಾಗಿದೆ. ಅಸ್ತಿತ್ವದಲ್ಲಿರುವ ಪ್ರತಿಯೊಂದು ವಸ್ತುವಿಗೂ ಕಾರಣವುಂಟು ಮತ್ತು ಲಯವುಂಟು.

ಉಪನಿಷತ್ತುಗಳು ಅಸ್ಥಿರವಾದ ಸೃಷ್ಟಿಯ ತಳಹದಿಯಲ್ಲಿ ಸ್ಥಿರವಾದ ವಸ್ತುವಿದೆಯೆಂದು ಹೇಳುತ್ತವೆ. ಆದರೆ ಬೌದ್ಧ ಧರ್ಮವು ಇಂತಹ ಸ್ಥಿರವಾದ ವಸ್ತುವು ಜ್ಞಾನಕ್ಕೆ ಅಗಮ್ಯವಾಗಿರುವದರಿಂದ ಈ ವಿಷಯದಲ್ಲಿ ಮೌನವೃತ್ತಿಯುಳ್ಳದ್ದಾಗಿದೆ. ಇದರಿಂದ ಬೌದ್ಧಧರ್ಮವು ನಾಸ್ತಿಕಮತವೆಂದು ಹೇಳಲಾಗುವದಿಲ್ಲ ಉದಾನವೇದ ಗ್ರಂಥದಲ್ಲಿ ಬುದ್ಧನು ಹೀಗೆ ಹೇಳಿದ್ದಾನೆ. "ಓ ಭಿಕ್ಷುಗಳೇ ಸ್ವಯಂಭುವಾದ ಮತ್ತು ಅನಾದಿಯಾದ ವಸ್ತುವಿಲ್ಲದಿದ್ದರೆ ಈ ಅಸ್ಥಿರವಾದ ಜಗತ್ತಿನಿಂದ ಮೋಕ್ಷವೇ ಇಲ್ಲದಂತಾಗುವದು." ಜಗತ್ತು ಅಸ್ಥಿರವಾದದ್ದು. ಆದರೂ ಅದಕ್ಕೆ ಅಸ್ತಿತ್ವವುಂಟು. ದೇಹದಲ್ಲಿ ಕ್ಷಣಿಕವಾದ ಇಂದ್ರಿಯಗಳ ಹೊರತು ಶಾಶ್ವತವಾದ ಯಾವ ವಸ್ತುವೂ ಇಲ್ಲ. ಬುದ್ಧನು ಆತ್ಮದ ವಿಷಯದಲ್ಲಿ ಮೌನವಾಗಿದ್ದಾನೆ. ಆತ್ಮವಿಲ್ಲವೆಂದು ಹೇಳಲು ಸಹ ಈತನು ಸಿದ್ಧನಿಲ್ಲ. ಶಾಶ್ವತವಾದ ಆತ್ಮವಿಲ್ಲದ ಹೊರತು ಇಂದ್ರಿಯಜ್ಞಾನ ಮತ್ತು ಸ್ಮರಣ ಕ್ರಿಯೆಗಳು ಅಸಂಭವವಾಗುವವೆಂದು ಶಂಕರಾಚಾರ್ಯನು ಕ್ಷಣಿಕವಾದವನ್ನು ನಿರಾಕರಿಸಿದ್ದಾನೆ. ಕ್ಷಣಿಕವಾದವು ನಿಜವಾಗಿದ್ದರೆ ನಿನ್ನೆ ಸಂಭವಿಸಿದ ವಿಷಯದ ನೆನಪು ನಮಗೆ ಆಗಲಾರದು. ಬೌದ್ಧತತ್ವದ ಪ್ರಕಾರ ದೇಹ, ಮನಸ್ಸುಗಳು ಒಂದನ್ನೊಂದು ಅವಲಂಬಿಸಿವೆ. ಸ್ಥೂಲವಿರುವದೆಲ್ಲ ರೂಪವೆಂತಲೂ, ಸೂಕ್ಷ್ಮವಾದುದೆಲ್ಲ ನಾಮವೆಂತಲೂ ಕರೆಯಲ್ಪಟ್ಟಿವೆ. ಇವೆರಡೂ ಏಕಕಾಲಕ್ಕೆ ಉದ್ಭವಿಸುವವು. ಹೇಗೆ ತತ್ತಿ ಇಲ್ಲದೆ ಕೋಳಿಯ ಮರಿಯು ಹುಟ್ಟುವದಿಲ್ಲವೋ ಹಾಗೆಯೇ ನಾಮವಿಲ್ಲದೆ ರೂಪವು ಉಂಟಾಗುವದಿಲ್ಲ. ಮನಸ್ಸು ಭೌತಿಕ ಸ್ವರೂಪವುಳ್ಳದು. ನಾಮರೂಪಗಳು ಅಥವಾ ಸ್ಕಂಧಗಳು ಯಾವವೆಂದರೆ—(೧) ರೂಪ ಅಥವಾ ಭೌತಿಕ ಗುಣಗಳು. (೨) ವೇದನಾ (*Feeling*) (೩) ಸಂಜ್ಞಾ (*Perception*). (೪) ಸಂಸ್ಕಾರಗಳು ಅಥವಾ ಮಾನಸಿಕ ಗುಣಗಳು ಮತ್ತು ಇಚ್ಛಾಶಕ್ತಿ. (೫) ವಿಜ್ಞಾನ ಅಥವಾ ಬುದ್ಧಿ. ಇವೆಲ್ಲವು ಕೂಡಿ ಜೀವಾತ್ಮವನ್ನು ರಚಿಸಿವೆ. ಅರಿವು ಮೊದಲು ವಸ್ತುವಿನ ಸಂಪರ್ಕವಾದಾಗ ಸಂಜ್ಞಾ, ವೇದನಾ ಮತ್ತು ಇಚ್ಛಾಶಕ್ತಿಗಳು ಉತ್ಪನ್ನವಾಗುವವೆಂದು ಬುದ್ಧಘೋಷನು ಹೇಳುತ್ತಾನೆ. ಶಬ್ದ, ಸ್ಪರ್ಶ ರೂಪ, ರಸ, ಗಂಧಗಳೆಂಬ ಇಂದ್ರಿಯ ವಿಷಯಗಳಿವೆ. ಕಣ್ಣು ಇಲ್ಲದ ಹೊರತು ಗೋಚರವಾದ ಜಗತ್ತು ಇರಲಾರದು. ಜಗತ್ತು ಇರದ ಹೊರತು ನೋಡುವ ಕಣ್ಣು ಇರಲಾರದು.

ಬೌದ್ಧತತ್ವದಲ್ಲಿ ಪಾರಮಾರ್ಥಿಕವಾದ ಆತ್ಮವಿಲ್ಲ. ಆದರೆ ಜನ್ಮದಿಂದ ಜನ್ಮಕ್ಕೆ ಹೋಗತಕ್ಕದ್ದು ವಿಜ್ಞಾನವೇ. ವಿಜ್ಞಾನವು ಶಾಶ್ವತವಾದ ವಸ್ತುವಿರದಿದ್ದರೂ ಇದು ಸ್ವತಂತ್ರವಾದ ಮಾನಸಿಕ ಸ್ಥಿತಿಯಾಗಿದೆ. ಸಂಬಂಧಾತ್ಮಕ ನಿಯಮದ ಪ್ರಕಾರ ವಸ್ತುಗಳು ಗೋಚರವಾದಾಗ ವಿಶಿಷ್ಟ ಕಲ್ಪನೆಗಳುಂಟಾಗುವವು. ಅರಿವು ಮೂರು ಸ್ಥಿತಿಗಳಿಂದ ಕೂಡಿದೆ. ಉತ್ಪತಿ, ಸ್ಥಿತಿ ಅಥವಾ ವೃದ್ಧಿ, ಲಯ (ಭಂಗ). ಅರಿವು ಕ್ಷಣಿಕವಾದದ್ದೆಂದು ಬೌದ್ಧರ ಮತವು. ಎಚ್ಚರಿಕೆ ಇಲ್ಲದ (ವಿಧಿಮುಕ್ತ) ಸ್ಥಿತಿಯುಂಟೆಂದು ಇವರು ಗ್ರಹಿಸಿದರು. ಅರಿವು ಮತ್ತು ಅರಿವಿನ ಅಭಾವಗಳನ್ನು ಮನೋದ್ವಾರವು ವಿಭಾಗಿಸಿದೆ. ಪ್ರತಿಕ್ಷಣವೂ ನಾವು ಬದಲಾವಣೆ ಹೊಂದುತ್ತೇವೆ. ಆದಾಗ್ಯೂ ಹಳೆಯದಾದದ್ದು ನಮ್ಮ ಜೀವಿತದಲ್ಲಿ ಸೇರಿಕೊಂಡೇ ಇದೆ. ಅಜ್ಞಾನದಿಂದ ಸಂಸ್ಕಾರಗಳೂ, ಸಂಸ್ಕಾರಗಳಿಂದ ಅರಿವೂ, ಅರಿವಿನಿಂದ ನಾಮರೂಪಗಳೂ, ನಾಮರೂಪಗಳಿಂದ ಕಣ್ಣು, ಕಿವಿ, ಮೂಗು, ನಾಲಿಗೆ, ದೇಹ ಅಥವಾ ಸ್ಪರ್ಶ ಮತ್ತು ಮನಸ್ಸು, ಈ ಇಂದ್ರಿಯಗಳಿಂದ ಸಂಗವೂ ಸಂಗದಿಂದ ಇಂದ್ರಿಯಜ್ಞಾನವೂ, ಇಂದ್ರಿಯಜ್ಞಾನದಿಂದ ಕಾಮವೂ, ಕಾಮದಿಂದ ಸ್ನೇಹವೂ, ಸ್ನೇಹದಿಂದ ಸ್ಥಿತಿಯೂ, ಸ್ಥಿತಿಯಿಂದ ಜನನವೂ, ಜನನದಿಂದ ವಾರ್ಧಿಕ್ಯವೂ, ಮರಣ ದುಃಖಗಳೂ ಉಂಟಾಗುವವು. ಈ ವಿಧವಾದ ಕ್ರಮಕ್ಕೆ ಪ್ರತೀತ್ಯ ಸಮುತ್ಪಾದವೆಂದು ಹೆಸರು. ಅಜ್ಞಾನದ ನಾಶದಿಂದ ಸಂಸ್ಕಾರ, ನಾಮರೂಪ, ಜನ್ಮ ಮರಣ ದುಃಖಗಳ ನಾಶವಾಗುವದು. ಇದೇ ಮೋಕ್ಷಮಾರ್ಗವು. ಮನುಷ್ಯನು ಜನ್ಮಕ್ಕೆ ಬರುವದೇ ದೊಡ್ಡ ಪಾಪವು. ಅಸತ್ಯವಾದ ಜೀವಿತದ ಮೇಲೆ ಆಶೆಯನ್ನುಂಟುಮಾಡುವದು ಅವಿದ್ಯೆ ಅಥವಾ ಅಜ್ಞಾನವು. ಸಂಸ್ಕಾರವೆಂದರೆ ಕರ್ಮವು. ಕರ್ಮಾನುಸಾರವಾಗಿ ಮುಂದೆ ಸದ್ಗತಿ ಅಥವಾ ದುರ್ಗತಿಯುಂಟಾಗುವದು. ನಾವು ಸುಖವನ್ನು ಬಯಸುವದರಿಂದ ದುಃಖಕ್ಕೆ ಈಡಾಗುತ್ತೇವೆ. ಆಶೆಯನ್ನು ತೊರೆದಲ್ಲಿ ನಿರ್ವಾಣವುಂಟಾಗುವದು. ಅಜ್ಞಾನವು ಹೇಗೆ ಉದ್ಭವಿಸುವದರ ಕಾರಣವನ್ನು ಬೌದ್ಧರು ಹೇಳಿರುವದಿಲ್ಲ. ಅವಿದ್ಯೆಯು ಮೂಲವಸ್ತುವಿನ ಶಕ್ತಿಯಾಗಿದ್ದು ಮೂಲವಸ್ತುವಿನಿಂದ ಅನೇಕ ವಸ್ತುಗಳನ್ನು ಹುಟ್ಟಿಸುವದೆಂದು ಇತ್ತೀಚಿನ ಬೌದ್ಧರಾದ ಅಶ್ವಘೋಷ, ವಸುಬಂಧು ಮುಂತಾದವರು ಹೇಳುತ್ತಾರೆ.

ನಿರ್ವಾಣವನ್ನುಂಟುಮಾಡತಕ್ಕ ನಡತೆಯಲ್ಲವೂ ಒಳ್ಳೆಯದು. ಪುನರ್ಜನ್ಮಕ್ಕೆ ಕಾರಣವಾದ ಮತ್ತು ನಿರ್ವಾಣವನ್ನುಂಟುಮಾಡದ ನಡತೆಯೆಲ್ಲವೂ ಕೆಟ್ಟದು. ಮನುಷ್ಯನಿಗೆ ಒಳ್ಳೇದು ಇಲ್ಲವೆ ಕೆಟ್ಟದ್ದು ಮಾಡಲು ಇಚ್ಛಾಸ್ವಾತಂತ್ರ್ಯವಿದೆ. ಬೌದ್ಧನೀತಿಯು ಅಥವಾ ನಿರ್ವಾಣಮಾರ್ಗವು ಎಂಟು ವಿಧವಾಗಿದೆ. ನಿಜವಾದ ನಂಬಿಗೆ, ನಿಜವಾದ ಮೋಕ್ಷಾಪೇಕ್ಷೆ, ನಿಜವಾದ ಭಾಷಣ, ನಿಜವಾದ ವರ್ತನ, ನಿಜವಾದ ಜೀವನ, ನಿಜವಾದ ಪ್ರಯತ್ನ, ನಿಜವಾದ ಉದ್ದೇಶ ಮತ್ತು ನಿಜವಾದ ಆನಂದ. ತಪ್ಪು ನಂಬಿಗೆಯಿಂದ ತಪ್ಪು ಕೃತಿಯುಂಟಾಗುವದು. ಎಲ್ಲ ಪ್ರಾಣಿಗಳನ್ನು ತನ್ನಂತೆ ಭಾವಿಸುವದೇ ಮೋಕ್ಷಾಪೇಕ್ಷೆಯಲ್ಲಿ ಸಮಾವೇಶವಾಗಿದೆ. ಚಾಡಿ, ನಿಂದೆ, ಕಠಿಣೋಕ್ತಿಗಳನ್ನಾಡದಿರುವದೇ ಸತ್ಯ ಭಾಷಣವು. ನಿಸ್ವಾರ್ಥವಾದ ಕಾರ್ಯವೇ ಸತ್ಯ ವರ್ತನವು. ಬುದ್ಧನು ಯಜ್ಞ, ಪ್ರಾರ್ಥನೆ, ಪೂಜೆಗಳಿಗೆ ಏನೂ ಮಹತ್ವ ಕೊಟ್ಟಿರುವದಿಲ್ಲ. "ಅಗ್ನಿಯನ್ನು ನೂರು ವರ್ಷ ಪ್ರಾರ್ಥಿಸುವದಕ್ಕಿಂತ ಧರ್ಮಿಷ್ಠನಾದ ಮನುಷ್ಯನನ್ನು ಗೌರವಿಸುವದು ಕ್ಷೇಮವು" ಎಂದು ಬುದ್ಧನು ಹೇಳಿದನು. ಜೀವಿಗಳಲ್ಲಿ ಕಾರುಣ್ಯವೂ, ಅಹಿಂಸೆಯೂ ಉತ್ತಮವಾದ ಧರ್ಮಮಾರ್ಗಗಳಾಗಿವೆ. ಸತ್ಯ ವರ್ತನೆಯಿಂದ ಸತ್ಯ ಜೀವಿತವುಂಟಾಗುವದು. ಸತ್ಯ ಜೀವಿತವೆಂದರೆ ಅನ್ಯಾಯ, ಮೋಸಗಳಿಲ್ಲದಿರುವಂತಹದು. ಅಹಂಕಾರ ಮೊದಲಾದ ದುಷ್ಪ್ರವೃತ್ತಿಗಳನ್ನು ನಿಗ್ರಹಿಸುವದೇ ನಿಜವಾದ ಪ್ರಯತ್ನವು. ಪ್ರಜ್ಞಾ, ಧ್ಯಾನ ಮತ್ತು ಸಮಾಧಿಗಳು ಮಾನಸಿಕ ವೃತ್ತಿಗಳಾಗಿವೆ. ನಿರ್ವಾಣವೆಂದರೆ ಉತ್ಕೃಷ್ಟವಾದ ಸುಖ ಅಥವಾ ಆನಂದವು. ಸಂಪೂರ್ಣ ಜ್ಞಾನವನ್ನೂ, ಶಾಂತಿಯನ್ನೂ, ಆನಂದವನ್ನೂ ಮತ್ತು ಎಲ್ಲ ಜೀವಿಗಳೊಡನೆ ಐಕ್ಯ ಭಾವವನ್ನೂ ಹೊಂದುವದು ನಿರ್ವಾಣವು. ಒಳ್ಳೆಯದರ ಜ್ಞಾನವೇ ಸದ್ಗುಣವು. ಸದಾಚಾರವಿಲ್ಲದ ಹೊರತು ಧ್ಯಾನ, ಸಮಾಧಿಗಳು ಪೂರ್ಣ ಸ್ಥಿತಿಯನ್ನುಂಟು ಮಾಡಲಾರವು. ಬುದ್ಧನ ತಿಳುವಳಿಕೆಯ ಪ್ರಕಾರ ಪ್ರಪಂಚದ ತೊಡಕನ್ನು ಕತ್ತರಿಸುವದು ಸನ್ಯಾಸವಾಗಿರದೆ ಅಹಂಕಾರ, ದ್ರವ್ಯ, ಕಾಮಗಳನ್ನು ತ್ಯಾಜ್ಯ ಮಾಡುವದಾಗಿತ್ತು.

ಜನ್ಮದಿಂದ ಬ್ರಾಹ್ಮಣನಾಗಲಿ ಅಥವಾ ಅಂತ್ಯಜನಾಗಲಿ ಆಗಿರದೆ ಆಚರಣೆಯಿಂದ ಆಗುತ್ತಾನೆ. ಬುದ್ಧನ ಸಂಘದಲ್ಲಿ ಎಲ್ಲ ಜಾತಿಯವ

ರಿಗೂ ಆಶ್ರಯುವು ದೊರೆಯಿತು. ಹೀಗೆ ಬುದ್ಧನು ಜಾತಿ ಪದ್ಧತಿಯನ್ನು ತೆಗೆದು ಹಾಕಲು ಯತ್ನಿಸಿದನು. ಪಶು ಯಜ್ಞವನ್ನು ಪ್ರತಿಪಾದಿಸುವ ವೇದ ಭಾಗವನ್ನು ಬುದ್ಧನು ನಿರಾಕರಿಸಿದನು. ನಮ್ಮ ಪೂರ್ವದ ಕರ್ಮವು ಸದ್ಯದ ಜೀವಿತದಲ್ಲಿ ಪರಿಣಾಮವನ್ನುಂಟು ಮಾಡುತ್ತಿರುವದು. ಹಿಂದಿನ ದುಷ್ಕರ್ಮದ ಪ್ರತಿಫಲವಾಗಿಯೇ ಈಗ ದುಃಖವನ್ನನುಭವಿಸುತ್ತೇವೆಂದು ತಿಳಿಯುವದು ನ್ಯಾಯವಾದದ್ದಲ್ಲದೆ ನಮ್ಮ ಹಳೇ ಸಾಲವನ್ನು ನಾವು ಈಗ ತೀರಿಸುತ್ತಿರುವೆವೆಂದು ಸಮಾಧಾನ ಹೊಂದಬೇಕಾಗಿದೆ. ಮನೋ ಧೈರ್ಯವಿಲ್ಲದ ಮನುಷ್ಯನು ದುಷ್ಕಾರ್ಯ ಮಾಡಿದರೆ ನರಕಕ್ಕೆ ಹೋಗ ಬಹುದು. ಆದರೆ ಸಾಧುವು ಅದೇ ದುಷ್ಕಾರ್ಯದಿಂದ ಸ್ವಲ್ಪ ದುಃಖ ವನ್ನನುಭವಿಸಿ ಪಾರಾಗಬಹುದು. ಯಾವನೊಬ್ಬ ವ್ಯಕ್ತಿಯ ಕರ್ಮ ಚರಿತ್ರೆಯು ಅವನು ಹುಟ್ಟಿದಾಗಿನಿಂದ ಪ್ರಾರಂಭಿಸದೆ ಯುಗಯುಗಾಂ ತರದಿಂದ ನಡೆದಿರುತ್ತದೆ. ಕರ್ಮ ನಿಯಮವನ್ನು ವಶಮಾಡಿಕೊಳ್ಳಲು ವ್ಯಕ್ತಿಗೆ ಸ್ವಾತಂತ್ರ್ಯವಿದೆಯೆಂದು ಬುದ್ಧನು ಹೇಳುತ್ತಾನೆ. ಸದ್ಯದ ಜೀವಿತವು ಹಿಂದಿನ ಕರ್ಮದ ಮೇಲೆ ಅವಲಂಬಿಸಿದ್ದರೂ ಭವಿಷ್ಯ ಜೀವಿತವು ನಮ್ಮ ಇಚ್ಛೆಯನ್ನವಲಂಬಿಸಿದೆ. ಜೀವಿತದ ಚಕ್ರದಿಂದ ಪಾರಾಗಲು ನಾವು ಪುಣ್ಯ ಪಾಪಗಳನ್ನು ಮೀರಿದ ಸ್ಥಿತಿಯನ್ನು ಹೊಂದ ಬೇಕು. ನೈತಿಕ ವರ್ತನವು ಧ್ಯೇಯವನ್ನು ಸಂಪಾದಿಸಲು ಸಾಧನ ವಾಗಿದೆ. ಧ್ಯೇಯವು ಕೈವಶವಾದಾಗ ನೈತಿಕ ಕ್ರಿಯೆಯು ನಿಂತು ಹೋಗುವದು. ಮರಣವೆಂದರೆ ಜನ್ಮದ ಬೀಜವು. ನಮ್ಮ ಜೀವಿತ ಚಕ್ರದಲ್ಲಿ ಹೊಸ ಹೊಸ ಸುಸಂಧಿಗಳು ಲಭಿಸುವವು. ಆ ಸುಸಂಧಿ ಗಳ ಪ್ರಯೋಜನವನ್ನು ನಾವು ಪ್ರಯತ್ನ ಪೂರ್ವಕವಾಗಿ ತೆಗೆದುಕೊಂ ಡಲ್ಲಿ ನಮ್ಮ ಅದೃಷ್ಟವನ್ನು ನಾವು ತಿದ್ದಿಕೊಳ್ಳಬಹುದು. ಎಲ್ಲ ಜೀವ ಜಂತುಗಳು ಈ ಚಕ್ರವನ್ನು ಒಮ್ಮೆ ಮೇಲಾಗಿ ಮತ್ತೊಮ್ಮೆ ಕೆಳಗಾಗಿ ಸುತ್ತುತ್ತಿರುವವು.

ಬುದ್ಧನು ಹಿಂದೂ ತತ್ವದಂತೆಯೇ ದುಷ್ಟರಿಗೆ ನರಕವನ್ನೂ, ಸಾಧುಗಳಿಗೆ ಸ್ವರ್ಗವನ್ನೂ, ಪರಿಪಕ್ವವನ್ನು ಹೊಂದುವವರಿಗೆ ಪುನರ್ಜನ್ಮ ವನ್ನೂ ಕಲ್ಪಿಸಿದ್ದಾನೆ. ಪುನರ್ಜನ್ಮವೆಂದರೆ ಸತ್ತವನ ಆತ್ಮವು ಹೊಸ ದೇಹದಲ್ಲಿ ಬರುವದೆಂದು ಬೌದ್ಧರ ತತ್ವವಲ್ಲ. ಹೊಸದಾಗಿ ಹುಟ್ಟು ವದು ಹಿಂದಿನ ಜನ್ಮದ ಸೂಕ್ಷ್ಮ ಶರೀರವು ಅಥವಾ ವಿಚಾರಾಂಶವು.

ಈ ಸೂಕ್ಷ್ಮ ಶರೀರದ ಸಹಾಯವಿಲ್ಲದೆ ಕರ್ಮನಿಯಮವು ಏನನ್ನೂ ಮಾಡಲು ಸಮರ್ಥವಾಗಿಲ್ಲ. ನಿರ್ವಾಣವನ್ನು ಹೊಂದಿದಾಗ ನಾವು ಕರ್ಮವನ್ನೂ ವಿಚಾರ ಅಥವಾ ವಿಜ್ಞಾನವನ್ನೂ ಮೀರಿರುತ್ತೇವೆ. ವ್ಯಕ್ತಿತ್ವವು ಅಳಿದುಹೋದಾಗ ದುಃಖಕ್ಕೆ ಆಸ್ಪದವೇ ಉಳಿಯುವದಿಲ್ಲ. ನಿರ್ವಾಣವೆಂದರೆ ಕಾಮ, ಕ್ರೋಧ, ದ್ವೇಷ ಮತ್ತು ಅಜ್ಞಾನಗಳ ನಾಶವೆಂದು ಬುದ್ಧನು ಹೇಳುತ್ತಾನೆ. ಪರಿನಿರ್ವಾಣವೆಂದರೆ ಪರಿಪೂರ್ಣತ್ವವನ್ನು ಅಥವಾ ಅರ್ಹತಸ್ಥಿತಿಯನ್ನು ಹೊಂದುವದು. ನಮ್ಮಲ್ಲಿಯ ವ್ಯಕ್ತಿತ್ವವು ಅಳಿದುಹೋಗಿ ವಿಶ್ವದೊಂದಿಗೆ ಸಮರಸವಾಗುವದೆಂದರ್ಥವು. ದೇವರು ಇರುವದಾದರೆ ಅವನು ಸತ್ಯಾಸತ್ಯ ಸುಖ, ದುಃಖಗಳ ಮೂಲಕಾರಣವಾಗಿರಬೇಕು. ಹೀಗಿದ್ದರೆ ಮನುಷ್ಯನಿಗೆ ಸ್ವಾತಂತ್ರ್ಯವಿಲ್ಲದ ಹಾಗಾಗುವದು. ಆತನು ದುಷ್ಕೃತಿಗೂ ದುಃಖಕ್ಕೂ ಕಾರಣನಾಗಿರದಿದ್ದರೆ ಅವನು ಸರ್ವ ಕಾರಣನಾಗಿರಲಾರನು. ಆತನು ತನ್ನ ದಯೆಯಿಂದ ದುಷ್ಟನನ್ನು ಸಾಧುವನ್ನಾಗಿ ಮಾಡಿದ್ದಾದರೆ ಮನುಷ್ಯನ ನೈತಿಕ ವೃತ್ತಿಯೇ ವ್ಯರ್ಥವಾಗುವದು. ಜಗತ್ತಿನಲ್ಲಿಯ ದುಃಖಕ್ಕೆ ಕಾರಣವನ್ನು ಹೇಳಲು ಕರ್ಮನಿಯಮವಲ್ಲದೆ ಬೇರೆ ಇಲ್ಲ. ನಮ್ಮನ್ನು ನಿರ್ವಾಣಮಾಡುವವನು ದೇವರಲ್ಲ. ಕರ್ಮನಿಯಮವೇ ಕಾರಣವು. ಆದರೆ ಈ ನಿಯಮವು ದೇವರಿಂದ ನಿಯಂತ್ರಿತವಾದದ್ದೆಂಬದನ್ನು ಬುದ್ಧನು ಮರೆತನು.

ಬೌದ್ಧ ಧರ್ಮವು ಪ್ರೇಮಪ್ರಾಧಾನ್ಯವಾಗಿದ್ದುದರಿಂದ ಅನೇಕರನ್ನು ಆಕರ್ಷಿಸಿತು. ಬುದ್ಧನು ತೀರಿದ ೨೫೦ ವರ್ಷಗಳ ತರುವಾಯ ಮೌರ್ಯ ವಂಶದ ಚಕ್ರವರ್ತಿಯಾದ ಅಶೋಕನು ಬೌದ್ಧ ಧರ್ಮವನ್ನು ಸ್ವೀಕರಿಸಿದನು. ಈತನ ಪ್ರಯತ್ನದ ಮೂಲಕ ಬೌದ್ಧ ಧರ್ಮವು ಜಗತ್ತಿನ ಧರ್ಮವಾಗಿ ಪರಿಣಮಿಸಿತು. ಇವನು ಕಾಶ್ಮೀರದಿಂದ ಸಿಲೋನದವರೆಗೂ, ಈಜಿಪ್ಟ, ನೇಪಾಲ, ತಿಬೆಟ್ಟ, ಚೈನಾ, ಜಪಾನ, ಮಂಗೋಲಿಯಾ ಮುಂತಾದ ಕಡೆಗೂ ಬೋಧಕರನ್ನು ಕಳಿಸಿದ್ದಲ್ಲದೆ ಅನೇಕ ಸ್ಥಳಗಳಲ್ಲಿ ಶಿಲಾಶಾಸನಗಳನ್ನು ನಿಲ್ಲಿಸಿದನು. ಬುದ್ಧನ ಮೂಲಬೋಧನೆಯನ್ನೂ, ಸನ್ಯಾಸ ಪದ್ಧತಿಯನ್ನೂ ಪಾಲಿ ಭಾಷೆಯಲ್ಲಿ ಪ್ರತಿಪಾದಿಸಿದ ಬೌದ್ಧ ಪಂಥಕ್ಕೆ ಹೀನಯಾನವೆಂದು ಹೆಸರಾಯಿತು. ಕ್ರಿ. ಶ. ೩೦೦ ರ ಸುಮಾರಕ್ಕೆ ಕೆಲವು ಬೌದ್ಧಸುಧಾರಕರು ಬುದ್ಧನ ಮೂರ್ತಿ ಪೂಜೆಯನ್ನೂ, ಭಕ್ತಿಮಾರ್ಗವನ್ನೂ ಸಂಸ್ಕೃತ ಭಾಷೆಯಲ್ಲಿ ಪ್ರತಿಪಾದಿಸಿದರು.

ಈ ಪಂಥಕ್ಕೆ ಮಹಾಯಾನವೆಂದು ಹೆಸರುಂಟಾಯಿತು. ಇದು ಈವರೆಗೆ ನೇಪಾಳ ಮತ್ತು ಚೈನಾ ದೇಶಗಳಲ್ಲಿ ಪ್ರಾಮುಖ್ಯವಾಗಿದೆ. ಹೀನಯಾನವು ಸಿಲೋನ ಮತ್ತು ಬರ್ಮಾ ದೇಶಗಳಲ್ಲಿ ಪ್ರಾಮುಖ್ಯವಾಗಿದೆ. ಹೀನಯಾನದ ಪಂಥವು ಎಲ್ಲ ವಸ್ತುಗಳು ಕ್ಷಣಿಕವೆಂದೂ, ವಿಚಾರಿಸುವ ಅಥವಾ ಅನುಭವಿಸುವ ವ್ಯಕ್ತಿಯಿರದೆ ಕೇವಲ ವಿಚಾರ ಮತ್ತು ಭಾವಗಳುಂಟೆಂದು ಹೇಳುತ್ತದೆ. ನಿರ್ವಾಣ ಅಥವಾ ಅರಿವಿನ ಅವಸಾನವೇ ಜೀವಿತದ ಧ್ಯೇಯವು. ಧ್ಯಾನದಿಂದ ನಿರ್ವಾಣವನ್ನು ಹೊಂದುವದು ಪ್ರತಿಯೊಬ್ಬನಿಗೆ ಶಕ್ಯವಾಗಿದೆ. ಇದಕ್ಕೆ ದೇವರ ಸಹಾಯವು ಕಾರಣವಿಲ್ಲ. ಸಂಸಾರವನ್ನು ತ್ಯಾಗಮಾಡಿ ಏಕಾಂತವಾಸಮಾಡಬೇಕು. ಈ ಪಂಥವು ಅನೇಕ ದೇವತೆಗಳಿರುವದಾಗಿಯೂ, ಸ್ವರ್ಗ, ನರಕ, ಮತ್ತು ಪುನರ್ಜನ್ಮಗಳಲ್ಲಿ ನಂಬಿಕೆಯನ್ನೂ ಪ್ರಕಟಿಸಿತು.

ಮಹಾಯಾನ ಪಂಥವು ಸಂಸಾರ ತ್ಯಾಗಮಾಡಬೇಕೆಂದು ಹೇಳುವದಿಲ್ಲ. ಜಗತ್ತಿನ ಎಲ್ಲ ವಸ್ತುಗಳು ಒಂದೇ ಸತ್ಯವಸ್ತುವಿನ ರೂಪವಿದ್ದು ಅದನ್ನು ವರ್ಣಿಸಲು ಬರುವಂತಿಲ್ಲ. ಅವು ರೂಪಾಂತರವನ್ನಾಗಲಿ, ನಾಶವನ್ನಾಗಲಿ ಹೊಂದದೆ ಒಂದೇ ಆತ್ಮಸ್ವರೂಪವಾಗಿವೆ. ಮೂಲವಸ್ತುವು ಸ್ವಯಂಭುವೂ, ಎಲ್ಲ ವಸ್ತುಗಳ ಆಧಾರವೂ ಆಗಿದೆ. ದೃಶ್ಯ ಜಗತ್ತು ನಿಜವಾದದ್ದಿರದೆ ಕನಸಿನ ಸ್ವರೂಪದ್ದಾಗಿದೆ. ವಸ್ತುಗಳಿಗೆ ಮೂರು ಗುಣಗಳುಂಟು. (೧) ಉಪಾಧಿ, (೨) ರೂಪ, ಮತ್ತು (೩) ಕ್ರಿಯೆ. ಮಡಿಕೆಯಲ್ಲಿ ಮಣ್ಣು ಉಪಾಧಿಯು, ಆಕೃತಿಯು ರೂಪವು ಮತ್ತು ನೀರನ್ನು ಇಟ್ಟುಕೊಂಡಿರುವದು ಅದರ ಕ್ರಿಯೆಯು. ಇವುಗಳಲ್ಲಿ ಉಪಾಧಿಯು ಅವಿನಾಶಿಯಾಗಿದ್ದು ರೂಪ ಕ್ರಿಯೆಗಳು ಬದಲಾವಣೆಗೆ ಆಸ್ಪದವಾಗಿವೆ. ಮೂಲ ವಸ್ತುವು ನಾಮ ರೂಪಗಳಿಂದ ಅನೇಕವಾಗುವದು. ಅವಿದ್ಯೆಯು ಜಗತ್ತಿನ ಕಾರಣವು. ಬುದ್ಧನು ದೇವತೆಗಳಲ್ಲಿ ಶ್ರೇಷ್ಠನು. ಎಲ್ಲ ಪ್ರಾಣಿಗಳಲ್ಲಿ ಧರ್ಮಕಾಯ ಅಥವಾ ಶಾಶ್ವತವಸ್ತುವೂ, ಸಂಭೋಗಕಾಯವೂ ಮತ್ತು ನಿರ್ಮಾಣಕಾಯವೂ ಉಂಟು. ನೈತಿಕ ಧ್ಯೇಯವು ಬೋಧಿಸತ್ವ ಅಥವಾ ಪೂರ್ಣ ಜ್ಞಾನವಾಗಿದೆ. ದಾನ, ವೀರ್ಯ, ಶೀಲ, ಕ್ಷಾಂತಿ, ಧ್ಯಾನ ಮತ್ತು ಪ್ರತಿಜ್ಞೆಗಳು ನೈತಿಕ ತತ್ವಗಳಾಗಿವೆ. ಬುದ್ಧನ ಆಜ್ಞೆಪಾಲಿಸುವದೇ ಮೋಕ್ಷಮಾರ್ಗವು. ಇದು ಎಲ್ಲರಿಗೂ ಭಕ್ತಿ ಮೂಲಕ ಸಾಧ್ಯವಿದೆಯೆಂದು ಈ ಪಂಥವು ಹೇಳಿತು. ಹೀನಯಾನ

ಪಂಥದಲ್ಲಿ ಸನ್ಯಾಸಿಗಳಾದ ಕೆಲವರಿಗೆ ಮಾತ್ರ ಮೋಕ್ಷವು ಸಾಧ್ಯವಿದೆ. ನಿರ್ವಾಣವೆಂದರೆ ಪರಮಾತ್ಮನಲ್ಲಿ ಐಕ್ಯಹೊಂದುವದೆಂದು ಈ ಪಂಥದ ನಂಬಿಕೆ. ಹಳೇ ಬೌದ್ಧಧರ್ಮವು ದೇವರ ಮತ್ತು ಅಮರತ್ವದ ವಿಷಯದಲ್ಲಿ ನಿಶ್ಚಯವಾದ ನಂಬಿಕೆಯನ್ನು ಇಡದಿದ್ದರಿಂದಲೂ, ಕಾಲಾಂತರದಲ್ಲಿ ಬೌದ್ಧಧರ್ಮದಲ್ಲಿ ಅಂಧ ಶ್ರದ್ಧೆಯು ಬೆಳೆದದ್ದರಿಂದಲೂ, ಹೀನಯಾನ ಮಹಾಯಾನ ಪಂಥಗಳು ಹಿಂದೂ ದೇವತೆಗಳನ್ನು ಸ್ವೀಕರಿಸಿದ್ದರಿಂದಲೂ, ಹಿಂದುಗಳು ಬುದ್ಧನನ್ನು ವಿಷ್ಣುವಿನ ಅವತಾರವೆಂದು ತಿಳಿದದ್ದರಿಂದಲೂ ಬೌದ್ಧಧರ್ಮವು ಹಿಂದೂ ಧರ್ಮದಲ್ಲಿ ಬೆರೆತು ನಾಮಶೇಷವಾಗುವ ಪ್ರಸಂಗವುಂಟಾಯಿತು. ಬೌದ್ಧಧರ್ಮದಿಂದ ಹಿಂದೂ ಧರ್ಮವು ಅಹಿಂಸೆ ಅಥವಾ ಸರ್ವಪ್ರಾಣಿಗಳಲ್ಲಿ ದಯಾ ಬುದ್ಧಿಯನ್ನು ಕಲಿತುಕೊಂಡಿತು.

ಹೀನಯಾನದಲ್ಲಿ ವೈಭಾಷಿಕ ಮತ್ತು ಸೌತ್ರಾಂತಿಕ ಎಂಬ ಎರಡು ಉಪಪಂಥಗಳುಂಟು. ಇವು ವಾಸ್ತವ್ಯವಾದ ಅಥವಾ ಸರ್ವಾಸ್ತಿವಾದವನ್ನು ಪ್ರತಿಪಾದಿಸುತ್ತವೆ. ಜಗತ್ತು ಸ್ವಯಂಭುವವಾದದ್ದೂ ದೇಶ, ಕಾಲಗಳಲ್ಲಿ ಇರುವಂತಹದೂ ಇದೆ. ಇದರಲ್ಲಿ ಮನಸ್ಸೂಸಹ ಉಳಿದ ಪ್ರಾಕೃತ ವಸ್ತುಗಳ ಸ್ಥಿತಿಯಲ್ಲಿಯೇ ಇದೆಯೆಂದು ಈ ಉಪಪಂಥಗಳ ನಂಬಿಕೆಯು. ಮಹಾಯಾನದಲ್ಲಿ ಯೋಗಾಚಾರ ಮತ್ತು ಮಾಧ್ಯಮಿಕ ಎಂಬ ಎರಡು ಉಪಪಂಥಗಳುಂಟು. ಯೋಗಾಚಾರವು ಧ್ಯೇಯವಾದವನ್ನು ಪುರಸ್ಕಾರಮಾಡುತ್ತದೆ. ಇದು ವಿಚಾರವು ಸ್ವಯಂ ನಿರ್ಮಾಣ ಶಕ್ತಿಯುಳ್ಳದ್ದೂ, ಸರ್ವಸೃಷ್ಟಿಕರ್ತೃವೂ, ನಿತ್ಯವಸ್ತುವೂ ಆಗಿದೆಯೆಂದು ನಂಬುತ್ತದೆ. ಮಾಧ್ಯಮಿಕವು ಶೂನ್ಯವಾದ (*Nihilism*) ವಾಗಿದೆ.

(೧) ವೈಭಾಷಿಕರು ಅನುಭವಕ್ಕೆ ಪ್ರಾಧಾನ್ಯಕೊಟ್ಟಿದ್ದಾರೆ. ವಸ್ತುವಿನ ಪ್ರತ್ಯಕ್ಷ ಸ್ಪರ್ಶದಿಂದಾದ ಜ್ಞಾನಕ್ಕೆ ಅನುಭವವೆಂದು ಹೆಸರು. ಬಾಹ್ಯ ಜಗತ್ತಿನ ಪ್ರತ್ಯಕ್ಷ ಜ್ಞಾನವಿಲ್ಲೆಂಬದು ತಪ್ಪು. ಪ್ರತ್ಯಕ್ಷ ಜ್ಞಾನವಿರದಿದ್ದರೆ ಅನುಮಾನವೇ (*Inferance*) ಹೊರಡದು. ಪ್ರಕೃತಿ ಮತ್ತು ಮನಸ್ಸು ಬೇರೆ ಬೇರೆ ವಸ್ತುಗಳೆಂದು ಇವರ ನಂಬಿಗೆ. ವಸ್ತುಗಳಿರುವವೆಂದು ಮನಸ್ಸಿಗೆ ಅರಿಕೆಯುಂಟು. ಕಾರಣವು ಎಂದೂ ನಾಶವಾಗದೆ ಅದು ತನ್ನ ಸ್ಥಿತಿಯನ್ನು ಮಾರ್ಪಡಿಸಿ ಪರಿಣಾಮವನ್ನು ಹೊಂದಿದಾಗ ಹೆಸರಿನಲ್ಲಿ ಮಾತ್ರ ಬದಲಾವಣೆ ಹೊಂದುವದು. ಕೆಸರು ಕೊಡವಾದಾಗ

ಕೆಸರೆಂಬ ಹೆಸರು ಹೋಗಿ ಕೊಡವೆಂಬ ಹೆಸರಾಗುತ್ತದೆ. ವಸ್ತುಗಳು ನಮ್ಮ ಇಂದ್ರಿಯ ಗೋಚರವಾದಾಗಲೂ ಸಹ ಅಸ್ತಿತ್ವದಲ್ಲಿರುತ್ತವೆ. ಪುದ್ಗಲ ಅಥವಾ ಆತ್ಮವು ನಮ್ಮ ದೇಹದ ಭೂತಗಳಿಂದ (*Elements*) ಪ್ರತ್ಯೇಕವಾಗಿಲ್ಲ. ವೈಭಾಷಿಕರು ಸೌತ್ರಾಂತಿಕರಂತೆಯೇ ವಸ್ತುಗಳನ್ನು ಬಾಹ್ಯ, ಅಭ್ಯಂತರ ಎಂದು ವಿಭಾಗಿಸಿದ್ದಾರೆ. ಬಾಹ್ಯ ವಸ್ತುಗಳಲ್ಲಿ ಭೂತ ಮತ್ತು ಭೂತಗಳಿಗೆ ಸಂಬಂಧಿಸಿದ ವಸ್ತುಗಳೆಂತಲೂ (ಭೌತಿಕ) ಅಭ್ಯಂತರ ವಸ್ತುಗಳಲ್ಲಿ ಚಿತ್ತ ಮತ್ತು ಚಿತ್ತಕ್ಕೆ ಸಂಬಂಧಿಸಿದ ವಸ್ತುಗಳೆಂತಲೂ ಗ್ರಹಿಸಿದ್ದಾರೆ. ನಾಲ್ಕು ಭೂತಗಳು ಮಾತ್ರ ಉಂಟು. ಭೂಮಿ, ನೀರು, ಬೆಂಕಿ, ಗಾಳಿ ಬಾಹ್ಯ ವಸ್ತುಗಳು ಅಣುಗಳ ಕೂಡುವಿಕೆಯಿಂದಾಗಿವೆ. ಅಣುವಿಗೆ ಆರು ಪಕ್ಕಗಳಿದ್ದಾಗ್ಯೂ ಅಣುವಿನಲ್ಲಿಯ ಸ್ಥಳವು ಅವಿಭಾಜ್ಯವಾಗಿದೆ. ಒಂದೇ ಅಣುವು ಕಾಣಿಸದಿದ್ದರೂ ಅಣುಗಳ ಸಮೂಹವು ದೃಷ್ಟಿಗೋಚರವಾಗಿದೆ. ಅಣುಗಳು ಒಂದರಲ್ಲೊಂದು ಪ್ರವೇಶಿಸಲಾರವು. ಪರಮಾಣುವು ರೂಪ, ರಸ, ಗಂಧ, ಸ್ಪರ್ಶಗಳೆಂಬ ನಾಲ್ಕು ಗುಣಗಳುಳ್ಳದ್ದು. ಇದು ಪ್ರಥಕ್ಕರಣಕ್ಕೆ ಆಸ್ಪದವಾಗಿಲ್ಲ. ಪರಮಾಣುಗಳ ಸಮೂಹವು ಅಣುರೂಪವಾಗಿ ದೃಷ್ಟಿಗೋಚರವಾಗುವದು. ಎಲ್ಲ ಭೂತಗಳಲ್ಲಿ ಅಣುಗಳು ಭೂಮಿ, ನೀರು, ಬೆಂಕಿ, ಗಾಳಿಗಳಿಂದ ಸಹಿತವಾಗಿ ಒಂದೇ ಸ್ವರೂಪವಾಗಿವೆ. ಕಠಿಣ ಪದಾರ್ಥದಲ್ಲಿ ಭೂಮಿಯ ಅಂಶವೂ, ದ್ರವರೂಪ ಪ್ರವಾಹದಲ್ಲಿ ನೀರಿನ ಅಂಶವೂ, ಉರಿಯುವ ಅಗ್ನಿಯಲ್ಲಿ ಬೆಂಕಿಯ ಅಂಶವೂ, ಪ್ರಾಧಾನ್ಯವಾಗಿವೆ. ಸರ್ವಾಸ್ತಿವಾದಿಗಳು ಭಾಜನ ಲೋಕ ಅಥವಾ ವಸ್ತುಗಳ ಲೋಕವೆಂತಲೂ ಸತ್ವ ಲೋಕ ಅಥವಾ ಜೀವಿಗಳ ಲೋಕವೆಂತಲೂ ಎರಡು ಲೋಕಗಳ ಭೇದವನ್ನು ಮಾಡಿದ್ದಾರೆ. ಚಿತ್ತವಿಪ್ರಯುಕ್ತ ಧರ್ಮಗಳು ಘಟನಾತ್ಮಕ ಶಕ್ತಿಗಳಿದ್ದು ಪ್ರಾಪ್ತಿ, ಅಪ್ರಾಪ್ತಿಗಳಂತಹ ಪ್ರಕೃತಿ, ಮನಸ್ಸುಗಳಿಂದ ಬೇರೆಯಾಗಿವೆ. ಇವು ಮಾನಸಿಕ ಅಥವಾ ಪ್ರಾಕೃತಿಕ ಆಧಾರವನ್ನು ಹೊಂದಿದಾಗ ಪ್ರತ್ಯಕ್ಷ ಅಸ್ತಿತ್ವದಲ್ಲಿ ಬರುವವು.

ಘಟನಾತ್ಮಕ ಭೂತಗಳು ಮೂರು (೧) ಆಕಾಶ-- ಇದು ಮೇರೆಯಿಲ್ಲದ್ದು, ಭೇದರಹಿತವಾದದ್ದು, ಸರ್ವ ;ವ್ಯಾಪಿಯಾದ ಸಹಜ ವಸ್ತು, ರೂಪವಿಲ್ಲದ್ದು ಮತ್ತು ಪ್ರಕೃತಿಸ್ವರೂಪವಿಲ್ಲದ್ದು. (೨) ಅಪ್ರತಿಸಂಖ್ಯಾ ನಿರೋಧವು ಧರ್ಮವನ್ನು ಅರಿಯದಿರುವದು, ಪ್ರತ್ಯಯದ ಅಭಾವದಿಂದ

ಇದು ಉಂಟಾಗುವದಲ್ಲದೆ ಜ್ಞಾನದಿಂದ ಉಂಟಾಗುವದಿಲ್ಲ. ಒಂದೇ ವಸ್ತು ವಿನ ಮೇಲೆ ಅತ್ಯಂತ ಲಕ್ಷವನ್ನಿಟ್ಟಾಗ ಇದು ಸಂಭವಿಸುವದು. (೩) ಪ್ರತಿ ಸಂಖ್ಯಾನಿರೋಧವು ಪಾರಮಾರ್ಥಿಕ ಜ್ಞಾನದ ಪರಿಪಕ್ವವನ್ನು ಹೊಂದುವದು. ಇದು ಸರ್ವಾಸ್ತಿವಾದಿಗಳ ಅಂತಿಮಧ್ಯೇಯವು. ಮನಸ್ಸು (ಚಿತ್ತ) ಅಥವಾ ವಿಜ್ಞಾನವು ಅಂತರಿಂದ್ರಿಯವು. ವಿಜ್ಞಾನದ ಹೊರತು ಬೇರೆ ಆತ್ಮವಿಲ್ಲ.

(೨) ಸೌತ್ರಾಂತಿಕರು:—ಮನೋಬಾಹಿರವಾದ ದೃಶ್ಯ ಜಗತ್ತಿನ ಅಸ್ತಿತ್ವವನ್ನು ಇವರು ಒಪ್ಪುತ್ತಾರೆ. ವಸ್ತುಗಳಿರದಿದ್ದರೆ ಅವು ಇಂದ್ರಿಯ ಗೋಚರವಾಗುತ್ತಿರಲಿಲ್ಲ. ಎಲ್ಲ ವಸ್ತುಗಳು ಕ್ಷಣಿಕವಾದವುಗಳು. ವಸ್ತುಗಳ ಕಲ್ಪನೆಯು ಅಥವಾ ಚಿತ್ರವು ಮೊದಲು ಗೋಚರವಾಗುವದು. ಅನಂತರ ವಸ್ತುವನ್ನು ಅರಿತುಕೊಳ್ಳುತ್ತೇವೆಂದು ಇವರ ಗ್ರಹಿಕೆ. ಆದರೆ ಈ ಅಭಿಪ್ರಾಯವು ಆಧುನಿಕ ಮಾನಸಿಕಶಾಸ್ತ್ರಕ್ಕೆ ಸಮ್ಮತವಾಗಿರದೆ ವೈಭಾಷಿಕರು ವಸ್ತುವೇ ಮಾತ್ರ ಗೋಚರವಾಗುವದೆಂಬದು ಸಮಂಜಸವಾಗಿದೆ. ಇವರು ವೈಭಾಷಿಕರಂತೆ ಅಣುವಾದಿಗಳು. ಪರಮಾಣುವಿನಂತೆಯೇ ಆಕಾಶವಿದೆಯೆಂದು ಇವರ ಗ್ರಹಿಕೆ. ವೈಭಾಷಿಕ, ಮಾಧ್ಯಮಿಕರ ವ್ಯತಿರಿಕ್ತವಾಗಿ ಅರಿವು ತನ್ನನ್ನೇ ಅರಿತುಕೊಳ್ಳಬಲ್ಲದೆಂದೂ, ನಾವು ಆತ್ಮಜ್ಞಾನವನ್ನು ಹೊಂದಬಲ್ಲೆವೆಂದೂ ಇವರು ಹೇಳುತ್ತಾರೆ. ಪ್ರಾಣಿಗಳು ಈಶ್ವರನಿಂದಾಗಲಿ, ಪುರುಷನಿಂದಾಗಲಿ ಅಥವಾ ಪ್ರಕೃತಿಯಿಂದಾಗಲಿ ನಿರ್ಮಿತವಾಗಿಲ್ಲವೆಂದು ಯಶೋಮಿತ್ರನು ಹೇಳುತ್ತಾನೆ. ಕೆಲವು ಪ್ರಾಣಿಗಳು ಪಿಂಡಜ, ಕೆಲವು ಅಂಡಜ, ಕೆಲವು ಉದ್ಭಿಜ ಹೀಗೆ ನಾನಾ ವಿಧವಾಗಿರುವದರಿಂದ ಉತ್ಪತ್ತಿ ಕಾರಣವು ಅನೇಕಪ್ರಕಾರವಿದ್ದು ದೇವರು ಮುಖ್ಯ ಕಾರಣನಲ್ಲ.

(೩) ಯೋಗಾಚಾರರು:—ಯೋಗ ಸಾಧನದಿಂದಲೇ ಪೂರ್ಣ ಸತ್ಯವು ಲಭಿಸುವದೆಂದು ಇವರ ಮತವು. ಬಾಹ್ಯ ಜಗತ್ತು ಮಿಥ್ಯವಾದದ್ದು. ಒಂದು ವೇಳೆ ಅದು ಇದ್ದರೂ ಅದನ್ನು ನಾವು ಅರಿತುಕೊಳ್ಳಲಾರೆವು. ಅರಿತುಕೊಳ್ಳತಕ್ಕ ವಸ್ತುಗಳೆಲ್ಲ ಇಂದ್ರಿಯಗಳ ಮೇಲೆ ಮುದ್ರಿತವಾದ ಕಲ್ಪನೆಗಳಾಗಿವೆ. ನಮ್ಮ ಸುತ್ತಲಿನ ಬಾಹ್ಯ ಜಗತ್ತು ನಮ್ಮ ಮಾನಸಿಕ ಕಲ್ಪನೆಯು ಹೊರತು ಮತ್ತೊಂದಿಲ್ಲ. ಅದು ಮೋಡದಂತೆ ಹುಟ್ಟಿ ತೀವ್ರವಾಗಿ ಅದೃಶ್ಯವಾಗುವದು. ನಮ್ಮ ಕನಸುಗಳು ಕಲ್ಪನೆಗ

ಳಿಂದ ಕೂಡಿದ್ದು ವಸ್ತುಗಳ ಅವಶ್ಯವಿಲ್ಲದೆ ಹಿಂದಿನ ಮಾನಸಿಕ ಕಲ್ಪನೆಗಳಿಂದ ಉದಯವಾಗುತ್ತವೆ. ಇವರು ಜ್ಞಾನವಾದಿಗಳು. ಅರಿವು ಅಥವಾ ಜ್ಞಾನದ ಹೊರತು ಮತ್ತಾವದೂ ಇರುವದಿಲ್ಲ "ಸರ್ವಂ ಬುದ್ಧಿಮಯಂ ಜಗತ್" ಅರಿವು ಬಾಹ್ಯ ವಸ್ತುಗಳ ಮೇಲೆ ಅವಲಂಬಿಸಿದೆ ಸ್ವಾವಲಂಬನವಾಗಿದೆಯೆಂದು ಇವರು ನಂಬುವದರಿಂದ ಇವರ ಮತವು ನಿರಾಲಂಬನವಾದವೆಂದು ಕರೆಯಲ್ಪಟ್ಟಿವೆ. ಸೌತ್ರಾಂತಿಕರು ವಾಸ್ತವ್ಯವಾದಿಗಳಿರುವಂತೆ ಯೋಗಾಚಾರರು ಧ್ಯೇಯವಾದಿಗಳಿದ್ದಾರೆ. (*Idealists*) ಅರಿವಿನ ಸಮೂಹಕ್ಕೆ ಆಲಯವಿಜ್ಞಾನವೆಂದು ಹೆಸರು. ಇದನ್ನು ಯೋಗಿಗಳು ಧ್ಯಾನದಿಂದ ಕಂಡುಹಿಡಿಯುತ್ತಾರೆ. ಇದು ಉತ್ಪತ್ತಿ, ಸ್ಥಿತಿ, ಲಯಗಳಿಂದ ರಹಿತವಾದದ್ದೆಂದು ಹೇಳಲ್ಪಟ್ಟಿದೆ. ಇದು ಎಲ್ಲ ಮನಸ್ಸುಗಳಲ್ಲಿಯ ಭಾವ ಮತ್ತು ಕಲ್ಪನೆಗಳ ಶಾಶ್ವತವಾದ ತಳಹದಿಯಾಗಿದೆ. ಜಗತ್ತಿನಲ್ಲಿಯ ಎಲ್ಲ ವಸ್ತುಗಳು ಇದರಲ್ಲಿ ಅಡಕವಾಗಿವೆ. ಅರಿವು ಒಂದೇ ನಿಜವಾದ ವಸ್ತುವು. ಸೃಷ್ಟಿಯ ವಸ್ತುಗಳು ಅರಿವಿನಿಂದಲೇ ಉತ್ಪತ್ತಿಯಾಗಿದ್ದು ಅರಿವಿನಲ್ಲಿಯೇ ಅಡಗುವವು. ದೇಶ ಕಾಲಗಳಲ್ಲಿರುವ ಜಗತ್ತು ನಮ್ಮ ಅಪೂರ್ಣ ಜ್ಞಾನದ ಮೂಲಕ ನಿಜವಾಗಿ ತೋರುತ್ತದೆ. ಅವಿದ್ಯೆಯೇ ಈ ತೋರುವಿಕೆಗೆ ಕಾರಣವು. ಆಲಯವಿಜ್ಞಾನವು ವ್ಯಕ್ತಿವಿಶಿಷ್ಟವಾದದ್ದು. ಸರ್ವಾಂತರ್ಯಾಮಿಯಾದ ಮತ್ತು ಶುದ್ಧವಸ್ತುವು ತಥತಾ ಎಂದು ಕರೆಯಲ್ಪಟ್ಟಿದೆ. ತಥತಾದಿಂದ ಆಲಯವಿಜ್ಞಾನಕ್ಕೆ ಇಳಿದುಬಂದಾಗ ನಮಗೆ ಅರಿವು ಮತ್ತು ದೇಶ ಅಥವಾ ಸ್ಥಲವು ಲಭಿಸುವವು. ಸ್ಥಲಕ್ಕೆ ನಿಜವಾದ ಅಸ್ತಿತ್ವವಿಲ್ಲ. ಅವಿದ್ಯೆಯಮೂಲಕ ಅಂತರಂಗವೇ ಬಹಿರಂಗವಾಗಿ ತೋರುತ್ತದೆ. ನಮ್ಮಲ್ಲಿ ಅವಿದ್ಯೆಯಿರುವ ವರೆಗೆ ವ್ಯಕ್ತಿತ್ವವಿರುವದು. ಮೋಕ್ಷಕ್ಕೆ ಜ್ಞಾನ ಮತ್ತು ಸದಾಚಾರಗಳು ಅವಶ್ಯವಾಗಿ ಬೇಕು. ಯೋಗ ಸಾಧನೆಯು ಆತ್ಮಜ್ಞಾನವನ್ನುಂಟುಮಾಡುವದು.

(೪) ಮಾಧ್ಯಮಿಕರು— ಮಾಧ್ಯಮಿಕತತ್ವವು ಬುದ್ಧನ ಬೋಧೆಯ ಆಧಾರದಿಂದ ಪ್ರಾರಂಭವಾದದ್ದು. ಬುದ್ಧನು ತನ್ನ ನೈತಿಕ ಬೋಧೆಯನ್ನು ಮಧ್ಯಮ ಮಾರ್ಗವೆಂದು ಕರೆದನು. ಜಗತ್ತು ಪ್ರಗತಿಯನ್ನು ಹೊಂದತಕ್ಕುದಾದುದರಿಂದ ಅದು ಪೂರ್ಣ ನಿಜವಾದುದಲ್ಲ. ಮನುಷ್ಯನು ಮಾನಸಿಕ ಮತ್ತು ಪ್ರಾಕೃತಿಕ ಧರ್ಮಗಳ ಸಮೂಹವಾಗಿದ್ದಾನೆ. ಜಡವಸ್ತುವು ಪ್ರಾಕೃತಿಕ ಧರ್ಮಗಳ ಸಮೂಹವಾಗಿದೆ. ಧರ್ಮಗಳು

ಮಾತ್ರ ಅಸ್ತಿತ್ವದಲ್ಲಿವೆ. ಆದರೆ ಅವು ನಾಶವನ್ನು ಹೊಂದುವವು. ಪ್ರತಿಯೊಂದು ವಿಚಾರಕ್ಕೆ ಅದರ ಹಿಂದಿನ ವಿಚಾರವೇ ಕಾರಣವಾಗಿದೆ. ಯಾವ ವಸ್ತುವೂ ಸ್ವತಂತ್ರವಾಗಿರದೆ ಮತ್ತೊಂದರ ಮೇಲೆ ಅವಲಂಬನವಾಗಿದೆ. ಒಂದು ವಸ್ತುವಿನ ಸತ್ಯವನ್ನು ವಿವರಿಸುವದು ಅಶಕ್ಯವೆಂದು ಹೇಳುವದಾದರೆ ಅಂತರಂಗದ ಆತ್ಮಗಳೂ ಬಹಿರಂಗದ ವಸ್ತುಗಳೂ ಅಸತ್ಯವಾಗುವವು. ಅರಿವಿನ ಮೂಲಕವಾಗಿಯೇ ಎಲ್ಲ ವಸ್ತುಗಳ ಅರಿಕೆಯಾಗುವದೆಂದು ಯೋಗಾಚಾರರು ಹೇಳುತ್ತಾರೆ. ಮಾಧ್ಯಮಿಕರ ಪ್ರತಿನಿಧಿಯಾದ ನಾಗಾರ್ಜುನನು ಈ ತತ್ವವನ್ನು ಸ್ವೀಕರಿಸಿದ್ದಾನೆ. ದೃಶ್ಯ ಜಗತ್ತು ತೋರುಮುಖವಾದುದೆಂದು ನಾಗಾರ್ಜುನನು ಹೇಳುತ್ತಾನೆ. ಘಟನಾತ್ಮಕ ವಸ್ತುಗಳಿಗೆ ಸಂಸ್ಕೃತಗಳೆಂದು ಹೆಸರು. ವಸ್ತುವಿನ ಸೃಷ್ಟಿಯ ಕಾಲಕ್ಕೆ ವಸ್ತುವು ಸ್ಥಿತಿ, ಲಯಗಳಿಂದ ವಿರಹಿತವಾಗಿದ್ದರೆ ಅವಕ್ಕೆ ಸಂಸ್ಕೃತವೆಂದು ಹೆಸರುಂಟಾಗದು. ಆದರೂ ಮೂರೂ ಏಕಕಾಲಕ್ಕೆ ಇರಲಾರವು. ಭೂತ, ಭವಿಷ್ಯಗಳು ನಿಶ್ಚಿತವಾದವುಗಳಲ್ಲ. ವರ್ತಮಾನಕಾಲವೇ ನಿಶ್ಚಿತವಾದದ್ದು. ಆದರೆ ವರ್ತಮಾನಕಾಲವು ಭೂತ, ಭವಿಷ್ಯಗಳಿಂದ ಪ್ರತ್ಯೇಕವಾಗಿಲ್ಲ. ನಾವು ವಸ್ತುವನ್ನು ಅದರ ಗುಣಗಳ ಮೂಲಕವಾಗಿ ಅರಿತುಕೊಳ್ಳುತ್ತೇವೆ. ಗುಣಗಳು ಗೊತ್ತಾಗದಾಗ ವಸ್ತುವಿನ ಜ್ಞಾನವಾಗುವದಿಲ್ಲ. ಗುಣಗಳ ಹೊರತಾಗಿ ವಸ್ತುವೇ ಇಲ್ಲ. ರೂಪ, ರಸ, ಗಂಧ, ಮೃದು, ಕಠಿಣ ಮುಂತಾದ ಗುಣಗಳುಂಟು. ಯಾಕಂದರೆ ಇಂದ್ರಿಯಗಳಿವೆ. ಕಣ್ಣಿಲ್ಲದೆ ರೂಪವೂ, ಕಿವಿಯಿಲ್ಲದೆ ಶಬ್ದವೂ ಇರಲಾರವು. ಗುಣಗಳು ಸ್ವತಂತ್ರವಾಗಿರದೆ ಇಂದ್ರಿಯಗಳನ್ನು ಅವಲಂಬಿಸಿವೆ. ಎಲ್ಲ ಗುಣಗಳು ತೋರಮುಖವಾಗಿದ್ದು ಯಾವ ವಸ್ತುವಿನಲ್ಲಿ ಈ ಗುಣಗಳು ನೆಲೆಸಿರುವವೋ ಆ ವಸ್ತುಗಳು ನಿಜವಾಗಿಲ್ಲ. ನಮಗೆ ಗುಣಗಳ ವಿಷಯದಲ್ಲಿ ಮಾತ್ರವೇ ಜ್ಞಾನವಿರುವದು. ವಸ್ತುವು ಗುಣಗಳ ಪರೋಕ್ಷ ಸಂಬಂಧವಿದ್ದು ಅರಿವಿನಿಂದ ನಿರ್ಮಿತವಾಗಿ ಅರಿವನ್ನು ಬಿಟ್ಟು ಇರಲಾರದು. ವಸ್ತುವು ಅದರ ಕಾರಣದಿಂದ ಕೂಡಿದೆ. ಬದಲಾವಣೆಯ ಕ್ರಮವು ತಿಳಿಯಲಶಕ್ಯವಾಗಿದೆ. ಬಟ್ಟೆಯಾಗಲಿ ಅದರಲ್ಲಿಯ ಎಳೆಗಳಾಗಲಿ ಒಂದನ್ನು ಬಿಟ್ಟು ಒಂದು ಸ್ವತಂತ್ರವಾಗಿಲ್ಲ. ಜಗತ್ತಿನ ಯಾವ ವಸ್ತುವೂ ಪೂರ್ಣ ಅಸ್ತಿತ್ವದಲ್ಲಿರದೆ ಒಂದಕ್ಕೊಂದರ ಸಂಬಂಧ ಮೂಲಕವಾಗಿವೆ. ಅರಿವಿನ ಸ್ಥಿತಿಗಳ ಹೊರತಾಗಿ ಆತ್ಮವೆಂಬದು ಇರುವದಿಲ್ಲ. ನೋಟವಿರದಿದ್ದರೆ ರೂಪವಿರಲಾರದು. ರೂಪಗಳಿರದಿದ್ದರೆ ನೋಟವಿರಲಾರದು. ಒಂದೇ ವಸ್ತುವು ಅನೇಕರಿಗೆ ಅನೇಕ

ವಿಧವಾಗಿ ತೋರುತ್ತದೆ. ಮತ್ತು ಅದೇ ಒಬ್ಬನಿಗೆ ಬೇರೆ ಬೇರೆ ಕಾಲ ಗಳಲ್ಲಿ ಬೇರೆ ಬೇರೆಯಾಗಿ ತೋರುತ್ತದೆ.

ನಮ್ಮ ಜ್ಞಾನವು ಭೇದವನ್ನು ಅವಲಂಬಿಸಿರುವದು. ಆಕಳು ಕುದುರೆಯಲ್ಲ, ಕುರಿಯಲ್ಲವೆಂದು ತಿಳಿಯುತ್ತೇವೆ. ಒಂದು ವಸ್ತುವಿನ ಸ್ವಸ್ಥಿತಿಯನ್ನು ತಿಳಿಯುವದು ಅಶಕ್ಯವು. ಎಲ್ಲ ವಸ್ತುಗಳು ಸಂಬಂಧಾರ್ಥ ದಲ್ಲ ತಿಳಿಯಲ್ಪಡುತ್ತವೆ. ಕನಸಿನಲ್ಲಿ ಕಂಡ ವಸ್ತುವು ಎಚ್ಚತ್ತಾಗ ಕಾಣುವದಿಲ್ಲ. ವಿಚಾರವು ಮತ್ತೊಂದು ವಿಚಾರವನ್ನೂ ಮತ್ತು ತನ್ನನ್ನೇ ತಾನು ಅರಿಯಲಾರದು. ಜ್ಞಾನವು ಅಶಕ್ಯವಾಗಿದೆ. ಈ ಪ್ರಕಾರ ನಾಗಾರ್ಜುನನ ತರ್ಕವಿದೆ. ಜಗತ್ತನ್ನು ಬಿಟ್ಟು ದೇವರಾಗಲಿ ದೇವ ರನ್ನು ಬಿಟ್ಟು ಜಗತ್ತಾಗಲಿ ಇರುವದಿಲ್ಲ. ಇವೆರಡೂ ತೋರಿಕೆಯ ವಸ್ತುಗಳು. ನಾಗಾರ್ಜುನನು ದೈವವಾದವನ್ನು ಖಂಡಿಸುತ್ತಿರುವನೇ ವಿನಹ ನಿಜವಾದ ದೇವರಲ್ಲಿ ನಂಬಿಕೆಯುಳ್ಳವನಿದ್ದಾನೆ. ಮೂಲತಃ ಸತ್ಯಾಸತ್ಯಗಳಲ್ಲಿ ಭೇದವಿಲ್ಲೆಂದು ಈತನು ಹೇಳುತ್ತಾನೆ. ಯಾವದೂ ನಿಜವಸ್ತುವು ಇಲ್ಲದ್ದರಿಂದ ತಪ್ಪು ತಿಳುವಳಿಕೆಯ ಸಂಭವವೇ ಇಲ್ಲ ವೆಂದು ಈತನ ಹೇಳಿಕೆ. ಜನನ, ಮರಣ, ಏಕತ್ವ, ಬಹುತ್ವವೆಂಬವು ಇಲ್ಲವೇ ಇಲ್ಲ. ಜಗತ್ತು ಗುಣಗಳ ಕಲ್ಪನೆಯು ಮತ್ತು ಸಂಬಂಧಗಳ ಹೊರತಾಗಿ ಮತ್ತೇನೂ ಇರುವದಿಲ್ಲ. ಜಗತ್ತು ಮಿಥ್ಯವಾದದ್ದು. ಕಾರ್ಯ ಕಾರಣಗಳ ಮೂಲಕವಾಗಿ ಜಗತ್ತು ನಮ್ಮ ದೃಷ್ಟಿಪಥಕ್ಕೆ ಬೀಳುವದು. ನಿತ್ಯವಸ್ತುವು ವರ್ಣನಾತೀತವೆಂದು ಈತನ ಹೇಳಿಕೆ. ಈತನು ಸತ್ಯವು ಪರ ಮತ್ತು ಅಪರ ಎಂದು ಎರಡು ಭೇದವುಳ್ಳದ್ದೆಂದು ಹೇಳುತ್ತಾನೆ. ಅಪರ ಸತ್ಯದಿಂದ ಪರವು ಸಾಧಿಸುವದು. ಪರದಿಂದ ನಿರ್ವಾಣವು ಲಭಿಸುವದು. ಸಂವೃತಿಯು ಮನುಷ್ಯನ ಬುದ್ಧಿಯ ಪ್ರತಿಫಲವಾಗಿದೆ. ಇದು ಜಗತ್ತು ಮತ್ತು ಅದರ ತೋರುವಿಕೆಯ ಕಾರಣವಾಗಿದೆ. ಇದು ಸತ್ಯವನ್ನು ಮರೆಮಾಡುವದು. ಜಗತ್ತು ಶೂನ್ಯವಾದದ್ದು. ಅಂದರೆ ಅಸ್ತಿತ್ವವಿಲ್ಲದ್ದೆಂದು ಅರ್ಥವಲ್ಲ. ಕೇವಲ ತೋರಿಕೆಯದೆಂದರ್ಥವು. ಆದರೆ ಕೆಲವು ಮಾಧ್ಯಮಿಕರು ಜಗತ್ತಿನ ಅಸ್ತಿತ್ವವೇ ಇಲ್ಲವೆಂದು ಹೇಳುತ್ತಾರೆ. ಇದು ಪೂರ್ಣ ಶೂನ್ಯವಾದಕ್ಕೆ ತಕ್ಕದ್ದಾಗಿದೆ (*Nihilism*). ನಾಗಾರ್ಜುನನು ನಿತ್ಯವಸ್ತುವಿಗೆ ಶೂನ್ಯವೆಂದು ಕರೆದಾಗ ಅದು ವರ್ಣ ನಾತೀತವೆಂದು ಗ್ರಹಿಸಿದ್ದಾನೆ. ನಿರ್ವಾಣವುಂಟಾದ ಮೇಲೆ ಅಜ್ಞಾನ ನಾಶವಾಗುವದು.

# ಜಯ! ಬಸವೇಶ.

ದಾಟಿ— "ಎನಿತು-ಇನಿದು ಈ ಕನ್ನಡ ನುಡಿಯು" ಎಂಬಂತೆ.

(ಸಾರಂಗಾದಿ ತಾಳ.)

ಜಯ! ಬಸವೇಶನ ಸುಂದರ ಪಾದವ
ನಯ ವಿನಯದಿಂ ನೆನೆಯುತೆ ನಮಿಸುವೆ ॥ಪಲ್ಲ॥

(೧)

ಸತ್ಯಾಗ್ರಹದೊಳು
ಕೀರ್ತಿಯ ಹೊಂದಿದ
ನಿತ್ಯಾನಂದದ
ನಿಜವನು ತೋರಿದ
ಧರ್ಮೋದ್ಧಾರಕ ಮಹಿಮಾ ಪುರುಷನ

(೨)

ಅಹಿಂಸಾವ್ರತವನು
ಲೋಕಕೆ ಸಾರಿ
ದಯಾಧರ್ಮದ
ಕೀಲವನರುಹಿ
ದೇಶೋದ್ಧಾರವ ಗೈದಿಹ ಶರಣನ

(೩)

ಜಾತಿಯ ಭೇದದ,
ಸೂತಕ ವಳುಕಿಸಿ
ಸಮತಾ ವಾದವ
ಜಗದೊಳು ಹಬ್ಬಿಸಿ
ರಾಷ್ಟ್ರೋದ್ಧಾರವ ಗೈದಿ ಮಹಾತ್ಮನ

ಆನಂದಕವಿ ಕುರುಗುಂದ.

# ಕೇಂದ್ರಕಿರಣಾವಲಿಃ

(ಜ್ಞಾನಮಯನಿಂದ)

ಮನುಷ್ಯನಿಗೆ ಏನಾದರೂ ವಿಶ್ರಾಂತಿ, ಉಚ್ಚ ವಿಚಾರಗಳು ಬೇಕೋ ಹೇಗೆ ಅಥವಾ ಬಾಹ್ಯವಸ್ತುಗಳನ್ನು ಸಮನಾಗಿ ಹಂಚಿಕೊಳ್ಳುವದರಲ್ಲಿಯೇ ಸರ್ವಸ್ವವೋ? ರೊಟ್ಟಿಯನ್ನು ದೊರಕಿಸಿಕೊಡುವ ಭರದಲ್ಲಿ ಮುಂದಿನ ಉನ್ನತಿಯನ್ನು ಸಾಧಿಸುವ ಶಾಸ್ತ್ರವನ್ನು ನಿರುಪಯೋಗಿಯೆಂದು ಹಳಿಯುವದೇನು?

ನಮ್ಮ ಕಡೆಗೆ ನಾವು ದುರ್ಲಕ್ಷ್ಯದಿಂದಿರುವವರೆಗೆ, ಮತ್ತು ನಮ್ಮ ಸುಧಾರಕರು ನಾವೇ ಆಗದವರೆಗೆ, ಜಗತ್ತಿನಲ್ಲಿಯ ಎಲ್ಲ ಸುಧಾರಕರು ಕೂಡಿಯೂ ನಮ್ಮನ್ನು ಉದ್ಧಾರಮಾಡಲಾರರು. ಇಂದಿನವರೆಗೆ ಲಕ್ಷಾವಧಿ ಶ್ರೇಷ್ಠ ಉಪದೇಶಕರಾದರೂ ಜಗತ್ತು ಹಾಗೆಯೇ ಉಳಿವದ್ದಕ್ಕೆ ಈ ಆತ್ಮವಿಮುಖತೆಯೇ ಕಾರಣವು. ಶ್ರೇಷ್ಠ ಪುರುಷರು ಏನಾದರೂ ಕಲಿಸ ಬಂದರೆ ಅವರನ್ನೇ ಸುಧಾರಿಸುವದಕ್ಕೆ ಹೊರಡುವ ಸ್ವಯಂಮನ್ಯ ಈ ಹುಟ್ಟು ಸುಧಾರಕರ ರೀತಿಯು ಯಾವ ಉನ್ನತಿಯನ್ನು ತಾನೇ ಸಾಧಿಸಬಲ್ಲದು? ಸಾರಾಂಶ, ಸ್ವೋನ್ನತಿಯನ್ನು ಬದಿಗಿಟ್ಟು ಒಬ್ಬರೊಬ್ಬರ ಉನ್ನತಿಯನ್ನು ಒಬ್ಬರೊಬ್ಬರು ಮಾಡಲಿಕ್ಕೆ ಹೊರಟರೆ ಯಾರದೂ ಉದ್ಧಾರವಾಗದೆ ಪರಸ್ಪರ ಕಲಹಕ್ಕೆ ಮಾತ್ರ ಕಾರಣವಾಗುವದು.

ಇಬ್ಬರು ಹೆಣ್ಣುಮಕ್ಕಳು 'ನಿನ್ನ ಹೆರಳು ನಾನು ಹಾಕುತ್ತೇನೆ, ನನ್ನ ಹೆರಳು ನೀನು ಹಾಕು' ಎಂದು ಮಾತನಾಡಿಕೊಂಡು ಆ ಪ್ರಕಾರ ಮಾಡುವರು. ಪ್ರಸ್ತುತ ಸುಧಾರಣೆಯು ಈ ರೀತಿಯ ಪರಸ್ಪರ ಸಹಕಾರದಿಂದಲೇ ಶಕ್ಯವು.

ಭೌತಿಕ ಸುಧಾರಣೆಯಿಂದ, ಎಂದರೆ ನದಿಗೆ ಭವ್ಯ ಪೂಲುಗಳು, ಇರಲು ಸುಂದರ ಪ್ರಾಸಾದಗಳು, ಇಂಥವುಗಳನ್ನು ನಿರ್ಮಿಸಿದ ಮಾತ್ರಕ್ಕೆ ಅಂತಃಕರಣೋದಿತ ಪ್ರೇಮದ ಅವಶ್ಯಕತೆಯು ಎಂದಾದರೂ ಕಡಿಮೆಯಾಗುವದೇ? ವರ್ತಮಾನಪತ್ರಗಳಲ್ಲಿ ದೊಡ್ಡ ಅಕ್ಷರಗಳಿಂದ ತೋರಿಸ

ಲ್ಪಡುವ ಬಾಹ್ಯ ಉಪಚಾರದ ಸಭೆಗಳು, ಭಾಷಣಗಳು, ಕ್ರಾಂತಿವಾದ ಗಳು ಭವ್ಯವಾಗಿ ಕಂಡರೂ ಸತ್ಯಸೃಷ್ಟಿಯಲ್ಲಿ ಪ್ರೇಮಳತೆ, ಐಕ್ಯ ಭಾವದ ವರ್ತನೆ ಇವೇ ಎಲ್ಲಕ್ಕಿಂತ ಹೆಚ್ಚು ಸಮಾಧಾನವನ್ನೊದಗಿ ಸುವವು.

ಸಮುದ್ರವು ಧಡ್ ಧಡ್ ಎಂದು ಬಹು ದೂರ ಕೇಳುವಂತೆ ಕೂಗಿ ಕರೆಯುವದು. ಅಲ್ಲಿ ನೋಡಲು ವಿಪುಲ ಸ್ವಚ್ಛ ನೀರಿನ ಸಂಚಯವೂ ಇರುವದು. ಆದರೆ ಸಮೀಪಕ್ಕೆ ಹೋದವರ ನೀರಡಿಕೆಯನ್ನು ಅದು ದೂರಮಾಡಬಲ್ಲದೋ? ಆದರೆ ಅದೇ ಶಾಂತ ನಿಃಶಬ್ದವಾಗಿ ಝುಳು ಝುಳನೆ ಹರಿಯುವ ಝುರಿಯು ತಾನಲ್ಪನಾಗಿದ್ದರೂ ತನ್ನ ಸ್ವಚ್ಛ ನೀರಿನಿಂದ ನೀರಡಿಕೆಯನ್ನು ತಣಿಸುವದು.

ಹೀಗೆಯೇ ಸುಧಾರಕನ ನಿಯತಪತ್ರಗಳಲ್ಲಿಯು ಮತ್ತು ಸಭೆ ಗಳಲ್ಲಿಯು ಗರ್ಜನೆಯನ್ನು ಕೇಳಿ ತಣಿಯುವ ಆಶೆಯಿಂದ ಅವನ ಹತ್ತಿರ ಹೋದಲ್ಲಿ ಕಷ್ಟಹೊಂದುವದು ನಿಶ್ಚಯವು. ಅವನು ನಿಮ್ಮ ತಪ್ಪುಗಳನ್ನೇ ದೊಡ್ಡವು ಮಾಡಿತೋರಿಸುತ್ತ ನಿಮ್ಮ ಬೆರಳನ್ನೇ ನಿಮ್ಮ ಕಣ್ಣುಗಳಲ್ಲಿ ಆಡಿಸಿದರೆ ಮುಗಿಯಿತು ಅವನ ಕೆಲಸ! ಇಂಥವನಿಂದ ಸುಧಾರಣೆ ಯಾಗದು.

# ಕಾಲ್ಚೆಂಡೆ!

## ( Foot–ball )

ಕಾಲ್ಚೆಂಡೆ! ಓ ಪುಟಿವ ಕಾಲ್ಚೆಂಡೆ, ನಿನ್ನವ-
ಸ್ಥೆಗೆ, ಅಯ್ಯೋ! ಬಗೆಯು ಮರಗುತಲಿಹುದು! ಗುರಿಯಿಲ್ಲ!
ಗತಿಯಿಲ್ಲ! ಸ್ವಂತಜೀವನವಿಲ್ಲ! ಆತ್ಮದುಸಿ-
ರೂ ಇಲ್ಲ! ಆದರೂ ಪುಟಿಯುತಿಹೆ! ಹಾರುತಿಹೆ!
ಏತರ್ಕೆ? ಏತರ್ಕೆ? ಓ ಪರಾಲಂಬಿಯೇ!
ನಿನಗೆ ಜೀವವ ನೀಡಿ, ನಿನ್ನ ಹೊಟ್ಟೆಯ ತುಂಬು-
ತಿಹರೇಕೆ? ಏತರ್ಕೆ? ತಮ್ಮ ಬಲವರ್ಧನಕೆ!
ತಮ್ಮ ಸುಖಸಂತಸಕೆ! ತಮ್ಮ ಗುರಿ ತಲುಪಲ್ಕೆ!

ನೀ ಮಾತ್ರ, ನಿನ್ನ ಪಥಧ್ಯೇಯಗಳ ಅರುಹು-ಪರ-
ವೆಗಳಿರದೆ, ಸಿಕ್ಕಸಿಕ್ಕವರೊದೆತಗಳ ಸಹಿಸು-
ತಲೆಯುತಿಹೆ! ಆ ಹೊಟ್ಟೆಯೊಂದನೇ ನೋಡುತಿಹೆ!
ಆದೊಡೇಂ? ಅವರಾಶ್ರಯವು ತಪ್ಪೆ,......ಅಯ್ಯಯ್ಯೋ!
ನಿನ್ನ ಗತಿಯೇನಹುದು? ಗತಜೀವಿಯಾಗಿ, ಹಾ!
ಬೀಳ್ವೆ ನೀ ಮಣ್ಣಾಗಿ! ಛೀ! ಪರಾಲಂಬನೆಯೆ!

ತಾ॥ ೧೧-೬-೩೮
ಮಧ್ಯರಾತ್ರಿಯಲ್ಲಿ

— ಈಶ್ವರ ಸಣಕಲ್ಲ.

## ಷಟ್‌ಸ್ಥಲಗಳು,

**ವಿವರಣೆಃ** - ಕೆಳಗಿನ ವಚನದಲ್ಲಿ ವಚನಕಾರನು ಷಟ್‌ಸ್ಥಲಗಳ ಸ್ವರೂಪವನ್ನು ವಿವರಿಸಿದ್ದಾನೆ. ಈ ಸ್ವರೂಪವನ್ನು ಅವನು ಇಲ್ಲಿ ನೈತಿಕ ದೃಷ್ಟಿಯಿಂದ ವಿವೇಚಿಸಿದ್ದಾನೆ. ಹೀಗೆ ವರ್ತಿಸದೆ ಇದ್ದ ಜಂಗಮರನ್ನು ಅವನು ಈ ವಚನದ ಕಡೆಯಲ್ಲಿ ಟೀಕಿಸಿದ್ದಾನೆ.

## ವಚನಗಳು.

೨೨. ಅಯ್ಯಾ ಇದ್ದುದ ವಂಚನೆ ಮಾಡದೆ ಇಲ್ಲದುದ ಕಡವ ಮಾಡದೆ ಪರರ ಕಾಡಿ ಬೇಡಿ ತಂದು ದಾಸೋಹವ ಮಾಡದೆ, ತನ್ನ ಬೇಡಿದವರಿಗೆ ಇಲ್ಲೆನ್ನದಿಹುದೇ ಭಕ್ತಸ್ಥಲ. ಜಿಹ್ವೇಂದ್ರಿಯ ಗುಹ್ಯೇಂದ್ರಿಯ ಮೊದಲಾದ ಸಕಲ ಸಂಸಾರ ವಿಷಯದಲ್ಲಿ ಮನ ಮಗ್ನವಾಗದಿಹುದೇ ಮಾಹೇಶ್ವರಸ್ಥಲ. ಲಾಂಛನವ ಧರಿಸಿ ಕಾಂಚನಕ್ಕೆ ಕೈಯ್ಯೊಡ್ಡಿ ಬೇಡುವ ಪಂಚ ಮಹಾಪಾತಕರಲ್ಲಿ ಪಾದೋದಕ ಪ್ರಸಾದವ ತೆಗೆದುಕೊಳ್ಳದಿಹುದೇ ಪ್ರಸಾದಿಸ್ಥಲ. ತನ್ನ ತಾನರಿಯದ ಭಿನ್ನಜ್ಞಾನ ಕ್ರಿಯಿಂದಾಚರಿಸುವ ನರಗುರಿಗಳಿಗೆ ನಮಸ್ಕರಿಸದೆ ಪರಲೋಕದ ಫಲಪದವಿಗಿಚ್ಛೈಸದಿಹುದೇ ಪ್ರಾಣಲಿಂಗಿಸ್ಥಲ. ಇಹಲೋಕದ ಜಡ ಸಂಸಾರಿಗಳ ಸಂಗವ ಜರಿದು ಗುರುಲಿಂಗಜಂಗಮ ಮೂಲವಾದ ಬಾಹ್ಯಕ್ರಿಗಳ ಮರೆದು ಜನನಮರಣಂಗಳಿಲ್ಲದಿಹುದೇ ಶರಣಸ್ಥಲ. ಅರಿಷಡ್ವರ್ಗಂಗಳ ತೊರೆಯದ ಷಡ್ವಿಧ ಲಿಂಗಾಂಗಸಮರಸವನರಿಯದ ಮಂಗಹೊಲೆ ಮಾದಿಗರ ಸಂಗವ ತೊರೆದು ತಾನಿದಿರೆಂಬುದನರಿಯದೆ ಇಹುದೇ ಐಕ್ಯಸ್ಥಲ. ತಾನಾಗಿ ಕೊಟ್ಟರೆ ಹಿಡಿವುದೇ ಮಧ್ಯಮ ಗುರುಸ್ಥಲ. ಕೊಟ್ಟರೂ ಹಿಡಿಯದಿಹುದೇ ಪರಮ ವಿರಕ್ತಿಸ್ಥಲ. ಕಾಡಿ ಬೇಡುವದೇ ಕಿರಾತಸ್ಥಲ. ಇಂತೀ ನವವಿಧಸ್ಥಲವ ಹರಗುರುವಾಕ್ಯ ಪುರಾತನರ ವಚನ ಪ್ರಮಾಣದಿಂದ ವಿಚಾರಿಸಿ, ಪುರಾತನರ ಕವಳಿಕೆಗೆ ಯೋಗ್ಯವಾದ ಸ್ಥಲವನಂಗಂಗೊಂಡ ಪರಿಣಾಮಿ, ನಿರುಪಾಧಿ, ಪರಿಪೂರ್ಣ, ಎಂಬ ತ್ರಿವಿಧ ಜಂಗಮಲಿಂಗದ ತೀರ್ಥ ಪ್ರಸಾದವನಂಗೀಕರಿಸಿ, ಪುರಾತನರ ಕವಳಿಕೆಗೆ ಅಯೋಗ್ಯವಾದ ಸ್ವಯ, ಚರ, ಪರವೆಂಬ ತ್ರಿವಿಧ ಗುರುಗಳಲ್ಲಿ ತೀರ್ಥ ಪ್ರಸಾದವನುಳಿದಾಚರಿಸುವದು ನಿರ್ವಯಲ ಪದವನೈದುವದು ಬಸವಾದಿ ಪ್ರಮಥರಿಗಲ್ಲದೆ, ಭಿನ್ನ ಜ್ಞಾನಿಗಳಿಗೆಲ್ಲಿಯದೋ ಸದಾಶಿವಮೂರ್ತಿ ಲಿಂಗವೇ ?

## ಭಕ್ತಸ್ಥಲ.

**ವಿವರಣೆಃ**— ನೈತಿಕಾಚರಣೆಯೇ ಭಕ್ತಸ್ಥಲದ ಮುಖ್ಯ ಲಕ್ಷಣ ವಾಗಿರುತ್ತದೆ. ಈ ಸ್ಥಲದಲ್ಲಿ ವಚನಕಾರರು ನೀತಿಯಿಂದ ನಡೆಯಬೇಕೆಂದು ಅನೇಕ ಬಗೆಯಾಗಿ ಹೇಳುವದುಂಟು. ವರ್ತನೆ ಶುದ್ಧವಾಗಿರಬೇಕು, ಮನಸ್ಸನ್ನು ಬಿಗಿಹಿಡಿಯಬೇಕು, ಮಾಯೆಗೆ ಬಲೆ ಬೀಳಬಾರದು, ನೀತಿಯಿಂದ ವರ್ತಿಸುವದರಿಂದಲೇ ಜ್ಞಾನವು ಪ್ರಾಪ್ತವಾಗುತ್ತದೆ, ಜಂಗಮರ ಕೂಡ ನೀತಿಯಿಂದ ವರ್ತಿಸಬೇಕು ಎಂದು ಮೊದಲಾಗಿ ಈ ಸ್ಥಲದಲ್ಲಿ ಅವರು ಯಾವಾಗಲೂ ಒತ್ತಿ ಹೇಳುವದುಂಟು. ಅರುವಿನ ಮಾರನು ಕೆಳಗಿನ ವಚನಗಳಲ್ಲಿ ಈ ವಿಷಯವನ್ನೇ ಹೇಳಿರುವನು.

### ವಚನಗಳು.

೨೩. ಕನ್ನಡಿಯಲ್ಲಿ ಕಪ್ಪು ಹುಟ್ಟಿದಾಗ ಕಪ್ಪ ಕಳೆದಲ್ಲದೆ ಒಪ್ಪವ ಕಾಣಬಾರದು. ತನ್ನ ಭಾವಶುದ್ಧಕ್ಕೆ ದರ್ಪಣದೊಪ್ಪವನರಸಬೇಕು. ಎನ್ನ ಮನದ ಕಪಟ ನಿಮ್ಮಯ ಚಿತ್ತಶುದ್ಧವನರಸಬೇಕು. ನಿಮ್ಮಯ ನಿರ್ಮಲ ಎನ್ನಯ ಮಲದೇಹವ ತೊಳೆಯಬೇಕು. ಅರುವಿನ ಮಾರನ ಬಿನ್ನಹ. ಸದಾಶಿವಮೂರ್ತಿ ಲಿಂಗಕ್ಕೆ ತೆರಪಿಲ್ಲದ ಭಾವ.

೨೪. ಕಾಯದ ಕಕ್ಕುಲಿತೆಗಾಗಿ ಜೀವಿಗಳ ಬಾಗಿಲವ ಕಾಯದೆ, ಈಷಣತ್ರಯಕ್ಕಾಗಿ ಭವದುಃಖಗಳ ಬಾಗಿಲಲ್ಲಿ ನಿಂದು ವೇಳೆಯ ಕಾವಂಗೆ ಬ್ರಹ್ಮದ ಮಾತೇಕೆ? ಅದು ನಾಣ್ನುಡಿಗಳೊಳಗಾಗು, ಸದಾಶಿವಮೂರ್ತಿ ಲಿಂಗಕ್ಕೆ ಹೊರಗು.

೨೫. ಒಂದಾಶೆಯ ಕುರಿತು ಸರ್ವಮಾತಿಂಗೊಡಲಾಯಿತ್ತು. ಒಂದಾಶೆಯನರಿತು ನಿಂದಡೆ ಈಶ ಮೂರ್ತಿ ತಾನಾಗಿಪ್ಪ. ಇಂತೀ ಉಭಯದಾಶೆಯಲ್ಲಿ ಗಾಸಿಯಾಗುತ್ತ ಮಾತಿನ ಮಾಲೆ ಬೇಡ. ಆಶೆಯ ಪಾಶ ಹರಿದು ಈಷಣತ್ರಯವ ಕಿತ್ತು, ನಿರ್ಜಾತನಾಗಿರ್ದಲ್ಲಿ ಸದಾಶಿವಮೂರ್ತಿಲಿಂಗವು ತಾನೇ.

೨೬. ಭಕ್ತಿಹೀನನರಿದು ಭಕ್ತಿಯ ಮಾಡುವಲ್ಲಿ ಗುರುಲಿಂಗ ಜಂಗಮದ ಇರವ ಸಂಪಾದಿಸಲಿಲ್ಲ. ಭಕ್ತಿಯುಳ್ಳವನರಿದು ಭಕ್ತಿಯ ಮಾಡುವಲ್ಲಿ ಗುರುವಿನಲ್ಲಿ ಗುಣವನರಸಬೇಕು. ಲಿಂಗದಲ್ಲಿ ಲಕ್ಷಣವನರಸಬೇಕು.

ಜಂಗಮದಲ್ಲಿ ವಿರಕ್ತಿಯನರಸಬೇಕು. ಅದೆಂತೆಂದೊಡೆ, ಇಂತೀ ತ್ರಿವಿಧವು ತನ್ನಯ ಪ್ರಾಣವಾದ ಕಾರಣ. ಪರುಷ ಶುದ್ಧವಾಗಿಯಲ್ಲದೆ ಲೋಹದ ಕುಲವ ಕೆಡಿಸಲರಿಯದು. ತಾ ಹಿಡಿದು ಆರಾಧಿಸುವ ವಸ್ತು ಶುದ್ಧವಾಗಿಯಲ್ಲದೆ ಪೂಜಿಸುವ ಭಕ್ತನ ಚಿತ್ತ ಶುದ್ಧವಾಗಲರಿಯದು. ಸದಾಶಿವ ಮೂರ್ತಿ ಲಿಂಗ ಶುದ್ಧವಲ್ಲದೆ ಎನ್ನಂಗ ಶುದ್ಧವಲ್ಲ.

೨೭. ಬಚ್ಚಿಟ್ಟ ಬಯಕೆಯನೊಡೆಯ ಬೇಡಿದಡೆ ಕೊಡದಿರ್ದಡೆ ಸ್ವಾಮಿದ್ರೋಹವಲ್ಲವೇ? ಅಟ್ಟಡಿಗೆಯ ಪತಿಗೆ ಇಕ್ಕದೆ ಸತಿಯುಂಡಡೆ ನೆಟ್ಟನೆ ಕಳವೆಯಲ್ಲವೇ? ಕೊಟ್ಟಾತನೊಡವೆಯ ಬೇಡಿದಡೆ ಕಟ್ಟಿ ಹೋರುವ ಕಷ್ಟ ಜೀವಿಗೇಕೆ ತ್ರಿವಿಧಭಕ್ತಿ, ಸಜ್ಜನಯುಕ್ತಿ? ಇಂತೀ ಸಜ್ಜನ ಕಳ್ಳರ ಬಲ್ಲನಾಗಿ, ಸದಾಶಿವ ಮೂರ್ತಿಲಿಂಗವು ಒಲ್ಲನು.

೨೮. ಸಕಲವನರಿವಡೆ ಮಲತ್ರಯನಾಸ್ತಿಯಾಗಿರಬೇಕು. ಅರಿತು ನಿಂದುದಕ್ಕೆ ಮುಖ್ಯ. ವೃತ್ತಿಕೆಯ ಕೂಡಿದ ಜಲವಾರದಿರ್ದಡೆ ಪಂಕದೋರುವಂತೆ, ಏನನರಿತು ನುಡಿದಡೂ ಕುಲ ಛಲ ಮಲ ನಾಸ್ತಿಯಾಗಿರಬೇಕು ಸದಾಶಿವಮೂರ್ತಿ ಲಿಂಗವನರಿವುದಕ್ಕೆ.

೨೯. ಮೊನೆ ತಪ್ಪಿದಲಗಿನ ಘನವೇನನೂ ಮಾಡದು. ಅರಿವು ಹೀನವಾದಲ್ಲಿ ಕ್ರಿಯೆ ಹರವರಿ ಏನನೂ ಮಾಡದು. ವರ್ತನ ಶುದ್ಧವಿಲ್ಲದೆ ಲಾಂಛನದುತ್ಕೃಷ್ಟತೆ ಏನನೂ ಮಾಡದು. ತ್ರಿಕರಣ ಶುದ್ಧವಿಲ್ಲದ ಮಾಟ ದ್ರವ್ಯದ ಕೇಡು ಭಕ್ತಿಗೆ ಹಾನಿ. ಇಂತೀ ಗುಣಾದಿಗುಣಂಗಳಲ್ಲಿ ಅರಿಯಬೇಕು. ಸದಾಶಿವ ಮೂರ್ತಿ ಲಿಂಗವನರಿಯಬೇಕು.

೩೦. ನಿಕ್ಷೇಪವ ನಿಕ್ಷೇಪಿಸುವಲ್ಲಿ ಮತ್ತಾರು ಅರಿಯಬೇಕೆಂಬುದಿಲ್ಲ. ಶಿವಪ್ರಸಂಗವನೊಂದ ನುಡಿಯಲಾಗದು. ಮೀರಿ ನುಡಿದನಾವಡೆ ಸದಾಶಿವಮೂರ್ತಿ ಲಿಂಗಕ್ಕೆ ದೂರ.

೩೧. ಅನುವನರಿವನ್ನಕ್ಕಾಚರಣೆ. ಪುಣ್ಯವನರಿವನ್ನಕ್ಕ ಪೂಜೆ. ಶರೀರವುಳ್ಳನ್ನಕ್ಕ ಸುಖದುಃಖ. ಸಂತೋಷಿಸಬೇಕು. ತೆಪ್ಪದಲ್ಲಿ ನಿಂತು ಹೊಳೆಯ ದಾಂಟುವನಂತೆ ಕ್ರಿಯಾಶುದ್ಧವಾದಲ್ಲಿ ಜ್ಞಾನದ ಗೊತ್ತು ಸದಾಶಿವಮೂರ್ತಿ ಲಿಂಗವನರಿವುದಕ್ಕೆ.

೩೨. ಬ್ರಹ್ಮಂಗೆ ಸರಸ್ವತಿಯಾಗಿ ಕಾಡಿತ್ತು ಮಾಯೆ. ವಿಷ್ಣುವಿಂಗೆ ಲಕ್ಷ್ಮಿಯಾಗಿ ಕಾಡಿತ್ತು ಮಾಯೆ. ರುದ್ರಂಗೆ ಉಮಾದೇವಿಯಾಗಿ ಕಾಡಿತ್ತು ಮಾಯೆ. ಎನಗೆ ನಿಮ್ಮನರಿವ ಬಯಕೆ ಭಾವ ಮಾಯೆಯಾಗಿ ಕಾಡುತ್ತಿದೆ. ನೀ ನಾ ಉಳ್ಳನ್ನಕ್ಕ ಉಭಯವು ಮಾಯವಾಗಿದೆ. ಸದಾಶಿವಮೂರ್ತಿಲಿಂಗವು ನಾ ನೀನೆಂಬುದೇ ಮಾಯೆ.

೩೩. ಕಾಳೋರಗನ ಹೆಡೆಯ ಮಧ್ಯದೊಳೊಂದು ಕೊಳು ಸಿಕ್ಕ ಹೆಣ್ಣು ಕಾಲುಮೇಲಾಗಿ ತಲೆ ಕೆಳಗಾಗಿ ಅರುಹರನೆಲ್ಲರ ತನ್ನ ಕಾಲ ಸಂದಿಯಲ್ಲಿರಿಸಿ ಭಾಳಾಂಬಕನ ಲೀಲೆಯ ಹೊತ್ತಾಡುವರನೆಲ್ಲರ ತನ್ನ ಶುಕ್ಲದ ಪದರಿನಲಿ ಬೈಚಿಟ್ಟು ಇದ್ದಾಳೆ. ಆ ಹೊಲೆಯ ಹರಿವಲ್ಲದಾಗದು ಸದಾಶಿವಮೂರ್ತಿ ಲಿಂಗವನರಿವುದಕ್ಕೆ.

೩೪. ಮತಿಯಿಂದ ಕಾಂಬುದು ಚಿತ್ತದ ಹಂಗು. ಪೂಜೆಯಿಂದ ಕಾಂಬುದು ಪುಣ್ಯದ ಹಂಗು. ಉಭಯವನಳಿದು ಕಾಂಬುದಕ್ಕೆ ಚಿತ್ತವೆಂಬುದಕ್ಕೆ ಗೊತ್ತಿಲ್ಲ. ಏನು ಏನು ಬಾರದುದಕ್ಕೆ ಸದಾಶಿವಮೂರ್ತಿ ಲಿಂಗವನರಿವುದಕ್ಕೆ ಠಾವ ಹೇಳಾ.

೩೫. ಭಕ್ತ ಗುರುಚರನ ನುಡಿವಲ್ಲಿ ನೋವುಂಟೇ ಅಯ್ಯ? ಪುರುಷ ಕಳ್ಳನಾದಲ್ಲಿ ಸತಿಗೆ ಸೆರೆಯುಂಟಲ್ಲದೆ ಸೂಳೆಯ ಮಿಂಡ ಸತ್ತರೆ ಅವಳನಾರು ಸೆರೆಯ ತೆಗೆವರುಂಟೇ ಅಯ್ಯ? ಸಜ್ಜನ ಸದ್ಭಕ್ತನೆಂದಡೂ ಸದಾಶಿವಮೂರ್ತಿ ಲಿಂಗಕ್ಕೆ ಒಳಗು.

೩೬. ಯತಿಗು ಗುಣದ್ವೇಷ, ಶಾಸ್ತ್ರ ಗುಣದ್ವೇಷ, ಆಚಾರ ಗುಣದ್ವೇಷ. ಸಮತೆ ಶಾಂತಿ ಗುಣದಲ್ಲಿ ನಿಂದು ವಿರಕ್ತಿ ಗುಣದ್ವೇಷ. ಇಂತೀ ದ್ವೇಷಮಂ ಬಿಟ್ಟು ಸ್ವಯಂಭುವಾಗಿ ನಿಂದುದು ಸದಾಶಿವಮೂರ್ತಿ ಲಿಂಗವು ತಾನೇ.

೩೭. ಶಿವಭಕ್ತನಾಗಿ ಮುಂದೆ ಬಂದು ಶಿವಜಂಗಮವಾಗಿ ಕರ್ತೃರೂಪ ತಾಳಿ ಹಿಂದುಳಿದ ಬಂದ ಉಭಯವು ಒಂದಾಗಿ ಜಗಹಿತಾರ್ಥವಾಗಿ ಬಂದಂದು ಸದಾಶಿವಮೂರ್ತಿ ಲಿಂಗವು ತಾನೆ.

## ಮಹೇಶಸ್ಥಲ.

**ವಿವರಣೆ:** — ಧೈರ್ಯ ಸ್ಥೈರ್ಯಾದಿಗಳುಳ್ಳವನೇ ಮಹೇಶ್ವರನು. ಆವನಲ್ಲಿ ಸಂದೇಹವೆಂಬುದಿಲ್ಲ. ಭಾಷೆಗೆ ತಪ್ಪನು. ಅತ್ಯಂತ ನೇಮಸ್ಥ ನಾಗಿರುವನು. ದೃಢಚಿತ್ತವುಳ್ಳವನಾಗಿರುವನು.

## ವಚನಗಳು.

೩೮. ಕುಂಭಕ್ಕೆ ಜಲವ ತುಂಬುವಲ್ಲಿ ಶೋಧಿಸಿದಲ್ಲದೆ ಶುದ್ಧವಿಲ್ಲ. ತಾ ಭುಂಜಿಸುವ ದ್ರವ್ಯಕ್ಕೆ ಕಲ್ಲು, ಕಡ್ಡಿ, ಮುಳ್ಳು ಮೊದಲಾಗಿ ಶೋಧಿಸಿ ಕೊಂಡಲ್ಲದೆ ಶುದ್ಧವಿಲ್ಲ. ಕಂಡು ಕೊಳಬಹುದೇ? ಇಂತಿದನರಿತು ಸಂದೇಹ ದಲ್ಲಿ ಮಾಡುವ ಭಕ್ತಿ ಅಂಧಕ ಕಣ್ಣು ಹೊಸೆದಂತಾಯಿತ್ತು. ಸಂದೇ ಹವ ಬಿಟ್ಟಲ್ಲಿ ಅದು ನಿನ್ನಂಗ, ಸದಾಶಿವಮೂರ್ತಿ ಲಿಂಗದ ಸಂಗ.

೩೯. ಕ್ಷೀರಕ್ಕೆ ವಾರಿಯುಳ್ಳರತಲ್ಲದೆ ಮಧುರ ಗುಣವಿಲ್ಲ. ಶರೀರ ವಿಡಿದಿದ್ದ ಲಿಂಗಕ್ಕೆ ಆಸೆಯುರತು ರೋಷ ಹಿಂಗಿ ಈಷಣತ್ರಯವನರಿದು ಈಶನ ವೇಷದ ಭಾಷೆಗೆ ತಪ್ಪದಿಪ್ಪುದು ಗುರುಚರಮತ ಸದಾಶಿವ ಮೂರ್ತಿಲಿಂಗವನರಿವುದಕ್ಕೆ.

೪೦. ಮುನ್ನವೇ ಮೂರ ಹರಿದು, ಗುರು ಚರ ತಾನಾಗಿ ಬಂದಲ್ಲಿ ಇನ್ನು ಮೂರರಾಶೆ ಏಕೆ? ಆವ ಜೀವಿಯೂ ತಮ್ಮ ಮಲವ ತಾವು ಮುಟ್ಟವಾಗಿ ಬಿಟ್ಟುದ ಓಡಿವ ಮಿಟ್ಟಿಯು ಭಂಡರನೊಪ್ಪ. ಸದಾ ಶಿವಮೂರ್ತಿಲಿಂಗವು ನಿರ್ಧಾರವಿಲ್ಲದವರನೊಲ್ಲ.

(೪೧) ಅರಿವಾಗ ಆ ತನುವಿನಲ್ಲಿದ್ದೇ ಅರಿಯಿತ್ತು. ಮರೆವಾಗ ಆ ತನುವಿನಲ್ಲಿದ್ದೇ ಮರೆಯಿತ್ತು. ಅರಿವು ಮರವೆ ಎರಡಾಯಿತ್ತು. ಉಭಯವ ತಾನಳಿದ ಘಟ ಒಂದಾಯಿತ್ತು. ಇಂತೀ ಭೇದ ವಿಷದ ಬೇರಿನಂತೆ. ಸಂಚಾರದೊಳಗಾದುದು ವಿಷಮಯವಾಯಿತ್ತು. ಗೋಪ್ಯ ಕ್ಕೊಳಗಾದುದು ಅಮೃತಮಯವಾಯಿತ್ತು. ಇಂತೀ ಸಂಚಾರವುಳ್ಳ ನ್ನಕ್ಕ ಸಂಚಿತಕರ್ಮ, ಸಂಚಾರ ನಿಲೆ ಸದಾಶಿವಮೂರ್ತಿ ಲಿಂಗವು ತಾನೇ.

೪೨. ಎನ್ನ ಮಡದಿ ಹಾಲ ಕಾಸುವಾಗ ಹಾಲಿನ ಕುಡಿಕೆಯುಲ್ಲಿ ಹಾವು ಬಿದ್ದು ಸತ್ತಿತ್ತು. ಎನ್ನ ಭಾಷೆ ನೆಟ್ಟಿತ್ತು. ಮಡದಿಯು ಬಿಡ

ಬಾರದು. ಹಾಲ ಚೆಲ್ಲಬಾರದು. ಹಾವಿನ ವಿಷ ಹಾಲಿನಲ್ಲಿಯೇ ಸೋರಿತ್ತು. ಅದಕ್ಕಿನ್ನಾವುದು ತೆರ? ಕ್ರಿಯೆಯ ಬಿಡಬಾರದು. ಅರು ಹಿಂಗಾಶ್ರಯವಿಲ್ಲ. ಅರಿವ ನರಿದಿಹೆನೆಂದಡೆ ಪ್ರಪಂಚಕ್ಕೆ ಒಡಲಾಯಿತ್ತು. ಹುಲಿ ಬಾಯಿ ಹಾವಿನ ಹೆಡೆಯನಿಕ್ಕಿದ ತೆರ ಎನಗಾಯಿತ್ತು. ಈ ಸಂದೇಹವ ಬಿಡಿಸು ಸದಾಶಿವಮೂರ್ತಿಲಿಂಗವೇ ನಿಮ್ಮ ಧರ್ಮ.

೪೩. ವೇದಪಾಠಕ ಶಾಸ್ತ್ರವಿತ್ತು. ಪುರಾಣ ಬಹು ಶೃತಿವಂತ ವಾಚಕಾಡಂಬರ. ಭೇದಕ ಸಂಸ್ಕೃತ, ಪ್ರಾಕೃತ, ಅಪಭ್ರಂಶ ದೇಶಿಕವು ಈ ಮೊದಲಾದ ವಾಚಕ ಚಾರ್ವಾಕ ಮುಖಗಳಿಂದ ಹೋರುವ ಮಾಯಾ ವಾದದ ತೆರನಲ್ಲ. ಮೂಲಿಕಾಸಿದ್ಧಿ, ರಸಸಿದ್ಧಿ, ಅಂಜನಸಿದ್ಧಿ, ಅದೃಶ್ಯ ಕರಣ, ಕಾಯಸಿದ್ಧಿ ಇಂತೀ ಕುಟಿಲಂಗಳಿಗತಿರೇಕ ಅಗೋಚರ ಅಪ್ರ ಮಾಣ. ಅಂಗಲಿಂಗ ಸಂಬಂಧವಾದ ಶರಣನಿರವು ಎಂತೆಂದೊಡೆ, ಅನಿಲ ಮುಟ್ಟದ ಕಂಪಿನಂತೆ, ಶೃತಿ ಮುಟ್ಟದ ಕಡ್ಡಿಯಂತೆ, ಕೈ. ಮುಟ್ಟದ ಗತಿಯಂತೆ, ನೆಯಿ ಮುಟ್ಟದ ದುಗ್ಧದಂತೆ, ಪವನ ಮುಟ್ಟದ ಪರ್ಣದಂತೆ, ಭಾವ ಭ್ರಮೆಯೊಳಗಿರ್ದು ಇಲ್ಲದ ಶರಣನ ಇರವು ಸದಾಶಿವಮೂರ್ತಿ ಲಿಂಗದಿರವು ತಾನೇ.

೪೪. ಕುರಿಯೊಡೆಯ ಹಲವರ ನಡುವೆ ನಿಂದರೆ ತನ್ನೊಡೆಯನ ನರಿವಂತೆ ಸಕಲೇಂದ್ರಿಯ ಬಹು ದುಃಖದಲ್ಲಿದ್ದರೂ ತತ್ತತ್ ಕಾಲಾ ರ್ಚನೆ ನೇಮ ಕೃತ್ಯ ತಪ್ಪದೆ ಮಾಡಬೇಕು. ಇದು ನಿಶ್ಚಯದಿರವು ಸದಾಶಿವ ಮೂರ್ತಿಲಿಂಗವನರಿವುದಕ್ಕೆ.

೪೫. ಉಂಟೆಂಬ ದೃಢವಿಲ್ಲೆಂಬ ಸಂದೇಹ ತನ್ನಲ್ಲಿ ತೋರಿ ಅಳಿವುತ್ತಿಪ್ಪ ಜೇಧವನರಿತಂಗೆ ಮಲತ್ರಯ ನಾಸ್ತಿ ಸದಾಶಿವ ಮೂರ್ತಿ ಲಿಂಗವನರಿತಡೆ.

೪೬. ಹರಿವ ಹಾವಿಂಗೆ ಕಾಲ ಕೊಟ್ಟು, ಉರಿವ ಕಿಚ್ಚಿಂಗೆ ಕೈಯ್ಯ ನಿಕ್ಕಿ, ಅರಿವಾಯುಧಕ್ಕೆ ಕೊರಳ ಕೊಟ್ಟು, ಮತ್ತೆಂತೋ ಅರುಹಿರಿಯ ರಾದಿರಿ? ಮುಂದಕ್ಕಾತನನರಿಯ ಬಲ್ಲಡೆ ಹೇವ ಚಿತ್ತವ ನಿಲಿಸಿ, ಕುದಿವ ಆಶೆಯ ಕೆಡಿಸಿ, ಸರ್ವ ವ್ಯಾಪಾರವೆಂಬ ಗೊತ್ತಿಗೆ ಚಿತ್ತವನಿಕ್ಕದೆ, ನಿಶ್ಚಯ ವಾಗಿ ನಿಂದುದು. ಆತನಿರವೇ ಸದಾಶಿವ ಮೂರ್ತಿಲಿಂಗವು ತಾನೇ.

೪೭. ಉಂಟಿಲ್ಲೆಂಬುದನರಿತು ಸುಡಿವುದು ಕ್ರಿಯೆಯೋ, ನಿಃಕ್ರಿಯೆಯೋ? ಇವೆಲ್ಲವನರಿತು ನುಡಿವುದು ಘಟದೊಳಗಣ ಮಾತಲ್ಲವೇ? ಆದು ಮಾಯಾವಾದದಿರವು. ಭಾವ ಕಾಯದಲ್ಲಿ ಸಿಕ್ಕ ಸಕಲವನೊಡಗೂಡಿ ಭೋಗಂಗಳನುಣುತ ತಾನಲ್ಲವೆಂಬ ಮಾಯಾವಾದಿಗಳ ಮಾತು ಕನ್ನದ ಬಾಯಲ್ಲಿ ಸಿಕ್ಕಿದ ಕಳ್ಳನ ಬಾಯುಲಿಯಂತೆ ಬಲ್ಲವರು ಮಚ್ಚುವರೇ? ಶರೀರವುಳ್ಳನ್ನಕ ಪ್ರಾಣಯುಕ್ತನಾಗಬೇಕು. ಇದೇ ನಿಶ್ಚಯ ಸದಾಶಿವ ಮೂರ್ತಿಲಿಂಗವನರಿವುದಕ್ಕೆ.

## ಪ್ರಸಾದಿಸ್ಥಲ.

**ವಿವರಣೆ:—** ಮನುಷ್ಯನು ಪದಾರ್ಥಗಳನ್ನು ಲಿಂಗಕ್ಕೆ ಅರ್ಪಿಸಿ ಉಪಭೋಗಿಸಬೇಕು. ಇದರಿಂದ ಅವನ ಕರ್ಮಗಳು ಕೆಡುವುವು. ಅವನು ಲೋಕದಲ್ಲಿ ಇದ್ದರೂ ಇಲ್ಲದಂತೆ ಇರುತ್ತಾನೆ.

## ವಚನಗಳು.

೪೮. ಕಾಳಿಯ ಕಣ್ಣು ಕಿತ್ತು ಏಡಿಯ ಸರ್ವಾಂಗವ ಸೀಳಿ ಅಚ್ಚ ಬೆಳ್ಳಗೆಯ ಹಾಲ ನಿಶ್ಚಯದಲ್ಲಿ ತೆಗೆದು ತೃಪ್ತಿಯಾಗಿ ಕೊಳಬಲ್ಲಡೆ ಆತನೇ ಸದಾಶಿವ ಮೂರ್ತಿಲಿಂಗವು.

ಟೀಕು:— ಶಿವಜ್ಞಾನೋದಯವಾದ ಶರಣನು ಅಜ್ಞಾನ ಸ್ವರೂಪಿಣಿಯಾದ ಮಾಯೆಯ ಭಿನ್ನಜ್ಞಾನವ ನಿವೃತ್ತಿಯ ಮಾಡಿದನೆಂಬುದೀಗ ಕಾಳಿಯ ಕಣ್ಣು ಕಿತ್ತು ಎಂಬ ಶಬ್ದಕ್ಕರ್ಥ. ಅಂತು ಮಾಯಾ ಸಂಬಂಧವಾದ ಖಂಡಿತ ಜ್ಞಾನವಳಿಯಲು ನಾನು ದುಶ್ಚರಿತ್ರವನುಳ್ಳ ಮನಸ್ಸಿನ ಪ್ರಕೃತಿಭಾವವ ನಿವೃತ್ತಿಯ ಮಾಡಿದನೆಂಬುದೀಗ ಏಡಿಯ ಸರ್ವಾಂಗವ ಸೀಳಿ ಎಂಬ ಶಬ್ದಕ್ಕರ್ಥ. ಅಂತು ಮನವಳಿಯಲು ಮಲತ್ರಯಂಗಳು ಹೊದ್ದದೆ ನಿರ್ಮಲಸ್ವರೂಪವಾದ ಜ್ಞಾನಶಕ್ತಿಯ ಮಧ್ಯದಲ್ಲಿರ್ಪ ಪರಮಾಮೃತ ರಸವನು ಸ್ವಾನುಭಾವ ಉಪಾಯ ತಂತ್ರದಿಂ ಕರೆದುಕೊಂಡು ಸರ್ವಾಂಗದಲ್ಲಿ ಧರಿಸಿ ಆ ಲಿಂಗಸುಖ ಪ್ರಸನ್ನ ಪ್ರಸಾದವ ಸ್ವೀಕರಿಸಬಲ್ಲಾತನೇ ಪರಶಿವ ಸ್ವರೂಪನೆಂಬುದೀಗ ಅಚ್ಚ ಬೆಳ್ಳಗೆಯ ಹಾಲ ನಿಶ್ಚಯದಲ್ಲಿ ತೆಗೆದು ತೃಪ್ತಿಯಾಗಿ ಕೊಳಬಲ್ಲಡೆ ಆತನೇ ಸದಾಶಿವ ಮೂರ್ತಿ ಲಿಂಗವು ಎಂಬ ಶಬ್ದಕ್ಕರ್ಥ.

೪೯. ಬಂಟನೊಡೆಯನೊಡನೆಯುಂಡಲ್ಲಿ ದಾಸತನವಳಿಯಿತ್ತು. ನೀ ಮರೆದು ಮಲಗಿರ್ದು ಸ್ವಪ್ನವ ಕಾಂಬಲ್ಲಿ ಲಿಂಗದ ಕೂಟವೆಲ್ಲಿದ್ದಿತ್ತು? ನೀ ಸ್ತ್ರೀ ಸಂಭೋಗವ ಮಾಡುವಲ್ಲಿ ಲಿಂಗ ನಿನ್ನಲ್ಲಿ ಸಹಗೂಡಿದ್ದ ಠಾವಾವುದು? ಸಾಕು ಅರ್ಥಿಕಾರರ ಹೊತ್ತುಹೋಕಿನ ಅರ್ಪಿತಲಿಂಗವಂಗದಿಂದ ಹಿಂಗಿದಾಗಲೇ, ಸ್ವಪ್ನದ ಅರ್ಪಿತ. ಮರವೆಯ ಮುಟ್ಟದ ಅರ್ಪಿತವಿದು. ನಿಶ್ಚಯವಲ್ಲ. ಸದಾಶಿವಮೂರ್ತಿ ಲಿಂಗಕ್ಕೆ ಹೊರಗು.

ಶ್ರೀ

# ಶಿವಾನುಭವ

ಸಂಪುಟ ೧೨ ] ಜುಲೈ ೧೯೩೮. [ ಸಂಚಿಕೆ ೧೦

## ವಿಷಯಾನುಕ್ರಮಣಿಕೆ.

# ಶಿವಾನುಭವ.

ವರ್ಷ ೧೨] ಜುಲೈ ೧೯೩೮ [ಸಂಚಿಕೆ ೧೦

## ವಚನ ಸಾಹಿತ್ಯದಲ್ಲಿ ಸ್ತ್ರೀಯರ ಸ್ಥಾನ.

(ಲೇಖಕ:— ಸದಾಶಿವಪ್ಪ ತೆನಿಹಳ್ಳಿ ವೀರಶೈವ ಸಾಹಿತ್ಯ ಮಂಡಳ ವಿಜಾಪುರ)

ಮಾನವ ಜೀವನದಲ್ಲಿ ಸತ್ಯಯುಗದ ಸಮೃದ್ಧಿಸಾಮರಸ್ಯಗಳು ಒಡಮೂಡಬೇಕಾದರೆ ಹೊರಗಿನ ಯಾವ ಮಾರ್ಪಾಡುಗಳಿಂದಲೂ, ಅದು ಸಾಧ್ಯವಿಲ್ಲ. ಅದು ಅಂತರಂಗದ ಆಧ್ಯಾತ್ಮ ಕ್ಷೇತ್ರದ ವಿಕಾಸದಿಂದಲೇ ಸಾಧ್ಯ ಎಂಬ ಅರವಿಂದ ಯೋಗಿಗಳ ಉಕ್ತಿಯಂತೆ ಇಂಥ ಆತ್ಮವಿಕಾಸದ ಅನುಭಾವಿಗಳೆಂದರೆ ಸಾಹಿತಿಗಾರರು. ನಿಜವಾದ ಸಾಹಿತಿಯು ಎರಡು ಸ್ಥಳಗಳಲ್ಲಿ ವಾಸಮಾಡುತ್ತಾನೆ. ಒಂದು ಆಂತರಂಗಿಕ ಜಗತ್ತು ಮತ್ತೊಂದು ಬಾಹ್ಯ ಜಗತ್ತು. ಈ ಎರಡೂ ಜಗತ್ತಿನ ಅನುಭವಗಳನ್ನು ತನ್ನ ಹೃದಯ ದರ್ಪಣದ ಮೇಲೆ ಬಿಂಬಿಸಿ ಅದರಿಂದ ಹೊರಟ ಒಂದು ರಸಾನಂದವನ್ನು ಪಾನಮಾಡಿಸುವದೇ ಸಾಹಿತಿಯ ಕರ್ತವ್ಯ.

### ವಚನ ಸಾಹಿತ್ಯದಲ್ಲಿ ಸ್ತ್ರೀಯರ ಪ್ರವೇಶ.

ಕಾಲಮಾನ ಪರಿಸ್ಥಿತಿಗನುಸರಿಸಿ ಆಯಾ ಕಾಲದ ಜನಾಂಗದ ಜೀವನದೊಳಗೆ ಒಂದು ಸಾಹಿತ್ಯವು ಇದ್ದೇ ಇರುತ್ತದೆ. ಆ ಪ್ರಕಾರ ೧೨ನೇ ಶತಮಾನದ ಕಾಲದಲ್ಲಿ ನಮ್ಮ ಹಿಂದುಸ್ತಾನದಲ್ಲಿ ಅನೇಕ ಸಾಹಿತ್ಯಗಳು ನೆಲೆಗೊಂಡಿದ್ದವು. ಮುಖ್ಯವಾಗಿ ನಮ್ಮ ಕರ್ನಾಟಕದಲ್ಲಿ ಜೈನರು, ಬ್ರಾಹ್ಮಣರು, ವೀರಶೈವರು, ಸಾಹಿತ್ಯ ಸೇವೆಯನ್ನು ಮಾಡಿದವರು. ಜೈನರು ಕನ್ನಡದಲ್ಲಿ ಸಾಹಿತ್ಯ ಸೇವೆಯನ್ನು ಮಾಡಿದವರಾದರೂ ಅವರ ಸಾಹಿತ್ಯವು ಪಾಮರರಿಗಾಗಿ ಉಪಯೋಗವಾಗದೆ ಪಂಡಿತ

ಜನರ ವಿಷಯವಾಯಿತು. ಇದರಿಂದ ಜೈನ ಸಾಹಿತ್ಯವು ಆಗಿನ ಕಾಲದ ರಾಜರ ಮತ್ತು ಧನವಂತರ ಬಲೆಗೆ ಸಿಕ್ಕು ತನ್ನ ಸ್ವತಂತ್ರ್ಯತೆಯನ್ನು ಕಳೆದುಕೊಂಡಿತು ಬ್ರಾಹ್ಮಣರು ಸಂಸ್ಕೃತ ಭಾಷೆಯು ದೇವ ಭಾಷೆಯೆಂದು ಬಗೆದು ಕನ್ನಡ ಭಾಷೆಗೆ ತಕ್ಕ ಪ್ರೋತ್ಸಾಹನ ಕೊಟ್ಟಂತೆ ಕಂಡು ಬರುವದಿಲ್ಲ. ಇನ್ನು ವೀರಶೈವರು ಇವೆರಡೂ ವರ್ಗಗಳ ಧೋರಣೆಯನ್ನು ಅನುಸರಿಸದೆ ತಮ್ಮ ಸಾಹಿತ್ಯ ಪ್ರಸಾರಕ್ಕೆ ಹೊಸದೊಂದು ಕಲ್ಪನೆಯನ್ನು ಹುಡುಕಿದರು. ಸಾಹಿತ್ಯವು ಜೀವನದ ವ್ಯಕ್ತಿತ್ವವನ್ನು ವಿಕಾಸಗೊಳಿಸುವ ಸಾಧನವೆಂದೂ ಸಾಹಿತ್ಯ ಕ್ಷೇತ್ರದಲ್ಲಿ ಪ್ರವೇಶಮಾಡಲಿಕ್ಕೆ ಪ್ರತಿಯೊಬ್ಬ ಮಾನವನಿಗೆ ಹಕ್ಕು ಉಂಟೆಂದೂ ತಮ್ಮ ಸ್ಪಷ್ಟವಾದ ಧೋರಣೆಯನ್ನು ಜನಾಂಗದ ಮುಂದಿಟ್ಟರು. ಇದರಿಂದ ಹಳ್ಳಿಗಳಲ್ಲಿಯೂ ಪಟ್ಟಣಗಳ ಲ್ಲಿಯೂ ವ್ಯಕ್ತಿತ್ವ ವಿಕಾಸಕ್ಕೆ ಅವಕಾಶವು ದೊರೆತು ಪ್ರತಿ ಜೀವನವೂ ಸಾಹಿತ್ಯ ಕ್ಷೇತ್ರದಲ್ಲಿ ಧುಮುಕುವ ಸಾಹಸವನ್ನು ಕೈಕೊಳ್ಳಹತ್ತಿತು. ಈ ಸಮಯವನ್ನು ಸಾಧಿಸಿ ವೀರಶೈವ ಸ್ತ್ರೀಯರು ಸುಮ್ಮನೆ ಕೂಡ್ರದೆ ತಮ್ಮ ಆತ್ಮ ವಿಕಾಸದ ದಾರಿಯನ್ನು ಕಂಡುಕೊಳ್ಳಹತ್ತಿದರು. ಮತ್ತು ತಮ್ಮಲ್ಲಿ ಸುಪ್ತವಾಗಿ ಅಡಗಿಕೊಂಡಿರುವ ಚೇತನಗಳನ್ನು ಬಡಿದೆಬ್ಬಿಸಿ ಸಮಾಜ ದಲ್ಲಿ ತಮ್ಮ ಸ್ತ್ರೀತ್ವದ ಗೌರವವನ್ನು ಕಾಯ್ದುಕೊಂಡರು. ೧೨ನೇ ಶತ ಮಾನಕ್ಕಿಂತ ಪೂರ್ವದಲ್ಲಿ ಸ್ತ್ರೀಯರಿಗೆ ಸಾಹಿತ್ಯ ಸೇವೆಮಾಡಲು ಹಕ್ಕು ಇದ್ದಿಲ್ಲವೆಂದು ನನ್ನ ಮತವಲ್ಲ. ಸ್ವಲ್ಪಮಟ್ಟಿಗೆ ಇದ್ದಿತಾದರೂ ಕೆಲವು ಧರ್ಮ ಬೋಧಕರ ದರ್ಪಿಗಾಗಿ ಅವರು ತಲೆ ಎತ್ತಲಿಲ್ಲ. ಈ ಪ್ರಕಾರ ವಾಗಿ ಸಾವಿರಾರು ವರುಷಗಟ್ಟಲೆ ತಮ್ಮ ವ್ಯಕ್ತಿತ್ವವನ್ನು ಕಳೆದುಕೊಂಡು ಬಿಡುಕುತ್ತಿದ್ದ ಸ್ತ್ರೀ ಜೀವನಕ್ಕೆ ವಚನ ಸಾಹಿತ್ಯವು ಆಶ್ರಯವನ್ನು ಕೊಟ್ಟಿತು.

## ವಚನ ಸಾಹಿತ್ಯದಲ್ಲಿ ಲಿಂಗಭೇದವಿಲ್ಲ.

ಜಗತ್ತಿನ ಸಂಪೂರ್ಣ ಚಿತ್ರವನ್ನು ನಮ್ಮೆದುರಿಗೆ ಇಟ್ಟುಕೊಂಡು ವಿಚಾರ ಮಾಡಿದರೆ ಅದರಲ್ಲಿ ಸ್ತ್ರೀಯರ ನಿಜವಾದ ಸ್ಥಾನವಾವುದೆಂದು ಗೊತ್ತುಹಚ್ಚುವದು ಒಳ್ಳೇ ಮಹತ್ವದ ಪ್ರಶ್ನೆಯಾಗಿದೆ. ನಮಗೆ ಜನ್ಮ ಕೊಡುವವಳು ಸ್ತ್ರೀ. ಪೋಷಣೆ ಮಾಡುವವಳು ಸ್ತ್ರೀ. ಆಕೆಯ ಸಹವಾ ಸದಲ್ಲಿಯೇ ಬೆಳೆದು ನಾವು ನಮ್ಮ ನಾಗರಿಕತೆಯನ್ನು ಸಂಪಾದಿಸಬೇ ಕಾಗಿದೆ. ಅಂದ ಬಳಿಕ ನಮ್ಮ ಜೀವನದ ಬೆಳವಣಿಗೆಗೆ ಪೋಷಣೆಯನ್ನು

ಕೊಡುವ ಮಾತೆಯರನ್ನು ತುಚ್ಛೀಕರಿಸುವದೆಂದರೆ, ಅದೊಂದು ದೈವ ದ್ರೋಹ. ರಾಷ್ಟ್ರದ ಸಂಪತ್ತೆಂದರೆ ಮಕ್ಕಳು. ಮಕ್ಕಳನ್ನು ಹೆರುವವಳು ತಾಯಿ. ಈ ಪ್ರಕಾರ ತಾಯಿ, ಮಕ್ಕಳು, ಮತ್ತು ರಾಷ್ಟ್ರ ಈ ಮೂರು ಜೀವನಗಳಲ್ಲಿ ನಿಕಟ ಸಂಬಂಧವಿರುವದರಿಂದ ಒಂದು ಜೀವನದ ಏಳಿಗೆಯು ಮತ್ತೊಂದು ಜೀವನದ ಏಳಿಗೆಯಲ್ಲಿ ರೂಪುಗೊಂಡಿದೆ. ಈ ಗುಟ್ಟನ್ನರಿತೇ ಬಸವಾದಿ ಪ್ರಮಥರು ಸಮಾಜದಲ್ಲಿ ಸ್ತ್ರೀಯರನ್ನು ಮನ್ನಿಸಿದರು. ಅಖಿಲ ಹಿಂದುಸ್ಥಾನದಲ್ಲಿ ಮುಂಧೋರಣೆಯ ದೃಷ್ಟಿಯಿಂದ ಸಾಹಿತ್ಯ ಪ್ರಪಂಚದಲ್ಲಿ ಸ್ತ್ರೀಯರಿಗೆ ಸ್ಥಾನವನ್ನು ಕಲ್ಪಿಸಿಕೊಟ್ಟವರೆಂದರೆ ವೀರಶೈವರು. ಆ ಸಾಹಿತ್ಯವೇ ವಚನ ಸಾಹಿತ್ಯ. ಇದೇ ಮಾತನ್ನೇ ಅವರ ವಚನಗಳಿಂದ ಸ್ಪಷ್ಟೀಕರಣ ಮಾಡಿದ್ದೇನೆ.

> ಸ್ತ್ರೀಯರನ್ನು ಕಂಡು ಅಳುಪದಿರಾ ಮನವೇ. । ಉದ್ದಂಡ
> ತನದಲಿ ನಡೆವ ಭಂಡರನು ಹುಳುಗೊಂಡದಲಿಕ್ಕದೆ ಬಿಡು
> ವನೇ ನಮ್ಮ ದೇವರಾಯ ಸೊಡ್ಡಳಾ ?

ಮೇಲಿನ ವಚನದಿಂದ ವಚನಕಾರರು ಸ್ತ್ರೀಯರನ್ನು ಹಳಿಯುವವರಿಗೆ ಭಂಡರೆಂದು ಕರೆದಿದ್ದಾರೆ. ಅವರಿಗೆ ಪಾಪದ ಭೀತಿಯನ್ನು ತೋರಿಸಿದ್ದಾರೆ. ಮತ್ತು ತಮ್ಮ ಮನಸ್ಸಿಗೂ ಕೂಡಾ ಬುದ್ಧಿಯನ್ನು ಹೇಳಿದ್ದಾರೆ. ಸ್ತ್ರೀಯರನ್ನು ಕಂಡು ಅಳುಪದಿರಾ ಮನವೇ, ಎನ್ನುವಂಥ ಕರುಣದ ಕೂಗು ನಮ್ಮ ಮಾತೆಯರ ಮೇಲಿನ ಮಮತೆಯಿಲ್ಲದೆ ಮತ್ತೇನು ?

> ಕಾಮಾರಿಯ ಗೆಲಿದೆನು ಬಸವಾ ನಿಮ್ಮ ದಯದಿಂದೆ।
> ಸೋಮಧರನ ಹಿಡಿತಪ್ಪೆನು ಬಸವಾ ನಿಮ್ಮ ಕೃಪೆಯಿಂದ।
> ನಾಮದಲ್ಲಿ ಹೆಂಗುಸಾದರೇನು, ಭಾವಿಸಲು ಗಂಡುರೂಪು।
> ಅತಿಕಾಮಿ ಚನ್ನಮಲ್ಲಿಕಾರ್ಜುನಂಗೆ ತೊಡರನಿಕ್ಕಿ ಎರಡು
> ಮರೆಯದೆ ಕೂಡಿದೆನು ಬಸವಾ ನಿಮ್ಮ ಕೃಪೆಯಿಂದ.

ಈ ಪ್ರಕಾರವಾಗಿ ಅಕ್ಕ ಮಹಾದೇವಿಯು ಬಸವಣ್ಣನವರ ವಿಷಯಕ್ಕೆ ತೋರಿಸಿದ ಅಗಾಧವಾದ ಪ್ರೇಮವೇ ಈ ವಚನದ ಮಥಿತಾರ್ಥವು. ಇದರ ಮೇಲಿಂದ ಸ್ತ್ರೀಯರ ವಿಷಯಕ್ಕಿದ್ದ ಪುರುಷರ ಸಹಾನುಭೂತಿಯೂ ಪುರುಷರ ವಿಷಯಕ್ಕಿದ್ದ ಸ್ತ್ರೀಯರ ಪ್ರೇಮಾದರಗಳೂ ಎಷ್ಟು

ಆದರಣೀಯವಾಗಿವೆಯೆಂಬುದು ವ್ಯಕ್ತವಾಗುತ್ತದೆ. ಆದ್ದರಿಂದ ವಚನ ಸಾಹಿತ್ಯವು ತಾತ್ಕಾಲಿಕ ಸಮಾಜ ಸುಧಾರಣೆಗಾಗಿ ಹುಟ್ಟಲಿಲ್ಲ. ಜೀವನದ ಅನಂತ ಸುಖಗಳ ಶೋಧನೆಗಾಗಿ ಮಾರ್ಗಕಟ್ಟಿತು. ವಿಶ್ವ ಪ್ರಪಂಚದಲ್ಲಿ ನಮ್ಮ ಬಾಳು ಸುಖಮಯವಾಗಬೇಕಾದರೆ ಉಭಯ ಜೀವನಗಳೂ ಒಂದಾಗಬೇಕು. ನಮಗೆ ಇಂದು ಬೇಕಾಗಿರುವದು ಸತ್ತ ಮೇಲಿನ ಸ್ವರ್ಗವಲ್ಲ, ಇರುವಾಗಿನ ಸ್ವರ್ಗ. ಇದಕ್ಕೆ ಮತಮತಾಂತರಗಳ ಗೊಂದಲವಿಲ್ಲ. ಸ್ನೇಹ ಪ್ರೇಮಗಳ ಪೋಷಣೆಯಿಂದ ಬೆಳೆದ ವಿಶಾಲವಾದ ಭ್ರಾತೃ ಭಾವನೆ. ಇದೇ ನಮ್ಮ ವಚನ ಸಾಹಿತ್ಯದ ಗುರಿ.

## ಸ್ತ್ರೀಯರ ದಾಂಪತ್ಯ ಜೀವನ.

ಈ ಪ್ರಕಾರ ವಚನ ಸಾಹಿತ್ಯದಲ್ಲಿ ಸ್ತ್ರೀಯರು ಪ್ರವೇಶ ಮಾಡಿದ ಬಳಿಕ ಅವರು ಸಮಾಜದಲ್ಲಿ ಯಾವ ತರದ ಯೋಗ್ಯತೆಯನ್ನು ಪಡೆದರೆಂಬುದನ್ನು ಕೆಳಗಿನ ಒಂದೆರಡು ಉದಾಹರಣೆಗಳಿಂದ ಸ್ಪಷ್ಟೀಕರಣ ಮಾಡಿದ್ದೇನೆ.

ಮೋಳಿಗೆಯ ಮಾರಯ್ಯನೆಂಬ ಭಕ್ತನು ಮೊದಲು ಕಾಶ್ಮೀರ ದೇಶದ ರಾಜನು. ಅವನ ಧರ್ಮಪತ್ನಿಯು ಮಹದೇವಿ ಎಂಬುವಳು. ಈ ಉಭಯ ದಂಪತಿಗಳು ತಮ್ಮ ಅರಸೊತ್ತಿಗೆಯ ಐಶ್ವರ್ಯವನ್ನು ತೊರೆದು ಕಲ್ಯಾಣಕ್ಕೆ ಬಂದು ಶಿವದೀಕ್ಷೆಯನ್ನು ಪಡೆದು ಬಸವಣ್ಣನ ಬೆಂಬಲಿಗರಾದರು. ಆ ಕಾಲಕ್ಕೆ ಬಸವಣ್ಣನವರು ಜಂಗಮ ವೇಷದಿಂದ ಅವರ ಮನೆಗೆ ಹೋಗಿ ಊಟ ಮಾಡಿ ಅವರಿಗೆ ತಿಳಿಯದಂತೆ ಒಂದು ನಿಧಿಯನ್ನಿಟ್ಟಿದ್ದರು. ಆದರೆ ಇದು ಮೋಳಿಗೆಯ ಮಾರಯ್ಯಗಳಿಗೆ ಗೊತ್ತಾದನಂತರ ಪುನಃ ಪರ್ಯಾಯದಿಂದ ಅದನ್ನು ಜಂಗಮರಿಗೆ ಸಲ್ಲಿಸಿದರು. ಈ ಅವರ ನಿಷ್ಕಾಮಭಕ್ತಿಗೆ ಮೆಚ್ಚಿ ಬಸವಾದಿ ಪ್ರಮಥರು ಮೋಳಿಗೆಯ ಮಾರಯ್ಯಗಳನ್ನು ವಿಶೇಷವಾಗಿ ಕೊಂಡಾಡಿದ್ದಾರೆ. ಈ ಸಂದರ್ಭದಲ್ಲಿ ಮೋಳಿಗೆಯ ಮಾರಯ್ಯಗಳಿಗೆ ಆತ್ಮಾನುಭವದ ಅಹಂಭಾವ ಬಂದಂತೆ ಕಂಡುಬಂದಿದೆ. ಇದನ್ನು ತಿಳಿದ ಅವರ ಧರ್ಮಪತ್ನಿ ಮಹದೇವಿಯು ನಿಜವಾದ ಆತ್ಮಾನುಭವದ ತಿಳುವಳಿಕೆಯನ್ನು ಹೇಳಿದ್ದಾಳೆ.

ಕಾಷ್ಠವ ಸುವರ್ಣವ ಮಾಡಿಹೆನೆಂಬ ಘಾತುಕತನವೇ
ನಿಮ್ಮ ಭಕ್ತಿ? ಸಕಲದೇಶ ಕೋಶ ವಾಸ ಭಾಂಡಾರ ಸವ್ವಾ

ಲಕ್ಷ ಮುಂತಾದ ಸಂಬಂಧ ಸ್ತ್ರೀಯರ ಬಿಟ್ಟು ಬಂದಿಹೆನೆಂಬ ಕೈ ಕೂಲಿಯೋ ನಿಮ್ಮ ಭಕ್ತಿ? ಬಸವಣ್ಣ, ಚನ್ನಬಸವಣ್ಣ, ಪ್ರಭುದೇವರು ಮುಂತಾದ ಏಳನೂರೆಪ್ಪತ್ತು ಅಮರ ಗಣಂಗಳ ಭಾವವಿದ್ದಂತೆ ನಿಮ್ಮ ಅಗಡವೇಕಯ್ಯಾ? ನಿಮ್ಮ ಅರಿವಿಂಗೆ ಇದಿರಿನಲ್ಲಿ ಕೂಡಿಹೆನೆಂಬ ಭಿನ್ನ ಭಾವ ಮುಂಟೇ? ಕರ್ಪುರದ ಉರಿಯು ಕಿಚ್ಚು ಹತ್ತಿಬೆಂದಲ್ಲಿ ಭಸ್ಮ ಇದ್ದಲೆಂದು ಭಕ್ಷಿಸಲುಂಟೆ? ನಿಮ್ಮ ಭಾವವ ನಿಮ್ಮಲ್ಲೇ ತಿಳಿದುಕೊಳ್ಳಿ. ಶಕ್ತಿಯು ಮಾತೆಂದು ಧಿಕ್ಕರಿಸಬೇಡ. ಹೊರಗೆ ಕೂಡಿಹೆನೆಂಬ ನಿಮ್ಮ ಅರಿವಿಂಗೆ ಹಾನಿ. ಎಮ್ಮಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನ ನಿಮ್ಮ ಶರಣರ ನೆಲೆಯ ನೀವೇ ನೋಡಿಕೊಳ್ಳಿ.

ಈ ಪ್ರಕಾರ ಮೇಲಿನ ವಚನದಲ್ಲಿ ಮಹದೇವಿಯಕ್ಕನು ತಾನು ಅನ್ನುವಂಥ ಭಾವನೆಯು ನಿಮ್ಮಲ್ಲಿ ಚಿರಸ್ಥಾಯಿಯಾಗಿ ಇದೆ, ಅಂದ ಬಳಿಕ ನಿಜವಾದ ಸಮರಸ ಸ್ಥಾನಕ್ಕೆ ನೀವು ಮುಟ್ಟಿಲ್ಲ ಎಂಬ ಭಾವವನ್ನು ವ್ಯಕ್ತಮಾಡಿದ್ದಾಳೆ.

ತನ್ನ ಕಣ್ಣಿಂದ ಕನ್ನಡಿಯ ನೋಡಿ ಆ ದೃಷ್ಟಿ ಕಾಣಲಿಕ್ಕೆ ಕಣ್ಣೋ, ಕನ್ನಡಿಯೋ? ಆ ಉಭಯ ದೃಷ್ಟಿಯಿಂದ ಇಷ್ಟದ ದೃಷ್ಟವ ಕಂಡು, ಉಭಯ ನಿಷ್ಠೆಯುವಾದಲ್ಲಿ ಕೈವಲ್ಯವೆಂಬ ಕರ್ಕಶ ಬೇಡಾ। ಕೈ ಮುದ್ದೆಯ ಕೆಡಹಿದಲ್ಲಿ ಬಾಯಿಗೆ ಬಯಲು. ಅದು ನಿಮ್ಮ ನೀವೇ ತಿಳಿದುಕೊಳ್ಳಿ, ಎಮ್ಮಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನಾ,

ಈ ಪ್ರಕಾರ ವ್ಯವಹಾರದೊಳಗಿನ ಉದಾಹರಣೆಯಿಂದ ಆಧ್ಯಾತ್ಮಿಕದ ನಿಜವಾದ ಅನುಭವವನ್ನು ತಿಳಿಹೇಳಿದ ಮಹಾದೇವಿಯು ನಿಜವಾಗಿಯೂ ನಮಗೆ ವಂದ್ಯಳು.

ಇದರಂತೆ ಆಯುದಕ್ಕಿ ಮಾರಯ್ಯಗಳ ಪತ್ನಿ ಲಕ್ಕಮ್ಮನು ತನ್ನ ಗಂಡನಿಗೆ ಉಪದೇಶ ಮಾಡಿದ್ದು.

ಆವ ಬೀಜ ಬಿತ್ತಿದರೂ ಮೊಳೆಯ ಮುಖ ಹಿಂಚು ಮುಂಚುಂಟೆ? ನೀನು ಮರೆದಲ್ಲಿ ನಾನರಿದಲ್ಲಿ ಬೇರೊಂ

ದೊಡಲುಂಟೆ? ಮೂಲ ನಕ್ಷತ್ರದಲ್ಲಿ ಅಂಕುರ ನಿಂದಿತ್ತು. ಕೂಟಕ್ಕೆ ಸತಿಪತಿಯೆಂಬ ನಾಮವಲ್ಲದೆ ಅರಿವಿಂಗೆ ಬೇರೊಂದೊಡಲುಂಟೆ? ಬೇರೊಂದಡಿ ಇಡದಿರು ಮಾರಯ್ಯ ಪ್ರಿಯ ಅಮರೇಶ್ವರ ಲಿಂಗವನರಿಯಬಲ್ಲರೆ.

ಗರ್ವದಿಂದ ಮಾಡುವ ಭಕ್ತಿ, ದ್ರವ್ಯದ ಕೇಡು, ನಡೆಯಿಲ್ಲದ ನುಡಿ, ಅರಿವಿಂಗೆ ಹಾನಿ. ಕೊಡದೆ ತ್ಯಾಗಿ ಎನಿಸಿಕೊಂಬುದು, ಮುಡಿಯಿಲ್ಲದ ಶೃಂಗಾರ ಧೃಢವಿಲ್ಲದ ಭಕ್ತಿ, ಅಡಿವಡೆದ ಕುಂಭದಲ್ಲಿ ಸುಖ ಜಲವ ತುಂಬಿದಂತೆ ಮಾರಯ್ಯ ಪ್ರಿಯ ಅಮರೇಶ್ವರ ಲಿಂಗ ಮುಟ್ಟದ ಭಕ್ತಿ.

ಆದ್ದರಿಂದ ಲಕ್ಕಮ್ಮಗಳ ವಚನಗಳನ್ನು ಮಥಿಸಿ ನೋಡಿದರೆ ಜ್ಞಾನಯುಕ್ತವಾದ ಅವರ ದಾಂಪತ್ಯ ಪ್ರೇಮವು ಮಿಗಿಲಾದ ಅಚ್ಚರಿಯನ್ನುಂಟು ಮಾಡುವದು. ಆದ್ದರಿಂದ ದಾಂಪತ್ಯ ಜೀವನದಲ್ಲಿ ಪುರುಷರಿಗಿಂತ ಸ್ತ್ರೀಯರೇ ಮಿಗಿಲಾದ ಜ್ಞಾನದಿಂದ ಮುಂದುವರಿದಿದ್ದಾರೆ.

## ಸ್ತ್ರೀಯರ ಸ್ವಾರ್ಥತ್ಯಾಗ.

ವೀರಶೈವ ಸಮಾಜದಲ್ಲಿ ಸ್ತ್ರೀಯರು ಕೇವಲ ಪ್ರಪಂಚಿಕರಾಗಿರದೆ ಯೋಗಿನಿಯರಾಗಿ ಅಖಂಡ ಸ್ವಾರ್ಥತ್ಯಾಗದಿಂದ ತಮ್ಮ ಜೀವನವನ್ನು ಧಾರೆ ಎರೆದಿದ್ದಾರೆ. ಅಂಥವರಲ್ಲಿ ನಮ್ಮ ಅಕ್ಕಮಹಾದೇವಿಯು ಒಬ್ಬಳು. ಅಕ್ಕನು ಚಿಕ್ಕವಳಿರುವಾಗಲೇ ಅನಂತ ಕಷ್ಟನಷ್ಟಗಳನ್ನು ಸಹಿಸಬೇಕಾಯಿತು. ಕಾಮುಕನಾದ ಕೌಶಿಕ ರಾಜನು ಪಟ್ಟದರಸಿಯನ್ನಾಗಿ ಮಾಡಿಕೊಳ್ಳಲು ಹೂಡಿದ ತಂತ್ರಗಳೆಲ್ಲ ಆ ಯೋಗಿನಿ ಅಕ್ಕಮಹಾದೇವಿಯ ಯೋಗ ಸಾಮರ್ಥ್ಯದ ಮುಂದೆ ವ್ಯರ್ಥವಾದವು. ಮಹಾಚಾಣಾಕ್ಷನಾದ ಕೌಶಿಕ ರಾಜನು ಅವಳ ತಂದೆ ತಾಯಿಗಳ ಮನಸ್ಸನ್ನೂ ಕೂಡ ಒಲಿಸಿಕೊಂಡು ಅವರ ಮುಖಾಂತರ ಅಕ್ಕನನ್ನು ವಶಪಡಿಸಿಕೊಳ್ಳಲು ಪ್ರಯತ್ನಮಾಡಿದನು. ಆದರೂ ಅಂತರಂಗದಲ್ಲಿ ತನ್ನತನವನ್ನು ಕಂಡುಕೊಂಡ ಅಕ್ಕಮಹಾದೇವಿಗೆ ತಂದೆ ತಾಯಿಗಳೂ ಕೂಡ ವಿರೋಧಿಗಳಾದರು. ೧೨ನೇ ಶತಮಾನದ ಕಾಲದಲ್ಲಿ ಸ್ತ್ರೀಯರಿಗೆ ಬಾಲ್ಯದಲ್ಲಿ ತಂದೆ ತಾಯಿಗಳ ಆಜ್ಞೆಯಲ್ಲಿಯೂ ತಾರುಣ್ಯದಲ್ಲಿ ಪತಿಯಾಜ್ಞೆಯಲ್ಲಿಯೂ ವೃದ್ಧಾಪ್ಯದಲ್ಲಿ ಮಕ್ಕಳಾಜ್ಞೆಯಲ್ಲಿಯೂ ಇರಬೇಕೆಂಬ ಸಮಾಜದ ಕಟ್ಟಾಜ್ಞೆ

ಯಿತ್ತು. ಮತ್ತು ಅಂಥವರನ್ನು ಗೌರವ ಸೂಚಕವಾದ ನಾಮಾಂಕಿತ ದಿಂದ ಮನ್ನಿಸುತ್ತಿದ್ದರು. ಇಂಥ ಪ್ರಸಂಗದಲ್ಲಿ ಅಕ್ಕಮಹಾದೇವಿಯು ತನ್ನ ಜೀವನದ ಸ್ವತಂತ್ರತೆಯನ್ನು ಕಾಯ್ದುಕೊಂಡಿದ್ದು ಸಾಮಾನ್ಯ ಕೆಲ ಸವಲ್ಲ. ಎಳೆ ಹರೆಯದ ಆ ಬಾಲಿಕೆಯ ಮೇಲೆ ರಾಜ ಪರಿವಾರದವರೂ, ಸಮಾಜವೂ, ಬಂಧು ವರ್ಗದವರೂ ಕೂಡ ಏಕಕಾಲಕ್ಕೆ ಶತ್ರುಗಳಾ ದರು. ಇಂಥ ವಿಷಮ ಪರಿಸ್ಥಿತಿಯಲ್ಲಿ ಅಕ್ಕನ ಮನೋಧೈರ್ಯವನ್ನು ಅವಳ ವಚನಗಳೇ ಹೀಗೆ ಹೇಳುತ್ತವೆ.

ಹಸಿವಾದಡೆ ಭಿಕ್ಷಾನ್ನಗಳುಂಟು, ತೃಷೆಯಾದೊಡೆ ಕೆರೆ ಹಳ್ಳ ಭಾವಿಗಳುಂಟು, ಶಯನಕ್ಕೆ ಹಾಳು ದೇಗುಲಗಳುಂಟು, ಚನ್ನಮಲ್ಲಿಕಾರ್ಜುನಯ್ಯ ಆತ್ಮ ಸಂಗಾತಕ್ಕೆ ನೀನೆನಗುಂಟು.

ಆರೂ ಇಲ್ಲದವಳೆಂದು ಆಳಿಗೊಳಲು ಬೇಡ ಕಂಡಯ್ಯಾ। ಏನು ಮಾಡಿದಡೆಯೂ ನಾನಂಜುವವಳಲ್ಲ। ತರಗೆಲೆಯ ಮೆಲ್ಲಿದ್ದು ನಾನಿಹೆನು। ಸುರಿಗೆಯ ಮೇಲೊರಗಿ ನಾನಿಹೆನು। ಚನ್ನಮಲ್ಲಿಕಾರ್ಜುನಯ್ಯಾ ಕರಕೆಡೆ ನೋಡಿದಡೆ ಒಡ ಲನು, ಪ್ರಾಣವನು, ನಿನಗೊಪ್ಪಿಸಿ ಶುದ್ಧಳಹೆನು.

ಕಿಡಿಕಿಡಿ ಕೆದರಿದಡೆ ಎನಗೆ ಹಸಿವು ತೃಷೆ ಅಡಗಿತೆಂಬೆನು। ಮುಗಿಲು ಹರಿದು ಬಿದ್ದಡೆ ಎನಗೆ ಮಜ್ಜನಕ್ಕೆರೆದರೆಂಬೆನು। ಗಿರಿ ಮೇಲೆ ಬಿದ್ದಡೆ ಎನಗೆ ಪುಷ್ಪವೆಂಬೆನು। ಚನ್ನಮಲ್ಲಿಕಾ ರ್ಜುನ ಶಿರ ಹರಿದು ಬಿದ್ದಡೆ ಪ್ರಾಣ ನಿನಗರ್ಪಿತವೆಂಬೆನು.

ಚಂದನವ ಕಡಿದು ಕೊರೆದು ತೇದೊಡೆ ನೊಂದೆನೆಂದು ಕಂಪ ಬಿಟ್ಟಿತ್ತೇ। ತಂದು ಸುವರ್ಣವ ಕಡಿದೊರೆದೊಡೆ ಬೆಂದು ಕಳಂಕ ಹಿಡಿದಿತ್ತೇ। ಸಂದು ಸಂದು ಕಡಿದ ಕಬ್ಬು ಗಾಣದಲಿಕ್ಕಿ ಬೆಂದು ಪಾಕಾಗುಳ್ಳ ಸಕ್ಕರೆಯಾಗಿ ನೊಂದೆ ನೆಂದು ಸವಿಯ ಬಿಟ್ಟಿತ್ತೆ। ನಾ ಹಿಂದೆ ಮಾಡಿದ ಹೀನಂ ಗಳೆಲ್ಲವ ತಂದು ಮುಂದಿಳುಹಲು ನಿಮಗೆ ಹಾನಿಯೇ। ಎನ್ನ ತಂದೆ ಚನ್ನಮಲ್ಲಿಕಾರ್ಜುನಯ್ಯಾ ಕೊಂದಡೆ ಶರ ಣೆಂಬುದ ಮಾಣೆ।

ಬೆಟ್ಟದ ಮೇಲೊಂದು ಮನೆಯ ಮಾಡಿ ಮೃಗಂಗಳಿ ಗಂಜಿಪಡೆಂತಯ್ಯಾ। ಸಮುದ್ರದ ತಡೆಯಲ್ಲಿ ಮನೆಯ

ಮಾಡಿ ನೊರೆ ತೆರೆಗಳಿಗಂಜಿದಡೆಂತಯ್ಯಾ। ಸಂತೆಯೊಳಗೊಂದು ಮನೆಯ ಮಾಡಿ ಶಬ್ದಕ್ಕೆ ನಾಚಿದಡೆಂತಯ್ಯಾ। ಚನ್ನಮಲ್ಲಿಕಾರ್ಜುನ ಕೇಳಯ್ಯಾ. ಲೋಕದೊಳಗೆ ಹುಟ್ಟಿದ ಬಳಿಕ ಸ್ತುತಿ ನಿಂದೆಗಳು ಬಂದಡೆ। ಮನದಲ್ಲಿ ಕೋಪವ ತಾಳದೆ ಸಮಾಧಾನಿಯಾಗಿರಬೇಕು।

ಈ ಪ್ರಕಾರ ಅಕ್ಕನ ಅಂತರಂಗದ ಸಾತ್ವಿಕತೆಯ ಚಂದ್ರೋದಯದ ಮುಂದೆ ಪಾಶವೀ ವೃತ್ತಿಯ ಕೌಶಿಕ ರಾಜನ ಕೈವಾಡವು ಸಾಗದಂತಾಯಿತು. ಮುಂದೆ ಬರಬರುತ್ತ ಅಕ್ಕನು ರೂಢಿ ಬದ್ಧವಾದ ಮೂಢ ನಂಬಿಕೆಗಳನ್ನು ತೊರೆದು ಬಸವಣ್ಣ, ಚನ್ನಬಸವಣ್ಣ, ಅಲ್ಲಮ ಪ್ರಭೃತಿಗಳು ಕೈಕೊಂಡ ಕ್ರಾಂತಿಕಾರರ ಗುಂಪಿನಲ್ಲಿ ಸೇರಿದಳು ಮತ್ತು ತನ್ನ ಜೀವನದ ಕೊನೆಯ ಉಸುರಿನ ವರೆಗೂ ಸಮಾಜ ಸೇವೆಯನ್ನು ಮಾಡಿ ಇಂದಿಗೂ ಆದರ್ಶ ಮಾತೆ ಎನಿಸಿದ್ದಾಳೆ.

ಆದ್ದರಿಂದ ವಚನ ಸಾಹಿತ್ಯದಿಂದ ನಮ್ಮ ಜನಾಂಗದ ಸ್ತ್ರೀ ಸಮಾಜದಲ್ಲಿ ಒಂದು ಹೊಸ ಚೈತನ್ಯ ಉತ್ಪನ್ನವಾಗಿ ಸ್ತ್ರೀಯರು ಪುರುಷರಷ್ಟೇ ಯೋಗ್ಯತೆಯನ್ನು ಸಂಪಾದಿಸಿದರು. ಇದಲ್ಲದೆ ಅಕ್ಕನಾಗಮ್ಮ, ಮುಕ್ತಾಯಕ್ಕ, ಲಿಂಗಮ್ಮ, ಕದಿರೆಯ ರೆಮ್ಮವ್ವ ಮೊದಲಾದ ಸ್ತ್ರೀಯರು ಸಾಹಿತ್ಯ ಪ್ರಪಂಚದಲ್ಲಿ ಕಾಣಿಸಿಕೊಂಡರು. ಇಂದಿನ ನವಯುಗದಲ್ಲಿ ಮಹಿಳೆಯರು ಸ್ವಾತಂತ್ರ್ಯತೆಯ ಹೆಸರಿನಿಂದ ತಮ್ಮ ನೈತಿಕ ವೃತ್ತಿಯನ್ನೇ ಹದಗೆಡಿಸಿಕೊಂಡ ಎಷ್ಟೋ ಉದಾಹರಣೆಗಳುಂಟು. ವಚನ ಸಾಹಿತ್ಯ ಸಿದ್ಧಾಂತದ ಪ್ರಕಾರ ಮಹಿಳೆಯರು ಮೊದಲು ನೈತಿಕ ಶಿಕ್ಷಣದಲ್ಲಿ ತೇರ್ಗಡೆಯಾದ ನಂತರ, ಅವರು ಯಾವದಾದರೊಂದು ಉದ್ಯೋಗ ಮಾಡಲಿ, ರಾಜಕಾರಣದಲ್ಲಿ ಬೀಳಲಿ, ಪ್ರಪಂಚದಲ್ಲಿರಲಿ ಅಥವಾ ಪ್ರಪಂಚದ ಹೊರಗಿರಲಿ, ಎಲ್ಲಿ ಬೇಕಾದಲ್ಲಿ ಇದ್ದರೂ ಅವರು ತಮ್ಮ ಉನ್ನತಿಯ ಸ್ಥಾನವನ್ನೇ ಮುಟ್ಟುವರು. ಆದ್ದರಿಂದ ಸ್ತ್ರೀ ಸ್ವಾತಂತ್ರ್ಯಕ್ಕೆ ವಚನ ಸಾಹಿತ್ಯವೇ ಒಂದು ವಿಶ್ವವಿದ್ಯಾಲಯವೆಂದು ಹೇಳಬಹುದು.

# ಶ್ರೀಕರಭಾಷ್ಯವಿಮರ್ಶವು.

(ಶ್ರೀ. ಸಿದ್ಧರಾಮಪ್ಪ ದುಂಡಪ್ಪ ಪಾವಟೆ ಬಿ. ಏ. ಎಲ್. ಎಲ್. ಬಿ. ಹುಬ್ಬಳ್ಳಿ.)

ದೇವಧಾರಣದ ವಿಧಿತ್ವ ವಿಮರ್ಶವು ಮುಗಿಯಿತು. ದೀಕ್ಷೆಯು, ಬ್ರಹ್ಮಮೀಮಾಂಸಾ ಶಾಸ್ತ್ರ ವಿಚಾರದ ಉಪಕಾರಕವು. ಬ್ರಹ್ಮಮೀಮಾಂಸಾ ವಿಚಾರ ಪೂರ್ವಾಂಗವು ಎಂಬ ಶ್ರೀ ಪಂಡಿತಾಚಾರ್ಯರ ಮತವನೀಗ ಪರಿಕಿಸುವಣ.

## ವೈದಿಕ ಶೈವಾಗಮಿಕ ಧರ್ಮಗಳು.

ಪೂರ್ವೋತ್ತರ ಮೀಮಾಂಸಂಗಳೆರಡು ವೇದಧರ್ಮವಿಚಾರ ಶಾಸ್ತ್ರಗಳು. ಲಿಂಗಧಾರಣ ದೀಕ್ಷೆಯು ಶೈವಾಗಮಿಕವು.

ಅಸ್ಮಾತ್ಪ್ರವಿತ ತಾದ್ಬಂಧಾತ್ಪರ ಸಂಸ್ಥಾನಿರೋಧಕಾದ್ ।
ದೀಕ್ಷೈವಮೋಚಯತ್ಯೇವಂ ಶೈವಂ ಧಾಮನಯತ್ಯಪಿ ॥

ಶತ್ರಸೂತ್ರ ರತ್ನದ ೬೯ ಕ್ಕೆ ಉದಾಹರಿಸಿದ ಸ್ವಾಯಂಭುವ ಸೂತ್ರವು ಉತ್ಕೃಷ್ಟವಾದ ಶಿವತ್ವ ಸ್ಥಿತಿಯನ್ನು ತಡೆವ ಈ ಹಬ್ಬಿದ ಬಂಧದಿಂದ ದೀಕ್ಷೆಯೆ ಈ ಪಶುವ ಬಿಡಿಸುವುದು. ಮತ್ತು ಶೈವ ತೇಜಸ್ಸನ್ನು ಹೊಂದಿಪುದು.

ಶಿವದೀಕ್ಷೆಯು, ಆದಿಶೈವಾದಿ ಪ್ರಕಾರಾತ್ಮಕವಾಗಿ ವೀರಶೈವ ದೀಕ್ಷೆಯು. ಲಿಂಗೇ ಪ್ರಾಣಾನ್ಪ್ರಣಿಕ್ಷಿಪ್ಯ ಪ್ರಾಣೇಲಿಂಗಂ ವಿನಿಕ್ಷಿಪೇತ್ । ತಲ್ಲಿಂಗಂ ಸ್ಥಾಪಯೇಚ್ಛಿಷ್ಯೇ ಸವ್ಯಗ್ಧ್ಯಾತ್ವೈಕ ಭಾವತಃ॥ ಸೂಕ್ಷ್ಮಾಗಮ ಪಟಲ ೫ ಶ್ಲೋಕ ೪೭ ಶರೀರದ ಭೂತಕ್ರಿಯೆಯಲ್ಲಿ ತೊಳಲುವ ಪ್ರಾಣವನ್ನು ಪರಿಶೋಧಿಸಿ ಲಿಂಗಕ್ರಿಯಾನುಕೂಲವನ್ನಾಗಿ ಮಾಡಿ ಆ ಪ್ರಾಣವನ್ನು ಲಿಂಗದಲ್ಲಿ ಸಂಗಡಿಸಿ ಪರಿಶುದ್ಧ ಪ್ರಾಣದಲ್ಲಿ ಲಿಂಗವನ್ನು ಹೊಂದಿಸತಕ್ಕುದು. ಅಂತಹ ಲಿಂಗವನ್ನು ಅಂಗಲಿಂಗಗಳ ಏಕಭಾವವನ್ನು ಧ್ಯಾನಿಸಿ ಶಿಷ್ಯನಲ್ಲಿ ಸ್ಥಾಪಿಸತಕ್ಕುದು ಎಂದು ಹೇಳಿದುದು.

## ವೇದಶಿವಾಗಮಂಗಳು ಭಿನ್ನಪ್ರಸ್ಥಾನವು.

ಬೃಹದಾರಣ್ಯಕದ ಎರಡನೆಯಧ್ಯಾಯದ ನಾಲ್ಕನೆಯ ಬ್ರಾಹ್ಮಣದ ಹತ್ತನೆಯ ಖಂಡದಲ್ಲಿ 'ಸಯಥಾರ್ದ್ರೈ ಧಾಗ್ನೇರಭ್ಯಾಹಿತಾತ್ಪೃಥಗ್ಧೂ

ವಾ ವಿನಿಶ್ವರಂಶ್ಯೇವಂವಾ ಅರೇಅಸ್ಯಮಹತೋ ಭೂತಸ್ಯವಿಶ್ವಸಿತವೇತ ದೃಗ್ವೇದೋ ಯಜುರ್ವೇದಃ ಸಾಮವೇದೋಥರ್ವಾಂಗಿರಸ ಇತಿಹಾಸಃ ಪುರಾಣಂ ವಿದ್ಯಾ ಉಪನಿಷದಃ ಶ್ಲೋಕಾಃ ಸೂತ್ರಾಣ್ಯನು ವ್ಯಾಖ್ಯಾನಾನಿ ವ್ಯಾಖ್ಯಾನಾನ್ಯಸ್ಯೈವೈತಾನಿ ನಿಶ್ವಸಿತಾನಿ" ಎಂದು ವೇದಾದಿಗಳ ಉತ್ಪತ್ತಿಯು ಹೇಳಪಡೆದಿದೆ ಶಿವಾಗಮಗಳ ಹೆಸರನ್ನೆತ್ತಿಲ್ಲ. ಭಾಷ್ಯ ಪಕ್ಷಪಾತಿಗಳು ಶ್ಲೋಕಾಃ ಎಂಬುದರಿಂದಾಗಲಿ ವ್ಯಾಖ್ಯಾನಾನಿ ಅನುವ್ಯಾಖ್ಯಾನಾನಿ ಎಂಬುದರಿಂದಾಗಲಿ, ವಿದ್ಯಾಃ ಎಂಬುದರಿಂದಾಗಲಿ, ಶಿವಾಗಮಗಳು ಇದರಲ್ಲಿ ಬಂದಿವೆ ಎನಬಹುದು. ಇದಾಗದು. ಶಿವಾಗಮಗಳು ಇಂತಹ ಅಪ್ರಧಾನ ಸಾಮಾನ್ಯ ನಿರ್ದೇಶವನ್ನು ತಾಳವು. ಇಲ್ಲಿ ವೇದಗಳೂ ಆ ವೇದಕ್ಕೆ ಅಂಗವಾದ ಶಬ್ದ ವಿಸ್ತರವೂ ಬ್ರಹ್ಮವೆಂಬ ಮಹಾಭೂತದ ನಿಶ್ವಸಿತವೆಂದು ಹೇಳಿಯದೆ. ನಾವು ಕಾಮಿಕಾಗಮದಿಂದುದಾಹರಿಸಿದ "ಶಿವಪ್ರಕಾಶಕಂ ಜ್ಞಾನಂ ಶಿವಜ್ಞಾನಂ ಪರಂಸ್ಮೃತಮ್ । ವೇದಾದ್ಯಮಪರಂಜ್ಞಾನಂ ಪಶುಪಾಶಾರ್ಥ ದರ್ಶಕಮ್ " ಪ್ರಮಾಣವನ್ನು ನೆನಪಲಿ. ಶಿವಪ್ರಕಾಶಕವಾದ ಶಿವಾಗಮವು ಪರವೆಂದೂ ಪಶುಪಾಶಪ್ರಕಾಶಕವಾದ ವೇದಾದಿಯು ಅಪರವೆಂದೂ ಹೇಳಿಯದೆ. ಆದುದರಿಂದ ವೈದಿಕ ಶಿವಾಗಮಿಕ ಧರ್ಮವು ಭಿನ್ನಪ್ರಸ್ಥಾನವಹುದು.

## ಜಾತಿಪ್ರಧಾನವು ವೈದಿಕವು.

ವೈದಿಕಕ್ಕೂ ಶಿವಾಗಮಧರ್ಮಕ್ಕೂ ವಿಲಕ್ಷಣತ್ವವಿನ್ನೊಂದುಂಟು. ಅಂದರೆ ಮೇಲೆ ತೋರಿಸಿದ ಶಿವಪ್ರತಿಪಾದಕವು ಶಿವಾಗಮವು. ಯಜ್ಞಯಜಮಾನರೆಂಬ ಕರ್ಮಪಶುಗಳನ್ನು ಬೋಧಿಸುದು ವೇದವು ಎಂಬುದರಿಂದ ಇವುಗಳಲ್ಲಿ ಅಂತರವು ಬಲ್ಲಿತ್ತಾಗಿದೆ. ವೇದವು ಪಶುಧರ್ಮಬೋಧಕವಾದುದರಿಂದ ಜಾತಿ ಪ್ರಧಾನವಾಗಿದೆ.—ಪಶುಗಳಿಗಿಹಪಂಚಪಾಶಂಗಳಲ್ಲಿ (ತಿರೋಧಾನ ಬಿಂದು ಮಲಮಾಯಾಕರ್ಮ) ಕರ್ಮಪಾಶವು ಒಂದು.

ಶತಸೂತ್ರ ರತ್ನದ ೩೧ಕ್ಕೆ ಉದಾಹರಿಸಿದ ವಿಶ್ವಸಾರೋತ್ತರಾಗಮದ ಧರ್ಮಾಧರ್ಮಾತ್ಮಕಂ ಕರ್ಮ ತಚ್ಚ ತ್ರಿವಿಧಮರ್ಥತಃ ಜಾತ್ಯಾಯುರ್ಭೋಗದಂ ಯೇನ ನಾಮಿಶ್ರಂ ಪಚ್ಯತೇಕ್ವಚಿತ್ ॥ ಕರ್ಮವು ಧರ್ಮಾಧರ್ಮರೂಪಿಂದೆ ಇತ್ತೆರನಹುದು. ಅದು ಬ್ರಾಹ್ಮಣ್ಯಾದಿ ವರ್ಣವನ್ನೂ ಶತಾ

ಯುರಾದಿ ಆಯುಷವನ್ನೂ ರಾಜ್ಯಾದಿಭೋಗವನ್ನೂ ಉಂಟುಮಾಡಿದ ಪುದು. ಎಂಬ ಪ್ರಮಾಣದಿಂದ ಮನುಜನ ಜಾತಿಯನುಂಟುಮಾಡಿದೆ. ಜಾತಿ ಶಬ್ದಕ್ಕೆ ಜನ್ಮವೆಂದೂ ವರ್ಣವೆಂದೂ ಅರ್ಥ. ಇವೆರಡಕ್ಕೂ ಇಲ್ಲಿ ಅದು ವಾಚಕವದೆ. ಅಂದರೆ ಕರ್ಮದಿಂದ ಕ್ರಿಮಿಕೀಟ ಮನುಷ್ಯಾದಿ ಜನ್ಮವೂ ಬ್ರಾಹ್ಮಣ್ಯಾದಿ ವರ್ಣವೂ ಆದಷುದು.

ಇದಕ್ಕೆ ಗೌತಮ ಧರ್ಮ ಸೂತ್ರದ ಒಂದು ಉದಾಹರಣವನ್ನಿಲ್ಲಿ ಇಡುವೆವು. ವೈದಿಕಧರ್ಮಗ್ರಂಥಗಳು ಜನ್ಮದಿಂದಲೆ ವರ್ಣವೆಂಬ ಆಧಾರದಿಂದಲೇ ಧರ್ಮ ಸಂಸ್ಕಾರಗಳನ್ನು ಗೊತ್ತುಗೊಳಿಸಿವೆ.

ಉಪನಯನಂ ಬ್ರಾಹ್ಮಣಸ್ಯಾಷ್ಟಮೇ -- ಬ್ರಾಹ್ಮಣನ ಉಪನಯನವು ಎಂಟನೆಯ ವರ್ಷದೊಳು. ಇದಕ್ಕೆ ಹರದತ್ತಾಚಾರ್ಯನ ಮಿತಾಕ್ಷರಾ ವೃತ್ತಿಯು-ಉಪನಯನಾನಂತರಂ ಭಾವಿನಿ ಬ್ರಾಹ್ಮಣತ್ವೇ ಅತ್ರ ಬ್ರಾಹ್ಮಣ ಗ್ರಹಣಂತು ಬ್ರಾಹ್ಮಣಸ್ಯ ಸತ್ಯವೋಪನಯನಂ ನತೂಪನಯನಾದಿ ಸಂಸ್ಕಾರ ಜನ್ಯಂ ಬ್ರಾಹ್ಮಣ್ಯಮಿತಿಜ್ಞಾಪನಾರ್ಥಮ್ ॥

ಉಪನಯನಾನಂತರಲ್ಲಿ ಬ್ರಾಹ್ಮಣ್ಯಗಲು ಇಲ್ಲಿ ಬ್ರಾಹ್ಮಣ ಪದವನ್ನಿಟ್ಟದು ಬ್ರಾಹ್ಮಣನಾಗಿರುವನಿಗೆಯೆ ಉಪನಯನವು; ಉಪನಯನ ಸಂಸ್ಕಾರದಿಂದ ಬ್ರಾಹ್ಮಣ್ಯವು ಜನ್ಯವಲ್ಲೆಂಬುದನ್ನು ತೋರಿಸಲು ಅದೆ. ಇದುವೆ ಸೂತ್ರಕ್ಕೆ ಮಸ್ಕರೀಯ ಟೀಕೆಯು.

ಬ್ರಾಹ್ಮಣಗ್ರಹಣಸ್ಯ ಜಾತಿನಿಮಿತ್ತತ್ವ ಪ್ರಸಿದ್ಧ್ಯರ್ಥಮಾರಂಭಃ ನಚ ದ್ವಿಜತ್ವವದ್ಬ್ರಾಹ್ಮಣತ್ವಂ ಕ್ರಿಯತ ಇತಿ.

ಇಲ್ಲಿ ಬ್ರಾಹ್ಮಣ ಪದವನ್ನಿಟ್ಟದು ಬ್ರಾಹ್ಮಣ್ಯವು ಜನ್ಮನಿಮಿತ್ತವಾದುದೆಂದು ಸ್ಥಾಪಿಸಲುಂಟು. ದ್ವಿಜತ್ವದಂತೆ ಬ್ರಾಹ್ಮಣತ್ವವು ಸಂಸ್ಕಾರ ಜನ್ಯವಲ್ಲ.

## ಶೈವಾಗಮಿಕವು ಭಾವಪ್ರಧಾನವು.

ಭಾವವೆಂದರೇನು; ಆತ್ಮದಲ್ಲಿ ಹುದುಗಿರುವ ತನ್ನ ರೂಪವನ್ನು ಹೊರಗೆಡುಹುವ, ತನಗೆ ಬೇರೆಯಾದ ಮಲಾದಿ ಪಾಶಗಳನ್ನು ಹರಿದು ಹೊರಪೊಡೆವ ಪ್ರವರ್ತನವು ಇದುವೆ ಶ್ರದ್ಧೆಯೆನಿಸಿತು. ಆ ಶ್ರದ್ಧೆಗೆ ಶಿವಾನುಗ್ರಹದ ಒಲವು ದೊರೆವುದೆ ದೀಕ್ಷೆಯು. ಆ ದೀಕ್ಷೆಯಿಂದ ನೈರ್ಮ

ಲ್ಯವು. ನೈರ್ಮಲ್ಯದಿಂದ ಜಾತ್ಯಾದಿ ಬಂಧಂಗಳ ತೊಲಗಿಕೆಯು. ಇದ ಕ್ಕೆಲ್ಲ ಪ್ರಮಾಣವು.

ಶತಸೂತ್ರರತ್ನೋದಾಹೃತ ೬೬ನೆಯ ಸೂತ್ರವು. ಸರ್ವಜ್ಞಾನೋತ್ತರ ದಿಂದ-ತತ್ತ್ವೈರೇಭಿರ್ನಿಬದ್ಧಾತ್ಮಾ ಸರ್ವ ಧರ್ಮೈಶ್ಚ ಸಂಯುತಃ। ನಾನ್ಯೇ ನಶಕ್ಯತೇಮೋಕ್ತುಂ ಮುಕ್ತ್ವಾದೀಕ್ಷಾಂ ಶಿವಾತ್ಮಿಕಾಮ್ ॥

ಈ ಪ್ರಾಕೃತತತ್ವಂಗಳಿಂದ ಕಟ್ಟುವಡೆದವನಾಗಿ ಮಲಾದಿಬಂಧನ ಗಳಿಂದ ಕೂಡಿದ ಆತ್ಮನು ಶಿವಾತ್ಮಿಕೆಯಿಂದ ಶಿವನ ಕ್ರಿಯಾಶಕ್ತಿರೂಪ ವಾದ ದೀಕ್ಷೆಯಿಂದಲ್ಲದೆ ಬೇರೊಂದರಿಂದ ಬಿಡುಗಡೆ ಹೊಂದನು.

ಕರ್ತೃಶಕ್ತಿರಣೋರ್ನಿತ್ಯಾವಿಭ್ವೀಚೇಶ್ವರ ಶಕ್ತಿವತ್ ॥
ತನುಶ್ಛನ್ನತಯಾರ್ಥೇಷು ನಾಭಾತಿನಿರನುಗ್ರಹಾ ॥

ಮೃಗೇಂದ್ರಾಗಮ ಕಲಾದಿಪಟಲ ೩. ಆತ್ಮನ ಕ್ರಿಯಾಶಕ್ತಿಯು ಈಶ್ವರ ಶಕ್ತಿಯಂತೆಯೆ ನಿತ್ಯವಾದುದು. ವ್ಯಾಪಕವಾದುದು. ಮಲಾವ ರೋಧದಿಂದ ಶಿವಾನುಗ್ರಹದಿಂದಲ್ಲದೆ ಪದಾರ್ಥಗಳಲ್ಲಿ ವ್ಯಾಪೃತವಾಗದು.

ಶಿವಶಕ್ತಿಯನುಗ್ರಹ ಕಾರ್ಯಕ್ಕೆ ಶತಸೂತ್ರೋದಾಹೃತ ೬೬ ನೆಯ ಸೂತ್ರನಿಶ್ವಾಸಕಾರಿಕೆಯು ಏಕೈವವಸ್ತುತಃ ಶೈವೀಯಾಶಕ್ತಿರ್ನಿರ್ಮ ಲಾಪರಾ।

ಅವಿನಾಭಾವಿನೀಶಂಭೋಃ ಶುಚೇರುಷ್ಣವತ್ಪ್ರಭೋಃ
ತಯಾತ್ಮಶಿವಯೋಃ ಸಂಧಿಃ ಶಿವಬೋಧ ಪರಾಪರಾ ॥

ಆವುದಾನೊಂದು ಶಿವಶಕ್ತಿಯಹುದೊ ನಿಜದೊಳು ಅದು ಒಂದೆ ಯಾಗಿದೆ. ನಿರ್ಮಲವಾಗಿದೆ. ಉತ್ಕೃಷ್ಟವಾಗಿದೆ. ಬೆಂಕಿಯ ಕಾವಿನಂತೆ ಶಿವನಲ್ಲಿ ಎಡೆಬಿಡದಾಗಿದೆ. ಶಿವನನರುಹಿಸುವಲ್ಲಿ ಆಶಕ್ತಿ ಶಕ್ತಿಯು ಪರಾ ಪರ ಜ್ಞಾನವಾಗಿದೆ. ಆ ಶಕ್ತಿಯಿಂದಲೆ ಶಿವನಿಗೂ ಆತ್ಮನಿಗೂ ಸಂಧಿ ಯಪ್ಪುದು.

ಮತಂಗ ಪಾರಮೇಶ್ವರದಲ್ಲಿ— ದೀಕ್ಷಾನಲಪ್ಲುಷ್ಟಮಲಸ್ಯಜಂತೋಃ ಸ್ವಾಖ್ಯಂಬಲಂ ವ್ಯಕ್ತಿಮುಪೈತಿ ಯೋಗಾತ್ ॥ ದೀಕ್ಷಾಗ್ನಿಯಿಂದ ದಗ್ಧ ಮಲನಾದ ಜಂತುವಿನ ಸ್ವಯಂತಾನೆಂಬ ಬಲವು ದೀಕ್ಷಾಯೋಗದಿಂದ ಅಥವಾ ಶಿವತ್ವಯೋಗದಿಂದ ಪ್ರಕಟವಾದಪುದು.

ಈ ಪ್ರಮಾಣಂಗಳಲ್ಲಿ ಅನುಗ್ರಹ ಪಡೆದ ಆತ್ಮರುಗಳಿಗೆ ವಿಪ್ರಾದಿ ಜಾತಿ ಶಬ್ದಗಳನ್ನು ಬಳಸದೆ ಆತ್ಮನೆಂದೂ ಜಂತುವೆಂದೂ ಸಾಮಾನ್ಯ ಶಬ್ದಗಳ ಬಳಕೆಯಾಗಿದೆ. ಮತ್ತು ಶಿವಶಕ್ತಿಯು ಆತ್ಮನ ಮಲವನ್ನು ಸುಡುವುದೆಂದು ಹೇಳಿಯದೆ. ಆದುದರಿಂದ ದೀಕ್ಷೆಯು ವರ್ಣನಿಯಂತ್ರಿತವಲ್ಲ. ಮಲಬದ್ಧ ದಃಕ್ರಿಯಾಶಕ್ತಿಯನುಳ್ಳ ಆತ್ಮನನ್ನು ಆ ಶಿವಶಕ್ತಿಯು ಸ್ಪರ್ಶಿಸಲು ಕಾಷ್ಠವನ್ನು ಅಗ್ನಿಯು ಸೋಂಕುತ್ತಲೆ ಅದರಲ್ಲಿ ಹುದುಗಿದ ಅಗ್ನಿಯು ಪುಟವಾಗಿ ಅದರೊಳಗಿನ ಜಾಡ್ಯವನ್ನು ಸುಟ್ಟು ನೆಗೆವಂತೆ ಆತ್ಮನಲ್ಲಿ ಹುದುಗಿದ ಚಿತ್ಕ್ರಿಯಾಶಕ್ತಿಯು ಮಲವನ್ನು ದಹಿಸಿ ಶಿವತ್ವಾಭಿವ್ಯಕ್ತಿಯಹುದು. ದೀಕ್ಷೆಯಿಂದ ಆತ್ಮರೂಪವು ಶಿವಾತ್ಮಕವಾಗಿ ಪ್ರಕಟವಾದಪುದು. ಇದಕ್ಕೆ ದಾನವೆಂಶಲು ಹೆಸರುಂಟು. ಅಂದರೆ ಶಿವನು ಅನುಗ್ರಹ ಆತ್ಮಸ್ವರೂಪವನ್ನು ಪ್ರಕಟಿಸುವುದರಿಂ ಆತ್ಮಲಾಭವಾದಪುದಾಗಿ ಅದೊಂದು ಆತ್ಮದಾನವೆ ಮತಂಗಪಾರಮೇಶ್ವರಾಗಮದ ಪತಿಪಟಲದಲ್ಲಿ-

> ದಾನಂ ನಾಮ ಸ್ವಸತ್ತೈವ ಯಾಸಾಜ್ಞಾನಕ್ರಿಯಾತ್ಮಿಕಾ
> ಸಾಶಕ್ತಿಸ್ತಸ್ಯಸಂಸ್ಪರ್ಶಾದ್ವ್ಯಕ್ತೀಭೂತಾ ಸುನಿರ್ಮಲಾ
> ಪ್ರತ್ಯುತ್ಥಾನಂ ತದೇವೋಕ್ತಂ ನಸ್ವಯಂ ವ್ಯಜ್ಯತೇಪಶೋಃ

ಜ್ಞಾನಕ್ರಿಯೆಗಳೇ ಸ್ವರೂಪವಾಗಿಯುಳ್ಳಂತಹ ಆವುದಾನೊಂದು ತನ್ನ ಸದ್ರೂಪತ್ವವೊ ಅದುವೆ ದಾನವೆಂದು ಪ್ರಸಿದ್ಧವು. (ದೀಯತೆ ಇತಿ ದಾನಂ ಕೃತ್ಯಲ್ಯುಟೋ ಬಹುಲಮಿತಿ ಕರ್ಮಣಿಲ್ಯುಟ್) ಜ್ಞಾನ ಕ್ರಿಯಾ ರೂಪದಿಂದ ಆಶಕ್ತಿಯು ಆ ಪರಮೇಶ್ವನ ಅನುಗ್ರಾಹಕ ಶಕ್ತಿಯಿಂದಾದ ಸ್ಪರ್ಶನದದೆಸೆಯಿಂದ ಅತ್ಯಂತ ನಿರ್ಮಲವಾದುದಾಗಿ ಅಭಿವ್ಯಕ್ತಿಯ ನೆಯ್ದುವುದು. ಆ ಅಭಿವ್ಯಕ್ತಿಯನು ಹೊಂದಿಸುವಣವೆ ಪರಮೇಶ್ವರಗೆ ದಾನವೆಂದು ಹೇಳಲ್ಪಟ್ಟಿತು. ಆತ್ಮಂಗೆ ತಾನೆ ಅಭಿವ್ಯಕ್ತಿಯನೆಯ್ದದು.

## ಪಶುಧರ್ಮ ಪತಿಧರ್ಮಗಳು.

ಇಂತಾಗಿ ವೈದಿಕ ಧರ್ಮವು ಪಶುಧರ್ಮವು. ಆಗಮಿಕ ಶಿವಧರ್ಮವು ಪತಿಧರ್ಮವು. ಇದು ಉಚಿತವಾಗಿದೆ. ಮನ್ವಾದಿ ಸ್ಮೃತಿಕಾರರು ಕರ್ಮದ ಹಲವು ತೆರದಿಂದ ಜನ್ಮಗಳನ್ನೂ ಅವುಗಳಲ್ಲಿ ವರ್ಣಗಳ ಉತ್ಪತ್ತಿಯನ್ನೂ ಹೇಳುವರು. ಭಗವದ್ಗೀತೆಯಲ್ಲಿ " ಚಾತುರ್ವರ್ಣ್ಯಂ

ಮಯಾಸೃಷ್ಟಂ ಗುಣಕರ್ಮ ವಿಭಾಗಶಃ" ಎಂದು ಹೇಳಿರುವುದು ಬ್ರಾಹ್ಮಣಾದಿ ಚತುರ್ವರ್ಣವು ಗುಣ ವಿಭಾಗದಿಂದಲು ಕರ್ಮ ವಿಭಾಗದಿಂದಲು ಉಂಟಾದುದೆಂದು ಹೇಳುವುದರಿಂದ ವರ್ಣವಿಭಾಗವು ಪ್ರಾಕೃತ ಎಂದರೆ ಪ್ರಕೃತಿ ಕಾರ್ಯವಾದ ಸತ್ವಾದಿಗುಣಮಯವೆಂದಾಯ್ತು. ಇಂತಹ ವರ್ಣಗಳನ್ನು ಹಿಡಿದು ಮುಂದುವರಿವ ಉಪನಯನಾದಿ ಧರ್ಮವು ಪ್ರಾಕೃತವು.

ವೈದಿಕರಲ್ಲಿ ವಿವೇಕಿಗಳು ಈ ಪ್ರಾಕೃತ ಧರ್ಮದಿಂದಲೆ ಸದ್ಗತಿಯಾಗದೆಂದು ಕಂಡು ಶಿವಲಿಂಗಾರ್ಚನಾದಿ ಶಿವಧರ್ಮವನ್ನು ವರ್ಣಧರ್ಮದಲ್ಲಿ ಅಂಗೀಕರಿಸಿದರು. ಅಂತಹರಸರಣಿಯಲ್ಲಿ ದಶಶೈವ ಪುರಾಣಗಳುಂಟಾದುವು. ಇವುಗಳಿಗಿಂತಲು ಮುಂದುವರಿದ ಕೆಲವರ ಸರಣಿಯಲ್ಲಿ ಶಿವರಹಸ್ಯಾದಿ ಇತಿಹಾಸಗಳಾದುವು. ಜಾಬಾಲ ಕೈವಲ್ಯಾದ್ಯುಪನಿಷತ್ತುಗಳೂ ಸಾಕ್ಷಾದ್ವೇದ ಶಾಖೆಗಳಲ್ಲಿಯೆ ಹುಟ್ಟಿದುವು. ಇವೆಲ್ಲವುಗಳಲ್ಲಿ ಶಿವಧರ್ಮವು ಒತ್ತಿ ಕಸುವಿನಿಂದ ಬಂದು ಕವಿದಿತು. ಆದರೆ ವೈದಿಕರೆಂದಿಗೂ ವರ್ಣಧರ್ಮವನ್ನು ತೀರ ಬಿಡಲಿಲ್ಲ. ಅವರು ಲಿಂಗವನ್ನು ಅಂಗದಲ್ಲಿ ಧರಿಸಲಿಲ್ಲ. ಹಲಕೆಲರು ಧರಿಸಿದರಾದರು. ಕುಲ ಧರ್ಮದಲ್ಲಿ ಅದನ್ನು ಸೇರಿಸಿದರು. ಆದರೆ ಈ ವೈದಿಕ ಗ್ರಂಥಗಳಲ್ಲಿ ಯಜ್ಞಯಾಗಾದಿಯು ಪ್ರಾಕೃತ ಧರ್ಮವೆಂಬುದಕ್ಕೆ ಒಳ್ಳೆ ಬಿಗಿಹಿನ ಒಪ್ಪಿಗೆಯುಂಟು. ಶಿವರಹಸ್ಯ ವಚನವಿದು. "ವೇದಸ್ಮೃತಿ ಪುರಾಣೇಷು ಭಾರತೇಷ್ವಾಗಮೇಷ್ವಪಿ । ಪಶುಧರ್ಮಾಶ್ಚ ಮುನಿಭಿಃ ಪ್ರೋಕ್ತಾಃ ಸಂಸಾರದಾಯಕಾಃ । ಪತಿಧರ್ಮೈಕ ಕಥನಂ ವಿಮುಕ್ತಿದ ಮುಮಾಪತೇಃ । ವೇದವೇದಾಂತಸಾರೋತ್ಥಕಥಾಃ ಪಾಪನಿಕೃಂತನೀಃ । ಕಥಯಾಮಾಸ ತದ್ದೇವ್ಯೈರಹಸ್ಯಂಶ್ರುತಿಸಮ್ಮತಮ್ ॥ ಪ್ರಥಮಾಂಶ ಅಧ್ಯಾಯ ೯ ಶ್ಲೋಕ ೩೧—೩೨. ಮಿಥ್ಯಾಭೂತ ಜಗತ್ಪ್ರಚಾರ ವಿಹಿತೋ ಧರ್ಮೋsತ್ರ ವರ್ಣಾಶ್ರಮಃ । ಪಾರಾವಾರ ವಿಚಾರಸಾರ ಹೃದಯಾಸ್ತೇಷಾಂ ಮತಃ ಶ್ರೇಯಸಿ ಕೇವಲಮ್ । ಕಿಂತಚ್ಚರ್ವಿತಚರ್ವಣೇನವಿದುಷಾಂ ವಿದ್ಯೋsಪ್ಯಭವೋ ಜಾಯತೇ । ಯಂ ಧರ್ಮೋತ್ತಮ ಮಾನಂತಿ ತಪಸಾ ಸಂವೇದ್ಯ ಏಕಃ ಶಿವಃ ॥ ಪ್ರಥಮಾಂಶ ಅಧ್ಯಾಯ ೯. ಶ್ಲೋಕ ೪೮.

ಇದಕ್ಕಿಂತು ಕನ್ನಡವು. ವೇದಸ್ಮೃತಿ ಪುರಾಣಾಗಮಗಳಲ್ಲಿ ಮುನಿಗಳು ಪಶುಧರ್ಮಗಳನ್ನು ಹೇಳಿಹರು. ಪರಶಿವನು ವೇದವೇದಾಂತ

ಸಾರಕ್ಕಿಂತ ಉನ್ನತವಾದ ವಿಮುಕ್ತಿಯನೀವ ಧರ್ಮ ಶಿವಕಥಾಮಯ ವಾದ ಈ ರಹಸ್ಯವನುಸುರಿಹನು. ಅದರಿಂದ ವಿದ್ಯೆಯುದಯಿಸುದು. ತಪಸುಗಳಿಂದ ತಿಳಿಯತಕ್ಕ ವಸ್ತುವೆಂದರೆ ಶಿವನು.

ಈ ಶಿವರಹಸ್ಯದಲ್ಲಿ ಹೇಳಿದುದೆಲ್ಲ ಅನಂತ ಶಿವಕ್ಷೇತ್ರಗಳ ಮಹಿಮೆಯು ಮತ್ತು ಆ ಲಿಂಗಪೂಜೆಯ ಮರ್ಮವು ಇಷ್ಟ ಪ್ರಾಣಭಾವ ಲಿಂಗಧಾರಣವು ಇಲ್ಲಿ ಬಂದಿಲ್ಲ.

## ಸಾರಾಂಶವು.

ವೈದಿಕರು ಶಿವಧರ್ಮವನು ಅಂದರೆ ಶಿವಲಿಂಗ ಪೂಜೆಯನು ವಿಗಿಲಾದುದೆಂದು ನಂಬಿದರು. ಒಡಬಟ್ಟರು. ಮನಗಂಡರು. ಆದರೆ ವೈದಿಕ ಧರ್ಮವನ್ನು ಹಿಡಿದು ಅದರೊಳಗಿದನು ಸೇರಿಸಿಕೊಂಡರು. ಶಿವಾಗಮಂಗಳು ಪತಿಧರ್ಮ ಬೋಧಕವೆಂದೂ ವೇದಂಗಳು ಪಶುಧರ್ಮ ಬೋಧಕವೆಂದೂ ಶ್ರೀಮತ್ಕಾಮಿಕಾದ್ಯಾಗಮಗಳು ಸಾರುವುದನ್ನು ಪ್ರಮಾಣೀಕರಿಸಿದರು. ನೋಡಿರಿ.

> ಆದಾವಭೂದ್ದ್ವಿಧಾಜ್ಞಾನ ಮಧಿಕಾರಿ ವಿಭೇದತಃ
> ವೇದಾದ್ಯಮಪರಂಜ್ಞಾನಂ ಪಶುಪಾಶಾರ್ಥ ದರ್ಶಕಂ
> ಯಥಾವಿಲಕ್ಷಣಂ ಚಕ್ಷುಃ ಕ್ಷಪಾಯಾಂ ನೃಬಿಡಾಲಯೋಃ

ಶ್ರೀಕಾಮಿಕಾಗಮ ಪ್ರಥಮ ಪಟಲ ೧೪-೧೫. ಮೊತ್ತ ಮೊದಲು ಅರಿವು ಇತ್ತೆರನಾದುದು. ಅಧಿಕಾರಿಗಳು ಎರಡು ತೆರವಾದುದರಿಂದ ಜ್ಞಾನದ ಭೇದವು. ವೇದಾದಿಗಳು (ವೇದವೇದಾಂಗಗಳು) ಕೆಳಗಣ ಜ್ಞಾನವು. ಅದು ಪತಿಪಶುಪಾಶುಗಳೆಂಬ ತ್ರಿಪದಾರ್ಥಗಳಲ್ಲಿ ಪಶುಪಾಶವೆಂಬ ಪದಾರ್ಥದ್ವಯವನರುಹುದು. ರಾತ್ರಿಯ ಕತ್ತಲಲ್ಲಿ ಮನುಷ್ಯನ ಕಣ್ಣಿಗು ಬೆಕ್ಕಿನ ಕಣ್ಣಿಗೂ ಭೇದವಿರುವ ಹಾಗೆ ಈ ಭೇದವು. ಅಂದರೆ ಮಲಾವೃತವಾದ ದೃಷ್ಟಿಯನ್ನು ದೂರಗೆಯ್ದು ಜ್ಞಾನದೃಷ್ಟಿಯನೀವ ಶಿವಾಗಮ ಶಾಸ್ತ್ರವು ಮಲದಾಚೆಯ ಶಿವತತ್ವವನ್ನು ತೋರಿಸಲಾಪುದು. ವೇದವು ಪಶುವಾದ ಯಜಮಾನನನ್ನು ಮತ್ತು ಪಾಶವಾದ ಕರ್ಮವನ್ನು ಮಾಯೆಯನ್ನು ತೋರಿಸಲಹುದು. ಅಲ್ಲದೇ ಶಿವನನ್ನು ತೋರಿಸಲಾರದು.

ಇಂತಾದರು ವೈದಿಕರ ದೃಷ್ಟಿಯು ಹಸನಾಗಲಿಲ್ಲ. ಸೂತ ಸಂಹಿತೆಯೆಂಬ ಸ್ಕಂದಪುರಾಣ ಕಾಂಡವು ಶಿವಲಿಂಗ ಪೂಜೆಯನ್ನೂ ಶಿವ ಮಹಿಮೆಯನ್ನೂ ಹೊಗಳುವಲ್ಲಿ ಹಿರಿದಹುದು. ಇದಕ್ಕೆ ಶಿವಾಗಮ ಪ್ರಮಾಣದಿಂದಲ್ಲದಾಗದು. ಆದುದರಿಂದ ನಾದಬಿಂದು ಕಲಾದಿಗಳ ವಿಷಯ ದಲ್ಲಿಯು ಶಿವಲಿಂಗ ಪ್ರತಿಷ್ಠಾಪೂಜಾದಿಗಳಲ್ಲಿಯು ಅದಕ್ಕೆ ಶ್ರೀ ಶಿವಾಗಮಗಳೆ ಆಧಾರವಾಗಿವೆ. ಆದೊಡೆಯು ಸೂತಸಂಹಿತೆಯ ಅರ್ಬಟೆಯ ಕೇಳಿರಿ.

ಶ್ರುತಿರಪಿ ಮನುಜಾನಾಂ ವರ್ಣಧರ್ಮಂ ಬಭಾಕ್ಷೇ। ಪರಗುರುಖಿಲೇಶಃ ಪ್ರಾಹತಂತ್ರೇಷು ತದ್ವತ್ । ಶ್ರುತಿಪಥಗಲಿತಾನಾಂ ವರ್ಣಧರ್ಮಂ ಘೃಣಾಬ್ಧಿಃ। ಶ್ರುತಿಪಥನಿರತಾನಾಂ ನೈವತಶ್ಸೇವ ನೀಯಮ್ ॥ ಶ್ರುತಿಪಥ ಗಲಿತಾನಾಂ ಮಾನಃಷಾಣಾಂತು ತಂತ್ರಮ್ । ಗುರುಗುರುರಖಿಲೇಶ: ಸರ್ವ ವಿತ್ಪ್ರಾಹ ಶಂಭುಃ। ಶ್ರುತಿಪಥನಿರತಾನಾಂ ತತ್ರ ನೈವಾಸ್ತಿ ಕಿಂಚಿ। ದ್ಧಿತಕರ ಮಿಹ ಸರ್ವಂ ಪುಷ್ಕಲಂ ಸತ್ಯ ಮುಕ್ತಮ್ ॥ --ಸೂತ. ಸಂಹಿತಾಸೂತಗೀತಾ ಅಧ್ಯಾಯ ೮-- ಶ್ಲೋಕ ೨೬-೨೫.

ವೇದಮಾರ್ಗ ಭ್ರಷ್ಟರಿಗಾಗಿ ಸರ್ವಜ್ಞನಪ್ಪ ಶಂಭುವು ತಂತ್ರವನ್ನು (ಆಗಮವನ್ನು) ಹೇಳಿದನು. ವೈದಿಕರ ಹಿತಕರವಾದುದು ಅದರಲ್ಲೇನೂ ಇಲ್ಲ. ಇದು ನಿರವಧಿಕವಾದ ಸತ್ಯವು. ವೇದವು ಸರ್ವವರ್ಣ ಧರ್ಮಗಳನ್ನು ಹೇಳಿಯೇ ಹೇಳಿದೆ. ತಂತ್ರಗಳಲ್ಲಿ ಆದಿಗುರುವಾದ ಶಂಭುವು ವರ್ಣಧರ್ಮಗಳನ್ನು ಹೇಳಿಹನು. ಆ ಕರುಣಾ ಸಮುದ್ರನು ಹೇಳಿದ ಆ ವರ್ಣಧರ್ಮಗಳು ವೇದಮಾರ್ಗ ಭ್ರಷ್ಟರಿಗಹವು. ವೈದಿಕ ಮಾರ್ಗ ನಿರತರಿಂದದು ಎಂದಿಗು ಸೇವ್ಯವಲ್ಲ. ಹೀಗೆ ವೈದಿಕರು ಸೇವಿಸಬಾರದ ವರ್ಣಧರ್ಮಗಳು-- ಸೂಕ್ಷ್ಮಾಗಮಾದಿಗಳಲ್ಲಿ ಹೇಳಿದ—ಶೈವದೀಕ್ಷೋಕ್ತ ಮಾರ್ಗೇಣ ದೀಕ್ಷಿತಾ ಬ್ರಾಹ್ಮಣಾಃ ಶಿವೇ। ಮಹಾಶೈವಾಸ್ತು ತೇಜ್ಞೇಯಾ ಮಹಾಂತೋಲೋಕ ಪೂಜಿತಾಃ ॥ ಅನುಶೈವಾ ಇತಿ ಪ್ರೋಕ್ತಾ ನೃಪಾ ವೈಶ್ಯಾಶ್ಚದೀಕ್ಷಿತಾಃ। ಅವಾಂತರಾಖ್ಯಶೈವಾಸ್ತು ಶೂದ್ರಾಶ್ಚಿದ್ದೀಕ್ಷಿತಾಯದಿ। ಕುಲಾಲಪಾರ್ಶ್ವಕಾದ್ಯಶ್ಚಪ್ರವರಃ ಶೈವಉಚ್ಯತೇಃ ॥ ಅನ್ಯೇ ಸಾಮಂತ್ಯ ಜಾತೀನಾಯಂತ್ಯ ಶೈವಂ ವಿಧೀಯತೇ ॥ ಏವಂ ಪ್ರೋಕ್ತಾಃ ಶೈವ ಭೇದಾ ಜಾತ್ಯಾನು ಕ್ರಮಶೋಮಯಾ ॥ ಏಳನೆಯ ಪಟಲ ೧೩ ರಿಂದ ೧೬ ಶ್ಲೋಕಗಳು—

ಎಂಬಲ್ಲಿ ಹೇಳಿದ ಮಹಾಶೈವಾದಿ ಅಂತ್ಯಶೈವ ಜಾತಿಗಳು ಶಿವದೀಕ್ಷೆಯನ್ನು ಹೊಂದಿದ ಬ್ರಾಹ್ಮಣರು ಮಹಾಶೈವರು. ಶಿವದೀಕ್ಷೆಯನು ಹೊಂದಿದ ಕ್ಷತ್ರಿಯರು ಅನುಶೈವರು. ಶಿವದೀಕ್ಷಿತರಾದ ಶೂದ್ರರು ಅವಾಂತರಶೈವರು. ಕುಂಬರರು ಮೋಸಗಾರರು ಇಂತಹರು ಪ್ರವರಶೈವರು. ಉಳಿದ ಅಂತ್ಯ ಜಾತಿಗಳು ಅಂತ್ಯಶೈವರು. ಎಂಬವರಿಗೆ ಹೇಳಿದ ಶಿವದೀಕ್ಷಾದಿಗಳು.

ಶಿವಾಗಮಂಗಳು ಸರ್ವರು ಧರ್ಮಭಾಗಿಗಳಾಗಲೆಂದು ಅವರೆಲ್ಲರಿಗೆ ದೀಕ್ಷೆಯನು ಕಟ್ಟಿದುದು ಶೂದ್ರೋ ಸಂಸ್ಕ್ರಿಯಾಮರ್ಹತಿ ಎಂದು ವೈದಿಕ ಧರ್ಮಕ್ಕೆ ಸಹನವಾಗಲಿಲ್ಲ. ವೈದಿಕರು ಶಿವಲಿಂಗ ಶಿವಪೂಜೆಗಳನ್ನು ಗ್ರಹಿಸಿದರು. ಆದರೆ ಶಿವದೀಕ್ಷೆಯನೊಪ್ಪಲಿಲ್ಲ. ಆದರೆ ಶಿವಪೂಜೆಯೂ ಶಿವಜ್ಞಾನವೂ ಪತಿಧರ್ಮವೆಂದು ಒಪ್ಪಲೇಬೇಕಾಯ್ತು.

## ಆಚಾರ್ಯನ ವಿಪರ್ಯಾಸವು.

ಇದನೀಗ ನೋಡಿದರೆ ವೈದಿಕವೆಂಬ ಪಶುಧರ್ಮದಾಚೆಯಲ್ಲಿ ಪತಿಧರ್ಮವಿಹುದರಿಂದ ಶಿವದೀಕ್ಷೆಯ ನಂಬುಗೆಯುಳ್ಳಂತಹರು ಬ್ರಹ್ಮಮೀಮಾಂಸಾ ವಿಚಾರಾನಂತರದಲ್ಲಿ ದೀಕ್ಷೆಯನು ಅಂಗೀಕರಿಸಬೇಕಲ್ಲದೆ ಬ್ರಹ್ಮಮೀಮಾಂಸಾಧಿಕಾರಾಂಗವಾಗಿ ಶಿವದೀಕ್ಷೆಯೆಂಬುದು ವಿರೋಧೋಕ್ತಿಯು.

## ವೀರಶೈವ ದೀಕ್ಷಾವಿಚಾರವು.

ಮೇಲೆ ದೀಕ್ಷಾವಿಷಯವನ್ನು ಚರ್ಚಿಸಿದೆವು. ದೀಕ್ಷೆಯು ಶಿವಾನುಗ್ರಹ ರೂಪಶಕ್ತಿಯೆಂದು ತೋರಿಸಿದೆವು. ಆ ವೀರಶೈವ ದೀಕ್ಷೆಯನ್ನು ಇನ್ನಿಷ್ಟು ವಿಮರ್ಶಿಸಿ ಅದು ವರ್ಣಗಳನ್ನು ಸುಟ್ಟುಬಿಡುವುದಾಗಿ ಆಚಾರ್ಯನ ಭಾಷ್ಯಸಿದ್ಧಾಂತವನ್ನು ಒಡಿವುದೆಂದು ತೋರಿಸುವೆವು

ದೀಕ್ಷೆಯು ಆಣವಮಾಯೀಯ ಕಾರ್ಮಮಲಗಳನ್ನು ಸುಡುವುದೆಂದು ಶಿವಶಾಸ್ತ್ರಗಳು ಸಾರಿ ಕೂಗಿ ಹೇಳುವುವು. "ಅನಾದಿ ಮಲಸಂಬಂಧಾತ್ಕಿಂಚಿಜ್ಞೋ ಽ ಣುರ್ಮಯೋದಿತಃ" ಅನಾದಿ ಮಲದ ಸಂಬಂಧದಿಂದ ಜೀವನು ಅಣುವೆನಿಸಿದನೆಂದು ಆನು ಹೇಳಿದೆನು, ಎಂಬ ಶ್ರೀಕರಣಾಗವು ಪ್ರಮಾಣದಿಂದ ಆತ್ಮನ ಮಲವೆ ಅಣುತ್ವಕ್ಕೆ ಕಾರಣವಾಗು

ವುದರಿಂದ ಆಣವ ಮಲನೆನಿಸಿತು. ಅಣುತ್ವವೆಂದರೆ ತಾನು ವ್ಯಾಪಕನಾಗಿ ಜ್ಞಾನ ಕ್ರಿಯೆಗಳು ಸ್ಫುರಣವಾಗದೆ ಅತ್ಯಂತ ಜಡಸ್ಥಿತಿಯಲಿಹುದು. ಮಾಯೀಯ ಮಲವೆಂದರೆ ಆತ್ಮನಿಗೆ ದೇಹೇಂದ್ರಿಯಾದಿಗಳನ್ನೂ ಭೋಗ ಭೂಮಿಗಳನ್ನೂ ಭೋಗ ವಿಷಯಗಳನ್ನೂ ಒದಗಿಸುವ ದ್ರವ್ಯವು. ಅದು ತನ್ನ ಕಾರ್ಯಗಳಾದ ಕಲಾದಿಗಳಿಂದ ಆತ್ಮನನ್ನು ಮೋಹಿಸುದು. "ಸಹಜೋಣವೋರ್ಮಲೋ ಮಾಯಾ ಕಾರ್ಯ ಮಾಗಾಮಿಕೋಮಲಃ। ಮಾಯಾಣವೋಮೋಹಿನೀ ಪ್ರೋಕ್ತಾಸ್ವತಃ ಕಾರ್ಯ ಪ್ರಕಾಶಿಕಾ। ಯತಃ ಕ್ರಮೇಣ ಸಂಶ್ಲಿಷ್ಟಾ ಚೈತನ್ಯೋದ್ದ್ಯೋತಿಕಾತ್ಮನಃ॥ (ಕಿರಣಾಗಮ ಮಾಯಾಪಟಲ) ಆಣವಮಲವು ಆತ್ಮನಲ್ಲಿ ಸಹಜವಾದುದು. ಮಾಯೆಯ ಮಲವು ತನ್ನ ಕಾರ್ಯಗಳಿಂದ ಆತ್ಮನ ಚೈತನ್ಯವನ್ನು ಕಿಂಚಿತ್ತಾಗಿ ವ್ಯಕ್ತೀಕರಿಸಿ ಮೋಹಿಪುದು. ಆಣವಮಲವಿಲ್ಲದೆ ಮಾಯಾಮಲವು ಅಂಟದಾಗಿ ಇದು ಆಗಂತುಕಮಲವೆನಿಪುದು. ಇದರ ವಿವರವು ಆಣವ ಮಲವು ಆತ್ಮನಲ್ಲಿರುವನಕ ಆತನು ಜ್ಞಾನ ಕ್ರಿಯಾಶಕ್ತಿಯ ಮೂರ್ಛೆಹೊಂದಿದವನಾಗಿ ವಿಷಸುಪ್ತನಂತಿರುವನು. ಈ ಸ್ಥಿತಿಯಲ್ಲಿ ಅನಾದಿ ಕರ್ಮಮಲದಿಂದ ಸೃಷ್ಟಿಯ ಪ್ರಾರಂಭದಲ್ಲಿ ಮಾಯೆಯ ಕಾರ್ಯಗಳಿಂದ ಕಲಾದಿಗಳುದ್ಭವಿಸಿ ಆತ್ಮನ ಮಲವನು ಸ್ವಲ್ಪ ಕೆದರಲು ಜ್ಞಾನಕ್ರಿಯಾತ್ಮಕ ಚೈತನ್ಯವು ಒಪ್ಪಚಿ ಪ್ರಕಟವಾದಪುದು. ಇದು ಅಲ್ಪವಾಗಿರುವುದರಂದ ಮಾಯೆಯು ಆತ್ಮನನ್ನು ಮೋಹದಲ್ಲಿ ತೊಡಗಿಸಲು ಸಮರ್ಥವಹುದು. ಇನ್ನು ಕಾರ್ಮಮಲವೆಂದರೆ:— ಸುಖದುಃಖಾತ್ಮಕೋ ಭೋಗಃ ಕರ್ಮತಃ ಸಂಸ್ಥಿತಃ ಪಶೋಃ (ಕಿರಣಾಗಮ. ಕರ್ಮಪಟಲ.) ಎಂಬೀ ಪ್ರಮಾಣದಿಂದ ಸುಖದುಃಖಾತ್ಮಕಭೋಗಕ್ಕೆ ಕಾರಣವಾದ ಆತ್ಮನ ವ್ಯಾಪಾರವೆ ಕರ್ಮಮಲವು.

ಈ ತ್ರಿಮಲಧ್ವಂಸವೆ ದೀಕ್ಷೆಯು. ಶಿವನ ಅನುಗ್ರಹ ಶಕ್ತಿಯು ಗುರುರೂಪದಿಂದ ಪ್ರಕಟವಾವಪುದು. ಶಿವನ ಜ್ಞಾನ ಶಕ್ತಿಯೆ ಗುರುವು. ಆ ಜ್ಞಾನ ಶಕ್ತಿಯು ಅನುಗ್ರಹ ಮುಖವಾದುದೆ ದೀಕ್ಷೆಯು- ಸೂಕ್ಷ್ಮಾಗಮದಲ್ಲಿ ತತಃ ಪ್ರಸನ್ನ ಮನಸಾ ಶಿಷ್ಯಮಾಲೋಕ್ಯದೇಶಿಕಃ ಎಂದು ಸೂಚಿಸಿದುದೆ ಆಗಮಾಂತರದಲ್ಲಿ ವಿವರಣವಾದನ್ನು ಸಿದ್ಧಾಂತ ಶಿಖಾಮಣಿಯು- ಗುರೋರಾಲೋಕ ಮಾತ್ರೇಣ ಹಸ್ತ ಮಸ್ತಕ ಯೋಗತಃ ಯಃ ಶಿವತ್ವ ಸಮಾವೇಶೋ ವೇಧಾ ದೀಕ್ಷೇತಿ ಸಾಮತಾ॥ ಗುರುವು

ದಯಾರ್ದ್ರ ದೃಷ್ಟಿಯಿಂದ ನಿರೀಕ್ಷಿಸಿದ ಮಾತ್ರದಲ್ಲಿ ಶಿಷ್ಯನ ಮಸ್ತಕದೊಳು ತನ್ನ ಹಸ್ತವನ್ನಿಟ್ಟ ಸಂಯೋಗದಿಂದ ಶಿಷ್ಯನಿಗಪ್ಪ ಶಿವತ್ವ ಸಮಾವೇಶವು ವೇದಾದೀಕ್ಷೆ ಎನಿಸುವು ಎಂದು ಹೇಳುವದು. ಅಂದರೆ ಗುರುವಿನ ದೃಷ್ಟಿಯು ಶಿಷ್ಯನನ್ನು ನಿರೀಕ್ಷಿಸಲು ಆಣವಮಲದ ಕೋಶವು ಬಿಚ್ಚಿ ಅದರಲ್ಲಿ ಹುದುಗಿದ ಶಿಷ್ಯನ ಚಿತ್ಸ್ವರೂಪವು ಪ್ರಕಟವಾದಪುದು. ವೇಧಾ ಎಂದರೆ ವಿಧ್ಯತೀತಿವೇದಾ, ಆವುದೊಂದು ದೀಕ್ಷೆಯು ಶಿಷ್ಯನ ಮಲಾವರಣವನ್ನು ಚುಚ್ಚುತ್ತಲು ಹರಿವುದೊ ಅದು ವೇದಾ ದೀಕ್ಷೆಯು.

ಇಂತು ಚಿತ್ಸ್ವರೂಪವು ಪ್ರಕಟವಾದ ಶಿಷ್ಯನಿಗೆ ಶಿವವಿದ್ಯಾರೂಪವಾದ ಶಿವಮಂತ್ರವನುಪದೇಶಿಪುದೆ ಮಾಂತ್ರೀ ದೀಕ್ಷೆಯು. ಮಾಂತ್ರೀ ದೀಕ್ಷೇತಿ ಸಾಪ್ರೋಕ್ತಾ ಮಂತ್ರ ಮಾತ್ರೋಪದೇಶಿನೀ. ಮಂತ್ರವನ್ನು ಸಾಂಗವಾಗಿ ಉಪದೇಶಿಪುವದೆ ಮಾಂತ್ರೀ ದೀಕ್ಷೆಯು. ಅನುಭವದಿಂದ ಶಬ್ದಾರ್ಥಗಳು ಅಗಲದೇ ಹೊಂದಿಹವು. ಜಡವಾದ ಆತ್ಮನು ತನ್ನ ಜಡಸ್ಥಿತಿಯಲ್ಲಿ ಅನುಗುಣವಾದ ವಿಷಯಂಗಳಲ್ಲಿ ಎರಕವಾದ ನುಡಿಗಡಣದಲ್ಲಿ ತೊಡಕಿರುವನು. ಸದ್ಗುರುವು ಶಿಷ್ಯನನ್ನು ವೇಧಾದೀಕ್ಷೆಯಿಂದ ಮಲದ ಮುಸುಕಿನಿಂದ ಬಿಡಿಸಲು ಜರಾಯುವಿನಲ್ಲಿ ಶಿಲುಕಿದ ಶಿಶುವು ಹೊರಗೆದ್ದಂತೆ ಚಿನ್ಮಯ ರೂಪನಾಗಿ ಪ್ರಕಟವಾದಪನು. ಆತನ ಚಿದ್ರೂಪ ಪ್ರಪಂಚಕ್ಕೆ ಬೋಧಕವಾದ ಶಬ್ದರಾಶಿಗಳಿಗೆ ಮೂಲವಾದುದೆ ಮಂತ್ರವು. ಆ ಮಂತ್ರಾಕ್ಷರಂಗಳಲ್ಲಿ ಸದ್ಗುರುವು ರಹಸ್ಯದಿಂದ ಸರ್ವಚಿತ್ತತ್ವಂಗಳನ್ನು ಹುದುಗಿಸಿ ಬೋಧಿಪನು. ಆ ಮಂತ್ರವೇ ಅಷ್ಟಾವರಣ ಬೋಧಕವಾಗುತ್ತ ಪಂಚಾಚಾರಗಳಿಗೆ ನೆಲೆಯಾಗಿ ಶಿಷ್ಯನ ಅಂಗ ಪ್ರಾಣವಾದಪುದು. ಅಂಗವು ವಿಷಯಾಶ್ರಯವಾಗಿತ್ತು. ಪ್ರಾಣವು ಸಂಸೃತಿಯಾಶ್ರಯವಾಗಿತ್ತು. ಈಗದು ತೊಲಗಿ ಅಂಗವು ಅಷ್ಟಾವರಣಕ್ಕೂ ಪ್ರಾಣವು ಆಚಾರಕ್ಕೂ ಆಶ್ರಯವಾದುವು. ಇದರಿಂದ ಮಾಯಿಯ ಮಲವು ದೂರವಲಪ್ಪುದು. ಮಾಯಾ ಕಾರ್ಯಗಳಾದ ಕಲಾಧಿ ಪೃಥಿವ್ಯಂತ ತತ್ವಜಾತವು ಆಯಾ ವಾಚಕ ಶಬ್ದಗಳಿಂದ ಜೀವವ್ಯವಹೃತಿಗಾಗಿದ್ದುವು. ಈಗ ವಾಚಕ ಶಬ್ದಗಳು ನಕಾರಾದಿಗಳ ಮಂತ್ರ ರೂಪದಲ್ಲಡಗಿ ಶುದ್ಧಪದಾರ್ಥಗಳನ್ನೆ ಬೋಧಿಸಿದಪುವು. ಇಂದ್ರಿಯಗಳು ನಕಾರಾದಿ ಮಂತ್ರಗಳಿಂದ ಆಚಾರಾದಿ ಲಿಂಗಗಳಲ್ಲಡಗಿ ಶುದ್ಧ ಪದಾರ್ಥಂಗಳನ್ನೇ ಗ್ರಹಿಸುವುವು. ಪರೋಕ್ಷ (ಎದುರಿಗಿಲ್ಲದ) ಪದಾರ್ಥಗ

ಳನ್ನು ಬೋಧಿಸುವ ಶಬ್ದವೂ ಪ್ರತ್ಯಕ್ಷ ಪದಾರ್ಥವನ್ನರುಹುವ ಇಂದ್ರಿಯವೂ ಶುದ್ಧವಾದುದರಿಂದ ವಿಷಯಗಳೂ ಶುದ್ಧವಾದುವು. ಮೋಹಕತ್ವದ ಮಾಯೆಯು ತೊಲಗಿದುದು.

ಇಂತು ಮಲಮಾಯೆಗಳು ವೇಧಾಮಂತ್ರಗಳಿಂದ ತೊಲಗಲು ಕ್ರಿಯಾದೀಕ್ಷೆಯಿಂದ ಕರ್ಮಮಲವು ದೂರಾದಪುದು. ಈ ದೀಕ್ಷೆಯನ್ನು ಸೂಕ್ಷ್ಮಾಗಮವಿಂತು ಹೇಳ್ವುದು. ಏವಂಮಂತ್ರಮುಪಾದಿಶ್ಯ ಶಿಷ್ಯಾಂಗಮಪಿ ದೇಶಿಕಃ ಶಿವಾಂಗಮಿತಿ ಸಂಚಿತ್ಯ ಲಿಂಗ ಸಂಸ್ಕಾರಮಾಚರೇತ್ । ಲಿಂಗಂ ಹಸ್ತೇ ಗೃಹೀತ್ವಾತು ಭಾವದೃಷ್ಟ್ಯಾಚ ದೇಶಿಕಃ । ಸಂಸ್ಥಾಪ್ಯ ಲಿಂಗಂ ಶಿಷ್ಯಸ್ಯ ಮಸ್ತಕಸ್ಥಾಂ ಕಲಾಂ ಪರಾಮ್ । ತಲ್ಲಿಂಗಂ ಸ್ಥಾಪಯಿತ್ವಾಥ ಶಿಷ್ಯೇಸ್ಮಿನ್ದೇಶಿಕೋತ್ತಮಃ । ನಿವೇದ್ಯ ತತ್ಪ್ರಸಾದಂಚ ಪ್ರಾಪ್ಯಾನುಜ್ಞಾಂ ಶಿವಾತ್ಮಿಕಾಮ್ । ಲಿಂಗೇಪ್ರಾಣಾನ್ವಿನಿಕ್ಷಿಪ್ಯಪ್ರಾಣೇಲಿಂಗಂ ವಿನಿಕ್ಷಿಪೇತ್ । ತಲ್ಲಿಂಗಂ ಸ್ಥಾಪಯೇಚ್ಛಿಷ್ಯೇ ಸಮ್ಯಗ್ಧ್ಯಾತ್ವೈಕಭಾವತಃ ॥ ಐವನೆಯ ಪುಟದಲ್ಲಿ—

ಮಲಮಾಯೆಗಳು ಹರಿದುದರಿಂದ ಶುದ್ಧವಾದ ಶಿಷ್ಯನ ಅಂಗವನ್ನು ಶಿವಾಂಗವೆಂದು ಚಿಂತಿಸಿ ಲಿಂಗಸಂಸ್ಕಾರವನಾಚರಿಸತಕ್ಕುದು. ಧರಿಸತಕ್ಕ ಲಿಂಗವನು ಹಸ್ತದಲ್ಲಿ ಹಿಡಿದು ಭಾವದೃಷ್ಟಿಯಿಂದ ನಿರೀಕ್ಷಿಸಿ ಸ್ಥಿರಗೊಳಿಸಿ ಶಿಷ್ಯನ ಮಸ್ತಕದಲ್ಲಿರುವ ಪರ ಕಳೆಯನ್ನು ಆಲಿಂಗವೆಂದು ಈ ಶಿಷ್ಯನಲ್ಲಿ ಸ್ಥಾಪಿಸಿ ದಿವಾತ್ಮಿಕೆಯಾದ ಶಿವಾನುಜ್ಞೆಯನ್ನು ಪಡೆದು ಲಿಂಗದಲ್ಲಿ ಶಿಷ್ಯನ ಪ್ರಾಣವನ್ನೂ ಶಿಷ್ಯನ ಪ್ರಾಣದಲ್ಲಿ ಲಿಂಗವನ್ನೂ ಒಂದಕ್ಕೊಂದು ಮೇಳವಿಸಿತೊಡಕಿಸಬೇಕು. ಇಂತಹ ಲಿಂಗವನ್ನು ಸಮರಸಭಾವದಿಂದ ಶಿಷ್ಯನಲ್ಲಿ ಸ್ಥಾಪಿಸಬೇಕು.

ಇಂತು ಅಂಗಲಿಂಗಗಳ ಪರಸ್ಪರ ಸಮರಸದಿಂದ ಲಿಂಗವು ಶಿಷ್ಯನಲ್ಲಿಯೂ ಶಿಷ್ಯನು ಲಿಂಗದಲ್ಲಿಯೂ ಇಳಿವರು; ಇಂಗುವರು. „ ಲೀನಾರ್ಥಕ ಮಪಿತ್ವೀಶಿಯತ್ತಲ್ಲಿಂಗ ಮುದಾಹೃತಮ್ " ಎಂಬ ಪಾರಮೇಶ್ವರಾಗಮ ಪ್ರಮಾಣದಿಂದ ಅರಿಯಬಹುದು. ಲಿಂಗಾಂಗಗಳ ಪರಸ್ಪರ ಸಮ್ಮೇಳನದಿಂದ ಆತ್ಮನ ಕರ್ಮವು ಹರಿವುದು. ವೇದಾಂತ ಮತಕ್ಕೂ ವೀರಶೈವ ಮತಕ್ಕೂ ಒಂದು ಮಹದಂತರವು ಈ ವಿಷಯದಲ್ಲುಂಟು. ವೇದಾಂತ ಜ್ಞಾನದಿಂದ ಹಿಂದಿನ ಕರ್ಮಗಳಾವುವು ಫಲದಾನಾರಬ್ಧ

ವಾಗಿಲ್ಲವೊ ಅವು ಮಾತ್ರ ವಿನಾಶವಾದವುವು; ಆವುವು ಈ ದೇಹಾರಂಭ ಕವಾಗಿ ಅದರ ದ್ವಾರದಿಂದ ಬ್ರಹ್ಮಜ್ಞಾನಕ್ಕೆ ಕಾರಣವಾಗಿಹವೊ ಅಂತ ಹವು ಭೋಗದಿಂದಲೆ ಕ್ಷಯಿಸತಕ್ಕವಾಗಿ ಶರೀರ ಪಾತದನ್ನಕ್ಕ ಉಳಿ ದವುವು. ಅನಾರಬ್ಧಿಕಾರ್ಯೇ ಏವತು ಪೂರ್ವೇ ತದವಧೇಃ ಬ್ರಹ್ಮ ಬ್ರಹ್ಮಸೂತ್ರ ಅಧ್ಯಾಯ ೪ ಪಾದ ೧ ಸೂತ್ರ ೧೫. ಇದಕ್ಕೆ ಶ್ರೀಕರ ಭಾಷ್ಯವು ಪೂರ್ವೇ ಶಿವಜ್ಞಾನೋತ್ಪತ್ತೇಃ ಪೂರ್ವೇ ಶುದ್ಧ ಜೀವಾನಾ ಮಾರುರುಕ್ಷೂಣಾಂ ಸುಕೃತ ದುಷ್ಕೃತೇ ಅನಾರಬ್ಧಕಾರ್ಯೇ ಅಪ್ರವೃತ್ತ ಫಲೇ ಏವ ವಿದ್ಯಯಾನಶ್ಯತಃ ಕುತಃ ತದವಧೇಃ ತಸ್ಯತಾವದೇವಚಿರಂ ಯಾವನ್ನವಿಮೋಕ್ಷ್ಯೇ ಅಥಸಂಪತ್ಸ್ಯ ಇತ್ಯತ್ರ ಶಿವಜ್ಞಾನ ಸಂಪೂರ್ಣ ಸಿದ್ಧಿಪರ್ಯಂತಂ ಬದ್ಧಜೀವವಚ್ಛುದ್ಧಜೀವಾನಾಂ ಮೋಕ್ಷವಿಲಂಬಾವಗ ಮಾತ್। ಇದಕ್ಕೆ ಕನ್ನಡವು– ಆರೂಢಸ್ಥಿತಿಯನ್ನು ಬಯಸುವ ಶುದ್ಧ ಜೀವರು ಶಿವಜ್ಞಾನೋತ್ಪತ್ತಿಗಿಂತಲು ಮೊದಲು ಎಸಗಿದ ಪುಣ್ಯಪಾಪಂ ಗಳು ತಮ್ಮ ಫಲವನ್ನು ಕೊಡಲು ಪ್ರವೃತ್ತಿಯನ್ನು ಹೊಂದಿರದಿದ್ದರೆ ಮಾತ್ರ ಶಿವಜ್ಞಾನೋದಯದಿಂದ ನಾಶವನೆಯ್ದುವುವು. ಇದೇತರಿಂದ? ಅವನದು (ಜ್ಞಾನಿಯದು) ಅಷ್ಟೇ ತಡವು ಅಂವರೆ ಶರೀರದಿಂದ ಬಿಡು ಗಡೆಯಾಗುವನಕ ಎಂದು ಛಾಂದೋಗ್ಯ ಶ್ರುತಿಯಿಂದ ಶಿವಜ್ಞಾನದ ಸಂಪೂರ್ಣ ಪ್ರಾಪ್ತಿಯ ತನಕ ಬದ್ಧಜೀವರಂತೆಯೆ ಶುದ್ಧಜೀವರಿಗಾದರು ಮೋಕ್ಷವುವಿಲಂಬವಾದವುದೆಂದು ತಿಳಿವುದು. ಶಿವಜ್ಞಾನೋದಯವಾಗು ವುದಕ್ಕಿಂತ ಮೊದಲು ಫಲಮುಖವಾದ ಕರ್ಮಗಳು ವಿದ್ಯೆಯಿಂದ ಸುಡುವುದಿಲ್ಲ; ಅವು ಶರೀರಾವಸಾನವಾಗುವನಕ ತಮ್ಮ ಭೋಗವನು ಣಿಸುವವೆಂಬರ್ಥವು

ಶಿವಾಗಮ ವೀರಶೈವ ಸಿದ್ಧಾಂತವು ಇದರಿಂದ ಬೇರೆಯಾಗಿದೆ.— ವೀರಶೈವಃ ಕ್ರಮೇಣೈವ ಮಾಚರನ್ ಗುರುಶಾಸನಮ್। ಪ್ರಾಪ್ನೋತಿ ಸುಖಮಾರೋಗ್ಯ ಮಿಹಾಮುತ್ರ ಸುದುರ್ಲಭಮ್॥ ಅನೇಕ ಜನ್ಮಸಂ ಪ್ರಾಪ್ತಂ ಕರ್ಮಜಾನಾಮಿತತ್ತಥಾ। ಪ್ರಾರಬ್ಧಮಪಿ ಚೈತಸ್ಯತತ್ಕ್ಷಣಾ ದೇವನಶ್ಯತಿ॥ ಸೂಕ್ಷ್ಮಾಗಮ ಪಟಲ ೫ ಶ್ಲೋಕಗಳು ೫೮—೫೯.

ಗುರುವಿನಪ್ಪಣೆಯಿಂದ ಹೀಗೆ ನಡೆವ ವೀರಶೈವನು ಇಲ್ಲಿಯು ಪರಲೋಕದಲ್ಲಿಯು ಅತಿ ದುರ್ಲಭವಾದ ಸುಖವನ್ನೂ ಆರೋಗ್ಯವನ್ನೂ ಹೊಂದುವನು. ಅನೇಕ ಜನ್ಮಂಗಳಲ್ಲಿ ಗಳಿಸಿದ ಆ ಕರ್ಮವು ಇದ್ದಂತೆಯ

ಆ ಕ್ಷಣದಲ್ಲಿಯೆ ನಾಶವಾಗುವುದು. ಪ್ರಾರಬ್ಧವಹುದಾದರು ನಾಶವ ನೋಂದುವುದು. ಆಗಾಮಿ ಕರ್ಮವು ತಟ್ಟದು.

ಎಂಬೀ ಪ್ರಮಾಣದಿಂದ ಪ್ರಾರಬ್ಧ ಕರ್ಮವೂ ಕ್ಷಯಿಪುದು.

ಇಂತು ಶಿವಾಗಮ ವೀರಶೈವ ದೀಕ್ಷೆಯು ಬ್ರಹ್ಮಜ್ಞಾನವು ಸಾಧಿಸ ಲರಿಯದ ಪ್ರಾರಬ್ಧ ಕ್ಷಯವನೆಸಗುವುದರಿಂದ ಅದರಿಂದ ಪ್ರಬಲತರವು. ಈ ದೀಕ್ಷೆಯನ್ನು ಬ್ರಹ್ಮವಿಚಾರಕ್ಕೆ ಅಂಗವೆಂಬುದು ಅಸಮಂಜಸವು.

## ಪ್ರಾರಬ್ಧಶೇಷಪ್ರಯೋಜನವು.

ಪ್ರಾರಬ್ಧಶೇಷವು ಉಳಿವುದರಿಂದ ಬ್ರಹ್ಮಜ್ಞಾನಿಗೆ ಜಾತಿಯು ಲಯ ವಾಗುವುದಿಲ್ಲ. ಈ ಶರೀರವು ಕರ್ಮಫಲವಾಗಿ ಬಂದಿದೆ. ಆ ಕರ್ಮವು ಈ ಜನ್ಮದಲ್ಲಿ ಉಂಡುತೀರಲಿಕ್ಕಾಗಿ ಶರೀರವು ಬಂದುದರಿಂದ ಶರೀರವು ಬೀಳುವತನಕ ಅದರ ಧಾರಣಕ್ಕಾಗಿ ಉಳಿದು ಭೋಗವನುಂಟುಮಾಡು ವುದು. ಶರೀರ ಪತನದೊಡನೆ ತಾನೂ ಲಯವಾದಪುದು. ಹೀಗೆ ಪ್ರಾರಬ್ಧ ಕರ್ಮವು ಉಳಿದುದರಿಂದ ಅದರ ಕಾರ್ಯವಾದ ಜಾತಿಯು ಬ್ರಹ್ಮಜ್ಞಾನದಿಂದ ಅಳಿಯಲಿಲ್ಲ.

ಶತಸೂತ್ರರತ್ನದಲ್ಲಿ ಭೋಜನುದಹರಿಸಿದ ಪರಾಗಮ ಸೂತ್ರ ದಿಂದ ಕರ್ಮವು— ಧರ್ಮಾಧರ್ಮಾತ್ಮಕಂ ಕರ್ಮ ತಚ್ಚತ್ರಿವಿಧರ್ಮತಃ। ಜಾತ್ಯಾಯುಭೋಗದಂ ಯೋನನಾಮಿಶ್ರಂ ಪಚ್ಯತೇ ಕ್ವಚಿತ್॥ — ಕರ್ಮವು ಪುಣ್ಯಪಾಪಂಗಳ ರೂಪದಿಂದಿಹುದು. ಅದರ ಪ್ರಯೋಜನವು ಮೂದೆರನಾದುದು, ಜಾತಿಯನ್ನುಂಟುಮಾಡುವುದೊಂದು ಆಯುಷ್ಯವ ನೀಡುವುದೊಂದು, ಸುಖದುಃಖಭೋಗಂಗಳ ಸವಿಕಹಿಗಳನೊದಗಿಪು ದೊಂದು. ಈ ಮುಪ್ಪುರಿಯಿಂದಲೆ ಕರ್ಮಸಮುದಯವು ಪಾಕವಾದ ಪುದಲ್ಲದೆ ಒಂದೊಂದೆಯಾಗಿ ಪಾಕವಾಗದು.

## ವೇದಾಂತ ವೀರಶೈವಗಳ ಫಲಭೇದ.

ವೇದಾಂತಮತದಲ್ಲಿ ಪ್ರಾರಬ್ಧ ಕರ್ಮವು ಜ್ಞಾನದಿಂದಳಿಯದಾಗಿ ಬ್ರಹ್ಮಜ್ಞನು ಜ್ಞಾನಸಿದ್ಧಿಯಾಗಲು ಶರೀರದ ವರ್ಣಾಶ್ರಮಾದಿಗಳ ಅಹಂ ಮಮತೆಯನ್ನು ಮಾತ್ರ ನೀಗುವನು. ಆದರೆ ಆ ಶರೀರವಿರುವನ್ನಕ್ಕ ಅವನೊಳಗವು ತೋರಿದಪುವು. ವಿನಷ್ಟದಿಗ್ಭ್ರಮಸ್ಯಾಪಿ ಯಥಾಪೂರ್ವಂ

ವಿಭಾತಿದಿಕ್ । ತಥಾವಿಜ್ಞಾನವಿಧ್ವಸ್ತಂ ಜಗನ್ಮೇಭಾತಿತನ್ನಹಿ ॥ ಇತಿಯೋ ವೇದವೇದಾಂತೈಃ ಸೋತಿವರ್ಣಾಶ್ರಮೀಭವೇತ್ ಸೂತಸಂಹಿತಾ ಮುಕ್ತಿ ಖಂಡ. ಅಧ್ಯಾಯ ೫. ಶ್ಲೋಕ ೨೮-೨೯. ಯಸ್ಯವರ್ಣಾಶ್ರಮಾಚಾರೋಗಲಿತಃ ಸ್ವಾತ್ಮದರ್ಶನಾತ್ ಸವರ್ಣಾನಾಶ್ರಮಾನ್ಸರ್ವಾನ ತೀತ್ಯ ಸ್ವಾತ್ಮನಿಷ್ಠಿತಃ ॥ ಅಲ್ಲಿಯೆ ಶ್ಲೋಕ ೩೧.

ದಿಗ್ಭ್ರಾಂತಿಯುಳಿದಬಳಿಕಲು ಮೊದಲಂತೆಯೆ ತಪ್ಪಿದದಿಕ್ಕು ಅದೆಂತು ತೋರಿದಪುದೊ ಅಂತೆಯೆ ಜ್ಞಾನದಿಂದ ಅಳಿದ ವಿಶ್ವವು ನನಗೆ ತೋರಿತು. ಆದರೆ ಅದಲ್ಲವು. ಇಂತಾವನು ವೇದಾಂತ ವಚನಂಗಳಿಂದೆ ಅರಿದ ಪನೊ ಅವನು ಅತಿ ವರ್ಣಾಶ್ರಮಿಯು. ತನ್ನಾತ್ಮದರ್ಶನದಿಂದಾವನ ವರ್ಣಾಶ್ರಮಾಚಾರವು ಜಾರಿಹುದೊ ಅವನು ವರ್ಣಗಳನ್ನೂ ಆಶ್ರಮಗಳನ್ನೂ ಮೀರಿ ತನ್ನಾತ್ಮನಲ್ಲಿ ನಿಂದಿಹನು.

ತನ್ನಲ್ಲಿ ತೋರುವ ವರ್ಣಾಶ್ರಮಗಳು ಬ್ರಹ್ಮಜ್ಞಾನದಿಂದ ಮಿಥ್ಯವೆಂದು ಕಾಣುತ್ತನಾದರು ಅವುಗಳ ತೋರಿಕೆಯು ತನಗೂ ಮುಂದಿಗೂ ಅಡಗದು. ಸೂತಸಂಹಿತೆಯುಲ್ಲಿ ಹೇಳಿದಂತೆ ವರ್ಣಾಶ್ರಮಾಚಾರವು ಗಲಿತವಾಗಬಹುದು. ಆದರೆ ವರ್ಣವು ಹೋಗುವದಿಲ್ಲ. ಸೂತಸಂಹಿತೆಯನ್ನೆ ನೋಡಿರಿ. ಮುಕ್ತಿಖಂಡದ ಐದನೆಯ ಅಧ್ಯಾಯದ ೨೮-೨೯-೩೧ನೆಯ ಶ್ಲೋಕಗಳನ್ನು ಮೇಲುದಹರಿಸಿದೆವು. ಅದೇ ಅಧ್ಯಾಯದ ಪ್ರಾರಂಭವನ್ನು ನೋಡಿರಿ.

ಆಚಾರ್ಯ ಏವ ಸಂಸಾರ ಮೋಚಕಪ್ರದ ಉಚ್ಯತೇ ।
ಆಚಾರ್ಯೋನಾಮ ವೇದಾಂತ ವಿಚಾರೇಣಾಪ್ತವೇದನಃ ॥
ತಮಸ್ಯನೇಕಧಾ ವಿದ್ಧಿಶ್ರದ್ಧಯಾ ಪುರುಷೋತ್ತಮ ।
ಉತ್ತಮೋ ಮಧ್ಯಮಸ್ತದ್ವದಧಮಾಶ್ಚಾಂಬುಜೇಕ್ಷಣ ॥
ಉತ್ತಮೋ ಬ್ರಾಹ್ಮಣಃ ಪ್ರೋಕ್ತೋ ಮಧ್ಯಮಃ ಕ್ಷತ್ರಿಯಸ್ತಥಾ । ಅಧಮೋ ವೈಶ್ಯ ಇತ್ಯುಕ್ತಃ ಸರ್ವಶಾಸ್ತ್ರಾರ್ಥವೇದಿಭಿಃ ॥
ಶೂದ್ರಾಣಾಂ ಚ ತಥಾ ಸ್ತ್ರೀಣಾಂ ಗುರುತ್ವಂ ನ ಕದಾಚನ ।
ಉತ್ತಮಃ ಪಂಚಧಾಪ್ರೋಕ್ತೋ ಗುರುರ್ಬ್ರಹ್ಮಾತ್ಮವೇದಭಿಃ ।
ಬ್ರಹ್ಮಚಾರೀ ಗೃಹಸ್ಥಶ್ಚ ವಾನಪ್ರಸ್ಥಶ್ಚ ಭಿಕ್ಷುಕಃ ।
ಅತಿವರ್ಣಾಶ್ರಮೀಚೇತಿ ಕ್ರಮಾಚ್ಛ್ರೇಷ್ಠಾ ವಿಚಕ್ಷಣ ॥

೨-೩-೪-೯ ಶ್ಲೋಕಗಳು.

ಈ ಪದ್ಯಗಳ ಕನ್ನಡವು. ಆಚಾರ್ಯನೆ ಸಂಸಾರದಿಂದ ಬಿಡಿಸುವ ಬ್ರಹ್ಮವಿದ್ಯಾದಾಯಕನು. ಆಚಾರ್ಯನೆಂದರೆ ವೇದಾಂತ ವಿಚಾರದಿಂದ ಅನುಭವ ಹೊಂದಿದವನು. ವಿಷ್ಣುವೆ! ಆಚಾರ್ಯನು ಹಲವು ತೆರನಹನೆಂದು ನಂಬುಗೆವಿಡದು ತಿಳಿ. ಕಮಲೇಕ್ಷಣನೆ ಆಚಾರ್ಯನು ಉತ್ತಮನೆಂದೂ ಮಧ್ಯಮನೆಂದೂ ಅಧಮನೆಂದೂ ಮೂದೆರನಹನು. ಉತ್ತಮನೆಂದರೆ ಬ್ರಾಹ್ಮಣನು. ಮಧ್ಯಮನೆಂದರೆ ಕ್ಷತ್ರಿಯನು. ಅಧಮನೆಂದರೆ ವೈಶ್ಯನು. ಶೂದ್ರರೂ ಹೆಂಗಸರೂ ಗುರುವಾಗರು. ಉತ್ತಮ ಗುರುವಿನಲ್ಲಿಯು ಐದು ಬಗೆಯುಂಟು ಬ್ರಹ್ಮಚಾರಿಯು ಗೃಹಸ್ಥನು ವಾನಪ್ರಸ್ಥನು. ಭಿಕ್ಷುಕನು ಅತಿ ವರ್ಣಾಶ್ರಮಿಯು. ಇಂತೈದು ಪರಿವಿಡಿಯಿಂದ ಒಬ್ಬರಿಗೊಬ್ಬರು ಮೇಲು.

ಬ್ರಹ್ಮವನರಿದ ಗುರುಗಳಲ್ಲಿ ಮೂರು ತೆರವನು ತೋರಿಸಿ ಆ ಮೂವರಲ್ಲಿ ಉತ್ತಮನು ಬಾಹ್ಮಣನೆಂದು ಹೇಳುವನು. ಆ ಉತ್ತಮ ವರ್ಗದಲ್ಲಿ ಐದು ತರಗಳನ್ನು ವಿವರಿಸಿ ಅತಿ ವರ್ಣಾಶ್ರಮಿಯನ್ನು ಎಲ್ಲಕ್ಕು ಮೇಲೆನ್ನುವನು. ಅದರಿಂದ ಅತಿ ವರ್ಣಾಶ್ರಮಿಯು ಬ್ರಹ್ಮಜ್ಞಾನದಿಂದ ವರ್ಣಾಶ್ರಮ ಸಮಾಚಾರವನ್ನು ಜಾರಿಸಿದವನಾದರು ಬ್ರಾಹ್ಮಣನೆ ಅಂದರೆ ಜೀವನೇ.

ವೀರಶೈವಲಿಂಗಸಮರಸನು ಅಂತಲ್ಲ. ದೀಕ್ಷೆಯಿಂದ ಮಲವಾಯೆಗಳಂತೆ ಕರ್ಮಪಾಶವೂ ಹರಿದು ಪ್ರಾರಬ್ಧವಿಲ್ಲದಾಗಿ ಕರ್ಮಜನ್ಯ ವರ್ಣವು ಅಳಿವುದು. ಅವನು ವರ್ಣಿಯಲ್ಲ. ಅತಿ ವರ್ಣಿಯಲ್ಲ. ಶುದ್ಧ ಲಿಂಗಾಯತನು — ಲಿಂಗದಲ್ಲಿ ವಿಸ್ತೃತಿಯ ನೆಯ್ದಿದವನು. ಲಿಂಗವು ತನ್ನಲ್ಲಿ ವಿಸ್ತೃತವಾದವನು. ಲಿಂಗವ್ಯಾಪೃತನು. ಲಿಂಗವು ತನ್ನಲ್ಲಿ ವ್ಯಾಪೃತವಾದವನು.

ಇಂತಾದುದರಿಂದಲೆ ಯಸ್ಯೈವಂಶಾಭಂವೀದೀಕ್ಷಾಸಂಜಾತಾಗುರುಕೃಪಾವಶಾತ್ ಪೂರ್ವಜಾತ್ಯಾದಿಕಂತಸ್ಯನಸ್ಮರೇತ್ಪ್ರಾಕೃತಂಹಿತತ್॥ ಎಂದು ಮುಂತಾಗಿ ಸೂಕ್ತಾಗ್ರವು ಲಿಂಗದೀಕ್ಷಿತನ ಪೂರ್ವಜಾತಿಯನ್ನು ಸ್ಮರಿಸಕೂಡದೆಂದುದು.

ಇಂತಹ ಶಿವದೀಕ್ಷೆಯು ಪ್ರಾರಬ್ಧಕ್ರಿಯೆಗಳ ಮೀರದ ಪ್ರಾಕೃತವಾದ ಬ್ರಹ್ಮಮೀಮಾಂಸಾಶಾಸ್ತ್ರಾಧಿಕಾರಸಂಪಾದಕನೆಂಬುದು ತಪ್ಪು.

## ಒಂದು ಆಕ್ಷೇಪವು.

ಆಹುದಿದು. ಯುಕ್ತಿಯುಕ್ತವಪ್ಪಂತೆ ತೋರುವದು. ಅದರೆ ಶಾಂಕರಸಂಹಿತಾದಿಗಳಲ್ಲಿ ವೈದಿಕ ವಿಧಿ ಪ್ರಾಪ್ತವಾದುದೆ ಧರ್ಮವು. ಅದನುಳಿದು ಧರ್ಮಪ್ರಮಾಣವಿಲ್ಲವು. ಅದನ್ನು ಮೀರಿ ಮಾಡಿದುದು ಅಧರ್ಮವು ಎಂದು ಹೇಳಿಯದೆ. ಆದುದರಿಂದ ಲಿಂಗಧಾರಣವು ವೇದ ವಿಧಿವಿಹಿತವಲ್ಲದಿದ್ದರೆ ಧರ್ಮವೆನಿಸದು. ಅದು ವೇದವಿಹಿತವೆನ್ನುವುದಕ್ಕೆ ದೇವಧಾರಣ ವಾಕ್ಯವು ಗತಿಯು. ಇದನ್ನೇ ಶ್ರೀ ಪಂಡಿತಾಚಾರ್ಯನು ಚೆನ್ನಾಗಿ ಪ್ರತಿಪಾದಿಸಿಹನು. ಲಿಂಗಧಾರಣವು ಶ್ರುತಿವಿಹಿತವೆಂಬ ತನ್ನ ಸಿಂದ್ಧಾಂತಕ್ಕೆ ಲಿಂಗವಂತನಿಗೆ ಪಂಚಸೂತಕಂಗಳಿಲ್ಲದುದರಿಂದ ವರ್ಣ ಚತುಷ್ಟಯುವನ್ನು ಮೀರಿದ ಮಾರ್ಗವಿದು. ರಜಸ್ವಲಾದಿ ಸ್ತ್ರೀಯರಿಂದಾದ ಅಡುಗೆಯನುಣಬಹುದು. ಉಣದಿದ್ದರೆ ಶೈವ ಶಾಸ್ತ್ರವನು ಮೀರಿದಂತಾದಪುದು. ಆದರಿಂದ ವೈದಿಕರು ಲಿಂಗಧಾರಣವನು ಹೊಂದಲಾಗದೆಂದು, ಆಕ್ಷೇಪವ ಕಲ್ಪಿಸಿ ಪಂಚಸೂತಕಗಳು ಇಷ್ಟಲಿಂಗ ಪೂಜೆಯಲ್ಲಿ ಮಾತ್ರ ನಿಷೇಧಿತವಾಗಿವೆ. ಅವನುಳಿದು ಇತರ ಸಂದರ್ಭಗಳಲ್ಲಿ ಅವು ಉಂಟೆ ಉಂಟು ಎಂದು ಸ್ಥಾಪಿಸಿ ಲಿಂಗಧಾರಣವು ವೇದವಿಹಿತವೆಂದು ಸಿದ್ಧಾಂತವ ಸ್ಥಾಪಿಸಿಹನು. ನಮ್ಮ ಆಚಾರವನ್ನು ಹಿಡಿದು ಲಿಂಗಧಾರಣವು ವೇದವಿಹಿತವಲ್ಲವೆನ್ನುವುದಕ್ಕಿಂತ ನಮ್ಮ ಆಚಾರಗಳೇ ಕಾಲಚಕ್ರದಿಂದ ಕೆಟ್ಟಿವೆ ಎನಲಾಗದೇ ಎಂದರೆ,

## ಇದಕ್ಕೆ ಸಮಾಧಾನವು.

ನಾವು ಇದುವರೆಗೆ ನಡೆಯಿಸಿದ ವಿಚಾರವು ವಸ್ತು ಪರೀಕ್ಷಣ ಪೂರ್ವಕವಾಗಿ ನಡೆದಿದೆ. ಅಲ್ಲದೆ ನಮ್ಮ ಆಚಾರಗಳನ್ನು ಹಿಡಿದು ಆಚಾರ್ಯನ ಸಿದ್ಧಾಂತವನ್ನು ಹಿಡಿದಿಲ್ಲ. ಆದೊಡೆಯು ಈ ಆಕ್ಷೇಪದಿಂದ ನಮಗೊಂದು ಅನುವು ದೊರೆತಿದೆ. ಅಂದರೆ ಪಂಚಸೂತಕಗಳು ಲಿಂಗವಂತನಿಗೆ ಸ್ವೇಷ್ಟಲಿಂಗಪೂಜಾಮಾತ್ರದಲ್ಲಿ ಸಂಬಂಧವನೆಯ್ದುವೊ? ಅಥವಾ ಅವನನ್ನು ಎಂದಿಗೂ ಅಂಟಲಾರವೊ? ಲಿಂಗವಂತನು ಬ್ರಾಹ್ಮಣಾದಿ ವರ್ಣಗತನೊ ಆ ವರ್ಣಗಳಿಲ್ಲದಹನೊ? ಧರ್ಮವು ವೇದವಾಕ್ಯವಿಹಿತವಾದುದೊ ಆತ್ಮನ ಕ್ರಿಯಾಶಕ್ತಿಯ ಸುಪ್ರಚಾರವೊ ಎಂಬವುಗಳ ವಿಮರ್ಶನಾವಕಾಶವು. ಈಗ ಬರೆದುದರಿಂದ ಈ ಪ್ರಶ್ನೆಗಳಿಗುತ್ತರಗ

ಳಿವು. ಪಂಚಸೂತಕಗಳು ಲಿಂಗವಂತನನು ಎಂತಾಗಿಯೂ ಅಂಟಲಾರವು. ಲಿಂಗವಂತನು ವರ್ಣಗತನಲ್ಲ. ಆತ್ಮನ ಕ್ರಿಯಾಶಕ್ತಿಯ ಸುಪ್ರಚಾರವೇ ಧರ್ಮವು. ಇದನ್ನೆಲ್ಲ ವಿಸ್ತರಿಸುವುದೆ ಮುಂದಿನ ವಿಮರ್ಶವು. "ಮೊದಲನೆಯದು ಚೋದನಾಲಕ್ಷಣೋ ಅರ್ಥೋ ಧರ್ಮಃ" ವೇದವಿಹಿತವಹುದಾಗಿ ಪ್ರಯೋಜನವುಳ್ಳುದಾವುದೋ ಅದು ಧರ್ಮವು ಎಂಬ ವಿಧಾನವನ್ನು ಪರಿಕಿಸುವುದು.

# ಕೀರ್ತಿ—ವೇಶ್ಯೆ !

ಕೀರ್ತಿ ! ಹುಂ ! ಇದೇ ಕೀರ್ತಿ ! ಉಚ್ಚಸೀಠದಿ ನಿಂತು
ಏಂ ನಗುವೆ ಓ ಜಗನ್ಮೋಹಿನಿಯೇ ? ಮರೆ ಮಾಡು
ಆ ನಿನ್ನ ಚಾರು-ಧವಳ-ಪ್ರಭೆಯ ! ಜಗವಿಂದು
ಅದಕಾಗಿ ಹುಚ್ಚೆದ್ದು ಕುಣಿಯುತಿದೆ ! ನಿನ್ನೊಲ್ಮೆ-
ಗಾತ್ಮ-ಬಲಿಯೇ ಯೆಂಬುದರಿಯದಲೆ ಹುಚ್ಚೆದ್ದು
ಕುಣಿಯುತಿದೆ ! ಮೌನದಲಿ ನೀನೊಳೆಯ ಬಂದನಾ-
ಥರನು ಬಡವರನು ಬಲಿಗೊಡುತಲಿದೆ ! ಅನರ ಮೆ-
ಚ್ಚಿದ ನಿನ್ನನಪಹರಿಸಿ ಸಂಭ್ರಮದಿ ಕುಣಿಯುತಿದೆ !

ಧರ್ಮಕ್ಷೇತ್ರವು ಒಳಗೆ ಕುರುಕ್ಷೇತ್ರನಾಗುತಿದೆ !
ಸತ್ಯಪ್ರೇಮದ ಪಥದಿ ಕುಟಿಲ ಲಕ್ಷ್ಮಿಯ ರಥವು
ಸಾಗುತಿದೆ ! ಸುವಿಚಾರವನು ಮೆಟ್ಟಿತಧಿಕಾರ-
ವೇಳುತಿದೆ ! ಜಾರ-ಚೋರರು ಬಲಾತ್ಕರಿಸಿರಹ !
ಕಾಮಾಂಧರಾಗಿ ನಿನ್ನನು, ಕೀರ್ತಿ ! ಆದಕಾಗಿ
ಅಡಗಡಗು ! ಇಲ್ಲದೊಡೆ, ಬಾಳಿಂದು ವೇಶ್ಯೆಯೊಲು !

೨೪-೬-೧೯೩೮.

ಈಶ್ವರ ಸಣಕಲ್ಲ.

[ಬೆಳಗಿನ ಎರಡು ಗಂಟೆಗೆ ]

# ಹರಿಹರನು ಕೀರ್ತಿಸಿದ ಕಾರಿಕಾಲಮ್ಮೆ.

(ಲೇಖಕರು:— ಶ್ರೀ ಚಂದ್ರಶೇಖರದೇವರು, ಅಡ್ನೂರು )

ಕನ್ನಡ ನಾಡಿನಲ್ಲಿ ಧಾರ್ಮಿಕ ಕ್ಷೇತ್ರದಲ್ಲಿ ಧೈರ್ಯದಿಂದ ಧುಮುಕಿ ಕಾವ್ಯ ಜೀವನವನ್ನು ಪಡೆದ ಸ್ತ್ರೀಯರಲ್ಲಿ ಕಾರಿಕಾಲಮ್ಮೆಯು ಅಗ್ರಗಣ್ಯ ಳಾಗಿದ್ದಾಳೆ. ಶರಣರಲ್ಲಿ ಮಹಾದೇವಿಯಕ್ಕಗಿರುವ ಸ್ಥಾನವು ಪುರಾತ ನರಲ್ಲಿ ಕಾರಿಕಾಲಮ್ಮೆಗಿದೆ. ಆದರೆ ಅದು ಧಾರ್ಮಿಕಾಚರಣೆಯೊಂದ ರಲ್ಲಿಯೇ ಹೊರತು ಸಾಹಿತ್ಯ ಸೇವೆಯಲ್ಲಿ ಅಲ್ಲ ಕಾರಿಕಾಲಮ್ಮೆಯ ಕತೆಯು ಕೇಳುವವರ ಕರುಳನ್ನು ಕರುಗಿಸುವಂತಹದು; ಕಣ್ಣಾರಳಿಸು ವಂತಹದು. ಅವಳ ಆ ಭವ್ಯ ಚರಿತ್ರೆಯಲ್ಲಿ ಅನಿತೊಂದು ಭಕ್ತಿಭಾವವು ಬೆರೆತು ಹೆಪ್ಪುಗೊಂಡಿದೆ. ಎಗ್ಗಳವಾಗಿ ಎದ್ದು ನಿಂತಿದೆ.

ಈ ಕಾರಿಕಾಲಮ್ಮೆಯು ೬೩ ಪುರಾತನರಲ್ಲಿ ಓರ್ವಳು. ಇವಳ ನಿಜವಾದ ಹೆಸರು ಅಮ್ಮೆ. ಇವಳ ಊರು ಕಾರಿಕಾಲ (ಕಾರೆಕಾಲ್). ಈ ಊರ ಹೆಸರೂ ಸೇರಿ ಇವಳಿಗೆ "ಕಾರಿಕಾಲಮ್ಮೆ" ಎಂದು ಹೆಸರಾ ದಂತೆ ಹರಿಹರ ದೇವನ ಈ ಉಕ್ತಿಯಿಂದ ವ್ಯಕ್ತವಾಗುತ್ತಿದೆ.

"ಸಕಲ ಜನಂಗಳ್ ಕಾಣುತ |
ಕೌತುಕಮೆನಲಾ ಕಾರಿಕಾಲೊಳಿಪ್ಪಮ್ಮೆಯರಂ ॥ *

ಮತ್ತು ಧರೆಗೆಸೆವ ಚೋಳದೇಶದಲ್ಲಿ "ಕರಮೊಪ್ಪುವುದು ಕಾರಿಕಾ ಲೆಂಬ ಶಿವಪುರಂ" ಎಂಬುದಾಗಿಯೂ ರಗಳೆಯ ಆರಂಭಕ್ಕೆ ಬಣ್ಣಿ ಸಿದ್ದಾನೆ.

ಭಕ್ತಿ ಬಲ್ಲಿದಳೂ ಜ್ಞಾನ ಸಂಪನ್ನಳೂ ಆದ ಕಾರಿಕಾಲಮ್ಮೆಯು ಸಂಪತ್ತಿನಿಂದ ಕುಬೇರನನ್ನು ಮೀರುವಂತಿದ್ದ ವಾಣಿಕ ಸೆಟ್ಟಿಯ ಸತಿ ಯಾಗಿದ್ದಳು. † ಪರಮ ಪವಿತ್ರತಾ ಶಿರೋಮಣಿಯಾಗಿದ್ದಳು.

---

* ಇದಕ್ಕೆ ಸೋಮೇಶ್ವರ ಪುರಾಣವೂ ಪ್ರಮಾಣವಾಗಿದೆ.

† ಈಕೆಯ ಪತಿಯ ಹೆಸರು ಪರಮಗತ್ತನೆಂದೂ ಈತನ ಊರು ನಾಗಪಟ್ಟಣ ವೆಂದೂ ಕಾರಿಕಾಲವು ಇವಳ ತವರೂರೆಂದೂ ಇವು ಎರಡೂ ಊರುಗಳು ಮದ್ರಾಸ ಇಲಾಖೆಯ ತಂಜಾವೂರ ಜಿಲ್ಹೆಯಲ್ಲಿವೆಯಂದೂ ಸದ್ಧರ್ಮ ದೀಪಿಕೆಯ ಸಂಪಾದಕರು ಬರೆದ 'ದೇವಿಯರ ತ್ರಿವಿಧಿ'ಯಿಂದ ತಿಳಿದು ಬರುತ್ತದೆ. ಪುಟ ೨೧

ಭವಿಗೆ ಹೆಂಡತಿಯಾಗಿ ಪರಾಧೀನೆಯಾಗಿದ್ದರೂ ತನ್ನ ಆತ್ಮ ನಿಷ್ಠೆಯನ್ನು ಬಿಟ್ಟಿರಲಿಲ್ಲ. ಧರ್ಮಬಲವನ್ನು ತ್ಯಜಿಸಿರಲಿಲ್ಲ. ಗುಪ್ತವಾಗಿಯೇ ಗಿರಿಜಾರಮಣನಲ್ಲಿ ಅತುಲವಾದ ವಿಶ್ವಾಸವನ್ನಿಟ್ಟಿದ್ದಳು. ಆದರಿಂದ ಅವಳು ಶಿವನಿಗೆ ಪರಮ ಆಪ್ತಳಾಗಿದ್ದಳು.

ಕಾರಿಕಾಲಮ್ಮೆಯು ಗುಪ್ತ ಭಕ್ತೆಯಿಂದಿರುವದನ್ನು ಆ ಮನೆಯಲ್ಲಿರುವ ಅತ್ತೆ, ಮಾವ, ಗಂಡ ಮೊದಲಾದವರಾರೂ ಅರಿತಿರಲಿಲ್ಲ. ಅವಳಾದರೂ ಆವರರಿಯುವಂತೆ ಆಡಂಬರದ ಪೂಜೆ ಪುನಸ್ಕಾರಗಳನ್ನಿಟ್ಟುಕೊಂಡಿರಲಿಲ್ಲ. ಅವರರಿಯದಂತಹ ಆಧ್ಯಾತ್ಮಿಕ ಅರ್ಚನೆಯನ್ನು ಆದೆಂದಿಗೂ ಬಿಟ್ಟಿರಲಿಲ್ಲ ಅವಳಿಗೆ ಭೋಗದ ಭ್ರಾಂತಿಯಿರಲಿಲ್ಲ. ಯೋಗ ವಿಯೋಗಗಳ ತೊಡಕಿರಲಿಲ್ಲ. ರಾಗ-ವಿರಾಗಗಳ ಹಂಬಲಿರಲಿಲ್ಲ. ಆದ್ದರಿಂದಲೇ ಅವಳು ಅಂತರಾತ್ಮನ ಅಂತರಾರ್ಚನೆಯಲ್ಲಿ ನಿಷ್ಠಳಾಗಿದ್ದಳು. ಹಾಗಾದರೆ ಅವಳು ಪೂಜಿಸುವ ಮನೆಯಾವುದೆಂಬುದನ್ನೂ, ಉಪಚರಿಸುವ ಪತ್ರಿ, ಹೂವು, ಧೂಪ, ದೀಪಗಳು ಯಾವವೆಂಬುದನ್ನೂ ತಿಳಿಯುವ ತವಕವು ನಿಮಗಿದೆಯೇ ? ಹಾಗಿದ್ದರೆ ಕವಿಯು ಹೇಳಿರುವದನ್ನೇ ಕೇಳೋಣ ಬನ್ನಿ:—

ಬೋನವಂ ಮಾಡುವೆಡೆ ದೇವಾರ್ಚನಾ ಸ್ಥಳಂ
ಏನೆಂಬೆನಲ್ಲಿ ಸಿಂಹಾಸನಂ ಕರತಳಂ ॥
ನೆನೆವ ಘನಚಿಂತೆ ಸಕಲ ಸ್ತೋತ್ರವಭವಂಗೆ ।
ಮನದ ನಿರ್ಮಳವರ್ಗ್ಘವಣಿ ಮಹಾದೇವಂಗೆ ॥
ಕೆಯ್ಯ ಕೀರೆಯ ಪರಿಮಳದ ಪುಷ್ಪವಭವಂಗೆ ।
ಸುಯ್ಯಕಂಪೆ ಗುಗ್ಗಳ ಧೂಪವಾ ಮಹಿಮಂಗೆ ॥
ನೋಟವೇ ಬೆಳಗಿನಾರತಿ ಶಂಕರಂಗಲ್ಲಿ ।
ಊಟವಲ್ಲಿಯೆ ಸಮೆದ ಬೋನದೋಗರವಲ್ಲಿ ॥
ಇಂತಾರರಿಯದಂತಿರೆ ಶಿವನನರ್ಚಿಸಳು ॥
ಇಂತು ಶಿವಭಕ್ತಿಯಂ ಮನದೊಳಗೆ ಪೆರ್ಚಿಸಳು ॥

ಅವಳು ಶಿವಪೂಜೆಗಾಗಿ ಕಾಡುಗೀಡು, ಕ್ಷೇತ್ರಗೀತ್ರಗಳನ್ನು ಹುಡುಕಲಿಲ್ಲ. ಸ್ತುತಿಸಲು ಶೃತಿ, ಪುರಾಣಗಳಲ್ಲಿರುವ ಸ್ತೋತ್ರಗಳನ್ನು ಕಂಠಪಾಠ ಮಾಡಲಿಲ್ಲ. ಮಜ್ಜನಕ್ಕೆ ಕೆರೆ, ಭಾವಿ, ನದಿಗಳಿಗೆ ಅಲೆಯಲಿಲ್ಲ.

ಬಂದು ಎಂದಿನಂದದಿ ಆ ಭಕ್ತೆಯು ಅಂತರಂಗ ಸನ್ನಿಹಿತವಾದ ಪ್ರಾಣಲಿಂಗಕ್ಕೆ ಶಮೆಯೆಂಬ ಸತ್ಯೋದಕದಭಿಷೇಕವ ಮಾಡಿ, ನಿಶ್ಚಲ ಚಿತ್ತೆಂಬ ಗಂಧವನರ್ಪಿಸಿ, ನಿರಹಂಕಾರವೆಂಬ ಅಕ್ಷತೆಯನಿಕ್ಕಿ, ವಿರತಿಕುಸುಮವ ಧರಿಸಿ, ಸತ್ಯತೊಡಿಗೆಯ ತೊಡಿಸಿ, ವಿವೇಕ ವಸ್ತ್ರವ ಹೊದಿಸಿ, ವಿನಯವೆಂಬ ಧೂಪವ ಹಾಕಿ, ಅರಿವೆಂಬ ಆರತಿಯನೆತ್ತಿ, ನಿತ್ಯನೇಮಗಳ ಮಾಡಿ ಪಾಡಿ ಓಲಾಡಿ—ಹೆರೆಹಿಂಗದೆ ಹರುಷ ತೀರದೆ ಮಾಡಿಟ್ಟ ಓಗರವನ್ನು ಆರಾಧ್ಯಮೂರ್ತಿಗೆ ಇನ್ನು ಆರೋಗಿಸುವೆನೆಂದು ಅನುವಾಗಲು, ಅದೇ ಸಮಯಕ್ಕೆ ಅವಳ ಆ ಮಿತಿಮೀರಿದ ಅತಿಭಕ್ತಿಗೆ ಸಿತಿಕಂಠನು ಉತ್ಕಂಠಿತನಾಗಿ, ಪುಲಿದೊವಲುಟ್ಟು-ಜಡೆದಲೆಯವನಾಗಿ ಸಾಮಾನ್ಯ ತಪಸ್ವಿಗಳಂತೆ ವೇಷಧರಿಸಿಕೊಂಡು ಮೈದೋರುವನು. ಮುಂದೆ ಬಂದ ಶಿವನನ್ನು ನೋಡಿ ಕಾರಿಕಾಲಮ್ಮೆಯು ನಲಿದಾಡಿ ಏನು ಎನ್ನವನೆ! ಏಕೆ-ಬಂದೈ? ಭಾವುಕರು ಭವಿಗಳ ಮನೆಗೆ ಬರುವುದೇ? ಭಕ್ತಿ ಇಲ್ಲುಂಟೇ? ಎಂದು ಭಯಭಕ್ತಿಯಿಂದ ಪೇಳೆನಲು—ವೇಷದಿಂದ ಬಂದ ಶಿವನು ಇನ್ನು ಸುಮ್ಮನಿರುವವನು ಲೇಸಲ್ಲೆಂದು ಯುಕ್ತಿಯಿಂದ—

ಭಕ್ತರೆಂದರಿಯೆವಾರೆಂದರಿಯೆವೆಲೆಯಮ್ಮ।
ಭಕ್ತಿಗಟ್ಟೋಗರವನಿಕ್ಕು ಪೋದಪೆವಮ್ಮ॥

ಎಂದು ಜಾಣ್ಮೆಯಿಂದ ಶಿವನು ಹೇಳಲು ಕಾರಕಾಲಮ್ಮೆಯ ಅಂತರಂಗದ ಭಕ್ತಿಯು ತಡೆಯದೆ ಉಕ್ಕಿ ಮನದೊಳಕ್ಕಾಡಿ:—

ಮನದ ಗರ್ಭಿಣಿ ಜಿಹ್ವೆಯಿಂ ಬೆಸಲೆಯಪ್ಪಂತೆ।
ತನುವಿಡಿದ ಭಕ್ತಿಯಿಂ ಕಾಣ್ಬತುಸುರಿವಳಿಂತೆ॥
ಆರುವುಂ ಕಾಣ್ಬದಕೆ ಮುನ್ನವಾರೋಗಿಪುದು।
ಆರುವರಿಯದ ತೆರದಿ ತ್ವರತದಿ ಕರುಣಿಪುದು॥
ದೇವ ಕಂಡೊಡೆ ಭಕ್ತಿಯಿಂತರುಪಿದಂತಕ್ಕು।
ದೇವ ಬೇಕಾಂ ಬದುಕೆನರಿದೊಡಿರಿದಂತಕ್ಕು॥
ಎನುತಲ್ಲಿಯಾರೋಗಣೆಗೆ ಕೊಟ್ಟು ಬೇಗದಿಂ।
ಘನಮಹಿಮ ಹದುಳ ನಾರೈಸೆಂದು ರಾಗದಿಂ॥
ಮನೆಯವರ್ಕಂಡೊಡಂ ಕೊಲುಗೆನ್ನನೆನುತಲ್ಲಿ।
ತನಿವಣ್ಣನೆರಡರೊಳಗೊಂದನಿಕ್ಕಿದಳಲ್ಲಿ॥

ಹಾ! ಎಂತಹ ಬಿಕ್ಕಟ್ಟಿನ ಭಕ್ತಿಯಿದು. ದುಸ್ಸಹವಾದ ಸನ್ನಿವೇಶದಲ್ಲಿಯೂ ಸಹ ಭಕ್ತಿಯನ್ನು ಚ್ಯುತಿಬಾರದಂತೆ ನಡೆಯಿಸಿಕೊಂಡು ಬರಬೇಕಾದರೆ ಅವಳಲ್ಲಿ ಎಷ್ಟು ಧೈರ್ಯ ಎಷ್ಟು ಆತ್ಮಬಲ ಎಷ್ಟು ಆಧ್ಯಾತ್ಮಿಕ ಪಿಪಾಸೆಯಿದ್ದಿತೆಂಬುದು ವ್ಯಕ್ತವಾಗುತ್ತಿದೆ. ಕಂಡರೆ ಕೊಲ್ಲುವಂತಹ ಕಟುಕ ಕಲ್ಲೆದೆಯ ಬಳಗದಲ್ಲಿ ನಿಂದು ಭಕ್ತಿಯನ್ನು ಮಾಡುವದೆಂದರೆ ಸರ್ವಸಾಮಾನ್ಯರ ತುತ್ತೇ? ವಿಷಯೋಪಾಸಿಗಳ ಸೊತ್ತೇ? ಆದರೂ ಆಗಲಿ. ಮರೆಮಾಜಿ ಭಕ್ತಿಯನ್ನು ಮಾಡಿ ಪಾರಾಗಬೇಕೆಂದು ಅವಳು ಬಗೆದಿದ್ದರೆ ಈಶಸಂಕಲ್ಪವು ಮತ್ತೊಂದನ್ನು ಬಗೆದಿದ್ದಿತು. ಅವಳು ಎಷ್ಟೇ ಆತುರಮಾಡಿ ಎಡೆಮಾಡಿದರೂ

...ನಲಿದಾರೋಗಿಸುತಿರ್ಪ ಸಮಯದೊಳ್ ।<br>
ದಿಕ್ಕನೇ ಮನೆಯ ಬಂದನಾ ಪೊಲ್ತಿನೊಳ್ ॥

ನೋಡಿದಿರಾ ವಿಧಿವಿಲಾಸವನು! ತಪಸ್ವಿಯು ಉಣ್ಣುವ ಸಮಯಕ್ಕೇನೆ ಮಾಣಿಕಸೆಟ್ಟಿಯು ಬರುವನು. ಆತನು ಬಂದುದನ್ನು ಕಂಡು ವೇಷಧಾರಿಯಾದ ಶಿವನು ನಸುಗಾಣದಂತೆ ಅಡಗಿ ಬಿಡುವನು. ಹೇಗಾದರೂ ಸೆಟ್ಟಿಯ ಮನಸ್ಸಿಗೆ ಯಾವದೋ ಸಂದೇಹವು ಅಂಟದೇ ಬಿಡಲಿಲ್ಲ. ಸಂಶಯದಿಂದಲೇ ಊಟಕ್ಕೆ ಅಣಿಯಾಗುವನು. ಶಾರಿಕಾಲವ್ವೆಯಾದರೂ ಅಂಜುತ್ತ ಮನದಲ್ಲಿ ಅಳುಕುತ್ತ ಎಡೆಮಾಡಿ ಒಂದೆಡೆಗೆ ನಿಲ್ಲಲು ಕಡುಹಸಿದು ಹಣ್ಣಾಗಿ ಬಂದ ಶೆಟ್ಟಿಯು ಹಣ್ಣೆಲ್ಲಿ ತಾಯೆನಲು ಶರಣೆಯು ಸಂದೇಹಿಸುತ್ತ ಒಂದೇ ಹಣ್ಣನು ತಂದು ಮುಂದಿಡುವಳು. ಇಟ್ಟ ಹಣ್ಣನ್ನು ಶೆಟ್ಟಿಯು ಇನ್ನೊಂದು ಹಣ್ಣೆಲ್ಲಿ? ಎಂದು ಕೇಳಲು ದೇವಿಯು ದಿಗಿಲು ಬಗಿಲಾಗಿ ಭಯದಿಂದ ಬಂದು ಹಣ್ಣಿಟ್ಟ ಪೆಟ್ಟಿಗೆಯಲ್ಲಿ ಕೈಯೊಡನೆ ಹರಣವಂ ಬೆರಸಿ ಕೈಯಿಕ್ಕುವಳು. ಅಷ್ಟರಲ್ಲಿಯೇ ಆ ಹಣ್ಣನ್ನು ತಿಂದು ಹೋದ ಶಿವನು ಇವಳಿಗಿಂತಲೂ ಮೊದಲೇ ಅಂಜಿ ತಾ ತಿಂದ ತಪ್ಪಿಗಾಗಿ ಒಂದು ಅಮೃತ ಫಲವನ್ನೇ ತಂದಿಕ್ಕಿರುವನು. ಅದನ್ನು ಕಂಡು ಅತ್ಯಂತ ಹರ್ಷಿತಳಾಗಿ ಆನಂದವನ್ನೇ ಹೊರಗೆ ತೆಗೆವಂತೆ, ಕೈಲಾಸವನ್ನೇ ಕಡೆಗೆ ತೆಗೆವಂತೆ, ತೆಗೆದು ಪತಿಯ ಮುಂದಿಕ್ಕುವಳು. ಇಟ್ಟಿರುವ ಆ ಅಮೃತ ಫಲವನ್ನು:—

ಸೆಟ್ಟಿ ಕೈಮುಟ್ಟಿ ಮೈ ರೋಮಾಂಚವಾಗುತಿರೆ ।
ದಿಟ್ಟಿಸಲ್ಕಣ್ಗಳ್ಗೆ ಸವಿಗಳಂ ಸವಿಸುತಿರೆ ॥
ಎಲ್ಲಿಯುದು ಪೇಳಿನಗೆ ಕಾಣಿಕೆ ಈ ಫಲಂ ।
ಎಲ್ಲಿಯುದು ಪೇಳಲೆ ಮಹಾ ಪುರುಷೆ ಈ ಫಲಂ ||
ಇರೆ ಸುಮ್ಮನಿರದೆ ಪೇಳಿನಗಿದೆಲ್ಲಿಯು ಫಳಂ ।
ಹರಕರುಣವಲ್ಲದೀ ನೆಲವೊಳಿಲ್ಲೀ ಫಳಂ ॥
ಎನೆ ಪೇಳಲುಂ ಪೇಳದಿರಬಾರದಿನ್ನೆಂದು ।
ಮನದೊಳಗೆ ಸಿಡಿಮಿಡಿಗೊಳುತ್ತುಸುರ್ದಳು ನಿಂದು ॥

ಓ ಪತಿದೇವನೆ! ಈ ಮುನ್ನ ಒಬ್ಬ ಭಕ್ತರು ನಮ್ಮ ಮನೆಗೆ ಆನಂದದಿಂದ ಆರೋಗಿಸಲು ಬಂದಿದ್ದರು. ಅವರಿಗೆ ಎನ್ನ ಮನದ ಉತ್ಸುಕತೆಯಿಂದ ಒಂದು ಹಣ್ಣನ್ನು ಎಡೆಬಡಿಸಿದೆನು. ನೀವೀಗ ಅದನ್ನು ತಂದೇ ತೀರಬೇಕೆಂದು ಛಲವಿಡಿಯಲು, ಆ ದೇವನೇ ಪೆಟ್ಟಿಗೆಯುಲ್ಲಿ ತಂದಿರಿಸಿದ ಅಮೃತಫಲವಿದು, ಎಂದು ನಿಜಸಂಗತಿಯನ್ನು ನೆರಸಲು, ಸೆಟ್ಟಿಯು ಆ ನುಡಿಯನ್ನು ಕೇಳಿ ನಡುನಡುಗಿ, ಬಲ್ಮರುಗಿ,

ಆ ಹೊತ್ತೆ ಸತಿಯೆಂಬ ಭಾವ ಮುನ್ನಡಗಿದಂ ॥
ಮುನ್ನವೇ ಸಂದೇಹಿಸುತ್ತಿರ್ದೆನೆಲೆ ತಾಯೆ ।
ಇನ್ನೆನ್ನ ಸತಿಯೆಂದು ನುಡಿಯೆಂ ಮಹಾಮಾಯೆ ॥
ಇಂತು ಕರುಣಿಸಿ ಹರಂ ಪ್ರತ್ಯಕ್ಷನಪ್ಪನೇ? ।
ಇಂತಪ್ಪ ಸತಿಯರುಂಟೇ ಶಿವಂ ಬರ್ಪನೇ? ॥

ಇಲ್ಲಿಯು ವರೆಗೆ ನಿಮ್ಮನ್ನು ಸತಿಯೆಂದು ಭಾವಿಸಿದ್ದು ತಪ್ಪಾಯಿತು. ಇನ್ನು ನೀವೆನಗೆ ತಾಯಿ. ಓ ತಾಯೆ! ಈ ತನಿವಣ್ಣನ್ನು ತಾವೇ ಕೊಳ್ಳಬೇಕು. ಭಕ್ತಿ ಹೀನರಾದ ನಮಗಿದು ಸಲ್ಲದು. ಓ ದೇವಿ! ಇನಿತು ದಿವಸ ನಿಮಗೆ ಏನೇನೋ ಮಾತಾಡಿದೆನು. ಎಷ್ಟೋ ಉದಾಸೀನ ಮಾಡಿದೆನು. ಅದನ್ನೆಲ್ಲ ಕರುಣಿಸಿ ಕಾವುದು. ಈ ಉರವಣಿಸುವ ಮರವೆಯಿಂದ ಪೊರೆ. ಭವಬಂಧನವ ತೊಲಗಿಸು. ಇನ್ನೆನಗೆ ನೀವೇ ಗುರು, ನೀವೇ ಜಂಗಮ. ನೀವಲ್ಲದೆ ಗತಿಯಿಲ್ಲ. ನಿಮ್ಮ ಉಪದೇಶಾಮೃತವನು ನೀಡಿ ನನ್ನನು ಅಮರನನ್ನಾಗಿ ಮಾಡು. ಏನೊಂದೂ ಅರಿಯದ ಮೂಢ ನಾನು. ಇಂದು ನಿಮ್ಮ ಒಡಲಲ್ಲಿ ಬಿದ್ದಿರುವೆನು. ಕೊಲ್ಲು-ಕಾಯಿ ಇಲ್ಲವೆ ಹಾಲಲೆದ್ದು ನೀರಲೆದ್ದು—

ಎಂದು ಕಣ್ಣಂ ಕೊಟ್ಟು ಮೆಯ್ಯಿಕ್ಕಿ ಪಟ್ಟಿರಲ್ ।
ನಂದಯಿಪ ಪರವಶದ ಬೆಮರಿಂದೆ ಬೀಳ್ದಿರಲ್ ॥

ಹೀಗೆ ಮಾಣಿಕ ಸೆಟ್ಟಿಯು ಸತಿಯನ್ನು ಗತಿಯನ್ನೀಯುವ ಗುರು ವೆಂದು ಭಾವಿಸಿ ಭಕ್ತ್ಯುದ್ರೇಕದಿಂದ ಪರವಶನಾಗಿ ಬೇಗಿ ಬಳ್ಳಿ ಬೇಡುತ್ತಿರಲು, ಅದನ್ನು ಕಂಡು ಕಾರಿಕಾಲಮ್ಮೆಯು ಮ್ಮೆ ಜುಮ್ಮೆಂದು ಕಂದಿ, ಕುಂದಿ, ಕೊರಗಿ, ಮರುಗಿ—

ದೇವ ಭಕ್ತಿಯನಿಂತು ಗಾರುಮಾಡಿದೆ ತಂದೆ ।
ದೇವ ಮೀಸಲಮೋಹಮಂ ಸೂಸಿದೈ ತಂದೆ ॥
ಭಕ್ತಿ ಬೀಸರವಾಯಿತಿನ್ನೆಂತು ಸೈರಿಪೆಂ ।
ಭಕ್ತಿ ಹುರಿಹಂಚಾಯ್ತು ಇನ್ನೆಂತು ಜೀವಿಪೆಂ ॥
ಕೆಲರರಿಯೆ ಭಕ್ತಿಯಂ ಸಾರಿ ಮಾಡಿದವರುಂಟೆ ? ।
ಕೆಲರರಿಯೆ ಭಕ್ತಿಯಂ ತೋರಿ ಬೀರಿದರುಂಟೆ ? ॥
ಎಂದಲ್ಲಿ ಬಾಡುತಂ ಕೋಡುತಂ ನಡೆನೋಡಿ ।
ಮುಂದಿರ್ದ ಸೆಟ್ಟಿಯುಗುಪದೇಶಮಂ ಮಾಡಿ ॥
ದೇವನಿತ್ತ ಪ್ರಸಾದದ ಫಳಮುಮಂ ಕೊಟ್ಟು ।
ದೇವ ಭಾಮಿನಿ ಮನದ ನಿಷ್ಠೆಗಂದೆಡೆಗೊಟ್ಟು ॥

ಜಗಕೆಲ್ಲ ಎನ್ನ ಭಕ್ತಿ ವ್ಯಕ್ತವಾಯಿತು. ಇನ್ನೇನು? ಇಲ್ಲಿ ಇರ ಲಾರೆ. ಇದ್ದು ಬದುಕಲಾರೆ, ಎಂದು ಗುಪ್ತವಾಗಿದ್ದ ತನ್ನ ಶಿವಲಾಂ ಛನಗಳನ್ನು ವ್ಯಕ್ತಮಾಡಿದ್ದಾಳೆ. ಭಸಿತ-ರುದ್ರಾಕ್ಷಿಗಳನ್ನು ಧಾರಣಮಾ ಡಿಕೊಂಡಿದ್ದಾಳೆ. ಶರಣು, ಶಿವ, ಶಿವ, ಭವಹರ, ಭಕ್ತಬಂಧು, ದಯಾ ಸಿಂಧು ಎಂದೆನುತ ಕೈಲಾಸ ಪುರದತ್ತ ತೆರಳಿದ್ದಾಳೆ. ಇದೋ ನೋಡಿ! ಅವಳ ಪ್ರಯಾಣ ವರ್ಣನೆಯನ್ನು:—

ಪೊರಮಟ್ಟಳಮ್ಮಮ್ಮ ಪುರಜನಂ ನೋಡುತಿರೆ ।
ಪೊರಮಟ್ಟಳಲ್ಲಲ್ಲಿ ಬಂಧುಜನ ಮರುಗುತಿರೆ ॥
ಪುರದ ಪುಣ್ಯ ವ್ರಜಂ ನೆರೆದು ಪೊರಮಡುವಂತೆ ।
ಬಿಸಿಲನರಿಯದ ರಮಣಿ ಬಿಸಿಲಿಂಗೆ ಮೆಯ್ಯಾಂತು ।
ಮಿಸುಕಲರಿಯದ ಮಾನಿಯಡಿಯ ಮೇಲುಡಿಯಾಂತು ॥

ಹೀಗೆ ಕಾರಿಕಾಲಿಮ್ಮೆಯು ಸಕಲ ಸುಖವನ್ನು ಬಿಸುಟಿ, ಸರ್ವ ಬಂಧು ಬಾಂಧವರನ್ನು ಲೆಕ್ಕಿಸದೆ, ಪತಿಯನ್ನು ಪರಿಹರಿಸಿ, ಪುರಹರನನ್ನು ಪರಾಂಬರಿಸಿ, ಆನಂದದಲ್ಲಿ ತಾನೇ ತಾನಾಗಿ ಹೊರಡಲು ಅವಳನ್ನು ಕಾಣಲು ಬಂಧು ಬಾಂಧವರು, ಪರಿಜನರು, ಪುರಜನರು ನೆರೆ ನೆರೆದು ಬರತೊಡಗಿದ್ದಾರೆ. ಬಂದವರ ಭಾವನೆಗಳಂತೆ ತೋರುತ್ತ, ಬಲ್ಲಿದರಿಗೆ ಆನಂದವನ್ನು ಬೀರುತ್ತ, ಶಿವಭಕ್ತಿಯೇ ಸತ್ಪಥವೆಂದು ಸಾರುತ್ತ ತೆರಳಿದ ಆ ಅಮ್ಮೆಯ ನಡೆಯ ಸೊಬಗನ್ನು ಕವಿಯ ಕಾವ್ಯದಲ್ಲಿ ಕೇಳಿರಿ!

ಪಾಪವುಳ್ಳರ್ಗೆ ಸಿಂಗರದಂತೆ ತೋರುತುಂ।
ಪಾಪವಿಲ್ಲದವರ್ಗೆ ತಾಯಂತೆ ತೋರುತುಂ॥
ಮಲ್ಲಿಕಾಲತೆಗೆ ಶಿವಭಕ್ತಿಯೊದವಿದ ತೆರದೆ।
ಸಲ್ಲಲಿತ ಶಶಿಕಳೆಗೆ ನಿಷ್ಠೆಯೊದವಿದ ತೆರದೆ॥
ಭಕ್ತಿಲತೆ ನಡೆವಂತೆ ನಡೆಯುತಿರ್ದಳ್ನೋಡ।
ಭಕ್ತಿವನಿತಾಗಮನದಂತೆ ನಡೆದಳ್ ನೋಡ॥
ಲಂಬಿಸುವ ಪಾವನತೆಯುಂ ರೂಪುದೋರುತಿರೆ।
ಇಂಬಿನಿಂ ನಡೆತಂದಳೊಡನೆ ಜನವೆಯ್ದುತಿರೆ॥

ಈ ವರ್ಣನೆಯಲ್ಲಿ ಅದೆಷ್ಟು ಕಾವ್ಯ ಸಂಪತ್ತಿಯಿದೆ ನೋಡಿ! ಅದೆಂತಹ ದಿವ್ಯ ಭಾವ ಒಡಮೂಡಿದೆ ನೋಡಿ!! ಅದೆಷ್ಟು ಇಂಪು ಸೊಂಪುಗಳು ಹೊಂದಿಕೊಂಡಿವೆ ಆಲಿಸಿರಿ!!! ಒನಿತು ಜಿಡಗಿನಿಂದ ಆ ಅಮ್ಮೆಯ ಅವಯವಗಳು ಎಷ್ಟು ಸುಂದರವಾಗಿದ್ದವೋ ಅಷ್ಟೇ-ಅದಕ್ಕಿಂತಲೂ ಹೆಚ್ಚು ಪವಿತ್ರವಾಗಿಯೂ ಪವಿತ್ರ ಭಾವನೆಯನ್ನು ಹುಟ್ಟಿಸುವವಾಗಿಯೂ ಇದ್ದವೆಂದು ಕವಿಯು ಬಣ್ಣಿಸುವ ಬಗೆಯನ್ನು ಇಲ್ಲಿ ಓದಿ ನೋಡಿ!

ಕದಳಿಯುಂ ಪಳಿವುತಿರ್ಪೂರು ದಂಡಂ ನೋಡ।
ಮದನ ವೈರಿಯ ನಮಸ್ಕಾರ ದಂಡಂ ನೋಡ॥
ಮದನ ಕೃತಕಾಚಲ ನಿತಂಬಬಿಂಬಂ ನೋಡ।
ಒದವಿ ಪದ್ಮಾಸನದ ತಳವೃತ್ತವುಂ ನೋಡ॥
ಸರಸಿಯುಂ ಪಳಿಕೆಯ್ವ ನಾಭಿಮಂಡಲವಲ್ಲಿ।
ಹರಭಕ್ತಿಸಾರ ಮಡುವಿನ ತೆರದೊಳಿರಲಲ್ಲಿ॥

ಮುಗಿದ ಸರಸಿಜವನೇಳಿಸುವ ಕುಚ ಒಪ್ಪಿರಲ್ ।
ಮಿಗೆ ಭಕ್ತಿರಸದ ಕಳಶದ ಮುಚ್ಚುಳಂತಿರಲ್ ॥
ಪಡಕೊರಳ್ಕೇಳಿಸುವ ಕಂಬುವಿನ ತೆರದೊಳಿರೆ ।
ಕಣ್ಣೆರಡು ಚಲ್ವಿಂಗೆ ಕಣ್ಮಾಡಿದಂತಿರೆ ।
ತಿಣ್ಣವೆನೆಸುವ ಭಕ್ತಿ ಕಣ್ದೆರೆದ ಪರಿಯೊಳಿರೆ ॥
ಇಂತು ಸೌಂದರ್ಯವಂ ಪಾವನತ್ವವನೀವ ।
ಸಂತತಂ ಶೃಂಗಾರ ರಸದ ಲಹರಿಯನೀವ ॥

ಆಹಾ! ಅದೆಷ್ಟು ಮುದ್ದಾಗಿ ಮನೋಹರವಾಗಿ ವರ್ಣಿಸಿದ್ದಾನೆ. ಅದೆಷ್ಟು ಸುಲಭವಾಗಿ ಸ್ವತಂತ್ರವಾಗಿ ಹೇಳಿದ್ದಾನೆ. ಒಂದು ಪಂಕ್ತಿಯಲ್ಲಿ ಶೃಂಗಾರ ರಸ. ಇನ್ನೊಂದು ಪಂಕ್ತಿಯಲ್ಲಿ ಭಕ್ತಿ ರಸ. ಅವೆರಡನ್ನೂ ಗಂಗೆ ಜಮುನೆಗಳಂತೆ ಕೂಡಿಯೇ ಹೃದಯಂಗಮವಾಗಿ ಹರಿಸಿದ ಹರಿಹರ ದೇವನ ಸ್ವತಂತ್ರ ಸುಂದರ ಶೈಲಿಗೆ ನಾವೇನೆಂದು ಹೇಳೋಣ! ಎಂತೆಂದು ಬಣ್ಣಿಸೋಣ!! ರೂಪುಗಂಡೆಳಿಸುವದು ಸರ್ವಜನ ಸಹಜವಾದುದು. ಅದರಂತೆ ಕಾರಿಕಾಲಮ್ಮೆಯು ಈ ಕಾಯ ರೂಪನ್ನು ಕಂಡು ಮರುಳಾಗಿ ಜನರು ಬೆಂಬಿಡಿದು ಬರಲು ತೊಡಗಿದ್ದಾರೆ. ಅದನ್ನು

ಕಂಡಲ್ಲಿ ಕಾರಿಕಾಲಮ್ಮೆ ಮನದೊಳ್ನೊಂದು ।
ಬಂಡದಿಂಡಿಗೆ ಮರುಳ್ಗೊಂಡಿರಯ್ಯೋ ಎಂದು ॥
ಅವಿಚಾರ ಮತಿಯರೇನೆಂದರಿಯರಕ್ಕಟಾ ।
ಸುವಿಚಾರವೆಳ್ಳನಿತಿಲ್ಲ ನಿಮಗಕ್ಕಟಾ ॥
ಒಳಗು ಹೊರಗಾಗಿ ನೋಡಿರೆ ಎನ್ನ ದೇಹಮಂ ॥
ಬಳಿಕ ಹೇಸಲ್ವೇಳ್ಕುಮರಿಯಿರೇ ಚೋಹಮಂ ॥
ಪಂಚಭೂತಂ ನೆರೆಯೆ ಕಾಯಂ ಪರಿಯೆ ವಾಯು ।
ಇಚ್ಛೆಗೊಳ್ಳದಿರಿ ಎನ್ನ ರೂಪೆಲ್ಲ ಹೇಯ ॥

ಎಲೋ ಅಣ್ಣಂದಿರಾ! ಶರೀರವು ಶಾಶ್ವತವಲ್ಲ. ಅದು ಸಾವ ಪ್ರಪಂಚಿನ ಪುತ್ಥಳಿ. ಮಾಯಿಕದ ಮಲಭಾಂಡ. ಆತುರದ ಭವಸಿಳಯ. ಅದರಲ್ಲಿರುವದೆಲ್ಲವೂ ಕೊಳೆ. ಅಮೇಧ್ಯದ ಹಡಿಕೆ, ಮೂತ್ರದ ಕುಡಿಕೆ, ಎಲುವಿನ ತಡಿಕೆ, ಕೀವಿನ ಹಡಿಕೆ. ಹೀಗಿದ್ದೂ ಇದಕ್ಕೆ ಮರು

ಳ್ಳೊಳ್ಳುವಿರಲ್ಲಾ! ಇಚ್ಛೈಗೊಳ್ಳುವಿರಲ್ಲಾ!! ಎಂಥ ಅವಿಚಾರಿಗಳು ನೀವು. ಒಂದು ಪಕ್ಷ ಅದರ ಬಲೆಗೆ ಬಿದ್ದರೆ ನಿಮ್ಮನ್ನು "ಹುಟ್ಟದ ಯೋನಿಯಲ್ಲಿ ಹುಟ್ಟಿಸಿ, ಬಾರದ ಭವಂಗಳಲ್ಲಿ ಬರಿಸಿ, ಉಣ್ಣದ ಊಟವನುಣಿಸಿ ವಿಧಿಗೊಳಗಾಗಿಸುವ ಕೇಳಿರಣ್ಣಾ!" ಎಂಬ ಅಕ್ಕನ ಹಿತೋಕ್ತಿಯನ್ನು ಆಲಿಸರಿ! ಇನ್ನಾದರೂ ನಿಮ್ಮ ಮರುಳತನವನ್ನು ಬಿಟ್ಟುಬಿಡಿರಿ ಎಂದು ಕನಿಕರದಿಂದ ಕಾರಿಕಾಲಮ್ಮೆಯರು ಕಾಯದ ಹೇಯವನ್ನೆಲ್ಲ ಬೋಧಿಸಿದರೂ ಕಾಮೋನ್ಮತ್ತರಾದ ಕೆಲ ಜನರು ಆ ಬೋಧೆಗೆ ಕಿವಿಗೊಡದೆ ಹಿಂಚಿಟ್ಟಿದ್ದಾರೆ. ಅದನ್ನು ಕಂಡು ಕಾರಿಕಾಲಮ್ಮೆಯು:—

> ಬೇಸತ್ತು ಪುರಹರಾ ಮಾಯಾ ತಮೋಹರಾ।
> ವೇಷವೆನ್ನಂ ಕೊಂದಪುದು ಪಂಚಶರಹರಾ॥

ಓ ದೇವ! ಈ ದೇಹದ ಚಲ್ವಿಕೆಯನ್ನು ಎನಗೇಕೆ ಕೊಟ್ಟೆಯಯ್ಯಾ! ಇವನ್ನು ಕಲ್ಲುಹೊಯ್ದು ಕಿಡಿಯ ತೆಗೆದುಕೊಂಬಂತಾಗಿದೆಯಯ್ಯ! ಪುರಹರಾ! ಪರಿಹರಿಸು ಈ ಪ್ರಾಣಸಂಕಟವನು, ಎಂದು ಆರ್ತಳಾಗಿ ಮೊರೆಯಿಡಲು ಪರಮಾತ್ಮನು ಅನುಪಮವಾದ ಅಮೋಘವಾದ ಒಂದು ಶಕ್ತಿಯನ್ನು ಕೊಡುತ್ತಾನೆ. ಆ ಶಕ್ತಿಯಿಂದ ಅವಳು ತನ್ನ ತನುವನ್ನು ತುಂಡರಿಸಲು ನಿರ್ಧರಿಸಿ ಜನರೆದುರಾಗಿ ನಿಂದು:—

> ಮಾಯೆಯುಂ ಬಿದಿರ್ವಂತೆ ಮೋಹಮುಂ ಬಿದಿರ್ವಂತೆ।
> ಛಾಯೆಯುಂ ಬಿದಿರ್ವಂತೆ ಚಂದಮುಂ ಬಿದಿರ್ವಂತೆ॥
> ಅವಯವಂಗಳನಲ್ಲಿ ಚಲ್ಲಿದಳು ಛಲದಿಂದೆ।
> ತಮತಮಗೆ ಓಡಿತ್ತು ಮೂರ್ಖಜನ ಭಯದಿಂದೆ॥
> ಕಣ್ಣಾಳಿಯೆ ಮೆಯ್ಯೆಲ್ಲವೆಲುವಾಗಿ ನಿಲಲಲ್ಲಿ।
> ಬಣ್ಣವಳಿಯಲ್ನೋಡುತೆಲ್ಲ ಲಘುಜನವಲ್ಲಿ॥
> ಮರುಳೋ ಪಿಶಾಚಿಯೋ ಓಡೋಡೆನುತ್ತಲ್ಲಿ।
> ಮರಳಿ ನೋಡಲಮ್ಮದೆಯೋಡಿತ್ತು ಜನವಲ್ಲಿ॥

ಹೀಗೆ ಸ್ಥೂಲ ತನುವಿನ ಚರ್ಮವನ್ನೆಲ್ಲ ದೋಚಿಕೊಂಡು, ಕಣ್ಣು, ತಲೆಗಳೆರಡನ್ನು ಮಾತ್ರ ಹಾಗೆಯೇ ಉಳಿಸಿಕೊಂಡು ಮೆಯ್ಯೆಲ್ಲ ಎಲುವಾಗಿ ರಕ್ತಾಗಿ ಸೂಕ್ಷ್ಮತನು ತೊಟ್ಟು ನಿಲ್ಲಲು ಜನರೆಲ್ಲ ನೋಡಿ ಭಯಾನ್ವಿತರಾಗಿ ಇದೇನು ಮರುಳೋ ಪಿಶಾಚಿಯೋ ಎಂದು ಮೂದಳಿಸಿ

ಓಡೋಡು ಎಂದು ಕೂಗಿ ಮರಳಿ ಸಹ ನೋಡದೆ ಬಲ್ಲತ್ತ ಓಡಿಹೋಗಿ ದ್ದಾರೆ. ಆಗ ಕಾರಿಕಾಲಮ್ಮೆಯು ನಿಷ್ಕಂಟಕಳಾಗಿ ಸಂತಸದಿಂದ ಶಿವ ನನ್ನು ನೆನೆಯುತ್ತ, ಅಪ್ರತಿಮ ವೈರಾಗ್ಯವನ್ನು ಬೀರುತ್ತ, ಹರುಷದಿಂದ ಹಾಡಿ ಹಿಗ್ಗುತ್ತ ಪುಣ್ಯದ ಪುಂಜವೇ ಮೂರ್ತಿಗೊಂಡಂತೆ ಹೊರಟು ಹೋಗುತ್ತಿರಲು ಕಾಂಚಿಗೆ ಉತ್ತರದಿಕ್ಕಿನಲ್ಲಿರುವ ತಿರುವಾನ ಕಾಡೊಳ ಗಿರುವ ಶಿವಮೂರ್ತಿಯನ್ನು ಕಾಣುವಳು. ಕಂಡು ಹಿಗ್ಗೈಸಿ:—

ಆಹಾ ಶಿವನೆ ನಿನ್ನ ನಾಟ್ಯಮಂ ತೋರೆನಗೆ ।
ಆಹಾ ಮಹಾ ನಾಟ್ಯಮಂ ಕರುಣಿಸುವುದೆನಗೆ ॥
ತೋರಯ್ಯ ಘನಕಾಂಡವಾಡಂಬರವನೆನಗೆ ।
ತೋರಯ್ಯ ಮೆಯ್ಯೆಲ್ಲ ಕಣ್ಣಾಗಿ ನೋಳ್ಪೆನಗೆ ॥

ಎಂದು ಭಕ್ತಿಯಿಂದ ಬಿನ್ನವಿಸಲು ಭಕ್ತಾಧೀನನಾದ ಶಿವನಾದರೂ ಅವಳ ಬೇಡಿಕೆಯಂತೆ ಆ ಕೂಡಲೆ ವಿರಾಡ್ ರೂಪನ್ನು ತಳೆದಿದ್ದಾನೆ. ಆ ರೂಪು ಇಡೀ ವಿಶ್ವವನ್ನೇ ವ್ಯಾಪಿಸಿಬಿಟ್ಟಿದೆ. ಮುಡಿಯು ಗಗನ ಚುಂಬಿಯಾಗಿದೆ ಜಡೆಯು ಆಗಸದಲ್ಲಿ ಪರ್ವಿ ಪಲ್ಲವಿಸಿದೆ. ಹಾವು ಗಳು ಹೆಡೆಗಳನ್ನು ಬಿಚ್ಚಿ ಆಡಲಾರಂಭಿಸಿವೆ. ಕೈಗಳು ಎಣ್ದೆಸೆಗಳಲ್ಲಿ ನಟನೆಯಿಂದ ನಲಿಯತೊಡಗಿವೆ. ವಿನ್ಯಾಸಕ್ಕಾಗಿ ಪಾದಗಳನ್ನು ಮೇಲ ಕ್ಕೆತ್ತಿದ್ದಾನೆ. ಮೇಲೆ ವಿಶ್ವಕ್ಸೇನನು ತಿರ್ರನೆ ತಿರುಗಹತ್ತಿದ್ದಾನೆ. ಹೀಗೆ ಅಂಗಾಂಗಗಳನ್ನು ಭಂಗಿಯಿಂದ ದಶದಿಕ್ಕುಗಳಲ್ಲಿ ಹರಿವಿ ನಾಟ್ಯಕ್ಕೆ ಪ್ರಾರಂಭಿಸಲು ಹಲವು ಬಗೆಯ ವಾದ್ಯಗಳು ಮೊಳಗತೊಡಗಿವೆ. ಸಾಕ್ಷಾತ್ ಶಿವನ ನಾಟ್ಯರಂಗದ ಇಂಪಾದ ವಾದ್ಯಗಳನ್ನು ಕೇಳುವ ಭಾಗ್ಯವು ನಮಗಿಲ್ಲದಿದ್ದರೂ ಆ ನಾದವೇ ತಾನಾಗಿ ಬಿತ್ತರಿಸಿದ ಹರಿ ಹರನ ಶ್ರಾವ್ಯ ಕಾವ್ಯ ಗಾನವನ್ನಾದರೂ ಕೇಳಿ ತಣಿಯೋಣ ಬನ್ನಿ:—

ಡಮರುಗದ ನಾದಮುಂ ಥಣಥಣಮೆನುತ್ತಿರಲ್ ।
ಅಮಮ ಘಂಟಾನಾದವಲ್ಲಿ ಥಣಥಣ ಮೆನಲ್ ॥
ಪುಲಿದೊವಲ ಪೊಂಗೆಜ್ಜೆಗಳ ಘಲಿಘಲಿರೆನಲ್ ।
ಚಲಿಸುವಂದುಗೆಯ ದನಿ ಘುಲುಘುಲುಕು ಘುಲಕೆನಲ್ ॥
ಕೆಯ್ಯ ಬೊಮ್ಮನ ಸಿರಮುದರಿಯುರೇ ಎನುತ್ತಿರಲ್ ।
ಮೆಯ್ಯದೇವರ ಹಿಂಡುದಲೆ ಮಾಲೆಯು ಬುಬೆನಲ್ ॥
ಗಜಚರ್ಮವಲ್ಲಿ ಜೊಂಪಿಸಿ ಝಾಡಿ ಮೂಡುತಿರೆ ।

ಭುಜಹತ್ತುದೆಸೆಗಳಂ ಕೌಂಕುಳಿಗೊಳಿರಿಂಕುತಿರೆ ॥
ಪದತಳದ ಹರಿನಯನವೆವೆದೆರೆದು ಹಳಿಹಳಿಸೆ ।
ಬಿದಿರ್ದೆತ್ತಿ ಖಟ್ವಾಂಗಮಂಬರಕವ್ವಳಿಸೆ ॥
ಕೋಟಿರವಿಕಾಂತಿಯಂ ಪದನಖಂ ಸೂಸುತಿರೆ ।
ಕೋಟಾನುಕೋಟಿ ನಾಟ್ಯಂಗಳಂ ಚಲ್ಲುತಿರೆ ॥
ಬ್ರಹ್ಮವಿಷ್ಣ್ವಾದಿಗಳ್ ಜಯಜೀಯವೆ ನುತವಿರೆ ।
ಬ್ರಂಹ್ಮಾಂಡಭಾಂಡವಾ ತಾಂಡವಕೆ ಬಿರಿಯುತಿರೆ ॥

ನೋಡಿ ಕವಿಯ ಆವೇಶವನ್ನು! ನೃತ್ಯಧ್ವನಿಯನ್ನು ತನ್ನ ಕಾವ್ಯ ರಸದಲ್ಲಿ ಬೀರಿರುವದನು!! ಆ ವಾದ್ಯಗಳ ರಭಸವನ್ನು ಹೃದಯಕ್ಕೆ ವೇದ್ಯವಾಗುವಂತೆ ತಲ್ಲೀನನಾಗಿ ಬಣ್ಣಿಸಿರುವನು. ರಸ, ಭಾವ, ತರಂಗ ಗಳನ್ನು ಎಬ್ಬಿಸುತ್ತ ಶಬ್ದಮಾಧುರ್ಯವನ್ನು ಬೀರುತ್ತ ತಾಳ, ಗತಿಗ ಳನ್ನು ಹಿಡಿದು ಓದುಗರ ಹೃದಯವು ಆವೇಶದುಂಬಿ ಕುಣಿಯುವಂತೆ ಕಾವ್ಯವನ್ನು ಹೆಣದಿದ್ದಾನೆ. ಘುಲು ಘುಲುಕೆನಲ್, ಬುಬೆನಲ್, ಹಳಹಳಿಸೆ, ಕವ್ವಳಿಸೆ, ಇಂಕುತಿರೆ, ಝಾಡಿಮೂಡುತಿರೆ, ಎಂದು ಓದು ವಾಗ ಕವಿಯು ಆ ವಾದ್ಯಗಳನ್ನು ಕೇಳುವಾಗಲೆ ಬರೆದುಕೊಂಡನೋ ಎಂದು ಭಾಸವಾಗುವಂತಿವೆ. ಇದುವೇ ಕವಿಯ ಕಾವ್ಯದುದ್ದೇಶ

ತಾನಾಡೆ-ಉಮೆಯಾಡೆ, ಹರಿ-ಅಜ-ಸುರರಾಡೆ ।
ತಾನಾಡೆ, ಜಗವಾಡೆ, ಜೀವರಾಶಿಗಳಾಡೆ ॥

ಆಹಾ! ಎಂತಹ ಮಾತಿದು! ಎಷ್ಟು ವಿಶಾಲ ತತ್ವವು ಹುದುಗಿ ಕೊಂಡಿದೆ!! ತಾನು ನಾಟ್ಯವಾಡಲು ಆ ಆವೇಶದಿಂದ ತನ್ನಾತ್ಮವೇ ಆದಿ ಶಕ್ತಿಮೊದಲ್ಗೊಂಡು ಶುಕ್ತಿಪರ್ಯಂತ ಸಮಸ್ತ ಪ್ರಪಂಚವೇ ಆಡಿ ತೆಂಬೀ ಮೃದುವಾದ ಕಿರಿಮಾತಿನಲ್ಲಿ ಎಂತಹ ವ್ಯಾಪಕ ಅರ್ಥವು ತುಂಬಿ ಕೊಂಡಿದೆ. ಇದನ್ನು ಓದುವಾಗ ಗೀತೆಯಲ್ಲಿ ಶ್ರೀಕೃಷ್ಣನು ಶಿಷ್ಯನಾದ ಅರ್ಜುನನಿಗೆ ತೋರಿದ ವಿರಾಡ್‌ರೂಪವು ನಮಗೆ ತಟ್ಟನೆ ನೆನಪಿಗೆ ಬರುತ್ತದೆಯಾದರೂ ಆ ವಿಕಾರವು ಆ ಭೀತಿಯು ಇಲ್ಲಿ (ಈ ಹರಿಹರನ ವರ್ಣನೆಯಲ್ಲಿ) ತೋರುವದಿಲ್ಲ. ಇಂಥ ವಿಶಾಲ ತತ್ವಗಳನ್ನು ಇಷ್ಟೊಂದು ನಯವಾಗಿ, ನೇರವಾಗಿ, ಸುಲಭವಾಗಿ, ಸ್ವತಂತ್ರವಾಗಿ ಬಣ್ಣಿಸುವ ಬಲ್ಮೆಯು ಹರಿಹರನಲ್ಲದೆ ಇನ್ನಾರದು? ಆದ್ದರಿಂದ ಹರಿಹರನ ಗೀತೆಯು ಮೃದುಗೀತೆಯು; ಮಧುರಗೀತೆಯು.

ಶಿವನ ವಿರಾಡ್‌ರೂಪದ ವಿಶ್ವಭರಿತದ ನಾಟ್ಯವನ್ನು ಕಾರಿಕಾಲಮ್ಮೆಯು ಕಂಡಂಜಿ ಕಣ್ಮುಚ್ಚಿ ಕಡು ನಡುಗಿ ಅರಿವುಗೆಟ್ಟಿದ್ದಾಳೆ. ಅದನ್ನು ನೋಡಿ ಶಿವನು ನಾಟ್ಯವನ್ನು ನಿಲಿಸಿ: —

ಕಂಡವ್ವೆ ಕಾರಿಕಾಲಮ್ಮೆ ಎಲೆ ನಾಂಟ್ಯಮಂ ।
ಕಂಡಿರೇ ಅಮ್ಮೆಯರಿ ಯೆನ್ನ ಚೆಲ್ವಾಟಮಂ ॥

ಎಂದು ಕರುಣೆಯಿಂದ ಕೇಳಲು ಅದಕ್ಕೆ ಕಾರಿಕಾಲಮ್ಮೆಯು:—

... ಕಂಡೆ ನಾ ಕಂಡೆ ಎನ್ನಳವೆ ಬರ್ದುಕಿದೆಂ ।
ಎನಗೆ ತೋರಿದೆ ದಯಾಪರತೆಯಂ ಬರ್ದುಕಿದೇಂ ॥
ಹರಿಯಜರು ಕಾಂಬರೇ ನಿಮ್ಮ ಪೊಸನಾಂಟ್ಯಮಂ ।
ವರವೇದವರಿವವೇ ನಿಮ್ಮ ಕಾಲಾಟಮಂ ॥
ಎಲೆ ದೇವ ಎನ್ನ ಭಾಗ್ಯದ ಬೆಳೆಗೆ ಸರಿಯುಂಟೆ ।
ಎಲೆ ದೇವ ನಿಮ್ಮ ನಾಟ್ಯಕ್ಕಿನ್ನು ಸರಿಯುಂಟೆ ॥

ವರವೇದ ಹರಿಯಜರು ಅರಿಯದ ಕಾಣದ ಪೊಸನಾಟ್ಯವನ್ನು ನೋಡಿದ ಕಾರಿಕಾಲಮ್ಮೆಯು ಅರಳಿದ ಅಲರಿನಂತಿರುವ ಆಲಿಗಳಿಂದ ಅಂಬುಗಳು ಸುರಿಯತೊಡಗಿವೆ; ಪರಿಯತೊಡಗಿವೆ; ಆನಂದದಿಂದ ಅಂಗದಲ್ಲಿ ಪುಳಕತತಿಯು ದಟ್ಟಾಗಿ ಹುಟ್ಟಿವೆ. ಆ ಆನಂದಾತಿಶಯದಲ್ಲಿಯೇ ತನ್ನ ಭಾಗ್ಯವನ್ನು ಕೊಂಡಾಡಿ ಕುಣಿದಾಡ ಕುಕಿಲ್ವರಿವ ಕಾರಿಕಾಲಮ್ಮೆಯಂ ಕಂಡು:—

ಇಂದು ಶೇಖರನಲ್ಲಿ ಹರ್ಷಮಂ ಕೈಕೊಂಡು ।
ನಡೆ ತಾಯೆ ಕೈಲಾಸ ಪುರಕೆನುತ್ತಂ ಪೇಳ್ದು ।
ವೃಡನಲ್ಲಿ ಲಿಂಗದೊಳ್ಪೊಕ್ಕನೊಲವಂ ತಾಳ್ದು ॥

ಹರನು ಹರುಷದಿಂದ ಕಾರಿಕಾಲಮ್ಮೆಗೆ ಕೈಲಾಸಕ್ಕೆ ಬರಹೇಳಿ ತಾನು ಲಿಂಗದೊಳ್ ಐಕ್ಯವಾಗಲು ಇತ್ತ ಕಾರಿಕಾಲಮ್ಮೆಯು ಅಲ್ಲಿಗೆ ಹೊರಡುವ ಮೊದಲು ದಾರಿಯನ್ನು ದಿಟ್ಟಿಸಿ ಅಲ್ಲಿ ಮೂಡಿರುವ ಶರಣರಡಿಯ ಹೆಜ್ಜೆಗಳನು ಕಂಡು ಕರಗಿ ಆಹಾ! ಇವು ಶರಣರೆಲ್ಲ ನಡೆದು ಹೋದ ಹೆಜ್ಜೆಗಳು! ಎನ್ನೊಡೆಯರೊಲವಿಂದ ನಡೆದ ಪೊಸ ಹೆಜ್ಜೆಗಳು!! ಇವುಗಳ ಮೇಲೆ ನಾ ನಡೆದು ಹೋಗುವದೇ? ಈ ಸಜ್ಜನರ

ಹೆಜ್ಜೆಗಳಲ್ಲಿ ನನ್ನ ಹೆಜ್ಜೆಗಳನ್ನು ಚಲ್ಲಿ ಯಾವ ಯಾತನೆಗೆ ಗುರಿಯಾಗಲಿ? ಇದಕ್ಕಿಂತಲೂ ಬೇರೆ ಅಪರಾಧವುಂಟೇ? ಆನೆ ಆ ದಾರಿಯಲ್ಲಿ ಹೋಯಿತ್ತೆಂದರೆ ಆಡು ಆ ದಾರಿಯಲ್ಲಿ ಹೋಗಬಹುದೇ? ಅವರ ಸಾಮರ್ಥ್ಯವು ನನಗುಂಟೇ? ಅವರೆದುರು ನಾನಾರು? ಆಗದಾಗದು. ಈ ಶರಣರ ಹೆಜ್ಜೆಗಳು ನನ್ನ ಶಿರದ ಮೇಲಿರಲಿ. ನಾನವನ್ನು ಹೊತ್ತು ಮೆರೆಯುವೆನು ಎಂದು ಕೈ ಕಾಲಾಗಿ ಮುಡಿಯಡಿಯಾಗಿ ನಡೆಯಲು ನಿರ್ಧರಿಸಿ ಕೊನೆಗೆ:—

ಎಲೆ ಶರಣರಡಿಗಳಿರಾ ಶಿವನಲ್ಲಿ ಗೊಯ್ಯಿರೇ।<br>
ಎಲೆ ಹೆಜ್ಜೆಗಳಿರಾ ಕೈಲಾಸಕ್ಕೆ ಕಳಿಪಿರೇ॥<br>
ಎಂದು ಶರಣರ ಹೆಜ್ಜೆಯೊಳ್ನಂಬಿ ತಲೆಯಿಟ್ಟು।<br>
ಬಂದಳೊಂದೊಂದು ಗಳಿಗೆಗದೊಂದಡಿಯನಿಟ್ಟು॥<br>
ಶಿವಭಕ್ತಿ ಯುಕ್ತಿ ತಲೆ ಕೆಳಗಾದ ಚಂದದಿಂ।<br>
ಶಿವನಿಷ್ಠೆ ಸೊರ್ಕ ತಲೆಯೂರಿತೆಂಬಂದದಿಂ॥<br>
ಎಲ್ಲಾ ನರಾಳಿ ಬೇರ್ವೋದಲಾಗಿ ನಡೆವುತಿರೆ।<br>
ಇಲ್ಲಿ ಬೇರ್ಕಳಗಾಗಿ ಸಸಿನದೊಳ್ ನಡೆಯುತಿರೆ॥

ಆ ದಾರಿಯಲ್ಲಿ ಶರಣ ಆತ್ಮತೇಜಸ್ಸನ್ನು ಅಂತರಂಗದಲ್ಲಿ ತುಂಬಿ ಕೊಂಡಂತೆ ಬಿದ್ದಿರುವ ಆ ಹೆಜ್ಜೆಗಳನ್ನು ಬೀಳ್ಕೊಂಡು, ಅವುಗಳಿಂದ ತಾನು ಮುಂದೆ ಕೈಯಿಂದ ಕೈಲಾಸಕ್ಕೆ ಹೋಗುವ ಸಾಹಸಕ್ಕೆ ಸಾಮರ್ಥ್ಯವನ್ನು ಕೇಳ್ಕೊಂಡು ಲೋಕ ವಿರುದ್ಧವಾಗಿ ರಜತ ಗಿರಿಯ ಸೋಪಾನಗಳನ್ನು ಸರಳವಾಗಿ ಏರುತ್ತಿರಲು ಅಲ್ಲಿದ್ದ ಚೇರಮರ್ ಗಜ, ತುರಗಗಳನೇರಿ ನೆರೆದು ನೋಡಿ ಬೆರಗಾಗಿ ನಿಂತು ಹೀಗೆ ಹೋಗಬೇಕಾದರೆ ಇವಳಾರೊ ಶಿವಭಕ್ತೆಯಿದ್ದಂತೆ ಕಾಣುವದೆಂದು ನಿರ್ಣಯಿಸಿ ಅವಳಿಗೆ ಶಿಷ್ಯರಾಗಿ ಶಿವಭಕ್ತಿಯನ್ನು ಬೇಡಲು ಅವರಿಗೆಲ್ಲ ಕರುಣಿಸುತ್ತ ನಂದೀಶ್ವರನ ಬಾಗಿಲ್ಗೆ ಬರುವಳು. ನಂದಿಯು ಕಂಡು ಕೈ ಮುಗಿಯಲು ಈಶ್ವರನ ಸಭೆಯ ಜನರೆಲ್ಲ ಕಂಡು ಕೌತುಕಂಬಟ್ಟು ಕೈ ಜೋಡಿಸುವರು. ಅಷ್ಟರಲ್ಲಿ ವಿಷ್ಟರದಲ್ಲಿ ಕುಳಿತ ಪಾರ್ವತಿಯು ನೋಡಿ ನಡನಡನೆ ನಡುಗಿ ಓ ದೇವ! ಇದೇನು? ತಲೆ ಕೆಳಗಾಗಿ ಮೈಯೆಲ್ಲ ಎಲುವಾಗಿ ಬರುವದಿದೇನು? ಮರುಳೋ? ಗರವೋ? ಎಂದು

ಅಂಜಿ ಒಲ್ಲೆನೊಲ್ಲೆನೆಂದೆದ್ದು ಹರನ ಹಿಂದೆ ಹೋಗಿ ಬೆನ್ನನ್ನು ಬಿಗಿದಪ್ಪಿ ನಿಲ್ಲಲು:—

ಅಲ್ಲಲ್ಲ ಎಲೆ ಗಿರಿಜೆ! ಕಾರಿಕಾಲಮ್ಮೆಯುರು ।
ಅಲ್ಲೆ ಎಲೆ ಗೌರಿ! ನಿಮ್ಮತ್ತೆ ನಮ್ಮಮ್ಮೆಯುರು ॥
ಎನ್ನಯ ಜನನಿ ಎನಗೆ ಹಣ್ಣಿತ್ತ ಹಿತವೆಯುರ್ ।
ಎನ್ನವ್ವೆ ನಿಮ್ಮತ್ತೆ ಕಾರಿಕಾಲಮ್ಮೆಯುರ್ ॥
ಮರುಳೆಂಬರೇ ವಿಚಾರಂ ನಿನಗೆ ತೋರದೆನೆ ।
ಮರುಳೆನಲ್ಕಾಗದೌ ದೇವಿ ಪೊಡಮಡುವುದು...॥

ಎಂಬೀ ಶಿವನ ಮಾತನ್ನು ಕೇಳಿ, ಕಾರಿಕಾಲೆಮ್ಮೆಯು ಮನದೊಳು ನೊಂದು ಓ ದೇವ ! ನೀವಿಂತೆನ್ನುವುದೇ ? ನಾ ನಿಮ್ಮ ತೊತ್ತಲ್ಲವೇ ? ಎನಗೆ ನೀ ತಂದೆ ಪಾರ್ವತಿಯೇ ತಾಯಿ. ಎಲೆ ದೇವ! ಎನಗೆ ನೀವಿಬ್ಬರೂ ಜೀವದುನ್ನತಿ ಎಂದು ಆತ್ಮ ಕಳಕಳಿಯಿಂದ ಕಣ್ಣನೀರ್ದುಂಬಿ ಪರಮಾತ್ಮನ ಪಾದ ತಳದಲ್ಲಿ ಬೀಳ್ಕೊಳ್ಳುವಳು. ಶಿವನು ಅನುನಯದಿಂದ ಕೈಯಿವ್ಪಿಡಿದೆತ್ತಿ ವೈದಡವಿ, ನೋಡೆಲೆ ಉಮಾದೇವಿ!

ಮೆಯ್ಯೆಲ್ಲವದಿರ್ದು ಬಿದಿರ್ದು ನಿಂದವರುಂಟೆ ।
ಕೆಯ್ಯ ಕಾಲಾಗಿ ತಲೆಯೂರಿ ನಡೆದವರುಂಟೆ ॥
ಭಾಪುರೇ ಜಗದ ತಾಯಾಗಿ ಸಲೆ ಸಂದಮ್ಮ।
ಭಾಪು ಮಜ ಭಾಪುರೇ ಎಲೆ ಕಾರಿಕಾಲಮ್ಮ॥
ಎಂದಲ್ಲಿ ಗಣಕುಲಕೆ ತೋರುತುಂ ಬೀರುತುಂ ।
ಸಂದ ಹರಿ ಬೊಮ್ಮರ್ಗೆ ಹೇಳುತುಂ ಹಿಗ್ಗುತುಂ ॥
ಗಣಪದವಿಯುಂ ಕಾರಿಕಾಲಮ್ಮೆಗೊಲಿದಿತ್ತು ।
ಗಣನಿವಹದೊಳ್ಸಲಿಸಿ ಪರಮ ಸುಖಮುಂ ಪೊತ್ತು ॥
ಮೇರುಚಾಪಂ ಮಂತ್ರಮೂರ್ತಿ ಶಿವನೊಪ್ಪಿದಂ ।
ತಾರಾದ್ರಿಯುರಮನೆಯೊಳಿಂದುಧರನೊಪ್ಪಿದಂ ॥

ನಾವು ನಿಮಿತ್ತ ಮಾತ್ರದಿಂದ ಪ್ರಪಂಚದಲ್ಲಿ ಸಿಲ್ಕಿದ್ದರೂ ಮನಸ್ಸು ಇಂದ್ರಿಯುಗಳು ಕಾರಿಕಾಲಮ್ಮೆಯುಂತೆ ಮಹಾದೇವನತ್ತ ಧಾವಿಸುತ್ತಿರಬೇಕು. ನಿಷ್ಠೆ ಭಕ್ತಿಗಳಿಲ್ಲದ ಜೀವನ ಎಷ್ಟಿದ್ದರೂ ವ್ಯರ್ಥ. ಸಜ್ಜನರ ಹೆದ್ದಾರಿಯುಲ್ಲಿ ನಾವು ಹೋಗದಿದ್ದರೆ ನಾವು ಮನುಷ್ಯರಾಗಿ ಬಾಳಲಾ

ರಿವು. ನಮ್ಮ ಧ್ಯೇಯಮೂರ್ತಿಯು ಎಲ್ಲಿಯೋ ದೂರದಲ್ಲಿದ್ದರೆ ನಾವು ಹೇಗಾದರೂ ಇದ್ದು ಕೊಳ್ಳಬಹುದು. ಆದರೆ ನಮ್ಮಲ್ಲಿಯೇ ಇದ್ದೂ ನಾವು ಉದಾಸೀನ ಮಾಡಿದರೆ ನಮ್ಮಂಥ ಕೀಳರು ಕಲ್ಲೆದೆಯುವರು ಮತ್ತಾರೂ ಇಲ್ಲ. ಪತಿಯು ಹತ್ತರಿದ್ದೂ ಪ್ರೀತಿಸದ ಸತಿಯು ಪಾಡಾಗುತ್ತದೆ. ಇದೇ ವಿಚಾರವಾಗಿ ಅಕ್ಕಮಹಾದೇವಿಯು ತನ್ನ ವಚನದಲ್ಲಿ: —

> "ನೀನು ದಂಡಮಂಡಲಕ್ಕೆ ಹೋದೆನೆಂದೊಡೆ, ನಾನು ಸುಮ್ಮನಿಹೆನು.
> ನೀನು ಎನ್ನ ಕೈಯೊಳಗಿರ್ದು ಎನ್ನ ಮನದೊಳಗಿರ್ದು ನುಡಿಯು-
> ದಿರ್ದೊಡಾನು ಎಂತು ಸೈರಿಸುವೆನಯ್ಯಾ! ನೇಹವೆಂಬ ಕುಂಟಣಿ
> ಚನ್ನಮಲ್ಲಿಕಾರ್ಜುನನನೊಲಿಸದಿದ್ದರೆ ಇನ್ನೇವೆ ಸಖಿಯೇ?"

ಎಂದು ಒಳ್ಳೇ ಸೊಗಸಾಗಿ ಹೇಳಿರುವಳು. ಆದುದರಿಂದ ನಿಜ ಶಾಂತಿಯು ನಮಗೆ ದೊರೆಯುಬೇಕಿದ್ದರೆ ನಮ್ಮಂತರಾತ್ಮನಲ್ಲಿ ನಾವು ಭಕ್ತಿ ವಿಶ್ವಾಸಗಳನ್ನು ಅವಶ್ಯವಾಗಿ ಇಡಬೇಕು ಸಜ್ಜನರು ತೋರಿದ ಸತ್ಪಥದಲ್ಲಿ ನಡೆಯುಲೇಬೇಕು. ಆ ತೆರನಾದ ವಿವೇಕವನ್ನು ಕಾಲಿನಿಂದ ಕೈಲಾಸಕ್ಕೆ ತೆರಳಿದ ಓ ಕಾರಿಕಾಲಮ್ಮ! ಶರಣರ ಹೆಜ್ಜೆಗಳನ್ನು ತಲೆಯಲ್ಲಿ ಹೊತ್ತ ಓ ಸಜ್ಜೆನೆ!! ನಿನ್ನನುಯಾಯಿಗಳಾದ ನಮಗೆ ಕೊಡಲಾರೆಯಾ? ಅದರಲ್ಲಿಯೂ ನಿನ್ನ ಸಹೋದರಿಯರಾದ ಸ್ತ್ರೀ ಸಮಾಜಕ್ಕೆ ಬಂಧುಗಳ ತೊಡಕಿದ್ದರೂ ಭಕ್ತಿಯನ್ನು ಬಿಡಬೇಡಿರೆಂದು ಬೋಧಿಸಲಾರೆಯಾ?

---

# "ನಮಃ ಶಿವಾಯ ಲಿಂಗ—
# ಓಂ ನಮಃ ಶಿವಾಯ ಬಸವಣ್ಣ"

(ಲೇಖಕ:— ಜೀರಗೆ ಕೆ. ಬಸವಪ್ಪ ಬಿ. ಏ. ಬೆಂಗಳೂರು ನಗರ.)

ಇದು ಶಿವಶರಣರ ಮಹಾವಾಕ್ಯ. ಹನ್ನೆರಡನೆಯ ಶತಮಾನದಲ್ಲಿ ಕರ್ಣಾಟಕದಲ್ಲಿ ಜಗದೋದ್ಧಾರಕ್ಕಾಗಿ ಅವತಾರಮಾಡಿದ ಅಣ್ಣ ಶ್ರೀ ಬಸವಣ್ಣನವರ ಯೋಗ್ಯತೆಯನ್ನು ಶರಣರು ತಮ್ಮ ಈ ವಾಕ್ಯದಲ್ಲಿ ನಿರ್ಣಯಿಸಿದ್ದಾರೆ. ಶರಣ ಸಮೂಹದಲ್ಲಿ ಬಸವಣ್ಣನವರಿಗಿರುವ ಸ್ಥಾನವನ್ನು ಮನೋಹರವಾಗಿ ಚಿತ್ರಿಸಿದ್ದಾರೆ 'ನಮಃ ಶಿವಾಯ' ಎಂಬುದು ಪಂಚಾಕ್ಷರಿ ಮಂತ್ರವು, 'ಓಂ ನಮಃ ಶಿವಾಯ' ಎಂಬುದು ಷಡಕ್ಷರಿ ಮಂತ್ರವು. ಈ ಎರಡು ಮಂತ್ರಗಳಲ್ಲಿ ಪಂಚಾಕ್ಷರಿ ಮಂತ್ರವು ಲಿಂಗವಾಯಿತೆಂದರೆ, ಪ್ರಣವ ಸಮೇತವಾದ ಷಡಕ್ಷರಿ ಮಂತ್ರವು ಬಸವಣ್ಣನಾಗಿದೆ ಎಂಬ ಶರಣರ ಹೇಳಿಕೆಯಲ್ಲಿ ತಾತ್ವಿಕ ಅರ್ಥವಲ್ಲದೆ ಚಾರಿತ್ರಿಕ ಅರ್ಥವೂ ಅಡಗಿದೆ.

ಸಕಲ ಚೈತನ್ಯ ಸ್ವರೂಪನೂ ಸೃಷ್ಟಿ ಸ್ಥಿತಿ ಲಯ ಕರ್ತನೂ ಆದ ಪರಮಾತ್ಮನೇ ಪ್ರಪಂಚದ ಉದ್ಧಾರಕ್ಕಾಗಿ ಭಕ್ತನಾಗಿ ಅಂದರೆ ಸೇವಕನಾಗಿ ಹುಟ್ಟುತ್ತಾನೆಂಬುದೂ, ಹಾಗೆ ಹುಟ್ಟಿ ಜಗತ್ತಿನ ಸೇವೆಯನ್ನು ಸಲ್ಲಿಸಿ ಜಗದೋದ್ಧಾರ ಮಾಡಿದ ಆ ಭಕ್ತನನ್ನೇ ಇನ್ನುಳಿದ ಭಕ್ತರು ಲಿಂಗವೆಂದು ಅಂದರೆ ಪರಮಾತ್ಮನೆಂದು ಪೂಜಿಸುವರೆಂಬುದೂ, ಇದರಿಂದ ಭಕ್ತನು ಅನಾದಿಯಾದನೆಂಬುದೂ ಶರಣರ ಮೇಲ್ಕಂಡ ಮಹಾವಾಕ್ಯದ ತಾತ್ವಿಕ ಅರ್ಥ.

ಇನ್ನು ಈ ಮಹಾವಾಕ್ಯವನ್ನು ಚಾರಿತ್ರಿಕ ದೃಷ್ಟಿಯಿಂದ ನೋಡಿದ್ದಾದರೆ ವೀರಶೈವ ಮತ ಚರಿತ್ರೆಯ ಆದ್ಯಂತವೂ ಮನವರಿಕೆಯಾಗುವುದು. ಪಂಚಾಕ್ಷರಿಯು ಶೈವ ಮಂತ್ರವಾದರೆ ಷಡಕ್ಷರಿಯು ವೀರಶೈವ ಮಂತ್ರವಾಗಿದೆ. ಶೈವ ಸಂಪ್ರದಾಯಕ್ಕೆ ಹೇಗೆ ಲಿಂಗವು ಆದಿಯಾಗಿದೆಯೋ ಹಾಗೆ ವೀರಶೈವ ಸಂಪ್ರದಾಯಕ್ಕೆ ಬಸವಣ್ಣನವರು ಆದಿಯಾಗಿದ್ದಾರೆ. ಲಿಂಗಾರಾಧನೆಯು (*Linga Cult*) ಬಹು ಪುರಾತನ

ವಾದದ್ದೆಂಬುದೂ, ವೇದಗಳ ಕಾಲಕ್ಕೂ ಹಿಂದೆ ಸಾವಿರಾರು ವರ್ಷಗಳಿಂದಲೂ ನಮ್ಮ ಹಿಂದುಸ್ಥಾನವೇ ಅಲ್ಲದೆ ಐಗುಪ್ತ ( *Egypt* ) ಮುಂತಾದ ಪರದೇಶಗಳಲ್ಲೂ ಸಹ ಲಿಂಗಾರಾಧನೆಯು ಪ್ರಚಾರದಲ್ಲಿತ್ತೆಂಬುದೂ, ಲಿಂಗಾರಾಧನೆಯು ಆರ್ಯ ಸಂಸ್ಕೃತಿಯಾಗಿರದೆ ಕೇವಲ ದ್ರಾವಿಡ ಸಂಸ್ಕೃತಿಯಾಗಿರುವುದೆಂಬುದೂ ಇತ್ತೀಚೆಗೆ ನಡೆದಿರುವ ಅನೇಕ ಶೋಧನೆಗಳಿಂದ ಗೊತ್ತಾಗುತ್ತದೆ. ಈ ಲಿಂಗಾರಾಧನೆಯು ಅನೇಕ ವರ್ಷಗಳು ಸ್ಥಾವರ ಲಿಂಗಾರಾಧನೆಯಾಗಿ ಶೈವ ಸಂಸ್ಕೃತಿಯ ಮುಖ್ಯ ಅಂಗವಾಗಿ ನಡೆದುಕೊಂಡು ಬಂದಿತು. ಆದರೆ ಕೆಲವು ಕಾಲದ ಮೇಲೆ ಪುರಾತನವಾದ ಈ ಶೈವ ಸಂಸ್ಕೃತಿಯು ಕ್ಷೀಣವಾಗ ತೊಡಗಿತು. ಆರ್ಯರ ಆಗಮನ, ವೇದಗಳ ನಿರ್ಮಾಣ, ವರ್ಣಾಶ್ರಮಗಳ ಉತ್ಪತ್ತಿ, ಮೂಲ ನಿವಾಸಿಗಳಾದ ದ್ರಾವಿಡರ ಮೇಲೆ ಆರ್ಯರ ದಾಳಿ, ಇವೇ ಶೈವ ಸಂಸ್ಕೃತಿಯ ಕ್ಷೀಣತೆಗೆ ಕಾರಣಗಳಾದವು. ಆರ್ಯ ದ್ರಾವಿಡರ ಹೋರಾಟವು ಕೆಲವು ಕಾಲ ನಡೆದು ಕೊನೆಗೆ ಆರ್ಯರೂ ದ್ರಾವಿಡರೂ ಬೆರೆಯಲಿಕ್ಕೆ ಪ್ರಾರಂಭಿಸಿದರು. ಮಿಶ್ರ ವಿವಾಹಗಳು ನಡೆದವು. ಇದರ ಫಲವಾಗಿ ಆರ್ಯ ದ್ರಾವಿಡ ಸಂಸ್ಕೃತಿಗಳೂ ಮಿಶ್ರಿತವಾದವು. ಆದರೆ ಈ ಸಂಸ್ಕೃತಿಗಳ ಮಿಶ್ರಣದಲ್ಲಿ ಆರ್ಯ ಸಂಸ್ಕೃತಿಯ ಕೈವಾಡವೇ ಹೆಚ್ಚಾಗಿದ್ದಿತು. ಸ್ಫಟಿಕ ಮಣಿಯಂತಿದ್ದ ಸ್ವಚ್ಛ ಶೈವವು ಮಿಶ್ರಣದಿಂದ ರೂಪುಗೆಟ್ಟಿತು. ಅದರ ಉದಾರ ತತ್ವಗಳು ಕಣ್ಮರೆಯಾದವು. ಇಲ್ಲವೇ ಮಸಕು ಮಸಕಾದವು. ಶೈವದ ಭಕ್ತಿಮಾರ್ಗವು ಅಧೋಗತಿಗೆ ಇಳಿಯಿತು. ಆರ್ಯರ ವೈದಿಕ ಧರ್ಮವಾದರೋ ಮಿಶ್ರಣದಿಂದ ತನ್ನ ವ್ಯಕ್ತಿತ್ವವನ್ನು ಕಳೆದುಕೊಳ್ಳಲಿಲ್ಲ. ತನ್ನ ಹೆಚ್ಚಳವನ್ನು ಎಲ್ಲ ಕಡೆಗೂ ಬೀರಿ "ವರ್ಣಾಶ್ರಮ ಧರ್ಮ"ವೆಂಬ ತನ್ನ ಕಠಾರಿಯನ್ನು ಝುಳುಪಿಸುತ್ತ ಒಡೆತನಮಾಡಿತು. ಉಚ್ಚ ನೀಚ, ಶ್ರೇಷ್ಠ, ಕನಿಷ್ಠ, ದ್ವಿಜಶೂದ್ರ, ಕುಲ ಅಕುಲ ಎಂಬ ಭಾವನೆಗಳು ಪಿಶಾಚಿಗಳಂತೆ ಎಲ್ಲೆಲ್ಲೂ ನರ್ತನ ಮಾಡತೊಡಗಿದವು. ತೇಜೋವಧೆಗಳು ಬರಬರುತ್ತ ಹೆಚ್ಚಿದವು. ಅಶಾಂತಿಯು ತಲೆದೋರಿತು.

ಈ ಸ್ಥಿತಿಯುಂಟಾಗಲು ಜನರು ಕುಪಿತರಾದರು. ತಮ್ಮನ್ನು ಉದ್ಧರಿಸಲು ವೀರರ ಬರವನ್ನು ಅಪೇಕ್ಷಿಸಿದರು. ದೇವರಲ್ಲಿ ಮೊರೆಯಿಟ್ಟರು. ಇವರ ದೂರು ದೇವರಿಗೆ ಕೇಳಿಸಿತು. ವೀರರು ಉದಯವಾದರು. ಈ ವೀರರೇ ತಮಿಳನಾಡಿನ ಅರವತ್ತು ಮೂವರು ಪುರಾತನರು.

ಕಂದಿ ಕುಂದಿ ಬೆಂಡಾಗಿ ಹೋಗಿದ್ದ ಶೈವಧರ್ಮವನ್ನು ಈ ವೀರರು ಮೇಲಕ್ಕೆ ಎತ್ತಿದರು. ದ್ರಾವಿಡರ ಭಕ್ತಿಮಾರ್ಗವನ್ನು ಪುನರುಜ್ವಲಿಸಿದರು. ಆದರೆ ಈ ವೀರರಿಂದ ಜನತೆಗೆ ಹೆಚ್ಚು ಪ್ರಯೋಜನವಾಗಲಿಲ್ಲ. ಇವರ ಶಕ್ತಿಸಾಹಸಗಳು ಕೇವಲ ವೈಯಕ್ತಿಕವಾದವುಗಳಾಗಿದ್ದವು. ಆದಾಗ್ಯೂ ಇವರ ದೆಸೆಯಿಂದ ಜನರು ಜಾಗ್ರತರಾದರು. ವಿಚಾರಪರರಾದರು. ಈ ಅರವತ್ತುಮೂವರು ನಡೆಸಿದ ಕ್ರಾಂತಿಯಿಂದ ಇವರಾನಂತರ ಮುಂದೆ ಅವತರಿಸಿದ ಬಸವಾದಿಗಳ ಶೈವೋದ್ಧರಣ ಮತ್ತು ವೀರಶೈವ ಸ್ಥಾಪನ ಕಾರ್ಯಗಳಿಗೆ ಬಹಳ ಸಹಾಯವಾಯಿತು. ಒಂಭತ್ತು ಹತ್ತು ಹನ್ನೊಂದನೇ ಶತಮಾನಗಳಲ್ಲಿ ನಡೆದ ಈ ಹೋರಾಟವು ಹನ್ನೆರಡನೇ ಶತಮಾನದಲ್ಲಿ ಬಸವಾದಿಗಳ ಕಾಲಕ್ಕೆ ಸಮಾಪ್ತಿಗೊಂಡಿತು.

ಒಟ್ಟಾರೆ ಚಾರಿತ್ರಕವಾಗಿ ಇದನ್ನು ಹೇಳಬೇಕೆಂದರೆ, ಅರವತ್ತು ಮೂವರು ಪುರಾತನರ ಚರಿತ್ರೆಯು ವೀರಶೈವ ಚರಿತ್ರೆಗೆ ಹಿನ್ನೆಲೆ. ಅರವತ್ತು ಮೂವರ ಚರಿತ್ರೆಯನ್ನು "ಹಳೇ ಒಡಂಬಡಿಕೆ" (*Old Testament*) ಎಂದು ಹೇಳುವುದಾದರೆ, ಬಸವಾದಿಗಳ ಚರಿತ್ರೆಯು ನಮಗೆ "ಹೊಸ ಒಡಂಬಡಿಕೆ" (*New Testament*) ಆಗಿದೆ. ಬಸವಾದಿಗಳ ಸಾಹಸವು ಅರವತ್ತುಮೂವರ ಹಾಗೆ ವೈಯಕ್ತಿಕ ಸಾಹಸವಾಗಿರದೆ ಸಾಂಘಿಕ ಸಾಹಸವಾಗಿತ್ತು. ಬಸವಣ್ಣನವರು ತಮ್ಮ ಭಕ್ತಿ ಪ್ರಭಾವದಿಂದ ಒಂದು ಉಜ್ವಲ ಸಂಘಶಕ್ತಿಯನ್ನು ನಿರ್ಮಿಸಿದರು. ಸೂಜಿಗಲ್ಲಿನಂತೆ ಬಸವಣ್ಣನವರು ಬೇರೆ ಬೇರೆ ದೇಶಗಳಿಂದ ಅನೇಕ ದೊಡ್ಡ ದೊಡ್ಡ ವಿಭೂತಿಗಳನ್ನೂ, ಪದವೀಧರರನ್ನೂ, ತಪಸ್ವಿಗಳನ್ನೂ ತಮ್ಮ ಕಡೆಗೆ ಸೆಳೆದುಕೊಂಡು ಕಲ್ಯಾಣದಲ್ಲಿ ಒಂದು ಸಂಘವನ್ನು ಸ್ಥಾಪಿಸಿದರು. ಈ ಸಂಘವೇ ಸುಪ್ರಸಿದ್ಧವಾದ **ಅನುಭವ ಮಂಟಪ.** ಈರೀತಿ ಬಸವಣ್ಣನವರ ಸೂಜಿಗಲ್ಲಿನ ಸೆಳೆತಕ್ಕೆ ಸಿಕ್ಕಿದವರಲ್ಲಿ ಗೋವೆಯ ಪ್ರಭುದೇವರು, ಸೊನ್ನಲಿಗೆಯ ಸಿದ್ಧರಾಮೇಶ್ವರ ದೇವರು, ಉಡುತಡಿಯ ಮಹಾದೇವಿಯಕ್ಕಗಳು, ಗುಜರಾತಿನ ಆದಿಶೆಟ್ಟಿಗಳು, ಕಾಶ್ಮೀರದ ಕಟ್ಟಿಗೆಯ ಮಾರಿತಂದೆಗಳು, ಕೊಲ್ಲಿಪಾಕಿಯ ರೇವಣಸಿದ್ಧೇಶ್ವರ ಪ್ರಭುಗಳು, ಇವರ ಪುತ್ರ ರುದ್ರಮುನಿ ಸ್ವಾಮಿಗಳು, ಅಮರಗುಂಡದ ಮಲ್ಲಿಕಾರ್ಜುನ ಪಂಡಿತಾರಾಧ್ಯರು ಇವರೇ ಮುಂತಾದವರು ಮುಖ್ಯರು.

ಪುರಾತನವಾದ ಶೈವ ಧರ್ಮವನ್ನು ಉದ್ಧರಿಸ ಹೊರಟು ಬಸವಣ್ಣನವರು ಒಂದು ಪ್ರಬಲವಾದ ಸುಸಂಸ್ಕೃತ ವೀರತನದ ಶೈವಪಂಥವನ್ನು ನಿರ್ಮಾಣಮಾಡಿದರು. ವರ್ಣಾಶ್ರಮ ಧರ್ಮವನ್ನು ಪ್ರತಿಭಟಿಸಲು ಅತಿ ವರ್ಣಾಶ್ರಮ ಧರ್ಮವನ್ನು ಸ್ಥಾಪಿಸಿದರು. ಪುರಾತನ ಶೈವ ಸಂಸ್ಕೃತಿಯ ಸ್ಥಾವರ ಲಿಂಗವನ್ನು ಇಷ್ಟ ಲಿಂಗವನ್ನಾಗಿ ಮಾರ್ಪಡಿಸಿ ಪ್ರತಿಯೊಬ್ಬರೂ ಲಿಂಗವನ್ನು ದೇಹದಲ್ಲಿ ಧರಿಸಬೇಕೆಂಬ ಕಟ್ಟಪ್ಪಣೆ ಮಾಡಿ ಲಿಂಗಧಾರಿಗಳಿಗೆ ಕ್ಷೇತ್ರ ಯಾತ್ರೆಗಳ ದೇವಸ್ಥಾನಗಳ ಅವಶ್ಯಕತೆ ಇಲ್ಲವೆಂದು ಸಾರಿ, ದೇಹವೇ ದೇಗುಲ, ಇಷ್ಟ ಲಿಂಗವೇ ದೇವರು ಎಂದು ಸಿದ್ಧಾಂತಮಾಡಿದರು. ಇಂಥ ಇಷ್ಟ ಲಿಂಗದ ಸೂತ್ರದ ಮೇಲೆ ಷಟ್‌ಸ್ಥಲ ಸೋಪಾನವನ್ನು ಕಟ್ಟಿ ಷಡಕ್ಷರಿ ಮಂತ್ರವನ್ನು ಲೋಕದಲ್ಲಿ ಹರಡಿ ಸರ್ವರನ್ನೂ ಪಾವನಗೊಳಿಸಿದರು.

ಈ ಕಾರಣಗಳಿಂದ "ನಮಃ ಶಿವಾಯ ಲಿಂಗ, ಓಂ ನಮಃ ಶಿವಾಯ ಬಸವಣ್ಣ'' ಎಂಬ ಶರಣರ ವಾಕ್ಯವು ಸತ್ಯ, ಸತ್ಯ, ಸತ್ಯ, ನಿತ್ಯ, ನಿತ್ಯ, ನಿತ್ಯ.

೫೦. ಲಿಂಗಕ್ಕೆ ಸಹಭೋಜನವಾದಲ್ಲಿ ಕೂರ್ಮನ ಶಿಶುವಿನ ಸ್ನೇಹದಂತಿರಬೇಕು. ಅಯಃ ಕಾಂತದ ಶಿಲೆಯು ಲೋಹದಂತಿರಬೇಕು. ಶಶಿಶಿಲೆಯಂತೆ ಒಸರುವ ಅರ್ಪಿತ ಕೂಡುವ ಕೂಟ ಭ್ರಮರ ಚಂಪಕದಂತೆ ಒಡಗೂಡಿ ಲಿಂಗವ ಎಡತೆರಹಿಲ್ಲದ ಸಹಭೋಜನ ಕೊಡುವ ತನ್ನಡಿಗೆ ಕಡೆನಡು ಮೊದಲಿಲ್ಲದೆರಗುವೆ. ಆತ ಸದಾಶಿವಮೂರ್ತಿ ಲಿಂಗವು ತಾನೇ.

೫೧. ಲಿಂಗದೊಡನೆ ಸಹಭೋಜನವ ಮಾಡುವ ಸಾಧಕರೆಲ್ಲರು, ನೀವು ಕೇಳಿರೋ! ಲಿಂಗವೆ ಕರ್ತೃವಾಗಿ ನೀವೇ ಭೃತ್ಯರಾಗಿದ್ದಲ್ಲಿ ಲಿಂಗದೊಡನೆ ಸಹಭೋಜನವ ಮಾಡಲಾಗದು. ಅದೇಕೆಂದಡೆ, ಲಿಂಗವು ಅಮಲ ಸ್ವರೂಪವು. ನೀನು ಮಲದೇಹಿ. ನಿನಗೆ ಪ್ರಪಂಚು, ಲಿಂಗವು ನಿಃಪ್ರಪಂಚು. ನೀನು ಅಂಗಿ, ಲಿಂಗವು ನಿರಂಗಿ. ಅಂತಹ ಲಿಂಗಕ್ಕೂ ನಿನಗೂ ಸಹಭೋಜನವೆಂತುಟಯ್ಯ? ಜಾಗ್ರದಲ್ಲಿ ತೋರಿ ಸ್ವಪ್ನದಲ್ಲಿ ಕಂಡುದ ಲಿಂಗಕ್ಕರ್ಪಿಸಿ ಸಹಭೋಜನವ ಮಾಡುವ ಪರಿ ಎಂತೋ? ಸಾಕು ಕುಟಿಲದ ಊಟ. ಸದಾಶಿವಮೂರ್ತಿಲಿಂಗವ ಮುಟ್ಟದ ಅರ್ಪಿತವದೇಕೆ? ಕೇಳಿರಣ್ಣಾ! ನರಕಕ್ಕೆ ಭಾಜನರಪ್ಪರಲ್ಲವೆ?

## ಪ್ರಾಣಲಿಂಗಿಸ್ಥಲ.

**ವಿವರಣೆ:**—ಈ ಸ್ಥಲದಲ್ಲಿ ಇಷ್ಟ, ಪ್ರಾಣ ಭಾವಲಿಂಗಗಳ ವಿಚಾರಗಳೂ ಅವುಗಳ ಪರಸ್ಪರ ಸಂಬಂಧಗಳೂ ಹೇಳಲ್ಪಟ್ಟಿವೆ. ವಚನಕಾರನು ಇಲ್ಲಿ ಅನೇಕ ಬೆಡಗಿನ ವಚನಗಳನ್ನು ಉಪಯೋಗಿಸಿ ಈ ವಿಷಯಗಳನ್ನು ತಿಳಿಯಲು ಯತ್ನಿಸಿದ್ದಾನೆ. ಈ ಮೂರೂ ಲಿಂಗಗಳು ಮನುಷ್ಯನಲ್ಲಿ ಹೇಗೆ ಪ್ರಕಟವಾಗುತ್ತವೆ, ಅವುಗಳ ಪರಿಣಾಮಗಳು ಆಯಾ ಶರೀರಗಳ ಮೇಲೆ ಹೇಗೆ ಉಂಟಾಗುತ್ತವೆ, ಜ್ಞಾನ ಕ್ರಿಯೆಗಳ ಸಂಬಂಧವೇನು, ಮಾಯೆಯನ್ನು ಹೇಗೆ ದೂರ ಮಾಡಬೇಕು, ಇವೇ ಮೊದಲಾದ ವಿಷಯಗಳನ್ನು ಬೆಡಗುಗಳ ಮೂಲಕ ವಚನಕಾರನು ಬಹು ಮಾರ್ಮಿಕ ರೀತಿಯಿಂದ ವಿವೇಚಿಸಿದ್ದಾನೆ.

## ವಚನಗಳು.

೫೨. ಜೇನು ತುಪ್ಪವ ಹೊತ್ತು ಮಾರುವವಳ ಮಡಿಕೆಯ ಮೇಲೆ ಮೂರು ತುಂಬಿ ಕುಳಿತಿದ್ದಾವೆ. ಒಂದು ತುಂಬಿ ಇದ್ದಿತ್ತು. ಒಂದು ತುಂಬಿ ಹಾರಿತ್ತು. ಒಂದು ತುಂಬಿ ಸತ್ತಿತ್ತು. ಮೂರು ತುಂಬಿಯಂದವ ಕಂಡುದಿಲ್ಲ. ಮಡಿಕೆ ಒಡೆಯಿತ್ತು. ತುಪ್ಪ ಉಕ್ಕಿತ್ತು. ಹೊತ್ತವ ಸತ್ತ. ಇದೇನು ಕೃತ್ರಿಮವೆಂದು ಕೇಳಬನ್ನಿ ಸದಾಶಿವಮೂರ್ತಿಲಿಂಗವ.

ಟೀಕು:— ಪರಮಾಮೃತ ಸ್ವರೂಪವಾದ ಸುಜ್ಞಾನವನ್ನು ತನ್ನ ಸರ್ವಾಂಗದಲ್ಲಿ ಧರಿಸಿಕೊಂಡು ಎಂಬುದೀಗ ಜೇನು ತುಪ್ಪವ ಹೊತ್ತು ಎಂಬ ಶಬ್ದಕ್ಕರ್ಥ. ಸುಜ್ಞಾನೋದಯವಾಗಿ ತನ್ನ ಉಪಾವಸ್ಥೆಯ ಮಾಡುತ್ತಿರ್ದ ಮೋಕ್ಷಾಪೇಕ್ಷರುಗಳಾದ ಭಕ್ತಜನಂಗಳಿಗೆ ಪರಮಾಮೃತ ಸ್ವರೂಪವಾದ ಸುಜ್ಞಾನ ಬೋಧೆಯ ಬೋಧಿಸುತ್ತಿಹನು ಚಿತ್ಶಕ್ತಿ ಸ್ವರೂಪವಾದ ಶ್ರೀಗುರುವೆಂಬುದೀಗ ಮಾರುವವಳೆಂಬ ಶಬ್ದಕ್ಕರ್ಥ. ಆ ಶ್ರೀಗುರು ಸಂಬಂಧವಾಗಿಹುದೆಂಬುದೀಗ ಮಡಿಕೆಯ ಮೇಲೆ ಮೂರು ತುಂಬಿ ಕುಳತಿದ್ದಾವೆ ಎಂಬ ಶಬ್ದಕ್ಕರ್ಥ. ಸದ್ರೂಪವಾದ ಇಷ್ಟಲಿಂಗವು ಸತ್ಕ್ರಿಯಾಚಾರದಲ್ಲಿರುತ್ತಿಹುದೆಂಬುದೀಗ ಒಂದು ತುಂಬಿ ಇದ್ದಿತ್ತು ಎಂಬ ಶಬ್ದಕ್ಕರ್ಥ. ಚಿತ್ಸ್ವರೂಪವಾದ ಪ್ರಾಣಲಿಂಗವು ಶರಣನ ನಿಜಾಂತರಂಗಕ್ಕೆ ವೇಧಿಸಿತ್ತೆಂಬುದೀಗ ಒಂದು ತುಂಬಿ ಹಾರಿತ್ತು ಎಂಬ ಶಬ್ದಕ್ಕರ್ಥ. ಆನಂದ ಸ್ವರೂಪವಾದ ತೃಪ್ತಿ ಲಿಂಗವು ಶರಣನ

ಭಾವದಲ್ಲಿ ನಿಷ್ಪತ್ತಿಯಾಯಿತ್ತೆಂಬುದೀಗ ಒಂದು ತುಂಬಿ ಸತ್ತಿತ್ತು ಎಂಬ ಶಬ್ದಕ್ಕರ್ಥ. ಆ ತ್ರಿವಿಧ ಲಿಂಗವು ಶರಣನ ತ್ರಿವಿಧಾಂಗವನವಗ್ರಹಿಸಿ ನಿಷ್ಪತ್ತಿಯಾದ ಬಳಿಕ ಇದಿರಿಟ್ಟು ಕಾಣಲಿಲ್ಲವೆಂಬುದೀಗ ಮೂರು ತುಂಬಿ ಯುಂದವ ಕಂಡುದಿಲ್ಲ ಎಂಬ ಶಬ್ದಕ್ಕರ್ಥ. ಅಂತು ನಿಷ್ಪತ್ತಿಯಾಗಲು ಆ ಚಿದ್ಭಾಂಡದಲ್ಲಿ ಏಕಾರ್ಥವಾಯಿತ್ತೆಂಬುದೀಗ ಮಡಕೆ ಒಡೆಯಿತ್ತು ಎಂಬ ಶಬ್ದಕ್ಕರ್ಥ. ಆ ಚಿದ್ಭಾಂಡವು ಲಿಂಗದಲ್ಲಿ ನಿಷ್ಪತ್ತಿಯಾಗಲು ಆ ಪರಮಾಮೃತ ರಸ ಶರಣನ ಬಾಹ್ಯಾಭ್ಯಂತರಂಗದಲ್ಲಿ ಪರಿಪೂರ್ಣ ವಾಗಿ ಸೂಸುತ್ತಿಹುದೆಂಬುದೀಗ ತುಪ್ಪ ಉಕ್ಕಿತ್ತು ಎಂಬ ಶಬ್ದಕ್ಕರ್ಥ. ಆ ಚಿದ್ಭಾಂಡವ ಧರಿಸಿಕೊಂಡಿರ್ಪ ಜ್ಞಾನಗುರು ಶರಣನ ನಿಜಾಂತ ರಂಗದಲ್ಲಿ ನಿಷ್ಪತ್ತಿಯಾದನೆಂಬುದೀಗ ಹೊತ್ತವ ಸತ್ತ, ಇದೇನು ಕೃತ್ರಿಮ ವೆಂದು ಕೇಳುವ ಬನ್ನಿ ಸದಾಶಿವಮೂರ್ತಿಲಿಂಗವ ಎಂಬ ಶಬ್ದಕ್ಕರ್ಥ.

೫೩. ಕಣ್ಣಿಲ್ಲದ ಕುರುಡ ಕನ್ನಡಿಯ ನೋಡಿ, ಮೂರು ಕಣ್ಣ ಕಂಡೆನು. ಒಂದು ಧರೆಯ ಕಣ್ಣು, ಒಂದು ಸಿರಿಯ ಕಣ್ಣು, ಒಂದು ರಿಯ ಕಣ್ಣು. ಉರಿ ಸಿರಿಯ ನುಂಗಿ, ಸಿರಿ ಧರೆಯ ನುಂಗಿ, ಧರೆಯ ಅರು ಹಿರಿಯರು ನುಂಗಿ, ಆ ಗುಣವನರಿಯಬೇಕು, ಸದಾಶಿವಮೂರ್ತಿಲಿಂಗವ ಬೆರಸಬೇಕು.

ಟೀಕ :—ದೇಹ ಸಂಬಂಧಿಯಾದಾತ್ಮಂಗೆ ಸುಜ್ಞಾನ ದೃಷ್ಟಿ ನಷ್ಟ ವಾಯಿತ್ತೆಂಬುದೀಗ ಕಣ್ಣಿಲ್ಲದ ಕುರುಡನೆಂಬ ಶಬ್ದಕ್ಕರ್ಥ. ಅಂತಪ್ಪಾ ತ್ಮಂಗೆ ಶಿವಕೃಪೆಯಿಂ ಸದ್ವಿವೇಕ ಜ್ಞಾನ ತಲೆದೋರಿ ಶ್ರೀಗುರುಕಾರು ಣ್ಯದಿಂ ತ್ರಿವಿಧಲಿಂಗ ಪ್ರಭಾವಿಸಿತ್ತೆಂಬುದೀಗ ಕನ್ನಡಿಯ ನೋಡಿ ಮೂರು ಕಣ್ಣ ಕಂಡೆನೆಂಬ ಶಬ್ದಕ್ಕರ್ಥ. ಸದ್ರೂಪವಾದ ಇಷ್ಟಲಿಂಗವು ಶರಣನ ಸ್ಥೂಲಾಂಗದಲ್ಲಿ ಸಂಬಂಧವಾಗಿಹುದೆಂಬುದೀಗ ಒಂದು ಧರೆಯ ಕಣ್ಣು ಎಂಬ ಶಬ್ದಕ್ಕರ್ಥ. ಸುಜ್ಞಾನಸ್ವರೂಪವಾದ ಪ್ರಾಣಲಿಂಗವು ಶರಣನ ಸೂಕ್ಷ್ಮಾಂಗದಲ್ಲಿ ಸಂಬಂಧವಾಗಿಹುದೆಂಬುದೀಗ ಒಂದು ಸಿರಿಯ ಕಣ್ಣು ಎಂಬ ಶಬ್ದಕ್ಕರ್ಥ. ಚಿದಗ್ನಿಸ್ವರೂಪವಾದ ಭಾವಲಿಂಗವು ಶರಣನ ಕಾರಣಾಂಗದಲ್ಲಿ ಸಂಬಂಧವಾಗಿಹುದೆಂಬುದೀಗ ಒಂದು ಉರಿಯ ಕಣ್ಣು ಎಂಬ ಶಬ್ದಕ್ಕರ್ಥ. ಆ ಚಿದಗ್ನಿಸ್ವರೂಪವಾದ ಭಾವಲಿಂಗವು ಸುಜ್ಞಾನ ಸ್ವರೂಪವಾದ ಪ್ರಾಣಲಿಂಗವನವಗ್ರಹಿಸಿ ಲೀಯವಾಯಿತ್ತೆಂಬುದೀಗ ಉರಿ ಸಿರಿಯ ನುಂಗಿ ಎಂಬ ಶಬ್ದಕ್ಕರ್ಥ ಆ ಸುಜ್ಞಾನ ಸ್ವರೂಪವಾದ ಪ್ರಾಣ

ಲಿಂಗವು ಸದ್ರೂಪವಾದ ಇಷ್ಟಲಿಂಗವನವಗ್ರಹಿಸಿ ಲೀಯವಾಯಿತ್ತೆಂಬುದೀಗ ಸಿರಿ ಧರೆಯ ನುಂಗಿ ಎಂಬ ಶಬ್ದಕ್ಕರ್ಥ. ಆ ಶರಣನ ಆಚಾರಲಿಂಗದಲ್ಲಿ ಸಂಬಂಧವಾದ ಸತ್ಕ್ರಿಯಾಲಿಂಗವು ತ್ರಿವಿಧಲಿಂಗಾನುಭಾವಿಗಳ ಸರ್ವಾಂಗವನವಗ್ರಹಿಸಿ ನಿಷ್ಪತ್ತಿಯಾಯಿತ್ತೆಂಬುದೀಗ ಧರೆಯ ಅರುಹಿರಿಯರು ನುಂಗಿ ಆ ಗುಣವನರಿಯಬೇಕು, ಸದಾಶಿವಮೂರ್ತಿಲಿಂಗವ ಬೆರಿಸಬೇಕು ಎಂಬ ಶಬ್ದಕ್ಕರ್ಥ.

೫೪. ಒಂದು ಹರಿವ ಹಾವು, ಒಂದು ಧನಿ ಸರಕ್ಕೆ ನಿಂತ ಹಾವು, ಒಂದು ಹರಿವ ಹಾವು, ಈ ಮೂವರ ನಡುವೆ ನಿಂತು ಆಡುವ ಕೋಡಗದಿರವು ಇಂತೆಂದೊಡೆ ಹರಿವ ಹಾವ ಮೆಟ್ಟಿ, ನಿಂದ ಹಾವ ಕೈಯ್ಯಲ್ಲಿ ಹಿಡಿದು, ಉರಿವ ಹಾವ ಬಾಯಲ್ಲಿ ಕಚ್ಚಿ ಆಡುತ್ತಿರಲಾಗಿ, ಕೋಡಗದೊಡೆಯ ಬಂದು ನೋಡಿ ಕೋಲ ಹಿಡಿದು ಕುಟ್ಟಿ, ಮೂರು ಹಾವ ಬಿಟ್ಟು ಕುಟ್ಟಿದ ಕೋಲ ನುಂಗಿತ್ತು. ಆ ಕೋಲು ಕೋಡಗದ ಒಡಲೊಳಗೊಡೆದು, ಕೋಡಗ ಸತ್ತಿತ್ತು. ದಡಿ ಒಡೆಯನ ನುಂಗಿ ಒಡೆಯ ನಡಗಿ ಸದಾಶಿವಮೂರ್ತಿಲಿಂಗವನೊಡಗೂಡಿ ಬಚ್ಚಬಯಲಾಯಿತ್ತು.

ಟೀಕು:— ಸ್ಥೂಲತನುವಿನ ಜಾಗ್ರಾವಸ್ಥೆಯ ವ್ಯಾಪಾರದಲ್ಲಿ ಚರಿಸುತ್ತಿಹನು ವಿಶ್ವನೆಂಬುದೀಗ ಒಂದು ಹರಿವ ಹಾವು ಎಂಬ ಶಬ್ದಕ್ಕರ್ಥ. ಸೂಕ್ಷ್ಮ ತನುವಿನ ಇಂದ್ರಿಯಂಗಳ ಶಬ್ದ ಜಾಲದೊಳಗಿರ್ದ ತೈಜಸನೆಂಬುದೀಗ ಒಂದು ಧನಿ ಸರಕ್ಕೆ ನಿಂತ ಹಾವು ಎಂಬ ಶಬ್ದಕ್ಕರ್ಥ. ತಾಪತ್ರಯದೊಳಗೆ ಸಿಲ್ಕಿ ಮರವೆಯಲ್ಲಿರುತ್ತಿಹನು ಪ್ರಾಜ್ಞನೆಂಬುದೀಗ ಒಂದು ಹರಿವ ಹಾವು ಎಂಬ ಶಬ್ದಕ್ಕರ್ಥ. ಇಂತಪ್ಪ ಜೀವತ್ರಯಂಗಳೊಳಗಾಗಿ ಸಿಲ್ಕಿಯೆಂಬದೀಗ ಈ ಮೂವರ ನಡುವೆ ನಿಂದು ಎಂಬ ಶಬ್ದಕ್ಕರ್ಥ. ಅಂತಪ್ಪ ಜೀವತ್ರಯಂಗಳೊಳಗೆ ಮನವು ಸಿಲ್ಕಿ ಪ್ರಪಂಚಿನಲ್ಲಿ ಚರಿಸುತ್ತಿಹುದೆಂಬುದೀಗ ಆಡುವ ಕೋಡಗದಿರವು ಎಂಬ ಶಬ್ದಕ್ಕರ್ಥ. ಇಂತಪ್ಪ ಮನೋಮಧ್ಯದಲ್ಲಿ ಸುಜ್ಞಾನೋದಯವಾಗಲು ಶ್ರೀಗುರು ಕಾರುಣ್ಯದಿಂ ಜಾಗ್ರಾವಸ್ಥೆಯ ವ್ಯಾಪಾರವ ಕ್ರಿಯಾದೀಕ್ಷೆಯಿಂ ನಿವೃತ್ತಿಮಾಡಿ ಆ ವಿಶ್ವದಲ್ಲಿ ಇಷ್ಟಲಿಂಗ ಪ್ರತಿಷ್ಠೆಯ ಮಾಡಿದನೆಂಬುದೀಗ ಹರಿವ ಹಾವ ಮೆಟ್ಟಿ ಎಂಬ ಶಬ್ದಕ್ಕರ್ಥ. ಅಂತು ಇಷ್ಟಲಿಂಗ ಸಂಬಂಧವಾಗಲು ಸೂಕ್ಷ್ಮ ತನುವಿನ ಇಂದ್ರಿಯಂಗಳ ವರ್ತನೆಯಲ್ಲಿ ಚರಿಸುತ್ತಿಹ ತೈಜಸನ ದುರ್ಭಾವ ಹಸ್ತವ ಮಂತ್ರದೀಕ್ಷೆಯಿಂ ನಷ್ಟವಾಗಿ

ಸದ್ಭಾವ ನೆಲೆಗೊಂಡಲ್ಲಿ ಪ್ರಾಣಲಿಂಗ ಸಂಬಂಧವಾಯಿತ್ತೆಂಬುದೀಗ ನಿಂತ ಹಾವ ಕೈಯಲ್ಲಿ ಹಿಡಿದು ಎಂಬ ಶಬ್ದಕ್ಕರ್ಥ. ಅಂತು ಪ್ರಾಣ ಲಿಂಗ ಸಂಬಂಧವಾದಲ್ಲಿ ತಾಪತ್ರಯಾಗ್ನಿಯಲ್ಲಿ ಬೇವುತ್ತಿರ್ದ ಪ್ರಾಜ್ಞ ನನು ವೇಧಾದೀಕ್ಷೆಯಿಂ ನಷ್ಟವ ಮಾಡಿ ಭಾವಲಿಂಗದ ಸಂಬಂಧವಾ ಗಲು ಚಿದ್ವಾರದಲ್ಲ ಅವಗ್ರಹಿಸಿದನೆಂಬುದೀಗ ಉರಿವ ಹಾವ ಬಾಯಲ್ಲಿ ಕಚ್ಚಿ ಎಂಬ ಶಬ್ದಕ್ಕರ್ಥ. ಇಂತಪ್ಪ ತ್ರಿವಿಧ ಲಿಂಗದಲ್ಲಿ ಆಚರಿಸುತ್ತಿರ ಲಾಗಿ ಎಂಬುದೀಗ ಆಡುತ್ತಿರಲಾಗಿ ಎಂಬ ಶಬ್ದಕ್ಕರ್ಥ. ಮನಕ್ಕೆ ಕರ್ತನಾದ ಶರಣ ಬಂದು ಅವಿರಳ ಜ್ಞಾನ ದೃಕ್ಕಿನಿಂ ನೋಡಬೊಡನೆ ಕೋಲೆಂದೊಡೆ ಶಿವಭಾವ, ಆ ಶಿವಭಾವದಲ್ಲಿ ಬಡಿಯಲಾಗಿ ಜೀವತ್ರ ಯಂಗಳ ವರ್ತನೆ ಬಿಟ್ಟು ಶಿವಭಾವವನವಗ್ರಹಿಸಿತ್ತೆಂಬುದೀಗ ಕೋಡ ಗದೊಡೆಯ ಬಂದು ನೋಡೆ ಕೋಲು ಹಿಡಿದು ಕುಟ್ಟಿ ಮೂರು ಹಾವು ಬಿಟ್ಟು ಕುಟ್ಟಿದ ಕೋಲ ನುಂಗಿತ್ತು ಎಂಬ ಶಬ್ದಕ್ಕರ್ಥ. ಆ ಶಿವ ಭಾವವು ಮನೋಮಧ್ಯದಲ್ಲಿ ಸಮರಸವಾಯಿತ್ತೆಂಬುದೀಗ ಆ ಕೋಲು ಕೋಡಗದ ಒಡಲೊಳಗೊಡೆದು ಎಂಬ ಶಬ್ದಕ್ಕರ್ಥ. ಆ ಮನಸ್ಸು ಸದ್ರೂಪವಾದ ಬ್ರಹ್ಮವೆಯಾಯಿತ್ತೆಂಬುದೀಗ ಕೋಡಗ ಸತ್ತಿತ್ತೆಂಬ ಶಬ್ದ ಕ್ಕರ್ಥ. ಅಂತು ಮನ ಲಿಂಗದಲ್ಲೇಕಾರ್ಥವಾಗಲು ಶರಣನ ಆ ಶಿವಭಾ ವವನವಗ್ರಹಿಸಿತ್ತೆಂಬುದೀಗ ದಡಿ ಒಡೆಯನ ನುಂಗಿ ಎಂಬ ಶಬ್ದಕ್ಕರ್ಥ. ಅಂತಪ್ಪ ಜ್ಞಾನ ಕಲಾತ್ಮನು ಆ ಶಿವಭಾವದಲ್ಲೇಕಾರ್ಥವಾದನೆಂಬು ದೀಗ ಒಡೆಯನಡಗಿ ಸದಾಶಿವಮೂರ್ತಿಲಿಂಗವನೊಡಗೂಡಿ ಬಚ್ಚ ಬಯಲಾಯಿತ್ತು ಎಂಬ ಶಬ್ದಕ್ಕರ್ಥ.

೫೫. ಇಷ್ಟಲಿಂಗ ಪ್ರಾಣಲಿಂಗವೆಂದು ಬೇರೊಂದು ಕಟ್ಟಣೆಯ ಮಾಡಬಹುದೇ ಅಯ್ಯ? ಬೀಜ ಒಡೆದು ಮೊಳೆ ತಲೆದೋರುವಂತೆ, ಬೀಜಕ್ಕೂ ಅಂಕುರಕ್ಕೂ ಭಿನ್ನಭಾವ ಉಂಟೇ ಅಯ್ಯ? ಇಷ್ಟಲಿಂಗದ ಕುರುಹಿನಲ್ಲಿ ಚಿತ್ತು ನಿಂದು ಮಿಕ್ಕ ಗುಣಂಗಳನರಿಯಬೇಕು. ಇದೇ ನಿಶ್ಚಯ ಸದಾಶಿವಮೂರ್ತಿಲಿಂಗವು ತಾನೆ.

೫೬. ಅರಿವ ಮರೆದು ಪೂಜಿಸಿದುದು ಸ್ಥಾವರಲಿಂಗಕ್ಕೆ ಸರಿ. ಅರಿಯದೆ ಮರೆಯದೆ ಕರಿಗೊಂಡ ನೆನಹು ಅದು ಪ್ರಾಣಲಿಂಗ ಸಂಬಂಧ. ಇಂತಿವರಲ್ಲಿ ಭೇದಂಗಳನರಿತು ಪರತತ್ವವ ಕೊಡುವ ಪರಮ ಗುರು ನಾಗಬೇಕು. ಸದಾಶಿವಮೂರ್ತಿಲಿಂಗ ತಾನಾಗಬೇಕು.

೫೭. ಕೋಡಗದ ಚೇಷ್ಟೆ ಉಡುಗಿ ಹಾವಿನ ಹಲ್ಲ ಮುರಿದು ಆಡಿಸುವ ಜೋಗಿಯು ನಾಮ ನಷ್ಟವಾಗಿ ಸದಾಶಿವಮೂರ್ತಿಲಿಂಗದ ಇರವು ನಿರಾಳವಾಯಿತ್ತು.

ಟೀಕು:— ಅಂತರಂಗದಲ್ಲಿ ಸುಜ್ಞಾನೋದಯವಾದ ಶರಣಂಗೆ ಮನೋವಿಕಾರವಳಿದು ಉನ್ಮನಿ ತತ್ವರೂಪವನೆಯ್ದಿತ್ತೆಂಬುದೀಗ ಕೋಡಗ ಚೇಷ್ಟೆ ಉಡುಗಿ ಎಂಬ ಶಬ್ದಕ್ಕರ್ಥ. ಅಂತಪ್ಪ ಮನೋವಿಕಾರ ನಷ್ಟವಾಗಲು ಜೀವನ ಸಂಕಲ್ಪ ವಿಕಲ್ಪಂಗಳೆಂಬ ದಂತ ಭಗ್ನವಾದವೆಂಬುದೀಗ ಹಾವಿನ ಹಲ್ಲ ಮುರಿದು ಎಂಬ ಶಬ್ದಕ್ಕರ್ಥ. ಆ ಎರಡನು ನಿವೃತ್ತಿ ಮುಖಕ್ಕೆ ತಂದು ಲಿಂಗದಲ್ಲಿ ಏಕಾರ್ಥವ ಮಾಡಿ ಇಷ್ಟಲಿಂಗ ಪ್ರಾಣಲಿಂಗದಲ್ಲಿ ಜ್ಞಾನಕ್ರಿಯಿಂದಾಚರಿಸುತ್ತಿಹ ಶರಣನ ಸರ್ವಾಂಗವು ಲಿಂಗಮಯವಾಯಿತ್ತೆಂಬುದೀಗ ಆಡಿಸುವ ಜೋಗಿಯು ಎಂಬ ಶಬ್ದಕ್ಕರ್ಥ. ಆ ಸರ್ವಾಂಗಲಿಂಗ ಸಂಬಂಧಿಯಾದ ಶರಣನು ಮಹಾಘನಲಿಂಗದಲ್ಲಿ ನಿಷ್ಪತ್ತಿಯಾಗಲು ಉಭಯ ನಾಮವಳಿದು ನಿರ್ನಾಮಸ್ವರೂಪವಾಯಿತ್ತೆಂಬುದೀಗ ನಾಮ ನಷ್ಟವಾಗಿ ಸದಾಶಿವಮೂರ್ತಿಲಿಂಗದ ಇರವು ನಿರಾಳವಾಯಿತ್ತೆಂಬ ಶಬ್ದಕ್ಕರ್ಥ.

೫೮. ಕೋಣೆಯೊಳಗಣ ಮಿಂಡ, ನಡುಮನೆಯೊಳಗಣ ಗಂಡ, ಇವರಿಬ್ಬರ ಒಡಗೂಡುವಳ ಚಂದವ ನೋಡಾ. ಕೈಯ್ಯಲ್ಲಿ ಕಣ್ಣು ಹುಟ್ಟಿ, ಬಾಯಲ್ಲಿ ಬಸಿರು ಹುಟ್ಟಿ, ಮೊಲೆ ತಲೆಯಲ್ಲಿ ಭಗ ಬೆನ್ನಿನಲ್ಲಿ ಈ ಹಾವರಗಿತ್ತಿಯುಂದವ ಸದಾಶಿವಮೂರ್ತಿ ಲಿಂಗವೇ ಬಲ್ಲ.

ಟೀಕು:— ಶರಣನ ಸೂಕ್ಷ್ಮಾಂತರಂಗದಲ್ಲಿ ಸಂಬಂಧವಾಗಿರ್ಪ ಚಿದ್ರೂಪವಾದ ಪ್ರಾಣಲಿಂಗವೆಂಬುದೀಗ ಕೋಣೆಯೊಳಗಣ ಮಿಂಡನೆಂಬ ಶಬ್ದಕ್ಕರ್ಥ. ಚಿದ್ರೂಪನಾದ ಶರಣನ ಆಚಾರಾಂಗದಲ್ಲಿ ಸಂಬಂಧವಾಗಿರ್ಪ ಸದ್ರೂಪವಾದ ಇಷ್ಟಲಿಂಗವೆಂಬುದೀಗ ನಡುಮನೆಯೊಳಗಣ ಗಂಡನೆಂಬ ಶಬ್ದಕ್ಕರ್ಥ. ಜ್ಞಾನಶಕ್ತಿ ಸ್ವರೂಪನಾದ ಶರಣ ಇಷ್ಟಲಿಂಗ ಪ್ರಾಣಲಿಂಗದಲ್ಲಿ ಕ್ರಿಯಾಜ್ಞಾನದಿಂ ಬೆರಿಸುತ್ತಿರ್ದನೆಂಬುದೀಗ ಇವರಿಬ್ಬರ ಒಳಗೂಡುವವಳ ಚಂದವ ನೋಡಾ ಎಂಬ ಶಬ್ದಕ್ಕರ್ಥ. ಅಂತು ಕ್ರಿಯಾಜ್ಞಾನವಿಡಿದಾಚರಿಸುತ್ತಿರ್ದ ಶರಣ ಸತಿಯು ಸದ್ಭಾವ ಹಸ್ತದಲ್ಲಿ ಜ್ಞಾನದೃಷ್ಟಿ ಪ್ರಭಾವಿಸಿತ್ತೆಂಬುದೀಗ ಕೈಯ್ಯಲ್ಲಿ ಕಣ್ಣು ಹುಟ್ಟಿ

ಎಂಬ ಶಬ್ದಕ್ಕರ್ಥ. ಆ ಶರಣನ ಶಿವಾಪೇಕ್ಷೆಯಲ್ಲಿ ಚಿದ್ಗರ್ಭದ ಚಿಹ್ನ ದೋರಿತ್ತೆಂಬುದೀಗ ಬಾಯಲ್ಲಿ ಬಸಿರು ಹುಟ್ಟಿ ಎಂಬ ಶಬ್ದಕ್ಕರ್ಥ. ಅಮೃತ ಕುಂಭ ಸ್ವರೂಪಿನಿಂದೊಪ್ಪುತ್ತಿರ್ದ ಮಹಾಘನಲಿಂಗವು ಶರಣನ ಅಭಿನ್ನ ಜ್ಞಾನದಲ್ಲಿ ಸಂಬಂಧವಾಯಿತ್ತೆಂಬುದೀಗ ಮೊಲೆ ತಲೆಯಲ್ಲಿ ಎಂಬ ಶಬ್ದಕ್ಕರ್ಥ. ಆ ಶರಣನ ಸತಿಯು ನಿಜ ಸುಷುಪ್ತಿ ಸ್ಥಾನವು ಸುಜ್ಞಾನವೆಂಬ ಅವರ ಭಾಗದಲ್ಲಿ ಸಂಬಂಧವಾಗಿರುತ್ತಿಹುದೆಂಬುದೀಗ ಭಗ ಬೆನ್ನಿನಲ್ಲಿ ಎಂಬ ಶಬ್ದಕ್ಕರ್ಥ. ಆ ಸದ್ರೂಪವಾದ ಇಷ್ಟಲಿಂಗಕ್ಕಂಗವಾಗಿರ್ಪ ಶರಣ ಸತಿಯು ತನ್ನ ನಿಜಾಂತರಂಗದ ಪ್ರಾಣಲಿಂಗದಲ್ಲಿ ಜ್ಞಾನಾಚರಣೆಯಿಂ ಚರಿಸುತ್ತಿಹಳೆಂಬುದೀಗ ಈ ಹಾದರಗಿತ್ತಿಯುಂದವ ಸದಾಶಿವಮೂರ್ತಿಲಿಂಗವೇ ಬಲ್ಲನೆಂಬ ಶಬ್ದಕ್ಕರ್ಥ.

೫೯. ತಾವರೆಯ ನಾಳದ ತೆರಪಿನಲ್ಲಿ ಮೂರು ಲೋಕವನೊಳಕೊಂಡ ಗಾತ್ರದಾನೆ ಎಡತಾಕುತ್ತಿದೆ. ನಾಳ ಹರಿದು ಆನೆಯಂಗಕ್ಕೆ ನೋವಿಲ್ಲ. ಇದೇನು ಚೋದ್ಯವೆಂದು ಕೇಳುವ ಬನ್ನಿ ಸದಾಶಿವ ಮೂರ್ತಿ ಲಿಂಗವೆ.

ಟೀಕು: — ಹೃದಯ ಕಮಲದಲ್ಲಿರ್ಪ ಸುಜ್ಞಾನದ್ವಾರವೆಂಬುದೀಗ ತಾವರೆಯ ನಾಳದ ಎಂಬ ಶಬ್ದಕ್ಕರ್ಥ. ಆ ಸುಜ್ಞಾನ ದ್ವಾರದ ವಿಶಾಲ ತರದಲ್ಲಿ ಎಂಬುದೀಗ ತೆರಪಿನಲ್ಲಿ ಎಂಬ ಶಬ್ದಕ್ಕರ್ಥ. ಆ ಚಿತ್‌ಸ್ವರೂಪನಾದ ಶರಣನ ತನುತ್ರಯಂಗಳನೊಳಕೊಂಡಿರ್ಪ ಚಿದಹಂಕಾರ ಸ್ವರೂಪವಾದ ಭಕ್ತಿಗಜನೆಂಬುದೀಗ ಮೂರು ಲೋಕವನೊಳಕೊಂಡ ಗಾತ್ರದಾನೆ ಎಂಬ ಶಬ್ದಕ್ಕರ್ಥ. ಅಂತಪ್ಪ ಚಿದಹಂಕಾರವನೊಳಕೊಂಡಿರ್ಪ ಶರಣನು ಇಷ್ಟಪ್ರಾಣಲಿಂಗದಲ್ಲಿ ಸುಜ್ಞಾನ ಕ್ರಿಯೆವಿಡಿದು ಆಚರಿಸುತ್ತಿರ್ದನೆಂಬುದೀಗ ಎಡತಾಕುತ್ತಿದೆ ಎಂಬ ಶಬ್ದಕ್ಕರ್ಥ. ಆ ಶರಣನ ಸುಜ್ಞಾನ ದ್ವಾರಕ್ಕೆ ಕೇಡಿಲ್ಲವೆಂಬುದೀಗ ನಾಳ ಹರಿಯದು ಎಂಬ ಶಬ್ದಕ್ಕರ್ಥ. ಆ ಚಿದಹಂಕಾರವನೊಳಕೊಂಡಿರ್ಪ ಶರಣನಂಗಕ್ಕೆ ಸಂಸಾರವ್ಯಾಪ್ತಿಯ ದುಃಖವಿಲ್ಲವೆಂಬುದೀಗ ಆನೆಯಂಗಕ್ಕೆ ನೋವಿಲ್ಲ ಎಂಬ ಶಬ್ದಕ್ಕರ್ಥ. ಆ ಚಿದಹಂಕಾರ ಸ್ವರೂಪನಾದ ಶರಣನ ಚಿತ್‌ಪ್ರಭಾಂಗಕ್ಕೆ ಸಂಸಾರ ಬಂಧನವಿಲ್ಲದಿರ್ಪುದು ಆಶ್ಚರ್ಯವೆಂಬುದೀಗ ಇದೇನು ಚೋದ್ಯವೆಂದು ಕೇಳುವ ಬನ್ನಿ ಸದಾಶಿವಮೂರ್ತಿಲಿಂಗವ ಎಂಬ ಶಬ್ದಕ್ಕರ್ಥ.

೬೦. ಸೂಜಿಯ ಮೊನೆಯಲ್ಲಿ ದಾರವೇರಿ ಹಿನ್ನಿಯ ಹಂಗ ಬಿಡಿಸಿತ್ತು. ಉಂಬ ಹಂಗ ಕಣ್ಣ ಕಂಡು ಬಾಯಲ್ಲಿ ಹಂಗ ಬಿಡಿಸಿತ್ತು. ಮನ ಕಂಡು ಕೈ ಸಂದೇಹವ ಬಿಡಿಸಿತ್ತು. ಮನ ಘನದಲ್ಲಿ ನಿಂದು ಸದಾಶಿವಮೂರ್ತಿಲಿಂಗದ ಕುರುಹಳಿಯಿತ್ತು.

ಟೀಕು:— ಚಿದ್ರೂಪನಾದ ಶರಣ ಶಿವಾನುಭಾವ ಸನ್ನಿಹಿತನಾದ ಮನಸ್ಸಿನಗ್ರದಲ್ಲಿ ಸ್ವಾನುಭಾವ ಸೂತ್ರವ ಪ್ರಯೋಗಿಸಿದನೆಂಬುದೀಗ ಸೂಜಿಯ ಮೊನೆಯಲ್ಲಿ ದಾರವೇರಿ ಎಂಬ ಶಬ್ದಕ್ಕರ್ಥ. ಆ ಶಿವಾನುಭಾವದಲ್ಲಿ ಸನ್ನಿಹಿತವಾದ ಸ್ವಾನುಭಾವ ಸೂತ್ರವು ಕ್ರಿಯಿಂದೊದಗುವ ಭಿನ್ನಫಲಪದಂಗಳ ನಿವೃತ್ತಿ ಮಾಡಿತ್ತೆಂಬುದೀಗ ಹಿನ್ನಿಯ ಹಂಗ ಬಿಡಿಸಿತ್ತೆಂಬ ಶಬ್ದಕ್ಕರ್ಥ. ಆ ಭಿನ್ನಫಲಪದಂಗಳು ನಿವೃತ್ತಿಯಾಗಲು ಸಕಲ ವಿಷಯ ಭೋಗಂಗಳ ಜೀವನು ಭುಂಜಿಸುತ್ತಿಹುದನು ಶರಣ ಸುಜ್ಞಾನ ದೃಷ್ಟಿ ಕಂಡು ಆ ಭಿನ್ನಾಪೇಕ್ಷೆಯನು ನಷ್ಟವ ಮಾಡಿದನೆಂಬುದೀಗ ಉಂಬ ಹಂಗ ಕಣ್ಣ ಕಂಡು ಬಾಯಲ್ಲಿ ಹಂಗ ಬಿಡಿಸಿತ್ತು ಎಂಬ ಶಬ್ದಕ್ಕರ್ಥ. ಅಂತು ಭಿನ್ನಾಪೇಕ್ಷೆ ನಷ್ಟವಾಗಲು ತನ್ನ ನಿಜಾಂತರಂಗದಲ್ಲಿರ್ಪ ಪ್ರಾಣಲಿಂಗವನು ಮನ ಸುಜ್ಞಾನ ದೃಷ್ಟಿಯಿಂ ಕಂಡು ಅವಿರಳ ಸಂಬಂಧಿಯಾಗಲು ಕರಸ್ಥಲದಲ್ಲಿ ಇಷ್ಟಲಿಂಗವಿಡಿದು ಮಾಡುವ ಸತ್ಕ್ರಿಯಾಚಾರವೆಲ್ಲ ನಿಷ್ಪತ್ತಿಯಾದವೆಂಬುದೀಗ ಮನ ಕಂಡು ಕೈಯ್ಯ ಸಂದೇಹವ ಬಿಡಿಸಿತ್ತು ಎಂಬ ಶಬ್ದಕ್ಕರ್ಥ. ಈ ಜ್ಞಾನಕ್ರಿಯೆಯನೊಳಕೊಂಡಿರ್ಪ ಮನಸ್ಸು ನಿಷ್ಕಲಪರಬ್ರಹ್ಮದಲ್ಲಿ ಸ್ವಸ್ಥಿರವಾಗಿ ಸಮರಸವನೆಯ್ದಿತ್ತೆಂಬುದೀಗ ಮನ ಘನಲಿಂಗದಲ್ಲಿ ನಿಂದು ಸದಾಶಿವಮೂರ್ತಿಲಿಂಗದ ಕುರುಹಳಿಯಿತ್ತು ಎಂಬ ಶಬ್ದಕ್ಕರ್ಥ.

೬೧. ಹಾವಿನ ಹುತ್ತದಲ್ಲಿ ಹದ್ದು ತತ್ತಿಯನಿಕ್ಕಿ ಹಾವು ಹಸಿದು ತತ್ತಿಯ ಮುಟ್ಟದು ನೋಡಾ. ಹಾವಿನ ವಿವರ ಹದ್ದಿನ ಭೇದ ತತ್ತಿಯ ಗುಣ ಆವುದೆಂದರಿದಲ್ಲಿ ಜೀವ ಪರವು ಸ್ವಯುಜ್ಞಾನ ಭೇದವನರಿಯಬೇಕು ಸದಾಶಿವಮೂರ್ತಿಲಿಂಗವನರಿವುದಕ್ಕೆ.

ಟೀಕು:— ಶಂಕಾ ವಿಷ ಸಂಬಂಧಿಯಾದ ಜೀವಂಗೆ ನವದ್ವಾರಯುಕ್ತವಾದ ದೇಹವೇ ಆಶ್ರಯವಾಯಿತ್ತೆಂಬುದೀಗ ಹಾವಿನ ಹುತ್ತದಲ್ಲಿ ಎಂಬ ಶಬ್ದಕ್ಕರ್ಥ. ಆ ನವದ್ವಾರಯುಕ್ತವಾದ ದೇಹದಲ್ಲಿ ಪರಮಾ

ತ್ಮನು ಸ್ವಯಂಜ್ಞಾನ ಪ್ರಭಾವಿಸದನೆಂಬುದೀಗ ಹದ್ದು ತತ್ತಿಯುಸಿಕ್ಕಿ ಎಂಬ ಶಬ್ದಕ್ಕರ್ಥ. ಆ ಜೀವನು ಆಶೆ ತೃಷ್ಣೆ ಮುಂದುಗೊಂಡ ಕಾರಣ ಸ್ವಯಂಜ್ಞಾನ ಸಾಧ್ಯವಲ್ಲವೆಂಬುದೀಗ ಹಾವು ಹಸಿದು ತತ್ತಿಯ ಮುಟ್ಟದು ನೋಡಾ ಎಂಬ ಶಬ್ದಕ್ಕರ್ಥ. ಆ ಜೀವಾತ್ಮನೆಂಬುದೀಗ ಹಾವಿನ ವಿವರ. ಆ ಜೀವಂಗೆ ಚೈತನ್ಯವಾದ ಪರಮಾತ್ಮ ತತ್ವವೆಂಬುದೀಗ ಹದ್ದಿನ ಭೇದ. ಆ ಪರಮಾತ್ಮನಿಂದುದಯವಾದ ಸ್ವಯಂಜ್ಞಾನವೆಂಬುದೀಗ ತತ್ತಿಯ ಗುಣ. ಆ ಜೀವ ಭಾವವಳಿದು ಸಜ್ಜೀವ ಸ್ವರೂಪನಾದ ಶರಣ ಸತಿಯೇ ಅಂಗ, ಆ ಪರಮಾತ್ಮ ತತ್ವವೇ ಕರಸ್ಥಲಕ್ಕೆ ಇಷ್ಟ ಲಿಂಗ ಸ್ವರೂಪವಾಗಿ ಬಲದಲ್ಲಿ ಈ ಲಿಂಗಾಂಗವೆರಡರ ಕೂಟವೇ ಅಸಿಪವ ಸ್ವರೂಪವಾದ ಭಕ್ತಿ ಎಂದರಿಯಬೇಕೆಂಬುದೀಗ ಹಾವಿನ ವಿವರ ಹದ್ದಿನ ಭೇದ ತತ್ತಿಯ ಗುಣ ಆವುದೆಂದರಿದಲ್ಲಿ ಜೀವ ಪರಮ ಸ್ವಯಂಜ್ಞಾನ ಭೇದವನರಿಯಬೇಕು ಸದಾಶಿವಮೂರ್ತಿಲಿಂಗವನರಿವುದಕ್ಕೆ ಎಂಬ ಶಬ್ದಕ್ಕರ್ಥ.

೭೨. ಹುಲಿ ಹುತ್ತವ ಹೊಕ್ಕು ಹಾವಾದ ಭೇದವನಾರು ಬಲ್ಲರು? ಹಾವು ಹುತ್ತವ ಬಿಟ್ಟು ಹದ್ದಾದ ಭೇದವನಾರು ಬಲ್ಲರು? ಹುಲಿ ಹಾವು ಹದ್ದು ಕೂಡಿ ಕುಲವ ಹೊರಗಿಟ್ಟು ಒಳಗಾದ ಭೇದವನಾರು ಬಲ್ಲರು? ಇಂತೀ ಸ್ಥೂಲ ಸೂಕ್ಷ್ಮ ಕಾರಣತ್ರಯ ಕೂಡಿ ತತ್ವದಲ್ಲಿ ನಿಂತು ಬಚ್ಚಬಯಲಾಯಿತ್ತು ಸದಾಶಿವಮೂರ್ತಿ ಲಿಂಗದಲ್ಲಿ.

ಟೀಕು:— ಜಾಗ್ರಾವಸ್ಥೆಯಿಂ ವಿಶ್ವಪ್ರಪಂಚು ಗ್ರಹಿಸುತ್ತಿಹನು ಜೀವನೆಂಬುದೀಗ ಹುಲಿ ಎಂಬ ಶಬ್ದಕ್ಕರ್ಥ. ಅಂತಪ್ಪ ಜೀವನು ನವದ್ವಾರಯುಕ್ತವಾದ ದೇಹವನಾಶ್ರಯಿಸಿ ಶಂಕಾ ವಿಷಯ ರೂಪವಾದ ಮನೋವರ್ತನೆಯನೆಯ್ದಿದ ಭೇದವನಾರಿಗೂ ಅರಿಯಬಾರದೆಂಬುದೀಗ ಹುಲಿ ಹುತ್ತವ ಹೊಕ್ಕು ಹಾವಾದ ಭೇದವನಾರುಬಲ್ಲರು ಎಂಬ ಶಬ್ದಕ್ಕರ್ಥ. ಅಂತಪ್ಪ ಮನಕ್ಕೆ ಸದ್ವಿವೇಕ ಜ್ಞಾನ ತಲೆದೋರಿ ದೇಹಭಾವವ ವಿಡಂಬಿಸಿ ಪರಮಾತ್ಮ ಸ್ವರೂಪವಾದ ಭೇದವ ಆರಿಗೂ ಅರಿಯಬಾರದೆಂಬುದೀಗ ಹಾವು ಹುತ್ತವ ಬಿಟ್ಟು ಹದ್ದಾದ ಭೇದವನಾರು ಬಲ್ಲರು ಎಂಬ ಶಬ್ದಕ್ಕರ್ಥ. ಆ ಜೀವನು ಮನಸ್ಸು ಶಿವಭಾವದಲ್ಲಿ ಒಂದುಗೂಡಿ ಎಂಬುದೀಗ ಹುಲಿ ಹಾವು ಹದ್ದು ಕೂಡಿ ಎಂಬ ಶಬ್ದಕ್ಕರ್ಥ. ಆ ಶಿವಭಾವದಲ್ಲಿ ಸನ್ನಿಹಿತವಾಗಲು ಪೂರ್ವಾಶ್ರಯದ ಗುಣಂ

ಗಳು ಕೆಟ್ಟು ಶಿವತತ್ವದಲ್ಲಿ ಅಡಗುವ ಭೇದವ ಆರಿಗೂ ಅರಿಯಬಾರದೆಂಬುದೀಗ ಕುಲವ ಹೊರಗಿಟ್ಟು ಹೊರಗಾದ ಭೇದವನಾರು ಬಲ್ಲರು ಎಂಬ ಶಬ್ದಕ್ಕರ್ಥ. ಇಂತೀ ತನುತ್ರಯ ಸಂಬಂಧವಾದ ಜೀವನು ಮನಸ್ಸು ಪರಮಾತ್ಮನೆಂಬ ತ್ರಿವಿಧವು ಶ್ರೀಗುರು ಕಾರುಣ್ಯದಿಂ ಇಷ್ಟ ಪ್ರಾಣ ಭಾವವೆಂಬ ತ್ರಿತತ್ವದಲ್ಲಿ ಒಡಗೂಡಿ ಸಮರಸವನೆಯ್ದಿ ನಿರ್ವಯಲಾಯಿತ್ತೆಂಬುದೀಗ ಇಂತೀ ಸ್ಥೂಲ ಸೂಕ್ಷ್ಮ ಕಾರಣತ್ರಯ ಕೂಡಿ ತತ್ವದಲ್ಲಿ ನಿಂದು ಬಚ್ಚಬಯಲಾಯಿತ್ತು ಸದಾಶಿವಮೂರ್ತಿ ಲಿಂಗದಲ್ಲಿ ಎಂಬ ಶಬ್ದಕ್ಕರ್ಥ.

೬೩. ಹೊಲದೊಳಗಣ ಹುಲ್ಲೆ ಗವಿಯೊಳಗಣ ಹುಲಿ ಕೊಂಬಿನ ಮೇಲಣ ಕೋಡಗ ಅಂಬರದಲಾಡುವ ಹಾವು ನಾಲ್ಕರ ಅತಿ ಮಥನವ ಬಿಟ್ಟು ಒಂದೇ ಗೂಡಿನಲ್ಲಿ ಅಡಗಿದವು. ಆ ಚತುಷ್ಟಯದ ಲಿಂಗಭೇದವನರಿತಲ್ಲಿ ಸದಾಶಿವ ಮೂರ್ತಿಲಿಂಗವು ತಾನೆ.

ಟೀಕು :– ದೇಹವೆಂಬ ಕ್ಷೇತ್ರವನಾಶ್ರಯಿಸಿಕೊಂಡಿರ್ಪ ಜೀವನೆಂಬುದೀಗ ಹೊಲದೊಳಗಣ ಹುಲ್ಲೆ ಎಂಬ ಶಬ್ದಕ್ಕರ್ಥ. ಸೂಕ್ಷ್ಮಾಂತರಂಗದಲ್ಲಡಗಿರ್ಪ ಕಾಲವ್ಯಾಘ್ರನೆಂಬುದೀಗ ಗವಿಯೊಳಗಣ ಹುಲಿ ಎಂಬ ಶಬ್ದಕ್ಕರ್ಥ. ಇಂದ್ರಿಯಂಗಳೆಂಬ ಶಾಖೆಗಳಲ್ಲಿಹ ಮನೋಮರ್ಕಟನೆಂಬುದೀಗ ಕೊಂಬಿನ ಮೇಲಣ ಕೋಡಗವೆಂಬ ಶಬ್ದಕ್ಕರ್ಥ. ಆತ್ಮಾಕಾಶ ಮಧ್ಯದಲ್ಲಿರ್ಪ ಊರ್ಧ್ವಕುಂಡಲಿ ಸ್ವರೂಪವಾದ ಸತ್ಪ್ರಾಣಮಜ್ಞಾನವೆಂಬುದೀಗ ಅಂಬರದಲಾಡುವ ಎಂಬ ಶಬ್ದಕ್ಕರ್ಥ. ಇಂತಪ್ಪ ಪಿಂಡ ಮಧ್ಯದಲ್ಲಿ ಶಿವಕೃಪೆಯಿಂ ಪರಿಪೂರ್ಣ ಜ್ಞಾನ ಪ್ರಭಾವಿಸಲು ಈ ಚತುರ್ವಿಧ ದುರ್ವರ್ತನೆಗಳಳಿದ ಶರಣನ ಜ್ಞಾನ ಕಾಯದಲ್ಲಿ ತರಹರವ ನೆಯ್ದಿಹವೆಂಬುದೀಗ ನಾಲ್ಕರ ಅತಿ ಮಥನವ ಬಿಟ್ಟು ಒಂದೇ ಗೂಡಿನಲ್ಲಿ ಅಡಗಿದವು ಎಂಬ ಶಬ್ದಕ್ಕರ್ಥ. ಜೀವಭಾವವಳಿದ ಸಜ್ಜೀವನು ಇಷ್ಟಲಿಂಗಕ್ಕೆ ಚಿದಂಗ ಸ್ವರೂಪನಾಗಿ ಕಾಲವ್ಯಾಘ್ರನಳಿದು ಲಿಂಗದಲ್ಲಿ ಅನಿಮಿಷ ನಿರೀಕ್ಷಣೆಯಾಗಲು ಮನವಳಿದು ಉನ್ಮನಿ ತತ್ವ ಸ್ವರೂಪವಾಗಲು ಆ ಸತ್ಪ್ರಾಣಮಜ್ಞಾನವು ಶರಣನ ಸರ್ವಾಂಗದಲ್ಲಿ ಪರಿಪೂರ್ಣವಾಗಿ ವೇಧಿಸಲು ಈ ಚತುರ್ವಿಧ ಸಂಬಂಧವನರಿದ ಶರಣನೇ ಸಾಕ್ಷಾತ್ ಪರವಸ್ತುವೆಂಬುದೀಗ ಆ ಚತುಷ್ಟಯದ ಅಂಗಭೇದವನರಿತಲ್ಲಿ ಸದಾಶಿವಮೂರ್ತಿಲಿಂಗವು ತಾನೇ ಎಂಬ ಶಬ್ದಕ್ಕರ್ಥ.

೬೪. ಕಾಮನ ಅಂಬಿನ ಗಣಿಯಲ್ಲಿ ಮೂವರು ಬಾಲೆಯರು ಹುಟ್ಟಿದ ವಿವರ. ಹಿಲಿಕಿನಲ್ಲಿ ತಾಯಿ ಹುಟ್ಟಿದಳು. ಮಧ್ಯದಲ್ಲಿ ಮಗಳು ಹುಟ್ಟಿದಳು. ಮೊನೆಯಲ್ಲಿ ಮೊಮ್ಮಗಳು ಹುಟ್ಟಿ ಹೆತ್ತಯ ತಿಂದು ತಾಯಿಗೆಯೊಸರೆತ್ತುತ್ತೈದಾಳೆ. ಆವಳ ಕೊಲುವ ಧೀರರಿನ್ನಾರನು ಕಾಣೆ. ಎನಗೆ ಗಂಡ ಎಮ್ಮವ್ವೆಯ ಮಗನೆಂದು ಸಂದಣಿ ಗೊಳುತ್ತವಳ ನಾವೆಲ್ಲರೂ ಕೇಳುವ ಬನ್ನಿ ಸದಾಶಿವಮೂರ್ತಿಲಿಂಗವ.

ಟೀಕು: — ತನ್ನ ನಿಜವಪ್ಪ ಪರಬ್ರಹ್ಮವ ಕಾಮಿಸುತ್ತಿರ್ದ ಸಕಲ ತತ್ವ ಸನ್ನಿಹಿತವಾದ ಶ್ರೀಗುರು ಮೂರ್ತಿ ಎಂಬುದೀಗ ಕಾಮನೆಂಬ ಶಬ್ದಕ್ಕರ್ಥ. ಆ ಗುರು ತತ್ವದಲ್ಲಿ ಸನ್ನಿಹಿತವಾಗಿರ್ಪ ಸುಜ್ಞಾನವೆಂಬುದೀಗ ಕಾಮನ ನಂಬಿ ಎಂಬ ಶಬ್ದಕ್ಕರ್ಥ. ಆ ಸುಜ್ಞಾನವನೊಳಕೊಂಡಿರ್ಪ ಶಿವಭಾವವೆಂಬುದೀಗ ಗಣಿಯಲ್ಲಿ ಎಂಬ ಶಬ್ದಕ್ಕರ್ಥ. ಆ ಸುಜ್ಞಾನ ಸನ್ನಿಹಿತವಾದ ಶಿವಭಾವದಲ್ಲಿ ಇಚ್ಛೆ ಜ್ಞಾನ ಕ್ರಿಯೆಂಬ ತ್ರಿಶಕ್ತಿಗಳು ಉದಿಸಿದ ಭೇದವೆಂಬುದೀಗ ಮೂವರು ಬಾಲೆಯರು ಹುಟ್ಟಿದ ವಿವರವೆಂಬ ಶಬ್ದಕ್ಕರ್ಥ. ಆ ಶಿವಭಾವದ ಮೊನೆಯಲ್ಲಿ ಇಚ್ಛಾಶಕ್ತಿ ಉದಿಸಿದಳೆಂಬುದೀಗ ಹಿಲಿಕಿನಲ್ಲಿ ತಾಯಿ ಹುಟ್ಟಿದಳೆಂಬ ಶಬ್ದಕ್ಕರ್ಥ. ಆ ಶಿವಭಾವದ ನಡುವೆ ಜ್ಞಾನಶಕ್ತಿ ಉದಿಸಿದಳೆಂಬುದೀಗ ಮಧ್ಯದಲ್ಲಿ ಮಗಳು ಹುಟ್ಟಿದಳೆಂಬ ಶಬ್ದಕ್ಕರ್ಥ. ಆ ಶಿವಭಾವದಗ್ರದಲ್ಲಿ ಕ್ರಿಯಾಶಕ್ತಿ ಉದಿಸಿದಳೆಂಬುದೀಗ ಮೊನೆಯಲ್ಲಿ ಮೊಮ್ಮಗಳು ಹುಟ್ಟಿ ಎಂಬ ಶಬ್ದಕ್ಕರ್ಥ. ತನಗೆ ಮಾತೃಸ್ಥಾನವಾದ ಜ್ಞಾನಶಕ್ತಿಗೆ ತಾಯಾದ ಇಚ್ಛಾಶಕ್ತಿಯನವಗ್ರಹಿಸಿದಳೆಂಬುದೀಗ ಹೆತ್ತಯ ತಿಂದು ಎಂಬ ಶಬ್ದಕ್ಕರ್ಥ. ತನಗೆ ಮಾತೃಸ್ಥಾನವಾದ ಜ್ಞಾನಶಕ್ತಿಯನವಗ್ರಹಿಸಬೇಕೆಂಬ ಬಯಕೆಯಲ್ಲಿರುತಿದ್ದಳೆಂಬುದೀಗ ತಾಯಿಗೆ ಯೊಸರೆತ್ತುತ್ತೈದಾಳೆ ಎಂಬ ಶಬ್ದಕ್ಕರ್ಥ. ಅಂತಪ್ಪ ಕ್ರಿಯಾಶಕ್ತಿಯನು ತಮ್ಮಲ್ಲಿ ಅವಗ್ರಹಿಸಿಕೊಂಬ ಜ್ಞಾನಿಗಳಪೂರ್ವವೆಂಬುದೀಗ ಅವಳ ಕೊಲುವ ಧೀರರಿನ್ನಾರನೂ ಕಾಣೆನೆಂಬ ಶಬ್ದಕ್ಕರ್ಥ. ಆ ಜ್ಞಾನಶಕ್ತಿಯಿಂದುದಯಿಸಿದ ಇಷ್ಟಲಿಂಗವು ಆ ಕ್ರಿಯಾಶಕ್ತಿಗೆ ಪುರುಷನಾದನೆಂಬುದೀಗ ಎನಗೆ ಗಂಡ ಎಮ್ಮವ್ವೆಯ ಮಗನೆಂದು ಎಂಬ ಶಬ್ದಕ್ಕರ್ಥ. ಆ ಕ್ರಿಯಾಶಕ್ತಿಯು ಲಿಂಗಾಂಗ ರಮರಸಾನಂದ ಸುಖವ ಕಂಡು ಪರಮ ಹರುಷದೊಳಿರ್ಪಳೆಂಬುದೀಗ ಸಂದಣಿಗೊಳುತ್ತವಳ ನಾವೆಲ್ಲರು ಕೇಳುವ ಬನ್ನಿ ಸದಾಶಿವಮೂರ್ತಿಲಿಂಗವ ಎಂಬ ಶಬ್ದಕ್ಕರ್ಥ.

## ಶಿವಯೋಗ

೭೫. ಮಹಾ ಮನೆಯೊಳಗೊಂದು ಮಂದಿರವಾಡ, ಅದರೊಳಗೆ ಹದಿನಾಲ್ಕು ಕೋಣೆ, ಒಂಬತ್ತು ಬಾಗಿಲ ಮುಚ್ಚಿ ಒಂದು ಬಾಗಿಲು ತೆರೆದಿಹುದು. ತೆರೆದ ಬಾಗಿಲಲ್ಲಿ ಮೂರು ಮುಖದ ಸರ್ಪ ಊರ್ಧ್ವ ಮುಖವಾಗಿ ತಿರುಗಾಡುತ್ತಿಹುದು. ಮಿಕ್ಕ ಆರು ಬಾಗಿಲಿನಲ್ಲಿ ಮೂರು ಬಾಗಿಲು ಕೀಳಾಗಿ ಕೀಳಿನೊಳಗೆ ಅಧೋಮುಖ ಸರ್ಪವು ಉಡುಗಿಹುದು. ಮೇಲಣ ಮೂರು ಬಾಗಿಲ ಊರ್ಧ್ವದ ತ್ರಿಗುಣದ ಸರ್ಪ ಮೊದಲು ತಲೆಕಡೆಯಾಗಿ ಎದ್ದು ನಿಂದಾಡುತ್ತಿರಲಾಗಿ ವಿಶ್ವನೆಂಬ ಆಕಾಶದ ಹದ್ದು ಹೋಯಿತ್ತು. ಅವರೊಳಗೆ ಎರಡು ತಲೆಯ ಮರೆದು ಒಂದು ತಲೆ ಎಚ್ಚತ್ತು ಹದ್ದಿನ ಕೊಕ್ಕು ತಪ್ಪಿ ಕಾಲುಗುರ ಹೆಜ್ಜೆಯು ಗಾಯುವ ತಪ್ಪಿ ಗರಿಯು ಅಡುಹವ ತೊಲಗಿಸಿ ಹಿಡಿಯಿತ್ತು. ಆಡಿ ಹೊಟ್ಟೆಯು ನೋಡಿ ಏರಿತ್ತು ವಿಷ. ಹದ್ದಿನ ಅಸುವ ಬಿಡಿಸಿತ್ತು. ಹದ್ದು ಹಾವು ಕೂಡಿ ಘಟಕರ್ಮಕ್ಕೊಳಗಾಯಿತ್ತು. ಕರ್ಮದೊಳಗಾದ ಸದಾಶಿವಮೂರ್ತಿಲಿಂಗವ ಮುಟ್ಟಿದುದಿಲ್ಲ.

ಟೀಕು :—ಸಕಲ ತತ್ವಂಗಳಿಗಾಶ್ರಯುವಪ್ಪ ಸ್ಥೂಲತನು ಮಧ್ಯಸ್ಥವಾದ ಸೂಕ್ಷ್ಮಾಂತರಂಗವೇ ಜೀವಂಗೆ ಆಶ್ರಯುವಾಗಿರ್ಪುದೆಂಬುದೀಗ ಮಹಾಮನೆಯೊಳಗೊಂದು ಮಂದಿರವಾಡ ಎಂಬ ಶಬ್ದಕ್ಕರ್ಥ. ಅಲ್ಲಿ ಬಾಹ್ಯ ಬಾಹ್ಯಾಭ್ಯಂತರದ ಷೋಡಶಮದಂಗಳೇ ಕೋಣೆಗಳಾಗಿಹವೆಂಬುದೀಗ ಅದರೊಳಗೆ ಹದಿನಾರು ಕೋಣೆ ಎಂಬ ಶಬ್ದಕ್ಕರ್ಥ. ಆ ದೇಹ ಸಂಬಂಧವಾದ ನವದ್ವಾರಂಗಳ ಮಾಯಾತಮಂಧ ಮುಸುಕಿಕೊಂಡಿಹುದೆಂಬುದೀಗ ಒಂಬತ್ತು ಬಾಗಿಲ ಮುಚ್ಚಿ ಎಂಬ ಶಬ್ದಕ್ಕರ್ಥ. ನವ ದ್ವಾರಂಗಳಿಗೆ ಮುಖ್ಯವಾದ ಸುಷುಮ್ನದ್ವಾರ ಪ್ರಾಣವಾಯುವಿನ ಮಸ್ಸಂಚಲ ಪ್ರವರ್ತನಕ್ಕೆ ತೆರಪಾಗಿಹುದೆಂಬುದೀಗ ಒಂದು ಬಾಗಿಲು ತೆರೆದಿಹುದೆಂಬ ಶಬ್ದಕ್ಕರ್ಥ. ಆ ದ್ವಾರದಲ್ಲಿ ಪ್ರಕೃತಿಯೇ ಮುಖ್ಯವಾಗಿರ್ಪ ಪ್ರಜ್ಞಾನಿವೃತ್ತಿ ಜ್ಞಾನದಿಂ ಹಂಸಗತಿಗಳಿಂ ಚರಿಸುತ್ತಿರ್ದನೆಂಬುದೀಗ ತೆರೆದ ಬಾಗಿಲಲ್ಲಿ ಮೂರು ಮುಖದ ಸರ್ಪ ಉರ್ಧ್ವಮುಖವಾಗಿ ತಿರುಗಾಡುತ್ತಿಹುದೆಂಬ ಶಬ್ದಕ್ಕರ್ಥ. ನವದ್ವಾರಯುಕ್ತವಾದ ಷಡ್ದ್ವಾರಂಗಳಲ್ಲಿ ಎಂಬುದೀಗ ಮಿಕ್ಕಾರು ಬಾಗಿಲನಲ್ಲಿ ಎಂಬ ಶಬ್ದ

ಕ್ಕರ್ಥ. ಅದರೊಳಗೆ ವಾಯು ಗುಹ್ಯ ಜಿಹ್ವೇಂದ್ರಿಯವೇ ಪ್ರಕೃತಿ ಸ್ವರೂಪವಾದ ದೇಹಸಂಬಂಧವಾಗಿಹವು. ಅಲ್ಲಿ ಅಜ್ಞಾನಮುಖವಾಗಿರ್ಪ ವಿಶ್ವನು ಹುದುಗಿಹನೆಂಬುದೀಗ ಮೂರು ಬಾಗಿಲು ಕೀಳಾಗಿ ಕೀಳಿನೊಳಗಧೋಮುಖ ಉಡುಗಿಹುದೆಂಬ ಶಬ್ದಕ್ಕರ್ಥ. ಮನೋವೃತ್ತಿಯನುಳ್ಳ ಘ್ರಾಣ ನೇತ್ರ ಶ್ರೋತ್ರಂಗಳಲ್ಲಿ ವೃತ್ತಿಜ್ಞಾನದಿಂ ಗುಣತ್ರಯಸ್ವರೂಪವಾದ ತೈಜಸಂಗೆ ಜ್ಞಾನಾಜ್ಞಾನಂಗಳೇ ತಲೆವಾಗಿಲವಾದ ಕಾರಣ ಒಂದರೊಳಗೊಂದು ಕೂಡಿ ಪ್ರಪಂಚ ಕ್ರೀಡೆಯಲ್ಲಿಹನೆಂಬುದೀಗ ಮೇಲಣ ಮೂರು ಬಾಗಿಲು ಉರ್ಧ್ವ ತ್ರಿಗುಣದ ಬಾಲ ಮೊದಲು ತಲೆ ಕಡೆಯಾಗಿ ಎದ್ದು ನಿಂದಾಡುತ್ತಿರಲಾಗಿ ಎಂಬ ಶಬ್ದಕ್ಕರ್ಥ. "ಆತ್ಮಾಕಾಶಮಯಂ ತಾವತ್" ಎಂಬ ಶೃತಿ ಪ್ರಮಾಣದಿಂ ಆಕಾಶದಲ್ಲಿ ಸ್ವಲೀಲಾಪರನಾಗಿರ್ಪ ಪರಮಹಂಸನು ಯೋಗಕ್ರಮಾನುಸಂಧಾನಂಗಳಿಂ ಶಂಕಾವಿಷವನುಟ್ಟ ಜೀವತ್ರಯಂಗಳನವಗ್ರಹಿಸಿ ಚಿದಾಕಾಶದತ್ತಭಿಮುಖವಾಗಲೆಂಬುದೀಗ ವಿಶ್ವಮಯವೆಂಬ ಆಕಾಶದ ಹದ್ದು ಹೋಯಿತ್ತೆಂಬ ಶಬ್ದಕ್ಕರ್ಥ. ಸ್ವಪ್ನಾವಸ್ಥೆಯನುಳ್ಳ ತೈಜಸನು ಸುಷುಪ್ತಾವಸ್ಥೆಯನುಳ್ಳ ಪ್ರಾಜ್ಞನು ಭಿನ್ನ ಜ್ಞಾನದಲ್ಲಿ ಮೂರ್ಛಿತನಾದನೆಂಬುದೀಗ ಅದರೊಳಗೆರಡು ತಲೆ ಮರೆದು ಎಂಬ ಶಬ್ದಕ್ಕರ್ಥ. ವಿಶ್ವನು ಜಾಗ್ರಾವಸ್ಥೆಯಿಂದೆಚ್ಚತ್ತು ಆ ಪರಮಾತ್ಮನ ಭಾವಮಂ ತಪ್ಪಿಸಿ ಕ್ರಿಯಾಚಾರ ಜ್ಞಾನಾಸುಗ್ರಹಕ್ಕೆ ಒಳಗಲ್ಲದೆ ಯೋಗಾನುಸಂಧಾನಕ್ಕೆ ವಿಲಕ್ಷಣವಾಗಿ ಆ ಪರಮಾತ್ಮನ ಜ್ಞಾನವ ಗ್ರಹಿಸಿತ್ತೆಂಬುದೀಗ ಒಂದು ತಲೆ ಎಚ್ಚತ್ತು ಹದ್ದಿನ ಕೊಕ್ಕು ತಪ್ಪಿ ಕಾಲುಗುರ ಹೆಜ್ಜೆಯ ಘಾಯುವ ತಪ್ಪಿ ಗರಿಯ ಅಡುಹ ತೊಲಗಿಸಿ ಹಿಡಿಯಿತ್ತು, ಆಡಿ ಹೊಟ್ಟೆಯ ನೋಡಿ ಎಂಬ ಶಬ್ದಕ್ಕರ್ಥ. ಆ ಜೀವನ ಶಂಕಾವಿಷಭಿನ್ನಜ್ಞಾನವ ಪ್ರವೇಶಿಸಲು ಆ ಪರಮಾತ್ಮಂಗೆ ಚೈತನ್ಯ ಸ್ವರೂಪವಾದ ಲಿಂಗ ತೊಲಗಿತ್ತೆಂಬುದೀಗ ಏರಿತ್ತು ವಿಷ ಹದ್ದಿನ ಅಸುವ ಬಿಡಿಸಿತ್ತೆಂಬ ಶಬ್ದಕ್ಕರ್ಥ. ಆ ಜೀವ ಪರಮರು ದೇಹಪ್ರಪಂಚಕ್ಕೊಳಗಾಗಲು ಆ ಪ್ರಪಂಚು ಜ್ಞಾನ ಲಿಂಗವ ಮುಟ್ಟಿದುದಿಲ್ಲವೆಂಬುದೀಗ ಹದ್ದು ಹಾವು ಕೂಡಿ ಘಟಕರ್ಮಕ್ಕೆ ಒಳಗಾಯಿತ್ತು. ಕರ್ಮದೊಳಗಾದ ಜ್ಞಾನ ಸದಾಶಿವಮೂರ್ತಿಲಿಂಗವ ಮುಟ್ಟಿದುದಿಲ್ಲ ಎಂಬ ಶಬ್ದಕ್ಕರ್ಥ.

೬೬. ಶರೀರದಲ್ಲಿ ಷಡಾಧಾರ ಚಕ್ರ ಉಂಟೆಂಬರು. ಆಧಾರ ಒಂದಾದುದನರಿಯದೆ ಆರುಂಟೆಂದು ಬೇರೆ ಕಲ್ಪಿಸಬಹುದೇ? ಅವಕ್ಕೆ

ದೃಷ್ಟ. ಹುತ್ತದ ಬಾಯಿ ಹಲವಾದಡೆ ಒಡಲೊಂದೇ. ಘಟ ಭೇದವಾದಡೆ ನಾನೆಂಬುದನರಿತಲ್ಲಿ ಷಡಾಧಾರ ನಿಂದಿತ್ತು. ಅದು ತನ್ನಯ ಚಿತ್ತದ ಭೇದವಲ್ಲದೆ ವಸ್ತುವನರಿವ ಭೇದವಲ್ಲ ಹಲವು ಓವರಿಯಲ್ಲಿ ತಿಳಿದು ನೋಡುವನೊಬ್ಬನೇ ಮನೆಯೊಡೆಯ. ಆ ಹೊಲಬನರಿತಲ್ಲಿಯೇ ನಿಂದಿತ್ತು ಸದಾಶಿವಮೂರ್ತಿ ಲಿಂಗದಂಗ.

೬೭. ನಿರಾಳದಲ್ಲಿ ನೀರ ಕೋಟೆಯನಿಕ್ಕಿ ಬಯಲ ಅಗಳ ತೆಗೆದು ವಾಯುವ ತೆನೆಯ ಮಾಡಿ ಅಸುರಾಜನೆಂಬರಸು ಆ ಪಟ್ಟಣಕ್ಕೊಡೆಯನಾಗಿ ಸೋಮ ಸೂರ್ಯರ ವೀಧಿಗಳಲ್ಲಿ ಪಶ್ಚಿಮ ಕೇರಿಯ ಹೊಕ್ಕು ದಕ್ಷಿಣದಲ್ಲಿ ನಿಂದು ಪೂರ್ವದಲ್ಲಿ ಪರಸ್ಥಾನವ ಮಾಡಿ ಉತ್ತರ ಮಧ್ಯದಲ್ಲಿ ಸಿಂಹಾಸನಂಗೈಯ್ದು ಸಕಲೇಂದ್ರಿಯ ನಾನಾ ವಿಷಯಪರಿವಾರದಲ್ಲಿ ಅರಿಗಳಿಗೆ ವಶವಲ್ಲದೆ ಸುಖಮಯವಾಗಿರ್ದ ಸದಾಶಿವ ಮೂರ್ತಿಲಿಂಗವು ನಿರಾಳವಾಯಿತ್ತು.

ಟೀಕು:—ಪರಿಪೂರ್ಣವಾದ ಪರಬ್ರಹ್ಮವನು ಸರ್ವಾಂಗದಲ್ಲಿ ಸಾಹಿತ್ಯವ ಮಾಡಿಕೊಂಡ ಶರಣನು ಸದ್ವಿವೇಕ ಸ್ವರೂಪವಾದ ಪರಮಾನಂದ ಜಲವ ಆ ನಿರಾಳ ಪರಬ್ರಹ್ಮದಲ್ಲಿ ಏಕೀಕರಿಸಿದನೆಂಬುದೀಗ ನಿರಾಳದಲ್ಲಿ ನೀರ ಕೋಟೆಯ ನಿಕ್ಕಿ ಎಂಬ ಶಬ್ದಕ್ಕರ್ಥ. ಆ ಪರಮ ಶಾಂತಿಯ ಜಲವ ಲಿಂಗದಲ್ಲಿ ಏಕೀಕರಿಸಿದ ಶರಣನು ನಿರಾಕಾರವಪ್ಪ ಮಹಾಜ್ಞಾನ ಚಿತ್ತನು ಅಗಳಾಗಿ ಸಂಬಂಧಿಸಿದನೆಂಬುದೀಗ ಬಯಲ ಅಗಳ ತೆಗೆದು ಎಂಬ ಶಬ್ದಕ್ಕರ್ಥ. ಆ ಮಹಾಜ್ಞಾನ ಚಿತ್ತನಿನ ಅವಿರಳ ಸಂಬಂಧವ ಮಾಡಿದ ಶರಣನು ಚೈತನ್ಯ ಸ್ವರೂಪವಾದ ಪ್ರಣಮವನೇ ತೆನೆಯಾಗಿ ಸಂಬಂಧಿಸಿದನೆಂಬುದೀಗ ವಾಯುವ ತೆನೆಯ ಮಾಡಿ ಎಂಬ ಶಬ್ದಕ್ಕರ್ಥ. ಆ ಪ್ರಣಮ ಸಂಬಂಧವಾದಲ್ಲಿ ಜೀವಂಗೆ ಚೈತನ್ಯ ಸ್ವರೂಪವಾದ ಮಹಾಘನ ಲಿಂಗವೆಂಬರಸು ಶರಣನ ಶಿವಕ್ಷೇತ್ರವೆಂಬ ಶಿವಪುರಕ್ಕೆ ಕರ್ತನಾಗಿಹನೆಂಬುದೀಗ ಅಸುರಾಜನೆಂಬರಸನು ಆ ಪಟ್ಟಣಕ್ಕೆ ಒಡೆಯನಾಗಿ ಎಂಬ ಶಬ್ದಕ್ಕರ್ಥ. ಆ ಮಹಾಘನಲಿಂಗದಲ್ಲಿ ಸಮರಸಭಾವವ ಘಟಿಸಿದ ಶರಣನು ಈಡಾಪಿಂಗಳ ಮಾರ್ಗದಲ್ಲಿ ಪ್ರಣಮ ಪಂಚಾಕ್ಷರಿಯ ಸಂಬಂಧವ ಮಾಡಿಕೊಂಡು ಆ ಮಂತ್ರ ಸಂಸ್ಕಾರ ವಿಡಿದು ಪಶ್ಚಿಮದ್ವಾರವೆನಿಸುವ ಸುಷುಮ್ನೆಯಲ್ಲಿ ಶಿವಯೋಗ ಮಾರ್ಗದ ಬಳಿವಿಡಿದು ಕೇವಲವಾದ ನಿಷ್ಕಲ ಪರಬ್ರಹ್ಮದತ್ತಲೆಯ್ದುತ್ತಿರ್ದನೆಂಬುದೀಗ

ಸೋಮಸೂರ್ಯರವೀಧಿಗಳಲ್ಲಿ ಪಶ್ಚಿಮ ಕೇರಿಯ ಹೊಕ್ಕು ಎಂಬ ಶಬ್ದಕ್ಕರ್ಥ. ಆ ನಿರಾಕಾರವಾದ ಪರಬ್ರಹ್ಮದಲ್ಲಿ ಸಮರಸಭಾವಿಯಾಗಿರ್ಪ ಶರಣನು ಶ್ರೀಗುರು ಕಾರುಣ್ಯದಿಂ ಸಂಬಂಧವಾದ ಇಷ್ಟಲಿಂಗವಲ್ಲಿ ಸತ್ಕ್ರಿಯಾಜ್ಞಾನವಿಡಿದಾಚರಿಸುತ್ತಿರ್ದನೆಂಬುದೀಗ ದಕ್ಷಿಣದಲ್ಲಿ ನಿಂದು ಎಂಬ ಶಬ್ದಕ್ಕರ್ಥ. ಆ ಶರಣನು ಇಷ್ಟಲಿಂಗದ ಸಂಬಂಧವಾಗಿರ್ಪ ಪರಮ ಚಿತ್ಕಳೆಯನು ತನ್ನ ಸುಜ್ಞಾನ ಮುಖಕ್ಕೆ ತಂದು ಅಂತರಂಗದಲ್ಲಿ ಪ್ರಾಣಲಿಂಗ ಸ್ವರೂಪಿನಿಂ ಸಾಹಿತ್ಯವ ಮಾಡಿದನೆಂಬುದೀಗ ಪೂರ್ವದಲ್ಲಿ ಪರಮಸ್ಥಾನವ ಮಾಡಿ ಎಂಬ ಶಬ್ದಕ್ಕರ್ಥ. ಆ ಪ್ರಾಣಲಿಂಗದಲ್ಲಿ ಅವಿರಳ ಸಂಬಂಧಿಯಾದ ಶರಣನು ಕಾರಣಾಂಗದರುವಿನ ಮಧ್ಯದಲ್ಲಿ ಭಾವಲಿಂಗವ ಮೂರ್ತಿಗೊಳಿಸಿದನೆಂಬುದೀಗ ಉತ್ತರದ ಮಧ್ಯದಲ್ಲಿ ಸಿಂಹಾಸನಂಗೈದು ಎಂಬ ಶಬ್ದಕ್ಕರ್ಥ. ಅಂತು ತ್ರಿವಿಧಾಂಗದಲ್ಲಿ ತ್ರಿವಿಧಲಿಂಗ ಘಟಿಸಿರ್ಪ ಶರಣನ ಸರ್ವೇಂದ್ರಿಯಗಳೆಲ್ಲಾ ಲಿಂಗೇಂದ್ರಿಯಸ್ವರೂಪವಾಗಿ ನಿಷ್ಪತ್ತಿಯನೆಯ್ದಿದಲ್ಲಿ ಕರ್ಮೇಂದ್ರಿಯಗಳ ವ್ಯವಹಾರವಿಲ್ಲದೆ ಹೋಯಿತ್ತು ಶರಣಂಗೆಂಬುದೀಗ ಸಕಲೇಂದ್ರಿಯ ನಾನಾ ವಿಷಯ ಪರಿವಾರದಲ್ಲಿ ಆರಿಗಳಿಗೆ ವಶವಲ್ಲದೆ ಸುಖಮಯವಾಗಿರ್ದ ಸದಾಶಿವಮೂರ್ತಿಲಿಂಗವು ನಿರಾಳವಾಯಿತ್ತು ಎಂಬ ಶಬ್ದಕ್ಕರ್ಥ.

೬೮ ಊರಬಾಗಿಲ ಕಂಭದಲ್ಲಿ ಮೂರು ಮುಖದ ಕೋಡಗ ಬಂದವನಿವನೆಂದು ನೋಡುತ್ತ ಮತ್ತೊಂದು ಮುಖದಿಂದ ಓಡಿಸುತ್ತ ಮತ್ತೊಂದು ಮುಖ ಹಿಂದೆ ಹೊಂದಿದವನ ನೆನೆವುತ್ತ ಇಂತೀ ಮೂರು ಚಂದ ಜಾಗ್ರದ ವ್ಯವಹಾರವು ಹಿಂದಣ ಅಧೋ ಮುಖಕ್ಕೆ ನಡುವಣ ಅಭಿಮುಖಕ್ಕೆ ಕಡೆಯಣ ಊರ್ಧ್ವ ಮುಖಕ್ಕೆ ಕುಂಡಲಿಯ ಹಾವೆದ್ದು ಕೋಡಗವನೊಂದೇ ಬಾರಿ ನುಂಗಿತ್ತು. ಸದಾಶಿವಮೂರ್ತಿಲಿಂಗವನರಿತಲ್ಲಿ.

ಟೀಕು:- ಪಂಚ ಭೌತಿಕ ಗ್ರಾಮವೆಂಬುದೀಗ ಊರೆಂಬ ಶಬ್ದಕ್ಕರ್ಥ. ಅಂತಪ್ಪ ದೇಹವಿಡಿದು ನಡೆವ ಸಂಸಾರಮಾರ್ಗ ಒಂದೇ ಎಂಬುದೀಗ ಊರ ಬಾಗಿಲಲ್ಲಿ ಎಂಬ ಶಬ್ದಕ್ಕರ್ಥ. ಅಂತಪ್ಪ ಬಾಗಿಲಲ್ಲಿ ದುರ್ಭಾವಸ್ತಂಭಸಿರುತ್ತಿಹುದೆಂಬುದೀಗ ಕಂಬದಲ್ಲಿ ಎಂಬ ಶಬ್ದಕ್ಕರ್ಥ. ಜಾಗ್ರತ್ ಸ್ವಪ್ನ ಸುಷುಪ್ತಿ ಆ ಮನಕ್ಕೆ ಮುಖವಾಗಿಹವೆಂಬುದೀಗ ಮೂರು ಮುಖದ ಕೋಡಗವೆಂಬ ಶಬ್ದಕ್ಕರ್ಥ. ಆ ಮನಸ್ಸು ರಜೋಗುಣ ಸಂಬಂಧವಾದ ಸ್ಥೂಲ ತನುವಿನ ವರ್ತನೆಯಲ್ಲಿಯು ವಿಶ್ವನು ಸಂಸಾರ ವಿಷಯ ಸುಖ

ವನನುಭವಿಸಿ ಬರುತ್ತಿರ್ದನೆಂದು ಹಾಸ್ಯೋಪಮಾ ನವಮಾಡುತ್ತಿಹು
ದೆಂಬುದೀಗ ಬಂದವನಿವನೆಂದು ನೋಡುತ್ತಾ ಎಂಬ ಶಬ್ದಕ್ಕರ್ಥ.
ಮತ್ತೊಂದು ಮುಖವೆಂದೊಡೆ ಸ್ವಪ್ನಾವಸ್ಥೆಯಲ್ಲಿಹ ಮನಸ್ಸು ಸೂಕ್ಷ್ಮ
ತನುವಿನ ಇಂದ್ರಿಯಾದಿ ವಿಷಯ ಸುಖವನನುಭವಿಸುತ್ತಿರ್ದನೆಂದು ಆ
ತೇಜಸ್ಸನೆ ಹಾಸ್ಯಕವ ಮಾಡುತ್ತಿಹ.ದೆಂಬುದೀಗ ಮತ್ತೊಂದು ಮುಖ
ದಿಂದವನ ಓಡಿಸುತ್ತ ಎಂಬ ಶಬ್ದಕ್ಕರ್ಥ. ಮತ್ತೊಂದು ಎಂದೊಡೆ
ಸುಷುಪ್ತಾವಸ್ಥೆಯಲ್ಲಿಯ ಮನಸ್ಸು ತಮೋಗುಣ ಸಂಬಂಧವಾದ ಕಾರಣ
ತನುವಿನ ಮರೆಯಲ್ಲಿಯ ಪ್ರಜ್ಞಾನ ಹಾಸ್ಯೋಪಮಾನವ ಮಾಡಿತ್ತೆಂಬು
ದೀಗ ಮತ್ತೊಂದು ಮುಖ ಹಿಂದೆ ಹೊಂದಿದವನ ನೆನವುತ್ತ ಎಂಬ ಶಬ್ದ
ಕ್ಕರ್ಥ. ಇಂತಪ್ಪ ತ್ರಿವಿಧಾವಸ್ಥೆಯೊಳಗೆ ಜೀವತ್ರಯಂಗಳು ಸಿಲ್ಕಿದವೆಂಬು
ದೀಗ ಇಂತೀ ಮೂರು ಚಂದ ಜಾಗ್ರತ್ ವ್ಯವಹಾರವು ಹಿಂದಣ ಅಧೋ
ಮುಖವೆಂಬ ಶಬ್ದಕ್ಕರ್ಥ. ಸೂಕ್ಷ್ಮ ತನುವಿನ ಇಂದ್ರಿಯಂಗಳ ಸುಖ
ಕ್ಕೆಂಬುದೀಗ ನಡುವಣ ಅಭಿಮುಖಕ್ಕೆ ಎಂಬ ಶಬ್ದಕ್ಕರ್ಥ. ತಮೋ
ಗುಣ ಸಂಬಂಧವಾದ ಕಾರಣ ತನುವಿನ ಮರವೆಯ ಸುಖವೆಂಬುದೀಗ
ಕಡೆಯಣ ಊರ್ಧ್ವಮುಖಕ್ಕೆ ಎಂಬ ಶಬ್ದಕ್ಕರ್ಥ. ಇಂತಪ್ಪ ತ್ರಿವಿಧಾ
ವಸ್ಥೆಯಲ್ಲಿರ್ದ ಮನಸ್ಸು ಅಧೋಕುಂಡಲಿಯಳಿದು ಊರ್ಧ್ವ ಕುಂಡ
ಲಿಯ ಸ್ವರೂಪವನೆಯ್ದು ಅದೇ ಸತ್ಪ್ರಾಣಜ್ಞಾನವಾಗಿ ಪ್ರಭಾವಿಸಿ ಆ ಮನ
ವನವಗ್ರಹಿಸಿತ್ತೆಂಬುದೀಗ ಕುಂಡಲಿಯ ಹಾವೆದ್ದು ಕೋಡಗವನೊಂದೇ
ಬಾರಿ ನುಂಗಿತ್ತು ಸದಾಶಿವಮೂರ್ತಿಲಿಂಗವನರಿತಲ್ಲಿ ಎಂಬ ಶಬ್ದಕ್ಕರ್ಥ.

ಶ್ರೀ

# ಶಿವಾನುಭವ

ಸಂಪುಟ ೧೨ ] ಆಗಸ್ಟ ೧೯೩೮. [ ಸಂಚಿಕೆ ೧೧

## ವಿಷಯಾನುಕ್ರಮಣಿಕೆ.

ಇದನ್ನು ವಿಜಾಪುರದಲ್ಲಿ ಇದರ ಸಂಪಾದಕರಾದ ರಾ॥ ಸಾ॥ ಫ. ಗು ಹಳಕಟ್ಟಿ ಇವರು ತಮ್ಮ "ಹಿತಚಿಂತಕ ಪ್ರಿಂಟಿಂಗ ಪ್ರೆಸ್ಸಿ" ನಲ್ಲಿ ಮುದ್ರಿಸಿದರು. ಮತ್ತು ಅವರು ವಿಜಾಪುರದಲ್ಲಿ ತಮ್ಮ ೧೭೨೦ (ಅ) ಮನೆಯಲ್ಲಿ ಪ್ರಸಿದ್ಧಿಸಿದರು.

# ಶಿವಾನುಭವ.

ವರ್ಷ ೧೨] ಆಗಸ್ಟ ೧೯೩೮ [ಸಂಚಿಕೆ ೧೧

## ಹರೀಶ್ವರನ—'ಆದಯ್ಯನ ರಗಳೆ.'

(ಲೇಖಕರು:— ಶ್ರೀ ಸ. ಹಾ. ಶಿವಮೂರ್ತಿಗಳು ಶಿವಯೋಗಮಂದಿರ,
ಮುಕ್ಕಾಂ— ಬನಾರಸ್ ಸಿಟಿ.)

ಕರ್ನಾಟಕ ಸಾಹಿತ್ಯಪ್ರಪಂಚದಲ್ಲಿ 'ರಗಳೆ' ಎಂಬ ಪದವು ಕಿವಿದಾಗಿತೆಂದರೆ ಕವಿಕಳಾವಿಶಾರದರರಸನಾದ ಹರೀಶ್ವರನ ನೆನಹಾಗದಿರುವವರಪರೂಪ. ಇವನ ರಗಳೆಗಳಿಗೆ 'ರಘಟಾಕಾವ್ಯ' ಗಳೆನ್ನುವ ವಾಡಿಕೆಯೂ ಉಂಟು. ಈ ಕಾವ್ಯಗಳಿಂದ ಅವನು ಸಾಹಿತ್ಯ ಮತ್ತು ಧಾರ್ಮಿಕ ಪ್ರಪಂಚವೆರಡರಲ್ಲಿಯೂ ದೊಡ್ಡ ಬದಲಾವಣೆಯನ್ನುಂಟುಮಾಡಿ, ಶುಷ್ಕ ಸಂಪ್ರದಾಯುಗಳನ್ನು ಕಡಿದು, ಕವಿಗಿರುವ ಸ್ವಾತಂತ್ರ್ಯವನ್ನು ಹಿಡಿದು, ಸ್ವಲೀಲೆಯಿಂದ ಹಾಡಿ ಮತೋದ್ಧಾರಕನಾದ ಮಹಾಯೋಗಿಯೂ, ಕ್ರಾಂತಿಕಾರಕನಾದ ಮಹಾಕವಿಯೂ ಆದನು. 'ರಘಟಾಕಾವ್ಯರಮಣಿ' ಯು ಇಂತಹ ಮಹಾಶಕ್ತಿಯುಳ್ಳ ಆಚಾರ್ಯನ ಮಾನಸಕುಮಾರಿ ಮತ್ತು ರಸಿಕವಿಹಾರಿ. ಈ ರಮಣಿಯು ತನ್ನ ನೈಸರ್ಗಿಕವಾದ ಚೆಲುವು ಒಲವುಗಳಿಂದ, ಮಾತು-ಗೀತೆಗಳಿಂದ, ಮಣಿತ-ಕುಣಿತಗಳಿಂದ, ಬಿಂಕ-ಬಿನದಗಳಿಂದ, ಸಾಹಿತ್ಯಲಂಪಟನಾದ ಪ್ರತಿಯೋರ್ವನನ್ನೂ ಮೋಹಗೊಳಿಸುತ್ತಾಳೆ, ಮನವ ಸೆಳೆಯುತ್ತಾಳೆ, ಸೊಗವನೀಯುತ್ತಾಳೆ. ಹರೀಶ್ವರನು ಇದನ್ನು ತನ್ನ ಜೀವಿತಕಾಲದಲ್ಲಿಯೇ ನೋಡಿಯೋ ಏನೋ "ಕೂರ್ತ ಮುಗ್ಧೆಯ ಕಡುನೇಹದಂತೆ" ಯೂ ತನ್ನ ಕಾವ್ಯಗಳಿವೆ ಎಂದು ಭಾವಿಸಿಕೊಂಡೇ ಇದ್ದನು. ಈತನ ಉದ್ದಾಮವೃತ್ತಿಯನ್ನೊಳಗೊಂಡ "ಗಿರಿಜಾ ಕಲ್ಯಾಣ" ವೆಂಬ ಚಂಪೂ ಕಾವ್ಯವು ಪ್ರೌಢಸ್ನಿಗ್ಧ-ಬಲು-ವಿದಗ್ಧ

ಯೆಂತೆನ್ನಬಹುದು. ಅಂತೆಯೇ ಅಲ್ಲಿ ಹೋಗುವವನಿಗೆ ಧೈರ್ಯ-ಶಕ್ತಿಗಳು ಮಿಗಿಲಾಗಿರಬೇಕು. ಆದರೀ ರಘಟಾಕಾವ್ಯರಮಣಿಯಲ್ಲಿ ಅಂತಿಲ್ಲ. ಈಕೆ ಇನ್ನೂ ಅದು ತಾನೆ ನೇಹಮುದ್ರಿಕೆಯೊಡೆದು ರಸವೊಸರ್ವ ಕಾರುಣ್ಯಮಯಕಟಾಕ್ಷದ ಕಿರುನಗೆಯೊಳೇನುವರಿಯುವ ತರಳೆ. ಮುಕ್ತ ಲೀಲೆಯ ಸರಳೆ. ಸಲುಗೆ ನುಡಿಗಳಿಗೆಡೆಯು ಬೇಕಾದ ಬಗೆಯೊಳಿದೆ ಇಲ್ಲಿ. ಇದು ಕಾರಣವೀ ರಘಟಾಕಾವ್ಯಗಳಿಗೆ ಕರ್ನಾಟಕ ಸಾಹಿತ್ಯದಲ್ಲಿ ಅನನ್ಯಸ್ಥಾನವಿದೆ, ಮಾನವಿದೆ. ರಸಿಕ ಚಕ್ರವರ್ತಿಯಾದ ಹರೀಶ್ವರನು ಬರಿಯ "ಗಿರಿಜಾ ಕಲ್ಯಾಣ" ದ ಕರ್ತೃವಾಗಿದ್ದರೆ ಇನಿತು ಘನತೆಯವನಿಗೆ ಇರುತಿತ್ತೋ ಇಲ್ಲವೋ ಹೇಳ್ವುದೂ ತಿಣ. ಅಂತೂ ಅವನು ಕನ್ನಡದೇವಿಯ ಹೆಮ್ಮೆ-ಹೆಚ್ಚಳಕ್ಕೆ-ಪ್ರತಿಯಾಗಿದ್ದು, ತನ್ನ ಸಂಪೂರ್ಣ ಜೀವನವನ್ನೇ ಮಾರುಗೊಟ್ಟ ಸೂರೆಗೊಟ್ಟ ಋಷಿವೀರ, ಕವಿಸಾರ, ಪಂಪಾವಿರೂಪಾಕ್ಷ ಸಾಕ್ಷಾತ್ಕುಮಾರ. ಇಂತಹ ಸಾರಚರಿತನನ್ನು ಹೆತ್ತ ಪೂಜ್ಯ ಕರ್ನಾಟಕಾಂಬೆಯ ಕೀರ್ತಿಯೂ ಅಪಾರ.

ಕನ್ನಡಿಗರ ಅಜ್ಞಾನ ಆಲಸ್ಯಗಳಿಂದ ಇದುವರೆಗೆ ಮೂಲೆಗುಂಪಾಗಿದ್ದ, ಈ 'ಕರ್ನಾಟಕ ಲಕ್ಷಣದೀಕ್ಷಾಚಾರ್ಯನ' ರಘಟಾಪ್ರಬಂಧಗಳನ್ನೆಲ್ಲಾ ಪ್ರಕಟಿಸಲಿಕ್ಕೆ ಪರಿಶ್ರಮಿಸುತ್ತಿರುವ ಘನವಂತರಾದ ಶ್ರೀಮಾನ್ ರಾ॥ ಸಾ॥ ಪಿ. ಜಿ. ಹಳಕಟ್ಟಿಯವರಿಗೆ ಕನ್ನಡಕುಲವೆಂದಿಗೂ ಚಿರಋಣಿಯು. ಅವರು ಈಗಾಗಲೇ ಮೂವತ್ತೆರಡು ಪ್ರಬಂಧಗಳನ್ನು "ಹರಿಹರನ ರಗಳೆಗಳು" ಎಂಬ ಅಂಕಿತದಿಂದ ಆರು ಭಾಗಗಳನ್ನು ಮಾಡಿ ಪ್ರಕಟಿಸಿದ್ದಾರೆ. ಇವುಗಳೊಳಗೆ 'ಆದಯ್ಯನ ರಗಳೆ' ಎಂಬುದು ಮೂರನೇ ಭಾಗದಲ್ಲಿದೆ. ಇದೇ ಕಾವ್ಯವನ್ನೇ ಈ ಲೇಖನದ ವಿಷಯಮಾಡಿ ಇನ್ನು ಮುಂದುವರಿಯುತ್ತೇನೆ.

## ಆದಯ್ಯ.

ಈತನು ಧರ್ಮವೀರನಾದ ಇತಿಹಾಸಪುರುಷ, ಮಹಾಶಿವಭಕ್ತಾಗ್ರಣಿ, ಪೌರುಷದ ಕಣಿ. ವೀರಶೈವದ ಇತಿಹಾಸವನ್ನು ಹಿನ್ನೋಡಿದಾಗ ಹದಿನೈದನೇ ಶತಮಾನದ ವರೆಗೂ ಒಮ್ಮೆ ಶಾಂತಿ, ಒಮ್ಮೆ ಕ್ರಾಂತಿ, ಹೀಗೆ ಒಂದರಿಂದೊಂದು ಎದ್ದುಕಾಣಿಸುತ್ತಿದೆ. ವಿಶೇಷವಾಗಿ ಶಾಂತಿಗಿಂತ ಕ್ರಾಂತಿಯೇ ಮೊದಮೊದಲು ವೆಗ್ಗಳವಾಗಿ ತೋರುತ್ತಿದೆ. ಮತಮತಗಳ ಹೋರಾಟ ಹೋರಾಟಗಳು ಕರ್ನಾಟಕದಲ್ಲಿಯೂ ಇದು

ವರೆಗೂ ಸಾಗುತ್ತಬಂದಿವೆ. ಆದರಲ್ಲಿಯೂ ಜೈನ-ವೀರಶೈವರಿಗೆ ಬಹಳ ವಾಗಿ ನಡೆದಂತೆ ಇದೆ. ಅಂದು ತಮ್ಮ ತಮ್ಮ ದೇವತಾ ಮತ್ತು ಸಮಯ (ಮತ) ಇವುಗಳ ಅಭಿಮಾನವನ್ನು ದೋಷವೆಂದೆಣಿಸಿದಂತೆ ಕಾಣುವದಿಲ್ಲ. ಏಕೆಂದರೆ ಪುಲಿಗೆರೆಯ (ಈಗ ಲಕ್ಷ್ಮೇಶ್ವರ) ಸುರಹೊನ್ನೆಯ ಜೈನ ಬಸದಿಗಳನ್ನು ನುಗ್ಗುಮಾಡಿ ಶಿವನನ್ನು ಸ್ಥಾಪಿಸುವದಕ್ಕೆ ಪ್ರತಿಯಾಗಿ ಹೊರಟ ಆದಯ್ಯನನ್ನು ಕುರಿತು, ಋಷಿವೇಷಧಾರಿಯಾದ ಶಿವನು—

ನಿನ್ನ ಹಣೆಯೊಳು ಭಸಿತ, ನಿನ್ನ ಬಾಯೊಳು ಮಂತ್ರ ।
ನಿನ್ನ ತೊಡಿಗೆಯೊಳು ರುದ್ರಾಕ್ಷಿಗಳಿರಲ್ಕೆ, ನಿನ ।
ಗಿನ್ನೇಕೆ ಪರರ ದೈವವನಳಿದು ಶಿವನನಿಲಿಸುವೆನೆಂಬ ಕೃತ್ಯ?...॥

ಎಂದು ಪ್ರಶ್ನಿಸಿದಾಗ ಅದಕ್ಕುತ್ತರವಾಗಿ—

ಎನ್ನ ದೇಹಾಭಿಮಾನಕ್ಕೆಂದು ಮಾಡೆ, ಬಳಿ ।
ಕೆನ್ನಿಂದ ನರಕಿಗಳು ಬೇರಿಲ್ಲ. "ಧರಣಿಯೊಳ ।
ಗೆನ್ನ ಸಮಯಾಭಿಮಾನ ನಿಮಿತ್ತ ಮಾಡಿದೊಡೆ
ದೋಷವೇನಿಲ್ಲ" ॥

ಎಂದು ಆದಯ್ಯನ ಮೊಗದಿಂದ ರಾಘವಾಂಕಪಂಡಿತನು ನುಡಿಸಿದ್ದಾನೆ. ಅಂತೂ ಸಮಯಾ (ಮತಾ) ಭಿಮಾನವಾಗ ಎಲ್ಲ ಮತೀಯರಲ್ಲಿಯೂ ಬೇರೂರಿ ನೆಲಿಸಿತ್ತು. ಇದರಲ್ಲಿ ಆದಯ್ಯನೂ ಪ್ರಮುಖ ಭಾಗ ವಹಿಸಿದ್ದಾನೆ. ಕಷ್ಟಸಹಿಸಿದ್ದಾನೆ, ಗುರಿಯುಮುಟ್ಟಿದ್ದಾನೆ. ರಾಘವಾಂಕ ಪಂಡಿತನೂ ಆತನ ಗುರುವೂ ಉಸುರಿದಂತೆ ಈತನು ತನ್ನ ಮೇಲೇ ಕರುಣೆಯಿಲ್ಲದ, ಹಿಮ್ಮೆಟ್ಟದ ಕಲಿಛಲಿಯು. ಇಂತಹ ಆದಯ್ಯನ ಚರಿತ್ರೆಯನ್ನು ಮಾನ್ಯ-ಗುರು-ಶಿಷ್ಯರೂ ಮಹಾಕವಿಗಳೂ ಆದ ಹರಿಹರ, ರಾಘವಾಂಕ ಪಂಡಿತರೀರ್ವರೂ ಶ್ರದ್ಧೆಯಿಂದಲೂ ಭಕ್ತಿಯಿಂದಲೂ ನಿರ್ವಹಿಸಿ ಚಿತ್ರಿಸಿದ್ದಾರೆ. ಈ ಚರಿತ್ರೆಯನ್ನು ಹರಿಶ್ವರನ ತರುವಾಯ ರಾಘವಾಂಕನು ಬರೆದಂತೆ ನಮಗೆ ತೋರುತ್ತದೆ. ಅವರೀರ್ವರಲ್ಲಿ ಸ್ಥೂಲಚರಿತ್ರೆ ಬಹುಮಟ್ಟಿಗೆ ಒಂದೆಯಾಗಿದ್ದರೂ ಕೆಲವೆಡೆಯಲ್ಲಿ ರಾಘವಾಂಕನು ಮನೋಹರವಾದ ಮಾರ್ಪಾಡುಗಳನ್ನು ಮಾಡಿದ್ದಾನೆ. ವಿಸ್ತಾರವಾಗಿಯೂ ಹಾಡಿದ್ದಾನೆ ಹರಿಹರನ ಆದಯ್ಯನಲ್ಲಿ

ವೀರತ್ವವಿದ್ದರೂ ಶಿವಭಕ್ತಿಯು ಕೆಚ್ಚೇ ಹೆಚ್ಚು. ರಾಘವಾಂಕನ ಆದಯ್ಯ ನಲ್ಲಿ ಎರಡೂ ಹೆಚ್ಚು. ಮತಾಭಿಮಾನದ ಹುಚ್ಚುಮಾತ್ರ ಈರ್ವರ ಲ್ಲಿಯೂ ಒಂದೇ. ಇದರಿಂದ ಈಗಿನ ಜೈನ ಬಂಧುಗಳು ಅವರಲ್ಲಿ ಮುನಿಸು ತಾಳುವುದು ಒಳಿತಲ್ಲ. ಏಕೆಂದರೆ ಇದು ಇಪ್ಪತ್ತನೆಯ ಶತ ಮಾನ. ಅದು ಹನ್ನೆರಡನೆಯ ಶತಮಾನ. ಆಗಿನ ಕಾಲದ ಪರಿ ಸ್ಥಿತಿ ಹಾಗೇ ಇತ್ತು. ಕಾಲಧರ್ಮದಂತೆ ಮಾನವನ ಪ್ರವೃತ್ತಿ. ಅದೇ ಹರಿಹರ ರಾಘವರು ಸಮತಾವಾದದ ಈಗಣ ಕಾಲದಲ್ಲಿದ್ದರೆ ಕರ್ಣಾಟಕ ಮಾತೆಯ ಸೌಭಾಗ್ಯಕ್ಕೆ ಎಣೆಯೇ ಇರುತ್ತಿರಲಿಲ್ಲ.

## ಆದಯ್ಯನ ರಗಳೆ.

ಈ ರಘಟಾ ಕಾವ್ಯವು ಧರ್ಮವೀರರ ಸಮಯುವಾಗಿ ಮೂರು ಸ್ಥಲ ಗಳುಳ್ಳದ್ದಾಗಿದೆ. ಕವಿಯು ಆದಯ್ಯನ ಚರಿತ್ರೆಗೆ ಒಪ್ಪುವಂತೆ ಸಂದ ರ್ಭವನ್ನು ತರಲೋಸುಗ ಆರಂಭದಲ್ಲಿ ಶಿವಸಭೆಯನ್ನು ಏರ್ಪಡಿಸಿದ್ದಾನೆ. ಅಲ್ಲಿ ಸುರಕನ್ನೆಯೋರ್ವಳು ಬರಲು ಅನಾದಿ ಗಣೇಶ್ವರನೆಂಬುವನು ಅವ ಳಲ್ಲಿ ಮೋಹಿತನಾದನು, ಮುಗ್ಧನಾದನು. ಇದನ್ನು ಕಂಡು ಶಿವನು ನಸುನಕ್ಕು 'ನೀವಿಬ್ಬರೂ ಭೂಲೋಕದಲ್ಲಿ ಹುಟ್ಟಿ ಕಾಮಸುಖದಿಂದಿರ್ದು ಮತ್ತೆ ಬರ್ಪುದು' ಎಂದಾಜ್ಞಾಪಿಸಲು — ದೇವಾ! ಕಾಮವ್ಯಾಮೋ ಹಾದಿಗಳುಳ್ಳ ಧರೆಯೊಳು ಎಂತಿರ್ಪೆಂ. ಇನ್ನೇನಪ್ಪೆಂ. ಕಂತುಹರಾ! ಬಳಿಕೆಂದಾಂ ಬರ್ಪೆಂ. — ಎಂದಾ ಅನಾದಿ ಗಣೇಶ್ವರನ ಬಿನ್ನಪಕ್ಕೆ, ಸ್ಮಿತವದನನಾದ ಈಶನು — ನೀನಂಜಲೇಕೆ? ಆನೇ ರಕ್ಷಿಸಿ

ನಡೆಯಿಸುವೆಂ ಕಾರಣವುಂಟದರೊಳು
ಕಡುಪೆರ್ಚಿದರ್ಾ ಸವಣರ್ ಜಗದೊಳು।
ಅವರಂ ಶಿಕ್ಷಿಸಿ ಧರೆಯೊಳು ಮೆರೆವುತ,
ಅವನಿಗೆ ಕೌತುಕರಸಮಂ ಕರೆವುತ,
ಬಳಿಕೆಮ್ಮಲ್ಲಿಗೆ ಸುಖದಿಂ ಬರ್ಪುದು।

ಎಂದು ಅವನ ಜೀವನದ ಧ್ಯೇಯವನ್ನು ಮೂಲ ಸೂತ್ರರೂಪಿನಲ್ಲಿ ಅರುಹಿದ್ದಾನೆ. ಆದಯ್ಯನ ಅವತಾರವು **'ಕಡು ಪೆರ್ಚಿದರ್ಾ ಜೈನರ ಅಳಿವಿಗಾಗಿ'** ಯೇ ಆಗಿದೆ. ಹಾಗಾದರೆ— ಕವಿಯು, — ಸುರಕನ್ನೆ ಯನ್ನು ಮೋಹಿಸಿದನೆಂದು ಹೇಳುವ ಗುಟ್ಟೇನು? ಎಂದರೆ — ಶಿವ ಭಕ್ತಿ ಮಿಶ್ರವಾದ ದಾಂಪತ್ಯಸುಖವೇ ಸರ್ವಶ್ರೇಷ್ಠವೆಂದೂ, ಸಜ್ಜನೇಷ್ಟ ವೆಂದೂ ತೋರಿಸಲು, ಮತ್ತು ಮುಂದೆ ಆದಯ್ಯನೂ ಪದ್ಮಾವತಿ

ಯನ್ನು ವರಿಸುವನಾದ್ದರಿಂದ, ಅವನ ನಿಜ ಚರಿತ್ರೆಯನ್ನವಲಂಬಿಸಿ ಕೊಂಡೇ —

... ... ... ... ... ವಿಳಾಸಂ.
ಮಿಗೆ ಬಂದಳು ಸುರಕನ್ನೆಯುದೋರ್ವಳು
ಸೊಗಯಿಪ ರೂಪಿಂದೊಪ್ಪುವಳೋರ್ವಳು।
ಬರೆ, ಕಂಡಾ ಗಣನಾಥಂ ಸೋಲ್ತಿರೆ,
ಸುರ ಕಾಮಿನಿಯುಂ ಮೋಹದೊಳೆಳಸಿರೆ।
ಹರನವರೀರ್ವರನೀಕ್ಷಿಸಿ 'ನಗುತಂ'
ಕರೆದಿಂತೆಂದಂ 'ಕೃಪೆಯೊಳ್ಮಿಗುತಂ'।
ನೀವಿರ್ಬರ ಮಾ ಧರೆಯೊಳುಜನಿಸಿ
ಕಾವನನೇಳಿಸ ಸುಖಮುಂ ಧರಿಸಿ। ಬರ್ಪುದು.

ಇಂತು ಹಿನ್ನೆಲೆಯಾಗಿ ಬಂಣಿಸಿಕೊಂಡಿದ್ದಾನೆ. ಇದರಿಂದ ಪದ್ಮಾವತಿಯು ಮುಂದಿನ ಜನನವೂ, ಇವರೀರ್ವರ ವಿವಾಹವೂ ಸೂಚಿತವಾಗಿ, ಮುನ್ನೆಲೆಯಾಗಿರುವ ಅವರೀರ್ವರ ಶೃಂಗಾರರಸಕ್ಕೂ, ಮತ್ತು ಆದಯ್ಯನ ಧರ್ಮ ವೀರ ರಸಕ್ಕೂ ಹೇತುವಾಗಿ ಕಾವ್ಯದ ಕಳೆಯೋರಿದೆ. ಹರಿಶ್ವರನಲ್ಲಿರುವ ಈ ರಸ ಪೋಷಕ ಶಕ್ತಿಯೇ ಅವನ ಕಾವ್ಯಗಳನ್ನು — ಅಮರತ್ವಕೊಯ್ದು "ಕಾವ್ಯಂ ಕಲ್ಪಾಂತಸ್ಥಾಯಿಯೆನಿಪ ನುಡಿಸತ್ಯಂ, ಕವೀಶಾಧಿಪತ್ಯಂ" ಎಂದು ಹಾಡಿಸಿದೆ. ಕಾವ್ಯರಸಪೋಷಕನಾದೀ ಮೇಲಿನ ಪದ್ಯಗಳಲ್ಲಿ ಶಾಪೋಕ್ತಿಯಾದೀತೆಂಬ ಭಯದಿಂದಲೇ ಕವಿಯೂ ಶ್ರೀ ಶಿವ ಮತ್ತು ಆನಾದಿ ಗಣೇಶ್ವರನ ಸಂಭಾಷಣೆಯನ್ನು ಈರ್ವರ ಕೋಪತಾಪಗಳಿಗಿಂಬಿಲ್ಲದಂತೆ ಕೃಪೆಯೊಡಗೊಂಡ ಮಂದಹಾಸದಿಂದ ಮುಂದುವರಿಸಿದ್ದಾನೆ.

§ ಆದಯ್ಯನು ಉತ್ತರ ದೇಶದೊಳಗಣ ಗ್ರಾಮದ ಘನವಂತರೂ ಧನವಂತರೂ ಆದ ಶಿವಭಕ್ತರಲ್ಲಿ ಹುಟ್ಟಿ ಬಾಲ್ಯವನ್ನು ಕಳೆಯಲು—

§ ಟೀಪು ೩— ಜನ್ಮ ಸ್ಥಳವು ಉತ್ತರದಲ್ಲಿರುವ ಸೌರಾಷ್ಟ್ರ (ಗುಜರಾಥ) ದೇಶದೊಳಗಣ ದ್ವಾರಕಾನಗರವೆಂತಲೂ, ಮಾತಾಪಿತೃಗಳ ನಾಮವು ಪುಣ್ಯವತಿ ಘೋರದತ್ತರೆಂತಲೂ ಶ್ರೀಮದ್ರಾಘವಾಂಕನ ಸೋಮನಾಥ ಚರಿತ್ರೆಯಿಂದ ತಿಳಿಯುತ್ತದೆ ರಾಘವಾಂಕನಿಗೆ ಗುರುತಿದ್ದುದು ಹರೀಶ್ವರನಿಗೂ ಗುರುತಿಲ್ಲದಿರಲು ಸಾಧ್ಯವಿಲ್ಲ.

‘ ಇರೆ ಯೌವ್ವನವಾದಯ್ಯಂಗಾಗಲು । ಹರಭಕ್ತಿಯು ತನ್ನೊಳು ಪುಟ ವೇರಲು’ ಇಲ್ಲಿ ಕವಿಯು ಯೌವ್ವನ ಗುಣವಾದ ಇಂದ್ರಿಯ-ವಿಕಾರ, ಸುಂದರ ವೇಷಾಕಾರ ಮೊದಲಾದವುಗಳನ್ನು ತೋರಿಸದೆ, ಆತನ ಶಿವ ಭಕ್ತ್ಯುದಯವನ್ನೂ ಮತ್ತು ಆ ಶಿವಭಕ್ತಿಮಯ ಜೀವನಕೊಪ್ಪುವಂತೆ, ನೊಸಲೊಳು ಭಸಿತಮನೊಪ್ಪದೊಳಿಡುತ ಎಸೆಯುವ ರುದ್ರಾಕ್ಷಿಗಳನು ತೊಡುತ— ‘ಶಿವನಂ ನೆನೆವುತೆ ಸುಖಮಂತಳೆವುತೆ। ಭವನಂ ಪಾಡುತೆ ಭಾವಮನೆಣಿಸುತೆ॥” ಇದ್ದನೆಂದು ಮುಗಿಸಿದ್ದಾನೆ. ಮುಂದೆ ತಂದೆಯು ಆತನನ್ನು ಸಂಪೂರ್ಣ ವ್ಯವಹಾರಜ್ಞನನ್ನಾಗಿ ಮಾಡಿ ನೋಡಿ ಮೆಚ್ಚಿ ವ್ಯಾಪಾರಕ್ಕಾಗಿ ಅಂದಿನ ಪ್ರಸಿದ್ಧ ಪಟ್ಟಣಗಳಾದ ಪುಲಿಗೆರೆ, (ಲಕ್ಷ್ಮೇಶ್ವರ) ಅಣಿಗೆರೆ, (ಅಂಣಿಗೇರಿ) ಗಳತ್ತ ಹೋಗೆಂದು ಕಳಿಸುವಾಗ—

ಲೋಭದೊಳಿಪ್ಪುದು ಸದ್ವ್ಯಯವಾಗದು
ಲಾಭವನರಿವುದ ಮರೆದಿರಲಾಗದು ।

ಎಂದು ಹಿತೋಕ್ತಿಯನ್ನು ಉಪದೇಶಿಸಿದರೆ, ಅದಕ್ಕುತ್ತರವಾಗಿ ಸುತನೂ

ಮೊದಲೀಶನ ಸದ್ಭಕ್ತಿಯ ಲೋಭಂ
ತದನಂತರವಿನ್ನಂಟೇ ಲಾಭಂ ।

ಎಂದು ಬೀಳ್ಕೊಂಡು ಪುಲಿಗೆರೆಗೆ ಹೊರಟನು. ಇತ್ತ ಪುಲಿಗೆರೆಯಲ್ಲಿ ಅರುಹಂತನ (ಜಿನಮೂರ್ತಿಯ) ಪೂಜಾರಿಯಾದ ಪಾರಿಷ ಪಂಡಿತನೆಂಬುವನಿದ್ದನು. ಆ ಸುರಕನ್ನೆಯೂ—

ಹರುಷದಿಯುವನಾ ಲಲನೆಯ ಬಸಿರೊಳು
ಅರುಹಂತನ ಪಾಪದ ಕಗ್ಗಸರೊಳು ।
ಪಂಕಜದಂತಿರೆ ಪುಟ್ಟಿದಳೊಲವಿಂ
ಪಂಕವನೆಂದುಂ ಪೊರ್ದದೆ ನಲವಿಂ ।

ಎಂದು ರೂಪಕೋಪಮಾನಾಲಂಕಾರಗಳಿಂದ ಸಾಹಿತ್ಯರೂಪದಲ್ಲಿ ಅತಿ ರಸವತ್ತಾಗಿ ಜೈನ ಮತವನ್ನು ವಿಡಂಬಿಸಿ ಅದನ್ನು ಆಚಾರ್ಯನಾದ “ಶ್ರೀ ಪಂಪಾ ವಿರೂಪಾಕ್ಷ ಸಾಕ್ಷಾತ್ಸುಪುತ್ರ” ನೇ ಸ್ವಯಂ ಗದ್ದುಗೆ ಯೇರಿ, ನೆರೆದ ಸಭೆಯಲ್ಲಿ ತನ್ನ ಪ್ರೌಢ ವಾಣಿಯಿಂದ ವಿಸ್ತರಿಸುತ್ತ ಇಂತು ಉಪದೇಶಿಸಿದರೆ, ನೆರೆದಿದ್ದ ತನ್ನ ಶ್ರೋತೃ ಸಮುದಾಯವು

ಮರುದಿನವೂ ಬಾರದಿದ್ದೀತೇ? ಆತನಿಗೆ ಬಾಗದಿದ್ದೀತೇ? ಬಾಯ್ತುಂಬಿ ಬಣ್ಣಿಸದಿದ್ದೀತೇ? ಇಂತು ಹೇಳಲು ಹರಿಹರದೇವನಿಗೂ ಅಂದು ಸಾಕಷ್ಟು ಕಾರಣಗಳಿರಬಹುದು. ಇದು ಮಾತ್ರ ಇಂದಿನ ಕಾಲಕ್ಕೆ ತಕ್ಕುದಲ್ಲ. ಆದರಾ ಕಾಲ ಧರ್ಮಗಳಿಗೆ ಯಾರೇನು ಮಾಡುವದು? ಯಾವನಾದರೂ ಇದರಿಂದಲೇ ಅವರ ಗ್ರಂಥಗಳನ್ನು ದೂರೀಕರಿಸುವವನಿದ್ದರೆ, ಸಾಹಿತ್ಯ ದೇವಿಗೆ ಅವನು ಮಹಾದ್ರೋಹ ಮಾಡಿದಂತಾಗುವನಲ್ಲದೆ ಅಂಥವನ ಪಾಲಿಗೆ ಪ್ರಾಚೀನ-ಕನ್ನಡ ಸಾಹಿತ್ಯವೇ ಶೂನ್ಯವಾಗುವದು.

ಜೈನನಾದ ಪಾರಿಷ ಪಂಡಿತನಿಂದ ಹುಟ್ಟಿ ಆ ಕನ್ನೆಯು ಪದ್ಮಾವತಿಯೆಂಬ ನಾಮದಿಂದಿದ್ದು ಯವ್ವನಕ್ಕೆ ಬರಲು—

ನಡು ನಡೆ ನುಡಿಗಳು ಕಿರಿದಾಗುತ್ತಿರೆ
ಮುಡಿ ಮೊಲೆ ಜಘನಂ ಪಿರಿದಾಗುತ್ತಿರೆ

× × ×

ಅಳಕಂ ನೊಸಲೊಳು ರಂಗಂ ಬೊಗುತಿರೆ
'ತಿಳಕಂ ಕಾಂತಿಯು ಮರೆಯೊಳು ನಿಂದಿರೆ'।

× × ×

ತೊಡಿಗೆಯ ನಿನದಂ ವಾದ್ಯಗುಡುತ್ತಿರೆ
ನಡೆ ಸುಗತಿಗಳಂ ಮೇಳೈಸುತ್ತಿರೆ
ಯವ್ವನವುಲ್ಲಿ ಸುಪಾತ್ರಮದಾಗಿರೆ
ಆವ್ವಳಿಸುವ ವಿಟರೆದೆ ಬಿರಿವುತ್ತಿರೆ

ಈ ವರ್ಣನೆಯ ಅರ್ಥ ಬೋಧೆಗೆ ಟೀಕೆ ಟಿಪ್ಪಣೆಗಳು ಬೇಕಿಲ್ಲ. ಪೊಸ ಯುವತಿಯ ಗಾಡಿ ಗಮಕಗಳು ಪದ್ಯದೊಡನೇ ನೇರವಾಗಿ ಹೃದಯಕ್ಕೆ ಮುಟ್ಟುತ್ತವೆ. ಕಾವ್ಯದಲ್ಲಿಯ ಈ ಗುಣಕ್ಕೇ ಅಲಂಕಾರಿಕರು 'ಪ್ರಸಾದ' ವೆನ್ನುತ್ತಾರೆ. ಮೊದಲಿಗಿರುವ "ನಡು ನಡೆ ನುಡಿಗಳು ಕಿರಿದಾಗುತ್ತಿರೆ। ಮುಡಿ ಮೊಲೆ ಜಘನಂ ಪಿರಿದಾಗುತ್ತಿರೆ॥" ಎಂಬಿವೆರಡೇ ಚಿಕ್ಕ ಚರಣಗಳಲ್ಲಿ, ಯುವತಿಯ ಮಿಕ್ಕ ಲೀಲೆ- ಯವ್ವನ ಧರ್ಮಗಳನ್ನು ಅತಿ ಹಿತವಾಗಿ ಮಿತವಾಗಿ, ಚೊಕ್ಕಾಗಿ ಚದುರಾಗಿ, ಇನಿತು ಸೊಗಯಿಸುವಂತೆ ಪೇಳ್ದ ಕನ್ನಡ ಜಾಣನು ಮತ್ತೊಬ್ಬನಿದ್ದಾನೆಯೇ?

ಎನ್ನಬೇಕಾಗುತ್ತದೆ. ಇಲ್ಲಿ "ಮಾತು ಕಿರಿದು, ಬಗೆ ಪಿರಿದು" ಎಂಬು ದಕ್ಕಿದು ದೃಷ್ಟಾಂತ. ನುಡಿದ ಪದ್ಯವಿಂತು ಮುತ್ತಿನ ಹಾರದಂತೆ ಸಹಜ-ಹೃದ್ಯವಾಗಿರಬೇಕು. ಪೊಸ ಜವ್ವನದ ಕನ್ನೆಯ ನನ್ನಿಯ ಸೊಬಗಿನ ಮಾಧುರ್ಯವನ್ನು, ಶಿವಯೋಗಿ ಚಕ್ರೇಶ್ವರನಾದ ಹರೀಶ್ವರನು ಇನ್ನೂ ಎಷ್ಟೊಂದು ಸೂಕ್ಷ್ಮವಾಗಿ ಈಕ್ಷಿಸಿಕೊಂಡಿದ್ದಾನೆಂಬುದಕ್ಕೆ 'ತಿಳಕಂ ಕಾಂತಿಯ ಮರೆಯೊಳು ನಿಂದಿರೆ.' ಎಂಬುದು ಸಾಕು. ಇಂತಹ ಸೌಂದರ್ಯದ ಕಣಿಯೂ ಲಲನಾಮಣಿಯೂ ಆದ ಪದ್ಮಾವತಿಯು, ತನ್ನ ತೊಡಿಗೆಯ ನಿನದವೆಂಬ ವಾದ್ಯಕ್ಕೆ, ನಡೆಯಿಂದ ಸುಗತಿಗಳನ್ನುಂಟು ಮಾಡುತ್ತ [ಇಲ್ಲಿ ಸುಗತಿಯೆಂದರೆ ತಾಳಕ್ಕೆ ಸರಿಯಾಗಿ ತಬಲ ಬಾಜಿ ಸುವದು] ಸಾಗುತ್ತಿದ್ದರೆ, ವಿಟರೆದೆಯೇ ಏಕೆ ಹಟವುಳ್ಳ ಯೋಗಿಯ ಎದೆಯೂ ಬಿರಿಯಬಾರದೆ? ಧ್ಯಾನದಿಂದತ್ತ ಹರಿಯಲಾರದೆ? ಮೌನ ದಿಂದಿತ್ತ ಸರಿಯಲಾರದೆ? ಆದರವಳಾ ಯವ್ವನವು ಸುಪಾತ್ರವಾಗಿದೆ. ಆಕೆ, ತಂದೆ ತಾಯಿಂದಿರು ಹುಡುಕಿದ ವರನನ್ನೂ ವರಿಸಲಿಲ್ಲ. ಆಗ ವರು— ಈ ಸುಖವಿನ್ನಾರಿಗಿರ್ದಪುದೋ! ಈ ಸೊಬಗನ್ನಾರ ಸಾರ್ದ ಪುದೋ!! ಎಂಬ ಚಿಂತಾಕ್ರಾಂತರಾದರು. ಆ ಊರಿಗೆ ವ್ಯಾಪಾರ ಕ್ಕಾಗಿ ಬಂದಿದ್ದ ಆದಯ್ಯನೊಂದು ದಿನ ಪಟ್ಟಣವ ನೋಡುವ ಬಯ ಕೆಯಿಂದ ಹೊರಟಿದ್ದಾನೆ ಈಗ.

ಇತ್ತ ಪದ್ಮಾವತಿಯ ಮನೆಯ ಮುಂದಿನ ಶಿಲ್ಪಮಯವಾದ ವೇದಿಕೆ (ಜಗುಲಿ) ಯೆಂದರೆ— "ಸುಧಾಧವಳಿತ ಸೌರಭಾದಿ ವೇದಿಕಾಸ್ತಂಭಗಳ ನಡುವೆ ಹಂಸಕುಳ, ಕೀರ, ಕುರವಕ, ಸರಸೀರುಹ, ಲತಾವಳಿಗಳ ತಂಡಣೆಯಿಂ 'ಕೊಳನಂತೆ' ವಿರಾಜಿಸುವ ವೇದಿಕೆ." (ಆ. ರ ೩೬ ಪುಟ. ಸ್ಥಲ ೨.) ಇದರಲ್ಲಿ ಪದ್ಮಾವತಿ ನಿಂದಿದ್ದಾಳೆ ಈ ವೇದಿಕೆಯ ವರ್ಣನೆ ಯಲ್ಲಿ— ಹರೀಶ್ವರನು ನಮ್ಮ ಪ್ರಾಚೀನ ಕರ್ನಾಟಕದ ಶಿಲ್ಪಿಗರ ನೈಪು ಣ್ಯವನ್ನೂ, ಅಂದಿನ ಜನದಲ್ಲಿ ಸ್ವಾಭಾವಿಕವಾಗಿ ನೆಲೆಸಿದ್ದ ಆ ಕಲಾ ಭಿರುಚಿಯನ್ನೂ ವ್ಯಕ್ತಮಾಡಿರುವನಲ್ಲದೆ, ವೇದಿಕೆಯನ್ನು ಕೊಳಕ್ಕೆ ಸಾಮ್ಯಮಾಡಿ ತನ್ನ ಸೊಗಸಾದ ಉತ್ಪ್ರೇಕ್ಷಾತ್ಮಕ ಕಲೆಯನ್ನೂ ತೋರಿ ಸಿದ್ದಾನೆ. ಕೊಳದಂತಿರ್ದ ವೇದಿಕೆಯಲ್ಲಿ "ಪದ್ಮ" ದಂತಿರ್ದ ಪದ್ಮಾವ ತಿಯೂ ಅಂದು ನಿಂದಿರಲು, ಆದಯ್ಯನೂ— 'ನಲವಿಂ' "ಪದುಮನ ಸಖ" ಬಪ್ಪಂದದಿ' ಎಂದೇ ಬಿಟ್ಟನು. ಇದು ಬೊಮ್ಮನ ಬರಹವಲ್ಲ

ದಿದ್ದರೆ ಶಿವನ ಸಂಕಲ್ಪವು. ಆಗ ಈರ್ವರ ಸವಿನೋಟಗಳಲ್ಲಿ ಒಂದ ಕ್ಕೊಂದು ಕಂಟಕಿತವಾದುವು. ಗಂಟಿಕ್ಕಿದುವು. ಪರಸ್ಪರರ ಮನವು ಲಾವಣ್ಯ ರಸದಲ್ಲಿ ವಿಹರಿಸತೊಡಗಿತು. ತನ್ಮಯರಾದರು. ಈ ಅವ ಸ್ಥೆಯನ್ನು ಹರೀಶ್ವರನು ಅವರೀರ್ವರ ಗೌರವಕ್ಕೆ ಭಂಗಬಾರದಂತೆ ನಿರೂ ಪಿಸಿದ್ದಾನೆ. (ಪುಟ ೩೬. ಸ್ಥಲ ೨.)

ಈ ತರುವಾಯ ಅವರೀರ್ವರ ಪ್ರಣಯಕೂಟದ ಬೆಸಗೆ ಬಿಚ್ಚಲೇ ಇಲ್ಲ. ಕಡುಶಿವಭಕ್ತನಾದ ಆದಯ್ಯನು ಪದ್ಮಾವತಿಯುಶಿವ ದೀಕ್ಷೆಯನ್ನು ಮಾಡಿಸದಿರಲಾರನೆಂಬುದು[೧] ತಾನಾಗಿಯೇ ಬೋಧೆಯಾಗುವದರಿಂ ದಲೋ ಏನೋ ಅದನ್ನಿಲ್ಲಿ ಹೇಳುವ ಗೋಜಿಗೆ ಹೋಗದೆ, ಅವರೀ ರ್ವರ ಶ್ರೇಷ್ಠ ದಾಂಪತ್ಯಸುಖವನ್ನೇ ಶೃಂಗಾರರಸವು ಸೂಸವಂತೆ ಹೃದ್ಯ ವಾಗಿ ಗದ್ಯಭಾಗದಿಂದ ಬಣ್ಣಿಸಿದ್ದಾನೆ. ಪದ್ಮಾವತಿಯೊಡತಣ—

"ಸುಖಮಂ ಸೋಮನಾಥನ ಸ್ಮರಣೆಯಿಂ ಸವಿವುತ್ತಿರ್ಪ ಸುಖ ಸಮಯದೊಳಂ ಮುನಿಸಿಲ್ಲದ ಕಲಹಂ, ಕೋಪವಿಲ್ಲದ ಖಾತಿ, ಭಂಗ ವಿಲ್ಲದ ಸೋಲು, ಭಾರವಿಲ್ಲದ ಬಳಲ್ಕೆ, ನಿದ್ರೆಯಿಲ್ಲದ ನಿಡುಸುಯ್, ತಣಿ ವಿಲ್ಲದ ತೃಪ್ತಿ, ಅಗಲ್ಕೆ ಇಲ್ಲದ ವಿರಹವಾತುರಿಸಿ ಚಿತ್ತಭೂಮಿಯೊಳೊ ಳಪೊಕ್ಕು, ನೇಹದ ಬೀಜಂ, ದೇಹ ಮನ್ಮಥಘಟ್ಟಿಯಂತ್ರದಾಟವೊಳ್ಪು ಟ್ಟಿದ ಸ್ವೇದಜಲದಿಂ ತಳಿತು, ಪುಳಕದ-ಅಗಿ (ಸಸಿ) ಯೊಯ್ಯು ನಳನ ಳಿಸಿ ಬೆಳೆದ ಮಕರ ಕೇತನೋದ್ಯಾನದೊಳು, ವಿಸಟಂಬರಿವ (ಸುತ್ತು ಮುತ್ತುವ) ವ್ಯಾಕುಳಾಕ್ಷರಂ ಕೊಳರ್ವಕ್ಕಿಯ ಧ್ವನಿಯುನಿಂಬುಗೊಳು ತಿರೆ, ಕುಣಿವಳಕಂ ಶಿಳೀಮುಖಂ (ಗುಂಗಿಯ ಹುಳ) ಗಳನನುಕರಿಸೆ, ನರುಸುಯ್ಯೆಲರೆಂಬ ಗಂಧವಾಹಂ ಸುಳಿಯೆ, ಗಾಢಾಲಿಂಗನದ ಲತೆವನೆ ಯೊಳಗೆ ಸಮಸುಖ ಸಾರ್ವಭೌಮರಾಗಿ ತಮ್ಮೊಳು ತಮ್ಮನಲ್ಲದೆ ಮತ್ತೊಂದೇನುಮನರಿಯದೆ, ತಾವಿಬ್ಬರು ಒಬ್ಬರಾದಂತೆ ಎರಡನರಿ ಯದೆ" ಇದ್ದರು. (ಪುಟ ೩೭ ಸ್ಥಲ ೨)

---

೧ ಆದಯ್ಯನು ಪದ್ಮಾವತಿಗೆ ಶಿವದೀಕ್ಷೆಕೊಡಿಸಿದನೆಂದು ರಾಘವಾಂಕನ 'ಸೋಮನಾಥಚರಿತ್ರೆ' ಯಲ್ಲಿ ಹೇಳಿದೆ. (ಸಂಧಿ ೨. ಪುಟ ೫೧. ಪದ್ಯ ೮೯.) ಶಿವ ದೀಕ್ಷೆಯಾಗುವ ಕಾರಣವೊಡ್ಡಿದ ಶ್ರೀಮದ್ರಾಘವಾಂಕಪಂಡಿತನ ಕವಿತ್ವವು ಕಲ್ಪನೆಯು ಅಚ್ಚುಮೆಚ್ಚಾಗಿದ್ದು.

ಇಂತಿರ್ದ ಈರ್ವರೊಂದುದಿನ ವಿಹಾರಕ್ಕಾಗಿ ಆ ಊರಿನ ಪೂರ್ವ ತಟಾಕ ಪರಭಾಗದ ತರುವನಕ್ಕೆ ಬಂದಿದ್ದರು. ಅಂದು ಆದಯ್ಯನಿಗಲ್ಲಿ ಶರಣ ಸಂಕುಲವು ಕಾಣಿಸಲು ಅವರಿಗೆ ಇದಿರ್ವಂದು ಪೊಡಮಟ್ಟು— 'ದೇವಾ! ಎತ್ತಣಿಂ ಬಿಜಯಂಗೈದಿರಿ. ಕಂಗಳ ಕಾಂತಿ ಕಂದಿಹುದು. ಮುಖಮಂಡಲಂ ಕೊರಗಿಹುದು. ಪುಣ್ಯೋದರಂ ಬಡವಾದುದು. ಬೆಸಕೈವೆನು. (ಪೂಜೆಮಾಡುವೆ)" ಎಂದು ಬೆಸಗೊಳ್ಳುತ್ತಾನೆ. ತ್ರಾಣಗುಂದಿ ಇನ್ನೆಲ್ಲಿಗೂ ಹೋಗಲಾರದ ಶರಣರಾಗ ತಮ್ಮ ಹತ್ತು ದಿನದುಪವಾಸದ ಸುದ್ದಿಯನ್ನು ಹೇಳುತ್ತ ಒಂದು ನಿರುಪಮ ಸ್ಥಲದ ನೆಳಲ ಹೊಸ ಹಸಲೆಯಮೇಲೆ ಬಳಲಿಕೆಯಿಂದ ಮಲಗಿದರು. ಶರಣರಿಗಾದ ಈ ನೋವಿನಿಂದ ಆದಯ್ಯನು ಕಣ್ಣೀರಿಟ್ಟು ಕಳಕಳಿಸಿ ಸತಿ ಪದ್ಮಾವತಿಯನ್ನು ನೋಡುವುದೊಂದೇ ತಡ ಆಕೆಯೂ ಅನುಕೂಲಾಲೋಚನೆಯುಳ್ಳವಳಾಗಿದ್ದಳು. ಆಗ 'ತಳುವು ಮಾಡದೆ ಬರ್ಪೆ' ನೆಂದು ಶರಣರಿಗೆ ಬಿನ್ನೈಸಿ ಮನೆಗೆ ಬಂದು ಆದಯ್ಯನು ಸರ್ವಸಾಮಗ್ರಿಗಳನ್ನೊದಗಿಸಿಕೊಡುತ್ತಾನೆ. ಪದ್ಮಾವತಿಯೂ ಬೇಗನೆಲ್ಲ ಅಣಿಮಾಡಿ— 'ಒಡೆಯರಂ ಬಿಜಯಂಗೈಸಿ ತರುವುದು' ಎನಲು ಆದಯ್ಯನತ್ತ ಕರೆಯಲು ಹೋಗಿದ್ದಾನೆ. ಪದ್ಮಾವತಿಯ ಪಿತನಾದ ಪಾರಿಷ ಪಂಡಿತನು ಆ ದಿನ ತನ್ನ ಜೈನ ಸನ್ಯಾಸಿಗಳಿಗೆ ಚರಿಗೆ (ಊಟಕ್ಕೆ) ಹೇಳಿದ್ದುದರಿಂದ ಆ ಜೈನ ಸನ್ಯಾಸಿಗಳು ಪೇಳ್ದ ಸಂಖ್ಯೆ ಮೀರಿ ಮನೆದುಂಬ ನೆರೆಯಲು ಪಾರಿಷ ಪಂಡಿತನಾಗ ತನ್ನ ಪತ್ನಿಯನ್ನು ಕರೆದು— 'ಪೇಳ್ದುದೊಂದು ಮಡಿ, ಬಂದುದು ನಾಲ್ಮಡಿಯಾಯಿತ್ತು' ಎಂದು ಚಿಂತಿಸುತ್ತಾನೆ. ಹೆಂಡತಿಯೂ ಆಗ ಇದಕ್ಕಂಜಲುಬೇಡ. ನಮ್ಮ ಪದ್ಮಾವತಿಯು ಗಂಡಂಗೊರವರ್ಗೆಂದು ಮಾಡಿಸಿದ ಬೋನಮಿರ್ಪುದೇಳಿ— ಎಂದುತ್ತರಿಸಿ ಮಗಳಾದ ಪದ್ಮಾವತಿಯನ್ನು ಕರೆದು 'ಕಸದ ಕೊರತೆಗೆ ಕರ್ಪುರದ ರಜಮಂ ಬೆರಿಸುವಂತೆ' ಶರಣರಿಗಾದ ಬೋನವನ್ನು ಬೇಡಿದ್ದಾಳೆ. ಒಡನೆ ಪದ್ಮಾವತಿಯು ನಡನಡುಗಿ ಕಾತರದಿಂದ 'ಬೇಡ ಬೇಡ ಕೊಡುವುದಿಲ್ಲ' ಎಂದು ಬಾಗಿಲಿಗೆ ತಡೆಯಾಗಿ ನಿಂತಳು. ಪಾರಿಷನಾಗ ಬಲಾತ್ಕರಿಸಿ 'ಚಂದ್ರಕಳೆಯಂ ರಾಹು ಪಿಡಿವಂತೆ' ಪದ್ಮಾವತಿಯನ್ನು ಹಿಡಿದುಕೊಳ್ಳಲು ಆಕೆಯ ತಾಯಿಯು ಒಳಹೊಕ್ಕು ಅಡಿಗೆಯನ್ನೆಲ್ಲ ಒಯ್ದಳು. ಅತ್ತ ಹೋಗಿದ್ದ ಆದಯ್ಯನು ಬಳಲಿದ ಶರಣರಿಗೆ ಕೈಗೊಟ್ಟು ನಡೆಸಿಕೊಳ್ಳುತ್ತ ಮೆಲ್ಲ ಮೆಲ್ಲನೆ ಮನೆಗೆ ಬಂದು ಹಗಲಚಂದ್ರನಂತೆ ಇರುಳು

ತಾವರೆಯಂತೆ ಆಗಿದ್ದ ಪದ್ಮಾವತಿಯನ್ನು ಬೆಸಗೊಳ್ಳುತ್ತಾನೆ. ಆಕೆ ಭೀತಿಯಿಂದ ನುಡಿಯಲಾರದೆ ಸೆರೆಬಿಗಿದು ಅತಿ ದುಃಖದಿಂದ ಕೊನೆಗೆ ಆ ಸಮಾಚಾರವನ್ನೆಲ್ಲ ತಿಳುಹಿ 'ಇನ್ನಿವರ್ಗೆ ಮತ್ತೆ ಮಾಳ್ಪೆನೆಂದು ನುಡಿಯಲು' ಸತ್ಯಶರಣನಾದ ಆದಯ್ಯನಾಗ ಸತ್ತುಹುಟ್ಟಿದಂತಾದ. ಹತ್ತು ಪವಾಸದಿಂದ ಬಳಲಿದ್ದ ತನ್ನ ಜೀವದುಸಿರಾದ ಶರಣರಿಗೆಲ್ಲ ಪ್ರಸಾದಕ್ಕೆ ಅಣಿಮಾಡಿಸಿ ಹೋಗಿ ಕರೆದುಕೊಂಡು ಬರುವಷ್ಟರಲ್ಲಿ ಇಂತಾದರೆ ಅವನಿಗೆ ಅಪಮಾನ ಮತ್ತು ಅನುತಾಪವಾಗದಿರಬಹುದೇ? ಕಂಗಳು ಕೆಂಪೇರಿದವು; ಅಂಗಾಂಗಗಳಲ್ಲಿ ಕೋಪವಾವರಿಸಿತು. ತಳಮಳಿಸಿ ಪದ್ಮಾವತಿಯನ್ನು ನೋಡುತ್ತ— "ಇವಳಂ ಕೊಂದೊಂಡಂ ಪಂಡಿತನಂ ಖಂಡಿಸಿದೊಡಂ ತಪೋಧನರಂ ತಣಿಪಿದಂತಾಗದು." ಎಂದೊಳಗೊಳಗೆ ಗುಡಿಗುಟ್ಟಿ ಕೊನೆಗೆ ಶರಣರಿಗಾಗ "ಎನ್ನೊಡವೆ ನಿಮಗೇಕೆ ಸಲ್ವುದು? ಪಾಪಿಯ ಒಡವೆ ಪುಣ್ಯಕಪ್ಪುದೇ?" ಎಂದು ಪಶ್ಚಾತ್ತಾಪದೊಡನೆ ದೈನ್ಯದಿಂ ಬಿನ್ನೈಸಿ ನಾನಾಬಗೆಯ ಹಣ್ಣುಹಂಪಲಗಳನ್ನು ಕೊಂಡು ತಣಿಸಿ ಕಳಿಸಿದ್ದಾನೆ. ಆದರೂ ಆದಯ್ಯನಿಗೆ ಶಾಂತಿಯಿಲ್ಲ; ಸೊಗಸಿಲ್ಲ. ಎನ್ನೊಡೆಯರ ಪ್ರಸಾದವು ಏನಾಗಿ ಹೋಯಿತಲ್ಲಾ! ಎಂಬ ದುಮ್ಮಾನವು ಅತಿಯಾಗಿ ಮಲಗಿಬಿಟ್ಟ. ಆರೋಗಣೆಯ ಸಮಯವಾಯಿತು. ಸತೀ ಪದ್ಮಾವತಿಯು ಬಂದು ಎಬ್ಬಿಸಿದಳು. ರೇಗಿದ್ದ ಆದಯ್ಯನಾಗ— "ತನ್ನ ದೇಹಮಂ ಛಿನ್ನ ಪತ್ರನಾಗಿ ಬಿಸುಡಪೇಳ್ಪುದು. ಅಲ್ಲದೊಡೆ ಒಂದುಪವಾಸವನಾದರೂ ಮಾಳ್ಪೆನಲ್ಲದೆ ಊಟವಿಲ್ಲ." ಎನಲು ಮಗಳ ಮೋಹಕ್ಕಾಗಿ ಪಾರಿಷನೂ ಆತನ ಹೆಂಡತಿಯೂ ಬಂದು ಬೇಡಿದರೂ ಆದಯ್ಯನೇಳಲಿಲ್ಲ. ಪಾರಿಷನಾಗ— 'ತಾನರ್ಚಿಪ ಸೋಮನಾಥನಂ ಸುರಹೊನ್ನೆಯ ಬಸದಿಗೆ ತಂದೊಡಲ್ಲದೆ ಉಂಬನಲ್ಲ. ತನ್ನಂ ಪ್ರಾರ್ಥಿಸಲೇಕೆ?' ಎಂದು ಪರಿಹಾಸ ಮಾಡುತ್ತಾನೆ. ಮೊದಲೇ ರೊಚ್ಚಿನಲ್ಲಿದ್ದ ಆದಯ್ಯನಿಗೀ ಪರಿಹಾಸವು, ಕಾದ ತುಪ್ಪಕ್ಕೆ ನೀರಿನ ಹನಿಗಳನ್ನು ಬಿಟ್ಟಂತಾಯಿತು. ತೊಟ್ಟನೇ ಆದಯ್ಯನು ಗಜರಿ ಘೂರ್ಮಿಸಿ— "ಕೇಳೆಲೋ ಮರುಳು ಜೈನ! ನೀಂ ಪ್ರತಿಯಲ್ಲ. ನಿನ್ನ ಮನಮಂ ಪ್ರೇರಿಪನೀಶ್ವರಂ. ನೀನೆಂದಂತೆ ಜಿನನಂ ಇಬ್ಭಾಗಮಾಡಿ ಸೌರಾಷ್ಟ್ರಪತಿ ಸೋಮನಾಥನಂ ಬಿಜಯಂಗೈಸಿದಲ್ಲದೆ ಊಟವಿಲ್ಲೆಂಬ ನೇಮವಂ ಕೈಕೊಂಡೆಂ ಕೊಂಡೆಂ" ಎಂದು ಗದ್ದುಗೆ ಪೊಯ್ದು ಆಸ್ಫೋಟಿಸಿ, ಸೌರಾಷ್ಟ್ರದೇಶಕ್ಕೆ ತನ್ನ ಇಷ್ಟಮೂರ್ತಿಯಾದ ಸೋಮೇಶನನ್ನು ತರಲು ಹೊರಟೇಬಿಟ್ಟ.

ಸತಿಯಾದ ಪದ್ಮಾವತಿಯೂ ಬಳಿಗೊಂಡು ಬರಲು — 'ಸೋಮನಾಥನಂ ತಂದಪೆಂ ಪುಸಿಯಲ್ಲ. ಅಂಜದಿರು.' ಎಂದು ಸತ್ಯದೃಷ್ಟಿಯಿಂದ ನೋಡಿ ನುಡಿಯುತ್ತಾನೆ. ಪದ್ಮಾವತಿಯೂ "ನೀವೆಂದು ಬರ್ಪನ್ನೆಗಂ ಅನಶನ ವ್ರತಮಂ ಕೈಕೊಂಡೆಂ" ಎಂದು ಹಿಂದಿರುಗಿದಳು.

ವ್ರತಿಯಾಗಿ ಹೊರಟ ಆದಯ್ಯನು ಪ್ರತಿದಿನವೂ ಗಟ್ಟಿಬೆಟ್ಟಗಳನ್ನೂ ಹಳ್ಳಕೊಳ್ಳಗಳನ್ನೂ ಗಾಳಿಧೂಳಿಗಳನ್ನೂ ಹಸಿವುತೃಷೆಗಳನ್ನೂ ಲೆಕ್ಕಿಸದೆ ಸೋಮನಾಥನ ವ್ಯಾಮೋಹಭರಿತನಾಗಿ ಪ್ರತಿದಿನವೂ ನಡದೇನಡೆಯುತ್ತಾನೆ. ಉಪವಾಸ ವ್ರತ ಬೇರೆ ಇದೆ. ಕ್ರಮವಾಗಿ ಬಲಗುಂದುತ್ತ ನಡೆಯಿತು. ಇಂತಹದರಲ್ಲಿ ಕಾಲಿಗೆ ಮೊನೆಗಲ್ಲುಗಳು ನೆಟ್ಟು ಬಿರಿದು ಬಿಸಿನೆತ್ತರು ಪುಟಿಯುವದರಿಂದ ಕಾಲೆಲ್ಲಾ ರಕ್ತಪಂಕಮಯವಾಗಿದೆ. ಅದರಲ್ಲಿ ಕಡ್ಡಿಮೊದಲಾದವುಗಳೂ ಮೆತ್ತಿಗೊಂಡಿವೆ. ಬಾಯ್ಬತ್ತಿ, ಬೆನ್ನು ಕುಸಿದು ಮೊಗಬಾಡಿ ಕಣ್ಗಂದಿ ಕತ್ತಲೆಕವಿದಂತಾದರೂ ಸೋಮನಾಥನ ವ್ಯಾಮೋಹದಿಂದ ಭಾವಪರವಶನಾಗಿ ಬೀದಿಗರುವಿನಂತೆ "ಶಿವನೇ ಕರುಣಿಸಬಾರ! ಬಾರದೊಡೆ ಬಂದು ಕೊಂದಾದರೂ ಹೋಗು." ಎಂದು ಒರಲುತ್ತಾನೆ. ಶಶಿಶೇಖರಾ! ನಿನ್ನ ಕಡೆಗಣ್ಣ ಕಾರುಣ್ಯರಸವರತುದೇ? ಕೃಪಾಗುಣಂ ಮುರುಟಿತೇ? ದಯಾವ್ಯಸನವು ಅರೆಯಾಯ್ತೇ? ಭಕ್ತಾನುಕಂಪಿಯೆಂಬಾ ಹೆಸರು ಹೋದುದೇ? ಜಗದೊಳೆಸೆದಿರ್ಪ 'ಸರ್ವಗತ'ನೆಂಬ ಬಿರುದಂ ಬಿಸುಟಿಯಾ? ಹಸನಾಯ್ತು! ನಂಬಿದವರುಂಬರ್ ಎಂದು ಬಗೆಬಗೆಯಿಂದೆ ಹಂಬಲಿಸುತ್ತಾನೆ. ಈಗ ಇಪ್ಪತ್ತೆಂಟು ದಿನಗಳು ಗತಿಸಿದವು. ನಡೆಯಲು ತ್ರಾಣವಿಲ್ಲ. ತೆವಳಿಕೆಗೆ ಆರಂಭವಾಯಿತು. ಕುಳ್ಳಿರಲೂ ಸಾಮರ್ಥ್ಯವಿಲ್ಲದೆ ಪೊರಳ್ದುರುಳ್ದು ಒಂದು ಬೆಳ್ಳವತ್ತದ ಮರದ ನೆಳಲಿಗೆ ಹೇಗೋ ಬಂದ. ಈಗ ಪ್ರಾಣವಾದರೂ ಹೋಗಬೇಕು; ಇಲ್ಲವೆ ಶಿವಸಾಕ್ಷಾತ್ಕಾರವಾಗಬೇಕು. 'ಒರೆವನಯ್ಯಾ ಬಣ್ಣಗಾಂಬನ್ನಕ್ಕ' ಎಂದು ಹೊಗಳಿಸಿಕೊಂಡ ಶಂಕರನ ಛಲದವಧಿಯಾದರೂ ಇದಕ್ಕಿಂತ ಮುಂದಿಲ್ಲ. ತನ್ನನ್ನು ಇಷ್ಟೊಂದು 'ನಂಬಿನೆಚ್ಚಿ' ಪ್ರಾಣಬಿಡಲೂ ತೊಡಗಿರುವ ಇಂತಹ ಭಕ್ತನ ಕಡುವ್ಯಾಮೋಹಕ್ಕೆ ಈ ಭಕ್ತಿಪಾರವಶ್ಯಕ್ಕೆ ಭಕ್ತವತ್ಸಲನೂ ಭಕ್ತೈಕಬಂಧುವೂ ಆದ ಮೃಡನೀಗ ಮೆಚ್ಚಿ ಓಡಿಬಂದು ಅವನ 'ಯೋಗಕ್ಷೇಮ'ವನ್ನು ವಹಿಸದಿರಲು ಸಾಧ್ಯವಿಲ್ಲ. ಇವನ ಆಗಮನವನ್ನೇ ಕವಿಯಿನ್ನು ಸೂಚಿಸು

ತ್ತಾನೆ. "ಚೇಲಾಳನ ಚಿತ್ತವಲ್ಲಭಂ, ಅರಿವಾಳ್ತಾಂಡರ ಎಲುದೋರಿ ಸರಸ ವಾಡುವ ಸುಲಭಂ, ಓಹಿಲಯ್ಯನ ಓವದೆ ನೋಡುವ ದಯಾಪರಂ, ತಿರುಕುರುಂಪೆ ತೊಂಡರ ಇರದೆ ಕಾಡುವ ದಯಾಭರಿತಂ 'ಸಾಯು ಬಡಿದು ಕಿವಿಯನೂದುವ ಕರುಣಿ' ಎನಿಪ ಸೌರಾಷ್ಟ್ರದೊಡೆಯಂ ಸೋಮ ನಾಥನಂ, ಓರ್ವ ವೃದ್ಧಮಹೇಶ್ವರನಾಗಿ" ಆ ದಾರಿಯಿಂ ಬಂದಂತೆ ಆದಯ್ಯನಲ್ಲಿಗೇ ಬಂದನೆಂದು ಹೇಳುವ ಶ್ರೀ ಹರೀಶ್ವರನ ನುಡಿಯಲ್ಲಿ ಬಹು ಮಾಧುರ್ಯವಿದೆ; ವರಸೌಂದರ್ಯವಿದೆ; ಪತಿಯು ತನ್ನ ಮುದ್ದು ಮಗನನ್ನು ಪ್ರೇಮಾಧಿಕ್ಯದ ಭರದಲ್ಲಿ ಪೀಡಿಸಿ ಕಾಡಿಸಿ ಅಳಿಸಿ ಮತ್ತೆ ತಾನೇ ರಮಿಸಿ ಮುದ್ದಿಸುವದನ್ನು ಕಂಡ ವತ್ಸ ಪ್ರಾಣಳಾದ ಸತಿಯು ಆ ಪತಿಯ ಗುಣಕ್ಕೆ ಮೂದಲಿಸಿ ನುಡಿವಂತೆ; "ಶರಣ ಸತೀ ಲಿಂಗ ಪತಿ" ಯಾದ ಹರೀಶ್ವರನು ತಾನೂ ಭಕ್ತವತ್ಸಲನಾಗಿರುವದರಿಂದ, ಇದು ವರೆಗೂ ಆದಯ್ಯನನ್ನು ನುಗ್ಗುಮಾಡಿ ನುಸಿಮಾಡಿ, ಮಣ್ಣುಮಾಡಿ ಸಣ್ಣಮಾಡಿ, ಇಷ್ಟಾದಮೇಲೆ ಕರುಣಿಸಬಂದ ತನ್ನ ಲಿಂಗಪತಿಯನ್ನು ನೋಡಿ ಕೊಂಚ ಸಹಿಸದೆ "ಸಾಯುಬಡಿದು ಕಿವಿಯನೂದುವ ಕರುಣಿ" ಎಂದು ಮೂದಲಿಸಿ ನುಡಿದಿದ್ದಾನೆ. ಇದೆಂತಹ ಸೊಗಸಾದ ಮಾತು. ಹರೀಶ್ವರನು ಈ ವಾಕ್ಯವನ್ನು ಬರೆದೊಡನೆ ಆತನ ಚಿತ್ತವಲ್ಲಭನಾದ ವಿರೂಪಾಕ್ಷನು ಮಿಕ್ಕ ಆನಂದದಿಂದ ಆತನನ್ನು ಅಪ್ಪಿಕೊಂಡು ಕೊಂಚ ಹೊತ್ತು ಹರೀಶ್ವರನ ಬರವಣಿಗೆಗೆ ಅಡ್ಡಾಗಿರಬಹುದು. ಇಂತಹ ರಸಿ ಕತೆಯಿಂದಲೇ ಹರೀಶ್ವರನು 'ರಸಿಕ ಚಕ್ರವರ್ತಿ' ಯು.

ವೃದ್ಧ ಮಹೇಶ್ವರ ವೇಷಧಾರಿಯಾದ ಶಿವನೀಗ ಆದಯ್ಯನನ್ನು ಕುರಿತು "ಮಗನೆ ಮಗನೆ! ನೀನೆಲ್ಲಿಗೆ ಪೋದಪೆ? ಬಳಲ್ಕೆ ಪಿರಿದಾಯ್ತು. ಸಮೀಪದೊಳೂರುಂಟೇ?" ಎಂದು ಹಾದಿಕಾರನಿಗೊಪ್ಪುವಂತೆ ಪ್ರಶ್ನಿ ಸಲು— "ಚಂದ್ರಗೆ ಮೇಘಂ ಕವಿದೊಡಂ ಜಗಕ್ಕೆ ತಣ್ಪು ತಪ್ಪ ದೆಂಬಂತೆ, ವೇಷದ ಮರೆಯ ಚಂದ್ರಚೂಡನ ಸುಧಾವಾಕ್ಯವಾದಯ್ಯಂಗೆ ಶೀತಳಾಮೃತವಿತ್ತು ಚೇತನ ..." ವನ್ನುಂಟುಮಾಡಿದಂತೆ ಹರೀಶ್ವ ರನ ಈ ಸುಧಾವಾಕ್ಯವೂ ರಸಜ್ಞರಾದ ಆಲಂಕಾರಿಗರಿಗೆ ಶೀತಳಾಮೃ ತವನ್ನೀಯುತ್ತದೆ. 'ಚಂದ್ರ ಚೂಡನ ಸುಧಾವಾಕ್ಯ' ಎಂಬ ವಾಕ್ಯದ ಲ್ಲಿಯ ಪದಪ್ರಯೋಗವು ಸಾಹಿತ್ಯ ದೃಷ್ಟಿಯಿಂದ ಬಹು ಮೆಚ್ಚಾದುದು. ಶಿವನು 'ವರ' ವಟು ವೇಷದಿಂದ ತಪಸ್ವಿನಿಯಾದ ಪಾರ್ವತಿ ಬಳಿಗೆ

ಬಂದಿರಲು, ಇದೇ ಭಾವವೇ 'ಗಿರಿಜಾ ಕಲ್ಯಾಣ' ದಲ್ಲಿಯೂ ಕಂದ ಪದ್ಯವಾಗಿ ಹೊರಹೊಮ್ಮಿದೆ. —

ಇಂದುಗೆ ಮೇಘಂ ಕವಿದೊಡ-
ಮಿಂದೀ ಲೋಕಕ್ಕೆ ತಣ್ಪು ತಪ್ಪದ ತೆರದಿಂ-
ದಿಂದುಧರಂ ವರವಟು ವೇ-
ಷಂದಳೆದೊಡಗಜೆಗಾದುದತಿ ಹರ್ಷ ಮುಖಂ ॥
( ಗಿರಿಜಾಕಲ್ಯಾಣ ಆಶ್ವಾಸ ೯ ಪದ್ಯ ೯೬ )

ತ್ರಾಣಗುಂದಿದ್ದ ಆದಯ್ಯನಿಗಿಂತು ಚೇತನವುಂಟಾಗಲು, ಅಲ್ಲಿಂದ ಎದ್ದು— "ಮಹೇಶ್ವರಂಗುತ್ತರಂಗೊಡುವುದರಿಂ ಮತ್ತೆ ಹತ್ತಡಿಯುಂ ಸೋಮನಾಥನಲ್ಲಿಗೆ ನಡೆವೆನೆಂದು ಮರುಮಾತುಗೊಡದೆ ಪೋಗ ತೊಡ ಗಿದನು." ವೃದ್ಧಮಹೇಶ್ವರ ವೇಷವುಳ್ಳ ಶಿವನು, ಈತನ ಈ ನಿಷ್ಠೆ ಯನ್ನು ಕಂಡು ಮುಂದಕ್ಕೆಬಂದು ಕೈಯನ್ನು ಹಿಡಿದು—

ಪೇಳು ಪೇಳೆಲ್ಲಿಗೆ ಪೋದಪ್ಪೆ.

ಆದಯ್ಯಃ— ಸೌರಾಷ್ಟ್ರಪತಿಯಿಂ ಪುಲಿಗೆರೆಗೆ ಬಿಜಯಂಗೈಸಿ ತರಲು ಪೋದಪೆಂ. ಆತನಂ ನೀಂ ಬಲ್ಲೆಯಾ? ನಾನರಿಯದೊಡಂ ಆತನನರಿವನ್ನೆಗಂ ಎನ್ನಸುವುಳ್ಳನ್ನೆಗಂ ಐದುವೆನ್.

ವೃದ್ಧಮಹೇಶ್ವರಃ— (ಈ ನಿಶ್ಚಲವಚನಕ್ಕೆ ಮೆಚ್ಚಿ) ಎಲೆ ಮಗನೆ ಇಂತಾ ದೊಡಾಂ ಸೋಮನಾಥಂ. ನಿನ್ನ ನಿಷ್ಠೆಗೆ ಮೆಚ್ಚಿ ಬಂದೆಂ. ಕಂದಾ! ಬಳಲದಿರು.

ಆದಯ್ಯಃ— (ಮೊದಲು ಆತನನ್ನು ನೋಡಿದೊಡನೆ ಬಳಲಿಕೆ ಅಡಗಿ ದುದರಿಂದ ಮತ್ತು ಈ ನುಡಿಯಿಂದ ನಂಬುಗೆಯೇರಿದರೂ ವೇಷ ವನ್ನು ಕಂಡು ಶಂಕಿಸಿ) ದೇವಾ! ಮಾನುಷ ಚರಿತ್ರಂ, ಮಾನು ಷಾಕಾರನಾಗಿರ್ದೊಡೆ ಏನೆಂದು ನಂಬಲರಿಯದಿರ್ಪೆಂ. ಎನ್ನ ಮನದ ಸಂದೇಹಮಂ ಪಿಂಗಿಸಿ ಕರುಣಿಪುದು.

ಈ ಬಿನ್ನಹದ ಮಾತಿನೊಡನೆ 'ಚಂದ್ರಕಳೆ, ದಶಭುಜಂ, ಕೆಂಜೆಡೆ ಲಲಾಟಲೋಚನಂ, ಪುಲಿದೊವಲು ನಂದಿವಾಹನವೊಪ್ಪೆ, ಗುರು ಕರುಣಿಸಿದ ಶಿವಲಿಂಗದೊಳಗಣ ಮೂರ್ತಿ ವಿಳಾಸಂ, ಸಾಕಾರ ಸಂವಿ ತ್ತವಯವದ ಪರಬೊಮ್ಮಂ ಸೋಮನಾಥಂ ಆದಯ್ಯನ ಕಂಣ ಪುಣ್ಯ

ದಂತೆ ಮುಂದೆ ತೊಳಗುತ್ತಿರೆ' ಇದೇ ಹರೀಶ್ವರನಲ್ಲಿದ್ದ ಶ್ರೀ ವಿರೂಪಾಕ್ಷನ ರೂಹು.

ಶಿವಃ (ಆದಯ್ಯನ ಬಯಕೆಯನ್ನು ತಾನೇ ತಿಳಿದು) ನಾಡಿದು ಬರ್ಪೆಂ ಸೋಮನವಾರಂ. ನೀಂ ನಡೆ ಮುಂದೆ ಹೋಗು.

ಆದಯ್ಯಃ— (ಸ್ವಗತ[೧]) ಅಕಟಕಟ! ವಿಶ್ವಪತಿಗೆನ್ನಯ ಬಳಲ್ಕೆಯುಂ ಪ್ರಕಟವಾಗಿರದೆ? ಕೃಪಾಕರಂ ಮುಂದೆನ್ನನೊಬ್ಬನನ್ನೇಕೆ ಪೋಗವೇಳ್ದನ್? ಸಕಳೇಶಂ ಎನ್ನೀ ಮನಸ್ತಾಪಮಂ ಅರಿಯದಿರನ್. ಆದೊಡಂ ಪೇಳ್ವೆಂ. (ಪ್ರಕಾಶ) ನೀಂ ನಾಡಿದು ಬಂದೊಡೆ ಎನಗೆಂತಭವಾ? ತಡೆಯದಿಪ್ಪತ್ತೆಂಟುದಿನ ದಾರಿಯಂ, ಕಡೆಗುಳಿದ ದಿನವೆರಡರಿಂ ಹೋಗಬಹುದೆ?

ಶಿವಃ— ಹೋಗಬಹುದು. ಅದಕುಪಾಯಮಂ ಪೇಳ್ವಪೆಂ. ನಿನ್ನನೀ ಬಿಲ್ವತ್ತರದ ನೆಳಲೊಳು ಪಟ್ಟಿರ್ಪೆನು. (ಮಲಗಿಸಿರುವೆನು) ಚೆಲ್ವಿಂ ಪುಲಿಗೆರೆಯೊಳಿಟ್ಟಿರ್ಪೆನು. ಮರುದಿವಸಂ ನಾಂ ಬಂದಪೆನ್; ಎರಡಿಲ್ಲಂ. ನೆರೆ ನಂಬು ನುಡಿಗೆಡೆಯಿಲ್ಲ.

ಇದೇ ಪ್ರಕಾರ ಆದಯ್ಯನು ಸಂಜೆಯೆನ್ನುವಷ್ಟರಲ್ಲಿ ಪುಲಿಗೆರೆಯಲ್ಲಿದ್ದನು. ಆಗ—

ಬೆಳಗಿನ ಬಿತ್ತಂಕುರಿಸುವ ತೆರದಿಂ
ತೊಳ ತೊಳಗಿದುವಾ ತಾರಕಿ ನಭದಿಂ.
ಸೋಮಯ್ಯನ ಬರವರಿಪುವ ತೆರದಿಂ
ಸೋಮಂ ಪೊರಮಟ್ಟಂ ಸಮ್ಮುದದಿಂ
ದಿಸೆಯಂ ಕೌಮುದಿಯಂ ಧವಳಿಸುತಂ
ರಸೆಯಂ ಕೂಡೆ, ಕುಳಿರ್ಕೊಳೆಡಿಸುತಂ
ಚಂದ್ರಂ ಪೊರವೊಟ್ಟೊಪ್ಪಿರುಳೊಳು
ಚಂದ್ರಿಕೆ ಸುತ್ತಂ ತೀವಿರ್ಪೆಡೆಯೊಳು
ಸೋಮಯ್ಯನ ಚಿಂತೆಯೊಳಾದಯ್ಯಂ

---

೧ ಸಂದರ್ಭವನ್ನನುಸರಿಸಿ ಮನಸ್ಸಿನಲ್ಲಿ ಮಾತನಾಡುವದಕ್ಕೆ 'ಸ್ವಗತ'ವೆಂತಲೂ ಗಟ್ಟಿಯಾಗಿ ಮಾತನಾಡುವದಕ್ಕೆ 'ಪ್ರಕಾಶ'ವೆಂತಲೂ ನಾಟಕದಲ್ಲಿ ಪ್ರಯೋಗಿಸುವ ಪದ್ಧತಿ.

ವ್ಯಾಮೋಹಂಗಳನಳಿದಾದಯ್ಯಂ
ಚಿಂತಿಸುತಿರಲರುಣೋದಯವಾದುದು;
ಕಂತುಹರನ ಕರುಣೋದಯವಾದುದು.

ಇದಿಷ್ಟೇ ನಮ್ಮ ಲೇಖನಕ್ಕಿನ್ನು ಸಾಲ್ಗು. ಇನ್ನು ಮುಂದೆ ಶಿವನು ಜಿನ ಮೂರ್ತಿಯನ್ನೊಡೆದು ಆವಿರ್ಭವಿಸುವ, ಮತ್ತು ಇದರಿಂದ ಆದ ಯ್ಯನಿಗೂ ಜೈನರಿಗೂ ಕಾಳಗವಾಗಿ ಜೈನರಿಗೆ ಭಂಗಬಾಗುವ, ವಿಷಯ ಗಳನ್ನು ಅಭಿಲಾಷೆಯಿದ್ದವರು ಮೂಲ ಕಾವ್ಯವನ್ನೇ ಓದಿ ಸಂತುಷ್ಟ ರಾಗಬಹುದು.

## ಕೊನೆ ಮಾತು.

ಆದಯ್ಯನು ಮಹಾ ಶಿವಭಕ್ತನಾದರೂ ಪೌರುಷವನ್ನು ಮರೆತವ ನಲ್ಲ. ಆದ್ದರಿಂದಲೇ ಆತನು ' ಭಕ್ತವೀರ. ' ವೀರಶೈವ ಮತದ ಆರಂ ಭದಲ್ಲಿ ಅವನು ಮಾಡಿದ ಸಾಹಸ ಶ್ರದ್ಧೆಗಳು ಮಿಗಿಲಾದುವು. ಇಂತಹ ಅಭಿಮಾನಧರು ಅಂದು ಹುಟ್ಟಿದ್ದರಿಂದಲೇ ವೀರಶೈವ ಮತವು ಅಸ್ತಿತ್ವ ವನ್ನು ಹೊಂದಿ ಈಗ ಭಾರತಕ್ಕೆ ಆದರ್ಶಪ್ರಾಯವಾಗಿದೆ. ಮತ್ತು " ಆದಯ್ಯ ವಚನಗಳು " ಎಂಬ ಸುಂದರ ಗ್ರಂಥವೂ (ವಚನಕಾವ್ಯ) ಈತನದೇ ಎಂದು ಸಿದ್ಧವಾದರಂತೂ ಆದಯ್ಯನಿನ್ನು ಅಗ್ರಸ್ಥಾನವನ್ನು ಪಡೆಯುದರಲ್ಲೇನೂ ಸಂಶಯವಿಲ್ಲ. ಹೇಗಾದರೂ ವೀರಶೈವೇತಿಹಾಸ ದಲ್ಲಿ ಈತನಿಗೊಂದು ಉಚ್ಚಸ್ಥಾನವುಂಟು.

ಇನ್ನು ಈತನ ಧರ್ಮ ಪತ್ನಿಯಾದ ಪದ್ಮಾವತಿ ಸಾಮಾನ್ಯವಾಗಿ ' ಸ್ತ್ರೀ ಸ್ವಭಾವಸ್ತು ಕಾತರಃ ' (ಭಾಸ) ಎಂದಿದ್ದರೂ ಈಕೆಯು ಮಾತ್ರ ಪತಿದೇವನ ಸೇವೆಗಾಗಿ ಶ್ರೇಯಸ್ಸಿಗಾಗಿ, ಲಾಲನೆಪಾಲನೆ ಮಾಡಿದ ಮಾತಾಪಿತರ ಪ್ರೇಮಪಾಶವನ್ನು ಹರಿದು ಬಿಸುಟ ಧೀರೋದಾತ್ತೆಯು. ತರುಣಿಯಾದ ಈ ದೇವಿಯಲ್ಲಿರುವ ಪತಿಭಕ್ತಿಯೂ ವರ್ತನವೂ ಪತಿವ್ರತೆ ಯರಿಗೆ ಅನುಸರಣೀಯವೂ ಆಕರ್ಷಣೀಯವೂ ಆಗಿವೆ. ಇದಕ್ಕಾಗಿಯೇ ಶ್ರೀಮದ್ರಾಘವಾಂಕ ಪಂಡಿತನು ಪದ್ಮಾವತಿಯ ಪಾತ್ರಸೃಷ್ಟಿಯಲ್ಲಿ ಬಹು ಶ್ರದ್ಧೆವಹಿಸಿ ಮುಂದುವರಿದಿದ್ದಾನೆ. ಒಟ್ಟಿನಲ್ಲಿ ಪದ್ಮಾವತಿಯು ಆದಯ್ಯ ನಿಗೆ ತಕ್ಕಸತಿ; ಗುಣವತಿ. ಈರ್ವರಲ್ಲಿಯೂ ' ಸಾಧಾರಣೋ ಭೂಷಣ ಭೂಷ್ಯಭಾವಃ ' ಎಂಬ ಉಕ್ತಿಯು ಯುಕ್ತವಾಗುತ್ತದೆ.

ತೇಜೋಭರಿತವಾದ ಇವರೀರ್ವರ ಚರಿತೆಯನ್ನು ಹರಿಹರ—ರಾಘವಾಂಕ ಪಂಡಿತರೀರ್ವರೂ ಸ್ಥಾಯಿಮಾಡಲು ಹೊರಟು ಕೃತಕೃತ್ಯರಾಗಿದ್ದಾರೆ. ಗುರು ಹರಿಹರದೇವನ 'ಆದಯ್ಯನ ರಗಳೆ' ಗಿಂತಲೂ ಶಿಷ್ಯ ರಾಘವಾಂಕ ಪಂಡಿತನ 'ಸೋಮನಾಥ ಚರಿತ್ರ' ವೆಂಬ ಕಾವ್ಯವು ಕೆಲವಡೆಯಲ್ಲಿ 'ಶಿಷ್ಯಾದಿಚ್ಛೇತ್ಪರಾಜಯಂ' ಎಂಬ ನುಡಿಯನ್ನು ನೆನವಿಗೆ ತಂದು ಕೊಡುತ್ತದೆಯಾದರೂ ಇದರಿಂದ ಹರೀಶ್ವರನಿಗೆ ಮತ್ತಷ್ಟು ಮಾನವಿದೆಯೇ ಹೊರತು ಹಾನಿಯಿಲ್ಲ. ಈ ಚರಿತ್ರೆಯನ್ನು ಹರೀಶ್ವರನ ತರುವಾಯವೇ ರಾಘವಾಂಕನು ಬರೆದಿರುವನೆಂದು ಈ ಮೊದಲೇ ಸೂಚಿಸಿದ್ದೇನೆ. ಮತ್ತೊಂದೇನಂದರೆ — ಹರೀಶ್ವರನು ರಾಘವಾಂಕ ಪಂಡಿತನಂತೆ ಐದೇ ಕಾವ್ಯಗಳನ್ನು ಸೃಷ್ಟಿಸದೆ, ಎಷ್ಟೋ ಕಾವ್ಯಗಳ ದಿವ್ಯ ಸೃಷ್ಟಿಗಾಗಿಯೇ ಹೊರಟಿದ್ದಾನೆ. ಇದಕ್ಕಾಗಿ ತನ್ನ ಎಲ್ಲ ಶಕ್ತಿಯನ್ನು ಒಂದರಲ್ಲೇ ತುಂಬಲು ಮನಸ್ಸು ಮಾಡಿಲ್ಲ. ಮನಸ್ಸು ಮಾಡಿದರೂ ಆತನ ಶಕ್ತಿಯು ಅಕ್ಷಯವಾಗಿತ್ತು. ಕರ್ನಾಟಕ ಸಾಹಿತ್ಯಕ್ಕೆ ಹಿಂದಿಲ್ಲ ಮುಂದಿಲ್ಲವೆಂಬಂತೆ ಈತನು ಸೇವೆಸಲ್ಲಿಸಿದ್ದಾನೆ. ಸಾಹಿತ್ಯ ಸೇವೆಗಾಗಿ ಸತತ ಹೆಣಗುವದೂ ಒಂದು ತಪಸ್ಸೇ ಅಹುದು. ದೇಶಸೇವೆಗಳೆಂದು ಹೊಗಳಿಸಿಕೊಳ್ಳಬಹುದಾದ ಬಗೆಬಗೆಯ ಕಾರ್ಯಗಳಲ್ಲಿ ಇದು ಶ್ರೇಷ್ಠತಮವಾದುದು. ಹರೀಶ್ವರನು ಸಾಹಿತ್ಯ ಸೃಷ್ಟಿಕರ್ತನೂ ಅಹುದು; ಪ್ರಚಾರಕನೂ ಅಹುದು; ಅನುಪಮ ತಪಸ್ವಿಯೂ ಅಹುದು. ಮೇಲಾಗಿ ಮುದ್ದು ಮಾನಸ ಪುತ್ರನಂತಿರುವ ಚೆನ್ನಿಗ ರಾಘವಾಂಕನು ಎಳೆಯತನದಲ್ಲಿ ಈತನಿಗೆ ತಕ್ಕ ಶಿಷ್ಯನಾಗಿ ದೊರೆತಿರುವ ಕನ್ನಡ ಕವಿಗಳಾರಿಗೂ ಇಲ್ಲದ ಸೌಭಾಗ್ಯವೊಂದು. ಅಂತೂ ವರಕವಿಯೂ ಕ್ರಾಂತಿಕಾರಕನೂ ಆದ ಹರೀಶ್ವರನು ಮಹಾಭಾಗ್ಯಶಾಲಿ, ಧೈರ್ಯಶಾಲಿ. ಆತನೊಂದು ಕಾವ್ಯರಸವುಕ್ಕೆ ಅಕ್ಷಯಪಾತ್ರೆ.

ಸಂಸ್ಕೃತದೇವಿಯು ಕಾಳಿದಾಸನನ್ನು ಪಡೆದುಕೊಂಡು ಹೆಮ್ಮೆಪಟ್ಟಳು. ನಮ್ಮ ಕನ್ನಡಮ್ಮನು ಹರಿಯಣ್ಣನನ್ನು ಪಡೆದುಕೊಂಡು ಸ್ವತಂತ್ರಳಾದ ಆನಂದಭರದಲ್ಲಿ ಜಯಘೋಷ ಮಾಡಿದಳು.

---

# ಶತಕತ್ರಯವು.

( ಲೇ:— ಶ್ರೀ ಮುರಿಗೆಪ್ಪ ಸಿದ್ದಪ್ಪ ಗಡ್ಡದ ವಿಜಾಪುರ )

(ಜೂನ ಸಂಚಿಕೆಯಿಂದ ಮುಂದೆ ಸಾಗಿದ್ದು)

---

## ವೀರಶೈವರ ಯೋಗಮಾರ್ಗ.

ಶಿವಶರಣರು ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನ, ಧಾರಣ, ಸಮಾಧಿಯೆಂಬ ಅಷ್ಟಾಂಗ ಯೋಗಗಳಲ್ಲಿ ಶ್ರುತಿ ದೃಷ್ಟಾನುಮಾನಗಳಿಂದ ಪೂರ್ವ ಭಾಗ ಉತ್ತರಭಾಗವೆಂದು ಎರಡು ಭಾಗಗಳನ್ನು ಮಾಡಿ, ಪೂರ್ವಭಾಗದಲ್ಲಿ ಕರ್ಮಮಾರ್ಗ ಸಂಬಂಧವಾದ ಮೊದಲಿನ ಐವನ್ನು, ಮತ್ತು ಉತ್ತರ ಭಾಗದಲ್ಲಿ ಜ್ಞಾನಮಾರ್ಗ ಸಂಬಂಧವಾದ ಕಡೆಯ ಮೂರನ್ನು, ಬೇರ್ಪಡಿಸಿರುವರು. ಹೀಗೆ ಬೇರ್ಪಡಿಸಿದ ಮೇಲೆ ಕರ್ಮಕ್ಕೆ ಸಂಬಂಧವಾದ ಪೂರ್ವಭಾಗವನ್ನು ಬಿಟ್ಟು ಜ್ಞಾನ ಸಂಬಂಧವಾದ ಉತ್ತರ ಭಾಗವನ್ನು ಅಂದರೆ ಧ್ಯಾನ ಧಾರಣ ಸಮಾಧಿ ಎಂಬವುಗಳನ್ನು ಆಚರಿಸುತ್ತಿರುವರು. ಅದು ಹೇಗೆಂದರೆ:—

ಧ್ಯಾನಮದಂತರಂಗ ಯಜನಂ ಬಹಿರಂಗದ ಪೂಜೆ ಧಾರಣಂ।
ತಾನೆ ಸಮಾಧಿಯುಜ್ವಲತರಪ್ರಥಿತಾರ್ಚನಮಾತ್ಮಲಿಂಗ ಸಂ॥
ಧಾನ ಸಮಾಹಿತ ಕ್ರಿಯೆ ಯಥಾಕ್ರಮಮೀ ಪರಿಯೆಂದು ಶಾಂಭವ।
ಜ್ಞಾನದಿ ನಿಟ್ಟಿಸಲ್ನಿಜಪದಂ ಕರಬಿಲ್ವಫಲಂ ಶಿವಾಧವಾ॥

ಅರ್ಥ:— ಪ್ರಾಣಲಿಂಗ ಪೂಜೆಯು ಧ್ಯಾನಯೋಗವು. ಇಷ್ಟಲಿಂಗ ಪೂಜೆಯು ಧಾರಣಯೋಗವು. ಭಾವಲಿಂಗದ ಸ್ಮರಣವು ತೈಲಧಾರೆಯಂತೆ ಎಡೆವಿಡದಿಪ್ಪುದೇ ಆ ಭಾವಲಿಂಗದ ಪ್ರಸಿದ್ಧವಾದ ಪೂಜೆ ಎನಿಸಿಕೊಳ್ಳುವದು. ಅದೇ ಸಮಾಧಿಯೋಗವು. ಈ ವಿಧದ ಲಕ್ಷಣವನ್ನು ತಿಳಿದು ನಡೆದರೆ ಸಾಮರಸ್ಯ ಪದವು ಲಭಿಸುವದು.

ಇದು ಪ್ರಾಣಲಿಂಗ ಪೂಜೆಯನ್ನು ಬಲ್ಲವರೂ ಭಾವಲಿಂಗ ಸ್ಮರಣೆಯಲ್ಲಿ ತಲ್ಲೀನರೂ ಆದ ಶರಣರ ವಿಚಾರವಾದ ಯೋಗವಾಯಿತು.

ಆದರೆ ಎಲ್ಲ ಕಡೆಗೆ ಬರೇ ಇಷ್ಟಲಿಂಗ ಪೂಜಕರೇ ಹೆಚ್ಚು. ಅವರಿಗೆ ಈ ಯೋಗವು ಯಾವ ತರದಿಂದ ಲಭಿಸುವದು ಎಂದರೆ ಇಷ್ಟಲಿಂಗ ಪೂಜಾ ನಿರತರಿಗೂ ಕೂಡ ಈ ಯೋಗದ ಸಾಮರ್ಥ್ಯ ವಿರುವದು ಎಂಬುದಕ್ಕೆ —

ಧ್ಯಾನವುದಿಷ್ಟಲಿಂಗವು ಸಹಸ್ರೀಶವುಂ ನೆನೆವೇಕ ನಿಷ್ಠೆ ತದ್ ।
ಜ್ಞಾನ ಪರಾಯಣಾವುಳ ಮನೋಲಯುವೆ ಸುಸಮಾಧಿತಲ್ಲಯು ॥
ಸ್ಥಾನವೆನಿಷ್ಟ ಲಿಂಗಮನನಾರತಮಂಗದ ಮೇಲೆ ಭಕ್ತಿ ಸ ।
ಸ್ಮಾನ ವಿಧಾನದಿಂ ಧರಿಸೆ ಧಾರಣವೆಂಬ ಪದಂ ಶಿವಾಧವಾ ॥

**ಟಿಪ್ಪಣಿ:—** ಹಗಲಿರುಳೂ ಇಷ್ಟಲಿಂಗವನ್ನು ಸ್ಮರಿಸುವ ಭಾವನೆ ಯೊಂದಿರುವದೇ ಧ್ಯಾನಯೋಗವು. ಆ ಇಷ್ಟಲಿಂಗದ ಅರಿವಿನಲ್ಲಿ ಏಕ ಕವಾಗಿ ಮನಸ್ಸನ್ನು ಲಯುಗೊಳಿಸುವದೇ ಸಮಾಧಿಯೋಗವು. ಆ ಮನ ಸ್ಸಿನ ಲಯಕ್ಕೆ ಆಶ್ರಯಸ್ಥಾನವಾದ ಇಷ್ಟಲಿಂಗವನ್ನು ಭಕ್ತಿಕ್ರಿಯೆಗಳಿಂದ ಆಚರಿಸುತ್ತ ಎಡೆಬಿಡದೆ ಶರೀರದ ಮೇಲೆ ಧರಿಸಿರುವದೇ ಧಾರಣ ಯೋಗವು.

ಅನುಸಂಧಾನದಿಂದ ತಾರತಮ್ಯವಿಲ್ಲದೆ ಧ್ಯಾನವೇ ಧಾರಣವಾ ಗಿಯೂ ಆ ಧಾರಣವೇ ಸಮಾಧಿಯಾಗಿಯೂ ಇಲ್ಲವೆ ಸಮಾಧಿಯೇ ಧಾರಣವಾಗಿಯೂ ಧ್ಯಾನವಾಗಿಯೂ ಹೀಗೆ ಇವು ಒಂದನ್ನೊಂದು ಎಡೆಬಿಡದೆ ಆಶ್ರಯಿಸಿಕೊಂಡಿರುವದೇ ಶಿವಯೋಗವು.

## ವೀರಶೈವರಿಗೆ ಉಪಾಧಿ ವಶದಿಂದ ಬಂದ ಯೋಗದ ಮಹತ್ವವು ರುಚಿಸದು.

ಅಷ್ಟಾಂಗ ಯೋಗದಲ್ಲಿ ಮೊದಲಿನ ಐದನ್ನು ಅಂದರೆ ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ ಇವು ಕರ್ಮಸಂ ಬಂಧವಾದವುಗಳೆಂದು ಅವುಗಳನ್ನು ಬಿಡುವುದಾದರೆ ಅವುಗಳಿಂದ ಬರುವ ಫಲವು ವೀರಶೈವರಿಗೆ ಹೇಗೆ ಲಭಿಸುವದು, ಅಲ್ಲದೆ ಆ ಯೋಗಗಳ ಸಾಧನವುಳ್ಳವರ ಶರೀರವು ಸುಂದರವಾಗುವದೂ, ಹಸಿವು, ನೀರಡಿಕೆ, ನಿದ್ರೆಗಳನ್ನು ತಡೆಯುವದೂ, ದೀರ್ಘಾಯುಗಳನ್ನಾಗಿ ಮಾಡುವದೂ (ಅಂದರೆ ಅವರು ಸಮಾಧಿಸ್ಥರಾಗಿ ಕೆಲವು ವೇಳೆ ಮರಣವನ್ನು ಕೂಡ

ತಪ್ಪಿಸುವರು), ಇವಲ್ಲದೆ ಇನ್ನೂ ಎಷ್ಟೆಷ್ಟೋ ಸೃಷ್ಟಿ ಚಮತ್ಕಾರದ ಮಹತ್ವಗಳನ್ನು ಮಾಡುವದೂ, ಇವೆಲ್ಲ ಧ್ಯಾನ-ಧಾರಣ-ಸಮಾಧಿಗಳಿಂದ ಕೂಡಿದ ಶಿವಯೋಗದಲ್ಲಿ ಸಾಧಿಸುವದೇ ಹೇಗೆ? ಎಂಬುದಕ್ಕೆ ಮೊಗ್ಗೆಯಮಾಯಿದೇವರ ಉತ್ತರವು ಏನೆಂದರೆ:—

ಕ್ಷುತ್ತೃಷೆ ನಿದ್ರೆಯಿಲ್ಲದವರೇ ಪಿರಿಯರ್ ಪರಿಪೂಜ್ಯರಾದೊಡೀ ।
ಕ್ಷುತ್ತೃಷೆ ನಿದ್ರೆಯಿಲ್ಲದಿಹ ಕಲ್ಮರ ಮಟ್ಟಿಗಳೇ ಸುಪೂಜ್ಯರೇ ॥
ಕ್ಷುತ್ತೃಷೆ ನಿದ್ರೆಯೇ ಕೊರತೆಯಲ್ಲ ಮಹತ್ವ ಗುಣಕ್ಕೆ ಶುದ್ಧಚಿ ।
ನ್ಮಾತ್ರ ಪವಿತ್ರಗಾತ್ರರನದೆಂತರಿವರ್ ಪಶುಗಳ್ ಶಿವಾಧವಾ ॥

ಅರ್ಥ:— ಹಸಿವು ನೀರಡಿಕೆ ನಿದ್ರೆಗಳು ಇಲ್ಲದಿದ್ದವರೇ ದೊಡ್ಡವರೂ ಪೂಜ್ಯರೂ ಆಗುವದಾದರೆ ಆ ಗುಣಗಳಿಲ್ಲದ ಕಲ್ಲು ಮರ ಮಣ್ಣುಗಳೇ ಅತ್ಯಂತ ಪೂಜ್ಯವಾಗುವವೇ? ಅದು ಕಾರಣ ಹಸಿವು ನೀರಡಿಕೆ ಮೊದಲಾದವುಗಳಿದ್ದ ಮಾತ್ರದಿಂದ ಶಿವಯೋಗಿಗಳಾದ ಶರಣರ ಮಹತ್ವಕ್ಕೆ ಕುಂದೇನೂ ಇಲ್ಲ; ಶಿವಜ್ಞಾನದಿಂದ ಶುದ್ಧ ಶರೀರಿಗಳಾದವರ ಸ್ವರೂಪವನ್ನು ಅಜ್ಞಾನಿಗಳು ಹೇಗೆ ತಿಳಿಯುವರು? ಎಂದು ಉತ್ತರ ಕೊಟ್ಟಿರುವರು.

## ಶರಣನ ಶರೀರವು ಹೇಗಿರುವದು?

ದೇಹವು ಚರ್ಮ ರಕ್ತ ಮಾಂಸಗಳಿಂದ ಕೂಡಿದ್ದಾಗಿರುವದು. ಅಂತಹ ದೇಹಕ್ಕೆ ಹಸಿವು ನೀರಡಿಕೆ ಮೊದಲಾದ ಗುಣಗಳು ಇದ್ದೇ ಇರುವದು ಸಹಜವೆಂದು ತಿಳಿದ ಮಹಸೀಯರು ಆ ದೇಹ ಗುಣವನ್ನು ವಿಚಾರ ಮಾಡುವದಿಲ್ಲ. ಆ ಸಂಬಂಧವಾಗಿ ಆಡುವ ದುಡುಕಿನ ಮಾತು ಹಾಗಿರಲಿ. ಶಿವಯೋಗಿಗಳ ಮಹತ್ವವನ್ನು ನಿರ್ಧರಿಸುವದಕ್ಕೆ ಆ ದೇಹ ಧರ್ಮವು ಪ್ರಮಾಣವಲ್ಲ. ಅವರಲ್ಲಿ ಪ್ರಕಾಶಿಸುವ ಶಿವಜ್ಞಾನವೇ ಪ್ರಮಾಣವು.

ಪಂಚಭೂತಾತ್ಮಕ ದೇಹಗಳಲ್ಲಿ ಆಕಾಶವಿಕಾರವುಳ್ಳ ದೇಹವೇ ಆಗಲಿ, ವಾಯುಮಯ ಶರೀರವೇ ಆಗಲಿ, ಜಲಾತ್ಮಕ ತನುವೇ ಆಗಲಿ, ಪೃಥ್ವೀ ವಿಕಾರವೇ ಇರಲಿ, ಹೀಗೆ ಯಾವ ಬಗೆಯ ಶರೀರವಾದರೂ ಧರ್ಮ ಸಂಬಂಧವಾಗಿ ಅದಕ್ಕೆ ಹೆಚ್ಚು ಕಡಿಮೆಯೆಂಬುದಿಲ್ಲ. ರೂಪದಿಂದ ಗುಣಕ್ಕೆ ಅಡ್ಡಿಯಿಲ್ಲದಂತೆ ತ್ವಚ ಮಾಂಸ ರಕ್ತಾದಿ ಧಾತುಮಯವಾದ

ದೇಹವು ಶರಣನಿಗಿದ್ದರೂ ಅದು ಅವನ ಜೀವನ್ಮುಕ್ತಿಗೆ ತೊಡಕಾಗು ವದಿಲ್ಲ. ರಕ್ತಮಾಂಸಾದಿಮಯವಲ್ಲದ ದೇಹವಿದ್ದ ಮಾತ್ರಕ್ಕೆ ಅದು ಜನನ ಮರಣಾದಿಗಳನ್ನು ಗೆಲ್ಲುವದಿಲ್ಲ. ಅದು ಹೇಗೆಂದರೆ ಸೂಕ್ಷ್ಮ ಶರೀರವು ರಕ್ತಮಾಂಸಮಯವಲ್ಲದಿರುವದರಿಂದ ಅದಕ್ಕೆ ಜನನ ಮರಣಗಳನ್ನು ಗೆಲ್ಲು ವದಕ್ಕಾಗುವದಿಲ್ಲ. ಆದ್ದರಿಂದ ಅಂಗಲಿಂಗ ಸಾಮರಸ್ಯಗೊಂಡ ಶಿವ ಶರಣನೇ ಜನನ ಮರಣಗಳನ್ನು ಗೆದ್ದವನು. ಇಂತಹ ಶರಣನ ದೇಹವು ಹೇಗಿದ್ದರೇನು ?

ಕೆಲವು ಧರ್ಮಾಭಿಮಾನಿಗಳು ಶರಣರಿಗೆ ಮಾಂಸ ಶರೀರವಿಲ್ಲ ವೆಂದು ವಾದಿಸುತ್ತಿರುವರು. ಅದು ತಪ್ಪು. ಯಾಕೆಂದರೆ ದೇಹವು ಧಾತುವಿಕಾರವಾಗಿಯೇ ಇರುವದು. ಧಾತುವಿಕಾರವಲ್ಲದಿರುವದರಿಂದ ಘನತೆ ಏನೂ ಇಲ್ಲ ಎಂದು ಹೇಳುವದಕ್ಕೂ ಒಪ್ಪಿಗೆಯಾಗಲಾರದು. ಇಲ್ಲಿ ಹೇಳುವದಿಷ್ಟೇ ? ಶರಣನು ಲಿಂಗಾಂಗ ಸಮರಸಭಕ್ತಿಯಿಂದುಂಟಾದ ಮಹಾನಂದದಲ್ಲಿ ಮುಳುಗಿರುವನಾದ ಕಾರಣ ಅವನ ಶರೀರವು ಧಾತು ವಿಕಾರವುಳ್ಳುದಾಗಿದ್ದರೂ ಆ ಗುಣಗಳ ಲೇಪವಿಲ್ಲದಿರುವದರಿಂದ ಧಾತುಮ ಯವಲ್ಲವೆಂದು ಹೇಳುವರು. ಆದರೆ ದೇಹಕ್ಕೆ ಮಹತ್ವ ಕೊಟ್ಟಿಲ್ಲ.

ವೀರಶೈವ ಶರಣರಲ್ಲಿಯೇ ಪ್ರಭುದೇವ ಮೊದಲಾದವರು ತಮ್ಮ ದೇಹಧರ್ಮ ಪ್ರಭಾವದಿಂದ ಹೆಚ್ಚಳವನ್ನು ಹೊಂದಲಿಲ್ಲವೇ ಎಂಬು ದಕ್ಕೆ ಮಾಯಿದೇವರು —

ಅನಿಮಿಷನಸ್ಥಿಮಾತ್ರ ತನುವಾಗಿರನೇ ? ಬಸವಂ ತ್ವಗಾದಿಸಂ ।
ಜನಿತವಪುಷ್ಕನಾಗಿರನೆ ಯಲ್ಲಮನಂಶಕವರ್ಜಕಾಯನಾ
ಗಿ ನೆಳಲು ಹೆಜ್ಜೆಯಿಲ್ಲದಿರನೆ ಸುಖಪ್ರಪೂರ್ಣವಾ ।
ಸನೆಯ ಶರೀರವೊಂದೆ ಪರಮಪ್ರಭುವೇ ಮಹದೈಪುರೀಶ್ವರಾ ॥

ಅರ್ಥ : – ಅನಿಮಿಷಯ್ಯನು ಬರೇ ಎಲುಬಿನ ಶರೀರವುಳ್ಳವನಾ ಗಿರಲಿಲ್ಲವೇ ? ಬಸವೇಶ್ವರನು ಎಲ್ಲರಂತೆ ತ್ವಚ ಮಾಂಸಾದಿಗಳಿಂದ ಕೂಡಿದ ಶರೀರವುಳ್ಳವನಾಗಿರಲಿಲ್ಲವೇ? ಅಲ್ಲಮ ಪ್ರಭುವು ಕರಚರಣಾದಿ ಅವಯವಗಳಿಲ್ಲದ ಮತ್ತು ನೆರಳು ಸಹ ಕಾಣದ ಶರೀರವುಳ್ಳವನಾಗಿರ ಲಿಲ್ಲವೇ ? ಅದುದರಿಂದ ಲಿಂಗಾಂಗ ಸಾಮರಸ್ಯ ಆನಂದ ಪರಿಪೂರ್ಣ ನಾದ ಶರಣನ ದೇಹವು ಧಾತುವಿಕಾರವಾಗಿದ್ದರೂ ಅಲ್ಲದಿದ್ದರೂ ಒಂದೇ ಎಂಬ ಭಾವವು.

## ಮಹತ್ವಗಳು ಅಥವಾ ಸಿದ್ಧಿಗಳು.

ಮಹತ್ವಗಳು ಆಗುವದರಿಂದ ಮತ್ತು ಅವುಗಳನ್ನು ಮಾಡುವದರಿಂದ ಮನುಷ್ಯನ ವೃತ್ತಿಯು ಬೇರೆ ತರದ್ದಾಗುವದು. ಅಂದರೆ ಯಾವ ಗುಣಗಳನ್ನು ಬಿಡಲು ಯೋಗಸಾಧನ ಮಾಡುವರೋ ಅವೆಲ್ಲ ಈ ಮಹತ್ವಗಳ ವಶದಿಂದ ತನ್ನಿಂದ ತಾನೇ ಬಂದು ಕೂಡುವವು. ಇವೆಲ್ಲವುಗಳನ್ನು ತೋರಿಸುವದರಿಂದ ಸ್ವಾರ್ಥ ಸಾಧಿಸುವ ಗುಣವು ಹೆಚ್ಚಾಗುವದು. ಇವರನ್ನು ಯಾರಾದರೂ ಹೀಯಾಳಿಸಿದರೆ ಸಿಟ್ಟಿನಿಂದ ತಮ್ಮ ಯೋಗ ಸಾಮರ್ಥ್ಯವನ್ನು ತೋರಿಸಿ ಶಾಪಕೊಟ್ಟ ಉದಾಹರಣೆಗಳೆಷ್ಟೋ ಇರುವವು. ಇವು ಶಿವಯೋಗಿಗಳಿಗೆ ಯೋಗ್ಯವಲ್ಲವು ಹೇಗೆಂದರೆ—

ಪತಿಹಿತ ಧರ್ಮಚಾರಿಣಿಯೆನಿಪ್ಪ ಮಹಾಸತಿ ವೇಶಿವಾಳ್ವವೋಲ್ ।
ಚತುರತೆರೀತಿ ಧಾತು ಕಡುಜಾಣ್ಮೆ ವೃದೂಕ್ತಿ ಬಹೂಪಚಾರಸಂ ॥
ಗತಿಯದನೆತ್ತಬಲ್ಲಳು ಶಿವೈಕ ಸಮರ್ಪಿತ ಚಿತ್ತದಿಂ ವೃಥ ।
ವ್ರತವೆನಿಸಿರ್ಪ ಭಕ್ತನುಳಿದಂಗಮನೆಂತರಿವಂ ಶಿವಾಧವಾ ॥ ೮೨ ॥

ಅರ್ಥ:— ತನ್ನ ಪತಿಯೊಬ್ಬನಿಗೇ ಹಿತವಾದ ಕಾರ್ಯಗಳನ್ನು ಮಾಡುವದರಲ್ಲಿ ತತ್ಪರಳಾದ ಮಹಾಪತಿವ್ರತೆಯು ಸೂಳೆಯಂತೆ ಚಾತುರ್ಯ ಬೆಡಗುಗಳು ಹಲವು ಜನರ ರೀತಿಗನುಸಾರವಾಗಿ ನಡೆ, ಮೇಲ್ಮಾತು, ತರತರದ ಉಪಚಾರ ಮಾಡುವದನ್ನು ಬಲ್ಲಳೇ? ಅದರಂತೆಯೇ ಶಿವನಿಗೆ ತನ್ನ ಚಿತ್ತವನ್ನೆಲ್ಲ ಅರ್ಪಿಸಿ ಶಿವೈಕ ವ್ರತ ತತ್ಪರನಾದ ಶರಣನು ಶಿವೇತರಾಚಾರಗಳನ್ನು ನಡೆಯಿಸುವದುಂಟೇ?

ಕಾಮ ಕ್ರೋಧಾದಿಗಳನ್ನು ಅಳಿದಿರುವದರಿಂದಲೇ ಅವರ ಮಹತ್ವವು ನಡೆಯುತ್ತಿರುವಾಗ ಅವು ಪುನಃ ಅವರಲ್ಲಿ ಹೇಗೆ ಸೇರಿಕೊಳ್ಳುವವು? ಯಾರೂ ಆ ಗುಣಗಳಿಂದ ಕೂಡಿರಬೇಕೆಂದು ಬಯಸುವದಿಲ್ಲ. ಆದರೆ ಆ ಗುಣಗಳ ಪ್ರಭಾವವೇ ಅಂತಹದಿರುವದು. ಅದುದರಿಂದ ಅವರೇನು ಮಾಡಬಹುದು? ಅದು ಹೇಗೆಂದರೆ—

ಸುಖವಂ ಕಾಂಕ್ಷಿಪರೈಸೆ ಸರ್ವರುಮನೇಕಾಯಾಸದಿಂ ಯತ್ನದಿಂ ।
ದಖಿಲೋಪಾಯದಿನಲ್ಲದೂಹಿಸರೆ ನಾನಾ ಯುಕ್ತಿಯಿಂ ದುಃಖಮಂ॥
ಸುಖಕೆಂದಿಟ್ಟ ಸೊಡರ್ ನಿಮಿರ್ದ್ದುರ್ಮನೆಯಂ ಸುಟ್ಟಂದದಿಂ ದುಃಖಮಂ।
ಸುಖಕಾಮತ್ವವೆ ಮಾಳ್ಪುದೆಂತದು ಭವತ್ ಕೃತ್ಯಂ ಶಿವಾವಲ್ಲಭಾ॥೫೮॥

ಅರ್ಥ :— ಎಲ್ಲರೂ ಬಹು ಪ್ರಯಾಸದಿಂದಲೂ ನಾನಾ ಪ್ರಯತ್ನಗಳಿಂದಲೂ ಯುಕ್ತಿಗಳಿಂದಲೂ ತವುಗೆ ಸೌಖ್ಯವನ್ನುಂಟು ಮಾಡಿಕೊಳ್ಳಬೇಕೆಂದು ಅಪೇಕ್ಷಿಸುವರೇ ಹೊರತು ದುಃಖವುಂಟಾಗಬೇಕೆಂದು ಬಯಸುವದಿಲ್ಲ. ಆದರೆ ಬೆಳಕಿಗಾಗಿ (ಸೌಖ್ಯಕ್ಕಾಗಿ) ಇಟ್ಟ ದೀಪವು ಹೊತ್ತಿಕೊಂಡು ಮನೆಯನ್ನೇ ಸುಟ್ಟ ಹಾಗೆ ಆ ಸತ್ಪುರುಷರುಗಳ ಸುಖಾಪೇಕ್ಷೆಯೇ ಅವರಿಗೆ ದುಃಖವನ್ನುಂಟುಮಾಡಬೇಕಾದರೆ ಎಲೈ ಪರಶಿವನೇ ಅದು ನೀನು ಮಾಡಿದ ಮಾಟವಲ್ಲವೇ?

ಮತ್ತೂ

ಅರಿಯುಂ ವ್ಯಾಘ್ರಮುನಗ್ನಿಯುಂ ಭುಜಗನಂ ದಾರಿದ್ರ್ಯಮುಂರೋಗಮುಂ।
ಜರೆಯುಂ ಮೃತ್ಯುಮುನಕ್ಕಟಾ ಬಿಡದರುಂಟೇ ಲೋಕದೊಳ್ಬಿಟ್ಟರೇ ॥
ಶ್ವರಸೌಖ್ಯಾಸ್ಪದರಾಗಬೇಕೆನುತೆ ಯತ್ನಂಗೈವರ್ಗೆ ಸಲ್ಲದಾ।
ದರದಿಂ ಕೂಡಿರಬೇಕೆನುತ್ತಿಹರೆ ಧೀಮಂತರ್ ಶಿವಾವಲ್ಲಭಾ ॥

ಲೋಕದಲ್ಲಿ ಶತ್ರುವನ್ನೂ, ಹುಲಿಯನ್ನೂ, ಬೆಂಕಿಯನ್ನೂ, ಬಡತನವನ್ನೂ, ರೋಗವನ್ನೂ, ಮುಪ್ಪನ್ನೂ, ಮರಣವನ್ನೂ ಬಿಡದೆ ಕಟ್ಟಿಕೊಂಡಿರಬೇಕೆನ್ನುವವರುಂಟೇ? ಅವುಗಳನ್ನು ಬಿಟ್ಟವರೇ ಬುದ್ಧಿಶಾಲಿಗಳು. ಅಂಥವರು ಶಿವೈಕ್ಯ ಸುಖಾನುಭವಿಗಳಾಗಬೇಕೆಂದು ಪ್ರಯತ್ನಿಸುವರೇ ಹೊರತು ಕಾಮಾದಿ ಷಡ್ರಿಪುಗಳಲ್ಲಿ ಪ್ರೀತಿಯಿಂದ ಕೂಡಿರಬೇಕೆಂದು ಬಯಸುವರೇ?

ಕಾಮಕ್ರೋಧಾದಿ ರಿಪುಗಳು ಬಿಟ್ಟು ಹೋಗುವಾಗ ಅವನ್ನು ಬಿಡದಂತೆ ಹಿಡಿದುಕೊಂಡವರಾರಾದರೂ ಇರುವರೇ? ಮತ್ತು ಅವು ತನ್ನನ್ನು ಹಿಡಿಯುವಾಗ ಆ ಕಾಮಾದಿಗಳ ಕೂಟವನ್ನು ಬಿಡಬೇಕು ಎಂದು ಮಾತಾಡುವವರು ಆ ಕಾಮಾದಿಗಳನ್ನು ಬಲವಾಗಿ ಹಿಡಿದುಕೊಳ್ಳುವಂತೆ ಮಾಡುವ ದೇವರ ಮಾಯೆಯನ್ನು ದೂರೀಕರಿಸುವದು ಮಾತಾಡಿದಂತೆ ಸುಲಭವಲ್ಲ.

ಆದುದರಿಂದ ದೇಹ ಸುಖವನ್ನು ಬೆಳಿಸುವ ಇಲ್ಲವೆ ಮಹತ್ವವನ್ನು ಬೆಳಿಯಿಸುವ ಯೋಗದ ಪೂರ್ವಾಂಗವನ್ನು ವೀರಶೈವರು ತ್ಯಜಿಸತಕ್ಕದ್ದು.

ಹಾಗಾದರೆ ದೇವರೊಡಗೂಡುವದು ಹೇಗೆ? ಆತ್ಮತೇಜೋಬಲವನ್ನು ಬೆಳೆಯಿಸುವ ಯೋಗಸಾಧನೆಯಲ್ಲಿಯೇ ಕಾಮಕ್ರೋಧಾದಿಗಳು

ಹುಟ್ಟಿದರೆ, ಇಲ್ಲವೆ ಅವನ್ನು ಬಿಡುವದು ಮನುಷ್ಯನಿಗೆ ಆಗದಿದ್ದರೆ, ಈ ಹೆಂಡರು ಮಕ್ಕಳು ಉದ್ಯೋಗ ಇವೆಲ್ಲವುಗಳನ್ನು ಕಟ್ಟಿ ಕೊಂಡಿರುವ ಸಂಸಾರಿಗಳಿಗೆ ಅವುಗಳನ್ನು ಬಿಡುವದು ಹೇಗಾಗುವದು ? ನಾನಾ ವಿಧವಾದ ಈ ಸಂಸಾರ ತಾಪದಲ್ಲಿ ಧ್ಯಾನ-ಧಾರಣ-ಸಮಾಧಿ ಯಿಂದೊಡಗೂಡಿದ ಪೂಜಾಫಲವು ಹೇಗೆ ಲಭಿಸುವದು ? ಎಲ್ಲವನ್ನೂ ದಾನಮಾಡಿ ಸರ್ವಸಂಗ ಪರಿತ್ಯಾಗ ಮಾಡಿದವರಿಗಲ್ಲವೇ ಇಂಥ ಪೂಜಾ ಫಲವು ಲಭಿಸಿ, ಕಾಮ-ಕ್ರೋಧಾದಿಗಳು ನಷ್ಟವಾಗುವದು ? ಎಂಬ ಸಂಶಯಕ್ಕೆ ಇವರು ಜ್ಞಾನಸಂಪಾದನೆಯ ಕಾರಣದಿಂದ ಪ್ರಪಂಚ ವನ್ನು ತೊರೆದು ಭಿಕ್ಷಾಟನೆಯನ್ನು ಮಾಡುವವರಲ್ಲಿ ಕಾಮಾದಿ ಷಡ್ರಿಪು ಗಳು ಹೇಗೆ ಗೋಚರಿಸುತ್ತವೆಂಬುದಕ್ಕೆ—

ಬೇಡುವುದೀಗ ಕಾಮಮದು ಬಾರದುದೇ ಕಡುಕೋಪಮಂತದ ।
ಕ್ಕೀಡಹುದೀಗ ಲೋಭಮದರಿಂ ಮರೆದಿರ್ಪುದೆ ಮೋಹಮಲ್ಲಿಪೊ ॥
ಕ್ಕಾಡುವುದೀಗ ದುರ್ಮದಮದಂ ಬಲಿದಿರ್ಪುದು ತಾನೆ ಮತ್ಸರಂ ।
ಬೇಡುವ ಪಾಪಮಿಷ್ಟು ಪರಮಪ್ರಭುವೇ ಮಹದೈಪುರೀಶ್ವರಾ ॥

ಅರ್ಥಃ— ಒಂದು ವಸ್ತುವನ್ನು ಬೇಕೆಂದು ಅಪೇಕ್ಷಿಸುವದೇ ಕಾಮವು. ಆ ವಸ್ತುವು ದೊರೆಯದೇ ಹೋದರೆ ಆಗಲೇ ಕೋಪವು ಹುಟ್ಟುವದು. ಬೇಡಿದ ವಸ್ತುವು ದೊರೆದರೆ ಅದು ಕಳೆಯದಂತೆ ಕಾಯುತ್ತಿರುವದೇ ಲೋಭವು. ತನಗೆ ಬೇಕಾದ ವಸ್ತುವಿನ ದೆಶೆಯಿಂದ ವಿವೇಕಗೆಟ್ಟಿರುವದೇ ಮೋಹವು. ಆ ವಸ್ತು ಪ್ರಾಪ್ತಿಯ ಆನಂದದಲ್ಲಿ ಮುಳುಗಾಡುತ್ತ ಸೊಕ್ಕಿರುವದೇ ಮದವು. ದೊರೆದ ವಸ್ತುವನ್ನು ವಶ ಪಡಿಸಿಕೊಂಡು ಹೆಮ್ಮೆ ಪಡುತ್ತಿರುವದೇ ಮಾತ್ಸರ್ಯವು. ವಿಚಾರಿಸಿದರೆ ಬೇಡುವದೆಂಬ ಒಂದೇ ಪಾಪಕಾರ್ಯದಿಂದಲೇ ಈ ಕಾಮಾದಿಗಳೆಲ್ಲವೂ ಹುಟ್ಟುವವೆಂದು ಗೊತ್ತಾಗುವದು.

## ಬೇಡಿಕೊಳ್ಳುವದು.

ಬೇಡುವನಂ ವಿಚಾರಿಪೊಡೆ ಭಕ್ತನೆಯಲ್ಲಭಿವಾಂಛಿತಾರ್ಥಮಂ ।
ಬೇಡಿಸಿಕೊಂಬವಂ ಕಡೆಗೆ ದೇವನೆಯಲ್ಲುಭಯೈಕಮಿಂತಿವಂ ।
ಕೂಡುತಿರಲ್ ಭವಂ ಭವಮನುಳ್ಳವನೇ ಭವಿಯಾಭವಿತ್ವಮಂ ॥
ಮಾಡುವ ಭಕ್ತಿಯೇಕೆ ಪರಮಪ್ರಭುವೇ ಮಹದೈಪುರೀಶ್ವರಾ ॥

ಅರ್ಥಃ — ಕಾಮ್ಯಕರ್ಮಗಳನ್ನು ಮಾಡಿ ತನ್ನ ಇಷ್ಟದೈವವನ್ನು ಕುರಿತು ವರ ಪ್ರಾರ್ಥನೆ ಮಾಡತಕ್ಕವನು ಭಕ್ತನೇ? ಅಲ್ಲ. ಏಕೆಂದರೆ, ಭಕ್ತನು ನಿಷ್ಕಾಮ ಭಕ್ತಿಯಿಂದ ಪರಿಪೂರ್ಣನಾಗಿರಬೇಕು. ಇಷ್ಟಾರ್ಥಕ್ಕಾಗಿ ಭಕ್ತರಿಂದ ಬೇಡಿಸಿಕೊಳ್ಳತಕ್ಕವನು ದೇವನೇ ಅಲ್ಲ? (ಏಕೆಂದರೆ — ಭಕ್ತರಲ್ಲಿ ನಿರ್ವ್ಯಾಜಕಾರುಣ್ಯವುಳ್ಳವನು ಈಶ್ವರನು.) ಆದುದರಿಂದ ಬೇಡುವ ಬೇಡಿಸಿಕೊಳ್ಳುವವರಿಬ್ಬರೂ ಭಕ್ತನೂ ಅಲ್ಲ ದೇವನೂ ಅಲ್ಲ. ಇಬ್ಬರೂ ಒಂದೇ. ಈ ಬೇಡುವಿಕೆ. ಬೇಡಿಸಿಕೊಳ್ಳುವಿಕೆಗಳೆಂಬೆರಡೂ ಭವಮೂಲವಾದವುಗಳು. ಅಂಥ ಭವದಿಂದ ಬದ್ಧನಾದವನು ಭಕ್ತನು ಅಲ್ಲ, ಆವನು ಭವಿಯು. ಅಂಥ ಭವಿತ್ವವನ್ನುಂಟುಮಾಡುವ ಸಕಾಮಭಕ್ತಿಯಿಂದ ಪ್ರಯೋಜನವೇನು?

ಬೇಡದ ಮುನ್ನ ತಾನೆ ಕುಡುವಾತನೆ ದೇವನಭೀಷ್ಟಸಿದ್ಧಿಯಂ ।
ಬೇಡದೆ ಕಾಡದೆಯ್ದುವನೆ ಭಕ್ತನ ಯತ್ನದಿನಪ್ರಯಾಸದಿಂ ॥
ಬೇಡುವ ಕಾಡುವಾಯಸಗೊಳುತ್ತಿಹ ಭಕ್ತಿಯು ಪಾಪಮಿಂತಿದಂ ।
ಬೇಡದ ಹಾಗೆ ಮಾಡು ಪರಮಪ್ರಭುವೇ ಮಹದೈಸುರೀಶ್ವರಾ ॥

ಅರ್ಥಃ— ಭಕ್ತನು ಪ್ರಾರ್ಥಿಸುವದಕ್ಕಿಂತ ಮೊದಲೇ ತಾನಾಗಿ ಅವನಿಷ್ಟಾರ್ಥವನ್ನು ಕೊಡತಕ್ಕವನೇ ದೇವನು. ಯತ್ನ ಪ್ರಯಾಸ ಬೇಡುವಿಕೆ ಕಾಡುವಿಕೆಗಳೊಂದೂ ಇಲ್ಲದೆ ದೇವನನ್ನು ಸೇವಿಸುವವನೇ ಭಕ್ತನು. ಬೇಡುವ ಕಾಡುವ ಆಯಾಸದಿಂದ ಕೂಡಿ ಆಚರಿಸುವ ಭಕ್ತಿ ಯಾವುದುಂಟೋ ಅದೇ ಪಾಪಾಚರಣೆಯು. ಅಂತಹ ಸಕಾಮವಾದ ಭಕ್ತಿಯನ್ನು ಅಪೇಕ್ಷಿಸದೆ ಇರುವಂತೆ ನನಗೆ ಅನುಗ್ರಹಿಸು.

ಪರರನ್ನು ಬೇಡುವದರಿಂದ ಮುಖಸ್ಸು ಹೇಗಾಗುತ್ತದೆಂಬದನ್ನು ಈ ಕೆಳಗಿನ ಪದ್ಯದಿಂದ ವಿವರಿಸಿರುವನು.

ಬೇಡುವವಂಗೆ ಬೇಡುತಿಹ ದೈನ್ಯಮುದೊಂದುರೆ ಬೇಡಿ ಬರ್ಪಹೆ ।
ಗ್ಗೋಡಿನ ವಿತ್ತದಿಂದಕಟ ಪೂರ್ಣಮೆನಿಪ್ಪುದೆ ಮತ್ತೆ ಮತ್ತೆ ತಾಂ ॥
ಬೇಡಿಸುತಿರ್ಪುದೈಸೆ ಸಿನೆ ಬೇಡದವಂಗದು ಪೂರ್ಣಮಾಗಿ ಕೈ ।
ಗೂಡಿಸುತಿಕ್ಕುತಿರ್ಕು ಪರಮಪ್ರಭುವೇ ಮಹದೈಸುರೀಶ್ವರಾ ॥

ಅರ್ಥಃ — ಪರರನ್ನು ಕಂಡು ಯಾಚಿಸುವವರಲ್ಲಿರುವ ಬಡತನವು ಆ ಅನ್ಯರು ಕೊಡುವ ಮಿಗಿಲಾದ ಹಣದಿಂದ ತುಂಬಿಹೋಗಿ

ಇನ್ನು ಸಾಕೆಂದು ಹೇಳಿಸಿಕೊಳ್ಳುವುದೆಂದಿಗೂ ಇಲ್ಲ. ಹಣವು ದೊರೆದಷ್ಟೂ ಮತ್ತೆ ಮತ್ತೆ ದ್ರವ್ಯಾಕಾಂಕ್ಷೆಯು ಹೆಚ್ಚಿ ಮರಳಿ ಬೇಡುತ್ತಿರುವಂತೆಯೇ ಮಾಡುವದು. ಆದುದರಿಂದ ಒಂದು ವಸ್ತುವಿನ ಅಪೇಕ್ಷೆಯನ್ನು ಸ್ವಲ್ಪವೂ ಮಾಡದೆ ಇದ್ದವನಿಗೆ ಆ ನಿಷ್ಕಾಮತ್ವವು ಪರಿತೃಪ್ತಿಯನ್ನುಂಟು ಮಾಡುವದು.

## ಹಾಗಾದರೆ ಬೇಡುವದೆಂಬುದಿಲ್ಲವೇ? ಇದೆ.

ಬೇಡುವದೇನು ಪಾಪಮೆ ಸದಾಶಿವ ನಿನ್ನನೆ ಬೇಡದನ್ಯರಂ।
ಬೇಡದ ಸಿದ್ಧಿಯಂ ಪಡೆಯದಿರ್ಪುದರಿಂದಮೆ ಪಾಪಮಾದುದಾ
ಬೇಡುವ ಪಾಪಮುಂ ಮರೆದು ಮಾಡದೆ ನಿಸ್ಪೃಹನಾಗಿ ನಿನ್ನ ನಾಂ।
ಬೇಡದ ಹಾಗೆ ಮಾಡು ಪರಮಪ್ರಭುವೇ ಮಹದೈಪುರೀಶ್ವರಾ ॥

ಅರ್ಥಃ— ಬೇಡುವುದೆಲ್ಲವೂ ಪಾಪವೇ? ದೇವನೇ, ನಿನ್ನನೊಬ್ಬನನ್ನಲ್ಲದೆ ಅನ್ಯರನ್ನು ಬೇಡದಂಥ ಸಿದ್ಧಿಯನ್ನು ಪಡೆಯದಿರುವದರಿಂದಲೇ ಪಾಪವಾಯಿತು. ಅಂಥ ಬೇಡುವ ಪಾಪವನ್ನು (ಅಂದರೆ ಇಚ್ಛಿಸಿ ಯಾಚನೆಯನ್ನು ಮಾಡುವದನ್ನು) ಮರೆತಾದರೂ ಮಾಡದಂತೆ ನಿನ್ನಲ್ಲಿ ಇಚ್ಛಿಸಿ ನಿಸ್ಪೃಹನನ್ನಾಗಿ ಮಾಡು. (ಸಕಾಮ ಭಕ್ತಿಯನ್ನು ತೊರೆದು ನಿಷ್ಕಾಮ ಭಕ್ತಿಯಿಂದ ಇರಬೇಕೆಂಬ ಭಾವ.)

ಇನ್ನು ದಾನದ ಮರ್ಮ- ಪೂಜಾ ರಹಸ್ಯ ಮುಂತಾದವುಗಳನ್ನು ಮುಂದೆ ಕ್ರಮವಾಗಿ ವಿವರಿಸಲಾಗುವದು. ಈ ವಿಷಯಗಳ ಬಗ್ಗೆ ವೀರಶೈವದಾಚರಣೆಯು ಹೇಗಿರಬೇಕೆಂಬುದನ್ನು ಮೊಗ್ಗೆಯಮಾಯಿದೇವರು ಬಹು ಮಾರ್ಮಿಕವಾಗಿ ಹೇಳಿದ್ದಾರೆ.

---

# ಓ ವಚನ ಲಿಂಗವೇ !

ನಿಸ್ಸೀಮ ಸೀಮೆಯಲಿ ನಿಂತ ಪರಿಪೂರ್ಣವೇ,
ಆಹಹ! ಗುಹ್ಯಾದ್ಗುಹ್ಯಭೇದಕೋಜ್ವಲಕಳೆಯೆ,
ವೇದ-ಶಾಸ್ತ್ರಾಗಮ-ಪುರಾಣ-ಶ್ರುತಿ-ಸ್ಮೃತ್ಯುಪನಿ-
ಷಚ್ಛಯವು, ಶುದ್ಧಭಾವಸ್ನಾತಪರಿಶುದ್ಧ
ವಾಗಿ, ನಿನ್ನಡಿಯಲ್ಲಿ ಕೈಮುಗಿದು ನಿಂದಿಹವು!
ಶುಭ್ರಾಂಬರವ ತಳೆದು, ಋಷಿ ಕನ್ಯೆಯೊಲು, ಭಾವ
ಭಕ್ತಿಯಲಿ, ಕಾವ್ಯ ಸುಂದರಿಯಿಲ್ಲಿ ಬಂದಿಹಳು!
ಅಕ್ಷರಾಕ್ಷರಕಹಹ! ಅಕ್ಷಯಾಬಾಧಿತಂ,
ಸತ್ತತ್ವಸುಸ್ವರಂ, ದೇವದೇವಸ್ವನಂ,
ತೊಳತೊಳಗಿ ಸ್ಫೂರ್ತಿಯಲಿ ಮೊಳಗುತಿದೆ! ಭೂವಲಯ
ವೈಷಮ್ಯ-ದಾರಿದ್ರ್ಯ-ದುಃಖ-ಚಿಂತಾ-ಶೋಕ
ಸಂತತಿಯು, ನಿನ್ನ ಮಹಿಮೋತ್ಕರದಿ, ನಿತ್ಯ ಶಾ
ಶ್ವತ ಶಾಂತಿಯಲಿ ತೇಲಿ-ತೇಲುತಿದೆ! ಐಕ್ಯದಾ
ನಂದದಾ ಬೆಳ್ಬೆಳಗು ಸೂಸುತಿದೆ! 'ಜಗದಗಲ,
ಮುಗಿಲಗಲ, ಮಿಗಿಯಗಲ' ಕೈನೀಡಿ, ಮೈನೀಡಿ,
ನೀನೆಸೆವೆ ಸಂತತಂ! ಓ ವಚನ ಲಿಂಗವೇ!
ಹರಿವ ನದಿಯುರಿಯಗ್ನಿ ತೀಡುವೆಲರೊಲು ಮೆರೆವ
ಸರ್ವಾಂಗಲಿಂಗವೇ, ಓ ಪರಾತ್ಪರ ವಚನ
ವೇ, 'ನಮೋ ನಮೋ' ಎಂಬೆ, ಭಾವ ನಿರ್ಭರನಾಗಿ!

— ಈಶ್ವರ ಸಣಕಲ್ಲ

# ನಿಡುಮಾಮಿಡಿ ಮಠದ ಇತಿಹಾಸ.

ಲೇಖಾಂಕಃ- ೭

( ಲೇಖಕ:— ಎಂ. ಜಿ. ನಂಜುಂಡಾರಾಧ್ಯ 'ವಿಶಾರದ' ಸಿದ್ಧಗಂಗಾ ಗುರುಕುಲ )

ಪಂಡಿತಾರಾಧ್ಯ ಚರಿತ್ರೆಯಲ್ಲಿ ಚಂದ್ರಗುಂಡ ದೇಶಿಕೇಂದ್ರರ ಅನಂತರ ಇಮ್ಮಡಿ ಕರಿಬಸವ ದೇಶಿಕೇಂದ್ರ ಶಿವಾಚಾರ್ಯರ ಪ್ರಭಾವಗಳು ಉಕ್ತವಾಗಿವೆ. ಇಲ್ಲಿರುವ ಇಮ್ಮಡಿ, ಮುಮ್ಮಡಿ ಮುಂತಾದ ವಿಶೇಷಣಗಳು ಯಾವಾಗಲೂ 'ಎರಡನೆಯ, ಮೂರನೆಯ' ಎಂಬ ಅರ್ಥದಲ್ಲಿಯೇ ಉಪಯೋಗಿಸಲ್ಪಡುತ್ತವೆ. ಅದರಂತೆ ಆಂಧ್ರದಲ್ಲಿ 'ಮರಿ' ಎಂಬುದೂ ವ್ಯವಹಾರದಲ್ಲಿದೆ. ಅಥವಾ 'ಮರಿ = ಶಿಷ್ಯ' ಎಂಬರ್ಥದಲ್ಲಿಯೂ ಹೇಳಬಹುದಾಗಿದೆ. ಈ ಚರಿತ್ರೆಯಲ್ಲಿ 'ಕರಿಬಸವ, ಇಮ್ಮಡಿ ಕರಿಬಸವ, ಅಥವಾ ಮರಿ ಕರಿಬಸವ' ಹೀಗೆ ಮೂರ್ತಿಗಳು ಇದ್ದಂತೆ ತಿಳಿದು ಬರುತ್ತದೆ.

ತೃತೀಯಾಶ್ವಾಸದಲ್ಲಿ 'ಇಮ್ಮಡಿ ಕರಿಬಸವ' ಸ್ವಾಮಿಗಳ ಚರಿತ್ರೆಯು ಉಕ್ತವಾಗಿದೆ. ಆದ್ದರಿಂದ ಇವರ ಹಿಂದೆ 'ಕರಿಬಸವ' ಎಂಬ ಅಭಿಧಾನದ ಮೂರ್ತಿಗಳಿದ್ದೇ ಇರಬೇಕೆಂತಲೂ ಅವರ ನಂತರ ಈ ಅಭಿಧಾನವು ಇವರಿಗೆ ಬಂದಿರಬೇಕೆಂತಲೂ ವಿಚಾರಪರರಿಗೆ ವ್ಯಕ್ತವಾಗದಿರದು. ಇದಲ್ಲದೆ ಈ ಮಠದ ಅನೇಕ ಶಾಖಾ ಮಠಗಳಲ್ಲಿ 'ನಿಡುಮಾಮಿಡಿ ಕರಿಬಸವ ಸ್ವಾಮಿಗಳು' ಎಂಬ ಹೆಸರಿನ ಅನೇಕ ಗದ್ದಿಗೆಗಳಿದ್ದು ಅವರ ಚರಿತ್ರೆಯು ಈ 'ಪಂಡಿತಾರಾಧ್ಯ ಚರಿತ್ರೆ' ಯಲ್ಲಿ ಉಕ್ತವಾಗಿಲ್ಲವೆಂದು ಹಿಂದೆಯೇ ಹೇಳಲಾಗಿದೆ. ಅದು ಪುಲ್ಲಕವಿಯ ಸಂಗ್ರಹ ಕಾಲಕ್ಕೆ ಅಪೂರ್ಣವಾಗಿ ಉಪಲಬ್ಧವಾಗಿದೆ. ಆತನು ಅದನ್ನು ಒಟ್ಟಿಗೆ ಕೂಡಿಸಿದ್ದರೂ ಅದು ಇತಿಹಾಸಕ್ಕೆ ಅತ್ಯಧಿಕವಾದ ಕುಂದನ್ನುಂಟು ಮಾಡಿದೆ. ಸುಮಾರು ಒಂದೆರಡು ಶತಮಾನಗಳ ಚರಿತ್ರೆಯು ಇತಿಹಾಸ ಗರ್ಭದಲ್ಲಿ ಜೀರ್ಣವಾಗಿರುವುದು ವಿಷಾದಕರವಾದ ಸಂಗತಿಯಾಗಿದೆ.

**ಇಮ್ಮಡಿ ಕರಿಬಸವ ದೇಶಿಕೇಂದ್ರ ಶಿವಾಚಾರ್ಯರು.** (ಸು. ೧೫೦೦)

ಕಂ॥ ಧರಣೀಸ್ಥಲ ಮುನ ಯಿಮ್ಮಡಿ
ಕರಿಬಸವ ಸ್ವಾಮಿ ಶಿಷ್ಯಗಣ ಮುಲ ಚೇತನ್ ॥

ವಿರಿವಿಗ ಪೂಜಲು ಗೈಕೊನಿ
ಪರಮಾನಂದಾತ್ಮುಡಗು ಚು ಭಕ್ತಾದುಲತೊನ್ ॥

ಜಗದ್ಗುರು ಇಮ್ಮಡಿ ಕರಿಬಸವ ದೇಶಿಕೇಂದ್ರ ಶಿವಾಚಾರ್ಯರು ತಮ್ಮ ಗುರುವರ್ಯರಿಂದ ಉಪದೇಶವಂ ಪಡೆದು ಲೋಕೋದ್ಧಾರಾರ್ಥವಾಗಿ ದೇಶ ಸಂಚಾರಕ್ಕೆ ಹೊರಟು ರಾಜಾಧಿರಾಜರಿಂದ ಸನ್ಮಾನಗಳನ್ನು ಹೊಂದಿ ಪ್ರಸಿದ್ಧಿಗೆ ಬರುತ್ತಾರೆ. ಇವರು ಮೊದಲು ಗುಯಲೂರಿನಿಂದ ಹೊರಟು 'ಸೋಮಲಾಪುರ' ವೆಂಬ ನಗರಕ್ಕೆ ಅನತಿ ದೂರದಲ್ಲಿರುವ ಉದ್ಯಾನದಲ್ಲಿಳಿದು ಅಲ್ಲಿರ್ದ ಸುವರ್ಣಾವತಿ ನದಿಯಲ್ಲಿ ಅನುಷ್ಠಾನಾದಿಗಳನ್ನು ಪೂರೈಸುತ್ತಾರೆ.

ಸೋಮಲಾಪುರ ಎಂಬ ನಗರವು ಹಿಂದೆ ಬಹಳ ಪ್ರಸಿದ್ಧಿಯಾಗಿದ್ದಂತೆ ತಿಳಿದುಬರುತ್ತದೆ. 'ಸೋಮಂದೇನಹಳ್ಳಿ' ಎಂಬ ಹೆಸರಿನ ಒಂದು ಗ್ರಾಮವು ಇಂದಿಗೂ ಅಲ್ಲಿ ಅವಶೇಷವಾದ ಪ್ರಾಚೀನ ಕುರುಹುಗಳಿಂದ ಅಸ್ತಿತ್ವದಲ್ಲಿರುತ್ತದೆ. ಕವಿಯು ಇದನ್ನು '...ಅಮರಾವತಿಕಿನ್'॥ ತಕ್ಷಕ ಪುರಮುನ ಕಂಟೆನು ಲಕ್ಷಣಕರ ವೈನ ಸೋಮಲಾಪುರಮುನಕುನ್॥' ಎಂದು ಉಪಮಾನ ಕೊಟ್ಟಿರುತ್ತಾನೆ.

ಸೋಮಲಾಪುರವು ಬಹಳ ಹಿಂದಿನಿಂದಲೂ ಪ್ರಸಿದ್ಧವಾದ ರಾಜನಗರವಾಗಿದ್ದಂತೆ ಇತಿಹಾಸವಿದೆ. ವಿಜಯನಗರದ ಅರಸುಗಳ ಕಾಲಕ್ಕೆ ಅಲ್ಲಿಯ ರಾಜರು ವಿಜಯನಗರ ಪ್ರಭುತ್ವಕ್ಕೆ ಒಳಗಾದಂತೆ ತಿಳಿದುಬರುತ್ತದೆ. ವಿಜಯನಗರದ ಅರಸರು ಅವರನ್ನು ಜೈಸಿ ಅಲ್ಲಿಗೆ ಸಮೀಪದಲ್ಲಿರುವ 'ಪೆನುಗೊಂಡೆ'ಯನ್ನು ತಮ್ಮ ಕೇಂದ್ರವನ್ನಾಗಿ ಮಾಡಿಕೊಂಡಿದ್ದಂತೆ ತಿಳಿದುಬರುತ್ತದೆ. ನಾವು ಹಿಂದೆ ಉದಹರಿಸಿರುವ ಕೆಲವು ಶಿಲಾಶಾಸನಗಳಲ್ಲಿ ಕಂಡುಬರುವ 'ಪೆನುಗೊಂಡೆ ರಾಜ್ಯ ಗುಯಲೂರು ಸೀಮೆ' ಇತ್ಯಾದಿ ವಿಶೇಷಣಗಳು ಇದನ್ನು ಸಮರ್ಥಿಸುತ್ತವೆ. ಅಸ್ತು.

ಪ್ರಕೃತದಲ್ಲಿ ಶ್ರೀ ಯಿಮ್ಮಡಿ ಕರಿಬಸವದೇಶಿಕೇಂದ್ರರು ಆಗಮಿಸಿದ ಕಾಲಕ್ಕೆ 'ಅಚ್ಯುತರಾಯ' ನೆಂಬ ಅರಸನು ಅಲ್ಲಿದ್ದಂತೆ ಉಲ್ಲೇಖವಿದೆ. ಈತನು ಕ್ರಿ. ಶ. ೧೫೩೦-೧೫೪೨ ರ ವರೆಗೆ ವಿಜಯನಗರದಲ್ಲಿ ಆಳಿದ ಅಚ್ಯುತ ದೇವರಾಯನೇ ಇರಬೇಕೆಂದು ಊಹಿಸಬಹುದಾಗಿದೆ.

ಶ್ರೀಯುವರು ಶಿವಾರ್ಚನೆಯನ್ನು ಪೂರೈಸಿ ಲಿಂಗಾರ್ಪಿತಕ್ಕಾಗಿ ಅಲ್ಲಿಯೇ ಒಣಗಿರುವ ಒಂದು ಮಾವಿನ ವೃಕ್ಷವನ್ನು ಮಂತ್ರೋದಕದಿಂದ ಪ್ರೋಕ್ಷಿಸುತ್ತಾರೆ. ಅದು ಒಡನೆಯೇ ಚಿಗಿತು ಕುಸುಮಿಸಿ ಫಲಿಸುತ್ತದೆ.

ಭಾ॥ ಗುರುವು ಕರಿಬಸವೇಶನೊಣಮಾ
ಮರವನೀಕ್ಷಿಸಿ ಜಲನನೆರಚಲು
ಭರದಿ ಮರನಲ್ಚಿಗುರಿ ಕುಸುಮಿಸಿ ಫಲಿಸಿ ರಂಜಿಸಿತು॥ 'ಅಮರವಾಣಿ'

ಆಗ ಸ್ವಾಮಿಯವರು ಅತ್ಯಾನಂದದಿಂದ ಅವುಗಳನ್ನು ತೆಗೆದು ಕೊಂಡು;—

ಗೀ॥ ಗುರುಡು ಶಿವುನ ಕರ್ಪಿಂಚಿ ಕೊನ್ನಿ ತಾನು ।
ಸ್ವೀಕರಿಂಚುಚು ಪಿಮ್ಮಟ ಶಿಷ್ಯುಲಕುನು ॥
ವನಮು ರಕ್ಷಿಂಚು ವಾರಿಕಿ ವರುಸಗಾನು ।
ಯೊಸಗಿನನುವಾರು ಸಂತೋಷಯುಕ್ತುಲಗುಚು ॥

ಶಿವನಿಗೆ ಅರ್ಪಿಸಿ ತಾವು ಸ್ವೀಕರಿಸಿ ಶಿಷ್ಯರಿಗೂ ವನಪಾಲಕರಿಗೂ ಕೊಡಿಸುತ್ತಾರೆ. ಆ ವನಪಾಲಕರು ಈ ವೃತ್ತವನ್ನು ಅಲ್ಲಿಯೇ ಇದ್ದ ಅಚ್ಯುತರಾಯನಿಗೆ ಅರಿಕೆ ಕೊಡುತ್ತಾರೆ. ರಾಜನು ಆಶ್ಚರ್ಯಭರಿತನಾಗಿ ಪರಿವಾರದೊಂದಿಗೆ ಅಲ್ಲಿಗೆ ಬಂದು ದೀರ್ಘದಂಡನಮಸ್ಕಾರವನ್ನು ಮಾಡಲು ಶ್ರೀಯುವರು ಆತನನ್ನು ಸನ್ಮಾನಿಸಿ;—

"...ಯೆಂದು ಮಾಮಿಡಿಮಾನಿತೋ ಪಂಡಿಯುನ್ನ ।
ಶ್ರೇಷ್ಠವೈನಟ್ಟಿ ಫಲಮುಲಾಶೀರ್ವದಿಂಚಿ॥"

ಆ ಮಾವಿನ ಫಲಗಳನ್ನು ರಾಜನಿಗೆ ಕೊಟ್ಟು ಆಶೀರ್ವದಿಸುತ್ತಾರೆ. ಅವುಗಳಿಂದ ತಾನೂ ತನ್ನ ಸಮಸ್ತ ಪರಿವಾರವೂ ತೃಪ್ತಿಹೊಂದಿ ಶ್ರೀಯುವರ ಪ್ರಭಾವಕ್ಕೆ ಆನಂದಿಸಿ ಅಲ್ಲಿಯೇ ಶ್ರೀಯುವರಿಗೆ ಒಂದು ಬೃಹನ್ಮಠವನ್ನೂ ವಿಶೇಷವಾದ ಭೂ ಆಸ್ತಿಯನ್ನೂ ಅನೇಕ ಖಿಲ್ಲತ್ತುಗಳನ್ನೂ ಅರ್ಪಿಸಿ ತಾನು "ಗುರುನಿಯಾಜ್ಞನುಗೊನಿ ಪೆನುಗೊಂಡಕರಿಗೆ" ಗುರುವಿನಪ್ಪಣೆಯಂಪಡೆದು ಪೆನುಗೊಂಡೆಗೆ ಹೊರಡುತ್ತಾನೆ.

ಶ್ರೀಯುವರು ಅಲ್ಲಿಯೇ ಅನೇಕ ದಿವಸಗಳು ಅನುಷ್ಠಾನವನ್ನು ಮಾಡುತ್ತಿದ್ದು ಪುರಾಣಪ್ರಸಿದ್ಧವಾದ ಪಂಪಾಕ್ಷೇತ್ರವನ್ನು ನೋಡಬಯಸಿ ವಿರೂಪಾಕ್ಷಕ್ಕೆ ಪ್ರಯಾಣವನ್ನು ಮಾಡುತ್ತಾರೆ.

ಋಷ್ಯಮೂಕಪರ್ವತ, ಪಂಪಾಸರಸ್ಸು ಮುಂತಾದವುಗಳು ಬಹಳ ಸೊಗಸಾಗಿ ವರ್ಣಿಸಲ್ಪಟ್ಟಿವೆ. ಶ್ರೀಯವರು ಪಂಪಾಸರಸ್ಸಿನಲ್ಲಿ ಸ್ನಾನಾರ್ಚನಾದಿಗಳನ್ನು ಪೂರೈಸಿಕೊಂಡು ಮುಂದೆ ಆನೆಗೊಂದಿಪುರಕ್ಕೆ ದಯಮಾಡಿಸುತ್ತಾರೆ.

ಗೀ॥ ಅಟ್ಟಿ ಶೃಂಗಾರ ಮುಗನುಂಡು ಆನೆಗೊಂದಿ ।
ಕನತಿದೂರಂಬುನನ ಗುರುಂಡರುಗು ತೆಂಚ್ಚು ॥
ವಾರ್ತ್ತವಿನಿಯಚ್ಯುತೇಂದ್ರುಂಡುವಚ್ಚಿಪ್ರೊಕ್ಕಿ ।
ಯುತ್ಸವಮುತೋಡದೋಟ್ಕೊನಿಯೂರಿಕರಿಗೆ॥

ಅಚ್ಯುತರಾಯನು ಅಲ್ಲಿಗೂ ಬಂದು ಶ್ರೀಯವರನ್ನು ಉತ್ಸವದೊಡನೆ ಕರೆದುಕೊಂಡುಹೋಗಿ ಸನ್ಮಾನಿಸಿ ಬೀಳ್ಕೊಡುತ್ತಾನೆ. ಶ್ರೀಯವರು ರಾಜನ ಸಹಾಯದಿಂದ ಅಲ್ಲಿಯೇ ಒಂದು ಮಠವನ್ನು ಕಟ್ಟಿಸಿ ಅಲ್ಲಿ ಶ್ರೀ ವೀರಭದ್ರ ಪ್ರತಿಷ್ಠೆಮಾಡಿಸಿ ಅಲ್ಲಿಂದ ಶ್ರೀ ಮಹನಂದಿಕ್ಷೇತ್ರಕ್ಕೆ ಬಿಜಯಂಗೈದು ಅಲ್ಲಿ ಶಾಪಗ್ರಸ್ತವಾಗಿದ್ದ ಒಂದು ಶುಷ್ಕ ಬಿಲ್ವವೃಕ್ಷವನ್ನು ಸಿಗುರಿಸಿ ಆ ಪ್ರಾಂತದ ವೈಶ್ಯ ಜನಾಂಗದವರು ಲಿಂಗಧಾರಣೆಯನ್ನು ಮಾಡಬೇಕೆಂದು ಬಿನ್ನೈಸಲು ಶ್ರೀಯವರು ಅನೇಕ ವೀರಮಾಹೇಶ್ವರರನ್ನು ಕರೆಯಿಸಿ ಅವರಮೂಲಕ ಅವರೆಲ್ಲರಿಗೂ ಲಿಂಗಧಾರಣವನ್ನು ಮಾಡಿಸಿ ವಂಶಪಾರಂಪರ್ಯವಾಗಿ ಈ ಪೀಠಕ್ಕೆ ನಡೆದುಕೊಳ್ಳುವಂತೆ ಆಜ್ಞಾಪಿಸುತ್ತಾರೆ. ಇಂದಿಗೂ ಆ ವಂಶೀಯರು ಈ ಮಠಕ್ಕೆ ಶಿಷ್ಯರಾಗಿರುತ್ತಾರೆ.

ಅಲ್ಲಿಂದ ಸ್ವಾಮಿಗಳು 'ಕುರಳಿ' ಎಂಬ ಗ್ರಾಮಕ್ಕೆ ಬರುತ್ತಾರೆ. ಅಲ್ಲಿ 'ಪಾಕನಾಟಿ' ಎಂಬ ಒಕ್ಕಲಿಗರು ಲಿಂಗಧಾರಣೆಯಿಂದ ತಮ್ಮನ್ನು ಕೃತಾರ್ಥರನ್ನಾಗಿ ಮಾಡಬೇಕೆಂದು ಪ್ರಾರ್ಥಿಸಿಕೊಳ್ಳಲು ಶ್ರೀಯವರು ಅವರೆಲ್ಲರಿಗೂ ವಿಧ್ಯುಕ್ತವಾಗಿ ಲಿಂಗಧಾರಣೆಯನ್ನು ಮಾಡುತ್ತಾರೆ. ಅನಂತರ ಅವರು ಅಲ್ಲಿಯೇ ಒಂದು ಮಠವನ್ನು ಕಟ್ಟಿಸಿ ವೀರಭದ್ರ ಪ್ರತಿಷ್ಠೆಯನ್ನು ಮಾಡಿಸಿ ಆ ಜನಾಂಗದವರಿಗೆ ಕುಲದೈವೆಂದುಸುರಿ ಅಲ್ಲಿಂದ ವಿಶೇಷ ವೈಭವದೊಡನೆ ಗುಯಲೂರು ಮಠಕ್ಕೆ ಬಿಜಯಂಗೈಸುತ್ತಾರೆ. ಅನಂತರ

ಕಂ॥ ಆರಾಧ್ಯಾನ್ವಯ ಬಾಲುನಿ ।
ಭೂರಿಗುಣಾರ್ಣವುನಿ ಶಾಸ್ತ್ರ ಭೂಷಣನೊಕನಿನ್ ॥

ಕೂರಿಮಿತೋರಪ್ಪಿಂಚುಚು ।
ವೀರಶಿವಾಚಾರಮಂತ್ರವಿಧಿಯುಕ್ತಮುಗಾನ್ ॥

ಸದ್ವಂಶೀಯನಾದ ಓರ್ವ ವಟುವಿಗೆ ಉಪದೇಶವನ್ನಿತ್ತು 'ಕರಿ ಬಸವದೇಶಿಕೇಂದ್ರ' ನೆಂದು ಕರೆದು ಪಟ್ಟಾಭಿಷಿಕ್ತನನ್ನಾಗಿ ಮಾಡುತ್ತಾರೆ. ಅನಂತರ ಅವರು ನಿಡುಮಾಮಿಡಿಗೆ ಬಂದು ಅಲ್ಲಿಯೇ ಲಿಂಗೈಕ್ಯ ರಾಗುತ್ತಾರೆ.

## ಶ್ರೀ ಕರಿಬಸವದೇಶಿಕೇಂದ್ರ ಸ್ವಾಮಿಗಳು.

ಸುಮಾರು ೧೫೫೦ ರಲ್ಲಿ ಇವರು ಈ ಪೀಠವನ್ನಲಂಕರಿಸಿದಂತೆ ತೋರುತ್ತದೆ.

ಶ್ರೀಯವರು ಕೆಲಕಾಲದ ನಂತರ ದಕ್ಷಿಣ ದೇಶಸಂಚಾರಾರ್ಥವಾಗಿ ದಯಮಾಡಿಸಿ ಅನೇಕ ಗ್ರಾಮನಗರಗಳಲ್ಲಿ ಭಕ್ತಕೋಟಿಯಿಂದ ವಿಶೇಷವಾದ ಪೂಜೆಗಳನ್ನು ಪಡೆದು ಕಾಂಚೀಪಟ್ಟಣವನ್ನು ಸೇರುತ್ತಾರೆ. ಮಾರ್ಗ ಮಧ್ಯದಲ್ಲಿ ಇವರು ಅನೇಕ ಮಠಗಳನ್ನು ಕಟ್ಟಿಸಿದರೆಂಬುದಕ್ಕೆ ವೇಲೂರಿನಲ್ಲಿರುವ 'ನಿಡುಮಾಮಿಡಿ ಸ್ವಾಮುಲಮಠಂ' ಎಂಬುದು ನಿದರ್ಶನವಾಗಿದೆ. ಕಾಂಚೀನಗರ ವರ್ಣನೆಯು ಬಹಳ ಮನೋಹರವಾಗಿದೆ.

ಕಂ॥ ಆ ಕಂಚಿಪುರಮುಭಕ್ತುಲು ।
ಶ್ರೀಕರಿಬಸವೇಂದ್ರಗುರುಡು ಶಿಷ್ಯಭಟಾ ।
ನೇಕಮುಹಾ ಬಿರುದುಲತೋ ।
ರಾಕಡವಿನಿಮೇಳತಾಳರವಮುಲು ಚೆಲಗನ್ ॥

ಕಂ॥ ........................ ।
ಯಿಲಪೈಸಾಗಿಲಿಪ್ರೊಕ್ಕುಚು ।
ಕುಲಗುರುವುಂಚೂಡಗಲಿಗೆ ಕೋರಿಕೆಲಬ್ಬನ್ ॥

ಗೀ॥ ಅನುಚುದಿವ್ಯೋತ್ಸವಂಬುತೊನರಿಗಿಗೊಪ್ಪ ।
ಭವನಮುನಡಿಂಚಿ ಆನಂದಭರಿತುಲಗುಚು ॥
ಭಿಕ್ಷಲೊನರಿಂ ಷವಾರಲಕಕ್ಷಯಂಬು ।
ಗಲುಗನಾಶೀರ್ವದಿಂಚಿನಾಘನಗುರುಂಡು ॥

ಈ ರೀತಿಯಾಗಿ ಕಾಂಚೀನಗರದ ಭಕ್ತವೃಂದವು ಶ್ರೀಯವರನ್ನು ಸಂದರ್ಶಿಸಿ ವಿಶೇಷ ಉತ್ಸವದಿಂದ ಬರಮಾಡಿಕೊಂಡು ಪೂಜೆಗಳಂ

ಸಲ್ಲಿಸಿತು. ಶ್ರೀಯವರು ಶ್ರೀ ಏಕಾಂಬ್ರನಾಥನನ್ನು ಸಂದರ್ಶಿಸಿ ಅಲ್ಲಿಂದ ವಿಷ್ಣುಕಂಚಿಯಲ್ಲಿರುವ ಶ್ರೀ ವರದರಾಜನನ್ನು ನೋಡಲು ಹೊರಡುತ್ತಾರೆ. ಅಲ್ಲಿನ ಅರ್ಚಕರು ಇವರಿಗೆ ದರ್ಶನಕ್ಕೆ ಅವಕಾಶಕೊಡುವುದಿಲ್ಲ. ಆದರೆ ಶ್ರೀಯವರ ಪ್ರಭಾವದಿಂದ ದೇವಾಲಯದ ಬೀಗದ ಮುದ್ರೆಗಳು ಮುರಿಬಿದ್ದು ಕಪಾಟಗಳು ಹಿಂಸರಿಯಲು ವರದರಾಜ ಮೂರ್ತಿಯು ಶ್ರೀಯವರನ್ನು ಎದುರ್ಗೊಂಡು ಅವರಿಂದ ಅನೇಕ ವೇದಾಂತ ರಹಸ್ಯಗಳನ್ನು ತಿಳಿದನೆಂದು ಕವಿಯು ಹೇಳುತ್ತಾನೆ.

ಕಂ॥ ಆದರಣಚೇಸಿಪರವಾ ।
ಮೋದಂಬುನ ತಾಪಸೇಂದ್ರಮುಖ್ಯುನಿ ತೋಡನ್ ॥
ವೇದಾಂತರಹಸ್ಯಂಬುಲಸಂ ।
ಪಾದವಿನೋದಲೀಲವರದುಡು ಗುರುಡುನ್ ॥

ಕಂ॥ ಭಾಷಿಂಚುಚು ಮಣಿಮಯಮುಗು ।
ಭೂಷಣಮುಲುದೀಸಿಪೌ ನಿಪುಂಗವುನಕು ಸಂ ॥
ತೋಷಿಕುಡೈಧರಿಯಿಂಚುಚು ।
ಭಾಸುರಮಗವರದಮೂರ್ತಿಬಹುಮತಿ ಚೇಸೆನ್ ॥

ಎಂದು ಅನೇಕ ಮಣಿಭೂಷಣಾಂಬರಗಳನ್ನೂ ನವರತ್ನಖಚಿತವಾದ ಪದಕವನ್ನೂ ಅರ್ಪಿಸಿದಂತೆ ವರ್ಣಿತವಾಗಿದೆ.

ಅಲ್ಲಿಂದ ಶ್ರೀಯವರು ಬರುತ್ತಿರಲು ದೇವಾಲಯದ ಅರ್ಚಕರು ಇವರ ಪ್ರಭಾವವನ್ನು ಸಹಿಸಲಾರದೆ ಕಾಂಚೀನಗರದ ಅರಸನಲ್ಲಿ ಇವರು ದೇವರ ಭೂಷಣಗಳನ್ನು ಚೌರ್ಯದಿಂದ ತೆಗೆದುಕೊಂಡುಹೋಗುತ್ತಿರುವರೆಂದು ದೂರುಹೇಳುತ್ತಾರೆ. ಅನಂತರ ರಾಜಭಟರು ಸ್ವಾಮಿಗಳನ್ನು ಸಂದರ್ಶಿಸಿ ಅವರ ಪ್ರಭಾವದಿಂದ ಕುಂಠಿತಶಕ್ತಿಯುಳ್ಳವರಾಗಿ ಭಯಭಕ್ತಿಯಿಂದ ಬೇಡಿಕೊಳ್ಳಲು ಶ್ರೀಯವರು ವರದರಾಜನೇ ಭಕ್ತಿಯಿಂದ ಅರ್ಪಿಸಿದರೆಂದು ಹೇಳುತ್ತಾರೆ. ಆದರೂ ಸಂಶಯಗ್ರಸ್ತರಾದ ಅವರನ್ನು ಕೃಪಾದೃಷ್ಟಿಯಿಂದ ನೋಡಿ ಮತ್ತೆ ವರದ ದೇವಾಲಯದ ಹತ್ತಿರಕ್ಕೆ ಬರುತ್ತಾರೆ.

ಆಗ ಶ್ರೀ ಸ್ವಾಮಿಯು;—

ಕಂ॥ ವರದುನಿಕೋವೆಲ ಮುಂಗಿಟ
ಕರಿಗಿನಯರ್ಚ ಕುಲ ಜೂಚಿ ಕಡುಕೋಪಮುತೋ ॥

ಗುರುವುಲಕು ಭೂಷಣಂಬುಲು ।
ಪರಮೋಲ್ಲಾಸಂಬು ತೋಡಬಹುಮಾನಮುಗಾನ್ ॥

ಗೀ॥ ಯಿಚ್ಚಿನಾಡ ಗುರುದ್ರೋಹವಿ ಟುಲುಸೇಯ ।
ವಲಿದು ವಲಿದು ವಲಿವಂಚು ಪಲಕಿನವಾರಲಿಪುಟು ॥
ಭಯಮುಚೆಂದುಚು ಆಶ್ಚರ್ಯ ಭರಿತುಲಗುಚು ॥
ಕರಿಬಸವ ದೇಶಿಕ ಸ್ವಾಮಿಗಾಂಚಿ ಪ್ರೊಕ್ಕಿರಸುಡು ॥

ಹೀಗೆ ವರದ ಸ್ವಾಮಿಯು ತಾನೆ ಅವುಗಳನ್ನಿತ್ತೆನೆಂದು ಹೇಳಿ ಅರ್ಚಕರ ಮೇಲೆ ಕೋಪಿಸಲು ಅವರು ಶರಣಾಗತರಾಗುತ್ತಾರೆ. ಇವನ್ನರಿತ ಕಾಂಚೀ ಪ್ರಭುವು ಭಯಭಕ್ತಿಯಿಂದ ಶ್ರೀಯವರನ್ನು ಸನ್ಮಾನಿಸುತ್ತಾನೆ. ರಾಜನ ಸಹಾಯದಿಂದ ಅಲ್ಲಿಯೇ ಒಂದು ಮಠವನ್ನು ಕಟ್ಟಿಸಿ ಅಲ್ಲಿ ವೀರಭದ್ರ ಪ್ರತಿಷ್ಠೆಯನ್ನು ಮಾಡಿಸುತ್ತಾರೆ ಈ ಮಠವು ಶಿವಕಂಚಿಯಲ್ಲಿ ಏಕಾಂಬ್ರೇಶ್ವರನ ದೇವಾಲಯಕ್ಕೆ ಅನತಿ ದೂರದಲ್ಲಿ 'ಕರಿಬಸವ ಸ್ವಾಮಿ ಮಠಂ' ಎಂದು ಇಂದಿಗೂ ಕರೆಯಲ್ಪಡುತ್ತದೆ.

ಅಲ್ಲಿಂದ ಮುಂದೆ ಸಂಚಾರಕ್ಕೆ ಹೊರಟು 'ಅರುಣಾಚಲ' ಕ್ಕೆ ದಯಮಾಡಿಸಿ ಅಲ್ಲಿಗೆ ಪ್ರಭುವಾದ 'ಬಲ್ಲಾಳ' ರಾಯನಿಂದ ಪೂಜಿಸಲ್ಪಟ್ಟು ಅನೇಕರಿಗೆ ಲಿಂಗಧಾರಣೆಯನ್ನು ಮಾಡುತ್ತಾರೆ. ಆಗ ರಾಯನು ತನ್ನ ಈರ್ವರು ಪತ್ನಿಯರಾದ 'ಮಲ್ಲಿಕಾದೇವಿ' ಮತ್ತು 'ಚಲಮದೇವಿ'ಯರೊಡನೆ ಬಂದು ತಮಗೂ ಲಿಂಗಧಾರಣವನ್ನು ಮಾಡಿ ಕೃತಾರ್ಥರನ್ನಾಗಿ ಮಾಡಬೇಕೆಂದು ಬಿನ್ನೈಸಿಕೊಳ್ಳುತ್ತಾನೆ.

ಸೀ॥ ಮಾನವೇಂಡುಂಡುನು ಮಲ್ಲಿಕಾದೇವಿಯು ಚಲಮದೇವಿಯು ತಪಸಿ ಚಂದ್ರು ಜೂಚಿ। ಫಲಮುಲರ್ಪಣ ಜೇಶಿ ಪಾದ ಪದ್ಮಮುಲಕು ಸಾಷ್ಟಾಂಗ ಮುಗಪ್ರೊಕ್ಕಿ ಸ್ವಾಮಿತೋಡ। ವಿಶ್ವಂಬುಲೋಪಲ ವೀರಶೈವ ಮತಂಬು ಶ್ರೇಷ್ಠ ಮ್ಯೆನದಟಂಚು ಸಿದ್ಧುಲೆಲ್ಲ। ಪಲುಕುದುರಿಟೆಗಾಕ ಪರಮ ಪಾವನ ಮೂರ್ತಿ ಪಾದದರ್ಶನ ಮಾಯ ಮೋದ ಮಚ್ಚೆ।

ಗೀ॥ ಲಿಂಗಧಾರಣ ಪೊನರಿಂಚಿ ಅಂಗಮುಲಕು ।
ಭೂತಿ ರುದ್ರಾಕ್ಷಲನುಮಾಕು ಭೂಷಣಮುಗ ॥

ಜೇಶಿ ಪುಮ್ಮುಕೃತಾರ್ಥು ಜೇಯು ಮನುಚು ।
ಪ್ರಾರ್ಥನ ಮುಶೇಯುವಾರಿತೋ ಬಲಿಕೆ ಗರುಡು ॥

ಆಗ ಗುರುದೇವನು ಶುಭಮುಹೂರ್ತದಲ್ಲಿ ಅವರೆಲ್ಲರಿಗೂ ಲಿಂಗ ಧಾರಣೆಯನ್ನು ಮಾಡಿ ಶಿವ ಪಂಚಾಕ್ಷರಿಯನ್ನುಪದೇಶಿಸಿ ಈ ರೀತಿ ಅಪ್ಪಣೆ ಕೊಡುತ್ತಾನೆಃ—

ಸೀ॥ ಆಕ್ಷೀಣವ್ರೈನ ಪಂಚಾಕ್ಷರೀ ಮಂತ್ರಂಬುಜಪ ಮುಗಾ
ವಿಂಚು ಸರಣಿದೆಲ್ಪಿ। ನಿಶ್ಚಲ ಭಕ್ತಿತೋ ನಿತ್ಯಾಕೃತ್ಯಂಬನು ಶಿವ
ಪೂಜಿಗಾವಿಂಚು ಸ್ಥಿತುಲು ಜೆಪ್ಪಿ। ಅನುದಿನಂಬುನು ಜಂಗಮಾ
ರ್ಚನ ಕ್ರಮಮುಗಾಜರುಪ್ರ ವಿಧಂ ಚೆಲ್ಲಯೆರುಕ ಜೇಶಿ। ತೆರಗೊಪ್ಪ
ಗುರುಪಾದತೀರ್ಥ ಪ್ರಸಾದಮುಲ್ ಪ್ರೀತಿಗಾಶೇವಿಂಚು ರೀತಿ ಚೂಪಿ॥

ಗೀ॥ ವೀರಶೈವಾಚಾರ ವಿಧಮುಲಗ್ನಿ।
ಭೂಮಿಪತಿ ಕಿನಿಸಖುಲ ಕುಂಭೋಧಪರಚಿ॥
ಧಾರುಣಿ ಸ್ಥಲಿ ಆಚಂದ್ರತಾರಕಮುಗ।
ಸುತುಲು ಪೌತ್ರುಲು ಮಿತ್ರುಲು ಸುಖಮುಗಾನು॥

ವ॥ ನುಂಡಯಾಶೀರ್ವದಿಂಚಿ ..........

ಹೀಗೆ ಸದ್ಗುರುವು ಅವರಿಗೆ ಉಪದೇಶಿಸಿರುವ ಕ್ರಮವು ಬಹಳ ಮಹತ್ವದ್ದೂ ಆದರ್ಶವಾದುದೂ ಆಗಿದೆ. ಅತಿವಿಶಿಲವಾದ ಈ ವೀರ ಶೈವ ಸಿದ್ಧಾಂತವನ್ನು ಅರಿತು ಅದನ್ನು ವಿಶ್ವತೋ ಮುಖವಾಗಿ ಹಬ್ಬಿ ಸಲು ಹವಣಿಸಿದ ಅನೇಕ ಮಹಾ ಪುರುಷರಲ್ಲಿ ಈ ಪೀಠಾಧಿಪತಿಗಳು ಅಗ್ರಗಣ್ಯರಾಗಿರುತ್ತಾರೆ.

ಶ್ರೀಯವರು ರಾಜನಿಗೆ ಲಿಂಗಧಾರಣೆಯನ್ನು ಮಾಡಿದರೆಂಬ ಸುದ್ದಿಯು ಬಹು ಬೇಗನೆ ಆ ನಗರದಲ್ಲೆಲ್ಲ ಹರಡುತ್ತದೆ ಆಗ ತಂಡೋ ಪತಂಡವಾಗಿ ನಾಗರಿಕ ಸಮೂಹವು ಅರಮನೆಗೆ ಬಂದು ತಮಗೆಲ್ಲ ಲಿಂಗಧಾರಣ ಮಾಡುವಂತೆ ಬಿನ್ನೈಸಬೇಕೆಂದು ರಾಜನನ್ನು ಕೇಳಿ ಕೊಳ್ಳುತ್ತಾರೆ. ಆಗ ರಾಜನು ಶ್ರೀಯವರನ್ನು ತನ್ನ ಪ್ರಜೆಗಳಿಗೆ ಲಿಂಗ ಧಾರಣೆ ಮಾಡಬೇಕೆಂದು ಬೇಡಿಕೊಳ್ಳುತ್ತಾನೆ. ಆಗ ಸ್ವಾಮಿಯವರು ಮಹೋತ್ಸಾಹದಿಂದ ಅವರೆಲ್ಲರನ್ನೂ ಕೃಪಾದೃಷ್ಟಿಯಿಂದಲೇ ಪವಿತ್ರಗೊ ಳಿಸಿ ಅವರೆಲ್ಲರಿಗೂ ಶಿವಲಿಂಗಧಾರಣೆಯನ್ನು ವಿದ್ಯುಕ್ತವಾಗಿ ಮಾಡುತ್ತಾರೆ.

ಈ ಸಮಾಚಾರವನ್ನು ತಿಳಿದ ರಾಜನ ಭಗಿನಿಯಾದ 'ಅಕ್ಕಾ ಜಮ್ಮ' ಎಂಬುವಳು ಶ್ರೀಯುವರ ಶರಣು ಪಡೆದು ಅವರಿಂದ ಲಿಂಗ ಧಾರಣೆಯನ್ನು ಪಡೆಯುತ್ತಾಳೆ.

ಸೀ॥ ಬಲ್ಲಾಳರಾಯನಿ ಭಗಿನಿಯಕ್ಕಾಜಮ್ಮ ಶಿಷ್ಯರಾಲ್ಯೆಗುರು
ನಿಶೀವಜೇಶಿ। ಮಂಚಿಲಗ್ನಂಬುನ ಮಹನೀಯ ಮೂರ್ತಿತೋ
ಸಾಂಗಂಬುಗಾಲಿಂಗ ಮಂಗಮಂದು। ಗಟ್ಟಿಂಚು ಕೋನಿ ಭಕ್ತಿಗ
ಲಿಗಿಯಕ್ಕಾಜಮ್ಮ ಮಠಮು ನಿರ್ಮಾಣಿಂಚಿಮಾತಕೋಡ। ......"

ಹೀಗೆ ಶಿವದೀಕ್ಷೆಯನ್ನು ಪಡೆದು ಒಂದು ಮಠವನ್ನು ಕಟ್ಟಿಸಿ ಕೊಟ್ಟು ಒಬ್ಬ ಮೂರ್ತಿಗಳು ಅಲ್ಲಿಯೇ ಇದ್ದು ತೀರ್ಥ ಪ್ರಸಾದವನೂ ಸಗುವಂತೆ ಮಾಡಬೇಕೆಂದು ಮೆಯ್ಯಕ್ಕಿ ಬೇಡಿಕೊಳ್ಳುತ್ತಾಳೆ. ಆಗ ಶ್ರೀಯುವರು ಸದ್ವಂಶೀಯನೂ ಸುಶೀಲನೂ ವೈರಾಗ್ಯ ಸಂಪನ್ನನೂ ಆದ ಓರ್ವ ವಟುವನ್ನಿರಿಸಿ 'ನಿಡುಮಾಮಿಡಯ್ಯ' ನೆಂದು ಹೆಸರಿಟ್ಟು ಮುಂದೆ ಪ್ರಯಾಣ ಮಾಡುತ್ತಾರೆ. ಈ ವಿಷಯವು ಕೇವಲ ಐತಿಹಾಸಿಕವಾಗಿದೆ.

ಅಲ್ಲಿಂದ 'ಜಂಬುಕೇಶ್ವರ' ಕ್ಕೆ ದಯಮಾಡಿಸಿ ಅಲ್ಲಿ ವಿಶೇಷ ಸನ್ಮಾನಂಗಳನ್ನು ಹೊಂದಿ ಅಲ್ಲೊಂದು ಮಠವನ್ನು ನಿರ್ಮಿಸಿ ಅದಕ್ಕೊಬ್ಬ ಅಧಿಕಾರಿಗಳನ್ನು ಮಾಡಿ ಅವರಿಗೆ 'ಮಾಚೇಶ್ವರ ಸ್ವಾಮಿ' ಎಂದು ಅಭಿಧಾನನಿರಿಸಿ ಮುಂದೆ ಆಕಾಶ ಸ್ವರೂಪಿಯಾದ ಚಿದಂಬರನ ದರ್ಶನವನ್ನು ಮಾಡಿಕೊಂಡು ಮುಂದೆ ಹೋಗುತ್ತಿರುವಲ್ಲಿ 'ಕನಕ ಸಭಾಪತಿ' ಎಂಬುವನು ಶ್ರೀಯುವರ ದರ್ಶನವನ್ನು ಮಾಡಿ ಅವರನ್ನು ತನ್ನ ಗೃಹಕ್ಕೆ ಬಿಜಯ ಮಾಡಿಸಿ ಪೂಜಾದಿಗಳನ್ನು ಮಾಡಿಸಿ ಒಂದು ಮಠವನ್ನು ಕಟ್ಟಿಸಿ ಕೊಡುತ್ತಾನೆ ಆಗ ಸ್ವಾಮಿಗಳು ಅಲ್ಲಿ ಓರ್ವ ಮಾಹೇಶ್ವರನನ್ನು ಅಧಿಕಾರಿಯನ್ನಾಗಿ ನಿಯಮಿಸಿ,

ಗೀ॥ ಆ ಮಠಮುನಂದೊಕ್ಕನಾಡಾರ್ಯ ಗುರುಡು।
ಸತ್ಯಮೂರ್ತಿನಿಯೊಕ್ಕ ಮಾಹೇಶ್ವರು ನಿಜೇರಿ॥
ಪೇರು 'ಶಿವಲಿಂಗ' ಸ್ವಾಮನಿಚಿಟ್ಟಿ ಮಧುರ।
ಪುರಮುಚೂಡಂಗ ವೇಡಕ ಬುಟ್ಟಿಯಪುಡು॥

ಆತನಿಗೆ 'ಶಿವಲಿಂಗ ಸ್ವಾಮಿ' ಯೆಂದು ಹೆಸರಿಟ್ಟು ಮುಂದೆ ಮಧುರಾ ಪಟ್ಟಣಕ್ಕೆ ಹೊರಡುತ್ತಾರೆ.

ಮಧುರಾ ಪಟ್ಟಣದಲ್ಲಿ ಇವರ ಪ್ರಭಾವಗಳು ಅಲ್ಲಿನ ಅರಸನಾದ 'ಪಾಂಡ್ಯ' (ಈ ಪಾಂಡ್ಯ ರಾಜನು ೧೫೩೨ ರಲ್ಲಿ ವಿಜಯನಗರದ ಅಚ್ಯುತ ರಾಯನಿಗೆ ತನ್ನ ಕುವರಿಯನ್ನು ಕೊಟ್ಟಿದ್ದನು – ವಿಜಯನಗರ ಸಾಮ್ರಾಜ್ಯ ಪುಟ ೧೪೬) ಭೂಪಾಲನಿಗೆ ತಿಳಿದು ಬರಲು ಆತನು ಮರ್ಯಾದೆಯಿಂದ ಸ್ವಾಮಿಗಳ ಸನ್ನಿಧಿಗೆ ಬಂದು ಲಿಂಗಧಾರಣೆಯನ್ನು ಮಾಡಬೇಕೆಂದು ಬೇಡಿಕೊಳ್ಳಲು ಅವರ ಇಷ್ಟಾರ್ಥವನ್ನು ನೆರವೇರಿಸುತ್ತಾರೆ. ಆಗ ಅವರು ಶ್ರೀಯವರಿಗೆ ವಿಶೇಷವಾದ ಖಿಲ್ಲತ್ತುಗಳನ್ನು ಅರ್ಪಿಸಿ ಒಂದು ಮಠ ವನ್ನು ಕಟ್ಟಿಸಿಕೊಡಲು ಅಲ್ಲಿ 'ಶಾಂತವೀರ ಸ್ವಾಮಿ' ಎಂಬುವರನ್ನು ನಿಯ ಮಿಸಿ ಅಲ್ಲಿಂದ ರಾಮೇಶ್ವರಕ್ಕೆ ದಯಮಾಡಿಸುತ್ತಾರೆ. ಅಲ್ಲಿಯೂ ಅನೇಕ ವಂದಿ ಶಿಷ್ಯರಿಂದ ಸನ್ಮಾನಿತರಾಗಿ ಅಲ್ಲೊಂದು ಮಠವನ್ನು ಕಟ್ಟಿಸಿ ಅಲ್ಲಿಗೆ 'ಮುದ್ದುಲಿಂಗ ಸ್ವಾಮಿ' ಗಳೆಂಬುವರನ್ನು ನಿಯಮಿಸಿ ಅಲ್ಲಿಂದ ಶ್ರೀರಂಗಕ್ಕೆ ಬರುತ್ತಾರೆ. ಅಲ್ಲಿನ ಶ್ರೀ ವೈಷ್ಣವರಿಗೂ ಸ್ವಾಮಿಗಳಿಗೂ ಹರಿಹರ ವಿಷಯಕವಾದ ವಾಕ್ಯಾರ್ಥವು ನಡೆಯುತ್ತದೆ. ಸ್ವಾಮಿಗಳು ಹರಿಯು ಹರನನ್ನು ಪೂಜಿಸಿ ಇಷ್ಟಾರ್ಥವನ್ನು ಪಡೆದನೆಂದು ಸಮರ್ಥಿ ಸುತ್ತಾರೆ. ಆಗ ಅವರಿಗೆ ತಮ್ಮ ಶಿವತೇಜೋರೂಪ ದರ್ಶನವನ್ನು ಮಾಡಿಸಲು ಅವರು ಶರಣಾಗತರಾಗುತ್ತಾರೆ. ಅನಂತರ ಇವರು ಅಲ್ಲೇ ಒಂದು ಮಠವನ್ನು ಕಟ್ಟಿಸಿ ಅಲ್ಲಿಂದ ಕಾಳಹಸ್ತಿಗೆ ದಯಮಾಡಿಸುತ್ತಾರೆ.

ಕಾಳಹಸ್ತಿಯಲ್ಲಿ ಅನೇಕರಿಗೆ ಲಿಂಗಧಾರಣೆಯನ್ನು ಮಾಡಿ ಅಲ್ಲಿನ ಅರಸರಿಂದ ಸನ್ಮಾನಿತರಾಗಿ ಅಲ್ಲೊಂದು ಮಠವನ್ನು ಕಟ್ಟಿಸಿ ಅದರಲ್ಲಿ ಒರ್ವ ಆರಾಧ್ಯವಂಶೀಯನಾದ ವಟುವಿಗೆ ಚರಂತಿಯ ಪಟ್ಟವನ್ನು ಕಟ್ಟಿ; —

ಕಂ॥ ಘಟಿಕಾ ಸಿದ್ಧೇಶ್ವರುಡನಿ ।
ಪಟುತರಮುಗಪೇರು ಬೆಟ್ಟಿಭದ್ರಮುನೀಶುಂ ॥
ಡಟುಬಾಸಿಕಂಚಿಗ್ರಾಮುಮು ।
ಭಟಸಹಿತಮುಗಾಗ ಜೇರಿಭಕ್ತುಲನೆಲ್ಲನ್ ॥

ಅವರಿಗೆ 'ಘಟಿಕಾ ಸಿದ್ಧೇಶ್ವರ' ನೆಂದು ಅಭಿಧಾನವಿಟ್ಟು ಅಲ್ಲಿಂದ ಕಂಚಿಗೆ ದಯಮಾಡಿಸಿ ಸಮಸ್ತಭಕ್ತರನ್ನು ಕರೆಯಿಸಿ ವೀರಶೈವ ಸಿದ್ಧಾಂತ ವನ್ನು ಬೋಧಿಸುತ್ತಿದ್ದು ಅನೇಕರನ್ನು ಲಿಂಗಾಂಗಿಗಳನ್ನಾಗಿ ಮಾಡು ತ್ತಾರೆ.

ಅನಂತರ ಈ ಪೀಠದ ಉತ್ತರಾಧಿಕಾರಿಯನ್ನು ಮಾಡಬೇಕೆಂದು ಬಯಸಿದವರಾಗಿ,

ಗೀ॥ ಷೋಡಶಾಬ್ದಂಬುಲರಿಗಿನಸುಂದರಾಂಗು ।
ಪಂಡಿತಾರಾಧ್ಯವಂಶಸಂಭವುನಿಬಿಲಚಿ ॥
ಹಸ್ತಮಸ್ತಕಸಂಯೋಗಮಾಚರಿಂಚಿ ।
ಘನತವೆಲಯಂಗ ಪಟ್ಟಂಬು ಗಟ್ಟಿನಪ್ಪುಡು ॥

ಸದ್ವಂಶೀಯನೂ ಸುಗಣಿಯೂ ಆದ ವಟುವಿಗೆ ಪಟ್ಟಾಭಿಷೇಕವನ್ನು ಮಾಡಿ ಅವರಿಗೆ 'ಶಾಂತವೀರದೇಶಿಕ' ರೆಂದು ಹೆಸರಿಟ್ಟು ಕಂಚಿಮಠದಲ್ಲಿಯೇ ಲಿಂಗೈಕ್ಯರಾಗುತ್ತಾರೆ.

ಕಂಚಿಯಲ್ಲಿರುವ 'ಶ್ರೀ ಕರಿಬಸವಸ್ವಾಮಿಗಳ ಮಠ' ದಲ್ಲಿ ನಾವಿಂದು ಇವರ ಗದ್ದುಗೆಯನ್ನು ಕಾಣಬಹುದು. ಇದು ಬಹಳ ಪುರಾತನವಾದ ಮಠವಾದರೂ ಅಲ್ಲಿಯ ಶಿಷ್ಯವೃಂದವು ಬಹಳ ಭಕ್ತಿಯಿಂದ ಮಠದ ವ್ಯವಸ್ಥೆಯನ್ನು ಮಾಡಿರುತ್ತದೆ. ೧೯೩೪ ರಲ್ಲಿ ಈ ಪೀಠದ ಶ್ರೀಯವರು ಅಲ್ಲಿಗೂ ದಯಮಾಡಿಸಿ ಆರ್ಯಗುರುಗಳ ಆರಾಧನೆ ಮುಂತಾದುವನ್ನು ನಡೆಯಿಸಿ ಅದರ ಪುನಃ ವ್ಯವಸ್ಥೆಯನ್ನು ಮಾಡಿರುತ್ತಾರೆ.

ಒಟ್ಟಿನಲ್ಲಿ ತೃತೀಯಾಶ್ವಾಸದಲ್ಲಿ ಉಕ್ತರಾಗಿರುವ ಶ್ರೀ ಇಮ್ಮಡಿ ಕರಿಬಸವದೇಶಿಕರೂ ಮತ್ತು ಶ್ರೀ ಕರಿಬಸವದೇಶಿಕರೂ ಸಹ ಬಹಳ ಉದಾತ್ತವಾದ ಧ್ಯೇಯದಿಂದ ದೇಶಸಂಚಾರವನ್ನು ಮಾಡಿ ವೀರಶೈವ ಧರ್ಮಪ್ರಚಾರವನ್ನು ಮಾಡಿರುತ್ತಾರೆ. ಅವರ ಪ್ರಭಾವದಿಂದ ದಕ್ಷಿಣ ದೇಶವೆಲ್ಲಾ ಶಿವಧರ್ಮದ ಕುರುಹನ್ನು ತಿಳಿದು ಪುನೀತವಾಯಿತು.

ಇದರಲ್ಲಿ ಉಲ್ಲಿಖಿತವಾಗಿರುವ ರಾಜರುಗಳೂ ಸ್ಥಳಗಳೂ ಸಂಶೋಧನೀಯ ಅಂಶಗಳಾಗಿರುತ್ತವೆ ಅವೆಲ್ಲವು ಐತಿಹಾಸಿಕ ಕೋಶದಿಂದ ಉದ್ಧೃತವಾಗಿ ನಮ್ಮ ಕೃತಕೃತ್ಯವಾದಂದು ನಾವು ಪೂರ್ಣಮನೋರಥರಾಗುವೆವು

[ಮುಂದೆ]

ಸೂಚನೆ.— ಹಿಂದಿನ ಕೆಲವು ಸಂಚಿಕೆಗಳಲ್ಲಿ ಉದ್ಧೃತವಾಗಿರುವ ಆಂಧ್ರ ಮತ್ತು ಸಂಸ್ಕೃತ ಭಾಗಗಳಲ್ಲಿ ಕೆಲವು ವರ್ಣವ್ಯತ್ಯಯಗಳಾಗಿವೆ. ಆ ಭಾಷೆಯ ಪರಿಚಯವು ಜೋಡಿಸುವವರಿಗೆ ಇಲ್ಲದಿರುವಾಗ ಹಾಗಾಗುವುದು ಅನಿವಾರ್ಯವಾದ್ದರಿಂದ ವಾಚಕರು ಸಾವಧಾನ ಚಿತ್ತರಾಗಿ ಪರಿಶೀಲಿಸಬೇಕಾಗಿ ಕೋರಿದೆ. (ಲೇಖಕ.)

# ಮಹಾದೇವಿಯಕ್ಕನ ಉಜ್ವಲವಾದ ಜೀವನ.

(ಲೇಖಕ:— ಎಸ್ ಷ್ಟಿ. ಹಂಜಿ ಬಿ. ಎ. ಹಲಶಿ)

ಮಹಾದೇವಿಯಕ್ಕನು ಭರತಖಂಡದ ಸಾಧ್ವೀ ಶಿರೋಮಣಿಗಳಲ್ಲಿ ಒಬ್ಬಳೆಂದು ಹೇಳಬಹುದು. ಅವಳ ಜೀವನವು ಇಲ್ಲಿಯ ವರೆಗೆ ಗುಪ್ತವಾಗಿದ್ದು ಅವಳ ವಚನಗಳು ಪ್ರಕಟವಾದಂದಿನಿಂದ ಅವಳ ಕೀರ್ತಿಯು ಎಲ್ಲೆಡೆಯಲ್ಲಿಯೂ ಹಬ್ಬುತ್ತ ನಡೆದಿರುವದು. ಕನ್ನಡದ ಉಚ್ಚತರದ ಅಭ್ಯಾಸಕ್ಕೆ ಅವಳ ವಚನಗಳನ್ನು ನಿಯಮಿಸಿದ್ದರಿಂದ ವಿಮರ್ಶಕ ಬುದ್ಧಿಯಿಂದ ಅವುಗಳ ಅಭ್ಯಾಸವು ನಡೆಯಲೇ ಬೇಕಾಯಿತು. ಅಂದಿನಿಂದ ಆಕೆಯ ಜೀವನ ಮತ್ತು ವಚನಗಳ ಮೇಲೆ ವಿಮರ್ಶಾತ್ಮಕ ಲೇಖಗಳು, ನಾಟಕ, ಚರಿತ್ರೆಗಳು ಪ್ರಕಟವಾಗುತ್ತಲಿವೆ. ಇಷ್ಟೇ ಅಲ್ಲ, ಅವಳ ಜಯಂತ್ಯುತ್ಸವವು ಕೂಡ ಒಳ್ಳೇ ವಿಜೃಂಭಣೆಯಿಂದ ಇತ್ತಿತ್ತಲಾಗಿ ಕರ್ನಾಟಕದ ಹಲವು ಸ್ಥಳಗಳಲ್ಲಿ ಜರಗುತ್ತಿರುವದು. ಈ ಎಲ್ಲ ಕಾರಣಗಳಿಂದ ಮಹಾದೇವಿಯಕ್ಕನು ಒಬ್ಬ ಸಾಮಾನ್ಯ ವ್ಯಕ್ತಿಯಲ್ಲವೆಂದು ಕಂಡು ಬರುತ್ತದೆ. ಅವಳು ಸಾಮಾನ್ಯ ಮನೆತನದಲ್ಲಿ ಹುಟ್ಟಿದರೂ ಸಹ ತನ್ನ ಅಸಾಮಾನ್ಯ, ಉಜ್ವಲ ಮತ್ತು ದಿವ್ಯ ಚರಿತ್ರದಿಂದ ಕೇವಲ ಕನ್ನಡಿಗರಿಗಷ್ಟೇ ಅಲ್ಲದೆ ಇಡೀ ಭರತಖಂಡದ ಮಹಿಳೆಯರಿಗೂ ಮತ್ತು ಪುರುಷರಿಗೂ ಆದರ್ಶಪಾತ್ರಳಾಗಿರುತ್ತಾಳೆ.

ಮಹಾದೇವಿಯಕ್ಕನು ಉಡುತಡಿಯೆಂಬ ಗ್ರಾಮದಲ್ಲಿ ಒಬ್ಬ ಸಾಮಾನ್ಯ ಶಿವಭಕ್ತರ ಮನೆತನದಲ್ಲಿ ಜನಿಸಿದಳು. ಆಕೆಯ ತಾಯಿಯ ಹೆಸರು ಸುಮತಿ ಮತ್ತು ತಂದೆಯ ಹೆಸರು ವಿಮಲ. ಇವರು ಬಡವರಾಗಿದ್ದರೂ ಸದಾಚಾರ ಸಂಪನ್ನರಾಗಿ ಅನ್ಯರ ಗೊಡವೆಗೆ ಹೋಗದೆ ಯಾವಾಗಲೂ ಸತ್ಕೃತ್ಯಗಳನ್ನು ಮಾಡುತ್ತ ಇದ್ದದ್ದರಲ್ಲಿಯೇ ಸಮಾಧಾನದಿಂದ ಜೀವಿಸುತ್ತಿದ್ದರು. ಇಂಥ ತಾಯಿ ತಂದೆಗಳ ಪ್ರಭಾವದಿಂದ ಮಹಾದೇವಿಯಕ್ಕನು ಚಿಕ್ಕಂದಿನಿಂದಲೇ ಯೋಗ್ಯ ಶಿಕ್ಷಣವನ್ನು ಪಡೆಯುತ್ತ ಬಂದಳು. ಅವರು ತಮ್ಮ ಸಹಜವಾದ ಪ್ರೇಮದಿಂದ ಆಕೆಯನ್ನು ಬಹಳ ಜಾಗರೂಕತೆಯಿಂದ ಜೋಪಾನಮಾಡಿ ಒಳ್ಳೇ ಸದ್ಗುಣಸಂಪನ್ನಳನ್ನಾಗಿ ಮಾಡಿದರು. ಅವಳಾದರೂ ಸಹ ಅವರು ಹೇಳಿದ

ನೀತಿಯ ನುಡಿಗಳನ್ನು ಪ್ರೇಮದಿಂದ ಕೇಳಿ ಅವುಗಳಂತೆ ಸದಾಚಾರ ದಿಂದ ನಡೆಯಲಾರಂಭಿಸಿದಳು. ಹೀಗೆ ಅವಳ ಬಾಲ್ಯತನವು ಮುಂದೆ ಅವಳು ಆಚರಿಸಿದ ಉಜ್ವಲವಾದ ಜೀವನಕ್ಕೆ ತಳಹದಿಯಾಯಿತೆಂದು ಅನ್ನಬಹುದು.

ಹೀಗೆ ತಾಯಿತಂದೆಗಳ ಮುದ್ದಿಗೀಡಾಗಿ ಶೈಶವಾವಸ್ಥೆಯನ್ನು ಸುಖ ದಿಂದ ಕಳೆಯಲು ಆಕೆಗೆ ನೂತನ ತಾರುಣ್ಯ ಒದಗಿತು. ಮೊದಲೇ ಅವಳು ಸಹಜ ಸೌಂದರ್ಯಸಂಪನ್ನಳು. ಯೌವ್ವನಾವಸ್ಥೆಯಲ್ಲಿ ಕಾಲಿಟ್ಟ ಕೂಡಲೆ ಅವಳ ಸೌಂದರ್ಯವು ಹೆಚ್ಚುತ್ತ ನಡೆಯಿತು. ಅವಳು ಸದಾ ಚಾರ ಸಂಪನ್ನರಾದ ಶಿವಭಕ್ತರ ಮನೆಯಲ್ಲಿ ಬೆಳೆದವಳು. ಯೋಗ್ಯ ಶಿಕ್ಷಣವನ್ನು ಪಡೆದವಳು. ಗುಣಶೀಲ ಸಂಪನ್ನಳು. ಹೀಗೆ ಅವಳು ಸದ್ಗುಣದಿಂದಲೂ ಸೌಂದರ್ಯದಿಂದಲೂ ಸಂಪನ್ನಳಾಗಿದ್ದಳು. ಮಗಳು ದೊಡ್ಡವಳಾದುದರಿಂದ ಅವಳ ತಾಯಿತಂದೆಗಳಿಗೆ ಅವಳ ವಿವಾಹದ ಚಿಂತೆಯು ಪ್ರಾರಂಭವಾಯಿತು. ಆದರೆ ಮಹಾದೇವಿಯಕ್ಕನು ವಿವಾ ಹದ ವಿಚಾರವನ್ನು ಕನಸು ಮನಸಿನಲ್ಲಿಯೂ ಮಾಡಿದ್ದಿಲ್ಲ. ಅವಳು ಯಾವಾಗಲೂ ಶಿವಧ್ಯಾನ, ತಂದೆತಾಯಿಗಳ ಸೇವೆ, ಮನೆಗೆ ಬಂದ ಅತಿಥಿಗಳ ಸತ್ಕಾರ ಮೊದಲಾದ ಸತ್ಕಾರ್ಯಗಳಲ್ಲಿ ತೊಡಗುತ್ತಿದ್ದಳು.

ಮುಂದೆ ಕೆಲವು ದಿವಸಗಳು ಗತಿಸಿದ ನಂತರ ಒಂದು ವಿಚಿತ್ರ ಸಂಗತಿಯು ಒದಗಿತು. ಅದೇ ಗ್ರಾಮದಲ್ಲಿ ಕೌಶಿಕನೆಂಬ ಜೈನ ಅರಸನು ವಾಸಿಸುತ್ತಿದ್ದನು. ಅವನು ಒಂದು ದಿವಸ ಸಹಜವಾಗಿ ಊರೊಳಗೆ ಬಂದಿರಲು ಅಕಸ್ಮಾತ್ತಾಗಿ ಗೆಳತಿಯರ ಸಂಗಡ ಮಾತನಾ ಡುತ್ತಿದ್ದ ಲೋಕೋತ್ತರ ಲಾವಣ್ಯಯುಕ್ತಳಾದ ಮಹಾದೇವಿಯಕ್ಕನನ್ನು ಕಂಡು, ಪ್ರಥಮ ಸಂದರ್ಶನದಲ್ಲಿಯೇ ಆಕೆಯ ಸೌಂದರ್ಯಕ್ಕೆ ಮೆಚ್ಚಿ ಅವಳಲ್ಲಿ ಪ್ರೇಮಭಾವವುಳ್ಳವನಾದನು. ಅವನು ಆ ಊರಿನ ಒಡೆಯ ನಾದುದರಿಂದ ಅವನಿಗೆ ಅಸಾಧ್ಯವಾಗದ ಕಾರ್ಯವು ಒಂದೂ ಇದ್ದಿಲ್ಲ. ಆದುದರಿಂದ ಅವನು ಮಹಾದೇವಿಯಕ್ಕನನ್ನು ಮದುವೆಯಾಗಿಯೇ ತೀರಬೇಕೆಂದು ಆತುರನಾಗಿ ಆಕೆಯ ತಾಯಿತಂದೆಗಳಿಗೆ ತನ್ನ ಉದ್ದೇಶ ವನ್ನು ಹೇಳಿಕಳಿಸಿದನು. ಅವರು ಬಡವರಾದರೂ ಅರಸನ ಸಂಪತ್ತಿಗೆ ಮರುಳಾಗಲಿಲ್ಲ. ತಾವು ಶಿವಭಕ್ತರಿದ್ದು ಅರಸನು ಜೈನನಿದ್ದು ಭವಿ ಯಾದ ಆತನ ಕೂಡ ಶರೀರ ಸಂಬಂಧವು ಅಯೋಗ್ಯವೆಂದು ತಿಳಿದು

ಆತನ ಮಾತಿಗೆ ಅವರು ಒಪ್ಪಿಕೊಳ್ಳಲಿಲ್ಲ. ಅರಸನಾದುದರಿಂದ ಬಲ ತ್ಕಾರದಿಂದಾದರೂ ಅವಳನ್ನು ಕರಕೊಂಡು ಹೋಗುವೆನೆಂದು ಹೇಳಿ ದರೂ ಸಹ ಅವರು ಅದಕ್ಕೆ ಸೊಪ್ಪು ಹಾಕಲಿಲ್ಲ. ಆದರೆ ಅವರಿಗೆ ಇದರಿಂದ ಚಿಂತೆಯು ಮಾತ್ರ ಬಹಳ ಹತ್ತಿತು. ತನ್ನ ಪ್ರೇಮದ ತಾಯಿತಂದೆಗಳ ಚಿಂತೆಯ ಕಾರಣವನ್ನರಿತು ಮಹಾದೇವಿಯಕ್ಕನು ತನ್ನ ಬಡ ಮನೆತನಕ್ಕೆ ಅರಸನಿಂದ ಏನಾದರೂ ಅಪಾಯವಾಗಬಹು ದೆಂದು ಯೋಚಿಸಿ ಒಂದು ಉಪಾಯವನ್ನು ಮಾಡಿದಳು. ಅವನು ಜೈನನಾದರೂ ಚಿಂತೆಯಿಲ್ಲ; ತನ್ನ ಮನಸ್ಸಿನ ಪ್ರಕಾರ ಶಿವದೀಕ್ಷೆ ಯನ್ನು ಹೊಂದಿ ಶಿವಭಕ್ತನಾಗಬಹುದೆಂದೂ ಮತ್ತು ಇದರಿಂದ ತನ್ನ ಉಚ್ಚತರದ ಜೀವನದ ಸಲುವಾಗಿ ಅಧ್ಯಾತ್ಮಸಾಧನೆಯಲ್ಲಿ ಸಹಾಯ ವಾಗಬಹುದೆಂದೂ ತಿಳಿದು ತಾನಾಗಿಯೇ ಆತನ ಅರಮನೆಗೆ ಹೊರ ಡಲು ಇಚ್ಛಿಸಿದಳು. ಆದರೆ ಆಕೆಯು ತಾಯಿತಂದೆಗಳಿಗೆ ಅದು ಯೋಗ್ಯ ಕಾಣಲಿಲ್ಲ. ನೆರೆಹೊರೆಯವರೆಲ್ಲರೂ ಆಕೆಯು ನಡತೆಯು ಬಗ್ಗೆ ಮನ ಸ್ಸಿಗೆ ಬಂದಂತೆ ಅನ್ನಹತ್ತಿದರು. ಆದರೂ ಸತ್ಯಮಾರ್ಗವನ್ನು ಹಿಡಿದು ಸದಾಚಾರದಿಂದ ನಡೆಯುವ ಮಹಾದೇವಿಯಕ್ಕನು,

'ಬೆಟ್ಟದ ಮೇಲೊಂದು ಮನೆಯ ಮಾಡಿ ಮೃಗಂಗಳಿಗಂಜಿದ ಡೆಂತಯ್ಯ! ಸಮುದ್ರದ ತಡೆಯಲ್ಲಿ ಮನೆಯ ಮಾಡಿ ನೊರೆ ತೆರೆಗಳಿ ಗಂಜಿದಡೆಂತಯ್ಯ! ಸಂತೆಯೊಳಗೊಂದು ಮನೆಯ ಮಾಡಿ ಶಬ್ದಕ್ಕೆ ನಾಚಿದಡೆಂತಯ್ಯ! ಲೋಕದೊಳಗೆ ಹುಟ್ಟಿರ್ದ ಬಳಿಕ ಸ್ತುತಿ ನಿಂದೆ ಗಳು ಬಂದಡೆ, ಮನದಲ್ಲಿ ಕೋಪವ ತಾಳದೆ ಸಮಾಧಾನಿಯಾಗಿರ ಬೇಕು.'

ಎಂದು ತನ್ನ ಹಡೆದವರಿಗೆ ಸಮಾಧಾನವನ್ನು ಹೇಳಿ ಹೊರಡಲು ಸಿದ್ಧಳಾದಳು.

ಯಾವ ತೊಂದರೆಯೂ ಇಲ್ಲದೆ ಮಹಾದೇವಿಯಕ್ಕನು ತಾನಾ ಗಿಯೇ ಆತ್ಮಸಂತೋಷದಿಂದ ತನ್ನ ಅರಮನೆಗೆ ಬರುವದನ್ನು ಕೇಳಿ ಅರಸನಿಗೆ ಹಿಡಿಸಲಾರದಷ್ಟು ಹರ್ಷವಾಯಿತು. ಅರಮನೆಯನ್ನು ಅತಿ ಶಯ ವೈಭವದಿಂದ ಶೃಂಗರಿಸಿ ಎಲ್ಲತರದ ವ್ಯವಸ್ಥೆ ಮಾಡಿಸಿದನು. ತರ ತರದ ವಸ್ತ್ರಾಭರಣಗಳನ್ನು ಸಜ್ಜುಗೊಳಿಸಿದನು. ಮತ್ತು ಮಹಾದೇವಿ ಯಕ್ಕನ ಆಗಮನವನ್ನು ಆತುರದಿಂದ ನಿರೀಕ್ಷಿಸುತ್ತ ಕುಳಿತನು. ರಾಜ

ಸೇವಕರು ಆಕೆಯನ್ನು ರಾಜವೈಭವದಿಂದ ಅರಮನೆಗೆ ಕರಕೊಂಡು ಬಂದರು. ಅರಸನು ಅವಳನ್ನು ಬಹಳ ಪ್ರೇಮದಿಂದ ಆದರಿಸಿದನು. ವಸ್ತ್ರಾಲಂಕಾರಗಳನ್ನು ಅರ್ಪಿಸಿದನು. ಮತ್ತು ತನ್ನ ಮನೋರಥವನ್ನು ಸಫಲಗೊಳಿಸಬೇಕೆಂದು ಬೇಡಿಕೊಂಡನು. ಮಹಾದೇವಿಯಕ್ಕನು ತನ್ನದೊಂದು ಮಾತನ್ನು ನಡಿಸಿಕೊಟ್ಟರೆ ಆತನನ್ನು ವರಿಸುವೆನೆಂದು ಹೇಳಿದಳು. ಅರಸನು ಹಾಗೆ ಮಾಡುವೆನೆಂದು ಹೇಳಲು ಮಹಾದೇವಿಯಕ್ಕನು ತನ್ನ ಹೃದಯದಲ್ಲಿದ್ದ ಮಾತನ್ನು ಅಂದರೆ ಅವನು ಶಿವಭಕ್ತನಾಗಬೇಕೆಂದು ಸ್ಪಷ್ಟವಾಗಿ ಹೇಳಿದಳು. ಆದರೆ ಕಾಮಾಂಧನಾದ ಅರಸನು ಆಕೆಯ ಮಾತಿಗೆ ಒಪ್ಪಲಿಲ್ಲ. ಮಹಾದೇವಿಯಕ್ಕನು ಅವನ ಉತ್ತರವನ್ನು ಕೇಳಿದ್ದೊಂದೇ ತಡ, ಈ ಸಂಸಾರವು ನಿಃಸಾರವೆಂದು ತಿಳಿದು ಗಂಭೀರ ಮುದ್ರೆಯನ್ನು ತಾಳಿ ಅವನು ಕೊಟ್ಟ ವಸ್ತ್ರಾಲಂಕಾರಗಳನ್ನೆಲ್ಲಾ ಅವನ ಮುಂದೆಯೇ ಚೆಲ್ಲಿಕೊಟ್ಟು ದಿಗಂಬರ ಮೂರ್ತಿಯಾಗಿ ಕೇಶಾಂಬರವನ್ನು ಧರಿಸಿ 'ನಾನು ಜನ್ಮದಿಂದಿರುವ ವರೆಗೆ ಯಾರನ್ನೂ ವರಿಸುವದಿಲ್ಲ' ಎಂದು ಪ್ರತಿಜ್ಞೆಯನ್ನು ಮಾಡಿ ಹೊರಟಳು. ಅರಸನು ಆಕೆಯ ಗಂಭೀರಭಾವವನ್ನು ಕಂಡು ಆಶ್ಚರ್ಯದಿಂದಲೂ ಭಯದಿಂದಲೂ ಸ್ತಬ್ಧವಾಗಿ ನಿಂತು ಬಿಟ್ಟನು. ಅವನ ವಿಷಯವಾಸನೆಯೆಲ್ಲಾ ಸಂಪೂರ್ಣವಾಗಿ ಇಳಿಯಿತು.

ಹೀಗೆ ಒಳ್ಳೆ ಹದಿನಾರು ವರ್ಷದ ನವಯೌವನದಲ್ಲಿ ಅವಳು ತಂದೆತಾಯಿಗಳನ್ನೂ ಬಂಧುಬಳಗದವರನ್ನೂ ತೊರೆದು ಸರ್ವಸಂಗ ಪರಿತ್ಯಾಗಮಾಡಿ ಬಹು ದಿವಸಗಳಿಂದ ಧ್ಯಾನಿಸುತ್ತಿದ್ದ ತನ್ನ ಇಷ್ಟದೇವರಾದ ಚನ್ನಮಲ್ಲಿಕಾರ್ಜುನನನ್ನು ಶೋಧಿಸುತ್ತಾ ಹೊರಟಳು. ಅವಳ ತಾಯಿತಂದೆಗಳು ಇಲ್ಲಿಯ ವರೆಗೆ ಪ್ರೀತಿಯಿಂದ ತಿನಿಸಿ ಉಣಿಸಿ ಬೆಳಸಿದ ಮಗಳ ಗತಿ ಹೀಗಾಯಿತೆಂದು ಬಹಳ ತಳಮಳಗೊಂಡರು. ಅವರು ಕೊನೆಗೆ ಬಟ್ಟೆಯನ್ನಾದರೂ ಉಟ್ಟುಕೊಂಡು ಹೋಗೆಂದು ಹೇಳಿದರೂ ಅವಳು ಮಲಿನ ವಸ್ತ್ರಗಳನ್ನು ಧರಿಸುವದಿಲ್ಲೆಂದು ಸ್ಪಷ್ಟವಾಗಿ ಹಾಗೇ ನಡೆದಳು. ಮತ್ತು 'ದೇಹ ಮನಸ್ಸುಗಳೆರಡೂ ಶುದ್ಧವಿದ್ದ ಮೇಲೆ ಬಟ್ಟೆಗಳ ಅವಶ್ಯಕತೆಯೇನು?' ಎಂದು ಹೇಳಿ ಅವರನ್ನು ಮನೆಗೆ ಕಳಿಸಿದಳು. ದಾರಿಯಲ್ಲಿ ಕೆಲವು ಹೆಂಗಳೆಯರು ಆಕೆಯನ್ನು ನೋಡಿ ಹುಚ್ಚಿಯೆಂದು ತಿಳಿದು ಅವಳ ವಿಷಯವಾಗಿ ಮಾತಾಡಹತ್ತಿದರು. ಆಗ ಮಹಾದೇವಿಯಕ್ಕನು ಅವರಿಗೆ,

'ಸಾವಿಲ್ಲದ, ಕೇಡಿಲ್ಲದ, ರೂಹಿಲ್ಲದ, ಚಲುವಂಗಾನೊಲಿದೆನವ್ವ. ಎಡೆಇಲ್ಲದ ಕಡೆಇಲ್ಲದ ತೆರಹಿಲ್ಲದ ಕುರುಹಿಲ್ಲದ ಚೆಲುವಂಗಾನೊಲಿದೆ ಎಲೆ ಅವ್ವಾ. ನೀನು ಕೇಳಾ ತಾಯೆ. ಭವವಿಲ್ಲದ ಭಯವಿಲ್ಲದ ನಿರ್ಭಯ ಚಲುವಂಗೊಲಿದೆ ನಾನು. ಕುಲಸೀಮೆ ಇಲ್ಲದ ನಿಸ್ಸೀಮ ಚಲುವಂಗೆ ನಾನೊಲಿದೆ. ಇದುಕಾರಣ ಚನ್ನಮಲ್ಲಿಕಾರ್ಜುನ ಚಲುವ ಗಂಡನೆನಗೆ. ಈ ಸಾವ ಕೆಡುವ ಗಂಡರನೊಯ್ದು ಒಲೆಯೊಳಗಿಕ್ಕು'

ಹೀಗೆ ತನ್ನ ಪ್ರಿಯ ಪತಿಯ ವರ್ಣನೆ ಮಾಡುವಳು. ಅವರು ಅವಳ ಮಾತಿಗೆ ನಗುವರು. ಆದರೆ ಅವಳು ತನ್ನ ಮನಸ್ಸಿನಲ್ಲಾಗುವ ಸಂಕಟವನ್ನೂ ಮತ್ತು ತನ್ನ ಚನ್ನಮಲ್ಲಿಕಾರ್ಜುನನ ಮೇಲಿನ ಅನಿವಾರ ಪ್ರೇಮವನ್ನೂ ಹೀಗೆ ವ್ಯಕ್ತಗೊಳಿಸುವಳು.

'ಗಿರಿಯಲ್ಲದೆ ಹುಲ್ಲುಮೊರಡಿಯಲ್ಲಾಡುವದೇ ನವಿಲು? ಕೊಳನಲ್ಲದೆ ಕಿರಿವಳ್ಳಕ್ಕೆಳಸುವದೆ ಹಂಸೆ? ಮಾಮರ ತಳಿತಲ್ಲದೆ ಸ್ವರಗೈವುದೆ ಕೋಗಿಲೆ? ಪರಿಮಳವಿಲ್ಲದ ಪುಷ್ಪಕ್ಕೆಳಸುವದೆ ಭ್ರಮರ? ಎನ್ನ ದೇವ ಮಲ್ಲಿಕಾರ್ಜುನನಲ್ಲದೆ, ಅನ್ಯಕ್ಕೆಳಸುವದೇ ಎನ್ನ ಮನ ಕೇಳದಿರಿರಾ?'

ಆದರೆ ಆ ಗೆಳತಿಯರಿಗೆ ಇದರ ಅರ್ಥವೇನೂ ತಿಳಿಯುವದಿಲ್ಲ. ಅವರು ತಮ್ಮ ದಾರಿಯನ್ನು ಹಿಡಿದುಹೋಗಲು ಇವಳು ತನ್ನ ದೇವನನ್ನೇ ಧ್ಯಾನಿಸುತ್ತಾ ಅಡವಿಯಲ್ಲಿ ಹಳ್ಳಕೊಳ್ಳಗಳನ್ನು ದರಿಕಂದರಗಳಲ್ಲಿ ಅವನನ್ನು ಶೋಧಿಸುತ್ತ ತಿರುಗುವಳು. ಆದರೆ ಎಷ್ಟು ಬಳಲಿದರೂ ತನ್ನ ನಲ್ಲನಾದ ಚನ್ನಮಲ್ಲಿಕಾರ್ಜುನನು ಕಾಣದಾಗಲು,

'ಹಿಂಡನಗಲಿ ಹಿಡಿವಡೆದ ಕುಂಜರ ತನ್ನ ವಿಂಧ್ಯವ ನೆನೆವಂತೆ ನೆನೆವೆನಯ್ಯ! ಬಂಧನಕ್ಕೆ ಬಂದ ಗಿಳಿ ತನ್ನ ಬಂಧುವ ನೆನೆವಂತೆ ನೆನೆವೆನಯ್ಯ! ಕಂದಾ ನೀನಿತ್ತ ಬಾ ಎಂದು ನೀವು ನಿಮ್ಮಂದವ ತೋರಯ್ಯ ಚನ್ನಮಲ್ಲಿಕಾರ್ಜುನ'

ಎಂದು ದೀನಸ್ವರದಿಂದ ಬೇಡಿಕೊಳ್ಳುವಳು. ಆದರೆ ಅವಳ ಮೊರೆಯನ್ನು ಕೇಳುವವರು ಅಲ್ಲಿ ಯಾರೂ ಇಲ್ಲ.

ಹೀಗೆ ಅವಳು ಬಹಳ ದಾರಿಯನ್ನು ನಡಿದು ದಣುವಿನಿಂದಲೂ ಹಸಿವಿನಿಂದಲೂ ಬಹಳ ಬಳಲಿದಳು. ಆದುದರಿಂದ ಅವಳು ಸಮೀಪ

ದಲ್ಲಿರುವ ಒಂದು ಕೆರೆಯಲ್ಲಿ ಸ್ನಾನಮಾಡಿ, ಕೆಲವು ಫಲಗಳನ್ನು ಸೇವಿಸಿ ನೀರು ಕುಡಿದು ಸ್ವಲ್ಪ ಶಾಂತಳಾಗಿ ಚನ್ನಮಲ್ಲಿಕಾರ್ಜುನನನ್ನು ಪುನಃ ಧ್ಯಾನಿಸುತ್ತ ಒಂದು ಮರಡಿಯಲ್ಲಿ ಸ್ವಲ್ಪ ಒರಗುವಳು. ಕೂಡಲೆ ಅವಳಿಗೆ ನಿದ್ರೆಹತ್ತಿತು. ಮುಂದೆ ಇಳಿಹೊತ್ತಿನ ಸಮಯಕ್ಕೆ ತಂಗಾಳಿಯು ತಂಪಾಗಿ ಸುಳಿಯಲು ಅದರಿಂದ ಎಚ್ಚರಾಗಿ ಸುತ್ತುಮುತ್ತಲಿನ ಸೃಷ್ಟಿ ಸೌಂದರ್ಯವನ್ನೂ ಸಂಜೆಯ ಸೂರ್ಯನ ಹೊಂಬಣ್ಣವನ್ನೂ ನೋಡಿ,

'ಅರಿಸಿನವನೆ ಮಿಂದು, ಹೊಂದುಡಿಗೆಯನೆ ತೊಟ್ಟು, ದೇವಾಂಗವನುಟ್ಟು ಪುರುಷ ಬಾರಾ! ನಿನ್ನ ಬರವು ಎನ್ನಸುವಿನ ಬರವು, ಬಾರಯ್ಯಾ! ಚನ್ನಮಲ್ಲಿಕಾರ್ಜುನಯ್ಯ ಬಂದಾನೆಂದು ಬಟ್ಟೆಗಳ ಬಾಯಾರುತ್ತಿಹೆನು'

ಎಂದು ಪುನಃ ತನ್ನ ಪ್ರಿಯನ ಆಗಮನವನ್ನು ನಿರೀಕ್ಷಿಸುವಳು. ಅಷ್ಟರಲ್ಲಿ ಹೊತ್ತುಮುಳುಗಲು ಅವಳು ಮುಂದೆ ಸಾಗುತ್ತಿರಲು ಕೋಗಿಲೆಗಳ ಮಧುರ ಸ್ವರವು ಕೇಳಿಸುವದು. ಅದನ್ನು ಕೇಳಲಿಕ್ಕೆ ಅವಳು ಅವು ಇದ್ದ ಮಾವಿನ ಮರಗಳ ಕೋಪಿಗೆ ಹೋಗುವಳು. ಅಲ್ಲಿ ಗಿಳಿಗಳು ಇದ್ದು ಚಿಲಿಮಿಲಿ ಸಪ್ಪಳಮಾಡುತ್ತಿದ್ದವು. ಹಂಸ ಪಕ್ಷಿಗಳು ಆನಂದದಿಂದ ಕಲಕಲ ಸಪ್ಪಳಮಾಡುತ್ತಿದ್ದವು. ಭ್ರಮರಗಳು ಝೇಂಕರಿಸುತ್ತಿದ್ದವು. ನವಿಲುಗಳು ನರ್ತಿಸುತ್ತಿದ್ದವು. ಇಷ್ಟು ಚಕ್ಕಂದದಿಂದ ಇದ್ದ ಇವುಗಳೇನಾದರೂ ತನ್ನ ಪ್ರಿಯನ ವಿಷಯವಾಗಿ ಹೇಳಬಹುದೆಂದು,

'ಚಿಲಿಮಿಲಿ ಎಂದೋದುವ ಗಿಳಿಗಳಿರಾ, ನೀವು ಕಾಣಿರೆ, ನೀವು ಕಾಣಿರೆ. ಸರವೆತ್ತಿ ಪಾಡುವ ಕೋಗಿಲಗಳಿರಾ, ನೀವು ಕಾಣಿರೆ, ನೀವು ಕಾಣಿರೆ. ಎರಗಿ ಬಂದಾಡುವ ತುಂಬಿಗಳಿರಾ, ನೀವು ಕಾಣಿರೆ, ನೀವು ಕಾಣಿರೆ. ಕೊಳತಡಿಯೊಳಾಡುವ ಹಂಸೆಗಳಿರಾ, ನೀವು ಕಾಣಿರೆ, ನೀವು ಕಾಣಿರೆ. ಗಿರಿಗಂಹ್ವರದೊಳಗಾಡುವ ನವಿಲುಗಳಿರಾ ನೀವು ಕಾಣಿರೆ, ನೀವು ಕಾಣಿರೆ. ಚನ್ನಮಲ್ಲಿಕಾರ್ಜುನನೆಲ್ಲಿರ್ದಹನೆಂದು ನೀವು ಹೇಳಿರೆ, ನೀವು ಹೇಳಿರೆ.'

ಎಂದು ಸೀತೆಯನ್ನು ಕಳಕೊಂಡ ರಾಮನು ಮತ್ತು ಉರ್ವಶಿಯನ್ನು ಕಳಕೊಂಡ ವಿಕ್ರಮನು ವಿರಹದಿಂದ ಬಳಲಿ ಕಂಡಕಂಡ ಗಿಡಬಳ್ಳಿಗಳನ್ನೂ, ಪಕ್ಷಿಗಳನ್ನೂ ಕೇಳುವಂತೆ ಮಹಾದೇವಿಯಕ್ಕನು ಇವು

ಗಳನ್ನು ಕೇಳಿದಳು. ಆದರೆ ಅಡವಿಯಲ್ಲಿ ಅವಳಿಗೆ ಪ್ರತಿಧ್ವನಿಯು ಹೊರತು ಬೇರೆ ಯಾವ ಉತ್ತರವು ಸಿಗಲಿಲ್ಲ. ಸುತ್ತಲು ಕಗ್ಗತ್ತಲು ಮುಸುಕಲು ಮತ್ತೆ,

'ಚನ್ನಮಲ್ಲಿಕಾರ್ಜುನ, ಹಗಲು ನಾಲ್ಕು ಜಾವ ನಿಮ್ಮ ಕಳವಳ ದಲ್ಲಿಪ್ಪೆ, ನೋಡಯ್ಯ. ಇರುಳು ನಾಲ್ಕು ಜಾವ ನಿಮ್ಮ ವಿಕಳಾವಸ್ಥೆ ಯಲ್ಲಿರ್ಪೆ, ನೋಡಯ್ಯ. ಇರುಳು ಹಗಲು ನಿಮ್ಮ ಕಳವಳದಲ್ಲಿ ಮರೆ ದೊರಗಿದೆನಯ್ಯ. ನಿಮ್ಮೊಲುಮೆ ನಟ್ಟು ಹಸಿವು ತೃಷೆ ನಿದ್ರೆಯು ಮರೆ ತೆನು'

ಹೀಗೆ ಧ್ಯಾನಿಸಿ ತಳಮಳದಿಂದ ಸ್ವಲ್ಪ ಹೊತ್ತು ಮಗ್ಗಲು ಹಚ್ಚ ಲಾಗಿ ಚಂದ್ರೋದಯವಾಗಿ ಚಂದ್ರನು ಮೇಲಕ್ಕೇರಿ ಅಲ್ಲಲ್ಲಿ ತೋಟದಲ್ಲ ಬೆಳದಿಂಗಳು ಬೀಳುವದು. ಬೆಳದಿಂಗಳಲ್ಲಿ ಸ್ವಲ್ಪ ಉಲ್ಹಾಸವುಳ್ಳವಳಾಗಿ ಅತ್ತಿತ್ತ ಚರಿಸಲು ಪುನಃ ಚನ್ನಮಲ್ಲಿಕಾರ್ಜುನನ ನೆನಪಾಗಿ,

'ಅಳಿಸಂಕುಳವೇ, ಮಾಮರವೇ, ಬೆಳುದಿಂಗಳೇ, ಕೋಗಿಲೆಯೇ, ನಿಮ್ಮ ನಿಮ್ಮನೆಲ್ಲರನು ಒಂದು ಬೇಡುವೆನು. ಎನ್ನೊಡೆಯ ಚನ್ನಮಲ್ಲಿ ಕಾರ್ಜುನ ದೇವರ ಕಂಡರೆ ಕರೆದು ತೋರಿರೆ.'

ಎಂದು ಪುನಃ ಬೇಡಿಕೊಳ್ಳುವಳು. ಹೀಗೆ ಹಲವು ಪರಿಯಿಂದ ಅವಳು ಹಲುಬಿದರೂ ಅವಳ ನಲ್ಲನು ಕಾಣಿಸದಿರಲು ಅವಳಿಗೆ ಬಹಳ ವ್ಯಥೆಯಾಗುವದು. ಬೆಳದಿಂಗಳು ಹೆಚ್ಚಾಗಿ ಹಬ್ಬಲು ತಂಗಾಳಿಯು ಬೀಸುವದು. ಆಗ ಅವಳು ತನ್ನ ಪ್ರಿಯನನ್ನು ಕರದು ಕರೆದು ಬೇಸತ್ತು ನಿರಾಶೆಹೊಂದಿ ಕೊನೆಗೆ ತನ್ನ ಕರ್ತವ್ಯವನ್ನು ತಪ್ಪದೆ ಮಾಡುವೆನೆಂದು ಧ್ಯಾನಸ್ಥಳಾಗುವಳು. ಆಗ ಅವಳಿಗೆ ನಿದ್ರೆ ಹತ್ತಿತು. ಮತ್ತು ಅವಳಿಗೆ ಏನೋ ಒಂದು ಪ್ರಕಾರದ ಸಾಕ್ಷಾತ್ಕಾರವಾಗಿ ಮರುದಿನ ಮುಂಜಾನೆ ಅಲ್ಲಿ ತೋಟದಲ್ಲಿ ಭೆಟ್ಟಿಯಾದ ಒಬ್ಬ ಸ್ತ್ರೀಯಳಿಗೆ ತನ್ನ ವಿಶಿಷ್ಟವಾದ ಅನುಭವವನ್ನು ಹೇಳಿದಳು.

'ಅಕ್ಕ ಕೇಳವ್ವ, ಅಕ್ಕಯ್ಯ ನಿನ್ನೆಯಿರುಳಲಿ ನಾನೊಂದು ಕನಸು ಕಂಡೆ. ಚಿಕ್ಕಚಿಕ್ಕ ಜಡೆಗಳ ಸುಲಿಪಲ್ಲ ಗೊರವನು ಭಿಕ್ಷಕ್ಕೆ ಬಂದುದ ಕಂಡೆನವ್ವ. ಮಿಕ್ಕು ಮೀರಿ ಹೋಹನ ಬೆಂಬತ್ತಿ ಕೈವಿಡಿದೆನು. ಆತನ ಅಪ್ಪಿಕೊಂಡು ತಳವೆಳಗಾದೆನೆಲಗೆ'

ತರುವಾಯ ಅವಳು ಅವಳಿಗೆ ತನ್ನ ನಲ್ಲನ ಕೂಡ ವಿಶಿಷ್ಟವಾದ ಮದುವೆಯನ್ನು ವರ್ಣಿಸಿ, ಕೊನೆಗೆ ಅವನು ಪ್ರಸನ್ನನಾಗಿ ಕೂಡಿದ ನೆಂಬ ಆನಂದದಿಂದ ಹೆಚ್ಚಿನ ಜ್ಞಾನವನ್ನು ಪಡೆಯಲಿಕ್ಕೆ ಕಲ್ಯಾಣದ ಲ್ಲಿದ್ದ ಶಿವಾನುಭವ ಮಂಟಪದ ಕಡೆಗೆ ತೆರಳಿದಳು.

ಅಲ್ಲಿ ಭಕ್ತನಾದ ಬಸವೇಶ್ವರ, ಜ್ಞಾನಿಯಾದ ಚನ್ನಬಸವೇಶ್ವರ, ವೈರಾಗ್ಯಶಾಲಿಯಾದ ಅಲ್ಲಮಪ್ರಭು, ಸಿದ್ಧರಾಮೇಶ್ವರ ಮೊದಲಾದ ಶಿವ ಶರಣರು ಸ್ತ್ರೀಸಹಜವಾದ ಲಜ್ಜೆಯನ್ನೂ ದೇಹಾಭಿಮಾನವನ್ನೂ ತ್ಯಾಗ ಮಾಡಿದ ಮಹಾದೇವಿಯಕ್ಕನನ್ನು ಕಂಡು ಆಶ್ಚರ್ಯಚಕಿತರಾದರು. ಬಸವೇಶ್ವರನು ಆಕೆಯನ್ನು ಬಹಳ ಮರ್ಯಾದೆಯಿಂದ ಸತ್ಕಾರಮಾಡಿ ಅಲ್ಲಮಪ್ರಭುವಿಗೆ ಹೀಗೆ ಅವಳ ವಿಷಯವಾಗಿ ಹೇಳಿದನು.

'ರೂಹಿಲ್ಲದಂಗೆ ಒಲಿದವರಿಗೆ ತನುವಿನ ಹಂಗುಂಟೆ? ಮನವಿಲ್ಲ ದವರಿಗೆ ಮಚ್ಚಿದವರಿಗೆ ಅಭಿಮಾನದ ಹಂಗುಂಟೆ? ಕೂಡಲಸಂಗಮ ದೇವಯ್ಯ ಮಹಾದೇವಿಯಕ್ಕ ಈ ಭಕ್ತಿಗೆ ಆವ ಹೊರೆಯು ಇಲ್ಲ ನೋಡಾ ಪ್ರಭುವೆ.'

ಆದರೆ ಅಲ್ಲಮಪ್ರಭುವು ಬಸವೇಶ್ವರನ ಈ ಸ್ತುತಿಪರ ನುಡಿಗಳಿಗೆ ಸಮಾಧಾನನಾಗದೆ ದೊಡ್ಡ ಶಿವಶರಣರನ್ನು ಸಹ ಹಲವು ಪರಿಯಿಂದ ಕಾಡಿ ಪರೀಕ್ಷಿಸಿದ ಆತನು ಮಹಾದೇವಿಯಕ್ಕನನ್ನು ಸಹ ಪರೀಕ್ಷಿಸಬೇ ಕೆಂದು ಆಕೆಯನ್ನು ಕುರಿತು,

'ಉದಮಧದ ಯೌವನವನೊಳಕೊಂಡು, ಸತಿ ನೀನು ಇತ್ತಲೇ ತಕ್ಕೆ ಬಂದೆಯವ್ವ? ಸತಿ ಎಂದರೆ ಮುನಿವರು ಎಮ್ಮ ಶರಣರು ನಿನ್ನ ಪತಿಯ ಕುರುಹು ಹೇಳದರೆ ಬಂದು ಕುಳ್ಳಿರು. ಅಲ್ಲದಿರೆ ತೊಲಗು ತಾಯೆ. ನಮ್ಮ ಗುಹೇಶ್ವರನ ಶರಣರಲ್ಲಿ ಸಂಗಸುಖವನ್ನಿಹಿತವ ಬಯ ಸುವರೆ ನಿನ್ನ ಪತಿ ಯಾರೆಂಬದು ಹೇಳೆ ಅವ್ವಾ.'

ಎಂದು ಅಂಥ ಪ್ರಾಯದ ಹೆಣ್ಣುಮಗಳು ಅಲ್ಲಿಗೆ ಬಂದ ಕಾರಣ ವನ್ನೂ ಆಕೆಯ ಪತಿಯು ಯಾರೆಂಬದನ್ನೂ ಕೇಳಿದನು. ಆಗ ಮಹಾ ದೇವಿಯಕ್ಕನು ಸಮಾಧಾನದಿಂದ,

'ಹರನೆ ಎನಗೆ ಗಂಡನಾಗಬೇಕೆಂದು ಅನಂತಕಾಲ ತಪಸಿದ್ದೆ ನೋಡಾ! ಪ್ರಭುವೆ, ಪಚ್ಚೆಯ ನೆಲಗಟ್ಟು, ಕನಕದ ತೋರಣ, ವಜ್ರದ

ಕಂಥ, ಹವಳದ ಚಪ್ಪರವನಿಕ್ಕಿ, ಮದುವೆಯ ಮಾಡಿದರೆಮ್ಮವರೆನ್ನ ಮದುವೆಯ ಮಾಡಿದರು. ಇದುಕಾರಣ ಚನ್ನಮಲ್ಲಿಕಾರ್ಜುನ ಗಂಡ ನೆನಗೆ, ಮಿಕ್ಕಿನ ಲೋಕದ ಗಂಡರೆನಗೆ ಸಂಬಂಧವಿಲ್ಲಯ್ಯ ಪ್ರಭುವೆ.'

ಎಂದು ತನ್ನ ಮದುವೆಯನ್ನೂ ತನ್ನ ಪ್ರಿಯ ಪತಿಯಾದ ಮಲ್ಲಿಕಾರ್ಜುನನ ವಿಷಯವಾಗಿಯೂ ಹೇಳಿದಳು. ಆದರೆ ಅಲ್ಲಮಪ್ರಭುವು ಕೌಶಿಕ ದೊರೆಯ ಕೂಡ ಒದಗಿದ ಅವಳ ಮಾತುಕಥೆಗಳ ಚರ್ಚೆ ಮಾಡಿದನು. ಅವಳು ಆ ಮಾತು ಮುಗಿದು ಹಳೆಯ ಮಾತಾಯಿತು. ಅದಕ್ಕಾಗಿ ಮರುಗಿ ಆ ಹಳೆ ಜನ್ಮವನ್ನು ತೊರೆದು ಹೊರಟಿದ್ದೇನೆಂದು ಹೇಳಿದಳು. ಮುಂದೆ ಅಲ್ಲಮಪ್ರಭುವು ಸಿಟ್ಟಿನಿಂದ ವಿರಕ್ತಿಯನ್ನು ತಾಳಿ ಬಂದಿರುವಿಯೆಂದು ಆಕೆಗೆ,

'ತನುಸಿರಿಯನಳಿದು ನಿರ್ವಾಣವಾದಲ್ಲಿ ಮನದ ಭ್ರಾಂತು ನಿಶ್ಚಯವಾಗದು. ಕೇಶವೆಂಬ ಸೀರೆಯೇತಕ್ಕೆ ಮರೆಯಾಯಿತ್ತು, ಅಪಮಾನವೆಂತು ಹರಿಯಿತ್ತು? ಅದು ಗುಹೇಶ್ವರ ಲಿಂಗಕ್ಕೆ ಸಲ್ಲದ ವೇಷ.'

ಎಂದು ಅವಳ ವೇಷದ ಬಗ್ಗೆ ಟೀಕೆಮಾಡಿದನು. ಆಗ ಅವಳು ಚನ್ನಮಲ್ಲಿಕಾರ್ಜುನನು ಒಬ್ಬನೇ ತನ್ನ ಪತಿಯೆಂದೂ ತನ್ನ ದೇಹದ ಗುಣಗಳನ್ನೂ ಮರೆತು ಅವನಲ್ಲಿ ಕೂಡಿದೆನೆಂದೂ ಹೇಳಿ ಹೀಗೆ ಅಂದಳು.

'ಕಾಯ ಕರ್ರನೆ ಕಂದಿದರೇನಯ್ಯ? ಮಿರ್ರನೆ ಮಿಂಚಿದರೇನಯ್ಯ? ಅಂತರಂಗ ಶುದ್ಧವಾದ ಬಳಿಕ ಚನ್ನಮಲ್ಲಿಕಾರ್ಜುನ ಲಿಂಗವು ಒಲಿದ ಕಾಯವು ಹೇಗಿದ್ದಡೇನಯ್ಯ?'

ಆಗ ಅಲ್ಲಮಪ್ರಭುವು ಕೊನೆಗೆ ಮತ್ತೊಂದು ಕಠಿಣ ಪ್ರಶ್ನೆಯನ್ನು ಹಾಕಿದನು.

'ದೇವನೊಲಿಯದೆ ನೀನೊಲಿಸಿದೆನೆಂಬುದು ಅದಾವುದಕ್ಕೆ? ಭಾವ ಶುದ್ಧವಾದಲ್ಲಿ ಸೀರೆಯನುಳಿದು ಕೂದಲ ಮರೆ ಮಾಡಲೇತಕ್ಕೆ? ಅದು ಅಂತರಂಗದ ನಾಚಿಕೆ. ಬಾಹ್ಯದಲ್ಲಿ ತೋರಿತ್ತು. ಅದು ಗುಹೇಶ್ವರ ಲಿಂಗಕ್ಕೆ ಒಲವರವಲ್ಲ.'

ಆಗ ಮಹಾದೇವಿಯಕ್ಕನು

'ಫಲಪಕ್ವವಾದಲ್ಲದೆ ಹೊರಗಣ ಸಿಪ್ಪೆ ಒಪ್ಪಗೆಡದು. ಕಾಮದ ಮುದ್ರೆಯ ಕಂಡು ನಿಮಗೆ ನೋವಾದಿತ್ತೆಂದು ಕೂದಲಮರೆಯ ಕಲ್ಪಿ

ಸಿದೆ. ಇದಕ್ಕೆ ನೋವೇಕೆ ? ಕಾಡದಿರಣ್ಣಾ ಚೆನ್ನಮಲ್ಲಿಕಾರ್ಜುನ ದೇವರ ದೇವನ ಒಳಗಾದವಳಾ.'

ಎಂದು ಆತನ ಪ್ರಶ್ನೆಗೆ ಹೃದಯಂಗಮವೂ ಹೃದಯಭೇಧಕವೂ ಸಮರ್ಪಕವೂ ಆದ ಪ್ರತ್ಯುತ್ತರವನ್ನು ಕೊಡಲು ಅಲ್ಲಮಪ್ರಭುವು ಅವಳ ನಿಜವಾದ ವಿರಕ್ತಿಯನ್ನು ಕಂಡು ಅವಳನ್ನು ಬಹಳ ಕೊಂಡಾಡಿದನು. ತರುವಾಯ ಅವಳು ಅವರೆಲ್ಲರ ಸಂಗದಿಂದ ತನಗುಂಟಾದ ಪರಮಾ ನಂದವನ್ನೂ ಮನದ ಶುದ್ಧಿಯನ್ನೂ ಹೀಗೆ ವಿವರಿಸುವಳು.

'ತನು ಶುದ್ಧವಾಯಿತ್ತು ಶಿವಭಕ್ತರೊಕ್ಕುದಕೊಂಡು. ಎನ್ನ ಮನ ಶುದ್ಧವಾಯಿತ್ತು ಅಸಂಖ್ಯಾತರ ನೆನೆದು. ಎನ್ನ ಕಂಗಳು ಶುದ್ಧ ವಾಯಿತ್ತು ಸಕಲ ಪುರಾತನರ ನೋಡಿ. ಎನ್ನ ಶ್ರೋತ್ರ ಶುದ್ಧವಾಯಿತ್ತು ಅವರ ಕೀರ್ತಿಯ ಕೇಳಿ. ಎನ್ನ ಭಾವನೆ ಎನಗಿದು ಜೀವನವು ಕೇಳಾ ತಂದೆ. ನೆಟ್ಟನೆ ನಿಮ್ಮುವ ಪೂಜಿಸಿ ಭವಗೆಟ್ಟೆ ಕೇಳಾ ಚೆನ್ನಮಲ್ಲಿ ಕಾರ್ಜುನಾ.'

ಮುಂದೆ ಅವಳು ಶಿವಾನುಭವ ಮಂಟಪದಲ್ಲಿ ಇದ್ದುಕೊಂಡು ಅಲ್ಲಿ ತನ್ನ ಉಚ್ಚ ವಿಚಾರಗಳನ್ನು ವ್ಯಕ್ತಗೊಳಿಸುತ್ತಿದ್ದಳು. ಮತ್ತು ಆ ಶರ ಣರ ಸಂಗಡ ಇರುವಾಗ ತನಗುಂಟಾದ ಸೌಖ್ಯವನ್ನೂ ಹೀಗೆ ಹೇಳಿ ರುವಳು.

'ಆಡುವುದು, ಪಾಡುವುದು, ಕೇಳುವುದು, ಹೇಳುವುದು, ನಡೆ ವುದು, ನುಡಿವುದು, ಸರಸ ಸಮ್ಮೇಳವಾಗಿಪ್ಪುದಯ್ಯ ಶರಣರೊಡನೆ. ಚೆನ್ನಮಲ್ಲಿಕಾರ್ಜುನಯ್ಯ, ನೀ ಕೊಟ್ಟ ಆಯುಷ್ಯವುಳ್ಳನ್ನಕ್ಕರ, ಲಿಂಗ ಸುಖಿಗಳ ಸಂಗದಲ್ಲಿ ದಿನಂಗಳ ಕಳೆವೆನು.'

ಅಲ್ಲಿ ಒಬ್ಬೊಬ್ಬರಿಂದ ತನಗೆ ದೊರೆತ ಪ್ರಸಾದದ ಸಂಗತಿಯನ್ನು ಹೀಗೆ ಹೇಳಿದ್ದಾಳೆ.

'ಬಸವಣ್ಣನ ಮನೆಯ ಮಗಳಾದ ಕಾರಣ ಭಕ್ತಿಪ್ರಸಾದವ ಕೊಟ್ಟನು. ಪ್ರಭುದೇವರ ತೊತ್ತಿನ ತೊತ್ತಿನ ಮರಿದೊತ್ತಿನ ಮಗ ಳಾದ ಕಾರಣ ಜ್ಞಾನಪ್ರಸಾದವ ಕೊಟ್ಟನು. ಸಿದ್ಧರಾಮನ ಶಿಶುಮಗ ಳಾದ ಕಾರಣ ಪ್ರಾಣಪ್ರಸಾದವ ಕರುಣಿಸಿಕೊಟ್ಟನು. ಮಡಿವಾಳಯ್ಯನ

ಮಗಳಾದ ಕಾರಣ ನಿರ್ಮಲಪ್ರಸಾದವ ನಿಶ್ಚಯಿಸಿಕೊಟ್ಟನು. ಇಂತೀ ಅಸಂಖ್ಯಾತ ಗಣಂಗಳೆಲ್ಲರೂ ತಮ್ಮ ಕರುಣದ ಕಂದನೆಂದು ತಲೆದಡ ಹಿದ ಕಾರಣ ಚನ್ನಮಲ್ಲಿಕಾರ್ಜುನಯ್ಯನ ಶ್ರೀಪಾದಕ್ಕೆ ಯೋಗ್ಯಳಾದೆನು.'

ಅವಳು ಶಿವಾನುಭವ ಮಂಟಪದಲ್ಲಿ ತನ್ನ ಉಚ್ಚವಿಚಾರಗಳಿಂದಲೂ ಪವಿತ್ರ ಜೀವನದಿಂದಲೂ ಎಲ್ಲರಿಂದಲೂ ಪೂಜ್ಯತೆಯನ್ನು ಹೊಂದಿ ದಳು. ಅವಳ ಯೋಗ್ಯತೆಯ ವಿಷಯಕ್ಕೆ ಚನ್ನಬಸವೇಶ್ವರನು ಹೀಗೆ ಉದ್ಗಾರ ತೆಗೆದಿರುವನು.

'ಅಜಕೋಟಿ ವರುಷದವರೆಲ್ಲರೂ ಹಿರಿಯರೇ? ಹುತ್ತೇರಿ ಬೆತ್ತ ಬೆಳೆದ ತಪಸ್ವಿಗಳೆಲ್ಲರೂ ಹಿರಿಯರೆ? ನಡು ಮುರಿದು, ತಲೆ ನಡುಗಿ ನೆರೆತೆರೆ ಹೆಚ್ಚಿ, ಮತಿಗೆಟ್ಟು, ಒಂದನಾಡ ಹೋಗಿ ಒಂಭತ್ತನಾಡುವ ಅಜ್ಞಾನಿಗಳೆಲ್ಲರು ಹಿರಿಯರೆ? ಅನುವರಿದು ಘನವ ಬೆರಿಸಿ ಹಿರಿದು ಕಿರಿದೆಂಬುವ ಭೇದವ ಮರೆದು ಕೂಡಲ ಚನ್ನಸಂಗಯ್ಯನಲ್ಲಿ ಬೆರಿಸಿ ಬೇರಿಲ್ಲದಪ್ಪ ಹಿರಿಯತನ ನಮ್ಮ ಮಹಾದೇವಿಯಕ್ಕನಿಗಾಯಿತ್ತು.'

ಮುಂದೆ ಮಹಾದೇವಿಯಕ್ಕನು ಬಸವೇಶ್ವರನು ಕಲ್ಯಾಣದಲ್ಲಿ ಇರುವ ವರೆಗೂ ಅಲ್ಲಿಯೇ ಇದ್ದಳು. ತರುವಾಯ ವೀರಶೈವರಿಗೂ ಜೈನ ರಿಗೂ ಕಲಹವು ಉಂಟಾಗಲು ಶಿವಾನುಭವ ಮಂಟಪದ ಶರಣರೆಲ್ಲ ಬೇರೆ ಬೇರೆ ಕಡೆಗೆ ಹೊರಡುವರು. ಶಾಂತನಾದ ಬಸವೇಶ್ವರನು ಮೊದಲೇ ಸಂಗಮದಲ್ಲಿ ಐಕ್ಯನಾಗುವನು. ಚನ್ನಬಸವೇಶ್ವರ ಮೊದ ಲಾದವರು ಉಳಿವೆಗೆ ಹೋಗುವರು. ಮಹಾದೇವಿಯಕ್ಕನು ಅಲ್ಲಮ ಪ್ರಭುವಿನೊಡನೆ ತನ್ನ ಇಷ್ಟದೇವತೆಯಾದ ಚನ್ನಮಲ್ಲಿಕಾರ್ಜುನನೆಡೆಗೆ ಹೊರಡುವಳು. ಮುಂದೆ ಅಲ್ಲಮಪ್ರಭುವು ಮಾಯವಾಗುವನು. ಕೊನೆಗೆ ಮಹಾದೇವಿಯಕ್ಕನು ಒಬ್ಬಳೇ ಧ್ಯಾನ ಮಾಡುತ್ತ ಶ್ರೀ ಶೈಲದ ಕಡೆಗೆ ಸಾಗುವಳು. ಸ್ವಲ್ಪ ದಾರಿ ನಡೆದು ಮುಂದೆ ಹೋಗುವಷ್ಟರಲ್ಲಿ ಕೆಲವು ಭಕ್ತರು ಭಜನೆ ಮಾಡುತ್ತ ಶ್ರೀ ಶೈಲಕ್ಕೆ ಹೋಗುತ್ತಿದ್ದು ಅವರನ್ನು ಕಂಡು ಓಡುತ್ತ ಹೋಗಿ ಕೂಡಿದಳು. ತಾನೂ ಚನ್ನಮಲ್ಲಿಕಾರ್ಜುನ ದರ್ಶನಕ್ಕೆ ಬರುತ್ತೇನೆಂದು ಹೇಳಿದಳು. ಅವರು ಕಾವಿಯ ಬಟ್ಟೆಗಳ ನ್ನುಟ್ಟು, ಕೊರಳಲ್ಲಿ ಲಿಂಗ ರುದ್ರಾಕ್ಷಿ ಮಾಲೆಗಳನ್ನು ಧರಿಸಿ, ಮೈಗೆಲ್ಲಾ ಭಸ್ಮವನ್ನು ಹಚ್ಚಿಕೊಂಡು ನಡೆದಿದ್ದರು. ಇವಳಲ್ಲಿ ಅಂಥ ಬಾಹ್ಯ ಚಿನ್ಹ ಗಳಾದ ಲಿಂಗ ಮೊದಲಾದವು ಇಲ್ಲದ್ದನ್ನೂ ಬತ್ತಲೆಯಿದ್ದದ್ದನ್ನೂ ಕಂಡು

ತಾವು ಅಚ್ಚ ಪ್ರಸಾದಿಗಳು ನಿಚ್ಚ ಪ್ರಸಾದಿಗಳು ' ಇವಳೆಂಥ ಭಕ್ತಳು ಭಕ್ತಿಯು ಶೀಲವಿಲ್ಲ... ಇವಳು ಭವಿಯು ' ಎಂದು ಹೀಯಾಳಿಸುವರು. ಆಗ ಮಹಾದೇವಿಯಕ್ಕನು,

' ಅಯ್ಯ, ಶೀಲ ಶೀಲ ವೆಂತೆಂಬಿರಯ್ಯ ? ಶೀಲದ ನೆಲೆಯ ಬಲ್ಲರೆ ಹೇಳಿರೋ. ಅರಿಯದಿರ್ದಡೆ ಕೇಳಿರೋ. ಕಾಮ ಒಂದು ಭವಿ, ಕ್ರೋಧ ಎರಡನೆಯ ಭವಿ, ಇಂತು ಲೋಭ, ಮೋಹ, ಮದ, ಮತ್ಸರ, ಆಮಿಷ ಈ ಏಳು ಭವಿಗಳು ತಮ್ಮೊಳಗಿಟ್ಟುಕೊಂಡು ಲಿಂಗವಿಲ್ಲದವರ ಭವಿಭವಿ ಎಂಬರು. ತಮ್ಮಂತರಂಗದಲ್ಲಿದ್ದ ಲಿಂಗಾಂಗದ ಸುದ್ದಿಯನರಿಯದೆ ಅಚ್ಚ ಪ್ರಸಾದಿ, ನಿಚ್ಚ ಪ್ರಸಾದಿ, ಸಮಯ ಪ್ರಸಾದಿಗಳೆಂದು ಜಲಕ್ಕೆ ಕನ್ನವನಿಕ್ಕಿ ಉದಕವ ತಂದು ಲಿಂಗಕ್ಕೆ ಮಜ್ಜನಕ್ಕೆರೆವ ಹಗಲಗಳ್ಳರಿಗೆ ಮೆಚ್ಚುವನೆ ಚೆನ್ನಮಲ್ಲಿಕಾರ್ಜುನ '

ಎಂದು ಅವರಿಗೆ ನಿಜವಾದ ಭವಿಯು ಯಾರೆಂಬದನ್ನು ಚನ್ನಾಗಿ ತಿಳಿಸಿ ಕೊಟ್ಟು ಒಬ್ಬಳೇ ಸಾಗುವಳು. ಮುಂದೆ ಸ್ವಲ್ಪ ದೂರ ಹೋದ ಬಳಿಕ ತನಗೆ ಸಂಗಡಿಗರು ಯಾರೂ ಬೇಡವೆಂದೂ ಮತ್ತು ಯಾರ ಸಹಾಯವೂ ಸಹ ಅವಶ್ಯವಿಲ್ಲೆಂದೂ, ಧೈರ್ಯತಾಳಿ,

' ಹಸಿವಾದೊಡೆ ಭಿಕ್ಷಾನ್ನಗಳುಂಟು, ತೃಷೆಯಾದೊಡೆ ಕೆರೆ ಹಳ್ಳ ಭಾವಿಗಳುಂಟು, ಶಯನಕ್ಕೆ ಹಾಳು ದೇಗುಲಗಳುಂಟು, ಚನ್ನಮಲ್ಲಿ ಕಾರ್ಜುನಯ್ಯ, ಆತ್ಮಸಂಗಾತಕ್ಕೆ ನೀನೆನಗುಂಟು '

' ಆರೂ ಇಲ್ಲದವಳೆಂದು ಅಳಿಗೊಳಲು ಬೇಡ ಕಂಡೆಯ್ಯ. ಏನು ಮಾಡಿದಡೆಯೂ ನಾಸಂಜುವಳಲ್ಲ. ತರಗೆಲೆಯ ಮೆಲ್ಲಿದ್ದು ನಾನಿಹೆನು. ಸುರಿಗೆಯ ಮೇಲೊರಗಿ ನಾನಿಹೆನು. ಚನ್ನಮಲ್ಲಿಕಾರ್ಜುನಯ್ಯ ಕರ ಕೆಡೆ ನೋಡಿದೊಡೆ, ಒಡಲನು ಪ್ರಾಣವನು ನಿಮಗೊಪ್ಪಿಸಿ ಶುದ್ಧಳಹೆನು '

ಹೀಗೆ ಅಂದು ಮುಂದೆ ಸಾಗಲು ಮೋಡವು ಕವಿದು ಮಿಂಚು ಹೊಳೆದು ಗುಡುಗಿನ ಸಪ್ಪಳವಾಗುತ್ತದೆ. ಆಗ ಅವಳು,

' ಕಿಡಿ ಕಿಡಿ ಕೆದರಿದಡೆ ಎನಗೆ ಹಸಿವು ತೃಷೆ ಅಡಗಿತೆಂಬೆನು. ಮುಗಿಲು ಹರಿದು ಬಿದ್ದರೆ, ಎನಗೆ ಮಜ್ಜನಕ್ಕೆರೆದರೆಂಬೆನು. ಗಿರಿ ಮೇಲೆ

ಬಿದ್ದರೆ, ಎನಗೆ ಪುಷ್ಪವೆಂಬೆನು. ಚನ್ನಮಲ್ಲಿಕಾರ್ಜುನಯ್ಯ ಶಿರಹರಿದು ಪ್ರಾಣ ನಿಮಗರ್ಪಿತವೆಂಬೆನು'

ಹೀಗೆ ಅಂದು ಧ್ಯಾನಿಸುತ್ತ ನಿಂತಳು. ಮಳೆಯಾಗಿ ಮೋಡವೆಲ್ಲಾ ಹೋಗಿ ಆಕಾಶವು ಸ್ವಚ್ಛವಾಯಿತು. ಶ್ರೀ ಶೈಲದ ಬೆಟ್ಟವೂ ಕಾಣಿಸ ಹತ್ತಿತು. ಹಾಗೇಯೇ ಅವಳು ಮುಂದೆ ಸಾಗಿ ಪರ್ವತವನ್ನೇರಿದಳು. ಅಲ್ಲಿ ಕದಳಿಯು ಬನವಿದ್ದು ಮಹಾದೇವಿಯಕ್ಕನು ಚನ್ನಮಲ್ಲಿಕಾರ್ಜುನನನ್ನು ನೆನಿಸುತ್ತ ಅಲ್ಲಿಗೆ ಹೋಗುವಳು. ಅಲ್ಲಿ ಅವಳಿಗೆ ತನ್ನ ಗುರುವಿನ ದರ್ಶನವಾಯಿತು. ಆಗ ಅವಳು ತನ್ನನ್ನು ತನ್ನೊಳಗೆ ಐಕ್ಯ ಮಾಡಿಕೊಳ್ಳೆಂದು ಬೇಡಿಕೊಳ್ಳಲು, ಆ ಮೂರ್ತಿಯು ಅವಳನ್ನು ಪ್ರೀತಿಯಿಂದ ಅಪ್ಪಿಕೊಂಡ ಕೂಡಲೆ ಅವಳು ಲಿಂಗೈಕ್ಯಳಾಗುವಳು. ಹೀಗೆ ಅವಳು ತನ್ನ ಪ್ರಿಯ ಚನ್ನಮಲ್ಲಿಕಾರ್ಜುನನ ಹೃದಯಕಮಲದಲ್ಲಿ ಅಡಗುವಳು.

ಇಂಥ ಉಜ್ವಲವಾದ, ಉದಾತ್ತವಾದ, ಪರಮ ಪವಿತ್ರವಾದ ಧೀರ ಗಂಭೀರವಾದ, ತೇಜಃಪುಂಜವಾದ ಜೀವನದಿಂದ ಮಹಾದೇವಿಯಕ್ಕನು ಮಹಾ ಪುಣ್ಯಾತ್ಮಳಾಗಿ ಎಲ್ಲರಿಗೂ ಪರಮಪೂಜ್ಯಳಾಗಿದ್ದಾಳೆ. ಆಕೆಯ ಜೀವನದಲ್ಲಿ ಬ್ರಹ್ಮಚರ್ಯದ ತೇಜಸ್ಸು ಓಜಸ್ಸು ಉಕ್ಕುತ್ತಿರುವದರಿಂದ ಅಂಥ ಅವಳ ಪವಿತ್ರವಾದ ಹೃದಯದಿಂದ ಹೊರಹೊಮ್ಮಿದ ವಚನಗಳಲ್ಲಿಯಾದರೂ ಆ ತೇಜಸ್ಸು ಓಜಸ್ಸು ತುಂಬಿ ತುಳುಕುತ್ತವೆ. ಈ ತರದ ಜೀವನದಿಂದ ಅವಳು ಒಬ್ಬ ಪ್ರತಿಭಾ ಸಂಪನ್ನಳಾದ ರಸಿಕಳೂ ಆಗಿದ್ದಾಳೆ. ಅವಳ ದಿವ್ಯ ವಚನಗಳು ಕನ್ನಡಸಾಹಿತ್ಯದಲ್ಲಿ ದಿವ್ಯ ಅಮೃತದ ಬಿಂದುಗಳಂತೆ ಮಾಧುರ್ಯವನ್ನು ಒಳಗೊಂಡಿವೆ. "ಕಲಾರಮಣಿಯು ಅಂತರಂಗದಲ್ಲಿ ತಪಸ್ವಿನಿ ಬಹಿರಂಗದಲ್ಲಿ ತೇಜಸ್ವಿನಿ" ಯೆಂದು ಕರ್ನಾಟಕ ಆಧುನಿಕ ಕವಿವರ್ಯರಾದ ಕೆ. ವಿ. ಪುಟ್ಟಪ್ಪನವರು ಹೇಳಿರುವದನ್ನು ನೋಡಿದರೆ ಮಹಾದೇವಿಯಕ್ಕನೂ ಸಹ ಕಲೋಪಾಸಕಳಾದ ತಪಸ್ವಿನಿಯು. ಆದರೆ ಕಲೋಪಾಸನೆಯನ್ನು ಮಾಡಬೇಕೆಂದು ಅವಳ ಉದ್ದೇಶವಿರಲಿಲ್ಲ. ಆದರೆ ಅವಳು ಕೈಕೊಂಡ ಉಜ್ವಲವಾದ ಜೀವನವೇ ವಚನಗಳ ಮೂಲಕ ಕಲೋಪಾಸನೆಯನ್ನು ಸಹಜವಾಗಿಯೇ ಮಾಡಿಸಿತು. ಆಕೆಯ ಜೀವನವೆಲ್ಲ ಆಕೆಯ ವಚನಗಳಿಂದ

ವ್ಯಕ್ತವಾಗುತ್ತದೆ. ಹೀಗೆ ಆಕೆಯ ದಿವ್ಯ ವಚನಗಳು ಮತ್ತು ಉಜ್ವಲ ಜೀವನವು ಇವು ಎರಡೂ ಕೂಡಿ ಒಂದನ್ನೊಂದು ಅಗಲದಂತೆ ಗಂಗಾ ಯಮುನಾನದಿಗಳ ಪ್ರವಾಹಗಳ ಸಂಯೋಗದಂತೆ ಕೂಡಿಯೇ ಸ್ಫೂರ್ತಿ ಯಿಂದ ಹರಿಯುತ್ತವೆ. ಜೀವನವಿದ್ದಂತೆ ಸಾಹಿತ್ಯ, ಸಾಹಿತ್ಯದಂತೆ ಜೀವನ ಎಂಬ ಮಾತು ಇಲ್ಲಿ ಸ್ಪಷ್ಟವಾಗಿ ಕಾಣುತ್ತದೆ. ಆಕೆಯ ವಚನಗಳು ತತ್ವಗರ್ಭಿತವೂ ಅರ್ಥಗರ್ಭಿತವೂ ಮತ್ತು ಭಾವಗರ್ಭಿತವೂ ಇರುತ್ತವೆ. ಆಕೆಯು ಪರಮಾತ್ಮನ ಮೇಲೆ ಮೋಹವುಳ್ಳವಳಾಗಿ ಆತ ನನ್ನು ಕಾಣಲು ಇಚ್ಛಿಸಿ, ಹಲುಬಿ ಹಂಬಲಿಸಿ ಬಳಲಿ ಬೆಂಡಾಗಿ, ಮೊರೆಯಿಟ್ಟು ಕರೆಯುವದನ್ನೂ ಮುಂದೆ ಒಮ್ಮೆ ಅವನ ದರ್ಶನವಾಯಿ ತೆಂದೂ ತೋರಿಸುವ ಆಕೆಯ ಕೆಲವು ವಚನಗಳು ಡಾ. ರವೀಂದ್ರನಾಥ ಟಾಗೋರರ ಗೀತಾಂಜಲಿ (*Gitanjali*) ಯೊಳಗಿನ ಕವನಗಳಿಗೆ ಹೋಲುತ್ತವೆ. ಬಸವೇಶ್ವರ ಮೊದಲಾದವರ ವಚನಗಳಂತೆ ಈಕೆಯ ವಚನಗಳಾದರೂ ಸರಳವಾದ ಸರಸವಾದ ಮೃದುಮಧುರವಾದ ಶಬ್ದ ಗಳಿಂದ ಕೂಡಿ ಸಣ್ಣ ಸಣ್ಣ ವಾಕ್ಯಗಳಾಗಿ ಕಾವ್ಯಾಂಶಗಳಿಂದ ಕೂಡಿದ್ದ ರಿಂದ ಕಾವ್ಯಮಯವಾದ ಗದ್ಯದಲ್ಲಿದ್ದು ಕನ್ನಡ ಗದ್ಯಸಾಹಿತ್ಯಕ್ಕೆ ತಳ ಹದಿಯಾಗಿ ಇಡೀ ಕನ್ನಡ ಸಾಹಿತ್ಯದಲ್ಲಿ ಅಪೂರ್ವವಾದ ದಿವ್ಯಕಾಂತಿ ಯಿಂದ ಹೊಳೆಯುತ್ತವೆ. ಇವುಗಳನ್ನು ಓದುವಾಗ ಶಬ್ದಮಾಧುರ್ಯವು ಸಹಜವಾಗಿಯೇ ಹೊರಡುತ್ತದೆ. ಉಪಮೆಗಳನ್ನು ಉಪಯೋಗಿಸು ವಾಗ ಇವಳು ಕವಿಕಾಲಿದಾಸನನ್ನು ಕೂಡ ಸರಿಗಟ್ಟುವಳು. ಈ ಎಲ್ಲ ಕಾರಣಗಳಿಂದ ಮಹಾದೇವಿಯಕ್ಕನಿಗೆ ಕನ್ನಡ ಸಾಹಿತ್ಯದಲ್ಲಿ ಒಂದು ವಿಶಿಷ್ಟ ಸ್ಥಾನವು ಆದೆ. ಮಾದರಿಗಾಗಿ ಇನ್ನೂ ಕೆಲವು ವಚನಗಳನ್ನು ನೋಡಬಹುದು.

"ನೆಲದ ಮರೆಯ ನಿಧಾನದಂತೆ, ಫಲದ ಮರದ ರುಚಿಯಂತೆ, ಸಿಲೆಯ ಮರೆಯ ಹೇಮದಂತೆ, ತಿಲದ ಮರೆಯ ತೈಲದಂತೆ, ಭಾವದ ಮರೆಯ ಬ್ರಹ್ಮವಾಗಿಪ್ಪ ಚನ್ನಮಲ್ಲಿಕಾರ್ಜುನನ ನಿಲವನಾರು ಅರಿಯ ಬಾರದು."

"ಚಂದನವ ಕಡಿದು ಕೊರೆದು ತೇದೊಡೆ, ನೊಂದೆನೆಂದು ಕಂಪ ಬಿಟ್ಟಿತ್ತೆ ? ತಂದು ಸುವರ್ಣವ ಕಡಿದೊರೆದೊಡೆ, ಬೆಂದು ಕಳಂಕ ಹಿಡಿದಿತ್ತೆ ? ಸಂದು ಸಂದು ಕಡಿದ ಕಬ್ಬನು ಗಾಣದಲಿಕ್ಕಿ ಬೆಂದು

ಪಾಕಾಗುಳ್ಳ ಸಕ್ಕರೆಯಾಗಿ ನೊಂದೆನೆಂದು ಸವಿಯು ಬಿಟ್ಟಿತ್ತೆ? ನಾ ಹಿಂದೆ ಮಾಡಿದ ಹೀನಂಗಳೆಲ್ಲವ ತಂದು ಮುಂದಿಳುಹಲು ನಿಮಗೆ ಹಾನಿಯೇ? ಎನ್ನ ತಂದೆ ಚನ್ನಮಲ್ಲಿಕಾರ್ಜುನಯ್ಯ ಕೊಂದಡೆ ಶರಣೆಂಬುದ ಮಾಣೆ.”

“ಅರಲು ಗೊಂಡ ಕೆರೆಗೆ ತೊರೆ ಬಂದು ಹಾಯ್ದಂತೆ, ಬರಲು ಗೊಂಡ ಸಸಿಗೆ ಮಳೆ ಸುರಿದಂತಾಯಿತ್ತು ನೋಡಾ. ಇದೆ ಎನಗೆ ಇಹದ ಸುಖ, ಪರದ ಗತಿ, ನಡೆದು ಬಂದಂತಾಯಿತ್ತೆನಗೆ. ಚನ್ನ ಮಲ್ಲಿಕಾರ್ಜುನನೆಂಬ ಗುರುಪಾದವ ಕಂಡು ಧನ್ಯಳಾದೆನು.

“ಬಂಜೆ ಬೇನೆಯನರಿಯಳು. ಬಲದಾಯಿ ಮುದ್ದು ಬಲ್ಲಳೆ? ನೊಂದ ನೋವ ನೋಯದವರೆತ್ತ ಬಲ್ಲರು? ಚನ್ನಮಲ್ಲಿಕಾರ್ಜುನ, ನೀನಿರಿದ ಅಲಗು ಒಡಲಲ್ಲಿ ಮುರಿದು ಹೊರಳುವಳ ನೀವೆತ್ತ ಬಲ್ಲಿರೆ ಎಲೆ ತಾಯಿಗಳಿರಾ.”

“ಹಣ್ಣು ಮೆದ್ದ ಬಳಿಕ ಆ ಮರವನಾರು ತರಿದರೇನು? ಹೆಣ್ಣು ಬಿಟ್ಟ ಬಳಿಕ ಆಕೆಯನಾರು ಕೂಡಿಕೊಂಡರೇನು? ಮಣ್ಣು ಬಿಟ್ಟ ಬಳಿಕ ಆ ಕೆಯ್ಯಯನಾರುತ್ತರೇನು? ಚನ್ನಮಲ್ಲಿಕಾರ್ಜುನನರಿದ ಬಳಿಕ ಆ ಕಾಯವ ನಾಯಿ ತಿಂದರೇನು? ನೀರ ಕುಡಿದರೇನು?

ಆಕೆಯ ವಚನಗಳ ಮಹತ್ವವನ್ನು ಅವಳ ಜೀವಮಾನದಲ್ಲಿಯೇ ಕಂಡ ಚನ್ನಬಸವೇಶ್ವರನು,

“ಆದ್ಯರ ಅರವತ್ತು ವಚನಕ್ಕೆ ದಣ್ಣಾಯಕರ ಇಪ್ಪತ್ತು ವಚನ, ದಣ್ಣಾಯಕರ ಇಪ್ಪತ್ತು ವಚನಕ್ಕೆ ಪ್ರಭುದೇವರ ಹತ್ತು ವಚನ, ಪ್ರಭು ದೇವರ ಹತ್ತು ವಚನಕ್ಕೆ ಅಜಗಣ್ಣನ ಐದು ವಚನ, ಅಜಗಣ್ಣನ ಐದು ವಚನಕ್ಕೆ ಕೂಡಲಚನ್ನಸಂಗಯ್ಯನಲ್ಲಿ ಮಹಾದೇವಿಯಕ್ಕಗಳ ಒಂದು ವಚನ ಕಾಣಾ ಸಿದ್ಧರಾಮಯ್ಯ.”

ಎಂದು ಹೇಳಿದ ಮಾತು ಆಕೆಯ ಮುಖಸ್ತುತಿಯ ಅತ್ಯುಕ್ತಿಯಲ್ಲ; ಆದರೆ ವಿಮರ್ಶಾತ್ಮಕ ವಿಚಾರಪೂರ್ವಕವಾದ ಅಭಿಪ್ರಾಯವು.

ಮಹಾದೇವಿಯಕ್ಕನು ವಿರಕ್ತಳಾಗಿ ತಪಸ್ವಿನಿಯಾದರೂ ಜೀವನ ವನ್ನು ತುಚ್ಛವೆಂದವಳಲ್ಲ. ಈ ಜಗತ್ತು ಪರಮಾತ್ಮನದು; ಇದರ

ಜೀವನವು ಪರಮಾತ್ಮನದು. ಆದುದರಿಂದ ಜೀವನದಲ್ಲಿ ನಮಗೆ ಆದರ ಗೌರವಗಳಿರಬೇಕು. ಜೀವನವು ಕೆಡುಕಲ್ಲ. ದೇಹವನ್ನೂ ಮನಸ್ಸನ್ನೂ ಪರಿಶುದ್ಧವಾಗಿಟ್ಟುಕೊಂಡು ಪೌರುಷದಿಂದಲೂ, ತೇಜಸ್ಸಿನಿಂದಲೂ, ಯಾವಾಗಲೂ ನಗುಮುಖದಿಂದಲೂ ಜೀವಿಸಬೇಕೆಂಬ ಜೀವನೋತ್ಸಾಹವು ಆಕೆಯ ದಿವ್ಯ ವಚನಗಳಿಂದಲೂ, ಉಜ್ವಲವಾದ ಜೀವನದಿಂದಲೂ ಧ್ವನಿತವಾಗುತ್ತದೆ.

# ಈ ಸಂಚಿಕೆಯಲ್ಲಿಯ ಲೇಖಗಳು.

(ಸಂಪಾದಕ)

ವೀರಶೈವ ವಾಙ್ಮಯದಲ್ಲಿ ಅತ್ಯಂತ ಮಹತ್ವದ ಭಾಗಗಳಾದ ವಚನಗ್ರಂಥಗಳೂ ರಗಳೆಯ ಗ್ರಂಥಗಳೂ ಶಿವಾನುಭವ ಪತ್ರಿಕೆಯಲ್ಲಿ ಈವರೆಗೆ ಪ್ರಸಿದ್ಧಿಸಲ್ಪಡುತ್ತ ಬಂದಿವೆ. ಅಲ್ಲದೆ ಇದರಲ್ಲಿ ಅನೇಕ ಮಹನೀಯರ ವಿಚಾರಪೂರ್ಣ ಲೇಖಗಳೂ ಬಂದಿರುತ್ತವೆ. ಇವುಗಳಲ್ಲಿ ಐತಿಹಾಸಿಕ ಸಂಶೋಧನೆಗಳಿಗೂ ಮಠಾಧಿಕಾರಿಗಳ ಮತ್ತು ಐತಿಹಾಸಿಕ ಮಹಾಪುರುಷರ ಚರಿತ್ರೆಗಳಿಗೂ ನಾವು ಶ್ರೇಷ್ಠಸ್ಥಾನವನ್ನೂ ಕೊಡುತ್ತ ಬಂದಿದ್ದೇವೆ.

ಈ ಪ್ರಕಾರ ಶಿವಾನುಭವ ಪತ್ರಿಕೆಯ ಹಿಂದಿನ ಸಂಪುಟಗಳಲ್ಲಿ ವೀರಶೈವ ಸಂಸ್ಕೃತಿಬೋಧಕ ಒಂದು ಮಹತ್ವದ ವಾಙ್ಮಯವು ಉಂಟಾಗಿರುತ್ತದೆ. ಇದು ಅನೇಕ ವಿದ್ವಾಂಸರ ಪರಿಶ್ರಮದ ಫಲವಾಗಿರುತ್ತದೆ. ಇನ್ನುಮೇಲೆ ಹೀಗೆ ಸಂಶೋಧಿಸಲ್ಪಟ್ಟ ವಿಷಯಗಳಲ್ಲಿ ಸುಸಂಬದ್ಧತೆಯನ್ನು ಕಂಡುಹಿಡಿದು ವೀರಶೈವ ರಾಜಕೀಯ, ವಾಙ್ಮಯಾತ್ಮಕ ಮತ್ತು ಧಾರ್ಮಿಕ ಇತಿಹಾಸದ ಮೇಲೆ ಯಾವ ಪ್ರಕಾಶವು ಬೀಳುತ್ತದೆಂಬದನ್ನು ನಾವು ಕಂಡು ಹಿಡಿಯುವ ಕಾರ್ಯವನ್ನು ಮುಂದೆ ಮಾಡಬೇಕಾಗಿದೆ. ಈ ಕಾರ್ಯದಲ್ಲಿ ಪ್ರಕಟವಾದ ವಿಷಯಗಳ ಮೇಲೆ ವಿಮರ್ಶೆಗಳೂ ಟೀಕೆಗಳೂ ಬಹು ಸಹಾಯಕವಾಗುತ್ತವೆ. ಈ ಉದ್ದೇಶವನ್ನಿಟ್ಟುಕೊಂಡು ನಾವು ಶಿವಾನುಭವವನ್ನು ಇನ್ನು ಮುಂದೆ ಪ್ರಕಟಿಸುವದು ಅವಶ್ಯವಾಗಿದೆ.

ಈ ಸಂಚಿಕೆಯ ಮೊದಲನೆಯ ಲೇಖವು ಹರೀಶ್ವರನ ಆದಯ್ಯನ ರಗಳೆಯ ಮೇಲೆ ಇರುತ್ತದೆ. ಅದರಲ್ಲಿ ಲೇಖಕರು ಹರೀಶ್ವರನ ಕವಿತಾ ಜಾಣ್ಮೆಯನ್ನು ಚನ್ನಾಗಿ ವಿಮರ್ಶಿಸಿರುವರು. ಆದಯ್ಯನು ವೀರಶೈವ ಧರ್ಮ ಪ್ರಸಾರ ಕಾಲದಲ್ಲಿ ಉಗಮಹೊಂದಿ ಬಹು ಮಹತ್ವದ ಕಾರ್ಯವನ್ನು ಮಾಡಿದ್ದಾನೆ. ಈ ಲೇಖದ ತರುವಾಯ ಮೊಗ್ಗೆಯ ಮಾಯಿದೇವರಿಂದ ವಿರಚಿತವಾದ ಶತಕತ್ರಯದ ವಿಮರ್ಶೆಯು ಬಂದಿರುತ್ತದೆ. ಈ ಮಹಾನುಭಾವರು ಪ್ರೌಢರಾಯನ ಕಾಲದಲ್ಲಿ ವೀರಶೈವ ಸಮಾಜದಲ್ಲಿ ಬಹು ಉಚ್ಚಸ್ಥಾನವನ್ನು ಹೊಂದಿದ್ದರು. ಅವರ ಪದ್ಯಗಳಲ್ಲಿ ಬಸವಾದಿ

ಪ್ರಮಥರ ವಿಚಾರಗಳು ತುಂಬಿತುಳುಕುತ್ತವೆ. ವೀರಶೈವ ಮತತತ್ವಗಳನ್ನು ತಿಳಿಯಲು ಈ ಗ್ರಂಥವು ಅತ್ಯಂತ ಪ್ರಯೋಜನಕಾರಿಯಾಗಿದ್ದುದರಿಂದ ಇದು ಮುಂಬಯಿ ವಿಶ್ವವಿದ್ಯಾಲಯದಲ್ಲಿ ಎಮ್. ಎ. ಪರೀಕ್ಷೆಗೆ ಪಠ್ಯಪುಸ್ತಕವಾಗಿ ನಿಯಮಿಸಲ್ಪಟ್ಟಿರುತ್ತದೆ. ಈ ಲೇಖದ ತರುವಾಯ ನಿಡುಮಾಮಿಡಿ ಮಠದ ಇತಿಹಾಸವು ಕೊಡಲ್ಪಟ್ಟಿದೆ. ವೀರಶೈವ ಸಮಾಜವನ್ನು ವೃದ್ಧಿಪಡಿಸಿದವರಲ್ಲಿ ಈ ಮಠಾಧೀಶರು ಮುಖ್ಯರಾಗಿರುತ್ತಾರೆ. ಇವರು ೧೬ನೆಯ ಶತಮಾನದಲ್ಲಿ ದಕ್ಷಿಣ ದೇಶದಲ್ಲೆಲ್ಲ ಮತಪ್ರಸಾರಕಾರ್ಯವನ್ನು ಮಾಡಿದರು. ಇದರ ವಿವರಗಳನ್ನು ಶ್ರೀ ನಂಜುಂಡಾರಾಧ್ಯರು ಸಂಶೋಧಿಸಿ ಲೇಖಾಂಕಗಳನ್ನು ಬರೆಯುತ್ತಲಿದ್ದಾರೆ. ಅವರ ಈ ಸಂಶೋಧನೆಗಳು ವೀರಶೈವ ಸಮಾಜೇತಿಹಾಸದ ಮೇಲೆ ವಿಶೇಷ ಪ್ರಕಾಶವನ್ನು ಕೆಡಹುತ್ತಲಿರುವವು. ಆಮೇಲೆ ಮಿ॥ ಎಸ್. ಡಿ. ಹಂಜಿ ಇವರ ಲೇಖವಿದ್ದು ಅದರಲ್ಲಿ ಅವರು ಮಹಾದೇವಿಯಕ್ಕನ ವಚನಗಳಿಂದ ಆಕೆಯ ಚರಿತ್ರೆಯ ಮೇಲೆ ಆವ ಪ್ರಕಾಶವು ಬೀಳುತ್ತದೆಂಬುದನ್ನು ಸಂಶೋಧಿಸಲು ಯತ್ನಿಸಿದ್ದಾರೆ. ಕಡೆಗೆ ಅರುವಿನ ಮಾರಿತಂದೆಗಳ ವಚನಗಳು ಕೊಡಲ್ಪಟ್ಟಿವೆ. ಇವುಗಳಲ್ಲಿ ಬೆಡಗಿನ ವಚನಗಳು ಹೆಚ್ಚಾಗಿ ಇದ್ದು ಅವುಗಳ ಅರ್ಥಗಳು ಕೊಡಲ್ಪಟ್ಟಿರುತ್ತವೆ. ಇವು ಹೊಸತರದ ವಚನಗಳಿದ್ದುದರಿಂದ ನಾವು ಅವುಗಳನ್ನು ಈ ವರೆಗೆ ಪ್ರಸಿದ್ಧಿಸುತ್ತ ಬಂದಿದ್ದೇವೆ.

ಶಿವಾನುಭವ ಪತ್ರಿಕೆಯಲ್ಲಿಯ ಈ ಬಗೆಯ ಲೇಖಗಳು ಬಹು ಜನರಿಗೆ ಮನರಂಜನೆಯಾಗಲಿಕ್ಕಿಲ್ಲೆಂದು ನಾವು ನಂಬಿದ್ದರೂ ಅವುಗಳು ವೀರಶೈವ ಸಂಸ್ಕೃತಿಯನ್ನು ಅಭ್ಯಾಸ ಮಾಡಲು ಸಹಾಯಕವಾಗಬಹುದೆಂದು ಎಣಿಸಿ ಅಂಥ ಲೇಖಗಳಿಗೆ ಈ ಪತ್ರಿಕೆಯಲ್ಲಿ ಇಂಬುಗೊಡುತ್ತ ಬಂದಿದ್ದೇವೆಂಬುದನ್ನು ವಾಚಕರು ಲಕ್ಷಿಸಿ ಶಿವಾನುಭವ ಪತ್ರಿಕೆಗೋಸ್ಕರ ಸಹಾನುಭೂತಿಯನ್ನು ಅವರು ವಹಿಸಬೇಕೆಂದು ನಾವು ಅವರನ್ನು ಪ್ರಾರ್ಥಿಸುತ್ತೇವೆ.

## ಶರಣಸ್ಥಲ.

**ವಿವರಣೆಃ**— ಶರಣನು ಶಿವಭಾವವುಳ್ಳವನಾಗಿರುತ್ತಾನೆ. ಅವನು ಪೂರ್ಣಜ್ಞಾನಿಯಾಗಿ ಪರತತ್ವದಲ್ಲಿ ಸಮರಸನಾಗಿರುವನು. ಅವನು ಪಂಚಭೂತಗಳನ್ನಳಿದು ದೇಹಭಾವವನ್ನು ನಷ್ಟಗೊಳಿಸಿರುತ್ತಾನೆ. ಅವನು ವಿಕಾರರಹಿತನು. ಈ ಪ್ರಕಾರ ಶರಣನು ವರ್ತಿಸುತ್ತಾನೆ.

## ವಚನಗಳು.

೬೯. ಮಹಾಕಾಶ ಮನೆಯಲ್ಲಿ ಪಂಚಕಾಲಿನ ನೆಲವು ಕಟ್ಟಿರಲಾಗಿ ಅದಕ್ಕೆ ಜಲತ್ಕಾರವೆಂಬ ಗಡಿಗೆ ಇದ್ದಿತ್ತು. ಅದಗೊಳಗೆ ಮಧುರ ಜಲ ಮಂದಿರದಲ್ಲಿ ವಿಮಲಜಲತುಂಬಿ ಒಂದಕ್ಕೊಂದು ಹೊದ್ದದೆ ಕುಂಭ ಒಂದರಲ್ಲಿ ನಿಂದ ಭೇದವ ನೋಡಾ. ಆ ಗಡಿಗೆಯು ತೆಗೆವುದಕ್ಕೆ ಮಹದಾಕಾಶವನೇರುವದಕ್ಕೆ ನೆಲೆ ಇಲ್ಲ. ನೆಲ ಹಿಂದೆ ಮೊದಲಿಲ್ಲ. ಕುಂಭಕ್ಕಂಗವಿಲ್ಲ. ಒಳಗಣ ಭೇದವ ವಿವರಿಸಬಾರದು. ಇಂತೀ ಘಟಮಟ ಆಧಾರದಲ್ಲಿ ಪರಿಪೂರ್ಣನಾದೆಯಲ್ಲ ಸದಾಶಿವಮೂರ್ತಿ ಲಿಂಗವೇ ಅವಿರಳನಾಗಿ.

ಟೀಕುಃ — ಸಕಲತತ್ವಂಗಳಿಗಾಶ್ರಯುವಾಗಿರ್ಪ ಅಖಂಡಜ್ಞಾನ ಚಿತ್ತ ಶರಣಂಗೆ ಚಿದಾಲಯುವಾಯಿತ್ತೆಂಬುದೀಗ ಮಹಾಕಾಶಮನೆಯಲ್ಲಿ ಎಂಬ ಶಬ್ದಕ್ಕರ್ಥ. ಆ ಚಿದಾಲಯ ಮಧ್ಯದಲ್ಲಿ ಪಂಚಾಚಾರವನೊಳಕೊಂಡಿರ್ಪ ಜೀವಭಾವ ಸಂಬಂಧವಾಗಿಹುದೆಂಬುದೀಗ ಪಂಚಕಾಲಿನ ನೆಲವು ಕಟ್ಟಿರಲಾಗಿ ಎಂಬ ಶಬ್ದಕ್ಕರ್ಥ. ಆ ಶಿವಭಾವದಲ್ಲಿ ಪರಮಶಾಂತಿಯ ಜಲವನೊಳಕೊಂಡಿರ್ಪ ಚಿದ್ಭಾಂಡ ಒಪ್ಪುತ್ತಿಹುದೆಂಬುದೀಗ ಅದಕ್ಕೆ ಜಲತ್ಕಾರವೆಂಬ ಗಡಿಗೆ ಇದ್ದಿತ್ತು ಎಂಬ ಶಬ್ದಕ್ಕರ್ಥ. ಆ ಶಿವಭಾವದಲ್ಲಿ ಸಂಬಂಧವಾದ ಚಿದ್ಭಾಂಡದಲ್ಲಿ ತ್ರಿವಿಧ ಪಾದೋದಕ ಸಂಬಂಧವಾದ ತ್ರಿವಿಧ ಲಿಂಗ ಸಾಹಿತ್ಯವಾಗಿಹುದೆಂಬುದೀಗ ಅದರೊಳಗೆ ಮಧುರಜಲ ಮಂದಿರದಲ್ಲಿ ವಿಮಲಜಲ ತುಂಬಿ ಎಂಬ ಶಬ್ದಕ್ಕರ್ಥ. ಆ ಪಾದೋದಕ ಸ್ವರೂಪವಾದ ತ್ರಿವಿಧಲಿಂಗಗಳಾಚರಣೆಗೆ ಬೇರಾಗಿ ಆ ಲಿಂಗಂಗಳು ಚಿದ್ಭಾಂಡ ಒಂದರಲ್ಲಿ ಸಂಬಂಧವಾಗಿಹುದೆಂಬುದೀಗ ಒಂದಕ್ಕೊಂದು ಹೊದ್ದದೆ ಕುಂಭ ಒಂದರಲ್ಲಿ ನಿಂದ ಭೇದವ ನೋಡಾ ಎಂಬ ಶಬ್ದಕ್ಕರ್ಥ. ಆ ಚಿದ್ಭಾಂಡವು ಶರಣನ ಸರ್ವಾಂಗದಲ್ಲಿ ಸಮರಸವಾದ ಬಳಿಕ

ಕ್ರಿಯಾಕಾರಕ್ಕೆ ತರಲಿಲ್ಲವೆಂಬುದೀಗ ಆ ಗಡಿಗೆಯು ತೆಗೆವುದಕ್ಕೆ ಎಂಬ ಶಬ್ದಕ್ಕರ್ಥ. ಆ ಚಿದಾಕಾಶವೇ ಶರಣನ ಒಳಹೊರಗೆ ಪರಿಪೂರ್ಣವಾಗಿ ವೇಧಿಸಿದ ಬಳಿಕ ಇನ್ನು ಚಿದಾಕಾಶಕ್ಕೆಯ್ದುಹೆನೆಂದೊಡೆ ಪ್ರಮಾಣಿಲ್ಲೆಂಬುದೀಗ ಮಹದಾಕಾಶವನೇರುವದಕ್ಕೆ ನೆಲೆ ಇಲ್ಲವೆಂಬ ಶಬ್ದಕ್ಕರ್ಥ. ಆ ಚಿದಾಲಯದಲ್ಲಿ ಸಂಬಂಧವಾಗಿರ್ಪ ಶಿವಭಾವಕ್ಕೆ ತಾನೆಂಬ ಮೂಲಾಹಂಕಾರವಿಲ್ಲವೆಂಬುದೀಗ ನೆಲ ಹಿಂದೆ ಮೊದಲಿಲ್ಲವೆಂಬ ಶಬ್ದಕ್ಕರ್ಥ. ಆ ಚಿದ್ಭಾಂಡ ಸ್ವರೂಪನಾದ ಶರಣಂಗೆ ದೇಹಭಾವವಿಲ್ಲವೆಂಬುದೀಗ ಕುಂಭಕ್ಕಂಗವಿಲ್ಲವೆಂಬ ಶಬ್ದಕ್ಕರ್ಥ. ಆ ಶರಣನ ನಿಜಾಂತರಂಗದಲ್ಲಿ ಸಾಹಿತ್ಯವಾಗಿರ್ಪ ಪ್ರಾಣಲಿಂಗದ ನಿಜಸ್ವರೂಪವನು ವಾಕ್ಯಕ್ಕೆ ತಂದು ಹೇಳಲಿಲ್ಲವೆಂಬುದೀಗ ಒಳಗಣಭೇದವ ವಿವರಿಸಬಾರದೆಂಬ ಶಬ್ದಕ್ಕರ್ಥ. ಆ ಚಿದ್ಭಾಂಡವೆಂಬುದೀಗ ಘಟಶರಣನ ನಿಜಾಂತರಂಗದಲ್ಲಿರ್ಪ ಚಿದಾಲಯವೆಂಬುದೀಗ ಮಠ ಶಿವಭಾವ ಧರಿಸಿಕೊಂಡಿರ್ಪ ಚಿದಾತ್ಮನೆಂಬುದೀಗ ಆಧಾರ ಈ ತ್ರಿವಿಧದಲ್ಲಿ ಒಂದೇ ಬ್ರಹ್ಮವು ಪರಿಪೂರ್ಣವಾಗಿ ಭೇದಿಸಿತ್ತೆಂಬುದೀಗ ಇಂತೀ ಘಟ ಮಠ ಆಧಾರದಲ್ಲಿ ಪರಿಪೂರ್ಣವಾದೆಯುಲ್ಲಾ ಸದಾಶಿವಮೂರ್ತಿಲಿಂಗವೇ ಅವಿರಳನಾಗಿ ಎಂಬ ಶಬ್ದಕ್ಕರ್ಥ.

೭೦ ಹೂವಿನ ಮೇಲಣ ತುಂಬಿ ಹೂವ ತಿಂದು ಗಂಧವನು ಳುಹಿತ್ತು. ಉಳಿದ ಗಂಧ ತುಂಬಿಯು ತಿಂದು ತುಂಬಿದ ಗಂಧ ಒಂದೇಯಾಯಿತ್ತು. ಅದು ನಿರಂಗದಿರವು ಸದಾಶಿವಮೂರ್ತಿಲಿಂಗವು ತಾನೇ.

ಟೀಕು:— ಶರಣನ ಹೃದಯ ಕಮಲದಲ್ಲಿರ್ಪ ಪರಿಪೂರ್ಣ ಜ್ಞಾನವೆಂಬುದೀಗ ಹೂವಿನ ಮೇಲಣ ತುಂಬಿ ಎಂಬ ಶಬ್ದಕ್ಕರ್ಥ. ಆ ಚಿತ್ಸ್ವರೂಪನಾದ ಶರಣನು ತನ್ನ ಪರಿಪೂರ್ಣ ಜ್ಞಾನದಿಂ ಹೃದಯ ಕಮಲವನವಗ್ರಹಿಸಿ ಸದ್ವಾಸನ ಸ್ವರೂಪವಾದ ಪ್ರಾಣಲಿಂಗವನು ತನ್ನ ನಿಜಾಂತರಂಗದಲ್ಲಿ ಮೂರ್ತಿಗೊಳಿಸಿದನೆಂಬುದೀಗ ಹೂವ ತಿಂದು ಗಂಧವನು ಳುಹಿತ್ತೆಂಬ ಶಬ್ದಕ್ಕರ್ಥ. ಅಂತರಂಗದಲ್ಲಿ ಉಭಯ ಸ್ವರೂಪವಾಗಿರ್ಪ ಪ್ರಾಣಲಿಂಗವು ಶರಣನ ಪರಿಪೂರ್ಣ ಜ್ಞಾನವನವಗ್ರಹಿಸಿತ್ತೆಂಬುದೀಗ ಉಳಿದ ಗಂಧ ತುಂಬಿಯು ತಿಂದು ಎಂಬ ಶಬ್ದಕ್ಕರ್ಥ. ಆ ಪರಿಪೂರ್ಣ ಜ್ಞಾನ ಸ್ವರೂಪನಾದ ಶರಣನು ಪ್ರಾಣಲಿಂಗವನವಗ್ರಹಿಸಿ ಸದ್ವಾಸನ ಸ್ವರೂಪವಾದ ಪ್ರಾಣಲಿಂಗವ ಶರಣನವಗ್ರಹಿಸಿ ಎರಡು ಏಕವಾಗಿ ಒಂದೇ ಸ್ವರೂಪವಾದಲ್ಲಿ ಅಂಗರಹಿತವಾಯಿತ್ತೆಂಬುದೀಗ ತುಂಬಿದ ಗಂಧ ಒಂದೇ

ಯಾಯಿತ್ತು. ಅದು ನಿರಂಗದಿರವು ಸದಾಶಿವಮೂರ್ತಿಲಿಂಗ ತಾನೆ ಎಂಬ ಶಬ್ದಕ್ಕರ್ಥ.

೭೧. ವಚನದ ರಚನೆಯ ಬಲ್ಲ ಹಿರಿಯರೆಲ್ಲರು ಮೂರುಳ್ಳವನ ಮನೆಯ ಬಾಗಿಲ ಕಾಯ್ದಿದ್ದಾರೆ. ಹೇಳಿ ಕೇಳಿ ಬಲ್ಲತನವಾದೆನೆಂಬು ವರೆಲ್ಲರು ಬಾಗಿಲಲ್ಲಿಯೇ ಸಿಕ್ಕಿದರು. ಸ್ಥಾವರಾದಿಗಳು ಮೊದಲಾಗಿ ಇದಿರಿಟ್ಟು ಕುರುಹೆಲ್ಲವು ತಾವಿದ್ದ ಠಾವಿಂಗೆ ತಂದು ಕೊಂಬುವರಿಂದ ಕಡೆಯ. ಅರಿವುಳ್ಳ ಜ್ಞಾನಿಗಳೆಲ್ಲರು ಇದು ಕಾರಣ ಸಂಚಿತ ಪ್ರಾರಬ್ಧ ಆಗಾಮಿ ಎಂಬ ಕರ್ಮವೆಲ್ಲಿದ್ದರೂ ತಪ್ಪವು. ಹಲುಬಿ ಹರಿದಾಡಬೇಡ. ಸದಾಶಿವಮೂರ್ತಿಲಿಂಗದ ಒಲವರವಿಲ್ಲದೆ ನೆರೆ ನಂಬು.

೭೨. ಆಡಿನ ಮೊಲೆವಾಲ ಕೋಡಗನುಂಡು ಹಾಲ ಸಿಹಿ ತಲೆ ಗೇರಿ ಬಂದವರನೇಡಿಸುತ್ತ ನಿಂದವರ ಕಚ್ಚುತ್ತ ಹಿಂಗದು ನೋಡಾ ಕೋಡಗದಂದ. ಕೋಡಗವ ತಿಂದು ಆಡುವನೇ ಆರೂಢ ವಸ್ತು ಸದಾ ಶಿವಮೂರ್ತಿ ಲಿಂಗಕ್ಕೆ ಎರವಿಲ್ಲದಂಗ.

ಟೀಕು:— ರಜೋ ಸಂಬಂಧವಾದ ಸ್ಥೂಲ ದೇಹದಲ್ಲಿರ್ಪ ಸಂಸಾರ ವಿಷಯ ರಸವ ಸ್ವೀಕರಿಸುತ್ತಿಹುದು ಮನಸ್ಸೆಂಬುದೀಗ ಆಡಿನ ಮೊಲೆ ವಾಲ ಕೋಡಗ ಉಂಡು ಎಂಬ ಶಬ್ದಕ್ಕರ್ಥ. ಆ ಸಂಸಾರ ವಿಷಯ ಸುಖವು ಮನಸಿನ ವೃತ್ತಿ ಜ್ಞಾನದಲ್ಲಿ ಪ್ರವೇಶಿಸಿತ್ತೆಂಬುದೀಗ ಹಾಲ ಸಿಹಿ ತಲೆಗೇರಿ ಎಂಬ ಶಬ್ದಕ್ಕರ್ಥ. ಆ ಮನಸ್ಸು ದೇಹ ಸಂಬಂಧಿಗ ಳಾಗಿ ಪರಿಭವಕ್ಕೆ ಬಂದ ಜೀವರುಗಳ ಹಾಸ್ಯಾಪಮಾನವ ಮಾಡು ತ್ತಿಹುದೆಂಬುದೀಗ ಬಂದವರನೇಡಿಸುತ್ತ ಎಂಬ ಶಬ್ದಕ್ಕರ್ಥ. ಆ ಮನಸ್ಸು ಅಹಂಕಾರ ಭಾವದಲ್ಲಿರ್ಪ ಅದ್ವೈತ ಜ್ಞಾನಿಗಳ ಸಂಕಲ್ಪ ಭಾವ ದಿಂದವಗ್ರಹಿಸಿತ್ತೆಂಬುದೀಗ ನಿಂದವರ ಕಚ್ಚುತ್ತ ಎಂಬ ಶಬ್ದಕ್ಕರ್ಥ. ಆ ಮನಸ್ಸಿನ ದುರ್ವರ್ತನೆ ನಾಸ್ತಿಯಾಗದೆಂಬುದೀಗ ಹಿಂಗದು ನೋಡಾ ಕೋಡಗದಂದ ಎಂಬ ಶಬ್ದಕ್ಕರ್ಥ. ಸುಜ್ಞಾನೋದಯವಾದ ಶರಣನು ಶಿವಭಾವದಿಂ ಮನೋವರ್ತನೆಯ ನಿವೃತ್ತಿಯ ಮಾಡಿದನೆಂಬುದೀಗ ಕೋಡಗವ ತಿಂದು ಎಂಬ ಶಬ್ದಕ್ಕರ್ಥ. ಆ ಮನೋವರ್ತನೆಯಳಿ ಯಲು ಶ್ರೀಗುರು ಕಾರುಣ್ಯದಿಂ ಸರ್ವಾಂಗಲಿಂಗ ಸಂಬಂಧಿಯಾಗಿ ಅಂತರಂಗದ ಜ್ಞಾನ ಬಹಿರಂಗದ ಕ್ರಿಯೆವಿಡಿದಾಚರಿಸಿ ಪರಶಿವ ತತ್ವ

ದಲ್ಲಿ ಸಮರಸವಾಗಿ ಎರವಿಲ್ಲದೆ ಚಿತ್ಪ್ರಭಾಂಗ ಸ್ವರೂಪನಾದನೆಂಬುದೀಗ ಆಡುವನೇ ಆರೂಢ ವಸ್ತು ಸದಾಶಿವಮೂರ್ತಿ ಲಿಂಗಕ್ಕೆಎರವಿಲ್ಲದಂಗ ಎಂಬ ಶಬ್ದಕ್ಕರ್ಥ.

೭೩. ಇರುವೆ ಅಂಜದೆ ಮದಸೊಕ್ಕಿದ ಆನೆಯ ತನ್ನ ಕಡೆ ಗಾಲಿನಲ್ಲಿ ಕಟ್ಟಿ ಸದಮದದಲ್ಲೆಳೆವುತ್ತಿದೆ. ಆನೆಯ ಕೊಂಬು ಮುರಿದು ಸುಂಡಿಲುಡಿಗಿ ಮದ ಸೋರಿ ಗಜಘಟವಳಿದು ಹೋಯಿತ್ತು. ಇರುವಿನ ಕಾಲು ಐಗಜವ ಕೊಂದು ಮೂರು ಹುಲಿಯ ಮುರಿದು ನನಗಿನ್ನಾರು ಅಡಹಿಲ್ಲ ಎಂದು ಸದಾಶಿವಮೂರ್ತಿ ಲಿಂಗದಲ್ಲಿಗೈಯ್ದಿತ್ತು.

ಟೀಕು:— ಚಿತ್ ಸ್ವರೂಪನಾದ ಶರಣನ ನಿಜಾಂತರಂಗದಲ್ಲಿರ್ಪ ಸೂಕ್ಷ್ಮವಾದ ಪರಿಪೂರ್ಣ ಜ್ಞಾನವೆಂಬುದೀಗ ಇರುವೆ ಎಂಬ ಶಬ್ದಕ್ಕರ್ಥ. ಅಂತಪ್ಪ ಪರಿಪೂರ್ಣ ಜ್ಞಾನಕ್ಕೆ ಸಕಲ ಮಾಯಾ ಪ್ರಪಂಚಿನ ಭಯ ವಿಲ್ಲವೆಂಬುದೀಗ ಇರುವೆ ಅಂಜದೆ ಎಂಬ ಶಬ್ದಕ್ಕರ್ಥ. ಅಹಂಕಾರ ಯುಕ್ತವಾದ ಪಂಚಭೂತಂಗಳ ತನ್ನ ಚರ್ಯಾಪಾದದಲ್ಲಿ ಬಂಧಿಸಿದ ಎಂಬುದೀಗ ಮದ ಸೊಕ್ಕಿದ ಆನೆಯ ತನ್ನ ಕಡೆಗಾಲಿನಲ್ಲಿ ಕಟ್ಟಿ ಎಂಬ ಶಬ್ದಕ್ಕರ್ಥ. ಆ ಚರ್ಯಾಪಾದದಲ್ಲಿ ಬಂಧಿಸಿದ ಪಂಚ ಭೂತಂಗಳು ಮಡಿದಹಂಕಾರ ಸ್ವರೂಪವಾದ ಭಕ್ತಿಯಲ್ಲಿ ಕೂಡಿ ನಡೆವುತ್ತಿಹನೆಂಬು ದೀಗ ಸದಮದದಲ್ಲಿ ಎಳೆವುತ್ತಿದೆಂಬ ಶಬ್ದಕ್ಕರ್ಥ. ಆ ಪಂಚ ಭೂತಂ ಗಳು ನಿವೃತ್ತಿಯಾಗಲು ಅಹಂಕಾರ ಮಮಕಾರವೆಂಬ ಕೊಂಬು ಭಗ್ನವಾಯಿತ್ತೆಂಬುದೀಗ ಆನೆಯ ಕೊಂಬು ಮುರಿದು ಎಂಬ ಶಬ್ದಕ್ಕರ್ಥ. ಅಹಂಕಾರ ಮಮಕಾರವಳಿದಲ್ಲಿ ದುರ್ಭಾವ ಹಸ್ತವು ಖಂಡಿಸಿತ್ತೆಂಬು ದೀಗ ಸುಂಡಿಲುಡಿಗಿ ಎಂಬ ಶಬ್ದಕ್ಕರ್ಥ. ಆ ದುರ್ಭಾವವಳಿಯಲು ಅಷ್ಟಮದ ಮೊದಲಾದ ಸಂಸಾರ ವಿಷಯ ರಸವರತು ನಿರಸವಾಯಿ ತ್ತೆಂಬುದೀಗ ಮದ ಸೋರಿ ಎಂಬ ಶಬ್ದಕ್ಕರ್ಥ. ಆ ಸಂಸಾರ ವಿಷಯ ರಸವರತು ಹೋಗಲು ಪಂಚಭೂತಂಗಳಿಗಾಶ್ರಯವಾದ ದೇಹ ಭಾವ ನಿವೃತ್ತಿಯಾಯಿತ್ತೆಂಬುದೀಗ ಗಜ ಘಟವಳಿದು ಹೋಯಿತ್ತು ಎಂಬ ಶಬ್ದಕ್ಕರ್ಥ. ಆ ಪರಿಪೂರ್ಣಜ್ಞಾನದ ಚರ್ಯಾಪಾದವು ಪಂಚಭೂ ತಂಗಳ ಸಂಹರಿಸಿತ್ತೆಂಬುದೀಗ ಇರುವಿನ ಕಾಲು ಐಗಜವ ಕೊಂದು ಎಂಬ ಶಬ್ದಕ್ಕರ್ಥ. ಆ ಪರಿಪೂರ್ಣಜ್ಞಾನ ಸ್ವರೂಪನಾದ ಶರಣ ಉತ್ಪತ್ತಿ ಸ್ಥಿತಿಲಯಂಗಳ ಸಂಹರಿಸಿ ತನಗಾವ ಪ್ರಪಂಚು ಇದಿರಿಲ್ಲವಾಗಿ ತನ್ನ

ನಿಜವಪ್ಪ ಪರಬ್ರಹ್ಮದಲ್ಲಿ ಸಮರಸಭಾವದಿಂದೆಯ್ದಿ ಏಕಾರ್ಥವಾಯಿತ್ತೆಂಬುದೀಗ ಮೂರು ಹುಲಿಯು ಮುರಿದು ನನಗಿನ್ನಾರು ಅಡಹಿಲ್ಲಾ ಎಂದು ಸದಾಶಿವಮೂರ್ತಿಲಿಂಗದಲ್ಲಿಗೈಯ್ದಿತ್ತು ಎಂಬ ಶಬ್ದಕ್ಕರ್ಥ.

೭೪. ಕಣ್ಣಿನ ಮನೆಯಲ್ಲಿ ಗನ್ನದ ಗರತಿ ಹಡೆದುಂಬುತ್ತೈದಾಳೆ. ಅವಳ ಕೂಟವ ಕೂಡುವದಕ್ಕೆ ತಲೆ ಕೆಳಗಾಗಿ ಕಾಲು ಮೇಲಾಗಿ ಕೈಯ್ಯ ಪ್ರದಕ್ಷಿಣೆಯಾಗಿ ತರ್ಕೈಸಿಕೊಂಡು ಹಿಂದುಮುಂದಾಗಿ ಮುತ್ತನಿಕ್ಕಿ ಶಕ್ತಿಯ ಸುಖ ಲೇಸಾಯಿತ್ತು ಸದಾಶಿವಮೂರ್ತಿಲಿಂಗ ಬಚ್ಚಬಯಲು.

ಟೀಕಃ-- ಕಣ್ಣೆಂದೊಡೆ ಸುಜ್ಞಾನ ದೃಷ್ಟಿ, ಆ ಸುಜ್ಞಾನ ದೃಷ್ಟಿಯನೊಳಕೊಂಡಿರ್ಪ ಚಿದಾಲಯುಗಲ್ಲಿ ಎಂಬುದೀಗ ಕಣ್ಣಿನ ಮನೆಯಲ್ಲಿ ಎಂಬ ಶಬ್ದಕ್ಕರ್ಥ. ಆ ಸುಜ್ಞಾನ ಕಾಯುದಲ್ಲಿ ಸಕಲ ಪ್ರಪಂಚ ಹೊದ್ದದೆ ಚದುರಿನಿಂದಿರ್ಪ ಜ್ಞಾನಶಕ್ತಿ ಶಿವಸುಖ ಪ್ರಸಂಗ ಪ್ರಸಾದವ ಹಡೆದು ಹರುಷಾನಂದದಿಂ ಸ್ವೀಕರಿಸುತ್ತಿರ್ದಾಳೆಂಬುದೀಗ ಗನ್ನದ ಗರತಿ ಹಡೆದುಂಬುತ್ತೈದಾಳೆ ಎಂಬ ಶಬ್ದಕ್ಕರ್ಥ. ಅಂತಪ್ಪ ಜ್ಞಾನಶಕ್ತಿಯಲ್ಲಿ ಬೆರೆವುದಕ್ಕೆ ಎಂಬುದೀಗ ಅವಳ ಕೂಟವ ಕೂಡುವದಕ್ಕೆ ಎಂಬ ಶಬ್ದಕ್ಕರ್ಥ. ಆ ಶರಣನ ಸುಜ್ಞಾನವೆಂಬ ಶಿರಸ್ಸು ಸತ್ಕ್ರಿಯಾಚಾರದಲ್ಲಿ ಕೂಡಿ ಆ ಸತ್ಕ್ರಿಯಾಚಾರವನೆ ಸುಜ್ಞಾನದಲ್ಲಿ ಬೆರಸಿ ಎಂಬುದೀಗ ತಲೆ ಕೆಳಗಾಗಿ ಎಂಬ ಶಬ್ದಕ್ಕರ್ಥ. ಆ ಶರಣ ಸತಿಯ ಸದ್ಭಾವ ಹಸ್ತವು ಪೂರ್ವ ಕ್ರಿಯಾಚಾರವು ಮೀರಿಹುದೆಂಬುದೀಗ ಕೈಯ್ಯ ಪ್ರದಕ್ಷಿಣೆಯಾಗಿ ಎಂಬ ಶಬ್ದಕ್ಕರ್ಥ. ಆ ಶರಣನ ಸದ್ಭಾವ ಹಸ್ತದಿಂದ ಜ್ಞಾನಶಕ್ತಿಯನಾಲಿಂಗಿಸಿಕೊಂಡನೆಂಬುದೀಗ ತರ್ಕೈಸಿಕೊಂಡು ಎಂಬ ಶಬ್ದಕ್ಕರ್ಥ. ಆ ಜ್ಞಾನಶಕ್ತಿಯಲ್ಲಿ ಒಡಗೂಡಿರ್ಪ ಶರಣನು ತನ್ನ ಸುಜ್ಞಾನ ದೃಷ್ಟಿಯ ಮುಂದೆ ತೋರುವ ಪರಶಿವ ತತ್ವದಲ್ಲಿ ಸಮರಸವಾದನೆಂಬುದೀಗ ಹಿಂದು ಮುಂದಾಗಿ ಎಂಬ ಶಬ್ದಕ್ಕರ್ಥ. ಆ ಪರಬ್ರಹ್ಮವೇ ತಾನಾದ ಶರಣನು ಶಿವೋಹಂ ಎಂಬ ಪಂಚಾಕ್ಷರಾಮೃತರಸವನು ಜ್ಞಾನಶಕ್ತಿಯ ಮುಖದಿಂ ಸ್ವೀಕರಿಸುತ್ತಿಹನೆಂಬುದೀಗ ಮುತ್ತನಿಕ್ಕಿ ಎಂಬ ಶಬ್ದಕ್ಕರ್ಥ. ಇಂತಪ್ಪ ಜ್ಞಾನಶಕ್ತಿಯ ಸಮರಸಕೂಟದ ಸುಖವು ಶರಣಂಗೆ ಲೇಸಾಯಿತ್ತೆಂಬುದೀಗ ಶಕ್ತಿಯ ಸುಖ ಲೇಸಾಯಿತ್ತು ಸದಾಶಿವಮೂರ್ತಿಲಿಂಗ ಬಚ್ಚಬಯಲು ಎಂಬ ಶಬ್ದಕ್ಕರ್ಥ.

೭೫. ದತ್ತೂರದ ಬಿತ್ತಿನಲ್ಲಿ ಕಲ್ಪತರು ಹುಟ್ಟಿ, ಕಲ್ಪತರುವಿನಗ್ರದಲ್ಲಿ ಇಟ್ಟಿಯ ಹಣ್ಣಾಯಿತ್ತು. ಇಟ್ಟಿಯ ಹಣ್ಣು ತೊಟ್ಟುಬಿಟ್ಟು ಬಿದ್ದಲ್ಲಿ ಅವ್ಯೃತಮಯವಾಯಿತ್ತು ಸದಾಶಿವಮೂರ್ತಿಲಿಂಗವನರಿತಲ್ಲಿ.

ಟೀಕು:— ಮದೋನ್ಮತ್ತ ದೇಹದ ಮಧ್ಯದಲ್ಲಿ ಮೂಲಾಹಂಕಾರ ಉದಯಿಸಿತ್ತೆಂಬುದೀಗ ದತ್ತೂರದ ಬಿತ್ತಿನಲ್ಲಿ ಎಂಬ ಶಬ್ದಕ್ಕರ್ಥ. ಅಂತಪ್ಪ ಅಹಂಕಾರ ಮಧ್ಯದಲ್ಲಿ ಸದ್ವಿವೇಕವೃಕ್ಷ ಪ್ರಭಾವಿಸಿತ್ತೆಂಬುದೀಗ ಕಲ್ಪತರು ಹುಟ್ಟಿ ಎಂಬ ಶಬ್ದಕ್ಕರ್ಥ. ಅಂತಪ್ಪ ಸದ್ವಿವೇಕ ಜ್ಞಾನದಿಂದಾತ್ಮನು ಪರತತ್ವದಲ್ಲಿ ಬೆರಸಲರಿಯದೆ ಭಿನ್ನಾಪೇಕ್ಷೆಯ ಮುಂದುಗೊಳ್ಳಲು ಅಲ್ಲಿ ಚತುರ್ವಿಧಫಲಂಗಳು ತೋರಿದವೆಂಬುದೀಗ ಕಲ್ಪತರುವಿನಗ್ರದಲ್ಲಿ ಇಟ್ಟಿಯ ಹಣ್ಣಾಯಿತ್ತೆಂಬ ಶಬ್ದಕ್ಕರ್ಥ. ಮಹಾಜ್ಞಾನ ಸ್ವರೂಪನಾದ ಶರಣನು ನಿಜದಿಂ ತಿಳಿದು ನೋಡಲು ಅಹಂಕಾರ ಮುಖ್ಯವಾದ ಚತುರ್ವಿಧ ಫಲಂಗಳು ನಿವೃತ್ತಿಯಾದವೆಂಬುದೀಗ ಇಟ್ಟಿಯ ಹಣ್ಣು ತೊಟ್ಟುಬಿಟ್ಟು ಬಿದ್ದಲ್ಲಿ ಎಂಬ ಶಬ್ದಕ್ಕರ್ಥ. ಆ ಭಿನ್ನ ಫಲಂಗಳು ನಿವೃತ್ತಿಯಾಗಿ ಹೋದಲ್ಲಿ ತನ್ನ ನಿಜವಪ್ಪ ಪರಬ್ರಹ್ಮದಲ್ಲಿ ಶರಣನು ಸಮರಸವನೆಯ್ದಿ ನಿತ್ಯಸ್ವರೂಪನಾದನೆಂಬುದೀಗ ಅವ್ಯೃತಮಯವಾಯಿತ್ತು ಸದಾಶಿವಮೂರ್ತಿಲಿಂಗವನರಿತಲ್ಲಿ.

೭೬. ಮಹಾವಿಕಾರಣ ಮಯವಾದಲ್ಲಿ ಹರಿವ ಶೋಣಿತದಲ್ಲಿ ಒಂದು ನೊಣ ಹುಟ್ಟಿತ್ತು. ಕಾಲೊಂದು ಅಂಗ ಮೂರು ಅಟ್ಟಿ ಒಂದೇ ಅದರ ನಾಲಿಗೆಯಲ್ಲಿ ನಾರಾಯಣ ಹುಟ್ಟಿ ನೊಣ ಸತ್ತಿತ್ತು. ಬ್ರಹ್ಮನ ಇರವಾಯಿತ್ತು. ವಿಷ್ಣುವಿನ ಲೋಕವಾಯಿತ್ತು. ರುದ್ರನ ಕಪಾಲವ ತುಂಬಿ ಬುದ್ಧಿವಂತರೆಲ್ಲರೂ ಕಪಾಲದ ಕೊಳಗನುಂಡು ಬುದ್ಧಿವಂತರಾಗಿರಿ. ಎನಗಾ ಹೊದ್ದಿಕೆ ಬೇಡ. ಸದಾಶಿವಮೂರ್ತಿಲಿಂಗ ಇದ್ದಂತೆ ಸಾಕು.

ಟೀಕು:— ಆತ್ಮ ಸಂಬಂಧವಾದ ಸಕಲ ಕರಣಂಗಳೆಲ್ಲವು ವಿಕಾರದಿಂ ಜೀವನ್ಮೃತವಾಗಿ ಮರವೆಯನೆಯ್ದಿರುತ್ತಿಹವೆಂಬುದೀಗ ಮಹಾವಿಕಾರಣ ಮಯವಾದಲ್ಲಿ ಎಂಬ ಶಬ್ದಕ್ಕರ್ಥ. ಆ ಸಕಲ ಕರಣಂಗಳೆಲ್ಲ ಜೀವನ್ಮೃತವಾಗಿ ಮರವೆಯನೆಯ್ದಿದಲ್ಲಿ ಆ ಸಂಸಾರ ವಿಷಯ ರಸದ ಮಧ್ಯದಲ್ಲಿ ಮಾಯೆ ಹುಟ್ಟಿದಳೆಂಬುದೀಗ ಹರಿವ ಶೋಣಿತದಲ್ಲಿ ಒಂದು ನೊಣ ಹುಟ್ಟಿತ್ತೆಂಬ ಶಬ್ದಕ್ಕರ್ಥ. ಆ ಮಾಯೆಗೆ ದುಶ್ಚರಿತ್ರವೆಂಬ ಚರಣ ಒಂದೇ ಎಂಬುದೀಗ ಕಾಲೊಂದು ಎಂಬ

ಶಬ್ದಕ್ಕರ್ಥ. ಆ ಮಾಯೆಗೆ ತನುತ್ರಯಂಗಳೇ ಶರೀರವಾಗಿಹವೆಂಬುದೀಗ ಅಂಗ ಮೂರು ಎಂಬ ಶಬ್ದಕ್ಕರ್ಥ. ಅಂತಪ್ಪ ಮಾಯೆಗೆ ಪ್ರಪಂಚೆಂಬದಕ್ಕೆ ಒಂದೇ ಎಂಬುದೀಗ ಅಟ್ಟೆ ಒಂದೇ ಶಬ್ದಕ್ಕರ್ಥ. ಅಂತಪ್ಪ ಮಾಯೆಯ ಭಿನ್ನಾಪೇಕ್ಷೆಯಲ್ಲಿ ಶುದ್ಧ ಸಾತ್ವಿಕ ಸಂಬಂಧವಾದ ಸಮ್ಯಜ್ಞಾನವು ಉದಯವಾಯಿತ್ತೆಂಬುದೀಗ ಅದರ ನಾಲಿಗೆಯಲ್ಲಿ ನಾರಾಯಣ ಹುಟ್ಟೆ ಎಂಬ ಶಬ್ದಕ್ಕರ್ಥ. ಆ ಸುಜ್ಞಾನ ಪ್ರಕಾಶದಿಂ ಮಾಯೆಯು ನಿವೃತ್ತಿಯಾಗಿ ಹೋಯಿತ್ತೆಂಬುದೀಗ ನೊಣ ಸತ್ತಿತ್ತೆಂಬ ಶಬ್ದಕ್ಕರ್ಥ. ಆ ಮಾಯೆಯ ನಿವೃತ್ತಿ ಮಾಡಿದನೆಂಬಹಂಕಾರದಿಂ ಬ್ರಹ್ಮನ ಸೃಷ್ಟಿಗೊಳಗಾದರೆಂಬುದೀಗ ಬ್ರಹ್ಮನ ಇರವಾಯಿತ್ತೆಂಬ ಶಬ್ದಕ್ಕರ್ಥ. ಅಂತು ಬ್ರಹ್ಮನ ಸೃಷ್ಟಿಗೊಳಗಾದರೂ ವಿಷ್ಣು ತತ್ವ ಸಂಬಂಧವಾದ ಪ್ರಾರಬ್ಧ ಭೋಗಕ್ಕೆ ಈಡಾದರೆಂಬುದೀಗ ವಿಷ್ಣುವಿನ ಲೋಕವಾಯಿತ್ತು ಎಂಬ ಶಬ್ದಕ್ಕರ್ಥ. ಅಂತು ಪ್ರಾರಬ್ಧಭೋಗಕ್ಕೆ ಈಡಾದ ಆತ್ಮರು ರುದ್ರತತ್ವ ಸಂಬಂಧವಾದ ಭಿನ್ನಜ್ಞಾನದಲ್ಲಿ ಸಂಸಾರ ವಿಷಯರಸ ಸಂಪೂರ್ಣವಾಗಿಹವೆಂಬುದೀಗ ರುದ್ರನ ಕಪಾಲವ ತುಂಬಿ ಎಂಬ ಶಬ್ದಕ್ಕರ್ಥ. ಆ ಭಿನ್ನ ಜ್ಞಾನದಿಂದೊದಗಲ್ಪಟ್ಟ ಖಂಡಿತ ಫಲಪದಂಗಳ ಪಡೆದು ಭೋಗಿಸುತ್ತಿಹಳೆಂಬುದೀಗ ಬುದ್ಧಿವಂತರೆಲ್ಲರೂ ಕಪಾಲದ ಕೊಳನುಂಡು ಎಂಬ ಶಬ್ದಕ್ಕರ್ಥ. ಅಂತು ದ್ವೈತಕ್ರಿಯೆಯಿಂ ಫಲಪದಂಗಳ ಪಡೆದು ಭೋಗಿಸುತ್ತಿಹರೆಲ್ಲರು ಖಂಡಿತ ಮುಕ್ತಿಯುಳ್ಳವರೆಂಬುದೀಗ ಬುದ್ಧಿವಂತರಾಗಿ ಎಂಬ ಶಬ್ದಕ್ಕರ್ಥ. ಸುಜ್ಞಾನೋದಯವಾಗಿ ಶ್ರೀಗುರುಕಾರುಣ್ಯದಿಂ ಸರ್ವಾಂಗಲಿಂಗ ಸಂಬಂಧಿಯಾಗಿರ್ಪ ಶರಣಂಗೆ ಅಭಿನ್ನ ಫಲಪದಂಗಳ ಬಯಕೆ ಇಲ್ಲೆಂಬುದೀಗ ಎನಗಾ ಹೊದ್ದಿಕೆ ಬೇಡ ಸದಾಶಿವಮೂರ್ತಿ ಲಿಂಗ ಇದ್ದಂತೆ ಸಾಕು ಎಂಬ ಶಬ್ದಕ್ಕರ್ಥ.

೭೭. ರಸದ ಭಾವಿಯಲ್ಲಿ ಅಸಿಯು ಮಡುವ ಕಲಕಿ ಕತ್ತರಿವಾಣಿಯ ಗೊತ್ತು ಕೊಯ್ದು ಕರೋತಿಯ ಕಣ್ಣ ಕಿತ್ತು ಅಪ್ಪನ ಬೆತ್ತವ ಕಿತ್ತು ನಿಶ್ಚಯದಲ್ಲಿ ಆಡುವಾತನೇ ನಿಜವಸ್ತು ಸದಾಶಿವಮೂರ್ತಿ ಲಿಂಗವು.

ಟೀಕು:— ಪರಮಾಮೃತ ರಸವ ತುಂಬಿಕೊಂಡಿರ್ದ ಚಿತ್ಕೂಪವೆಂಬುದೀಗ ರಸದ ಬಾವಿಯಲ್ಲಿ ಎಂಬ ಶಬ್ದಕ್ಕರ್ಥ. ಆ ಪರಮಾಮೃತ ರಸವನೊಳಕೊಂಡಿರ್ಪ ಶರಣನು ಘಾತವ ಕಾಣಬಾರದೆ ಇರ್ದ

ಅಜ್ಞಾನ ಸಂಬಂಧವಾದ ಸಂಸಾರ ವಿಷಯ ರಸದ ಮಡುವ ನಿವೃತ್ತಿ ಮಾಡಿದನೆಂಬುದೀಗ ಅಸಿಯ ಮಡುವ ಕಲಕಿ ಎಂಬ ಶಬ್ದಕ್ಕರ್ಥ. ಅಂತು ಜ್ಞಾನ ನಷ್ಟವಾದಲ್ಲಿ ತನ್ನ ಸೋಂಕಿದವರ ಕಡಿದು ಕತ್ತರಿಸುವ ಅತಿ ವಿಷಾದದಂತಪ್ಪ ಸಂಸಾರ ವಿಷಯ ರಸವ ತುಂಬಿಕೊಂಡಿರ್ದ ಅಹಂಕಾರಯುಕ್ತವಾದ ದೇಹ ಭಾವವ ಛೇದಿಸಿದನೆಂಬುದೀಗ ಕತ್ತರಿ ವಾಣಿಯ ಗೊತ್ತು ಕೊಯ್ದು ಎಂಬ ಶಬ್ದಕ್ಕರ್ಥ. ಅಂತು ದೇಹ ಭಾವ ನಷ್ಟವಾದಲ್ಲಿ ಜೀವನ ಅಜ್ಞಾನ ದೃಷ್ಟಿ ನಷ್ಟವಾಯಿತ್ತೆಂಬುದೀಗ ಕರೋತಿಯ ಕಣ್ಣು ಕಿತ್ತು ಎಂಬ ಶಬ್ದಕ್ಕರ್ಥ. ಅಂತು ಮಾಯಾ ಸಂಬಂಧವಾದ ಜೀವನು ಅಜ್ಞಾನಭಾವ ನಿವೃತ್ತಿಯಾಗಲು ಪ್ರಾಣವಾಯು ವಿಕಾರದಲ್ಲಿ ಸಂಚರಿಸುತ್ತಿಹ ಮನಸ್ಸು ಛೇದಿಸಿದನೆಂಬುದೀಗ ಅಶ್ವನ ಚಿತ್ರವ ಕಿತ್ತು ಎಂಬ ಶಬ್ದಕ್ಕರ್ಥ. ಅಂತು ಮನವಳಿದು ಉನ್ಮನಿ ತತ್ವ ಸ್ವರೂಪವಾದ ನಿರ್ಮಾಯ ಸ್ವರೂಪನಾದ ಶರಣನು ಗುರು ಕಾರುಣ್ಯದಿಂ ಸರ್ವಾಂಗಲಿಂಗ ಸಂಬಂಧಿಯಾಗಿ ಜ್ಞಾನಕ್ರಿಯ ವಿಡಿದಾಚರಿಸಿ ಪರವಸ್ತುವೆಯಾದನೆಂಬುದೀಗ ನಿಶ್ಚಯದಲ್ಲಿ ಆಡುವಾತನೇ ನಿಜವಸ್ತು ಸದಾಶಿವಮೂರ್ತಿ ಲಿಂಗವು ಎಂಬ ಶಬ್ದಕ್ಕರ್ಥ.

೭೮. ಬ್ರಹ್ಮವನರಿದ ಬಳಿಕ ಸುಮ್ಮನೆ ಇರಬೇಕು. ಬ್ರಹ್ಮಪ್ರಸಂಗಿಗಳು ಬಂದರೆ ಪರಬ್ರಹ್ಮದ ಪ್ರಸಂಗವ ಮಾಡಬೇಕು. ಹೀಗಲ್ಲದೆ ತನ್ನ ಅಗಮ್ಯವ ಮೆರೆಯಬೇಕೆಂದು ಬೀದಿಯ ಪಸಾರದಂತೆ ಆಗಬೇಡ. ಇದನರಿದು ಕಳ್ಳನ ಜೀಳೂರಿದಂತೆ ಸುಮ್ಮನೆ ಇರಬೇಕು ಸದಾಶಿವಮೂರ್ತಿಲಿಂಗವನರಿವುದಕ್ಕೆ.

೭೯. ಪೃಥ್ವಿಜ್ಞಾನ ಪಿಪೀಲಿಕ ಸಂಬಂಧವಾಗಿಹುದು. ಅಪ್ಪುಜ್ಞಾನಮರ್ಕಟ ಸಂಬಂಧವಾಗಿಹುದು. ತೇಜಜ್ಞಾನ ಅಗ್ನಿ ಸಂಬಂಧವಾ . ಹುದು. ವಾಯು ಜ್ಞಾನ ಗಂಧ ಸಂಬಂಧವಾಗಿಹುದು. ಆಕಾಶಜ್ಞಾ ವಿಹಂಗ ಸಂಬಂಧವಾಗಿಹುದು. ತಮೋಜ್ಞಾನ ಮಾರ್ಜಾಲ ಸಂಬ- ವಾಗಿಹುದು. ಪರಿಪೂರ್ಣಜ್ಞಾನ ಕೂರ್ಮ ಸಂಬಂಧವಾಗಿಹುದು. ದಿ ಜ್ಞಾನ ಸರ್ವಮಯವಾಗಿ ನಾನಾ ಭೇದಂಗಳ ಭೇದಿಸುತ್ತಿಹು ಇಂತೀ ಮನಜ್ಞಾನ ಭರಿತನಾಗಿ ದಶಗುಣ ಮರ್ಕಟನ ಮೆಟ್ಟಿ ಮ ನಿಂದು ಬಟ್ಟಬಯಲ ತುಟ್ಟತುದಿಯ ಸದಾಶಿವಮೂರ್ತಿ ಲಿಂಗದ ಕಳೆಕಳಿಸುತ್ತಿದೆ ಚಿತ್ತದ ನೆನಹಿನಲ್ಲಿ.

೧೭ನೇ ಸಂಚಿಕೆಯು ಪೂರ್ತಿಯಾಗಿ
೧೮ನೇ ಸಂಚಿಕೆಯ ಮುಖಪುಟದಲ್ಲಿ
ಬಂದಿದೆ.

# ಶಿವಾನುಭವ.

ವರ್ಷ ೧೨] ಸಪ್ಟಂಬರ ೧೯೩೮ [ಸಂಚಿಕೆ ೧೨


## ಬಸವೇಶ್ವರನು ಸ್ತ್ರೀಯರಿಗೆ ತೋರಿಸಿದ ಗೌರವ.

(ಲೇಖಕ:— ಎಸ್. ವ್ಹಿ. ಹಂಜಿ, ಬಿ. ಎ. ಹಲಸಿ)

ನಮ್ಮೀ ಭರತಖಂಡದಲ್ಲಿ ವೇದಕಾಲದಿಂದ ಸ್ತ್ರೀಯರಿಗೆ ಯೋಗ್ಯ ಮಾನಮರ್ಯಾದೆಗಳು ಸಲ್ಲುತ್ತಿದ್ದು ನಡುವೆ ಸ್ಮೃತಿಗಳ ಕಾಲದಲ್ಲಿ ಮಾತ್ರ ಅವರ ಉನ್ನತಿಗೆ ಸ್ವಲ್ಪ ತೊಂದರೆಯುಂಟಾಯಿತು. ಇದೇ ಮುಂದೆ ಪರಮಾವಧಿಗೆ ಮುಟ್ಟಿ ಸ್ತ್ರೀಯರು ಪುರುಷರ ದಾಸ್ಯಕ್ಕೊಳಗಾದರು. ಅವರು ಪುರುಷರ ಅಪ್ಪಣೆಯ ಹೊರತು ಏನೂ ಮಾಡದೆ ಕೇವಲ ಮನೆಯಲ್ಲಿದ್ದುಕೊಂಡು ಅಡಿಗೆ ಮೊದಲಾದ ಮನೆಗೆಲಸಗಳನ್ನು ಮಾಡುವದು, ಮಕ್ಕಳನ್ನಾಡಿಸುವದು ಇವೇ ಮೊದಲಾದ ಚಿಕ್ಕಪುಟ್ಟ ಕಾರ್ಯಗಳಲ್ಲಿ ತೊಡಗುತ್ತಿದ್ದರು. ಸಮಾಜದ ಯಾವದೇ ಕಾರ್ಯದಲ್ಲಿ ಅವರಿಗೆ ಭಾಗವಹಿಸಲಿಕ್ಕೆ ಬರುತ್ತಿದ್ದಿಲ್ಲ. ಇಷ್ಟೇ ಅಲ್ಲ. ಅವರು ಧಾರ್ಮಿಕ ಕಾರ್ಯದಲ್ಲಿಯಂತೂ ಸಂಪೂರ್ಣ ಅಯೋಗ್ಯರು. ಮತ್ತು ಮಂತ್ರ ಪುರಾಣ ಪುಣ್ಯ ಕಥೆಗಳನ್ನುಕೂಡ ಕೇಳಬಾರದು ಎಂದು ಅವರಿಗೆ ಅಪ್ಪಣೆಯಾಯಿತು. ಅವರು ದೀಕ್ಷೆಗೆ ಅಯೋಗ್ಯರು. ಪುರುಷರ ಮುಖಾಂತರವೇ ಅವರು ದೇವರನ್ನು ಪೂಜಿಸಿ ಮೋಕ್ಷವನ್ನು ಪಡೆಯಬೇಕು ಎಂದು ಅವರ ವಿಚಾರವಿತ್ತು. ಹೀಗೆ ಪುರುಷರು ಸ್ತ್ರೀಯರನ್ನು ಸಂಪೂರ್ಣವಾಗಿ ತಮ್ಮ ಅಧೀನದಲ್ಲಿಟ್ಟುಕೊಂಡು, ಅವರನ್ನು ಕೇವಲ ತಮ್ಮ ವಿಲಾಸವಸ್ತುಗಳನ್ನಾಗಿಮಾಡಿ ಇಲ್ಲವೆ ಕೈಯೊಳಗಿನ ಆಳುಗಳಂತೆ ನಡಿಸಿಕೊಂಡು ತಾವೇ ಶ್ರೇಷ್ಠರೆಂಬ ಭಾವನೆಯಲ್ಲಿದ್ದರು. ಮತ್ತು ಇದೇ ಪದ್ಧತಿಯು ನಮ್ಮ ಈಗಿನ ನವನಾಗರಿಕತೆಯ ಯುಗದಲ್ಲಿಯೂಕೂಡ ವಂಶಪರಂಪರೆಯಿಂದ ನಡೆದುಬಂದಿದೆ.

ಸ್ತ್ರೀಯರ ಸ್ಥಿತಿಯು ಹೀಗಿರುತ್ತಿರಲಾಗಿ ವೀರಶೈವ ಧರ್ಮವನ್ನು ಪುನರುಜ್ಜೀವನಗೊಳಿಸಿ ಒಳ್ಳೇ ಸುಂದರವಾದ ಸಮಾಜವನ್ನು ನಿರ್ಮಿಸುವಾಗ ಬಸವೇಶ್ವರನು ಸ್ತ್ರೀಯರ ಉನ್ನತಿಗೆ ಬಹಳ ಪ್ರೋತ್ಸಾಹನ ಕೊಟ್ಟನು. ಜನಜನಿತವಾಗಿ ಬಂದ ಸ್ತ್ರೀಯರ ದುರವಸ್ಥೆಯನ್ನು ಕಂಡು ಅವನು ಮರುಗಿದನು. ಸಮಾಜವನ್ನು ಪೂರ್ಣಗೊಳಿಸಲು ಸ್ತ್ರೀಯರ ಸಹಾಯವು ಅತ್ಯವಶ್ಯವೆಂದು ಕಂಡುಹಿಡಿದನು. ಪುರುಷರಂತೆ ಅವರಲ್ಲಿಯಾದರೂ ವಿಚಾರಶಕ್ತಿಯಿದೆ; ಮತ್ತು ಅವರಿಗೆ ಯೋಗ್ಯ ಶಿಕ್ಷಣ ಕೊಟ್ಟರೆ ಆವರ ವಿಚಾರಶಕ್ತಿಯು ಬೆಳೆದು ಆತ್ಮೋನ್ನತಿಯನ್ನು ಮಾಡಿಕೊಂಡು ತಮ್ಮ ಮನೆತನಕ್ಕೂ ಸಮಾಜಕ್ಕೂ ಉಪಯುಕ್ತವಾದ ಕಾರ್ಯಗಳನ್ನು ಮಾಡಬಲ್ಲರೆಂಬದನ್ನು ಅರಿತನು. ಅವರಲ್ಲಿಯೂ ಉಚ್ಚ ವಿಚಾರಗಳು, ಭಾವನೆಗಳು ಇವೆಯೆಂಬದನ್ನು ತಿಳಕೊಂಡನು. ಈ ಎಲ್ಲ ಕಾರಣಗಳಿಂದ ಬಸವೇಶ್ವರನು ಆವರ ಶಿಕ್ಷಣ, ವಿಚಾರಬೆಳವಣಿಗೆ, ಮತ್ತು ಅವುಗಳ ಪ್ರಕಟನೆಗಳಿಗೆ ಎಡೆಗೊಟ್ಟು ಸಮಾಜದಲ್ಲಿ ಅವರ ಹಕ್ಕು ಬಾಧ್ಯತೆಗಳನ್ನು ಒದಗಿಸಿಕೊಟ್ಟನು.

ಬಸವೇಶ್ವರನು ಮೊದಲು ಸ್ತ್ರೀಯರ ವಿಷಯವಾಗಿ ಆದರ, ಪೂಜ್ಯ ಬುದ್ಧಿಗಳು ಹುಟ್ಟುವಂತೆ ಮಾಡಿದನು. ಆತನು ಅನ್ಯ ಸ್ತ್ರೀಯರನ್ನು ತನ್ನ ಸಹೋದರಿಯರಂತೆ ಇಲ್ಲವೆ ಮಾತೆಯರಂತೆ ಕಾಣಬೇಕೆಂದು ಹೇಳಿದನು. ಕೇವಲ ಜನರಿಗೆ ಹೀಗೆ ಉಪದೇಶ ಮಾಡದೆ ತಾನು ಸ್ವತಃ ಹೀಗೆ ನಡೆಯುತ್ತಿದ್ದನು. ಇಷ್ಟೇ ಅಲ್ಲ. ಪರಸ್ತ್ರೀಯು ಪ್ರತ್ಯಕ್ಷ ಮಹಾದೇವಿಯೆಂದು ಹೇಳಿ ಅವರಿಗೆ ದೇವತೆಯರಿಗೆ ಸಲ್ಲುವ ಗೌರವವನ್ನೂ ಪೂಜ್ಯತೆಯನ್ನೂ ಒದಗಿಸಿಕೊಟ್ಟನು. ಈ ಸಂಗತಿಯು ಕೆಳಗಿನ ವಚನಗಳಿಂದ ಹೆಚ್ಚು ಸ್ಪಷ್ಟವಾಗುವದು.

"ನೋಡಲಾಗದು, ನುಡಿಸಲಾಗದು, ಪರಸ್ತ್ರೀಯರ ಬೇಡ, ಕಾಣಿರೋ. ತಗರ ಬೆನ್ನಲ್ಲಿ ಹರಿವ ಸೊಣಗನಂತೆ ಬೇಡ, ಕಾಣಿರೋ. ಒಂದಾಸೆಗೆಸಾಸಿರ ವರುಷ ನರಕದಲ್ಲದ್ದುವ ಕೂಡಲಸಂಗಮದೇವಾ"

"ಎಲ್ಲಿ ನೋಡಿದಲ್ಲಿ ಮನವೆಳಿಸಿದೊಡೆ ಆಣೆ, ನಿಮ್ಮಾಣೆ, ನಿಮ್ಮ ಪ್ರಮಥರಾಣೆ. ಪರವಧುವನು ಮಹಾದೇವಿ ಎಂದು ಕಾಂಬೆನು ಕೂಡಲಸಂಗಮದೇವಾ." ಮತ್ತು ಅವರಿಗೆ ಧಾರ್ಮಿಕ ಕಾರ್ಯಗಳಲ್ಲಿ ಸರಿಸಮಾನ ಹಕ್ಕುಗಳನ್ನು ಕೊಟ್ಟನು. ಅವರು ಪುರುಷರಿಗಿಂತ ಕೀಳಲ್ಲ;

ಪುರುಷರ ಸಮಾನರು; ಪುರುಷರಂತೆ ಅವರೂ ದೀಕ್ಷೆ ಹೊಂದಲಿಕ್ಕೆ ಯೋಗ್ಯರು. ಹೀಗೆ ಅವರು ತಮ್ಮ ಸದ್ಗತಿಯನ್ನೂ ಮತ್ತು ತಮ್ಮ ಪುರುಷರ ಮೋಕ್ಷವನ್ನೂ ಸಂಪಾದಿಸಬಲ್ಲರು ಎಂದು ತಿಳಿಸಿಕೊಟ್ಟನು. ಇದರಿಂದ ಅವರಿಗೆ ಧರ್ಮ, ಅರ್ಥ, ಕಾಮ ಮತ್ತು ಮೋಕ್ಷವೆಂಬ ನಾಲ್ಕು ವಿಧದ ಪುರುಷಾರ್ಥಗಳನ್ನು ಸಾಧಿಸಲು ಅನುವಾಯಿತು. ಸಂಸಾರವು ಯಾವಾಗಲೂ ಸುಖರೂಪವಾಗಿ ಸಾಗಬೇಕಾದರೆ ಸತಿಪತಿಗಳಿಬ್ಬರೂ ಸದಾಚಾರದಿಂದ ನಡೆದು ಒಬ್ಬರಿಗೊಬ್ಬರು ಸಹಾಯಕರಾಗಿ ನಡೆಯಬೇಕೆಂದು ಬೋಧಿಸಿದರು.

"ಗಂಡ ಶಿವಲಿಂಗದೇವರ ಭಕ್ತ. ಹೆಂಡತಿ ಮಾರಿಮಸಣಿಯ ಭಕ್ತೆ. ಗಂಡ ಕೊಂಬುದು ಪಾದೋದಕ ಪ್ರಸಾದ. ಹೆಂಡತಿ ಕೊಂಬುದು ಸುರೆ ಮಾಂಸ. ಭಾಂಡ ಭಾಜನ ಶುದ್ಧಿಯಿಲ್ಲದವರ ಭಕ್ತಿ, ಹೆಂಡದ ಮಡಿಕೆಯ ಹೊರಗೆ ತೊಳೆದಂತೆ, ಕೂಡಲಸಂಗಮದೇವಾ."

ಈ ವಚನದಿಂದ ಪತಿಯು ಶಿವಭಕ್ತನಾಗಿ ಪಾದೋದಕ ಪ್ರಸಾದ ತಕ್ಕೊಂಡು ಸತಿಯು ಮಾರಿಮಸಣಿಯ ಭಕ್ತಳಾಗಿ ಸರಾಯಿ ಮಾಂಸಗಳನ್ನು ಸೇವಿಸುವವಳಾದರೆ ಅವರಿಗೆ ಎಂದೂ ಸುಖನಾಗದು ಮತ್ತು ಮೋಕ್ಷವು ಸಿಗಲಾರದು; ಆದುದರಿಂದ ಸತಿಪತಿಗಳಿಬ್ಬರೂ ಒಂದೇ ಮತ್ತು ಒಳ್ಳೇ ಸ್ವಭಾವದವರು ಇರಬೇಕೆಂದು ಕಂಡುಬರುವದು.

ಆಧ್ಯಾತ್ಮ ಸಾಧನೆಯನ್ನು ಮಾಡುವ ಪುರುಷನು ಸತ್ಯ ಅಹಿಂಸೆ, ಮೊದಲಾದವುಗಳನ್ನು ಪಾಲಿಸಿದಂತೆ ಬ್ರಹ್ಮಚರ್ಯ ಮತ್ತು ಇಂದ್ರಿಯ ನಿಗ್ರಹಗಳನ್ನು ಪಾಲಿಸಬೇಕಾಗುವದು. ಸಂಪೂರ್ಣ ಬ್ರಹ್ಮಚಾರಿಗಳಾಗಿರುವದು ಗಟ್ಟಿ ಮನಸ್ಸಿನವರಾದ ಕೆಲವರಿಗೆ ಮಾತ್ರ ಸಾಧ್ಯ. ಆದರೆ ಸಾಮಾನ್ಯ ಜನರಿಗೆ ಇದು ಸ್ವಲ್ಪ ಕಠಿಣವಾಗುವದು. ಯಾಕಂದರೆ ಮನಸ್ಸು ಚಂಚಲವಿದ್ದು ಅದು ವಿಷಯಸುಖಕ್ಕೆ ಎಳಿಸುವದು. ಆದುದರಿಂದ ಬಸವೇಶ್ವರನು ಜನರಿಗೆ ವಿವಾಹಿತರಾಗಿ ತಮ್ಮ ಪತ್ನಿಯರ ಕೂಡ ಅಷ್ಟೇ ಶಾಸ್ತ್ರೋಕ್ತವಾದ ಪ್ರಸಂಗಗಳಲ್ಲಿ ಸಂಬಂಧವನ್ನಿಟ್ಟು ಸದಾಚಾರದಿಂದ ವರ್ತಿಸಿ ಸುಖದಿಂದ ಇರಬೇಕೆಂದು ಹೇಳಿದನು. ಇದರಿಂದ ಹೆಸರಿಗೆಮಾತ್ರ ಬ್ರಹ್ಮಚಾರಿಗಳಾದ ಜನರು ಮಾಡುವ ದುಷ್ಟ ವ್ಯಾಪಾರಗಳು ಎಷ್ಟೋ ಕಡಿಮೆಯಾದವು. ಮತ್ತು ದಾಂಪತ್ಯದ ಮಹತ್ವವು ಕಂಡುಬಂದು ಏಕಪತ್ನೀವ್ರತವು ಹೆಚ್ಚು ಪ್ರಚಾರದಲ್ಲಿ ಬಂದಿತು.

ಇಂದ್ರಿಯನಿಗ್ರಹವನ್ನು ಹೆಚ್ಚೆಚ್ಚು ಮಾಡಿದಂತೆ ಮನಸ್ಸಿಗೆ ತೊಂದರೆ ಯಾಗಿ ಕೊನೆಗೆ ಇಂದ್ರಿಯಗಳು ಹೇಳಿದಂತೆ ಕೇಳುವ ಪ್ರಸಂಗವು ಬರುವದಾದುದರಿಂದ ಆದರಿಂದ ಅಷ್ಟೊಂದು ಮಹತ್ವವಿಲ್ಲೆಂದು ತಿಳಿಸಿದನು.

"ಇಂದ್ರಿಯ ನಿಗ್ರಹವ ಮಾಡಿದರೆ ಹೊಂದುವವು ದೋಷಂಗಳು. ಮುಂದೆ ಬಂದು ಕಾಡುವವು ಪಂಚೇಂದ್ರಿಯಗಳು. ಸತಿಪತಿ ರತಿಸುಖವ ಬಿಟ್ಟರೆ ಸಿರಿಯಾಳ ಚೆಂಗಳೆಯರು? ಸತಿಪತಿ ರತಿಸುಖವ ಭೋಗೋಪ ಭೋಗ ಬಿಟ್ಟರೆ ಸಿಂಧು ಬಲ್ಲಾಳನವರು? ನಿಮ್ಮ ಮುಟ್ಟಿ ಪರಧನ, ಪರ ಸತಿಯರಿಗೆಳಸಿದರೆ ನಿಮ್ಮ ಚರಣಕ್ಕೆ ದೂರ ಕೂಡಲಸಂಗಮದೇವಯ್ಯ"

ಈ ವಚನದಿಂದ ಪುರುಷನು ಪರಧನ ಪರಸ್ತ್ರೀಯರ ಮೇಲೆ ಮನಸ್ಸು ಮಾಡದೆ ತನ್ನ ಪತ್ನಿಯೊಡನೆ ಬೇಕಾದಷ್ಟು ಸುಖವನ್ನು ಪಡೆಯಬಹುದು ಎಂದು ಸ್ಪಷ್ಟವಾಗುವದು. ಬಸವೇಶ್ವರನು ಪುನಃ ಪುನಃ ಹೇಳುವದೇನಂದರೆ ಪರನಾರಿಯರನ್ನು ಎಂದೂ ಪಾಪದೃಷ್ಟಿಯಿಂದ ನೋಡಬೇಡಿರಿ. ಇದರಿಂದ ಬಹಳ ಹಾನಿಯುಂಟು. ಇದನ್ನೇ ಮುಂದಿನ ವಚನದಲ್ಲಿ ಎಷ್ಟು ಮನೋಹರವಾಗಿ ಹೇಳಿದ್ದಾನೆಂದು ನೋಡಬಹುದು.

"ಹರಿವ ಹಾವಿಗಂಜೆ. ಉರಿಯ ನಾಲಿಗೆಗಂಜೆ. ಸುರಿಗೆಯ ಮೊನೆಗಂಜೆ. ಒಂದಕ್ಕಂಜುವೆ, ಒಂದಕ್ಕಳುಕುವೆ. ಪರಸ್ತ್ರೀ ಎಂಬ ಜೂಜಿಗಂಜುವೆ. ಮುನ್ನಂಜದ ರಾವಣನೇವಿಧಿಗೊಳಗಾದ? ಅಂಜುವೆನಯ್ಯ ಕೂಡಲಸಂಗಮದೇವಾ"

ಇಲ್ಲಿಯವರೆಗೆ ಪುರುಷರು ಸ್ತ್ರೀಯರ ವಿಷಯವಾಗಿ ಹೇಗೆ ವರ್ತಿಸಬೇಕೆಂಬದನ್ನು ಹೇಳಿದುದಾಯಿತು. ಇನ್ನು ಸ್ತ್ರೀಯರು ಪುರುಷರ ಕೂಡ ಹೇಗೆ ನಡೆಯಬೇಕೆಂಬದನ್ನು ನೋಡೋಣ. ಹೆಣ್ಣು ಜನ್ಮಕ್ಕೆ ಬಂದಮೇಲೆ ಮದುವೆಯನ್ನು ಆಗಲೇಬೇಕೆಂದು ಹಿಂದಿನವರ ಕಟ್ಟಳೆಯಿತ್ತು. ಮತ್ತು ಈಗ್ಯೂ ಅದೆ. ಆದರೆ ಬಸವೇಶ್ವರನು ಚನ್ನಾಗಿ ವಿಚಾರ ಮಾಡಿ ಅವರು ಬೇಕಾದರೆ ಮದುವೆಯಾಗಬಹುದು. ಇಲ್ಲವೆ ಆಜನ್ಮ ಅವಿವಾಹಿತರಾಗಿ "ಶರಣಸತಿ ಲಿಂಗಪತಿ" ಎಂಬ ಭಾವದಿಂದ ಸದ್ವರ್ತನೆಯಿಂದ ಇರಬಹುದೆಂದು ಅವರಿಗೆ ಸ್ವಾತಂತ್ರ್ಯವನ್ನು ಕೊಟ್ಟನು. ವಿವಾಹದ ವಯಸ್ಸು ಮೀರಿತೆಂದು ಯಾರಿಗಾದರೂ ಗಂಟುಹಾಕಿ ಬಿಡಬೇಕೆಂಬ ಆತುರದ ವಿಚಾರವು ಅವನಲ್ಲಿ ಇದ್ದಿಲ್ಲ. ದುರಾಚಾರ

ದಿಂದ ನಡಿಯುವ ರಾಜನ ರಾಣಿಯಾಗುವದಕ್ಕಿಂತ ಶಿವಭಕ್ತಳಾಗಿ ತೊತ್ತಾಗಿರುವದು ಲೇಸೆಂದು

"ಅರಸರ ಮನೆಯಲ್ಲಿ ಅರಸಿಯಾಗಿಪ್ಪದರಿಂದ, ಭಕ್ತರ ಮನೆಯಲ್ಲಿ ತೊತ್ತಾಗಿಪ್ಪುದು ಕರ ಲೇಸೈ! ತಾರೌ ಅಗ್ಗವಣಿಯ, ನೀಡೌ ಪತ್ರೆಯ ಲಿಂಗಕ್ಕೆ ಬೋನವ ಹಿಡಿಯೌ, ಎಂಬರು ಕೂಡಲಸಂಗನ ಮನೆಯಲ್ಲಿ ಒಕ್ಕುದನುಣ್ಣೌ ತೊತ್ತೇ ಎಂಬರು."

ಹೀಗೆ ಹೆಣ್ಣುಮಕ್ಕಳಿಗೆ ಉಪದೇಶ ಮಾಡಿದನು. ಇದರಿಂದ ಅವರಿಗೆ ದೇಹದ ಆರೋಗ್ಯವನ್ನು ಕಾಯ್ದುಕೊಂಡು ಶಿಕ್ಷಣವನ್ನು ಹೊಂದಿ ಸುಸಂಸ್ಕೃತರಾಗಲಿಕ್ಕೆ ಹೆಚ್ಚಿಗೆ ಅನುಕೂಲವಾಯಿತು. ಪರಪುರುಷರ ಪಾಪದೃಷ್ಟಿಯು ಕಡಿಮೆಯಾಯಿತು. ವಿವಾಹದ ಸಮಸ್ಯವು ಬಿಡಿಸಲ್ಪಟ್ಟಿತು. ಹೀಗೆ ಅವರಿಗೆ ಸ್ವತಂತ್ರರೀತಿಯಿಂದ ವಿಚಾರ ಮಾಡಲಿಕ್ಕೆ ಅನುವಾಯಿತು. ವಯಸ್ಸಾದ ಕೂಡಲೆ ತಿಳಿಗೇಡಿ ತಂದೆತಾಯಿಗಳ ಆಜ್ಞೆಗನುಸಾರವಾಗಿ ವಿವಾಹವನ್ನು ಮಾಡಿಕೊಂಡು ಅವರ ಮುಂದಿನ ಉಚ್ಚ ಜೀವನವನ್ನು ನಡಿಸಲಿಕ್ಕೆ ಆಸ್ಪದವು ಸಿಗುತ್ತಿದ್ದಿಲ್ಲ. ಒಂದು ವೇಳೆ ಸುದೈವದಿಂದ ಅನುಕೂಲವುಳ್ಳ ಯೋಗ್ಯ ಪತಿಯು ಸಿಕ್ಕರೆ ನೆಟ್ಟಗಾಯಿತು. ಇಲ್ಲದಿದ್ದರೆ ತೊಂದರೆಯು ತಪ್ಪಿದ್ದಲ್ಲ. ಬಸವೇಶ್ವರನ ಈ ತರದ ಪ್ರೋತ್ಸಾಹನದಿಂದ ಅನೇಕ ಸ್ತ್ರೀಯರು ತಮ್ಮ ದೇಹ ಮನಸ್ಸುಗಳನ್ನು ಪರಿಶುದ್ಧವಾಗಿಟ್ಟುಗೊಂಡು ಆತ್ಮೋನ್ನತಿಯನ್ನು ಸಮಾಜದ ಉನ್ನತಿಯನ್ನು ಮಾಡಿದರು.

ಶಿವಾನುಭವ ಮಂಟಪದಲ್ಲಿ ಸರ್ವಸಂಗ ಪರಿತ್ಯಾಗ ಮಾಡಿದ ವೀರ ವೈರಾಗ್ಯಶಾಲಿಗಳಿದ್ದಂತೆ ಮನೆತನವನ್ನು ಮಾಡಿಕೊಂಡ ಸದ್ಗೃಹಸ್ಥರೂ ಇದ್ದರು. ಅವರೊಡನೆ ಅವರವರ ಧರ್ಮಪತ್ನಿಯರೂ ಇದ್ದು ಅವರು ಒಳ್ಳೇ ಅನುಭಾವಿಗಳಿದ್ದು ತಮ್ಮ ತಮ್ಮ ಉಚ್ಚ ವಿಚಾರಗಳನ್ನು ಪ್ರಕಟಮಾಡುತ್ತಿದ್ದರು. ಅಲ್ಲಿ ಬಸವೇಶ್ವರ, ಅಲ್ಲಮಪ್ರಭು, ಚನ್ನಬಸವೇಶ್ವರ, ಸಿದ್ಧರಾಮೇಶ್ವರ ಮೊದಲಾದವರು ಅವರೆಲ್ಲರನ್ನೂ ತಮ್ಮ ಸಹೋದರಿಯರು ಇಲ್ಲವೆ ಮಾತೆಯರಂತೆ ಕಾಣುತ್ತಿದ್ದರು. ಅಲ್ಲಿ ವೆಲ್ಲಗೊಂಡ ಮಹಾದೇವಿ, ಅಕ್ಕ ಬೊಂತಾದೇವಿ, ಬಲದೇವಿ, ವೀರಗುಡ್ಡೆವ್ವೆ, ಸೂರಸಾನಿ, ಜಕ್ಕಲಬ್ಬೆ, ರೆಬ್ಬವ್ವೆ, ರೆಮ್ಮವ್ವೆ, ಸಾಯಿದೇವಿ, ಚಿಕ್ಕ ಪಾರ್ವತಿ, ಕಾಮುಲಾಂಬಿಕೆ, ಕಮಳವ್ವೆ, ವಿಮಳವ್ವೆ, ಮುಕ್ತಾಯಿ,

ಶಿವದಾಸಪ್ಪೆ, ರೇಕಪ್ಪೆ, ಗಂಗಾದೇವಿ, ಕೇತಲದೇವಿ, ನೀಲಲೋಚನೆ ಮೊದಲಾದ ಅನೇಕ ಮಹಿಳೆಯರಿದ್ದು ಇವರೆಲ್ಲರಲ್ಲಿ ಉಡುತಡಿಯ ಮಹಾದೇವಿಯಕ್ಕನು ತನ್ನ ಉಜ್ವಲವಾದ ತೇಜಸ್ಸಿನಿಂದ ಮುಕುಟ ಮಣಿಯಂತೆ ಒಪ್ಪುತ್ತಿದ್ದಳು. ಇವರ ವಿಚಾರಗಳನ್ನು ವ್ಯಕ್ತಮಾಡಲಿಕ್ಕೆ ಆಸ್ಪದಕೊಟ್ಟದ್ದರಿಂದ ಅನೇಕರು ವಚನಗಳನ್ನು ರಚಿಸಿದರು. ಇವುಗಳಲ್ಲಿ ಮಹಾದೇವಿಯಕ್ಕನ ವಚನಗಳು ಉಚ್ಚತರಗತಿಯವಿದ್ದು ಕನ್ನಡ ಸಾಹಿತ್ಯದಲ್ಲಿ ಬಸವೇಶ್ವರ ಮೊದಲಾದವರ ವಚನಗಳಂತೆ ವಿಶಿಷ್ಟ ಸ್ಥಾನವನ್ನು ಪಡೆದಿರುವವು. 'ಆಕೆಯ ಒಂದು ವಚನವು ಆದ್ಯರ ಅರುವತ್ತು ವಚನಗಳಿಗೆ, ದಣ್ಣಾಯಕರ ಇಪ್ಪತ್ತು ವಚನಗಳಿಗೆ, ಪ್ರಭುದೇವರ ಹತ್ತು ವಚನಗಳಿಗೆ, ಅಜಗಣ್ಣನ ಐದು ವಚನಗಳಿಗೆ ಸರಿಯಾಗಿರುವದು' ಎಂದು ಚನ್ನಬಸವೇಶ್ವರನು ಆಕೆಯ ವಚನಮಹತ್ವವನ್ನು ಹೇಳಿದ್ದಾನೆ.

ಮಹಾದೇವಿಯಕ್ಕನ ಜೀವನಚರಿತ್ರವನ್ನಷ್ಟೇ ನೋಡಿದರೂ ಶಿವಾನುಭವ ಮಂಟಪವು ಎಷ್ಟು ಪವಿತ್ರವಾದದ್ದಿತ್ತು ಎಂದು ಸ್ಪಷ್ಟವಾಗಿ ಕಾಣುತ್ತದೆ. ಒಳ್ಳೆ ಹದಿನಾರು ವರುಷದ ನವಯೌವ್ವನದ ಆ ಸುಂದರಿಯು ಅಲ್ಲಿಗೆ ಬರಲು ಬಸವೇಶ್ವರನು ಆಕೆಯ ವೈರಾಗ್ಯವನ್ನು ಕಂಡು ಅವಳನ್ನು ಒಳ್ಳೇ ಆದರದಿಂದ ಸತ್ಕರಿಸಿದನು. ಆದರೆ ಅಲ್ಲಮಪ್ರಭುವು ಅವಳ ವೈರಾಗ್ಯವನ್ನು ಅರಿತಿದ್ದರೂಸಹ ಆಕೆಯನ್ನು ಪರೀಕ್ಷೆ ಮಾಡಬೇಕೆಂದು 'ನೀನು ಒಳ್ಳೆ ಚಲುವೆಯಾದ ಪ್ರಾಯದ ಹೆಣ್ಣುಮಗಳು, ನಿನ್ನ ಪತಿಯ ಕುರುಹು ಹೇಳಿದರೆ ಶರಣರ ಸಂಗದಲ್ಲಿ ಬಂದು ಕುಳ್ಳಿರು ಇಲ್ಲದಿರೆ ಅತ್ತ ತೊಲಗು ತಾಯೆ,' ಎಂದು ಹೇಳಿದನು. ಅದಕ್ಕೆ ಕೂಡಲೆ ಅವಳು 'ದೇವರೇ ನನಗೆ ಗಂಡನಾಗಬೇಕೆಂದು ಅನಂತಕಾಲ ತಪಿಸುತ್ತಿದ್ದೆನು. ಅವನೊಡನೆ ಮದುವೆ ಮಾಡಿ ಎಲ್ಲರೂ ಎನ್ನ ಬಯಕೆಯನ್ನು ಪೂರೈಸಿದರು'' ಎಂದು ಉತ್ತರಕೊಟ್ಟಳು. ಆದರೆ ಅಲ್ಲಮನು ಮತ್ತೆ "ನಿನ್ನ ಮಾತನ್ನು ನಂಬಲಾರೆ. ಕೌಶಿಕನು ದೀಕ್ಷೆ ಹೊಂದಲಿಲ್ಲ ಎಂಬ ಕಾರಣವನ್ನು ಅವನ ಮೇಲೆ ಹೊರಿಸಿ ನೀನು ಸಿಟ್ಟಿನಿಂದ ಹೊರಟು ಬಂದಿರುವಿ. ನಿನ್ನಲ್ಲಿ ನಿಜವಾದ ವಿರಕ್ತಿಯಿದ್ದರೆ, ನಿನ್ನ ಭಾವವು ಸತ್ಯವಾಗಿ ಶುದ್ಧವಿದ್ದರೆ ಈ ಕೂದಲ ಮರೆ ಏಕೆ?' ಎಂದು ಪ್ರಶ್ನೆ ಹಾಕಿದನು. ಆಗ ಮಹಾದೇವಿಯಕ್ಕನು "ನನಗೆ ನನ್ನ ಕಾಯದ ಪರಿವೆಯಿಲ್ಲ. ನನ್ನ

ಕಾಯವು ಕರ್‍ರನೆ ಕಂದಿದರೂ ಅಷ್ಟೇ, ಮಿರ್‍ರನೆ ಮಿಂಚಿದರೂ ಅಷ್ಟೇ, ಆದರೆ ಕಾಮದ ಮುದ್ರೆಯ ಕಂಡು ನಿಮಗೆ ನೋವಾದೀತೆಂಬ ಭಾವದಿಂದ ಎನ್ನ ಕೂದಲ ಮರೆ ಮಾಡಿರುವೆ" ಎಂದು ಸಮರ್ಪಕವೂ, ಹೃದಯಂಗಮವೂ, ಹೃದಯಭೇದಕವೂ ಆದ ಪ್ರತ್ಯುತ್ತರವನ್ನು ಕೊಡಲು ಅಲ್ಲಮಪ್ರಭುವು ಅವರ ನಿಜವಾದ ವಿರಕ್ತಿಯನ್ನು ಕಂಡು ಬಹಳ ಕೊಂಡಾಡಿದನು. ಬಸವೇಶ್ವರ ಚನ್ನಬಸವೇಶ್ವರ ಮೊದಲಾದವರು ಅವಳ ಉಜ್ವಲವಾದ ಆಚರಣೆಯನ್ನು ನೋಡಿ ಅವಳನ್ನು ಬಹಳ ಹೊಗಳಿರುವರು. ಅವರ ಹೊಗಳಿಕೆಯನ್ನು ಕೇಳಿ ಮಹಾದೇವಿಯಕ್ಕನು ವಿನಯದಿಂದ ತನ್ನನ್ನು ಹಾಗೆ ಹೊಗಳಕೂಡದು ತನ್ನ ತಪ್ಪುಗಳನ್ನು ಒಪ್ಪಿಕೊಳ್ಳಬೇಕು, ತನ್ನ ತಪ್ಪುಗಳನ್ನು ಹಿಡಿದರೆ ತನಗೆ ಹಿತವೇ ಹೊರತು ಕುಂದಿಲ್ಲ ಎಂದು ಅಂದಿರುವಳು. ಬಸವೇಶ್ವರನನ್ನು ಅವಳು ಸ್ವತಃ ಹೀಗೆ ಬಹಳ ಕೊಂಡಾಡಿರುವಳು.

"ಎನ್ನಂಗದಲ್ಲಿ ಆಚಾರವ ತೋರಿದನಯ್ಯ ಬಸವಣ್ಣನು. ಆಚಾರವೇ ಲಿಂಗವೆಂದರುಹಿದನಯ್ಯ ಬಸವಣ್ಣನು. ಎನ್ನ ಪ್ರಾಣದಲ್ಲಿ ಅರಿವ ತೋರಿದನಯ್ಯ ಬಸವಣ್ಣನು. ಅರಿವೇ ಜಂಗಮವೆಂದು ಅರುಹಿದನಯ್ಯ ಬಸವಣ್ಣನು. ಚನ್ನಮಲ್ಲಿಕಾರ್ಜುನಯ್ಯ.........

"ಬಸವಣ್ಣ, ನಿಮ್ಮಂಗದಾಚಾರವ ಕಂಡು ಎನಗೆ ಲಿಂಗಸಂಗವಾಯಿತ್ತು. ಅಯ್ಯ, ಬಸವಣ್ಣ, ನಿಮ್ಮ ಮನದ ಸುಜ್ಞಾನವ ಕಂಡು ಎನಗೆ ಜಂಗಮ ಸಂಬಂಧವಾಯಿತ್ತಯ್ಯ. ಬಸವಣ್ಣ, ನಿಮ್ಮ ಸದ್ಭಕ್ತಿಯ ತಿಳಿದು ಎನಗೆ ನಿಜವು ಸಾಧ್ಯವಾಯಿತ್ತು. ಚನ್ನಮಲ್ಲಿಕಾರ್ಜುನಯ್ಯನ ಹೆಸರಿಟ್ಟ ಗುರು ನೀವಾದ ಕಾರಣ ನಿಮ್ಮ ಪಾದಕ್ಕೆ ನಮೋ ನಮೋ ಎನುತಿರ್ದೆನು."

"ಕಾಮನ ಗೆಲಿದೆನು ಬಸವಾ ನಿಮ್ಮ ದಯೆಯಿಂದ. ಸೋಮಧರನ ಹಿಡಿತಪ್ಪೆನು ಬಸವಾ ನಿಮ್ಮ ಕೃಪೆಯಿಂದ. ನಾಮದಲ್ಲಿ ಹೆಂಗುಸೆಂಬ ಹೆಸರಾದರೇನು? ಭಾವಿಸಲು ಗಂಡು ರೂಪು. ಬಸವಾ ನಿಮ್ಮ ದಯೆದಿಂದ, ಅತಿಕಾಮಿ ಚನ್ನಮಲ್ಲಿಕಾರ್ಜುನಯ್ಯಂಗೆ ತೊಡರನಿಕ್ಕಿ ಎರಡುವರಿಯದೆ ಕೂಡಿದೆನು ಬಸವಾ ನಿಮ್ಮ ಕೃಪೆಯಿಂದ."

ಮತ್ತು ಅಲ್ಲಿಯ ಎಲ್ಲ ಶರಣರನ್ನು ಹೀಗೆ ಹೊಗಳಿರುವಳು.

ಬಸವಣ್ಣನ ಭಕ್ತಿ, ಚನ್ನಬಸವಣ್ಣನ ಜ್ಞಾನ, ಮಡಿವಾಳಯ್ಯನ ನಿಷ್ಠೆ, ಪ್ರಭುದೇವರ ಜಂಗಮಸ್ಥಲ, ಅಜಗಣ್ಣನ ಐಕ್ಯಸ್ಥಲ, ನಿಜಗುಣನ ಆರೂಢ ಸ್ಥಲ, ಸಿದ್ಧರಾಮಯ್ಯನ ಸಮಾಧಿಸ್ಥಲ, ಇಂತಿವರ ಕರುಣ ಪ್ರಸಾದವೆನಗಾಯಿತ್ತು ಚನ್ನಮಲ್ಲಿಕಾರ್ಜುನಾ"

ಬಸವಣ್ಣನ ಮನೆಯ ಮಗಳಾದ ಕಾರಣ ಭಕ್ತಿ ಪ್ರಸಾದವ ಕೊಟ್ಟನು. ಪ್ರಭುದೇವರ ತೊತ್ತಿನ ತೊತ್ತಿನ ಮರಿದೊತ್ತಿನ ಮಗಳಾದ ಕಾರಣ ಜ್ಞಾನಪ್ರಸಾದವ ಕೊಟ್ಟನು. ಸಿದ್ಧರಾಮಯ್ಯನ ಶಿಶುಮಗಳಾದ ಕಾರಣ ಪ್ರಾಣಪ್ರಸಾದವ ಕರುಣಿಸಿ ಕೊಟ್ಟನು. ಮಡಿವಾಳಯ್ಯನ ಮನೆಯ ಮಗಳಾದ ಕಾರಣ ನಿರ್ಮಲ ಪ್ರಸಾದವ ನಿಶ್ಚಯಿಸಿ ಕೊಟ್ಟನು. ಇಂತೀ ಅಸಂಖ್ಯಾತ ಗಣಂಗಳೆಲ್ಲರೂ ತಮ್ಮ ಕರುಣದ ಕಂದನೆಂದು ತಲೆದಡಹಿದ ಕಾರಣ ಚನ್ನಮಲ್ಲಿಕಾರ್ಜುನಯ್ಯನ ಶ್ರೀಪಾದಕ್ಕೆ ಯೋಗ್ಯಳಾದೆನು."

ಹೀಗೆ ಮಹಾದೇವಿಯಕ್ಕನು ಶಿವಾನುಭವ ಮಂಟಪದ ಶರಣರನ್ನು ಹೊಗಳುವದನ್ನು ನೋಡಿದರೆ, ಅವರು ಅವಳಿಗೆ ತೋರಿಸಿದ ಪರನಾರೀ ಸಹೋದರತ್ವ, ಉದಾತ್ತವಾದ ಆದರ, ಪ್ರೇಮ, ಗೌರವಗಳು ಸ್ಪಷ್ಟವಾಗಿ ಒಡೆದು ಕಾಣುವವು.

ಇನ್ನು ಬಸವೇಶ್ವರನ ಪ್ರೋತ್ಸಾಹನದಿಂದ ದಂಪತಿಗಳೂ ಕೂಡ ಎಷ್ಟು ಅನನ್ಯ ಭಕ್ತಿಯಿಂದ ಧಾರ್ಮಿಕ ಕಾರ್ಯಗಳಲ್ಲಿ ತತ್ಪರರಾಗುತ್ತಿದ್ದರೆಂಬದು ಅನೇಕ ಉದಾಹರಣೆಗಳಿಂದ ಕಾಣಬಹುದು. ಮೋಳಿಗೆಯ ಮಾರಯ್ಯನ ಪತ್ನಿಯಾದ ಮಹಾದೇವಿಯಮ್ಮನು ತನ್ನ ಪತಿಗೆ ನಿಜೈಕ್ಯದ ತತ್ವವನ್ನು ಚನ್ನಾಗಿ ತಿಳಿಸಿ ಹೇಳಿ ಅವನ ಅಹಂಕಾರ, ಅಜ್ಞಾನಗಳನ್ನು ಹೊಡೆದೋಡಿಸಿ ದಿವ್ಯಜ್ಞಾನದ ಉಪದೇಶವನ್ನು ಮಾಡಿದಳು. ಇದರಿಂದ ಇವಳ ಜ್ಞಾನ, ವಿನಯ ಮತ್ತು ಪತಿಭಕ್ತಿಗಳು ಕಂಡುಬರುವವು. ಹಾಗೆಯೇ ವಿರಕ್ತನಾದ ಆಯುದಕ್ಕಿ ಮಾರಯ್ಯನ ಹೆಂಡತಿಯಾದ ಲಕ್ಕಮ್ಮನು ತನ್ನ ಗಂಡನಿಗೆ ನಿಷ್ಕಾಮ ಗುರುಲಿಂಗ ಜಂಗಮಸೇವೆಯನ್ನು ತಿಳಿಸಿದಳು. ಒಮ್ಮೆ ಅವಳು ಎಲ್ಲ ಜಂಗಮರೊಡನೆ ಬಸವಾದಿ ಪ್ರಮಥರೆಲ್ಲರನ್ನು ನೈವೇದ್ಯಕ್ಕೆ ಕರೆಯಬೇಕೆಂದು ತನ್ನ ಪತಿಗೆ ಬೇಡಿಕೊಂಡಳು. ಅವನು ತಾವು ಬಡವರಾದುದರಿಂದ

ಅದು ತನ್ನ ಕಾರ್ಯವಲ್ಲವೆಂದು ಅಂದನು. ಆದರೆ ಅವಳು "ಚಿತ್ತ ಶುದ್ಧದಲ್ಲಿ ಕಾಯಕವ ಮಾಡುವಲ್ಲಿ ಸದ್ಭಕ್ತಂಗೆ ಎತ್ತ ನೋಡಿದತ್ತ ಲಕ್ಷ್ಮಿ ತಾನಾಗಿಪ್ಪಳು' ಎಂದು ಆತ್ಮವಿಶ್ವಾಸದಿಂದ ಧೈರ್ಯ ಕೊಟ್ಟಳು. ಮತ್ತು ಆ ಎಲ್ಲ ಪ್ರಮಥರನ್ನು ಕರೆದು ಅವರವರಿಗೆ ಇಷ್ಟವಾದ ಪದಾರ್ಥಗಳನ್ನು ಸಲ್ಲಿಸಿ ಸಂತೋಷಪಡಿಸಿದರು ಇದನ್ನೆಲ್ಲ ನೋಡಿ ಬಸವೇಶ್ವರ ಮತ್ತು ಅಲ್ಲಮಪ್ರಭುಗಳು ಅಶ್ಚರ್ಯದಿಂದ,

"ಮನೆ ನೋಡಾ ಬಡವರು, ಮನ ನೋಡಾ ಸಂಪನ್ನರು. ಧನ ನೋಡಾ ಬಡವರು, ಘನಮನ ಸಂಪನ್ನರು. ದಂಪತಿ ಏಕಭಾವದಲ್ಲಿ ನಿಂದಲ್ಲಿ ಪರಮಾತ್ಮನಿಗೆ ಅರ್ಪಿತವಾಯಿತ್ತು."

ಎಂದು ಹಲವು ಪರಿಯಿಂದ ಆ ದಂಪತಿಗಳನ್ನು ವರ್ಣಿಸಿರುವರು. ಇಂಥ ಅನೇಕ ಉದಾಹರಣೆಗಳನ್ನು ಕಾಣಬಹುದು.

ಒಟ್ಟಿನ ಮೇಲೆ ಬಸವೇಶ್ವರನು ಸ್ತ್ರೀಯರ ದಾಸ್ಯತ್ವವನ್ನು ಹೋಗಲಾಡಿಸಿ ಅವರೂ ಪುರುಷರ ಸಮಾನರು; ಅವರಿಂದ ಪುರುಷರಿಂದ ಸಹ ಆಗದ ಕಾರ್ಯಗಳು ಆಗುತ್ತವೆಂದೂ, ಅವರಲ್ಲಿಯೂ ವ್ಯವಹಾರ ಚಾತುರ್ಯ, ಸಾಹಸ, ಧರ್ಮವೀರತೆ, ವೈರಾಗ್ಯ, ಅನುಭಾವ, ಭಕ್ತಿ...... ಮೊದಲಾದ ಗುಣಗಳು ಇವೆಯೆಂದೂ ತೋರಿಸಿಕೊಟ್ಟನು. ಸ್ತ್ರೀಯರು ನಿಜವಾಗಿ ಜನಾಂಗದ ಜನನಿಯರು. ಅವರು ಪುರುಷರ ಸಹಾಯಕರಾಗಿ, ಅವರ ಪ್ರತಿಯೊಂದು ಕಾರ್ಯದಲ್ಲಿ ಪ್ರೇಮದಿಂದ ತತ್ಪರರಾದರೆ ಈ ಸಂಸಾರವು ಯಾವಾಗಲೂ ಸುಖಮಯವಾಗುವದೆಂದು ಅನ್ನಲಿಕ್ಕೆ ಏನೂ ಸಂಶಯವಿಲ್ಲ. ಇದನ್ನೆಲ್ಲ ಕಂಡು ಹಿಡಿದು ಅವರಿಗೆ ಯೋಗ್ಯ ಮಾನ, ಮರ್ಯಾದೆ, ಗೌರವಗಳನ್ನು ತೋರಿಸಿ ಸಮಾಜದಲ್ಲಿ ಒಳ್ಳೇ ಸ್ಥಾನವನ್ನು ಕೊಟ್ಟಿದ್ದನ್ನು ನೋಡಿದರೆ ನಿಜವಾಗಿಯೂ ಬಸವೇಶ್ವರನು ಪರನಾರೀ ಸಹೋದರನೂ, ಅವರ ವಿಷಯವಾಗಿ ಆದರ ಗೌರವಗಳುಳ್ಳವನೂ, ಉಚ್ಚ ವಿಚಾರಗಳುಳ್ಳವನೂ ಎಂದು ಒಳ್ಳೇ ಸ್ಪಷ್ಟವಾಗಿ ಕಂಡುಬರುವದು.

# ಮಹಾದೇವಿಯಕ್ಕಗಳ ಮದುವೆ.

(ಶ್ರೀ ಸ ಹಾ. ಶಿವಮೂರ್ತಿಗಳ ಕೊನೆಯ ಲೇಖಾಂಕ. ಬನಾರಸ ಸಿಟಿ)

ಇದು ಬಹುದಿನದ ವಾದವಾದುದರಿಂದ ಸಹೃದಯವುಳ್ಳ 'ಶಿವಾನುಭವ'ದ ವಾಚಕವೃಂದದಲ್ಲಿ ಬೇಸರಗೊಳ್ಳದಿರಲು ಮೊದಲೆನ್ನ ವಂದನೆ.

ಮಹಾದೇವಿಯಕ್ಕಗಳ ಮದುವೆ ಸಂಬಂಧವಾಗಿ, ಒಂದೇ ಸಂಸ್ಥೆಯಲ್ಲಿರುವ ಶ್ರೀ ಚಂದ್ರಶೇಖರ ದೇವರಿಗೂ ನನಗೂ ವಿವಾದವೆದ್ದಿರುವದು 'ಶಿವಾನುಭವ'ದ ವಾಚಕರಿಗೆಲ್ಲ ಹಳೆ ಮಾತು. ಈಗಿರುವ ಅಕ್ಕನ ವಚನಗಳು ಯಾವ ನಿಷ್ಕರ್ಷೆಗೂ ಅನುಕೂಲವಿಲ್ಲದುದರಿಂದಲೇ ಈ ವಾದವು ಹುಟ್ಟಿದೆ; ಬೆಳೆದಿದೆ. ವಚನಶಾಸ್ತ್ರವನ್ನೆಲ್ಲ ಬಯಲಿಗೆ ತಂದ ಶ್ರೀಮಾನ್ ರಾವಸಾಹೇಬ ಪಿ ಜಿ. ಹಳಕಟ್ಟಿಯವರು ಬಹು ಶ್ರಮಪಟ್ಟು ಅಲ್ಲಿ ಇಲ್ಲಿಯ ಸಂಗ್ರಹದೊಳಗಿಂದ ಆಯ್ದುಕೊಂಡು ಪ್ರಕಟಿಸಿರುವ "ಮಹಾದೇವಿಯಕ್ಕನ ವಚನಗಳು" ಎಂಬ ಗ್ರಂಥದಲ್ಲಿ, ಹರಿಹರನು ತನ್ನ ರಘಟಾ ಕಾವ್ಯದಲ್ಲಿ ಉದಾಹರಿಸಿರುವ ಕೆಲವು ಅಕ್ಕನ ವಚನಗಳು ಕಂಡುಬರುವದಿಲ್ಲ. ಹರಿಹರನ ಕಾಲದಲ್ಲಿ ಸಂಗ್ರಹಾತ್ಮಕವಾದ ವಚನಗ್ರಂಥಗಳು (ಶೂನ್ಯಸಂಪಾದನೆ ಮೊದಲಾದವು) ಹುಟ್ಟಿರಲಿಲ್ಲವೆಂಬುವದನ್ನು ಒಪ್ಪುವದಾದರೆ ಅಕ್ಕನ ಸಂಪೂರ್ಣ ವಚನಗ್ರಂಥವು ಹರಿಹರನಿಗೆ ಅಪರಿಚಯವಾದದ್ದಲ್ಲ.

## ಕವಿ – ಕಾಲ.

ಹರಿಹರದೇವನ ಕಾಲನಿರ್ಣಯವು ಇದುವರಿಗೆ ವಾದಗ್ರಸ್ತವಾಗಿತ್ತು. ಈಗ ಶ್ರೀಮಾನ್‌ಗಳಾದ ಕುಂದಣಗಾರರವರೂ, ಎಸ್. ಎಸ್. ಮಾಳವಾಡರವರೂ ಕಿ. ಶ. ೧೨೧೬ ಎಂದು ನಿಶ್ಚಯಕ್ಕೇ ನಿಲ್ಲಿಸಿದ್ದಾರೆ. ("ಹರಿಹರದೇವ" ಎಂಬ ಗ್ರಂಥದೊಳಗಿನ ಅವರ ಲೇಖವನ್ನು ಓದಿ.) ಕ್ರಿ. ಶ ೧೨೩೨ರಲ್ಲಿದ್ದ ಸೋಮರಾಜನು ತನ್ನ "ಉದ್ಭಟ ಕಾವ್ಯದಲ್ಲಿ ಹರೀಶ್ವರನನ್ನು ಸ್ತುತಿಸಿರುವದರಿಂದ, ೧೨೧೬ನೆಯ ಶಕವು ಸುಮಾರು ಹರಿಹರನ ಕೊನೆಯ ಕಾಲವೆಂದೇ ಹೇಳಬಹುದು. ಹರಿಹರನು ಅಕಾಲ ಮರಣಕ್ಕೆ ತುತ್ತಾಗದೆ ಪ್ರಾಯಃ ಸಂಪೂರ್ಣಾಯುಷ್ಯವುಳ್ಳವ

ನಾಗಿದ್ದನೆಂದು ಆತನ ಕಾವ್ಯಸೃಷ್ಟಿಯಿಂದಲೇ ಊಹಿಸಲವಕಾಶವಿದೆ. ಈ ಕಾರಣ "ಬಸವಣ್ಣನವರ ಪಟ್ಟಶಿಷ್ಯರಲ್ಲಿ ಕೆಲವರನ್ನಾದರೂ ಹರೀಶ್ವರನು ಕಂಡಿರಬಹುದು." ಎಂಬ ಶ್ರೀಮಾನ್ ಆ. ನ. ಕೃಷ್ಣರಾಯರ ಅಭಿಪ್ರಾಯವೂ ಮಿಥ್ಯವಾಗಲಾರದು. ಪ್ರಾಯಃ ಹರಿಹರನ ಕಾವ್ಯಗಳೆಲ್ಲವೂ ಅಂದಿನ ವೀರಶೈವರ ಇತಿಹಾಸ ಶೋಧನೆಗೆ ಬಹು ಸಹಾಯಕವಾಗಿವೆಯೆಂದು ಎಲ್ಲ ಇತಿಹಾಸ ಪಂಡಿತರೂ ಒಪ್ಪುತ್ತಾರೆ. ಆದರೆ ನಮ್ಮ ಪ್ರತಿವಾದಿಗಳು ಮಾತ್ರ "ಹರಿಹರನು ರಚಿಸಿದ ರಗಳೆಗಳೆಲ್ಲಾ ಐತಿಹಾಸಿಕಕ್ಕೆ ತಳಹದಿಯಾಗಲಾರವೆಂದು ನನ್ನ ಭಾವನೆ" ಎಂದು ಬರೆದುಕೊಂಡಿದ್ದಾರೆ. (ಇದೇ ವರ್ಷದ ಜನವರಿಯ "ಶಿವಾನುಭವ'ದಲ್ಲಿದೆ.)

## ಚಾಮರಸನ ಕಾವ್ಯಕ್ಕೆ ಅಭಿಪ್ರಾಯವು.

ಈ ನಮ್ಮ ಪ್ರತಿವಾದಿಗಳು ಅಕ್ಕನ ವಚನಗಳನ್ನೇ ಮುಖ್ಯ ಪ್ರಮಾಣವಾಗಿಟ್ಟುಕೊಂಡಿರುವೆವೆಂದು ಹೇಳಿಕೊಳ್ಳುವರಾದರೂ, ಚಾಮರಸನ ಪ್ರಭುಲಿಂಗಲೀಲೆಯನ್ನೇ ಹಿಡಿದು ಸಾಧಿಸುವದರಿಂದ ಚಾಮರಸನ ಕಾವ್ಯವು ಕಾಲ್ಪನಿಕವೆಂಬುದನ್ನೇ ನನ್ನ ಮೂರನೇ ಲೇಖಾಂಕದಲ್ಲಿ ಬಿತ್ತರಿಸಿದ್ದೇನೆ. ಇದನ್ನು ನೋಡಿದ ಹಲವು ಜನ ಮಾನ್ಯ ವಿದ್ವಾಂಸರು ನನಗೆ ಒಪ್ಪೋಲೆಗಳನ್ನು ಬರೆದು ಮತ್ತಷ್ಟು ಉತ್ಸಾಹಗೊಳಿಸಿದರು. ಚಾಮರಸನು ತನ್ನ 'ಪ್ರಭುಲಿಂಗಲೀಲೆ'ಯಲ್ಲಿ— "ಒಂದು ರೀತಿ ತಿದ್ದುವುದಕ್ಕೆ ಪ್ರಯತ್ನಪಟ್ಟ ಹಾಗೆ ತೋರುತ್ತದೆ." ಎಂದು ಶ್ರೀಮಾನ್ ಎಮ್. ಆರ್. ಶ್ರೀಯವರೂ ಅದೇ ಪ್ರಭುಲಿಂಗಲೀಲೆಯ — 'ಸಂಗ್ರಹ'ದ ಪೀಠಿಕೆಯ xlivನೆಯ ಪುಟದಲ್ಲಿ ಅಭಿಪ್ರಾಯ ಪಟ್ಟಿದ್ದಾರೆ. ಇದರಂತೆ ಶ್ರೀಯುತರಾದ ಬಿ ಶಿವಮೂರ್ತಿ ಶಾಸ್ತ್ರಿಗಳವರೂ 'ಅಕ್ಕಮಹಾದೇವಿ' ನಾಟಕದ ವಿಮರ್ಶೆಯಲ್ಲಿ ಕೆಚ್ಚೆದೆಯಿಂದ ವ್ಯಕ್ತಮಾಡಿದ್ದಾರೆ.

## ನಮ್ಮ ಪ್ರತಿವಾದಿಗಳ ಆಕ್ಷೇಪಗಳು.

(೧) 'ಯಾವುದು ಇರುವುದಿಲ್ಲವೋ ಅದು ಪ್ರಸಾರವಾಗುವದೇ ಇಲ್ಲ' ಎಂಬಿವರ ಮಾತಿನಂತೆ ಅಕ್ಕನ ಅಥವಾ ಹರಿಹರನ ಕಾಲಕ್ಕಿಲ್ಲದುದನ್ನು ಚಾಮರಸನಾದರೂ ಹೇಗೆ ಪ್ರಸಾರ ಮಾಡಿದನು? ಇಲ್ಲದುದನ್ನು ಹೇಳದನೆಂದರೆ ನಿಮ್ಮ ಮಾತಿಗೇ ವ್ಯತ್ಯಯ ಬರುವದಿಲ್ಲವೇ?

(೨) ಅಥವಾ ಲಗ್ನವಾಗಿಲ್ಲವೆಂಬ ಮಾತು ಹರಿಹರನ ಕಾಲಕ್ಕಿಲ್ಲದಿದ್ದರೂ ಅಕ್ಕನವರ ಕಾಲಕ್ಕಿತ್ತು. ಅದೇ ಚಾಮರಸನ ಕಾಲಕ್ಕೆ ಹಬ್ಬಿತು. ಹಾಗಾದರೆ ಹರಿಹರನೇಕೆ ಹಾಗೆ ಹೇಳಲಿಲ್ಲವೆಂದರೆ— ಆತನ ಕಾಲಕ್ಕೆ ಆತನಿಗೆ ಹೇಳಿದ ಜನಗಳಲ್ಲಿ ಲಗ್ನವಾಗಿದ್ದಳೆಂದು ಭ್ರಮೆ (ತಪ್ಪು ಕಲ್ಪನೆ)ಯಾಗಿರಬೇಕು. ಬರಬರುತ್ತ ಅದು ಸುಳ್ಳಾಗಿ ಚಾಮರಸನ ಕಾಲಕ್ಕೆ ನಿಜಸಂಗತಿಯು ಪ್ರಮೆಯಾಗಿರಬೇಕು. ಆದ ಕಾರಣ "ಭ್ರಮೆಯಿಂದ ಪ್ರಮೆಯಾಗುವದೂ ಸೃಷ್ಟಿಯು ನೇಮು" ಎಂದು ನನ್ನ ಹೇಳಿಕೆ. ಇದಕ್ಕೆ ಸರ್ಪರುಜ್ಜುನ್ಯಾಯು"ವೇ ದೃಷ್ಟಾಂತ.

(೩) ಇನ್ನು ಹರಿಹರದೇವನಿಗಾದರೂ ಲಗ್ನವಾಗಿತ್ತೆಂದು ಹೇಳಲು ಯಾವ ಐತಿಹಾಸಿಕ ಆಧಾರವಿದೆಯೋ ಅದು ನನಗೆ ತಿಳಿಯುದಾಗಿದೆ. ಒಂದು ಪಕ್ಷದ ದೃಷ್ಟಿಯಿಂದ ಅಕ್ಕನವರಗಿಂತಲೂ ೧೩೦ ವರ್ಷ ಅಂತರದಲ್ಲಿರುವ ಹರಿಹರನಿಗಾದರೂ ಈ ಲೇಖಕರು ಒಂದು ಐತಿಹಾಸಿಕ ಪ್ರಮಾಣವನ್ನು ಕೊಡದಿದ್ದರೆ ಅಕ್ಕನವರು ಲಗ್ನವಾಗಿದ್ದರೆಂದು ಹೇಳುವದು ತಾನೇ ಹೇಳಿದಂತೆ ತಮ್ಮದೇ ಬೇಸರ ಕಳೆಯುಲು ಕೂತು ಕೇಳುವ ಕತೆಯಾಗುವದಲ್ಲವೇ? ಎಂದು ಕೇಳಿದರೆ ಇವರಿಗೆ ಕೊಂಚ ಕಠಿಣವಾಗಬಹುದು. ಕಾರಣ ಆ ಪ್ರಶ್ನೆ ಮಾಡಿ ಕಲ್ಲೆದೆಯುವನಾಗುವ ಇಚ್ಛೆಯು ಎನಗಿಲ್ಲ.

## ಕ್ರಮವಾಗಿ ನಮ್ಮ ಉತ್ತರವು.

ಕೊಂಕುಪೆತ್ತ ಮೆಲ್ಲೆದೆಯಿಲ್ಲದ ನಾನು, ನನ್ನ ಸಾಜವಾದ ಕಲ್ಲೆದೆಗಾಗಿ ಬೇಸತ್ತು, ಮುಂಪೆ ಉತ್ತರಿಸಲು ಉತ್ಸಾಹಪಡುತ್ತೇನೆ.

(೧) "ಒಂದು ಭಾಗದಲ್ಲಿ ಅಥವಾ ಒಂದು ನಾಡಿನಲ್ಲಿ ನಡೆದು ಹೋದ ಕಾರ್ಯಗಳ ನಿಜಸ್ಥಿತಿಯು ಕಾಲಾಂತರದ ಮೇಲೆ ಎಲ್ಲೆಡೆಯಲ್ಲಿ ಹಬ್ಬುವದು ಸ್ವಾಭಾವಿಕ" ಎಂಬ ಈ ಲೇಖಕರ ಮಾತಿಗೆ ಉತ್ತರವಾಗಿ— "ಒಂದು ನಾಡಿನ ವ್ಯಕ್ತಿಯು ಕಾರ್ಯಗಳು ಕಾಲಾಂತರದ ಮೇಲೆ ಹಬ್ಬುವದೇನೋ ದಿಟವು. ಆದರೆ ಆ ಕಾರ್ಯವು ಕಾಲಾಂತರದ ಮೇಲೆ ಹೆಚ್ಚು ಹಬ್ಬಬೇಕಾದರೆ ಮೊದಲಿಗೇ ಆ ವಿಷಯುವು ಎಲ್ಲಿಯಾದರೂ ಅಲ್ಪ ಪ್ರಮಾಣದಿಂದಲಾದರೂ ಹಬ್ಬಿಕೊಂಡಿರಬೇಕಾಗುತ್ತೆ" ಎಂದು ಬರೆಯುವಾಗ—'ಯಾವುದು ಇರುವುದಿಲ್ಲವೋ ಅದು ಪ್ರಸಾರವಾಗುವದೇ ಇಲ್ಲ ಎಂದು ಬರೆದಿದ್ದೇನೆ. ಇದರ ಸ್ಥೂಲಾರ್ಥವಾದರೂ ಇಂತು ಪ್ರಸಾರ

ವಾಗುವದೆಲ್ಲ ಪೂರ್ವದಲ್ಲಿರಬೇಕಾಗುತ್ತೆ ಎಂದರೆ ಮೊದಲು ಹುಟ್ಟು ಕಾಣುತ್ತಿದ್ದು ಆಮೇಲೆ ಪ್ರಸಾರವುಳ್ಳದ್ದು. ಇನ್ನೂ ಸರಿಯಾಗಿ ತಿಳಿಸ ಬೇಕೆಂದರೆ ಅಕ್ಕನು ಮದುವೆಯಾಗಿಲ್ಲವೆಂದು ಚಾಮರಸನು ಹೇಳು ತ್ತಾನಲ್ಲವೆ? ಈ ಹೇಳಿಕೆಯು ಇವನಿಗಿಂತಲೂ ಬಹು ಪ್ರಾಚೀನ ಕಾಲ ದಲ್ಲಿ ವಿಷಮವಾಗಿ ತೋರುತ್ತದಲ್ಲದೆ ಸಮವಾಗಿ ತೋರುವುದಿಲ್ಲ. ಕಾರಣ ಅದು ಅವನಿಂದ ಆರಂಭ; ಅಂತೆಯೇ ಕಲ್ಪಿತ. ಈ ದೃಷ್ಟಿಯಿಂದ ನನ್ನ ಮಾತಿಗೇನೂ ವ್ಯತ್ಯಯವಿಲ್ಲ.

(೨) ಅಕ್ಕನು ಲಗ್ನವಾಗಿಲ್ಲವೆಂಬುದು ಆಕೆಯ ಕಾಲದಲ್ಲಿ ನೆಲಿ ಸಿತ್ತೆಂದೂ, ಅದು ಹರಿಹರನ ಕಾಲಕ್ಕೆ ಅಜ್ಞಾತವಾಸ ಮಾಡಿತ್ತೆಂದೂ, ಅನಂತರ ಚಾಮರನ ಕಾಲಕ್ಕೆ ಮತ್ತೆ ಹಬ್ಬಿತೆಂದೂ, ನೀವು ಯಾವ ಆಧಾರದಿಂದ ಬರೆದಿರುವಿರಿ? ಇಂಥವುಗಳನ್ನು ಹೇಳಬೇಕಾದರೆ ಪ್ರಮಾಣ (ಆಧಾರ) ಬಿಟ್ಟು ಬರಬಾರದೆಂದು ಈ ಹಿಂದೆಯೇ ಎಚ್ಚರಿಕೆ ಕೊಟ್ಟದ್ದಿ ಲ್ಲವೆ ? ಇರಲಿ. ಇನ್ನು ಮುಂದಾದರೂ ಇದನ್ನು ಸಾಧಾರವಾಗಿ ಸಾಧಿಸಿ ತೋರಿಸಿದರೆ, ನಮ್ಮ ಲಿಕ್ಕಣಿಕೆಯಾಗ ಮುಂದುವರಿಯಲಾ ರದು. ಆಧಾರ ತೋರಿಸದಿದ್ದರೆ ಮಾತ್ರ ಮತ್ತೂ ಬೇಸರ ಕಳೆಯಲು ಕೂತು (ತೂಕಡಿಸುತ್ತ) ಕೇಳುವ ಕತೆಯ ಜೊತೆಗೇ ಸೇರುವದರಲ್ಲಿ ಸಂಶ ಯವಿಲ್ಲ. ಇನ್ನು ಹರಿಹರನನ್ನು ಕುರಿತು ಹೇಳುವ ಜನಗಳಲ್ಲಿ ಲಗ್ನ ವಾಗಿತ್ತೆಂಬ ಭ್ರಮೆಯೇಕೆ ಹುಟ್ಟಿತು? ದೋಷಯುಕ್ತವಾದುದಕ್ಕೇ "ಭ್ರಮ"ಯೆಂದು ನೈಯ್ಯಾಯಿಕರ ಮತ. ಹೇಗೆಂದರೆ—ನೀವು ಹೇಳುವ "ಸರ್ಪರಜ್ಜುನ್ಯಾಯ"ವೇ ದೃಷ್ಟಾಂತ ಎಂಬ ವಾಕ್ಯವನ್ನೇ ವಿಚಾರ ಮಾಡೋಣ. ಹಗ್ಗದಲ್ಲಿ ಹಾವೆಂದು ಭ್ರಮಿಸಬೇಕಾದರೆ ಅಲ್ಲಿ ಕತ್ತ ಲೆಯಿರಲೇಬೇಕು. ಇದೇ ಇಲ್ಲಿ ದೋಷವು. ಹೀಗೆ ಅಲ್ಲಿರುವ ದೋಷ ವಾವುದು ತೋರಿಸಿ ನೋಡೋಣ? ತೋರಿಸುವದಾದರೆ "ಭ್ರಮೆ ಯಿಂದ ಪ್ರಮೆಯಾಗುವದು ಸೃಷ್ಟಿಯ ನೇಮ"ವೇ ಅಹುದು.

(೩) ಹರಿಹರನಗಿಂತಲೂ ಪೂರ್ವದಲ್ಲಿ ಯಾರಾದರೂ ಅಕ್ಕನ ಚರಿತ್ರೆಯನ್ನು ಬರೆದಿದ್ದರಲ್ಲವೇ ಪ್ರಮಾಣ ತೋರಿಸುವದು? ಎಲ್ಲದ ಕ್ಕಿಂತಲೂ ಯಾವುದು ಪ್ರಾಚೀನವಿದೆಯೋ ಅದಕ್ಕೆ ಅದೇ ಪ್ರಮಾಣ. ಒಂದು ಪ್ರಾಚೀನ ಇತಿಹಾಸವನ್ನು ತಪ್ಪೆಂದು ಹೇಳುವ ಧೈರ್ಯವಿರಬೇ ಕಾದರೆ ಅದಕ್ಕಿಂತಲೂ ಪ್ರಾಚೀನ ಪ್ರಮಾಣ ದೊರೆಯಬೇಕು. ಅಲ್ಲ

ದಿರೆ ಅದೇ ಸತ್ಯ. ಚಾಮರಸನಿಗಿಂತ ಪೂರ್ವದಲ್ಲಿಯೂ ಕೊನೆಯಲ್ಲಿಯೂ ಅಕ್ಕನ ಮದುವೆಯನ್ನು ತಿಳಿಸಿದವರುಂಟು. ಇಲ್ಲಿ ನಿಮ್ಮ ಅಭಿಪ್ರಾಯ ದಂತೆ ಚಾಮರಸನದು ಭ್ರಮೆಯಿಂದ ಪ್ರಮೆಯಾಗಿದ್ದರೆ ಆತನ ತರು ವಾಯ ಅದು ಮತ್ತೇಕೆ ಭ್ರಮೆಯಾಯಿತು ? "ಪ್ರಮೆಯಿಂದ ಭ್ರಮೆ ಯಾಗುವದೂ ಸೃಷ್ಟಿಯ ನೇಮವಿದೆಯೇ?" ಎಂದು ಮರಳಿ ಪ್ರಶ್ನಿಸಿದರೆ ಯಾರಿಗೆ ಕೊಂಚ ಕಠಿಣವಾಗಬಹುದು ನೀವೇ ನೋಡಿ ?

## ಮತ್ತೆ ಕೆಲವು ಆಕ್ಷೇಪಗಳು.

(೪) ಒಂದು ಪಕ್ಷದ ಶ್ರೀಮಾನ್ ದ. ರಾ. ಬೇಂದ್ರೆಯವರು ಹೇಳು ವಂತೆ ಅಕ್ಕನ ಕಾಲ ೧೧೦೦ ಹೋಗುವದು ಸತ್ಯವಾಗಿ ಪರಿಣಮಿಸಿದರೆ (ಹರಿಹರನಿಗೂ ಅಕ್ಕನಿಗೂ) ಸುಮಾರು ೨೦೦ ವರ್ಷ ಅಂತರವಾಗುವದು.

(೫) ಹರಿಹರನ ರಗಳೆಯ ಕೆಲವಂಶಗಳು ಅಕ್ಕನ ವಚನಗಳಿಗೆ ವಿರೋಧವಾಗಿ ನಿಲ್ಲುವಂತಿವೆ. ಅವುಗಳಲ್ಲಿ ಕೆಲವನ್ನು ಹಿಂದಿನ ಬರಹ ದಲ್ಲಿ ಹೇಳಿದ್ದೇನೆ.

(೬) ಕೌಶಿಕನೊಡನಾದ ವಿವಾಹವಿಷಯವನ್ನು ಹೇಳತಕ್ಕ ಪ್ರಸಂಗಗಳು ಅಕ್ಕನವರಿಗೆ ಘಟಿಸಿದ್ದರೂ ಹೇಳಿಲ್ಲ. ಅಕ್ಕಗಳು ಆಗಿಹೋದು ದನ್ನು ವ್ಯಕ್ತಮಾಡದೆ ಬಚ್ಚಿಡುವ ಸಂಕುಚಿತ ಸ್ವಭಾವದವಳೂ ಆಗಿರಲಿಲ್ಲ. ಆದ್ದರಿಂದ ಅವಳ ವಚನದಿಂದ ಲಗ್ನವಾಗಿಲ್ಲವೆಂದು ಬಹು ಮಟ್ಟಿಗೆ ಊಹಿ ಸಲು ಸಾಧ್ಯವಿದೆಯೆಂದು ತೋರುತ್ತದೆ.

## ಕ್ರಮವಾಗಿ ನಮ್ಮ ಉತ್ತರವು.

(೪) ವಿಮರ್ಶೆಯಲ್ಲಿ ನಿಶ್ಚಯಾತ್ಮಕ ಅಭಿಪ್ರಾಯವಿದ್ದರೇ ಮಾನ್ಯ. ಕಾರಣ ಈ ನಿಮ್ಮ ಪ್ರಶ್ನೆಯಲ್ಲಿ 'ಒಂದು ಪಕ್ಷ' 'ಸತ್ಯವಾಗಿ ಪರಿಣಮಿಸಿದರೆ' ಎಂಬ ಅನಿಶ್ಚಯ ಪದಗಳಿರುವದರಿಂದ, ನಾವು ಅದರ ಗೋಜಿಗೆ ಹೋಗೆವು. ಆದರೂ ಅಕ್ಕನ ಕಾಲವು ಕ್ರಿ. ಶ. ೧೧೬೫ ಇರುವದರಿಂದ ಇದೇ ಲೇಖದಲ್ಲಿ 'ಕವಿಕಾಲ' ದ ವಿಚಾರವಾಗಿ ಬರೆದುದೂ ಉತ್ತರವಾ ಗುತ್ತದೆ.

(೫) ಹರಿಹರನ ರಗಳೆಯು ಅಕ್ಕನ ವಚನಗಳಲ್ಲಿರುವ ತಾತ್ವಿಕ ವಿಚಾರಕ್ಕೆ ತಪ್ಪಿದೆಯೋ ಒಪ್ಪಿದೆಯೋ? ಎಂಬುದನ್ನು ನಾವು ಬೇರೆಡೆ ಯಲ್ಲಿ ನಿಶ್ಚಯವಾಗಿಯೂ ಚರ್ಚಿಸುತ್ತೇವೆ. ಸೂಕ್ಷ್ಮವಾದ ತಾತ್ವಿಕ

ದೃಷ್ಟಿಗೂ, ಐತಿಹಾಸಿಕವಾದ ಸ್ಥೂಲ ಚರಿತ್ರೆಗೂ ಬಹು ದೂರವಿದೆ. ಕಾರಣ ಈಗ ನಡೆದಿರುವ ವಿಷಯವಾದರೂ 'ಮಹಾದೇವಿಯಕ್ಕಗಳು ಮದುವೆಯಾಗಿದ್ದರೇ ಅಥವಾ ಇಲ್ಲವೆ ? ಎಂಬುದು. ಇದನ್ನು ಬಿಟ್ಟು ಅಕ್ಕನು ತನ್ನ ಇಷ್ಟದೈವವಾದ ಶ್ರೀಶೈಲದಲ್ಲಿಯ ಚೆನ್ನಮಲ್ಲಿಕಾರ್ಜುನ ನಿಗೆ ಪೊಡಮಟ್ಟಳು ಎಂದು ಹರಿಹರನು ಹೇಳಿದೊಡನೇ, ಅಕ್ಕನು ಮದುವೆಯಾದಷ್ಟೇ ಸುಳ್ಳೆಂದೂ, ಆತನ ಕಾವ್ಯವು ಸತ್ಯಪೀಠದಲ್ಲಿ ನಿಲ್ಲ ಲಾರದೆಂದೂ, ಹರಿಹರನು 'ಪುಷ್ಪದ ರಗಳೆ' ಯನ್ನು ಬರೆದುದರಿಂದ ಕಾವ್ಯದೊಲವು ಅಂತರಂಗದಲ್ಲಿ ಹರಿದುನಿಂತಿದೆಯೆಂದೂ ಹೇಳುವು ದೆಂದರೆ— ತಮ್ಮ ಪಕ್ಷ ಬೀಳುವ ಮಿಥ್ಯಾಭಿಮಾನವಲ್ಲದೆ ಮತ್ತೇನೂ ಅಲ್ಲವು. ಏನೋ ಹೇಳುತ್ತಾರಲ್ಲವೆ?— "ಕೈಲಾಗದಿರೋಣ ............ ರೆಂದು" ಇದೂ ಹಾಗೆಯೇ ಸರಿ. ಏಕೆಂದರೆ— ಮದುವೆಯಾಗಿತ್ತೇ ಇಲ್ಲವೇ ಎಂಬುದನ್ನು ಬಿಟ್ಟು ಅವನ ತತ್ವವೆಂಥದು ? ಎಷ್ಟು ಶಾಸ್ತ್ರ ಗಳನ್ನು ಅಭ್ಯಸಿಸಿದ್ದ ? ಅವನಿಗೆ ವೇದ ಬರುತಿತ್ತೇ ಇಲ್ಲವೇ ? ಹೀಗೆಲ್ಲಾ ಇಲ್ಲದ್ದು ಅಲ್ಲದ್ದು ಸೇರಿಸಿ ಸತ್ಯವನ್ನು ಮುಳುಗಿಸಲು ಯತ್ನಮಾಡು ವದು ಸತ್ಯಾಪೇಕ್ಷಿಯಾದ ವಿಮರ್ಶಕನಿಗೆ ತಕ್ಕುದಲ್ಲ. ಯಾವುದೂ ಎಲ್ಲೆ ಮೀರಬಾರದು. ಪ್ರತಿಯೊಂದಕ್ಕೂ ಎಲ್ಲೆಯಿದೆ. ಸತ್ಯಕ್ಕೆ ಒಪ್ಪಿಬಿಡಬೇಕು.

ಇನ್ನು ಕೆಲವು ಹರಿಹರನ ಅಭಿಪ್ರಾಯಗಳು ಅಕ್ಕನ ವಚನಗಳಿಗೆ ವಿರೋಧವಾಗಿದ್ದುದರಿಂದ ಕೆಲವುಗಳನ್ನು ಹಿಂದಿನ ಬರಹದಲ್ಲಿ ಹೇಳಿರುವೆ ನೆಂದೂ ತಿಳಿಸಿದ್ದಾರಲ್ಲವೇ ? ಅವೇ ೩೦ನೇ ಇಸ್ವಿಯ ಜುಲೈ ತಿಂಗಳ ಇದೇ ಪತ್ರಿಕೆಯ ೪೭೭ನೇ ಪುಟ ಮತ್ತು ೪೭೮ನೇ ಪುಟದಲ್ಲಿವೆ. ಅಲ್ಲಿ ಇವರು ಮಾಡಿರುವ ಅರ್ಥವಾದರೂ ಸಂಪೂರ್ಣ ಅಬದ್ಧವಾಗಿದೆ. ಅದ ರಲ್ಲಿಯೂ "ಹಿಂಡನಗಲಿ ಹಿಡಿವಡೆದ ಕುಂಜರ......" ಎಂಬ ವಚ ನಕ್ಕೆ ಬಿಚ್ಚಿ ಬರೆದಿರುವದನ್ನು ನೋಡಿದರೆ ಮರುಗಬೇಕಾಗುತ್ತದೆ. ಇವು ಗಳ ಖಂಡನೆಗಿಲ್ಲಿ ಸ್ಥಳಸಂಕೋಚವಾಗುವದರಿಂದ ಅಕ್ಕನ ಮದುವೆಗೆ ಉಪಯುಕ್ತವಿದ್ದ ವಿಷಯವನ್ನಷ್ಟೇ ಚರ್ಚಿಸುತ್ತ ಈಗ ಮುಗಿಸುತ್ತೇನೆ.

(೬) "ಮಹಾದೇವಿಯಕ್ಕನ ವಚನ" ಗಳನ್ನು ಶ್ರೀಮಾನ್ ರಾವ ಸಾಹೇಬ ಹಳಕಟ್ಟಿಯವರು, ತಾವು ಸಂಗ್ರಹಗ್ರಂಥಗಳಿಂದ ಅಲ್ಲಲ್ಲಿ ಆಯ್ದುಕೊಂಡು ಪ್ರಕಟಿಸಿರುವರಾಗಿ ಅದರ ಮುನ್ನುಡಿಯಲ್ಲಿಯೇ ತಿಳಿ ಸಿದ್ದಾರೆ. ಕಾರಣ ಅಕ್ಕನ ವಚನಗಳೆಲ್ಲವೂ ದೊರೆತಿಲ್ಲವೆಂಬುವದಕ್ಕೆ ಹರಿ

ಹರನ 'ಮಹಾದೇವಿಯಕ್ಕನ ರಗಳೆ' ಯಲ್ಲಿರುವ ಅಕ್ಕನ ವಚನಗಳೇ ದೃಷ್ಟಾಂತ.

| ಮ. ರಗಳೆಯ ಪುಟ ಸಂಖ್ಯೆ. | ಸಾಲು. |
|---|---|
| ೫೦ | ೩ ೪ ೫ ೬ |
| ೫೨ | ೨೨ ೨೩ ೨೪ |
| ೫೩ | ೧ ೨ ೩ |
| ೫೫ | ೨೦ ೨೧ ೨೨ |
| ೫೬ | ೧. |

ಇವುಗಳನ್ನು ನೋಡಿದರೆ ತಿಳಿಯುವದು. ಕಾರಣ ಅಕ್ಕನ ಸಂಪೂರ್ಣ ವಚನಗ್ರಂಥವು ದೊರೆತಾಗ ಯಾವುದನ್ನೂ ಊಹಿಸಬೇಕಲ್ಲದೆ ಇಷ್ಟೇ ವಚನಗಳನ್ನು ನೋಡಿ—"ಕೌಶಿಕನೊಡನಾದ ವಿವಾಹ ವಿಷಯವನ್ನು ಹೇಳತಕ್ಕ ಪ್ರಸಂಗಗಳು ಅಕ್ಕನವರಿಗೆ ಘಟಿಸಿದ್ದರೂ ಹೇಳಿಲ್ಲ. ಅಕ್ಕಗಳು ಆಗಿಹೋದುದನ್ನು ಬಚ್ಚಿಡುವ ಸಂಕುಚಿತ ಸ್ವಭಾವದವಳೂ, ಕಲ್ಮಷ ಹೃದಯದವಳೂ ಆಗಿರಲಿಲ್ಲ" ವೆಂದು ಮೊದಲಾಗಿ ಅಭಿಪ್ರಾಯ ಪಟ್ಟುದು ಇಲ್ಲಿ ಬಿದ್ದು ಹೋಗುತ್ತದೆ.

ಅಕ್ಕನು ಆಗಿಹೋದುದನ್ನು ಬಿಚ್ಚಿಡುವ ಸ್ವಭಾವದಳು ಇದ್ದಳೆಂಬುದಕ್ಕೆ ನಾವೂ ಪ್ರಮಾಣವನ್ನು ತೋರಿಸುತ್ತೇವೆ—ಈ ಮೇಲೆ ಹೇಳಿದ ಹರಿಹರನ ರಗಳೆಯಲ್ಲಿರುವ ವಚನಗಳನ್ನು ನೋಡಿ. ನೋಡಿದರೆ ಮದುವೆಯಾಗಿದ್ದಳೆಂಬ ನಿಶ್ಚಯವು ಅಕ್ಕನ ವಚನಗಳಿಂದಲೇ ಸಿದ್ಧಾಂತವಾದಂತಾಗುತ್ತದೆ.

## ಉಪಸಂಹಾರ

ಇದುವರೆಗೂ ವಿಚಾರಿಸಿದ—ವಿಚಾರಿಸಿರುವ ನವಿರ್ಮ್ಯರ ಅಭಿಪ್ರಾಯಗಳಿಂದ ಕೊಂಚಮಟ್ಟಿಗಾದರೂ ಒಂದು ನಿಶ್ಚಯ ಭಾವವು ಮಾನ್ಯ ವಿಮರ್ಶಕರಿಗೆ ಹೊಳೆಯದಿರದು. ಸತ್ಯಾಸತ್ಯಗಳ ಕಲ್ಪನೆಯು ಉದಿಸದಿರದು. ವಿಮರ್ಶೆಯಲ್ಲಿ ಸೋಲುಗೆಲುವುಗಳು ಮುಖ್ಯವಾಗಿಲ್ಲ. ಸತ್ಯಾಸತ್ಯಗಳ ವಿವೇಚನೆಯು ಮುಖ್ಯ ಇದರಲ್ಲಿ ನಾನು ಸೋಲಾದರೆ ಗೆಲುವಿಗಿಂತ ಹೆಚ್ಚಾಗಿ ಆನಂದಪಡುತ್ತೇನೆ. ಕಾರಣ ನನ್ನ ಈ ಲೇಖಗಳನ್ನು ಬೇಕಾದವರು ಇನ್ನು ವಿಮರ್ಶಿಸಬಹುದು.

ವಿಮರ್ಶಕಾರನೆಂದರೆ— "ಸಾಹಿತ್ಯರೂಪದಲ್ಲಿ ಬಯ್ಯುವ ಪದ್ಧತಿಯೊಳಗಿನ ಒಂದು ಪ್ರಭೇದದವನು" ಎಂದು ಕೆಲರು ಅವನ ಲಕ್ಷಣಮಾಡುತ್ತಾರೆ. ಕಾರಣ ನನ್ನೀ ವಿಮರ್ಶೆಯಲ್ಲಿ ಯಾವಾದರೂ ಬಿರುನುಡಿಗಳಾಗಿದ್ದರೆ ಇದರಲ್ಲಿ ಕ್ಷಮೆಬೇಡುವದು ಅನವಶ್ಯಕ. ಆದರೂ ಪದ್ಧತಿಗನುಸರಿಸಿ 'ಕ್ಷಮೆಯಿರಲಿ' ಎಂದು ನಮ್ಮ ಪ್ರತಿವಾದಿಗಳಲ್ಲಿ ವಿನಂತಿ.

ನಾನಿನ್ನು ಲೇಖನಗಳಲ್ಲಿ ಈ ವಿಷಯವನ್ನು ಚರ್ಚಿಸುವದಿಲ್ಲ. ಮಹಾದೇವಿಯಕ್ಕನ ಸರ್ವವಿಷಯವನ್ನೊಳಗೊಂಡ ಒಂದು ಹೊತ್ತಿಗೆಯನ್ನೇ ಬರೆಯಲು ತೊಡಗುತ್ತೇನೆ. (ತೊಡಗಿದ್ದೇನೆ) ಇದರಲ್ಲಿ 'ಅಕ್ಕನ ಸಹಜ ಚರಿತ್ರೆ ಮತ್ತು ಮಾರ್ಪಾಟುಗಳು" — "ಅಕ್ಕನ ವೇದಾಂತ ; ಅಥವಾ ತತ್ವಪ್ರತಿಪಾದನೆ"—"ಕರ್ಣಾಟಕದ ಇತಿಹಾಸ ಮತ್ತು ಸಾಹಿತ್ಯಗಳಲ್ಲಿ ಅಕ್ಕನಿಗಿರುವ ಸ್ಥಾನ-ಮಾನಗಳು"-"ಆಗಿನ ಕಾಲ-ಧರ್ಮಗಳು"-"ಅಕ್ಕನು ಚರಿತ್ರೆಯನ್ನು ಬರೆದ ಪ್ರಾಚೀನ ಕವಿಗಳ ಉದ್ದೇಶ" ಮೊದಲಾದವುಗಳನ್ನು ವಿಚಾರಿಸುವೆನಲ್ಲದೆ, ಅದರ ಪರಿಶಿಷ್ಟಭಾಗದಲ್ಲಿ ಮದುವೆಯ ಸಂಬಂಧ ಒಂದು ಸಿದ್ಧಾಂತ ಮಾಡುವ ಧೈರ್ಯ ತಾಳಿದ್ದೇನೆ. ಮತ್ತು ಈ 'ಪರಿಶಿಷ್ಟ' ದಲ್ಲಿ 'ಈ ಲೇಖಕರು ಮಾಡಿರುವ ಅಕ್ಕನ ವಚನಗಳ ಅಪಾರ್ಥವನ್ನು ತೋರಿಸಿ ನನ್ನ ಸಿದ್ಧಾಂತವನ್ನು ಮುಂಡಿಸುತ್ತೇನೆ.

ಈ ಹೊತ್ತಿಗೆಯನ್ನು ಬೇಗನೆ ಕನ್ನಡಿಗರ ಹಸ್ತದಲ್ಲಿಡುವಂತೆ ಅನುಗ್ರಹಿಸಲೆಂದು ನನ್ನ ದೇವನಲ್ಲಿ ಕೊನೆಯ ಪ್ರಾರ್ಥನೆಯು.

---

# ನೀನಲ್ಲದಿನ್ನಾರು?

ಚಿತ್ರಿಗರು ನಿನ್ನನ್ನು ಚಿತ್ರವೆಂದೊರೆಯುವರು
ಗಾಯಕರು ನಿನ್ನನ್ನು ಗಾನವೆಂದು-ಸುರುವರು
ಶಿಲ್ಪಿಗರು ನಿನ್ನನ್ನು ಮೂರ್ತಿಯೊಳು ತೋರುವರು
ಶಕ್ತಿಯೇ ನೀನೆಂದು ಹಲಕೆಲರು ಉಲಿಯುವರು
ಕರ್ಮವೇ ನೀನೆಂದು ಕರ್ಮಿಗಳು ಬಣ್ಣಿಪರು
ಪಾಂಡಿತ್ಯವೇ ನೀನೆಂದು ಪಂಡಿತರು ನುಡಿಯುವರು
ತರ್ಕವೇ ನೀನೆಂದು ತಾರ್ಕಿಕರು ತರ್ಕಿಪರು
ಜ್ಞಾನವೇ ನೀನೆಂದು ಜ್ಞಾನಿಗಳು ಬೋಧಿಪರು
ನಲ್ಮೆಯೇ ನೀನೆಂದು ಪ್ರೇಮಿಗಳ್ಪೇಳುವರು
ಚಂದವೇ ನೀನೆಂದು ಚೆನ್ನಿಗರು ನಲಿಯುವರು
ಕರುಣೆಯೇ ನೀನೆಂದು ಶರಣಜನ ಹೊಗಳುವದು
ಕಾವ್ಯವೇ ನೀನೆಂದು ಕವಿವರರು ನುತಿಸುವರು
ಸತ್ಯವೇ ನೀನೆಂದು ಸತ್ಪುರುಷರುಸುರುವರು
ಶಾಂತಿಯೇ ನೀನೆಂದು ಮಹಾತ್ಮರಿಂದುಲಿಯುವರು
ಸಕಲರೂ ನಿನ್ನೊಳಿಹ ಸೌಂದರ್ಯವನ್ನರಿತು
ಬಗೆ-ಬಗೆಯ ವಿಧದಿಂದ ಬಣ್ಣಿಸುತಲಿರುತಿಹರು
ಸೊಬಗುಳ್ಳ ಸೇವೆಯೇ! ಸೌಂದರ್ಯ ಮೂರ್ತಿಯೇ!
ವಿಶ್ವದೊಳು ನೀನಲ್ಲ-ದಿನ್ನಾರು ದೇವರಿಹರು?

—ಆನಂದಕವಿ ಕುರಗುಂದ.

# ಅಕ್ಕಮಹಾದೇವಿಯು ಕದಳೀ ಹೊಕ್ಕ ಹಾಡು.

(ಲೇಖಕರು:— ಶ್ರೀ. ಚಂದ್ರಶೇಖರದೇವರು ಅಡ್ನೂರು.)

ಅಕ್ಕನ ಹೆಸರು ಅವಳ ಘನತೆಯ ಕುರುಹು. ಅದು ಕೇವಲ ವೀರಶೈವರಿಗೇ ಅಲ್ಲ ಕನ್ನಡಿಗರಿಗೆಲ್ಲ ಹೆಮ್ಮೆಯ ಹೆಸರು. ನಾಡಿನಲ್ಲೆಲ್ಲ ಹೆಸರುವಾಸಿಯಾದ ಹಿರಿ ಹೆಸರು. ಆದುದರಿಂದಲೇ ಅದು ಅಂದಿನ ಮಹಾನುಭಾವರ ಭಾವಗಳನ್ನು ಆಕರ್ಷಿಸಿದೆ. ಮಹಾಕವಿಗಳ ಹೃದಯಗಳನ್ನು ಸೆಳೆದಿದೆ; ಕಾವ್ಯಕಟ್ಟಿ ಹಾಡಹಚ್ಚಿದೆ.

ಅವಳಾ ಸುಂದರವಾದ ಜೀವನ ಚರಿತೆಯನ್ನು, ಮಹಾಕವಿಯಾದ ಹರಿಹರನು ಮೊತ್ತಮೊದಲು ರಗಳೆಯ ರೂಪಾಗಿ ಚಿತ್ರಿಸಿದನು. ಚನ್ನಬಸವಾಂಕನು ಷಟ್ಪದಿಯಲ್ಲಿ ಪುರಾಣರೂಪದಲ್ಲಿ ಹರಿಸಿದನು. ರಾಚಯ್ಯ ಕವಿಯು ಸಾಂಗತ್ಯದಲ್ಲಿ ಸಾರಿರುವನು. + ಹೀಗೆ ಅಕ್ಕನ ಆ ಅಲೌಕಿಕ ಜೀವನ ಚರಿತ್ರೆಯು ಕೇವಲ ಗಂಡುಗವಿಗಳನ್ನೇ ತನ್ನತ್ತ ಎಳೆದಿದ್ದಿತೆಂದು ಹೇಳಲಾಗುವದಿಲ್ಲ. ಅದು ಸ್ತ್ರೀಯರನ್ನೂ ಸಹ ಎಳೆದಿದ್ದಿತು. "ಅಕ್ಕಮಹಾದೇವಿಯು ಕದಳೀ ಹೊಕ್ಕ ಹಾಡು" ಎಂಬುದಾಗಿ ಜನಪದ ಸಾಹಿತ್ಯದಲ್ಲಿ ಹೆಣ್ಣುಮಕ್ಕಳು ಹಾಡಿದ ಒಂದು ದೊಡ್ಡ ಹಾಡಿದೆ. ಇದರಲ್ಲಿ ಸು. ೩೦೦ ರಷ್ಟು ಪದ್ಯಗಳಿವೆ. ತ್ರಿಪದಿ ಮೊದಲಾದ ಬೇರೆ ಬೇರೆ ರಾಗಗಳಲ್ಲಿ ಹಾಡಿದ್ದಾರೆ. ಇದರಲ್ಲಿ ಇಡೀ ಜೀವನ ಚರಿತ್ರೆಯೇ ಅಡಕಾಗಿದೆ. ಆದರೆ ಇದು ಕೈಯಿಂದ ಎತ್ತಿ ಬರೆದುಕೊಂಡ ಪ್ರತಿಯಾದ್ದರಿಂದ ತಪ್ಪುಗಳಿಗೆ ಪಾರವಿಲ್ಲ. ಅಲ್ಲಲ್ಲಿ ಕೆಲವು ಪದ್ಯಗಳೇ ಬಿಟ್ಟು ಹೋಗಿವೆ. ಇದರ ಮೂಲಪ್ರತಿಯು ದೊರೆಯುವದೂ ಕಷ್ಟದ ಮಾತು. ಏಕೆಂದರೆ ಇದು ತಲತಲಾಂತರದಿಂದ ಹಾಡಿಕೊಳ್ಳುತ್ತ ಬಂದಂತೆ ತೋರುತ್ತದೆ. ಈ ಹಾಡಿನ ಕೊನೆಯಲ್ಲಿ—

ಆಡೊ ಮಕ್ಕಳನೆ ಬಿಟ್ಟು। ಕಡೆವ ಮಸರನೆ ಬಿಟ್ಟು।
ಎನ್ನೊಡನಾಡಿ ಪದವ ಕಲಿಸಿದ ರಾಚಮ್ಮನಿಗೆ।
ಕೈಲಾಸದಲಿ ಗಂಟೆ ಢಣರೆಂದು॥

+ 'ಶರಣಸಾಹಿತ್ಯ' ಮಾಸಿಕದ ೬ನೇ ಸಂಚಿಕೆಯಲ್ಲಿ "ಮಹಾದೇವಿಯಕ್ಕನ ಸಾಂಗತ್ಯ" ಎಂಬುದಾಗಿ ಬರೆದ ಪ್ರೊ. ರಂ. ಶ್ರೀ. ಮುಗಳಿ ಎಂ. ಎ. ಬಿ. ಟಿ. ಇವರ ಲೇಖನದಿಂದ ತಿಳಿದುಬರುತ್ತದೆ.

ಈ ಪದವ ಕಲಿಸಿದವ್ಮನ। ಯಾವಲ್ಲಿ ನೆನೆಯಲಿ।
ಬಿಲ್ವಪತ್ರಿಯಾ ವನದಲ್ಲಿ ರಾಚಮ್ಮನಿಗೆ।
ಕೈಲಾಸವದು ತಾನೆದುರಾಗಿ॥

ಎಂಬುದಾಗಿ ಹಾಡುಗಲಿಸಿದ ರಾಚಮ್ಮನ ಉಪಕಾರವನ್ನು ಒಳ್ಳೇ ಹೃದಯದಿಂದ ಹಾಡಿಹೇಳುತ್ತಾಳೆ. ಇದು ಮೇಲೆ ಬರೆದ ಮಾತಿಗೆ ಉಪಷ್ಟಂಭಕವಾಗಬಹುದಾಗಿದೆ. ಆದರೆ ಇದನ್ನು ಯಾರು ರಚಿಸಿದರು? ಅವರ ಕಾಲವಾವುದು? ಇವಾವೂ ಗೊತ್ತಾಗುವುದಿಲ್ಲ. ಒಮ್ಮೆ ಈ ಹಾಡನ್ನು ಕಲಿಸಿದ ರಾಚಮ್ಮನೇ ರಚಿಸಿರಬಹುದೇ ಎಂದು ಸಂಶಯವು ಹುಟ್ಟುವದಾದರೂ ನಿರ್ಧರಿಸಲು ಬರುವಂತಿಲ್ಲ.

ಈ ಹಾಡನ್ನು ರಚಿಸಿದವಳು "ಮುದ್ದು ಮಲ್ಲಯ್ಯನ ನೆನೆದೇನೆ" ಎಂದು ೨-೩ನೇ ಪದ್ಯಗಳಲ್ಲಿ ಮಲ್ಲಯ್ಯನನ್ನು ನೆನೆಯುತ್ತಾಳೆ. ನಾಲ್ಕನೇ ಪದ್ಯದಲ್ಲಿ ದಕ್ಷಯಜ್ಞಧ್ವಂಸಕನಾದ ವೀರಭದ್ರನನ್ನು ಹರಿಸುತ್ತಾಳೆ. ನಂತರ ಗೌರಿಯ ಮಗನಾದ ಗೂಳೂರ ಗಣಪತಿಯನ್ನು ಬಹುವಾಗಿ ಕೊಂಡಾಡಿದ್ದಾಳೆ. ಮೈಸೂರ ಪ್ರಾಂತದಲ್ಲಿ ಗುಮ್ಮಳಾಪುರದ ಗೌರಮ್ಮ, ಗೂಳೂರ ಗಣಪತಿ ಇವೆರಡೂ ಪ್ರಸಿದ್ಧವೆಂದೂ ಈಗಲೂ ಜನರು ಆ ದೇವಸ್ಥಾನಗಳಿಗೆ ನಡೆದುಕೊಳ್ಳುವರೆಂದೂ ಹೇಳುತ್ತಾರೆ. ಆದ್ದರಿಂದ ಗೂಳೂರ ಗಣಪ್ಪನ ರಸಿಕ ವರ್ಣನೆಯನ್ನು ಕೊಂಚ ಕೇಳಿರಿ.

ಕಟ್ಟೆ ಹಿಂದಲ ಪುಟ್ಟ ಬಾಳೆ ಹಣ್ಣನು ತಂದು।
ಕೊಟ್ಟೊಡಾ ಹಣ್ಣ ಸಲಿಸುವ ಗೂಳೂರ।
ಹೊಟ್ಟೆ ಬೆನಕನೆ ಕೊಡುಮತಿಯ॥

ಖಂಡುಗದ ಕಿರಿಗೆಜ್ಜೆ। ಮಂಡಿ ಊರಿದ ಪಾದ।
ಖಂಡ್ಗಕ್ಕಿ ಬಾನಾ ಕಿರಿದೆಂದು ತಾಯೊಡನೆ।
ಚಂಡಿಮಾಡಿದನೆ ಕೊಡುಮತಿಯ॥

ಸೂಸಲದ ಸವಿಕಡಬು। ಸುಲಿದ ಬಾಳೆಯ ಹಣ್ಣು।
ರಾಶಿಹೊಯ್ಯುವೆ ನಿಮ್ಮ ಬಳಿಗೆ ಗೌರಿಯ।
ಬಾಲ ಕೊಡೆನಗೆ ಮತಿಗಳ॥

ಹೀಗೆಂದು ಗೂಳೂರು ಗಣಪತಿಯ ಪವಾಡಗಳನ್ನು ವಿವಿಧವಾಗಿ ವರ್ಣಿಸಿರುವದರಿಂದ ಈ ಹಾಡಿನ ಕರ್ತಳು ಗೂಳೂರವಳಿರಬಹುದೆ? ಎಂದು ಭಾಸವಾಗುತ್ತದೆ. ಮುಂದೆ

ಚಿನ್ನದ ಹಲಗಿ ಕೊಡೆ। ರನ್ನದ ಬಳಪ ಕೊಡೇ।
ಇನ್ನೊಮ್ಮೆ ನಿಮ್ಮ ಬಳಿಗಾಗಿ ಸರಸ್ವತಿ ತಾಯಿ।
ಚನ್ನಾಗಿ ಪದವ ಬರಕೋಡೆ॥

ಎಂದು ೩-೪ ಪದ್ಯಗಳಲ್ಲಿ ಸರಸ್ವತಿಯನ್ನು ಪದ ಬರಕೊಡಲು ಬೇಡಿದ್ದಾಳೆ. ಆದರಿದು ಅವಳ ಸ್ತುತಿಯಿರಬಹುದೋ ಅಥವಾ ಅವಳೇ ರಚಿಸಿರಬ ಹುದೋ ಯಾವದೂ ತಿಳಿಯುವದಿಲ್ಲ. ಕೇವಲ ಬರಕೊಡು ಎಂದು ಬೇಡುವಳೇ ಹೊರತು ಬರಕೊಟ್ಟಳೆಂದು ಎಲ್ಲಿಯೂ ಹೇಳುವದಿಲ್ಲ. ಆದ್ದ ರಿಂದ ಇದು ಹೀಗೆ ಎಂದು ಹೇಳಲಿಕ್ಕಾಗುವದಿಲ್ಲ. ಆ ಮೇಲೆ ಕಿನ್ನರಯ್ಯ, ಆದಯ್ಯ, ಮಾದಯ್ಯ, ಊಳಿಗಯ್ಯ ಚೇರಮರನ್ನು ನೆನೆಯುತ್ತಾಳೆ.

ಈ ಹಾಡುಗಾರಳು ಗೂಳೂರು ಶಾಂತಿದೇವರನ್ನಾಗಲಿ ಗುಮ್ಮಳಾ ಪುರದ ಶಾಂತೇಶರನ್ನಾಗಲಿ ಸ್ತುತಿಸುವದಿಲ್ಲ. ಇವರಿಬ್ಬರೂ ಒಳ್ಳೇ ಹೆಸ ರುವಾಸಿಗಳು, ಮಹಾಮಹಿಮರು, ಅನುಪಮ ಚರಿತರು. ಇವರ ವಿಷ ಯವಾಗಿ ಬಸವ ಪೌರಾಣದ ಮಲ್ಲಣಾರ್ಯರು (ಕ್ರಿ. ಶ ೧೪೩೫) ತಮ್ಮ ಭಾವ ಚಿಂತಾರತ್ನದ ಮೊದಲನೆಯ ಸಂಧಿಯೊಳಗೆ ಶ್ಲೋಕ ೧೦-೧೧ ರಲ್ಲಿ ಒಳ್ಳೇ ಹೃದಯಂಗಮವಾಗಿ ಹೇಳಿದ್ದಾರೆ. ಇಂಥಹರನ್ನು ಸ್ಮರಿ ಸದೆ ಗೂಳೂರು ಗಣಪನೊಬ್ಬನನ್ನೇ ಸ್ತುತಿಸಿದ್ದನ್ನು ನೋಡಿದರೆ ಈ ಕವಿಯಿತ್ರಿಯು ಇವರಗಿಂತಲೂ ಮೊದಲೇ ಇದ್ದಿರಬಹುದೇ ?

ಮುಂದೆ ಈ ಹಾಡಿನಲ್ಲಿ ಅಕ್ಕನ ಚರಿತ್ರೆಯು ಹೀಗೆ ಚಿತ್ರಿತವಾ ಗಿದೆ. ಹಿಂದಿನ ಹಿರಿಯರ ನೆನಹು ಮುಗಿದ ಮೇಲೆ ಕೈಲಾಸದ ಪಾರ್ವ ತಿಯ ಒಡ್ಡೋಲಗದ ವರ್ಣನೆಗೆ ಪ್ರಾರಂಭವಾಗುವದು ಅಲ್ಲಿ ಹಲವು ತರಹದ ದೇವಿಯರು ನೆರೆದಿದ್ದರು. ಅಲ್ಲಮರ ಆಗಮನವೂ ಆಗಿದ್ದಿತು. ಹಲ ಕೆಲ ಪ್ರಮಥಗಣವೂ ಬಂದಿದ್ದಿತು. ಆ ಸಮಯದಲ್ಲಿ ಯಾವುದೋ ಉದ್ದೇಶದಿಂದ ಎದ್ದು ಹೋಗುವಾಗ ರುದ್ರಕನ್ನಿಕೆಯ ಶೆರಗು ಗಣಂ ಗಳಿಗೆ ಸೋಂಕುವದು. ಆಗ ಅವರು ರೋಷಗೊಂಡುಃ— ಹಿರಿಯ ರೆಂದರಿಯರು. ಕಿರಿಯರೆಂದರಿಯರು. ವಿರಕ್ತರೆಂದು ಭಾವಿಸರು. ತಾವು ತಮ್ಮ ಭರದಲಿ ಓಡಾಡುವರು. ಓ ರುದ್ರಕನ್ನಿಕೆ ನಿನ್ನ ಶೆರಗು ನಮಗೆ ಸೋಂಕಿದ ಕಾರಣ ಭುವಿಯಲ್ಲಿ “ಭವಿ ನಿಮ್ಮ ಶೆರಗ ಸೆಳೆಯಲಿ” ಎಂದು ಶಾಪಕೊಡುವರು. ಆ ಶಾಪಕ್ಕೆ ಕನ್ನಿಕೆಯು ಭಯಗೊಂಡು ಎಲೆ ತಂದೆ! ಎನ್ನಪ್ಪ!! ಹೇಗೆ ನಾನಲ್ಲಿ ಜೀವಿಸಲಿ. ಹ್ಯೇಯವಾದ ಗರ್ಭದಲ್ಲಿ ಎಂತು

ವಾಸಿಸಲಿ. ಅಪ್ರಮಾದದಿಂದಾದ ಅಪರಾಧವನ್ನು ಕ್ಷಮಿಸಬೇಕು ಎಂದು ಮುಂತಾಗಿ ಬೇಳ್ಕೊಳ್ಳುವಳು. ಅದಕ್ಕೆ ಗಣಂಗಳು ಪ್ರಸನ್ನಹೃದಯು ರಾಗುವರು. ಎಲೋ ದೇವಿ ಗರ್ಭವಾಸಕ್ಕೆ ಹೆದರಬೇಡ. ಗರ್ಭಕೋಶವು ಕೊಳಕಾದರೂ ಅದರ ಲೇಪವಿಲ್ಲದೆ ನೀನು ಸುಖವಿರು. ಮತ್ತು ನೀನು ಜನಿಸುವಾಗಲೇ ನಾವೇ ನೊಸಲಗಣ್ಣಿನಿಂದ ಬಸವನೊಡನೆ ಬಂದು ನಿನಗೆ ಸನ್ಮಾರ್ಗೋಪದೇಶವನ್ನು ಮಾಡುವೆನು. ಎಂದು ಅಲ್ಲಮನು ಅಭಯವನ್ನು ಕೊಡುವನು. ಇತ್ತ ಉಡುತಡಿಯಲ್ಲಿ ಸುಮತಿಯು ಮಕ್ಕಳಿಲ್ಲದೆ —

ಒಂದ್ಹೊತ್ತು ಇರುವೆ। ಮಿಂದು ಮಡಿಗಳುಡುವೆ।
ಕಂದನ ಗರ್ಭಜನಿಸಿದರೆ ಶಿವನಿಗೆ।
ಖಂಡ್ಗಬಾರತಿಯು ಬೆಳಗುವೆ॥

ಎಂದು ಹರನಿಗಾಗಿ ಹಲವು ಹರಿಕೆಗಳನ್ನು ಹೊರುತ್ತಿದ್ದಳು. ಇಂತಿರುವ ಇವಳ ಗರ್ಭದಲ್ಲಿ ಆ ರುದ್ರಕನ್ನಿಕೆಯು ಬರುವಳು. ದಿನ ಕಳೆದಂತೆ ಸುಮತಿಗೆ ಗರ್ಭದ ಬೇನೆಯು ಬಲವಾಗುವದು. ಅದರ ಉಪಚಾರಕ್ಕಾಗಿ ನಿರ್ಮಲನು ಅದೇ ಊರ ಸೂಲಗಿತ್ತಿ ದೇವಮ್ಮನನ್ನು ಕರೆ ತರುವನು. ಅವಳು ಬಂದು ಮಾಡುವ ಉಪಚಾರಗಳನ್ನೆಲ್ಲ ಮಾಡುವಳು. ಮಹಾದೇವಿಯು ಜನಿಸುವಳು. ಕೈಲಾಸದಲ್ಲಿ ಮಾತುಕೊಟ್ಟಂತೆ ಅಲ್ಲಮನು ನಂದೀಶ್ವರನೊಡನೆ ಬರುವನು. ಆ ಶಿಶುವಿನ ಮೈತೊಳಿಸಿ ಭಸ್ಮಧರಿಸಿ, ಲಿಂಗಧಾರಣೆಮಾಡಿ, ಪಂಚಾಕ್ಷರಿಯನುಪದೇಶಿಸುವನು. ಕೊನೆಗೆ—

ನಿತ್ಯಾನಿತ್ಯಳು ಆಗು। ಸತ್ಯವನಿತೆಯಾಗು।
ಮೂರು ತನುವನು ಮೂರು ಲಿಂಗಕೆ ಕೊಟ್ಟ।
ನರರ ಹಂಗ ಅಳಿಯೆಂದು ಕಟ್ಟು ಮಾಡ್ಯಾರೆ ಶಿವ ತಾವು॥

ಎಂದು ಉಪದೇಶಿಸಿ ತಮ್ಮ ಪುರಕೆ ಹೊರಟು ಹೋಗುವರು. ಇತ್ತ ನಿರ್ಮಲ ಮೊದಲಾದವರು ಆ ಶಿಶುವಿಗೆಂದು ಶ್ರೀಗಂಧದ ಹೊಸ ಕಟ್ಟಿಗೆಯನ್ನು ತಂದು ತೊಟ್ಟಿಲ ಮಾಡತೊಡಗಿದ್ದಾರೆ. ಆ ತೊಟ್ಟಿಲದ ರಚನೆಯನ್ನು ಆಲಿಸಿರಿ.

ಮುಂಡೆಯ ಕಡೆಗೆ। ಗುಂಡು ಬ್ರಹ್ಮಯ್ಯನೋರು।
ಸಿಂಧು ಬಲ್ಲಾಳ ಸಿರಿಯಾಳ ಹಂಪೆಯ ಘನಲಿಂಗವ।
ಕಡಿದು ರಚಿಸ್ಯಾರೆ॥

ಹಸ್ತದ ಕಡೆಗೆ। ಹರಿಯು ಬ್ರಹ್ಮನೋರು।
ಅಕ್ಕ ಚಂಗಳೆ ಅಜಗಣ್ಣಾ ಅಲ್ಲಮಪ್ರಭು ಮುಕ್ಕಣ್ಣನ;
ಕಡಿದು ರಚಿಸ್ಯಾರೆ॥

ಪಾದದ ಕಡೆಗೆ। ಮೋದಾರ ಚನ್ನಯ್ಯ।
ಚೇದಿರಾಜ ಸಿರಿಯಾಳ ಹಂಪೆಯ ಘನಲಿಂಗವ।
ಕಡಿದು ರಚಿಸ್ಯಾರೆ॥

ಈ ಪದ್ಯಗಳಲ್ಲಿ ಎಲ್ಲಿಯೂ ಪ್ರಾಸುಗೀಸುಗಳನ್ನು ನೋಡಬೇಡಿ. ಈ ಹಾಡುಗಾರಳು ಪ್ರಾಸಿಗಾಗಿ ಧ್ಯಾನ ಮಾಡಿಲ್ಲ. ಅದು ಅವಳ ಧ್ಯೇಯ ವಿದ್ದಂತೆಯೂ ಕಾಣುವದಿಲ್ಲ. ಹೀಗೆ ಪ್ರಮಥರ ಬೊಂಬೆಗಳನ್ನು ಸುತ್ತಲೂ ಕೆತ್ತಿದ ಶ್ರೀಗಂಧದ ಹೊಸದೊಟ್ಟಿಲಲ್ಲಿ ಆ ಕೂಸು ಬೆಳೆದಿದೆ. ತನ್ನ ಗೆಳತಿಯರೊಡನೆ ಆಟಪಾಟಗಳನ್ನು ಆಡಲು ಆರಂಭಿಸಿದ್ದಾಳೆ. ಒಂದು ದಿನ ಮಹಾದೇವಿಯು ತನ್ನ ಸಖಿಯರೊಡನೆ ಆಡುವಾಗ ಒಬ್ಬ ಜಂಗ ಮರು ಭಿಕ್ಷಕ್ಕೆ ಬರುವರು. ಅವರಿಗೆ ಕೂಡಲೆ ನೀಡಿ ಕಳಿಸುವಳು. ಅದೇ ವೇಳೆಗೆ ಅಗಸರವನು ಬರುವನು. ಅವನನ್ನು ನೋಡಿ ಹೊರ ಗಿರುವ ಗೆಳತಿಯರು ಮಹಾದೇವಿಯನ್ನು ಅವನಿಗೆ ಬಾನಾ ನೀಡೆಂದು ಕೂಗುವರು. ಅದಕ್ಕೆ ಮಹಾದೇವಿಯು:—

ಅಟ್ಟಂತ ಅಡಿಗಿಗೆ ವಿಭೂತಿ ಧಾರಣೆ ಮಾಡಿ।
ಎಷ್ಟಾದರೂ ಭವಿಗೆ ಕೊಡಬೇಡೆನುತ।
ಸಾರಿಕಳಿಸ್ಯಾಳೆ ನಮ್ಮಮ್ಮಯ್ಯ॥

ಎಂದು ಉತ್ತರ ಹೇಳುವಳು. ಅದಕ್ಕೆ ಸಖಿಯರು:—

"ಶೀಲವಂತರೆಂಬುವರು ಬಹು ಜೀನರಕ್ಕ।
ಅಗಳು ಬಿದ್ದಲ್ಲಿ ಆರಿಸಿ ಉಂಬುವರು........"

ಎಂದು ಪರಿಹಾಸಮಾಡುವರು. ಹೀಗಿರಲು ಮತ್ತೊಂದು ದಿನ ಹಲವು ಸಖಿಯರು ಸೇರಿ ಮಹದೇವಿಯನ್ನು ಊರಹೊರಗಿರುವ ಉಪ

ವನಕ್ಕೆ ಹಟ್ಗಣಿ ಹಾಡಲು ಹಠತ್ತಾಗಿ ಕರೆದುಕೊಂಡು ಹೋಗುವರು. ಆ ವನದಲ್ಲಿ ಸಖಿಯರೊಡನೆ ಆಡುತ್ತ ಹಾಡುತ್ತ ಕಾಲಕಳೆಯುವಾಗ ಅದೇ ದಿನ ಕೌಶಿಕನು ವೈಹಾಳಿಯಿಂದ ಅಲ್ಲಿಗೆ ಬರುವನು. ಆಗ ರಾಜನಿಗೂ ಅಕ್ಕಗಳಿಗೂ ಭೆಟ್ಟಿಯಾಗುವದು. ಅಕ್ಕಗಳು ಈತನು ಭವಿಯೆಂದು ಭಾವಿಸಿ ತನ್ನ ಮನೆಗೆ ಬೇಗನೆ ಹೊರಟುಹೋಗುವಳು. ಇತ್ತ ರಾಜನು ಅವಳ ಆ ರೂಪಕ್ಕೆ ಮನಸೋಲುವನು. ತನ್ನೊಡನಿರುವ ಸೈನಿಕರಿಗೆ ನೋಡಿದಿರಾ ಆ ರೂಪನ್ನು ಎಂತಹ ರೂಪು ? ಏನು ಆಕೃತಿ ? ಜಗನ್ಮೋಹಕಳಾದ ಆ ಚಲುವೆ ಯಾರ ಮಗಳು ಬಲ್ಲಿರಾ ? ಎಂದು ಕೇಳುವನು ಆವರಿಗಾದರೂ ಅವಳ ವಿಚಾರವಾಗಿ ಗೊತ್ತಿರುವದಿಲ್ಲ. ಅಲ್ಲೇ ಪಕ್ಕದಲ್ಲಿ ಆಡುತ್ತಿರುವ ಇನ್ನುಳಿದ ಬಾಲಿಕೆಯರನ್ನು ಕರೆಯಿಸಿ ಕೇಳುವನು. ಅವರು ಆಕೆಯು ಶೀಲವಂತರ ಮಗಳು. ನೇಮದೊಳಗಿರುವವಳು. ಎಂದು ಉತ್ತರ ಕೊಡುವರು. ರಾಜನು ಕೆಲವು ದೂತರನ್ನು ಶೀಲವಂತರ ಮನೆಗೆ ಕೇಳಲು ಕಳಿಸುವನು. ಅದರಂತೆ ಆವರು ಹೋಗಿ ಕೇಳಲು ಅಕ್ಕನ ತಾಯ್ತಂದೆಗಳು ನಾವೇನಾದರೂ ಬಿಟ್ಟೆವು. ಆದರೆ ಭವಿಗೆ ಮಗಳನ್ನು ಕೊಡಲಾರೆವು ಎಂದು ಖಂಡತುಂಡಾಗಿ ಹೇಳಿಬಿಡುವರು. ಆವರು ತಿರುಗಿಹೋಗಿ ರಾಜನಿಗೆ ಹಾಗೆಯೇ ಹೇಳುವರು. ಪುನಃ ರಾಜನು ೫ ಮಂದಿ ಸ್ತ್ರೀಯರನ್ನು ಕಳಿಸಿಕೊಡುವನು. ಅವರಿಗೂ ಅದೇ ಉತ್ತರ. ಅವರೂ ಹಾಗೆಯೇ ಹೋಗುವರು. ಅದೇ ಉತ್ತರವನ್ನೇ ಅರಸನಿಗೆ ಹೇಳುವರು. ಆಗ ರಾಜನಿಗೆ ಮೋಹವ್ಯಥೆಯು ಹೆಚ್ಚಾಗಿ ಸ್ಮರಜ್ವರದಿಂದ ಸಂತಪ್ತನಾಗುವನು. ಆ ವಿರಹವ್ಯಥೆಯನ್ನು ತಾಳದೆ ಒಡನೆ ಮಂತ್ರಿಯನ್ನು ಕರೆಯಿಸಿ ಬಲಾತ್ಕಾರದಿಂದಲಾದರೂ ಅವಳನ್ನು ಕರತರಬೇಕೆಂದು ಕಟ್ಟಪ್ಪಣೆಯನ್ನು ವಿಧಿಸಿ ಕಳಿಸುವನು. ಆ ಮಂತ್ರಿಯು ಕಂಡು ದೃಢಭಕ್ತನಾದ ನಿರ್ಮಲನು ಸುವತಿಯನ್ನು ಕರೆದು ನಮಗೆ ಎಂತಹ ಕಷ್ಟವು ಪ್ರಾಪ್ತವಾಯಿತಲ್ಲ ? ನಾವೀಗ ಏನುಮಾಡೋಣ ? ಈಗ ಸುಮ್ಮನಿರುವದಕ್ಕಿಂತಲೂ ಮಠಕ್ಕೆ ಹೋಗಿ ಗುರುಗಳನ್ನು ಕೇಳಿಬರೋಣ ! ಎಂದು ಗುರುಗಳಾದ ಲಿಂಗಪ್ಪಮರಿ (?) ಗಳ ಮಠಕ್ಕೆ ಹೋಗಿ ಕೇಳುವರು. ಆದರೆ ಗುರುಗಳು ಅದಕ್ಕೆ ಯಾವ ಉತ್ತರ ಕೊಟ್ಟರೆಂಬುದನ್ನು ನಾವಿಲ್ಲಿ ಕಾಣಲಾರೆವು. ಮರಳಿ ಬಂದ ತಾಯ್ತಂದೆಗಳು ಮಗಳ ಈ ಅವಸ್ಥೆಗಾಗಿ ಶೋಕಮಾಡುವರು. ಅದನ್ನು

ನೋಡಿ ಮಹಾದೇವಿಯು ತನ್ನ ಬುದ್ಧಿಕೌಶಲ್ಯದಿಂದ ಅಪ್ಪ, ಅಪ್ಪ, ಅಂಜಬೇಡಿರಿ, ಅಳುಕಬೇಡಿರಿ, ಬಂದ ಬಂಧನವ ಪರಿಹರಿಸುವ ತಂದೆ ಲಿಂಗಪ್ಪನ ಕೃಪೆಯುಂಟು ಎಂದು ಸಂತವಿಡುವಳು, ಸ್ವಂತ ಯೋಚಿಸುವಳು. [ನಾವು ಹೀಗೆಯೇ ಖಂಡತುಂಡವಾದ ಉತ್ತರವನ್ನು ಹೇಳಿದರೆ ರಾಜನಿಗೆ ಶಾಂತಿಯಾಗದು. ನಮ್ಮ ಸಂಕೋಲೆಯು ಪರಿಹಾರವಾಗದು. ಅವರಂತೆ ಹೋಗಿ ಅವರ ಬೆರಳನ್ನೇ ಅವರ ಕಣ್ಣಿಗೆ ಚುಚ್ಚಬೇಕು.] ಎಂದು ಬಗೆದು ಮನೆಗೆ ಬಂದು ಬಲಾತ್ಕಾರ ಮಾಡುವ ಮಂತ್ರಿಯನ್ನು ಕರೆದು, ಅಕ್ಕನೇ ನಿಮ್ಮ ರಾಯನು ನನ್ನನ್ನು ಪ್ರೀತಿಸುವದಾದರೆ ಆತನೇ ಬಂದು ನಮ್ಮ ಮನೆಯನ್ನು ಕಾಣಬೇಕು, ಅಂದರೆ ನಾನು ಅರಮನೆಗೆ ಬರುವೆನು ಎಂದು ಉತ್ತರ ಹೇಳುವಳು. ಈ ಉತ್ತರದಿಂದ ಮಂತ್ರಿಯು ಸಂತುಷ್ಟನಾಗಿ ಹಿಂತಿರುಗಿ ಬಂದು ರಾಜನಿಗೆ ತಿಳಿಸುವನು. ಅರಸನಾದರೂ ಅತ್ಯಂತ ಆನಂದದಿಂದ ಕೂಡಿ ಕೂಡಲೆ ಹೊರಟು ನಿರ್ಮಲನ ಮನೆಗೆ ಬರುವನು. ಮಹಾದೇವಿಯ ಮನ ಮೆಚ್ಚಿಸಲು ಕೆಲವು ತೊಡಿಗೆಗಳನ್ನು ಕೊಡಲು ಹೋಗುವನು. ಭಸ್ಮಾಭರಣವುಳ್ಳ ನಮಗೆ ಇವೇಕೆ, ಬೇಡ ಎಂದು ಹೇಳುವಳು. ಮತ್ತು ಒಂದು ಕೈಯಲ್ಲಿ ಲಿಂಗವನ್ನು ಮತ್ತೊಂದು ಕೈಯಲ್ಲಿ ಪತ್ರಿಯನ್ನು ಹಿಡಿದುಕೊಂಡು ಬಂದು ಇಕೋ ಈ ಲಿಂಗಾಂಗಿಗಳ ಸಂಗ ನಿಮಗೇಕೆ? ನೀವು ಭಕ್ತರಾಗಬಲ್ಲಿರಾ? ಎಂದು ಕೇಳುವಳು. ಅದಕ್ಕೆ ರಾಜನು ಈ ಮಾತೊಂದನ್ನು ಬಿಟ್ಟು ಇನ್ನೇನಾದರೂ ಹೇಳಿದರೆ ಅವನ್ನು ನಾನು ಮೀರುವದಿಲ್ಲ, ಒಂದು ವೇಳೆ ಮೀರಿದರೆ ಹಸುಮಗುವಿಗೆ ಹಾಲೆರೆಯದೆ ಬಾವಿಯಲ್ಲಿ ಚಲ್ಲಿ ಕೊಲ್ವ ಪಾತಕ ಸ್ತ್ರೀಯಳ ಗತಿಯು ಎನಗಾಗಲಿ. ತಾಯಿತಂಗಿಗಳನ್ನು ಬೈಯ್ವವರ ತೆಂಗಿನ ಮರವನ್ನು ಕತ್ತರಿಸಿದವರ ಗತಿ ಎನಗಾಗಲಿ. ಜಪವ ಜರಿದವರ ತಪವ ತೆಗಳಿದವರ ಪಾಡು ನನಗಾಗಲಿ. ತಂದೆತಾಯಿಗಳಿಗೆರಡು ಬಗೆದವರ ಪಾತಕವು ನನಗಾಗಲಿ. ಆಗಮವ ಜರಿದು ಅಭ್ಯಾಗತರ ನೋಯಿಸಿದವರ ಗತಿಯು ಎನಗಾಗಲಿ ಎಂದು ಮುಂತಾಗಿ ಆಣೆಯಿಟ್ಟುಕೊಳ್ಳುವನು. ಆದರೂ ಅವನ ಮಾತಿನಲ್ಲಿ ಅವಳಿಗೆ ನಂಬಿಕೆಯಾಗುವದಿಲ್ಲ.

ಲಿಂಗಪೂಜೆಯೆಂದಿದ್ದರು ಆಗಲೆಂದು ।
ಜಂಗಮ ಮನೆಗೆ ಬರಲೆಂದು ಇಷ್ಟಕ್ಕೆ ।
ಕೈಯೋಲೆ ತಾರೋ ಕೌಶಿಕಾ ॥

ಎಂದು ತಾನು ಹಾಕುವ ಕರಾರುಗಳಿಗೆ ಕೈಯೋಲೆಯನ್ನು ಕೇಳು ವಳು. ಈ ಕೈಯೋಲೆಯನ್ನು ಕೊಟ್ಟರೆ ಮಾತ್ರ ಅರಮನೆಗೆ ಬರುವೆನು ಎಂದು ಹೇಳುವಳು. ಆದರೆ ಅದಕ್ಕೆ ಆತನು ಕೈಯೋಲೆಯನ್ನು ಕೊಟ್ಟನೋ ಇಲ್ಲೋ ಇಲ್ಲಿ ಅದಾವುದೂ ಉಲ್ಲೇಖವಾಗಿಲ್ಲ. ಬಹುಶಃ ಆ ಶ್ಲೋಕಗಳನ್ನು ಬರಕೊಳ್ಳುವವರು ಬಿಟ್ಟು ಬಿಟ್ಟಿರಬೇಕು. ಆದರೆ ಅಕ್ಕನು ಮುಂದೆ ಅರಮನೆಗೆ ಹೋಗುವದರಿಂದ ಆತನು ಕೈಯೋಲೆ ಯನ್ನು ಕೊಟ್ಟಿರಲೇಬೇಕು. ಆಮೇಲೆ ಅಕ್ಕನು ಹೊರಡುವಾಗ ತನ್ನ ತಾಯ್ತಂದೆಗಳ ಅಡಿಗಳಿಗೆ ಪೊಡಮಡುವಳು. ಆಗವರು ಏನಾದರೂ ಮದುವೆಯಾಗಲು ಒಪ್ಪಬೇಡೆಂದು ಹೇಳಿದರಲ್ಲದೆ, ನಿನ್ನನಗಲಿ ನಾವೆಂತು ವಾಸಿಸೋಣ ಎಂದು ಕಂಬನಿದುಂಬಿ ದುಃಖಿಸುವರು. ಅಕ್ಕನು ಅವ ರನ್ನು ಸಂತೈಸಿ ಇವರೂ ನನ್ನ ಬೆಂಬಳಿವಿಡಿದು ಬರಬಹುದೆಂದು ಭಾವಿಸಿ ನೀವು ನನ್ನೊಡನೆ ಬರಲಾಗದೆಂದು ಜಂಗಮರ ಮತ್ತು ಜನರ ಆಣ ತಿಯನ್ನಿಡುವಳು. ಇಟ್ಟು ಹೊರಡುವಳು. ಹೊರಡುವಾಗ ರಾಜನು ತಾಯ್ತಂದೆಗಳಿಗೆ ತೆರವನ್ನು ಕೊಡಬೇಕೆಂದು ಕೆಲವು ಸಂಪತ್ತನ್ನು ತಂದು ಮುಂದಿಡುವನು. ಅದನ್ನು ಅಕ್ಕನು ನೋಡಿ ಶಿವನು ನಮಗೆ ಕೊಡುವವನಿರಲು ಇದೇನು ನಿನ್ನ ಮೋಹದಾಟ! ಇದು ಬೇಡ. ಇದೇ ಮೊದಲನೆಯದಾದ ತಪ್ಪು ಎಂದು ಹೇಳುವಳು. ಅರಮನೆಗೆ ಹೊರಟು ಹೋಗುವರು. ಅಲ್ಲಿ ಇವಳಿಗೆ ಒಂದು ಪ್ರತ್ಯೇಕ ಮನೆಯ ನ್ನೇರ್ಪಡಿಸುವರು. ಕೆಲವು ಸಖಿಯರನ್ನು ನೇಮಿಸುವರು.

ಇತ್ತ ರಾಜನ ಮನಸ್ಸಿನಲ್ಲಿ ವಿವಾಹ ಸಾಹಿತ್ಯವನ್ನು ಸಜ್ಜುಗೊ ಳಿಸಬೇಕೆಂಬ ಸಂಭ್ರಮ. ಅತ್ತ ಅಕ್ಕನ ಮನವಲ್ಲಿ ಅಷ್ಟರಲ್ಲಿಯೇ ಇನ್ನೆ ರಡು ಅಪರಾಧಗಳನ್ನು ಮಾಡಹಚ್ಚಿ ಹೊರಗಾಗ ಬೇಕೆಂಬ ಕುತೂ ಹಲ. ಹೀಗಿರಲು ಒಂದು ದಿನ ಅಕ್ಕನು ಶಿವಪೂಜೆಯಲ್ಲಿ ತಲ್ಲೀನರಾ ಗಿರುವಳು. ಆಗ ರಾಜನು ಮೋಹಾವೇಶದಿಂದ ಬಂದು ಬಹು ತವಿಸಿ ನೊಂದೆಯೆಂದು ತಲೆಯಮೇಲೆ ಕೈಯಿಕ್ಕುವನು. ಅದನ್ನು ತಿಳಿದು ಇದೇನು ಶಿವಪೂಜೆಯ ಸಮಯದಲ್ಲಿ? ಎಂದು ಕೋಪದಿಂದ ಉರಿ ದೆದ್ದು ಹೀಗೆಲ್ಲ ವರ್ತಿಸುವದಾದರೆ ನಾನು ನನ್ನ ಪ್ರಾಣವನ್ನೇ ಬಿಟ್ಟು ಬಿಡುವೆನು ಎಂದು ಎದ್ದುನಿಲ್ಲುವಳು. ಆಗಲೇ ಶಿವನು ಜಂಗಮ ವೇಷದಿಂದ ಬಂದು ಎದುರಿಗೆ ನಿಲ್ಲುವನು. (ಕೌಶಿಕನು ಶಿವಪೂಜೆಗೆ

ಅಡ್ಡಿಮಾಡಿದ್ದರಿಂದ ಇದು ಎರಡನೇ ತಪ್ಪೆಂದು ಹೇಳುವಳು.) ಅದನ್ನು ಮರೆತು ಎದುರಿಗಿದ್ದ ಜಂಗಮನನ್ನೂ ಅವನೊಡನೆ ಬಂದ ಮಹಾಂತರನ್ನೂ ಸತ್ಕರಿಸತೊಡಗುವಳು. ಅವರೆಲ್ಲರಿಗೂ ಶಿವಪೂಜೆಗೆ ಅಣಿಮಾಡಿ ಅವರನ್ನು ಶಿವಪೂಜೆಗೆ ಕೂಡ್ರಿಸುವಳು. ಆದರೆ ಅವರೆಲ್ಲರೂ ಅವಳ ಆ ದಿವ್ಯರೂಪಕ್ಕೆ ಮನವೆಳಿಸಿದ್ದಾರೆ.

ದೇವರ ಪೂಜೆಯು ಯೆಂದಿದ್ದರು ಮಾಡೇವು।
ಬಾಲೆಯ ರೂಪು ನಿಜರೂಪು ಮಹಂತೋರು।
ಯೋಗ ಜಪವ ಮರೆದಾರು॥

ಆ ಮಹಾಂತರ ಜಪಮಾಲೆಗಳು ಕೈಯಿಂದ ಹಾಗೆಯೇ ಕಳಚಿ ಬಿದ್ದಿವೆ. ಮಂತ್ರಪಠನವು ನಿಂತು ಹೋಗಿದೆ. ಲಿಂಗ ನೋಟಗಳು ಅಕ್ಕನ ಅಂಗದ ಮೇಲೆ ಬಿದ್ದಿವೆ. ಇಷ್ಟಾದರೂ ಅಕ್ಕನು ಇದಾವುದನ್ನರಿಯದೆ ಸಹಜವಾದ ತನ್ನ ಭಕ್ತಿಭಾವದಿಂದ ಭವಿಗಳು ಮಹಾಂತರು ಮಾಡುವ ಶಿವಪೂಜೆಯನ್ನು ನೋಡಬಾರದೆಂದು ಮರೆಮಾಡುವಳು. ಇದೆಲ್ಲವನ್ನು ನೋಡಿ ಭವಿಯಾದ ಕೌಶಿಕನಿಗೆ ಸಂಶಯವು ಹೆಚ್ಚಿ:—

ಇತ್ತಬಾರೆ ಮಹದೇವಿ ಮತ್ತೊಂದ ಹೇಳುವೆನು।
ಪಟ್ಟೇಯ ನುಳಿದು ಬಿಳಿದುಡೆ ಮಹದೇವಿ।
ನಿನ್ನ ರೂಪು ಕಂಡವರು ಬಿಡುವರೇ॥

ಎಂದು ಹೇಳುವನು. ಇದನ್ನು ಕೇಳಿ ಅಕ್ಕನು ರೇಗಿ, ಏತಕ್ಕೆ ಎಲೆ ರಾಯ, ಕಾಕುಮಾತುಗಳಾಡುವದು? ಲೋಕವಂದ್ಯರ ಮೇಲೆ ನೀಚತನದಲಿ ನುಡಿವುದು ನಿನಗೆ ಲೇಸಲ್ಲ. ಇಲ್ಲಿಗೆ ಸಂದಿದವು ಸಂಪೂರ್ಣ ದೋಷತ್ರಯಗಳು. ನಾನಿನ್ನು ನನ್ನಿಚ್ಛೆಯಲಿ ತೆರಳುವೆನು ಎಂದು ಹೋಗಲುದ್ಯುಕ್ತಳಾಗುವಳು. ಆಗ ಕಾಮುಕನಾದ ಕೌಶಿಕನು ಅವಳ ಸೆರಗು ಹಿಡಿದು ಎಳೆಯುವನು. ಅದಕ್ಕೆ ಇನ್ನೂ ರೇಗಿ ಕೊಂಡು ಉಟ್ಟ ಬಟ್ಟೆಯನ್ನು ತೊಟ್ಟ ತೊಡಿಗೆಯನ್ನು ಬಿಸುಟಿ ನಗ್ನಳಾಗಿ ಹೊರಟು ಹೋಗುವಳು. ಅಲ್ಲಿಂದ ಕಲ್ಯಾಣಕ್ಕೆ ಬಂದು ಅಲ್ಲಿ ಅಲ್ಲಮನ ಕರುಣೆಯನು ಪಡೆದು ಶರಣರ ನಿಸ್ಸಂಗ ಸುಖವನನುಭವಿಸಿ ಮುಂದೆ ಶ್ರೀಗಿರಿಗೆ ಬಂದು ಕದಳೀವನ ಹೊಕ್ಕು ನಿಃಕಾಯಳಾಗುವಳು. ಈ ವಾರ್ತೆಯು ಮೊದಲು ಬಸವನಿಗೆ ಬರುವದು. ಅವನು ಆಮೇಲೆ ಕೈಯೋಲೆಯಿಂದ ಎಲ್ಲರಿಗೂ ತಿಳಿಸುವನು. ಹೀಗೆಂದು ಹೇಳಿ ಹಾಡನ್ನು ಪೂರೈಸುವಾಗ:—

ದೊಡ್ಡ ದೊಡ್ಡ ಹಾಡು। ದೊಡ್ಡ ಭರಣಿಗೆ ತುಂಬಿ।
ಒಪ್ಪಿ ಹೊನ್ನಿನ ಮುದ್ರಿಕೆಯ ಭರಣಿಯ।
ನಮ್ಮಣ್ಣಯ್ಯನಿಗೊಪ್ಪಿಸಿಡೆನೆ ಪದ ನೂರು॥

ಚಿಕ್ಕ ಚಿಕ್ಕ ಹಾಡು। ಚಿಕ್ಕ ಭರಣಿಗೆ ತುಂಬಿ।
ಒಪ್ಪಿ ಚಿನ್ನದ ಮುದ್ರಿಕೆಯ ಭರಣಿಯ।
ನಮ್ಮಣ್ಣಯ್ಯನಿಗೊಪ್ಪಿಸಿಡೆ ಪದನೂರು॥

ಕವಯಿತ್ರಿಯು ತಾನು ರಚಿಸಿದ ಹಾಡುಗಳನ್ನು ತಮ್ಮಣ್ಣನಿಗೆ ಅರ್ಪಿಸಿದ್ದಾಳೆ. ಅರ್ಪಿಸುವ ಆನಂದ ಭರದಲ್ಲಿ ಪದ್ಯ ಪ್ರಾಸವನ್ನೇ ಬಿಟ್ಟು ಬಿಟ್ಟಿದ್ದಾಳೆ. ಈ ಹಾಡಿನಲ್ಲಿ ಆರಂಭಕ್ಕಿದ್ದ ಪ್ರಾಸು ಆಮೇಲಿಲ್ಲ. ಕೊನೆ ಕೊನೆಗಂತೂ ಇಲ್ಲವೇ ಇಲ್ಲ. ಇದಕ್ಕೆ ಈ ಪದ್ಯಗಳೇ ಸಾಕ್ಷಿ. ಒಮ್ಮೊಮ್ಮೆ ಇವು ಪದ್ಯಗಳೇ ಗದ್ಯಗಳೇ ಎಂಬುವಷ್ಟು ಲಂಗವಾಗಿವೆ. ಒಮ್ಮೊಮ್ಮೆ ತೀರ ಕೊರಗಿ ಹೋಗಿವೆ. ಒಮ್ಮೊಮ್ಮೆ ಹಲಕೆಲವು ಪದ್ಯಗಳೇ ಬಿಟ್ಟುಹೋಗಿವೆ. ಇನ್ನು ಶಬ್ದ ವ್ಯತ್ಯಾಸಗಳಿಗಂತೂ ಮಿತಿಯೇ ಇಲ್ಲ. ಪುನರುಕ್ತಿಗಳಂತೂ ಹೆಜ್ಜೆಹೆಜ್ಜೆಗೆ ತುಂಬಿಕೊಂಡಿವೆ. ಇವೆಲ್ಲ ಕಾರಣಗಳಿಂದ ಈ ಪದ್ಯದ ಭಾವವನ್ನು ಮಾತ್ರ ನಾವು ಎತ್ತಿಗೊಳ್ಳಬಹುದೇ ಹೊರ್ತು ಭಾಷೆಯನ್ನು ತಿದ್ದಿ ಸರಿಪಡಿಸುವದು ತುಂಬಾ ಕಷ್ಟ.

ಈ ಹಾಡಿನಲ್ಲಿರುವ ಚರಿತ್ರೆಯನ್ನೂ ಹರಿಹರದೇವನ ರಗಳೆಯಲ್ಲಿ ಹೇಳಿದ ಚರಿತ್ರೆಯನ್ನೂ ಪರಿಶೀಲಿಸಿದರೆ ಕೆಳಗಿನಂತೆ ಕೆಲವು ಹೆಚ್ಚು ಕಡಿಮೆಗಳನ್ನು ಕಾಣಬಹುದು. ಹರಿಹರನ ರಗಳೆಯಲ್ಲಿ ಗುಪ್ತಗಣನಾಥನ ಕಾಲು ರುದ್ರಕನ್ನಿಕೆಗೆ ಸೋಂಕಿದೊಡೆ ಅವಳು ಭವಿಯೆಂದು ಬೈಯುವಳು. ಅದಕ್ಕೆ ಪಾರ್ವತಿಯೇ ರುದ್ರಕನ್ನಿಕೆಗೆ ಶಪಿಸುವಳು. ಇಲ್ಲಿ ರುದ್ರ ಕನ್ನಿಕೆಯ ಶಿರಗು ಪ್ರಮಥರಿಗೆ ಸೋಂಕಿ ಅವರಿಂದ ಶಪ್ತಳಾಗುತ್ತಾಳೆ. ಹರಿಹರನ ಕೌಶಿಕನು ಮಹಾದೇವಿಯನ್ನು ಮನೆಯ ಬಾಗಿಲಲ್ಲಿ ಕಾಣುತ್ತಾನೆ. ಇಲ್ಲಿ ಊರ ಹೊರಗಿನ ವನದಲ್ಲಿ ಕಾಣುತ್ತಾನೆ. ಹರಿಹರನಂತೆ ಇಲ್ಲಿಯೂ ಮೂರು ಕರಾರುಗಳಿವೆ. ಆದರೆ ಅವು ಇಲ್ಲಿ ಲಗ್ನಕ್ಕಿಂತಲೂ ಮೊದಲೇ ಪರೀಕ್ಷಿಸಲ್ಪಡುತ್ತವೆ. ರಗಳೆಯಲ್ಲಿ ಲಗ್ನವಾದ ಮೇಲೆ ಪರೀಕ್ಷಿಸಲ್ಪಡುತ್ತವೆ. ಮೂರನೆಯ ತಪ್ಪು ಘಟಿಸುವಾಗ ರಗಳೆಯಲ್ಲಿ ಶಿವನು ಜಂಗಮನಾಗಿ ರಾತ್ರಿಯಲ್ಲಿ ಮಲಗಿದಾಗ ಬರುತ್ತಾನೆ. ಇಲ್ಲಿ ಮಲಗದ

ಮುನ್ನ ಪೂಜೆಯ ವೇಳೆಗೆ ಸಂಧಿ ಸಮಯಕ್ಕೆ ಸಕಾರಣವಾಗಿ ಬರುತ್ತಾನೆ. ಈ ವಿಚಾರವಾಗಿ ನಡೆದ ಸಂಗತಿಯೂ ಭಿನ್ನವಾಗಿದೆ. ಇವಿಷ್ಟು ಮುಖ್ಯವಾದವುಗಳು. ಇವುಗಳಲ್ಲಿ ಯಾವುದು ಸಹಜವಾದುದು ಸಮಂಜಸವಾದುದು ಎಂಬ ವಿಚಾರವನ್ನು ವಾಚಕರ ನಿರ್ಣಯಕ್ಕೆ ಬಿಡುತ್ತೇನೆ.

ಈ ಹಾಡಿನಲ್ಲಿ ಹಿಂದೆ ಹೆಣ್ಣು ಮಕ್ಕಳಿಗಿರುವ ಸಾಹಿತ್ಯಪ್ರೇಮ, ಸಚ್ಚರಿತ್ರೆಗಳಲ್ಲಿ ಒಲವು, ಎಷ್ಟಿದ್ದವೆಂಬುದು ವ್ಯಕ್ತವಾಗುತ್ತದೆ. ಕವಯಿತ್ರಿಗಳಾಗಬೇಕೆಂಬ ಹಂಬಲವಿಲ್ಲದಿದ್ದರೂ ಸಚ್ಚರಿತ್ರೆಗಳನ್ನು ಹಾಡುಗಟ್ಟಿ ಹಾಡುವ ಹಂಬಲವಿದೆ; ಹಾರೈಕೆಯಿದೆ. ಇಂತಹ ಹಾಡುಗಳು ಸಾಹಿತ್ಯ ಶ್ರೇಣಿಗೆ ಸೇರದಂತಿದ್ದರೂ ನಿಜವಾದ ಘಟನೆಗಳನ್ನು ತಿಳಿಯಲು ಕೊಂಚ ಉಪಕಾರಕಗಳಾಗುವಂತಿವೆ. ಪದ ಬರೆದು ಕೊಟ್ಟ ರಾಚಮ್ಮನ ಉಪಕಾರ ಸ್ಮರಣೆಯ ಪದ್ಯಗಳನ್ನು ಓದಿದರೆ ಬರೆಯಿಸಿಗೊಂಡವಳಿಗೆ ಆದ ಆನಂದವು ನಮ್ಮಿಂದ ಹೇಳಲಸಾಧ್ಯ. ವಿವಾದಾಸ್ಪದವಾದ ಅಕ್ಕನ ಚರಿತೆಯ ನಿಜಾಂಶವೇನೆಂದು ತಿಳಿಯಲು ಇದೂ ಕೊಂಚ ಉಪಕಾರಕವಾಗಬಹುದಲ್ಲವೇ ?

# ಸಂತೋಷ.

(ಲೇ.— ಶ್ರೀ ಸಂಗಮೇಶ್ವರ ದೇವರು ಶಿಕಾರಿಪೂರ ಶಿವಯೋಗಾಶ್ರಮ)

'ಸದಾ ಸಂತೋಷ ಚಿತ್ತಾನಾಂ। ಸಂಪದಸ್ತು ಪದೇಪದೇ'
(ಹಾನಗಲ್ಲ ಶ್ರೀಗಳವರ ಉಕ್ತಿ.)

'ಶೌಚ, ಸಂತೋಷ ತಪಃ ಸ್ವಾಧ್ಯಾಯ ಈಶ್ವರ ಪ್ರಣಿಧಾನಾನಿ
ನಿಯಮಾಃ (ಪಾತಂಜಲಯೋಗಸೂತ್ರ)

ದುಃಖೇಷ್ವ ಸುದ್ವಿಗ್ನಮನಾಃ। ಸುಖೇಷುವಿಗತಸ್ಪೃಹಃ।
ವೀತರಾಗಭಯಕ್ರೋಧಃ। ಸ್ಥಿತಧೀರ್ಮುನಿರುಚ್ಯತೆ ॥
(ಭಗವದ್ಗೀತಾ)

ಶ್ರೀಕೃಷ್ಣನ ಉಕ್ತಿಯಂತೆ ಸಮಸ್ತ ಮನುಷ್ಯರು ಸದಾ ಸಂತೋಷ ದಿಂದಿರಬೇಕೆಂಬುದೇ ಮೇಲಿನ ಶ್ಲೋಕದ್ವಯದ ತಾತ್ಪರ್ಯವಿದೆಯಷ್ಟೇ. ಅನೇಕ ನೀತಿ ಶಾಸ್ತ್ರಗಳಲ್ಲಿ ಇದು ಒಂದು ನೀತಿ ಎಂಬುದಾಗಿ ಹೇಳಲ್ಪಡುವದು. ಈ ಸುಸ್ವಭಾವವನ್ನು ಎಲ್ಲರೂ ಆಚರಣೆಯಲ್ಲಿ ತಂದರೆ ಆರೋಗ್ಯದೃಷ್ಟ್ಯಾ ಬಹು ಲಾಭದಾಯಕವಾಗುವದು. ಮಾನವ ಕೋಟಿಯಲ್ಲಿ ಪರಸ್ಪರ ವಿರುದ್ಧ ಕೃತಿಯವರು ಅನೇಕರಿರಬಹುದು. ಕೆಲವು ಮಂದಿ ಜೀವಮಾನದಲ್ಲಿಯೂ ಸಹ ಸುಖಶಾಂತಿಯನ್ನು ತಿಳಿಯಲಾರರು. ಊಟದ ಸಮಯದಲ್ಲಿಯಾಗಲೀ, ಅಥವಾ ಮಿತ್ರರೊಡನೆ ಮಾತಾಡುವಲ್ಲಿಯಾಗಲಿ, ಸೇವಕರ ಸಂಗಡವಾಗಲಿ, ಯಾವಾಗಲೂ ಸಿಡಿಮಿಡಿಗುಟ್ಟುತ್ತಲೇ ಇರುವರು. ಸದಾ ಜಗಳಗಂಟಿಗರಾಗಿ 'ಬೆಂಕಿಬೇತಾಳನಂತೆ' ಇರುವರು. ಇಂತಹ ಜನರು ಪಂಚಪಕ್ವಾನ್ನಗಳನ್ನು ಯಥೇಷ್ಟವಾಗಿ ಉಂಡರೂ ಯಾವಾಗಲೂ ಒಣಗಿಕೊಂಡೇ ಇರುವರು. ಚಿಂತೆ ಮತ್ತು ಕೋಪಾಗ್ನಿಯು ಮನುಷ್ಯನಲ್ಲಿದ್ದರೆ ಸಾಕು, ಅವನನ್ನು ಅಧಃಪತನಕ್ಕೆ ಕೆಡುವುತ್ತವೇ ವಿನಾ ಉನ್ನತ ಸ್ಥಾನಕ್ಕೆ ಒಯ್ಯಲಾರವು. ಇಂತಹ ಮನುಷ್ಯನಿಂದ ಸಮಾಜದ ಸುಧಾರಣೆಯು ಏನು ತಾನೇ ಸಾಧ್ಯವಾದೀತು? ಅವನು ತಿಂದ ಅನ್ನವೂ ಸಹ ಜೀರ್ಣಿಸುವದಿಲ್ಲ. ಅದು ಜೀರ್ಣಿಸದಿದ್ದರೆ ಶರೀರವು ಪುಷ್ಟಿಯನ್ನು ಹೊಂದದೆ ಕಾಷ್ಠದಂತೆ ಯಾವಾಗಲೂ ಕೃಶವಾಗಿರುತ್ತದೆ. 'ಅಶಾಂತಸ್ಯ ಕುತ ಸುಖಂ' ಎಂಬ ಭಗವಂತನ

ಮಾತಿನಂತೆ ಮನಸ್ಸು ಸಮಾಧಾನವಿಲ್ಲದವರಿಗೆ ಸುಖ ಮತ್ತು ಶಾಂತಿ ಇವು ಸ್ವಪ್ನದಲ್ಲಿಯೂ ದುರ್ಲಭವಾಗಿರುವವು.

ಕಾರಣ 'ಸಂತೋಷಂ ಜನಯೇತ್ ಪ್ರಾಜ್ಞಃ। ತದೇವೇಶ್ವರಪೂಜನಂ' ಎಂಬ ಉತ್ತಮವಾದ ಉಕ್ತಿಯಂತೆ ತಾನು ಸದಾ ಸಂತೋಷಚಿತ್ತನಾಗಿರಬೇಕು. ಇದಲ್ಲದೆ ಇತರರಿಗೂ ಸಾಧ್ಯವಾದ ಮಟ್ಟಿಗೆ ಸಂತೋಷವನ್ನುಂಟುಮಾಡುತ್ತಿರಬೇಕು. ಇದೇ ಈಶ್ವರ ಪೂಜೆಯು. ಇದರಿಂದಲೇ ಪರಮಾತ್ಮನು ಪ್ರೀತನಾಗುವನು. ಇರಲಿ. ಇನ್ನೂ ಸ್ವಲ್ಪ ಮುಂದಾಲೋಚನೆಯನ್ನು ಮಾಡಿ ನೋಡುವಾ. ಯಾವದು ಅಂದರೆ ಪ್ರಕೃತದಲ್ಲಿ ರೋಗವೆಂಬುದೇ ಒಂದು ದುಃಖ ಎಂಬುದಾಗಿ ಊಹಿಸೋಣ. ಆ ದುಃಖದಲ್ಲಿ ಎರಡು ಭಾಗಗಳನ್ನು ಕಲ್ಪಿಸಬಹುದು. ಒಂದು ಶಾರೀರಿಕವೆಂತಲೂ, ಒಂದು ಮಾನಸಿಕವೆಂತಲೂ ಎರಡು ಪ್ರಕಾರ. ಸಂತಾಪವನ್ನುಂಟುಮಾಡುವ ಜ್ವರಾದಿಗಳು ಶಾರೀರಕವು. ಇನ್ನು ಚಿಂತೆ, ಭಯ, ಕ್ರೋಧ ಇವೇ ಮೊದಲಾವುಗಳು ಮಾನಸಿಕ ರೋಗಗಳು. ಈ ಶಾರೀರಕ ಮತ್ತು ಮಾನಸಿಕ ರೋಗಗಳಿಂದ ಮನುಷ್ಯನ ಪ್ರಕೃತಿಯು ಕ್ರಮೇಣ ಕ್ಷೀಣವಾಗುತ್ತ ಬರುತ್ತದೆ. ಇವೆಲ್ಲವುಗಳು ನನ್ನ ಸ್ವಂತ ಅನುಭವದ ಮಾತಾಗಿದೆ. ಇರಲಿ. ಜೀರ್ಣಕೋಶ ಶ್ವಾಸಕೋಶ ಹೃದಯಕೋಶಗಳೆಂಬ ಈ ಕೋಶತ್ರಯಗಳು ಬಲಹೀನವಾಗುತ್ತ ಬಂದರೆ ಶರೀರಕ್ಕೆ ಅಲ್ಪ ಆಯುಷ್ಯವನ್ನುಂಟುಮಾಡುವ ಸಂಭವವಿರುತ್ತದೆ. ಕಾರಣ ಆಯುಷ್ಯವನ್ನೇ ಬಯಸತಕ್ಕ ಮಹನೀಯರು ಅನಾವಶ್ಯಕಗಳಾದ ಚಿಂತೆಗಳಿಗಾಗಲಿ, ಮಿತಿಮೀರಿದ ಆಹಾರ ವಿಹಾರಾದಿಗಳಿಗಾಗಲಿ ಆದಷ್ಟು ಹೆಚ್ಚು ಅವಕಾಶ ಕೊಡದೇ ಸದಾ ಸಂತೋಷದಿಂದಿರಬೇಕೆಂಬುದೇ ಈ ಲೇಖಕನ ಬಯಕೆ. ಮತ್ತೂ—

'ಸುಖಸ್ಯದುಃಖಸ್ಯ ನ ಕೋಪಿ ದಾತ। ಪರೋ ದದಾತೀತಿ ಕುಬುದ್ಧಿರೇಷಾ। ಅಹಂಕರೋಮೀತಿ ವೃಥಾಭಿಮಾನಃ। ಸ್ವಕರ್ಮ ಜಾಲಗ್ರಥಿತೋ ಹಿ ಲೋಕಃ।' ಮುಖ್ಯಾಭಿಪ್ರಾಯವೇನಂದರೆ ಸುಖವಾಗಲಿ ದುಃಖವಾಗಲಿ ಇನ್ನೊಬ್ಬರಿಂದ ನಮಗೆ ಎಂದಿಗೂ ಪ್ರಾಪ್ತವಾಗಲಾರದು. ಸುಖದುಃಖಗಳಿಗೆ ನಮ್ಮ ನಮ್ಮ ಕರ್ಮಗಳೇ ಕಾರಣ ಹೊರತು ಅನ್ಯಥಾ ತಿಳಿಯುವದು ಶುದ್ಧ ಅಜ್ಞಾನವೇಸರಿ. ಮೇಲಿನ ಶ್ಲೋಕದ ರಹಸ್ಯಾರ್ಥವನ್ನು ಪ್ರತಿಯೊಬ್ಬರೂ ಸರಿಯಾಗಿ ಮನನಮಾಡಿ ತಿಳಿದುಕೊಂಡರೆ

ಪ್ರಾಯಃ ಅನಾವಶ್ಯಗಕಳಾದ ಚಿಂತೆಗಳೆಲ್ಲವೂ ಪರಿಹಾರವಾಗಿ ಸಂತೋಷವು ಪ್ರಾಪ್ತಿ ಆಗುವದರಲ್ಲಿ ಯಾವ ಅಭ್ಯಂತರವೂ ಇಲ್ಲ. ಇನ್ನು ಆರೋಗ್ಯ ದೃಷ್ಟ್ಯಾ ಸಂತೋಷದಿಂದ ನಮಗೆ ಆಗತಕ್ಕ ಮುಖ್ಯ ಪ್ರಯೋಜನಗಳು ಯಾವವೆಂದರೆ ಆಹಾರ ಜೀರ್ಣಕ್ಕೆ ಅನುಕೂಲಗಳಾಗಿರುವ ಹಲವು ಕಾರಣಗಳಲ್ಲಿ ಸಂತೋಷವು ಅತ್ಯತ್ತಮವೆಂದು ನಮಗೆ ತಿಳಿಯುತ್ತದೆ. ಅಂದರೆ ಒಳ್ಳೇ ಜೀರ್ಣಶಕ್ತಿಯೂ ಪೂರ್ಣಾರೋಗ್ಯವೂ ನಮ್ಮಲ್ಲಿ ಹೆಚ್ಚುವಂತೆ ಮಾಡುವದೇ ಸಂತೋಷದಿಂದ ಲಭಿಸತಕ್ಕ ಒಂದು ಮುಖ್ಯ ಗುಣ. ಬಹಳ ಹೊತ್ತು ಮನಸ್ಸಿಗೆ ಕೆಲಸ ಕೊಡೋಣದರಿಂದ ತಲೆದೋರುವ ಮಿದುಳಿನ ಆಯಾಸವೂ ಕೂಡ ನಗುವದರಿಂದ ಉಪಶಮನವಾಗುತ್ತದೆ. ಇದರಿಂದ ಮಿದುಳಿನ ಶಕ್ತಿ ಹೆಚ್ಚಿ ಪುನಃ ಕೆಲಸಕ್ಕೆ ತೊಡಗಿಸುವದು. ಒಳ್ಳೇ ನಗೆಯು ಹರ್ಷೋದ್ರೇಕವನ್ನುಂಟುಮಾಡಿ ನರಗಳೆಲ್ಲಾ ಉಬ್ಬುವಂತೆ ಮಾಡುವದಲ್ಲದೆ ಇದರಿಂದ ನರಗಳ ಶಕ್ತಿಯು ಅಧಿಕವಾಗುತ್ತದೆ. ಒಟ್ಟಿನಲ್ಲಿ ಹೇಳಬೇಕೆಂದರೆ ಸಂತೋಷವೇ ಶಾಶ್ವತವಾದ ಯೌವನವು. ಚಿಂತೆಯೇ ಮುಪ್ಪು. ಆದ್ದರಿಂದ ಆಯುರಾರೋಗ್ಯಕಾಮಿಗಳು, ಈ ಸಂತೋಷವೆಂಬ ತತ್ವವನ್ನು ಚನ್ನಾಗಿ ತಿಳಿದು ಹೆಚ್ಚು ಹೆಚ್ಚು ಆಚರಣೆಯಲ್ಲಿ ತಂದವರಿಗೆ ಆರೋಗ್ಯ, ಸೌಭಾಗ್ಯ, ಆಯುಷ್ಯ, ಕ್ರಾಂತಿ, ಶಾಂತಿ, ತುಷ್ಟಿ, ಪುಷ್ಟಿ ಇವೆಲ್ಲವುಗಳೂ ಸುಗಮವಾಗಿ ಪ್ರಾಪ್ತವಾಗುತ್ತವೆಂದು ಹೇಳಿ ಈ ಚಿಕ್ಕ ಲೇಖವನ್ನು ತಮ್ಮ ಮುಂದೆ ಇಟ್ಟು ವಿರಮಿಸುವೆನು.

---

# ಸಂಗೀತದಲ್ಲಿ ಶ್ರೀ ಬಸವಣ್ಣನವರ ವಚನಗಳು.

(ಲೇ—ಶ್ರೀ ಸಂಗಮೇಶ್ವರ ದೇವರು ಶಿಕಾರಿಪುರ ಶಿವಯೋಗಾಶ್ರಮ)

ರಾಗ. ಆರಬಿ.— ತಾಲ. ಝಂಪಾ.

ಹೊತ್ತಾರೆ ಎದ್ದು ಕಣ್ಣ ಹೊಸೆವುತ್ತ। ಎನ್ನ ಒಡಲಿಂಗೆ ಎನ್ನ ಮಡದಿಮಕ್ಕಳಿಗೆಂದು। ಕುದಿದೆನಾದರೆ। ಎನ್ನ ಮನಕ್ಕೆ ಮನವೇ ಸಾಕ್ಷಿ ॥ಪ॥

"ಆಶನೇ ಶಯನೇ ಯಾನೆ। ಸಂಪರ್ಕೇ ಸಹಭೋಜನೆ।
ಸಂಚರಂತಿ ಮಹಾಘೋರೆ। ನರಕೇಕಾಲಮಕ್ಷಮಂ ॥"

ಭವಿಯಾದ ಬಿಜ್ಜಳನ। ಗದ್ದುಗೆಯ ಕೆಳಗೆ। ಕುಳ್ಳಿದ್ದು ಓಲೈಸಿಹನೆಂಬರಯ್ಯ ಪ್ರಮಥರು। ಕೊಡುವೆನುತ್ತರವನವರಿಗೆ। ಕೊಡಲವ್ವೆ ಹೊಲೆ ಹೊಲೆಯರ ಮನೆಯ। ಹೊಕ್ಕಾದರೆಯು ॥ ೧ ॥ ಪಶೆ ಕೈಕೂಲಿಯ ಮಾಡಿದರೆಯು। ನಿಮ್ಮ ನಿಲವಿಂಗೆ ಕುದಿವೆನಲ್ಲದೆ। ಎನ್ನೊಡಲವಸರಕ್ಕೆ ಕುದಿದೆನಾದರೆ। ತಲೆಂಡ ಕೂಡಲಸಂಗಮದೇವ ॥ ೨ ॥

---

ರಾಗ. ಬಾಗೇಶ್ರಿ.— ತಾಲ. ಜಂಪಾ.

ಚಾಲಿ. (ಗಾಪ್ರೇ ಬಾಗೇಸರಿ) ಎಂಬಂತೆ.

ಎಮ್ಮವರು ಬೆಸಗೊಂಡರೆ। ಶುಭಲಗ್ನವೆನ್ನಿರಯ್ಯ। ರಾಶಿಕೂಟ ಋಣಸಂಬಂಧ। ಉಂಟೆಂದು ಹೇಳಿರಯ್ಯ। ॥ಪ॥ ಚಂದ್ರಬಲ ತಾರಾಬಲ ಉಂಟೆಂದು ಹೇಳಿರಯ್ಯ। ನಾಳಿನ ದಿನಕ್ಕಿಂದಿನ ದಿನ ॥ ರಿಸ ನಿದಾನಿಸಾ। ಮಗಾ। ಮಧಾ। ನಿದಮಗರಿಸಾ। ॥೧॥ ಲೇಸೆಂದು ಹೇಳಿರಯ್ಯ। ಕೂಡಲಸಂಗಮದೇವನ ಪೂಜಿಸಿದ ಫಲ ನಿಮ್ಮದಯ್ಯ ॥ ರಿಸನಿದಾನಿಸಾ। ಮಗಾ। ಮಧಾ। ನಿದಮಗರಿಸ ॥೨॥

---

ಬಾಗೇಶ್ರಿ. ರಾಗ—ತ್ರಿತಾಲ.

ಚಾಲಿ (ಜೈನ ನಹೀ ವೈತೊ)

ಸುಡಲೀ ಮನವೆನ್ನ । ಸುಡುಹನವಮಾಡಿತ್ತು । ನಡೆವಲ್ಲಿ ನುಡಿವಲ್ಲಿ । ಅಧಿಕನೆಂದಿನಿಸಿತ್ತು ॥ಪ॥ ಬೆಡಗಿನಕೀಲ । ಕಳೆದು ಕೆಡೆದ ಬಳಿಕ । ಕಡಗೂಪ ಮಡದಿ ತಾ ಮುಟ್ಟಲಮ್ಮಳು ।೧। ಒಡಲನುರಿಕೊಂಬುದು । ಒಡವೆಯನರಸು ಕೊಂಬ । ಕಡುಗೂಪ ಮಡದಿಯ । ಮತ್ತೊಬ್ಬ ಚನ್ನಿಗ ಕೊಂಬ ॥೨॥ ಮುನ್ನ ಮಾಡಿದ ಕರ್ಮ । ಬೆನ್ನ ಬಿಡದನ್ನಕ್ಕ । ಇನ್ನು ಮಾಡಿದರೊಳವೆ । ಕೂಡಲಸಂಗಮದೇವ ॥೩॥

---

ರಾಗ—ಕಾಫಿ. ತ್ರಿತಾಲ.

ಚಾಲಿ (ಮದನಸಜವಿಲಾ.)

ಅರ್ಥವನರ್ಥವ ಮಾಡಿ । ಕೋಳಾಹಳಂಗೈವುತ್ತಿರಲಿ । ಹುಟ್ಟಿದ ಮಕ್ಕಳ ನವಖಂಡವ ಮಾಡಿ । ಕಡಿವುತ್ತಿರಲಿ ॥ಪ॥ ಮುಟ್ಟಿದ ಸ್ತ್ರೀಯು ಕಣ್ಣ ಮುಂದೆ । ಅಭಿಮಾನಂಗೊಂಡು । ನೆರೆವುತ್ತಿರಲಿ ॥೧॥ ಇಂತೀತ್ರಿವಿಧವು । ಹೊರಗಣವು । ಇನ್ನೆನ್ನಂಗದ ಮೇಲೆ ಬರಲಿ ॥೨॥ ಹಿಡಿಖಂಡವ । ಕೊಯ್ಯಲಿ । ಇಕ್ಕುವ ಶೂಲ ಪ್ರಾಪ್ತಿಯಾಗಲಿ । ಹಾಕೊಂದೆಸೆ । ಹನ್ನೊಂದೆಸೆಯಾಗಿ । ಮಾಡುತ್ತಿರಲಿ ॥೩॥ ಮತ್ತೆಯೂ ಲಿಂಗಾರಾಧನೆ ಮಾಡುವೆ । ಜಂಗಮಾರಾಧನೆ ಮಾಡುವೆ । ಪ್ರಸಾದಕ್ಕೆ ತಪ್ಪೆ ॥೪॥ ಇಂತಪ್ಪ ಭಾಷೆ ಕಿಂಚಿತ್ತು ಹುಸಿಯಾದರೆ। ನೀನಂದೇ ಮೂಗು ಕೊಯ್ಯಿ। ಕೂಡಲಸಂಗಮದೇವ ॥೫॥

---

ರಾಗ—ದುರ್ಗಾ, ಝುಂಪಾ.

ಮಾಡಿನೀಡಿ ಲಿಂಗವ । ಪೂಜಿಸಿಹನೆಂಬರು । ನೀವುಕೇಳಿರೋ । ಹಾಗದ ಕೆರಹ ಹೊರಗೆ ಕಳೆದು । ದೇಗುಲಕ್ಕೆ ಹೋಗಿ । ನಮಸ್ಕಾರವ ಮಾಡುವನಂತೆ ॥ಪ॥ ತನ್ನಕೆರಹಿನ ಧ್ಯಾನವನಲ್ಲದೆ। ದೇವರ ಧ್ಯಾನವಿಲ್ಲ। ಧನವನಿರಿಸಿದಿರಾ । ಇರಿಸಿದರೆ । ಭವ ಬಪ್ಪುದು ತಪ್ಪದು । ಕೂಡಲಸಂಗನ ಶರಣರಿಗೆ । ಸವಿಸಲೇಬೇಕು ॥೧॥

---

ರಾಗ— ಭೀಮಪಲಾಸ, ತ್ರಿತಾಲ.

ಅಂಜಿದರಾಗದು। ಅಳುಕಿದರಾಗದು। ವಜ್ರ ಪಂಜರದೊಳಗಿದ್ದರೆ ಆಗದು ॥ಪ॥ ತಪ್ಪದೆಲವೋ ಲಲಾಟಲಿಖಿತ। ಕಕ್ಕುಲತೆಬಟ್ಟರು ಆಗದು ನೋಡಾ ॥೧॥ ಧೃತಿಗೆಟ್ಟು ಮನಧಾತು। ಗೆಟ್ಟರೆ ಅಪ್ಪುದು। ತಪ್ಪದು ಕೂಡಲಸಂಗಮದೇವ ॥೨॥

---

ರಾಗ— ಬಾಗೇಶ್ರೀ, ಝಂಪಾ.

ಚಾಲಿ (ನಂಬು ನಂಬೆಲೋ)

ಸಮುದ್ರ ಘನವೆಂಬೆನೆ। ಧರೆಯ ಮೇಲಡಗಿತ್ತು। ಧರೆಯು ಘನವೆಂಬೆನೆ। ಫಣಾಮಣಿಮೇಲಡಗಿತ್ತು ॥ಪ॥ ನಾಗೇಂದ್ರ ಘನವೆಂಬೆನೆ। ಪಾರ್ವತಿಯ ಕಿರುಕುಣಿಯ ಮುದ್ರೆಯಾಗಿತ್ತು ॥೧॥ ಪಾರ್ವತಿಯು ಘನವೆಂಬೆನೆ। ಪರಮೇಶ್ವರನ ಅರ್ಧಾಂಗಿ॥ ಅಂಥ ಪರಮೇಶ್ವರನು ಘನವೆಂಬೆನೆ। ನಮ್ಮ ಕೂಡಲಸಂಗನ ಶರಣರ। ಮನದ ಕೊನೆಯ ಮೇಲಡಗಿದನು ॥೨॥

---

# ಶಿವಾನುಭವ ಪತ್ರಿಕೆ.

(ಸಂಪಾದಕ)

ಶಿವಾನುಭವ ಪತ್ರಿಕೆಯು ೧೭ನೆಯ ವರುಷವು ಈ ಸಂಚಿಕೆಗೆ ಮುಗಿಯಿತು. ಮತ್ತು ಮುಂದಿನ ಸಂಚಿಕೆಯಿಂದ ಅದರ ೧೮ನೆಯ ವರುಷವು ಪ್ರಾರಂಭವಾಗುತ್ತದೆ. ಶಿವಾನುಭವವು ಶಿವಶರಣರ ಮಾರ್ಗವನ್ನೂ ಅವರ ವಿಚಾರಗಳನ್ನೂ ಜನರ ಮುಂದೆ ಇಡುವ ತನ್ನ ಧ್ಯೇಯವನ್ನು ಬಿಡದೆ ಅದಕ್ಕೋಸ್ಕರ ಈ ವರೆಗೆ ಪ್ರಯತ್ನಿಸುತ್ತ ಬಂದಿರುತ್ತದೆ. ಈ ಕಾರ್ಯವನ್ನು ಇನ್ನೂ ಹೆಚ್ಚಿಗೆ ಬಲವಾಗಿ ಸಾಗಿಸಲು ಅದು ಇಚ್ಛೆಯನ್ನು ತಾಳಿದೆ. ವೀರಶೈವ ಸಮಾಜಕ್ಕೆ ಸಂಬಂಧಿಸಿದ ಮತ್ತು ಇನ್ನೂ ಸಂಶೋಧಿಸಲ್ಪಡತಕ್ಕ ರಾಜಕೀಯ ವಾಙ್ಮಯಾತ್ಮಕ, ಸಾಮಾಜಿಕ ವಿಷಯಗಳು ಅಸಂಖ್ಯಾತವಿರುತ್ತವೆ. ನಮ್ಮ ಈ ಸಂಶೋಧನ ಕಾರ್ಯದಲ್ಲಿ ವಾಚಕರು ಸಹಾನುಭೂತಿಯುಳ್ಳವರಾಗಿ ನಮಗೆ ಸಹಾಯವನ್ನೀಯಬೇಕೆಂದು ನಾವು ಪ್ರಾರ್ಥಿಸುತ್ತೇವೆ.

ಶಿವಾನುಭವ ಗ್ರಂಥಮಾಲಾ ನಂ॥ ೪೭.

# ಶಿವಶರಣರ
# ಸಂಕೀರ್ಣ ವಚನಗಳು

## ಭಾಗ ೧.

(ಗಜೇಶಮಸಣಯ್ಯ, ಚಂದಿಮರಸು ಮತ್ತು ಅರುವಿನ ಮಾರಿತಂದೆಗಳ ವಚನಗಳು.)

ಸಂಪಾದಕ
**ಫ. ಗು. ಹಳಕಟ್ಟಿ.**

ಹಿತಚಿಂತಕ ಪ್ರಿಂಟಿಂಗ ಪ್ರೆಸ್
ವಿಜಾಪುರ.

**ಬೆಲೆ:— ೯ ಆಣೆ.**

# ಅನುಕ್ರಮಣಿಕೆ.

# ಪ್ರಸ್ತಾವನೆ.

ಈ ಗ್ರಂಥದಲ್ಲಿ ನಾವು ಹಿಂದಿನ ಕಾಲದಲ್ಲಿ ಬಹು ಪ್ರಸಿದ್ಧರಾದ ಮೂವರು ವಚನಕಾರರ ವಚನಗಳನ್ನು ಪ್ರಸಿದ್ಧಿಸಿದ್ದೇವೆ. ಅವರು ಗಜೇಶ ಮಸಣಯ್ಯ, ಚಂದಿಮರಸು ಮತ್ತು ಅರುವಿನವಾರಿತಂದೆ ಈ ಪ್ರಕಾರ ಇದ್ದಾರೆ. ವೀರಶೈವ ವಾಙ್ಮಯದಲ್ಲಿ ದೊರೆಯುವ ಪ್ರತಿಯೊಂದು ವಚನ ಸಂಗ್ರಹದಲ್ಲಿ ಇವರ ವಚನಗಳು ಬಹುತರ ಉಲ್ಲೇಖಿಸಲ್ಪಡುವದುಂಟು. ವೀರಶೈವರಲ್ಲಿ ಅವರು ಒಳ್ಳೇ ಮಹತ್ವಿಕರೆಂದು ಪ್ರಸಿದ್ಧಿಯನ್ನು ಹೊಂದಿರುವದರಿಂದ ಅವರ ವಚನಗಳಿಗೆ ಮಹತ್ವದ ಸ್ಥಾನವು ಬಂದಿರುತ್ತದೆ. ಇವರಲ್ಲಿ ಗಜೇಶಮಸಣಯ್ಯನ ವಚನಗಳಲ್ಲಿ ಸತಿಪತಿ ಭಾವದ ವಚನಗಳು ಹೆಚ್ಚಾಗಿ ಬಂದಿರುತ್ತವೆ. ಅವು ಬಹು ಸೊಬಗುಳ್ಳವು ಇವೆ. ಚಂದಿಮರಸನ ವಚನಗಳಾದರೂ ಬಹು ಸುಂದರವಾದವುಗಳು. ಅರುವಿನವಾರಿತಂದೆಯ ವಚನಗಳಲ್ಲಿ ಬೆಡಗಿನ ವಚನಗಳೇ ಹೆಚ್ಚಾಗಿರುತ್ತವೆ. ಅವು ಬಹು ಅರ್ಥಬೋಧಕವಾಗಿರುತ್ತವೆ.

ಈ ಮೂವರು ವಚನಕಾರರ ವಚನಗಳು ಇನ್ನೂ ಬಹಳ ಇರಬಹುದು. ಆದರೆ ನಮಗೆ ಉಪಲಬ್ಧವಾದವುಗಳನ್ನಷ್ಟೇ ನಾವು ಇಲ್ಲಿ ವಿಷಯಾನುಸಾರವಾಗಿ ಕ್ರಮಗೊಳಿಸಿ ಅಚ್ಚು ಹಾಕಿದ್ದೇವೆ. ಆದರೆ ಈ ಪ್ರತಿಯೊಬ್ಬನ ವಚನಗಳ ಸಂಖ್ಯೆಯು ಬಹು ಕಡಿಮೆ ನಮಗೆ ದೊರೆತಿರುವದರಿಂದ ಅಷ್ಟೇ ವಚನಗಳನ್ನು ಗ್ರಂಥರೂಪಾಗಿ ಅಚ್ಚು ಹಾಕುವದು ಅನಾನುಕೂಲವೆಂದು ತೋರಿದ್ದರಿಂದ ಈ ಮೂವರು ವಚನಕಾರರ ವಚನಗಳನ್ನು ಒತ್ತಟ್ಟಿಗೆ ಸಂಗ್ರಹಿಸಿ ಈ ಗ್ರಂಥವನ್ನು ಪ್ರಸಿದ್ಧಿಸಿದ್ದೇವೆ. ಸ್ವಲ್ಪ ಸಂಖ್ಯೆಯುಳ್ಳ ವಚನಕಾರರ ಅನೇಕ ವಚನಗಳು ಇನ್ನೂ ಬಹಳ ದೊರೆಯುತ್ತವೆ. ಅವುಗಳನ್ನು ನಾವು ಯಥಾವಕಾಶವಾಗಿ ಕ್ರಮಗೊಳಿಸಿ "ಸಂಕೀರ್ಣ ವಚನ" ಗಳೆಂದು ಬೇರೆ ಬೇರೆ ಭಾಗಗಳನ್ನಾಗಿ ಮಾಡಿ ಮುದ್ರಿಸಲು ಇಚ್ಛಿಸಿದ್ದೇವೆ.

ನಮಗೆ ದೊರೆದ ವಚನಗಳೆಲ್ಲವೂ ಬಹು ಅಶುದ್ಧವಾದವುಗಳು. ಅವುಗಳನ್ನು ಶಕ್ಯವಿದ್ದಷ್ಟರ ಮಟ್ಟಿಗೆ ತಿದ್ದಿ ಈ ಗ್ರಂಥವನ್ನು ಅಚ್ಚಿಗೆ

ಸಿದ್ಧಪಡಿಸಿರುತ್ತೇವೆ. ಆದರೂ ಅರ್ಥವು ತಿಳಿಯದಂಥ ಅನೇಕ ವಚನಗಳು ಇದರಲ್ಲಿವೆ. ಇದು ಅನಿವಾರ್ಯವಾದುದರಿಂದ ವಾಚಕರು ಇದಕ್ಕೋಸ್ಕರ ನಮ್ಮನ್ನು ಕ್ಷಮಿಸಬೇಕು.

ಈ ಗ್ರಂಥದಲ್ಲಿ ಬಂದ ವಚನಕಾರರ ಚರಿತ್ರೆಗಳು ಅವರವರ ವಚನಗಳ ಆರಂಭದಲ್ಲಿಯೇ ಪ್ರಸ್ತಾವನಾರೂಪವಾಗಿ ಕೊಟ್ಟಿದ್ದೇವೆ. ಅವುಗಳನ್ನು ವಾಚಕರು ನೋಡಬೇಕು.

ವಿಜಾಪುರ
ತಾ॥ ೨೬-೮-೧೯೩೮

ಫ. ಗು. ಹಳಕಟ್ಟಿ
ಸಂಪಾದಕ.

ಟೀಕುಃ-- ಪೃಥ್ವಿಜ್ಞಾನ ನೂರೊಂದು ಸ್ಥಲದಾಚರಣೆಯುಲ್ಲಿ ಕೂಡಿ ಹುದೇಬುದೀಗ ಪೃಥ್ವಿಜ್ಞಾನ ಪಿಪೀಲಿಕ ಸಂಬಂಧವಾಗಿಹುದೆಂಬ ಶಬ್ದ ಕ್ಕರ್ಥ. ಅಪ್ಪು ಜ್ಞಾನ ಷಡ್ವಿಧ ಲಿಂಗಾಂಗ ಸ್ಥಲದಾಚರಣೆಯುನೊಳ ಕೊಂಡಿಹುದೆಂಬುದೀಗ ಅಪ್ಪು ಜ್ಞಾನ ಮರ್ಕಟ ಸಂಬಂಧವಾಗಿಹುದೆಂಬ ಶಬ್ದಕ್ಕರ್ಥ. ತೇಜಜ್ಞಾನ ಚಿದಗ್ನಿ ಸ್ವರೂಪವಾಗಿ ಪ್ರಕಾಶಿಸುತ್ತಿಹುದೆಂ ಬುದೀಗ ತೇಜಜ್ಞಾನ ಅಗ್ನಿಸಂಬಂಧವಾಗಿಹುದೆಂಬ ಶಬ್ದಕ್ಕರ್ಥ. ವಾಯು ಜ್ಞಾನ ಚಿದ್ವಾಸನ ಸ್ವರೂಪವಾಗಿಹುದೆಂಬುದೀಗ ವಾಯುಜ್ಞಾನ ಗಂಧಸಂಬಂಧವಾಗಿಹುದೆಂಬ ಶಬ್ದಕ್ಕರ್ಥ. ಆಕಾಶಜ್ಞಾನಅಭೇದ್ಯ ವಾದ ಪರಶಿವ ತತ್ವವನವಗ್ರಹಿಸಿ ಹೊರೆ ಇಲ್ಲದೆ ಒಂದೇಯಾಗಿಹು ದೆಂಬುದೀಗ ಆಕಾಶಜ್ಞಾನ ವಿಹಂಗ ಸಂಬಂಧವಾಗಿಹುದೆಂಬ ಶಬ್ದ ಕ್ಕರ್ಥ. ತಮುಜ್ಞಾನ ಪರಶಿವ ತತ್ವವನರಿಯುಬೇಕೆಂಬ ಏಕಾಗ್ರ ಚಿತ್ತದ ಲ್ಲಿರುತ್ತಿಹುದೆಂಬುದೀಗ ತಮುಜ್ಞಾನ ಮಾರ್ಜಾಲ ಸಂಬಂಧವಾಗಿಹುದೆಂಬ ಶಬ್ದಕ್ಕರ್ಥ. ಪರಿಪೂರ್ಣಜ್ಞಾನ ರೂಪು ರುಚಿ ತೃಪ್ತಿ ಮೊದಲಾದ ಸಕಲ ಪದಾರ್ಥವ ಲಿಂಗವೇ ಕೈಕೊಂಡು ಭೋಗಿಸಿ ತೃಪ್ತಿಯುನೆಯ್ದಿತ್ತೆಂಬ ನೆನಹಿನಲ್ಲಿರುತ್ತಿಹುದೆಂಬುದೀಗ ಪರಿಪೂರ್ಣಜ್ಞಾನ ಕೂರ್ಮ ಸಂಬಂಧ ವಾಗಿಹುದೆಂಬ ಶಬ್ದಕ್ಕರ್ಥ. ಲಿಂಗಾಂಗ ಸ್ಥಲ ಮೊದಲಾದ ಸರ್ವಾ ಚಾರ ಸಂಪತ್ತನು ಭೇದಿಸಿ ಅರುಹುತ್ತಿಹುದೆಂಬುದೀಗ ದಿವ್ಯಜ್ಞಾನ ಸರ್ವಮಯುವಾಗಿ ನಾನಾ ಭೇದಂಗಳ ಭೇದಿಸುತ್ತಿಹುದೆಂಬ ಶಬ್ದಕ್ಕರ್ಥ. ಶರಣನ ಉನ್ಮನಿ ಸ್ವರೂಪವಾದ ಮನೋಮಧ್ಯದಲ್ಲಿ ಪರಿಪೂರ್ಣಜ್ಞಾನ ಸಮರಸವಾಯಿತ್ತೆಂಬುದೀಗ ಇಂತೀ ಮನಜ್ಞಾನ ಭರಿತನಾಗಿ ಎಂಬ ಶಬ್ದಕ್ಕರ್ಥ. ಆ ಶರಣ ದಶವಾಯು ವಿಕಾರದಲ್ಲಿ ಸಂಚರಿಸುತ್ತಿರ್ದ ಮನೋವರ್ತನೆಯು ಸತ್ಕ್ರಿಯಾಚರಣೆಯಿಂದ ಧ್ವಂಸವ ಮಾಡಿವನೆಂ ಬುದೀಗ ದಶಗುಣ ಮರ್ಕಟವ ಮೆಟ್ಟಿ ನಿಂದು ಎಂಬ ಶಬ್ದಕ್ಕರ್ಥ. ಚಿದಾಕಾಶ ಮಧ್ಯದಲ್ಲಿರ್ಪ ಚಿದ್ಘನ ಲಿಂಗವು ತೂರ್ಯಾವಸ್ಥೆಯು ಭಾವ ದಲ್ಲಿರ್ಪ ಶರಣನ ಉನ್ಮನಿ ಸ್ವರೂಪವಾದ ಮನೋಮಧ್ಯದಲ್ಲಿ ತೊಳಗಿ ಬೆಳಗುತ್ತಿಹುದೆಂಬುದೀಗ ಬಟ್ಟ ಬಯುಲ ತುಟ್ಟ ತುದಿಯು ಸದಾಶಿವ ಮೂರ್ತಿ ಲಿಂಗದ ಕಳೆ ಕಳಕಳಿಸುತ್ತಿದೆ ಚಿತ್ತದ ನೆನಹಿನಲ್ಲಿ ಎಂಬ ಶಬ್ದಕ್ಕರ್ಥ.

೮೦. ಪೃಥ್ವೀಜ್ಞಾನ, ಅಪ್ಪುಜ್ಞಾನ, ತೇಜಜ್ಞಾನ, ವಾಯುಜ್ಞಾನ, ಆಕಾಶಜ್ಞಾನ, ತಮೋಜ್ಞಾನ, ಪರಿಪೂರ್ಣಜ್ಞಾನ, ದಿವ್ಯಜ್ಞಾನ ಇಂತೀ

ಜ್ಞಾನಂಗಳಲ್ಲಿ ಕಂಡು ದೇಹ ಧರ್ಮಂಗಳನರಿದು ಪಿಂಡಪ್ರಾಣ ಅಂಗ ಲಿಂಗ ಸಂಯೋಗ ಸಂಪದದಲ್ಲಿ ನಿಂದು ನೋಡು. ಸದಾಶಿವಮೂರ್ತಿ ಲಿಂಗದಲ್ಲಿ ಕಳೆ ಬೆಳಗುತ್ತಿದೆ.

ಟೀಕು:— ಪೃಥ್ವೀಜ್ಞಾನ ಭಕ್ತಸ್ಥಲ ಸಂಬಂಧವಾಗಿಹುದೆಂಬುದೀಗ ಪೃಥ್ವೀಜ್ಞಾನವೆಂಬ ಶಬ್ದಕ್ಕರ್ಥ. ಅಪ್ಪುಜ್ಞಾನ ಮಹೇಶ್ವರಸ್ಥಲ ಸಂಬಂಧವಾಗಿಹುದೆಂಬುದೀಗ ಅಪ್ಪು ಜ್ಞಾನವೆಂಬ ಶಬ್ದಕ್ಕರ್ಥ. ತೇಜಜ್ಞಾನ ಪ್ರಸಾದಿಸ್ಥಲ ಸಂಬಂಧವಾಗಿಹುದೆಂಬುದೀಗ ತೇಜಜ್ಞಾನವೆಂಬ ಶಬ್ದಕ್ಕರ್ಥ. ವಾಯುಜ್ಞಾನ ಪ್ರಾಣಲಿಂಗಿ ಸಂಬಂಧವಾಗಿಹುದೆಂಬುದೀಗ ವಾಯುಜ್ಞಾನವೆಂಬ ಶಬ್ದಕ್ಕರ್ಥ. ಆಕಾಶಜ್ಞಾನ ಶರಣಸ್ಥಲ ಸಂಬಂಧವಾಗಿಹುದೆಂಬುದೀಗ ಆಕಾಶಜ್ಞಾನವೆಂಬ ಶಬ್ದಕ್ಕರ್ಥ. ತಮಜ್ಞಾನ ಐಕ್ಯಸ್ಥಲ ಸಂಬಂಧವಾಗಿಹುದೆಂಬುದೀಗ ತಮಜ್ಞಾನವೆಂಬ ಶಬ್ದಕ್ಕರ್ಥ. ಇಂತಪ್ಪ ಸ್ಥಲಕುಲಾದಿಗಳನೊಳಕೊಂಡು ಸರ್ವಾಚಾರದಲ್ಲಿ ಸಂಬಂಧವಾಗಿಹುದೆಂಬುದೀಗ ಪರಿಪೂರ್ಣ ಜ್ಞಾನವೆಂಬ ಶಬ್ದಕ್ಕರ್ಥ. ಅಂತಪ್ಪ ಲಿಂಗಾಂಗಸ್ಥಲಂಗಳ ಭೇದಾದಿ ಭೇದಂಗಳನರುಹಿಸಿಕೊಳ್ಳುತ್ತಿಹುದೆಂಬುದೀಗ ದಿವ್ಯಜ್ಞಾನವೆಂಬ ಶಬ್ದಕ್ಕರ್ಥ. ಇಂತಪ್ಪ ಪರಿಪೂರ್ಣ ಜ್ಞಾನಂಗಳಿಂ ಸ್ಥಲಸಂಬಂಧಗಳನರಿದು ಎಂಬುದೀಗ ಇಂತೀ ಜ್ಞಾನಂಗಳಲ್ಲಿ ಕಂಡು ಎಂಬ ಶಬ್ದಕ್ಕರ್ಥ. ಇಂತಪ್ಪ ಸರ್ವಾಂಗಲಿಂಗಸಂಬಂಧಿಯಾದ ಶರಣಂಗೆ ದೇಹ ಪ್ರಾರಬ್ಧ ಭೋಗ ನಷ್ಟವಾಗಿ ಲಿಂಗಭೋಗೋಪ ಭೋಗಿಯಾಗಿರ್ದನೆಂಬುದೀಗ ದೇಹಧರ್ಮವನರಿದು ಎಂಬ ಶಬ್ದಕ್ಕರ್ಥ. ಅಂತಪ್ಪ ಶರಣನ ದೇಹವಳಿದು ಜ್ಞಾನಕಾಯಸ್ವರೂಪವಾಯಿತ್ತೆಂಬುದೀಗ ಪಿಂಡವೆಂಬ ಶಬ್ದಕ್ಕರ್ಥ. ಆ ಶರಣನ ಪ್ರಸಾದವಳಿದು ಲಿಂಗ ಪ್ರಾಣವಾಯಿತ್ತೆಂಬುದೀಗ ಪ್ರಾಣವೆಂಬ ಶಬ್ದಕ್ಕರ್ಥ. ಆ ಶರಣನ ಭಕ್ತಾದ್ಯೈಕ್ಯಾಂತವಾದ ಷಡ್ವಿಧ ಚಿದಂಗಗಳೆಂಬುದೀಗ ಅಂಗವೆಂಬ ಶಬ್ದಕ್ಕರ್ಥ. ಆ ಚಿದಂಗಗಳಲ್ಲಿ ಸಂಬಂಧವಾದ ಆಚಾರಾದಿ ಮಹಾಲಿಂಗಂಗಳೆಂಬುದೀಗ ಲಿಂಗವೆಂಬ ಶಬ್ದಕ್ಕರ್ಥ. ಇಂತಪ್ಪ ಲಿಂಗಾಂಗವೆರಡರ ಕೂಟವೇ ಅಸಿಪದವಾದ ಕಾರಣ ಸಂಯೋಗವೆಂಬ ಶಬ್ದಕ್ಕರ್ಥ. ಈ ಲಿಂಗಾಂಗ ಸಮರಸ ಕೂಟದ ಮಹದೈಶ್ವರ್ಯದಲ್ಲಿ ಸುಸ್ಥಿರಭಾವಿಯಾಗಿ ನಿಂದು ತನ್ನ ನಿಜ ಸ್ವರೂಪ ಅವಿರಳಜ್ಞಾನದೃಕ್ಕಿನಿಂ ನಿರೀಕ್ಷಿಸುತ್ತಿರ್ದ ಶರಣನೆಂಬುದೀಗ ಸಂಪದದಲ್ಲಿ ನಿಂದು ನೋಡು ಸದಾಶಿವಮೂರ್ತಿಲಿಂಗದಲ್ಲಿ ಕಳೆ ಬೆಳಗುತ್ತಿದೆ ಎಂಬ ಶಬ್ದಕ್ಕರ್ಥ.

೭೧. ನಂಜಿನ ಭೂಮಿಯ ಮೇಲೆ ಸಂದೇಹದ ಕವರು ನೆಟ್ಟು ಮಂಜುಳ ಮೂರಂಗದ ಮುಂಡಿಯು ನೆಟ್ಟು ಸರಂಗದ ಸುಮನದ ಡೊಂಕರತ ಬೆಂಬರನ ಹಾಕಿ ಗತಿಮತಿಯೆಂಬ ಇಕ್ಕೆಲದ ಸೂರಿಗೆ ನಿಜ ನಿಶ್ಚಯವೆಂಬ ಹುಲು ಒಡುವ ಹಾಕಿ ಏರಿಸಿದಗಳು ಚಿತ್ತಶುದ್ಧವೆಂಬ ಮೂಗುತಿಗೋಲಿನಲ್ಲಿ ನಿಂದಿತ್ತು. ತೊಲಗದ ಕಟ್ಟು ವಿಶ್ವಾಸ ನಿಶ್ಚಯದಲ್ಲಿ ನಿಂದಿತ್ತು. ಸಂದೇಹ ನಿಂದು ಹಂಜರವೇರಿತ್ತು. ಕಡೆನಡು ಮೊದಲೆನ್ನದ ತ್ರಿಗುಣದ ಕಂತೆ ಕಟ್ಟಿ ಅರಿದು ಮರೆಯದ ಹುಲ್ಲು ಕವಿಸಿತ್ತು. ಮನೆ ಯಾಯಿತ್ತು. ಮನದ ಕೊನೆಯಲ್ಲಿ ಬಾಗಿಲು ಬಯಲಾಯಿತ್ತು. ಸದಾ ಶಿವಮೂರ್ತಿಲಿಂಗವು ನಿರಾಳವಾಯಿತ್ತು.

ಟೀಕು:— ಶಿವಜ್ಞಾನೋದಯವಾಗಿ ಸಕಲ ಮಾಯಾಪ್ರಪಂಚು ನಷ್ಟವಾದ ಶರಣನ ಚಿದ್ಭೂಮಿಯಲ್ಲಿ ಎಂಬುದೀಗ ನಂಜಿನ ಭೂಮಿಯ ಮೇಲೆ ಎಂಬ ಶಬ್ದಕ್ಕರ್ಥ. ಆ ಚಿದ್ಭೂಮಿಯಲ್ಲಿ ಸಂಕಲ್ಪ ವಿಕಲ್ಪ ವಳಿದು ದೃಢಸ್ತಂಭವ ನೆಲೆಗೊಳಿಸಿದನೆಂಬುದೀಗ ಸಂದೇಹದ ಕವರು ನೆಟ್ಟು ಎಂಬ ಶಬ್ದಕ್ಕರ್ಥ. ಆ ಸದ್ಭಾವದಲ್ಲಿ ನಿರ್ಧರವಾದ ಶರಣನು ಶ್ರೀಗುರುಕಾರುಣ್ಯದಿಂ ತನುತ್ರಯಂಗಳಿಗೆ ಚೈತನ್ಯವಾದ ಆತ್ಮತ್ರಯ ದಲ್ಲಿ ಗುರುಲಿಂಗಜಂಗಮವ ಸಂಬಂಧವ ಮಾಡಿದನೆಂಬುದೀಗ ಮಂಜುಳ ಮೂರಂಗ ಎಂಬ ಶಬ್ದಕ್ಕರ್ಥ. ಆ ಲಿಂಗತ್ರಯ ಸಂಬಂಧವಾದ ಶರ ಣನು ಕುಬುದ್ಧಿಯಳಿದು ಸುಬುದ್ಧಿಯನೇ ಕಂಬವ ಮಾಡಿದನೆಂಬು ದೀಗ ಮುಂಡಿಯು ನೆಟ್ಟು ಎಂಬ ಶಬ್ದಕ್ಕರ್ಥ. ಆ ಶರಣನ ಕುಮನ ವಳಿದ ನೇರಿತವಾದ ಸಮರಸವೆಂಬುದೀಗ ಸರಂಗದ ಸುಮನ ಎಂಬ ಶಬ್ದಕ್ಕರ್ಥ. ಅಂತು ಮನಬುದ್ಧಿಗಳೆರಡು ನಷ್ಟವಾದಲ್ಲಿ ಶರಣಲಿಂಗ ವೆಂಬುಭಯವಳಿದ ಬೆಂಬರನ ಹಾಕಿದನೆಂಬುದೀಗ ಡೊಂಕರತ ಬೆಂಬ ರನ ಹಾಕಿ ಎಂಬ ಶಬ್ದಕ್ಕರ್ಥ. ಅಂತು ಉಭಯವಳಿದು ಒಂದೇಯಾದ ಶರಣಂಗೆ ಜ್ಞಾನಕ್ರಿಯಾಚಾರವೆಂಬುಭಯವು ಇಕ್ಕೆಲದ ಸೂರಾಯಿತ್ತೆಂಬು ದೀಗ ಗತಿಮತಿ ಎಂಬ ಇಕ್ಕೆಲದ ಸೂರಿಗೆ ಎಂಬ ಶಬ್ದಕ್ಕರ್ಥ. ಆ ಜ್ಞಾನಕ್ರಿಯಲ್ಲಿ ತತ್ಪರನಾದ ಶರಣನಾ ಪರಶಿವ ಸ್ವರೂಪನು ಪರಬ್ರಹ್ಮ ಸ್ವರೂಪನು ಎಂಬ ನಿಶ್ಚಯವೀಗ ನಿಜ ನಿಶ್ಚಯ ವೆಂಬ ಹುಲು ಒಡುವ ಹಾಕಿ ಎಂಬ ಶಬ್ದಕ್ಕರ್ಥ. ಆ ಪರಬ್ರಹ್ಮವೇ ತಾನಾದ ಶರಣನ ಸಕಲ ಕರಣಂಗಳೆಲ್ಲ ಲಿಂಗಕರಣಂಗಳಾಗಿ ಲಿಂಗದಲ್ಲಿ ಏಕಾರ್ಥವಾದವೆಂಬು

ದೀಗ ಏರಿಸಿಡಗಳು ಎಂಬ ಶಬ್ದಕ್ಕರ್ಥ. ಅಂತು ಕರಣಂಗಳ ಲಿಂಗ ದಲ್ಲಿ ಏಕಾರ್ಥವ ಮಾಡಿದ ಶರಣಂಗೆ ಸಂಕಲ್ಪ ವಿಕಲ್ಪ ಜ್ಞಾನವಿಲ್ಲದ ಸ್ಪಷ್ಟವಾದ ಶಿವಜ್ಞಾನವೆಂಬ ಮೂಗುತಿ ಗೋಲಿನಲ್ಲಿ ನಿಂದಿತ್ತೆಂಬುದೀಗ ಚಿತ್ತಶುದ್ಧವೆಂಬ ಮೂಗುತಿಗೋಲಿನಲ್ಲಿ ನಿಂದಿತ್ತೆಂಬ ಶಬ್ದಕ್ಕರ್ಥ. ಅಂತು ಶಿವಜ್ಞಾನದಲ್ಲಿ ನಿರ್ಧರವಾದ ಶರಣನ ಸಕಲ ಕರಣಂಗಳು ಭಿನ್ನ ವರ್ತನೆಗೆ ತೊಲಗದ ಹಾಗೆ ಸದ್ಭಾವದಿಂ ಸಂಬಂಧಿಸಿದನೆಂಬುದೀಗ ಗಳು ತೊಲಗದ ಕಟ್ಟು ಎಂಬ ಶಬ್ದಕ್ಕರ್ಥ. ಅಂತು ಸಕಲ ಕರಣಂಗಳು ಸದ್ಭಾವದಲ್ಲಿ ಸನ್ನಿಹಿತವಾದ ಶರಣನ ಗುರುಲಿಂಗಜಂಗಮದಲ್ಲಿ ವಿಶ್ವಾಸ ನೆಲೆಗೊಂಡಲ್ಲಿ ಸಾಧ್ಯನಾಯಿತ್ತೆಂಬುದೀಗ ವಿಶ್ವಾಸ ನಿಶ್ಚಯದಲ್ಲಿ ನಿಂದಿತ್ತೆಂಬ ಶಬ್ದಕ್ಕರ್ಥ. ಆ ತ್ರಿವಿಧ ಭಕ್ತಿಯಲ್ಲಿ ತತ್ಪರನಾದ ಶರಣಂಗೆ ಸಂಕಲ್ಪ ವಿಕಲ್ಪ ನಷ್ಟವಾಗಿ ಜ್ಞಾನಕ್ರಿಯಾಚಾರವೆಂಬ ಹಂಜರ ಸ್ಥಿರವಾಯಿತ್ತೆಂಬುದೀಗ ಸಂದೇಹ ನಿಂದು ಹಂಜರವೇರಿತ್ತೆಂಬ ಶಬ್ದಕ್ಕರ್ಥ. ಆ ಜ್ಞಾನಕ್ರಿಯಾಚಾರದಲ್ಲಿ ನಿರ್ಧರವಾದ ಶರಣಂಗೆ ಗುಣತ್ರಯಂಗಳು ನಷ್ಟವಾಗಿ ಇಷ್ಟ ಪ್ರಾಣ ಭಾವ ಲಿಂಗ ತ್ರಯ ಸಂಬಂಧವಾಯಿತ್ತೆಂಬುದೀಗ ಕಡೆ ನಡು ಮೊದಲೆನ್ನದ ತ್ರಿಗುಣದ ಕಂತೆ ಕಟ್ಟೆ ಎಂಬ ಶಬ್ದಕ್ಕರ್ಥ. ಅಂತು ಲಿಂಗತ್ರಯ ಸಂಬಂಧವಾದ ಶರಣ ಪರಶಿವತತ್ವವೇ ತನ್ನ ನಿಜವೆಂದರಿದು ಮರೆಯದೆ ಇರ್ದ ಹುಲ್ಲು ಕವಿಸಿತ್ತೆಂಬುದೀಗ ಅರಿದು ಮರೆಯದ ಹುಲ್ಲು ಕವಿಸಿತ್ತೆಂಬ ಶಬ್ದಕ್ಕರ್ಥ. ಆ ಸುಜ್ಞಾನ ಸ್ವರೂಪನಾದ ಶರಣನು ಚಿಪ್ಘನಲಿಂಗಕ್ಕೆ ಚಿದ್ಗೃಹವ ಮಾಡಿದ ತನ್ನ ನೆನಹಿನ ಅಗ್ರದಲ್ಲಿ ಎಂಬುದೀಗ ಮನೆಯಾಯಿತ್ತು ಮನದ ಕೊನೆಯಲ್ಲಿ ಎಂಬ ಶಬ್ದಕ್ಕರ್ಥ. ಚಿದ್ಗೃಹವ ಮಾಡಿದ ಚಿದ್ರೂಪನಾದ ಶರಣನ ಉನ್ಮನಿಸ್ವರೂಪವಾದ ಚಿದ್ವಾರವು ಚಿದ್ಘನ ಲಿಂಗದಲ್ಲಿ ನಿರ್ವಯಲಾಯಿತ್ತೆಂಬುದೀಗ ಬಾಗಿಲ ಬಯಲಾಯಿತ್ತು ಸದಾಶಿವಮೂರ್ತಿಲಿಂಗವು ನಿರಾಳವಾಯಿತ್ತೆಂಬ ಶಬ್ದಕ್ಕರ್ಥ.

೮೩. ಜೀವಜ್ಞಾನ, ಪರಮಜ್ಞಾನ, ಪ್ರಕಾಶಜ್ಞಾನ, ಪ್ರಜ್ವಲಿತ ಜ್ಞಾನ, ಪ್ರಭಾವಜ್ಞಾನ, ತೇಜೋಮಯಜ್ಞಾನ, ಪರಂಜ್ಯೋತಿಜ್ಞಾನ, ದಿವ್ಯಜ್ಞಾನ, ಸರ್ವಮಯಸಂಪೂರ್ಣಂಗಳಲ್ಲಿ, ತೋರುತ್ತಿಹ ತೋರಿಕೆ, ಆಕಾಶ ಮಂಡಲದಲ್ಲಿ ತೋರುವ ಅರುಣನ ಕಿರಣ ಸರ್ವ ಜೀವಜ್ಞಾನ ಪರಿಪೂರ್ಣ ದೃಷ್ಟಿಯಾಗಿ ಕಾಂಬ ತೆರನಂತೆ ಎನ್ನ ಪಿಂಡಮಂಡಲದಲ್ಲಿ ದಿವ್ಯ

ತೇಜೋ ವರುಣ ಕಿರಣ ಮಯವಾಗಿ ಒಂಗರಲ್ಲಿ ನಿಂದು ಕಾಂಬುದು ಹಲವಾದಂತೆ ಎನ್ನ ಮನದ ಮಂದಿರದಲ್ಲಿ ನಿಂದವ ನೀನೊಬ್ಬ ವಿಶ್ವರೂಪಾದೆಯಲ್ಲಾ ಭೇದ್ಯಕ್ಕೆ ಅಭೇದ್ಯನಾದೆಯಲ್ಲಾ ನಿನ್ನನೇನೆಂಬುದಕ್ಕೆ ತೆರಪಿಲ್ಲ. ಭಾಗೀರಥಿಯಂತೆ ಆರು ನಿಂದರೂ ಪ್ರವಾಹಾದಿಯಲ್ಲಾ. ಎನ್ನ ಮನಕ್ಕೆ ಕಾಷ್ಠಗಟ್ಟಿಯಾಗಿನಿಂದೆಯಲ್ಲಾ ಸದಾಶಿವಮೂರ್ತಿಲಿಂಗವೇ.

ಟೀಕು:-- ಶ್ರದ್ಧಾಭಕ್ತಿ ಸಂಬಂಧವಾಗಿಹುದು ಭಕ್ತಿಸ್ಥಲವೆಂಬುದೀಗ ಜೀವಜ್ಞಾನವೆಂಬ ಶಬ್ದಕ್ಕರ್ಥ. ಸಮರಸಭಕ್ತಿ ಸ್ವರೂಪವಾಗಿಹುದು ಐಕ್ಯಸ್ಥಲವೆಂಬುದೀಗ ಪರಮಜ್ಞಾನವೆಂಬ ಶಬ್ದಕ್ಕರ್ಥ. ಭಕ್ತನ ಶ್ರದ್ಧಾಭಕ್ತಿಯನೊಳಕೊಂಡು ತೋರುತ್ತಿಹುದು ಆಚಾರಲಿಂಗವೆಂಬುದೀಗ ಪ್ರಕಾಶಜ್ಞಾನವೆಂಬ ಶಬ್ದಕ್ಕರ್ಥ. ಮಹೇಶ್ವರನ ನಿಷ್ಠಾಭಕ್ತಿಯನೊಳಕೊಂಡು ತೋರುತ್ತಿಹುದು ಗುರುಲಿಂಗವೆಂಬುದೀಗ ಪ್ರಜ್ವಲಿತ ಜ್ಞಾನವೆಂಬ ಶಬ್ದಕ್ಕರ್ಥ. ಪ್ರಸಾದಿಯ ಸಾವಧಾನ ಭಕ್ತಿಯನೊಳಕೊಂಡು ತೋರುತ್ತಿಹುದು ಶಿವಲಿಂಗವೆಂಬುದೀಗ ಪ್ರಭಾವಜ್ಞಾನವೆಂಬ ಶಬ್ದಕ್ಕರ್ಥ. ಪ್ರಾಣಲಿಂಗಿಯ ಅನುಭಾವ ಭಕ್ತಿಯನೊಳಕೊಂಡು ತೋರುತ್ತಿಹುದು ಜಂಗಮಲಿಂಗವೆಂಬುದೀಗ ತೇಜೋಮಯಜ್ಞಾನವೆಂಬ ಶಬ್ದಕ್ಕರ್ಥ. ಶರಣನ ಆನಂದಭಕ್ತಿಯನೊಳಕೊಂಡು ತೋರುತ್ತಿಹುದು ಪ್ರಸಾದಲಿಂಗವೆಂಬುದೀಗ ಪರಂಜ್ಯೋತಿಜ್ಞಾನವೆಂಬ ಶಬ್ದಕ್ಕರ್ಥ. ಐಕ್ಯ ಸಮರಸ ಭಕ್ತಿಯನೊಳಕೊಂಡು ತೋರುತ್ತಿಹುದು ಮಹಾಲಿಂಗವೆಂಬುದೀಗ ದಿವ್ಯಜ್ಞಾನವೆಂಬ ಶಬ್ದಕ್ಕರ್ಥ. ಇಂತಪ್ಪ ಷಡ್ವಿಧಸ್ಥಲ ಮುಖ್ಯವಾದ ಸರ್ವಾಚಾರ ಸಂಪತ್ತಿನೊಳಗಾದ ಸಕಲವನು ಪರಿಪೂರ್ಣ ಜ್ಞಾನವ ಒಳಕೊಂಡಿಹುದೆಂಬುದೀಗ ಸರ್ವಮಯ ಸಂಪೂರ್ಣಂಗಳಲ್ಲಿ ತೋರುತ್ತಿಹ ತೋರಿಕೆ ಎಂಬ ಶಬ್ದಕ್ಕರ್ಥ. ಆಕಾಶದಲ್ಲಿ ತೋರುವ ಸೂರ್ಯಕಿರಣ ಪ್ರಕಾಶ ಪಿಂಡಬ್ರಹ್ಮಾಂಡದೊಳಗೆ ಸರ್ವ ಜೀವರುಗಳಿರುವ ಪ್ರಭಾವಿಸಿ ಕೊಡುವ ಹಾಗೆಂಬುದೀಗ ಆಕಾಶಮಂಡಲದಲ್ಲಿ ತೋರುವ ಅರುಣನ ಕಿರಣ ಸರ್ವ ಜೀವಜ್ಞಾನ ಪರಿಪೂರ್ಣ ದೃಷ್ಟಿಯಾಗಿ ಕಾಂಬ ತೆರನಂತೆ ಎಂಬ ಶಬ್ದಕ್ಕರ್ಥ. ಆ ಶರಣ ಚಿತ್ಪಿಂಡ ಮಂಡಲ ಮಧ್ಯದಲ್ಲಿ ಚಿತ್ಸೂರ್ಯನು ಪ್ರಭಾವಿಸಿ ಒಳಹೊರಗೆ ಸರ್ವಾಂಗದಲ್ಲಿ ಪ್ರಕಾಶಿಸುತ್ತಿಹುದೆಂಬುದೀಗ ಎನ್ನ ಪಿಂಡ ಮಂಡಲದಲ್ಲಿ ದಿವ್ಯತೇಜೋವರುಣ ಕಿರಣಮಯವಾಗಿ ಎಂಬ ಶಬ್ದಕ್ಕರ್ಥ. ಒಂದರಿಂದೆ ಹಲವು ಲೆಕ್ಕವು ಕಾಂಬಂತೆ

ಒಂದೇ ಪರಬ್ರಹ್ಮವು ತನ್ನ ಸ್ವಲೀಲೆಯಿಂ ಪಿಂಡಾದಿಜ್ಞಾನ ಶೂನ್ಯಾಂತ ವಾದ ನೂರೊಂದು ಸ್ಥಲಕುಳ ಸ್ವರೂಪವನೆಯ್ದಿತ್ತೆಂಬುದೀಗ ಒಂದರಲ್ಲಿ ನಿಂತು ಕಾಂಬುದು ಹಲವಾದಂತೆ ಎಂಬ ಶಬ್ದಕ್ಕರ್ಥ. ಅನೇಕ ಸ್ಥಲ ಕುಲಂಗಳನೊಳಕೊಂಡಿರ್ಪ ಪರಬ್ರಹ್ಮವು ಉನ್ಮನಿಸ್ವರೂಪವಾದ ಮನವ ನೊಳಕೊಂಡು ಶರಣನ ಹೃದಯ ಕಮಲ ಕರ್ಣಿಕಾವಾಸದಲ್ಲಿ ಪ್ರಾಣ ಲಿಂಗ ಸ್ವರೂಪವಾಗಿ ಮೂರ್ತಿಗೊಂಡಿತ್ತೆಂಬುದೀಗ ಎನ್ನ ಮನದ ಮಂದಿರದಲ್ಲಿ ನಿಂದವ ನೀನೊಬ್ಬನೆಂಬ ಶಬ್ದಕ್ಕರ್ಥ. ಆ ಪರಬ್ರಹ್ಮವು ಅನೇಕ ತತ್ವ ಬ್ರಹ್ಮಾಂಡಂಗಳಲ್ಲಿ ಚೈತನ್ಯಸ್ವರೂಪವಾಗಿ ವೇಧಿಸಿಹುದೆಂಬು ದೀಗ ವಿಶ್ವರೂಪಾದೆಯಲ್ಲಾ ಎಂಬ ಶಬ್ದಕ್ಕರ್ಥ. ಆ ವಸ್ತುವ ಅಷ್ಟಾಂಗ ಯೋಗದಿಂ ಭೇದಿಸಿಹೆನೆಂದಡೆ ಅಭೇದ್ಯವಾಗಿಹುದೆಂಬುದೀಗ ಭೇದಕ್ಕೆ ಅಭೇದ್ಯನಾದೆಯಲ್ಲಾ ಎಂಬ ಶಬ್ದಕ್ಕರ್ಥ. ಆ ಪರಬ್ರಹ್ಮವನು ಸಕಲ ನಿಷ್ಕಲವೆಂದು ಸಕಲ ನಿಷ್ಕಲಾತೀತವೆಂದು ಭಿನ್ನವಿಟ್ಟು ನುಡಿಯಬಾರ ದೆಂಬುದೀಗ ನಿನ್ನನೇನೆಂಬುದಕ್ಕೆ ತೆರಪಿಲ್ಲವೆಂಬ ಶಬ್ದಕ್ಕರ್ಥ. ಭಾಗೀ ರಥೀ ಸರ್ವರಿಗೂ ಒಂದೇ ಸಮಾನವಾಗಿಹ ಹಾಗೆ ಲಿಂಗಾಂಗಸಂಬಂಧಿ ಗಳಾದ ಶರಣ ಜನಂಗಳೆಲ್ಲಕ್ಕೂ ಪರಬ್ರಹ್ಮವು ಪರಿಪೂರ್ಣ. (ಸೂಚನೆ— ಮುಂದಿನ ಭಾಗ ಉಪಲಬ್ಧವಿಲ್ಲ)

೮೩. ಕಲ್ಲಿನ ಗಿರಿಯ ಹುಲ್ಲಿನ ಮೊನೆಯಲ್ಲಿ ಕುಕ್ಕಿ ಹುಲ್ಲೆಯ ಮರಿ ಹುಲಿಯೊಂದಾಗಿ ಚಲ್ಲವಾಡುತ್ತಿದ್ದಿತ್ತು. ಬಲ್ಲಹನ ಬಲುಹ ಏನೂ ಇಲ್ಲದವ ಮುರಿದು ಈ ಸೊಲ್ಲಿನ ವಿವರವ ಕೇಳುವ ಬನ್ನಿ ಸದಾಶಿವ ಮೂರ್ತಿಲಿಂಗದಲ್ಲಿಗೆ.

ಟೀಕು:— ಕಲುಹೃದಯವಾದ ದೇಹಮಧ್ಯದಲ್ಲಿ ಅಹಂಕಾರ ಹುಟ್ಟಿ ತ್ತೆಂಬುದೀಗ ಕಲ್ಲಿನ ಗಿರಿಯ ಎಂಬ ಶಬ್ದಕ್ಕರ್ಥ. ಅಂತಪ್ಪ ಅಹಂಕಾ ರದ ಗಿರಿಯ ಸುಜ್ಞಾನಾಂಕುರದಲ್ಲಿ ಸಂಬಂಧವಾಗಿರ್ಪ ಭಕ್ತಿಯಿಂ ನಿವೃತ್ತಿ ಮಾಡಿದನೆಂಬುದೀಗ ಹುಲ್ಲಿನ ಮೊನೆಯಲ್ಲಿ ಕುಕ್ಕಿ ಎಂಬ ಶಬ್ದ ಕ್ಕರ್ಥ. ಅಂತು ಅಹಂಕಾರವಳಿದು ಚಿಚ್ಛಕ್ತಿಯಿಂದುದ್ಭವಿಸಿ ಚಿತ್ ಸ್ವರೂಪನಾದ ಶರಣನು ಸಕಲ ತತ್ವಂಗಳನವಗ್ರಹಿಸಿ ಕೊಂಡಿರ್ಪ ಮಹಾ ಘನಲಿಂಗದಲ್ಲಿ ಒಡಗೂಡಿ ಕ್ರೀಡಾಪರನಾಗಿರ್ದನೆಂಬುದೀಗ ಹುಲ್ಲೆಯ ಮರಿ ಹುಲಿಯೊಂದಾಗಿ ಚಲ್ಲವಾಡುತ್ತಿದ್ದಿತ್ತೆಂಬ ಶಬ್ದಕ್ಕರ್ಥ. ಅಂತು

ಲಿಂಗದಲ್ಲಿ ಕ್ರೀಡಾಪರನಾದ ಶರಣನು ಅಹಂ ಬ್ರಹ್ಮವೆಂಬ ಅದ್ವೈತ ಜ್ಞಾನದ ಅಹಂಕಾರವನು ಸಕಲ ಪ್ರಪಂಚು ಹೊದ್ದದ ಚಿತ್‌ಸ್ವರೂಪ ನಾದ ಶರಣ ನಿವೃತ್ತಿಮಾಡಿದನೆಂಬುದೀಗ ಬಲ್ಲಹನ ಬಲುಹ ಏನು ಇಲ್ಲದವ ಮುರಿದನೆಂಬ ಶಬ್ದಕ್ಕರ್ಥ. ಅಂತು ಅದ್ವೈತಜ್ಞಾನವ ನಿವೃತ್ತಿ ಮಾಡಿ ಶಿವೋಹಂ ಭಾವ ಘಟಿಸಿದ ಶರಣನ ಚರಿತ್ರವ ತ್ರಿವಿಧ ಲಿಂಗಾನು ಭಾವಿಗಳಿಂ ಬೆಸಗೊಳುತಿರ್ದನೆಂಬುದೀಗ ಈ ಸೊಲ್ಲಿನ ವಿವರವ ಕೇಳುವ ಬನ್ನಿ ಸದಾಶಿವಮೂರ್ತಿಲಿಂಗದಲ್ಲಿಗೆ ಎಂಬ ಶಬ್ದಕ್ಕರ್ಥ.

---

## ತಾಮಸ ಜಂಗಮರು.

೮೪. ಜಂಗಮ ಲಿಂಗವಾದಲ್ಲಿ ಜಗದ ಜಂಗುಳಿಗಳ ಬಾಗಿಲ ಕಾಯದಿರಬೇಕು. ಒಡೆಯರ ಓಲಗವ ಬಂಟ ಕಾಯಬೇಕಲ್ಲದೆ ಬಂಟನ ವೇಳೆಯವ ಒಡೆಯ ಕಾಯಬಲ್ಲನೇ? ಇಂತಿದನರಿದು ರಾಜಮಂದಿರ ದಲ್ಲಿ ಗೃಹಸ್ಥಾಶ್ರಮದಲ್ಲಿ ವೇಳೆಯವನರಿತು ಭುಂಜಿಸಿಹೆನೆಂಬ ದರ್ಶನ ಜಂಗುಳಿಗಳಿಗೆ ಜಂಗಮಸ್ಥಲವಿಲ್ಲವೆಂದೆ. ಸದಾಶಿವಮೂರ್ತಿ ಲಿಂಗವು ಅವರಂಗಕ್ಕೆ ಮುನ್ನವೇ ಇಲ್ಲವೆಂಡೆ.

೮೫ ಬಾಗಿಲಲ್ಲಿ ತಡೆವಾತನ ಮನೆಯಲ್ಲಿ ಬಾಗಿ ಹೊಕ್ಕು ಉಂಡ ಜಂಗಮದ ಪಾದೋದಕ ಪ್ರಸಾದವೆಂದು ಕೊಂಡಾತಂಗೆ ಅಘೋರ ಪಾತಕವೆಂದೆ. ಅದೆಂತೆಂದೊಡೆ ತಾ ಸರ್ವಸಂಗದ ಅರಿವ ಕಂಡು ಭಕ್ತಿ ವಿರಕ್ತಿಯ ಕಂಡು ಇಂತೀ ಗುಣಂಗಳಲ್ಲಿ ಸನ್ನದ್ಧನಾಗಿ ಮತ್ತೆ ಉದ ರದ ಕಕ್ಕುಲಿತೆಗೆ ಸದನ ಹೊಗಲಾಗದು. ಇಂತೀ ವಿರಕ್ತನ ಸ್ಥಲ. ಸದಾಶಿವಮೂರ್ತಿ ಲಿಂಗದಲ್ಲಾಗು ಚಾಗೆಯನರಿಯಬೇಕು.

## ಐಕ್ಯಸ್ಥಲ.

**ವಿವರಣೆಃ—** ಐಕ್ಯಸ್ಥಿತಿಯಲ್ಲಿ ಮನುಷ್ಯನು ನಿವೃತ್ತಿ ಮಾರ್ಗವನ್ನು ಕೈಕೊಳ್ಳುತ್ತಾನೆ. (೮೬, ೮೭) ಆಗ ಅವನ ಮನಸ್ಸು ಸದ್ವಿವೇಕ ಸ್ವರೂಪವನ್ನು ಹೊಂದಿ ಶಿವಭಾವದಲ್ಲಿ ಸ್ಥಿರವಾಗುವದು. ಇಂದ್ರಿಯಗಳು ನಿವೃತ್ತಿಯಾಗುವವು. ಜೀವಭಾವವು ದೂರಾಗುವದು. ಇದು ಬಚ್ಚ ಬಯಲು. (೮೮) ಆಗ ನಾದ ಬಿಂದು ಕಲೆಗಳು ಮೂಲ ಚಿತ್ತುವಿನಲ್ಲಿ ಜೇದು ಸ್ವಯಂಭು ಸ್ಥಿತಿಯುಂಟಾಗುತ್ತದೆ. (೮೯) ಅದು ಕೇವಲ ಪ್ರಕಾಶಮಯವಾದ ಸ್ಥಿತಿಯು. ಇದೇ ಲಿಂಗೈಕ್ಯವು. (೯೦)

## ವಚನಗಳು.

೮೬. ಹರಿವ ಹಾವು ಕೊಂಬಿನ ಮೇಲಣ ಕೋಡಗ ಸಂಧಿಸಿ ಒಂದಕ್ಕೊಂದಂಜಿ ನಿಂದೈದಾವೆ. ಕೋಡಗ ನೋಡಲಮ್ಮದು. ಹಾವು ಹೋಗಲಮ್ಮದು. ಎರಡು ನಿಂದು ಜೋಗಿಗೆ ಲೇಸಾಯಿತ್ತು ಸದಾಶಿವ ಮೂರ್ತಿಲಿಂಗವನರಿತು.

ಟೀಕುಃ— ಸಕಲ ಪ್ರಪಂಚಿನ ವ್ಯವಹಾರದಲ್ಲಿ ಚರಿಸುತ್ತಿಹ ಶಂಕಾವಿಷಯ ಸಂಬಂಧಿಯಪ್ಪ ಜೀವನೆಂಬುದೀಗ ಹರಿವ ಹಾವು ಎಂಬ ಶಬ್ದಕ್ಕರ್ಥ. ಇಂದ್ರಿಯಂಗಳೆಂಬ ಶಾಖೋಪ ಶಾಖೆಗಳಲ್ಲಿ ಲಂಘಿಸುತ್ತಿಹುದು ಮನಸ್ಸೆಂಬುದೀಗ ಕೊಂಬಿನ ಮೇಲಣ ಕೋಡಗವೆಂಬ ಶಬ್ದಕ್ಕರ್ಥ. ಅಂತಪ್ಪ ಜೀವಂಗೆ ಶಿವಕೃಪೆಯಿಂ ಸಮ್ಯಜ್ಞಾನೋದಯವಾಗಲು ಮನಸ್ಸು ಸದ್ವಿವೇಕ ಸ್ವರೂಪವನೆಯ್ದಿ ನಿವೃತ್ತಿ ಮಾರ್ಗದಿಂ ಸಮ್ಮುಖವಾದ ವೆಂಬುದೀಗ ಸಂಧಿಸಿಯೋ ಎಂಬ ಶಬ್ದಕ್ಕರ್ಥ. ಆ ಜೀವನ ಸುಜ್ಞಾನ ಪ್ರಕಾಶಕ್ಕೆ ಮನವಳುಕಿ ಆ ಮನಸ್ಸಿನ ಸದ್ವಿವೇಕ ಜೀವಗಳು ಎರಡು ಶಿವಭಾವದಲ್ಲಿ ಸುಸ್ಥಿರವಾದವೆಂಬುದೀಗ ಒಂದಕ್ಕೊಂದಂಜಿ ನಿಂದೈದಾವೆ ಎಂಬ ಶಬ್ದಕ್ಕರ್ಥ. ಇಂದ್ರಿಯಂಗಳ ಪ್ರವರ್ತನೆಯ ಅಜ್ಞಾನ ದೃಕ್ಕಿನಿಂ ನಿರೀಕ್ಷಿಸಲಮ್ಮದು ಮನಸ್ಸೆಂಬುದೀಗ ಕೋಡಗ ನೋಡಲಮ್ಮದೆಂಬ ಶಬ್ದಕ್ಕರ್ಥ. ಸಕಲ ಮಾಯಾ ಪ್ರಪಂಚಿಗೆ ಅಡಿಯಿಡಲಮ್ಮದು ಜೀವನೆಂಬುದೀಗ ಹಾವು ಹೋಗಲಮ್ಮದು ಎಂಬ ಶಬ್ದಕ್ಕರ್ಥ. ಸುಜ್ಞಾನೋದಯವಾದ ಜೀವನು ಸದ್ವಿವೇಕ ಸ್ವರೂಪವಾದ ಮನಸ್ಸು ಎರಡು ಶಿವಭಾವದಲ್ಲಿ ಸುಸ್ಥಿರವಾಗಲು ಶಿವತತ್ವದಲ್ಲಿ ಸಮರಸೈಕ್ಯವನೆಯ್ದುವ ಶರ

ಣಂಗೆ ಮುಖವಾಯಿತ್ತೆಂಬುದೀಗ ಎರಡು ನಿಂದು ಜೋಗಿಗೆ ಲೇಸಾ
ಯಿತ್ತು ಸದಾಶಿವಮೂರ್ತಿ ಲಿಂಗವನರಿತು ಎಂಬ ಶಬ್ದಕ್ಕರ್ಥ.

೮೭. ಹಸಿದ ಹಾವಿನ ಹೆಡೆಯಲ್ಲಿ ಬಿಲವ ಮಾಡುತ್ತಿದೆ. ಹೆಡೆ
ಯಲ್ಲಿ ಹೆಬ್ಬಿಲ ಕಣ್ಣಿನ ಓವರಿಯಲ್ಲಿ ಹುಲ್ಲಿನ ಹಾಸಿಕೆಯ ಶಯನದ
ಮನೆ ಮೂಗಿನ ವಾಸದಲ್ಲಿ ತಪ್ಪುದಾರಿ ಬಾಲದ ತುದಿಯಲ್ಲಿ ಹುಡುಪ ಹಾವ
ಹಿಡಿದಲ್ಲಿ ಸಿಕ್ಕಿತ್ತು ಸದಾಶಿವಮೂರ್ತಿ ಲಿಂಗವನರಿದಲ್ಲಿ ಚಿತ್ತ ನಿಂದಿತ್ತು.

ಟೀಕು:— ಶಂಕಾವಿಷ ಸಂಬಂಧಿಯುಪ್ಪ ಜೀವನು ಆಶಾ ತೃಷ್ಣೆಯ
ಲ್ಲಿರ್ದನೆಂಬುದೀಗ ಹಸಿದ ಹಾವಿನ ಎಂಬ ಶಬ್ದಕ್ಕರ್ಥ. ಪಂಚೇಂದ್ರಿ
ಯಂಗಳೇ ಆ ಜೀವಂಗೆ ಶಿರಸ್ಸಾಗಿಹವೆಂಬುದೀಗ ಹೆಡೆಯಲ್ಲಿ ಎಂಬ
ಶಬ್ದಕ್ಕರ್ಥ. ಆ ಪಂಚೇಂದ್ರಿಯ ದ್ವಾರಂಗಳಲ್ಲಿ ವಿಷಯ ಪ್ರಪಂಚ
ವನೇ ಉಂಟು ಮಾಡಿ ಕೊಳ್ಳುತ್ತಿಹುದು ಮನಸ್ಸೆಂಬುದೀಗ ಬಿಲವ
ತೋಡುತ್ತಿದೆ ಎಂಬ ಶಬ್ದಕ್ಕರ್ಥ. ಆ ಇಂದ್ರಿಯಂಗಳಲ್ಲಿ ಆಶೆ ಅತ್ಯಂತ
ಘನತರವಾಗಿಹುದೆಂಬುದೀಗ ಹೆಡೆಯಲ್ಲಿ ಹೆಬ್ಬಿಲವೆಂಬ ಶಬ್ದಕ್ಕರ್ಥ. ಆ
ಜ್ಞಾನ ದೃಷ್ಟಿಯ ಬೆಂಬಳಿಯಿಂ ಪಂಚವಿಷಯ ಸಂಬಂಧವಾದ ಅಂತ
ರ್ದೇಹವೇ ಆ ಮನಸ್ಸು ಮರವೆಯನೆಯ್ದುವದಕ್ಕೆ ಆಶ್ರಯವಾಯಿತ್ತೆಂ
ಬುದೀಗ ಕಣ್ಣಿನ ಓವರಿಯಲ್ಲಿ ಹುಲ್ಲಿನ ಹಾಸಿಕೆಯ ಶಯನದ ಮನೆ
ಯೆಂಬ ಶಬ್ದಕ್ಕರ್ಥ. ದುರ್ವಾಸನ ಸ್ವೀಕಾರವೆಂಬ ನಾಸಿಕವಿಡಿದು
ನಾನಾ ದುಶ್ಚರಿತ್ರಂಗಳಲ್ಲಿ ಚರಿಸುತ್ತಿಹುದು ಮನಸ್ಸೆಂಬುದೀಗ ಮೂಗಿನ
ವಾಸದಲ್ಲಿ ತಪ್ಪುದಾರಿಯೆಂಬ ಶಬ್ದಕ್ಕರ್ಥ. ಆ ಮನಸ್ಸು ಭವಪಾಶದಲ್ಲಿ
ತಮೋಗುಣ ಸಂಬಂಧದಿಂ ಮರವೆಯನೆಯ್ದಿಹುದೆಂಬುದೀಗ ಬಾಲದ
ತುದಿಯಲ್ಲಿ ಹುಡುಪನೆಂಬ ಶಬ್ದಕ್ಕರ್ಥ. ಸುಜ್ಞಾನೋದಯವಾದ ಶರ
ಣನ ಆ ಜೀವಭಾವವ ನಿವೃತ್ತಿ ಮಾಡಿ ಶಿವಭಾವ ಘಟಿಸಿದಲ್ಲಿ ಗುರು
ಕಾರುಣ್ಯದಿಂ ಲಿಂಗಾಂಗ ಸಂಬಂಧವಾದಲ್ಲಿ ಮನವಳಿದು ಉನ್ಮನಿ
ತತ್ವರೂಪವನೆಯ್ದಿ ಲಿಂಗದಲ್ಲಿ ಸಮರಸವಾಯಿತ್ತೆಂಬುದೀಗ ಹಾವ ಹಿಡಿ
ದಲ್ಲಿಯೇ ಸಿಕ್ಕಿತ್ತು ಸದಾಶಿವಮೂರ್ತಿ ಲಿಂಗವನರಿದಲ್ಲಿ ಚಿತ್ತ ನಿಂದಿತ್ತು
ಎಂಬ ಶಬ್ದಕ್ಕರ್ಥ.

೮೮. ಪೃಥ್ವಿ ಅಪ್ಪುವಿನಾಧಾರದಿಂದ ಬೀಜ ಒಡೆದು ಬೆಳೆವಂತೆ
ಅರುಹು ಅರುಹಿಸಿಕೊಂಬ ಉಭಯದ ಮಧ್ಯದಲ್ಲಿ ಜ್ಞಾನ ಕುರುಹಾಗಿ

ಚಿದ್ಘನ ವಸ್ತು ಪತಿಯಾಗಿ ಉಭಯ ಒಂದುಗೂಡಿ ಮೇಲನರಿತಲ್ಲಿ ಸದಾಶಿವಮೂರ್ತಿ ಲಿಂಗ ಬಚ್ಚ ಬಯಲು.

೮೯. ನಾದ ಬ್ರಹ್ಮಶಕ್ತಿಯಾಗಿ, ಬಿಂದು ವಿಷ್ಣುಶಕ್ತಿಯಾಗಿ, ಕಳೆ ರುದ್ರಶಕ್ತಿಯಾಗಿ, ತ್ರಿವಿಧ ಪ್ರಾಣ ಅತೀತಭೇದ ಚೇತನವಾಗಿ ಉಮಾಪತಿ ನಿರಸನ ಸ್ವಯಂಭು ಸದಾಶಿವಮೂರ್ತಿ ಲಿಂಗವು ತ್ರಿವಿಧನಾಮ ನಷ್ಟವಾಯಿತ್ತು.

೯೦. ಚಕ್ಷುಮಯನಾಗಿ, ಚಕ್ಷುರೂಪನಾಗಿ, ಚಕ್ಷುವಿಮೋಕ್ಷನಾಗಿ, ವಿಮೋಕ್ಷ ಸುಕ್ಷೇತ್ರವಾಸನಾಗಿ, ವಾಸದ ಮಧ್ಯದಲ್ಲಿ ಮೂರ್ತಿಯ ಬೆಳಗು ತೋರುತ್ತಿದೆ ಸದಾಶಿವಮೂರ್ತಿ ಲಿಂಗದಲ್ಲಿ.

## ಗುರು.

**ವಿವರಣೆಃ**— ಗುರುವು ಕ್ರಿಯಾದೀಕ್ಷೆಯಿಂದ ಸ್ಥೂಲತನುವನ್ನು ನಿವೃತ್ತಿಮಾಡಿ ಭಕ್ತನಲ್ಲಿ ಲಿಂಗ ಸಾಹಿತ್ಯವನ್ನು ಮಾಡುವನು. ಮಂತ್ರ ದೀಕ್ಷೆಯಿಂದ ಸೂಕ್ಷ್ಮ ತನುವನ್ನು ನಿವೃತ್ತಿಮಾಡಿ ಪ್ರಾಣಲಿಂಗ ಸಾಹಿತ್ಯ ವನ್ನು ಮಾಡುವನು. ವೇಧಾ ದೀಕ್ಷೆಯಿಂದ ಹಸ್ತ ಮಸ್ತಕ ಸಂಯೋಗವನ್ನು ಮಾಡಿ ಕಾರಣ ದೇಹವನ್ನು ಅಳಿದು ಭಾವಲಿಂಗ ಸಂಬಂಧ ಮಾಡು ವನು. (೯೧-೯೨) ಹೀಗೆ ಜೀವತ್ರಯುಗಳನ್ನಳಿದು ಲಿಂಗತ್ರಯುಗಳನ್ನು ಸಂಬಂಧಿಸುವನು. ಇದರಿಂದ ದುರ್ವರ್ತನೆಗಳಡಗುವವು. ಭಕ್ತನು ಶಿವ ಜ್ಞಾನ ಸ್ವರೂಪನಾಗುವನು. ಹೀಗೆ ಅಂಗವನ್ನು ಲಿಂಗವನ್ನಾಗಿ ಮಾಡಿದ ಗುರುವು ತನ್ನ ಶಿಷ್ಯನಲ್ಲಿ ಅವಿರಳ ಸಂಗವನ್ನು ಮಾಡುವನು. ಗುರುವು ನಿಷ್ಕಲಚಿತ್ ಶಕ್ತಿಯೆಂದೇ ಭಾವಿಸಬೇಕು. ಇದೇ ವೀರಶೈವ ಮಾರ್ಗವು. ಈತನು ಶುದ್ಧ ಶೈವ, ಮಾರ್ಗ ಶೈವ, ಪೂರ್ವ ಶೈವ ಇವುಗಳಿಗೆ ಹೊರ ಗಾಗಿರಬೇಕು. (೯೩) ಈತನು ತನ್ನ ಶಿಷ್ಯರಲ್ಲಿ ಭಿನ್ನಾಚಾರವುಳ್ಳವನಾಗಿ ರಬಾರದು. (೯೪) ಅವನು ಬರಿಯ ಮಾತಿನ ಮಾಲೆಯುವನಲ್ಲ. (೯೫) ಅವನು ಪ್ರಾಣಕ್ಕೆ ಉಪದೇಶವನ್ನು ಮಾಡಿ ಕಾಯಕ್ಕೆ ಲಿಂಗವನ್ನು ಕೊಡು ವನು. ಕಾಯ ಶುದ್ಧಮಾಡಿ ಪ್ರಾಣಕ್ಕೆ ಅರಿವ ಕೊಡುವನು. (೯೬) ಹೀಗೆ ಶಿಷ್ಯನು ಗುರುವಿನಲ್ಲಿ ಲಿಂಗವನ್ನು ಪಡೆಯಬೇಕು. ಇವನು ಪುನರ್ಜಾತನಾಗುವನು. (೯೭) ಇವನು ಪವಿತ್ರಾಚರಣೆಯಿಂದ ಆಚ ರಿಸಬೇಕು. ಇದು ಹೇಗೆಂಬುದು ೯೮ ನೇ ವಚನದಲ್ಲಿ ಹೇಳಲ್ಪಟ್ಟಿದೆ.

## ವಚನಗಳು.

೯೧. ಆ ದುರ್ಗದಲ್ಲಿರ್ದ ಧೂರೆಗಳ ವಿರೋಧವನರಿದು ಇದೇ ದುರ್ಗಕ್ಕೆ ಸಾಧ್ಯ ವೇಳೆ ಎಂಬುದನರಿದು ಮಾಯಾಮಲ ನಾಸ್ತಿ ಎಂಬ ಮನ್ನೆಯ ಕಾಳಗವ ಹಿಡಿದು ದುರ್ಗವ ಮುತ್ತಿ ಕೈಯ್ಯೊಳಗಾದರು ಮೂವರು ಧೂರೆಗಳು. ನರಪತಿಯು ಅಂಡವ ಕಿತ್ತು ಸುರಪತಿಯು ಕೈಯ್ಯುಹಿಡಿದು ಸಿರಿಮುರಿಗೊಡೆಯನ ಕಣ್ಣ ಕಳೆದು ಅರಿಗಳಿಲ್ಲಾ ಎಂದು ಅಭಿಮುಖವ ನಷ್ಟವ ಮಾಡಿ ಊರ್ಧ್ವಮುಖವಾದ ಮಾಯಾ ಕೋಳಾ ಹಳ ಮಲಂ ನಾಸ್ತಿ ಮನ್ನಣೆಯ ಭಾವರಹಿತ ಅನುಪಮ ಚರಿತ ಸದಾಶಿವಮೂರ್ತಿಲಿಂಗಕ್ಕೆ ಅರಿಗಳಲ್ಲದೆ ನಿರಾಳವಾಯಿತ್ತು.

ಟೀಕು:— ಅಂತಪ್ಪ ಅಹಂಕಾರವನಾಶ್ರಯಿಸಿಕೊಂಡಿರ್ಪ ಜೀವತ್ರಯಂಗಳಲ್ಲಿ ಸಮ್ಯಜ್ಞಾನೋದಯವಾಗಲು ನಿವೃತ್ತಿ ಮುಖದಿಂ ವಿರೋಧವಾಗಿರ್ದ ಭೇದವ ಶರಣ ಸುಜ್ಞಾನ ದೃಷ್ಟಿಯಿಂ ಕಂಡು ವಿವೇಕಿಸುತ್ತಿರ್ದನೆಂಬುದೀಗ ಆ ದುರ್ಗದಲ್ಲಿರ್ದ ಧೊರೆಗಳ ವಿರೋಧವನರಿದು ಎಂಬ ಶಬ್ದಕ್ಕರ್ಥ. ಅಂತು ಸದ್ವಿವೇಕಮುಖದಿಂ ವಿವೇಕಿಸುತ್ತಿರ್ದ ಶರಣನ ನಿವೃತ್ತಿ ಮಾಡುವದಕ್ಕೆ ಇದೇ ತತ್ಕಾಲವೆಂದರಿದು ನಿರೂಪಿಸುತ್ತಿರ್ದನೆಂಬುದೀಗ ಇದೇ ದುರ್ಗಕ್ಕೆ ಸಾಧ್ಯ ವೇಳೆ ಎಂಬುದನರಿತು ಎಂಬ ಶಬ್ದಕ್ಕರ್ಥ. ಮಾಯಾ ಸಂಬಂಧವಾದ ಮಲತ್ರಯ ರಹಿತವಾದ ನಿರ್ಮಳಾಂಗ ಸ್ವರೂಪವಾದ ಶರಣನೆಂಬುದೀಗ ಮಾಯಾ ಮಲ ನಾಸ್ತಿ ಎಂಬ ಶಬ್ದಕ್ಕರ್ಥ. ದುರ್ಭಾವವಳಿದು ಸದ್ಭಾವವುಳ್ಳಾತನೇ ಶರಣನೆಂಬುದೀಗ ಮನ್ನಿಯನೆಂಬ ಶಬ್ದಕ್ಕರ್ಥ. ಅಂತಪ್ಪ ಶರಣನು ಅಹಂಕಾರವನಾಶ್ರಯಿಸಿರ್ಪ ಜೀವತ್ರಯಂಗಳ ಸಂಹರಿಸಬೇಕೆಂದು ಪರಿಪೂರ್ಣಜ್ಞಾನವನು ಕೃತನಿಶ್ಚಯ ಹಸ್ತದಲ್ಲಿ ದೃಢವಿಡಿದನೆಂಬುದೀಗ ಕಾಳಗವ ಹಿಡಿದು ಎಂಬ ಶಬ್ದಕ್ಕರ್ಥ. ಆ ಪರಿಪೂರ್ಣ ಜ್ಞಾನ ಪ್ರಕಾಶದಿಂದಹಂಕಾರವನನವಗ್ರಹಿದನೆಂಬುದೀಗ ದುರ್ಗವ ಮುತ್ತಿ ಎಂಬ ಶಬ್ದಕ್ಕರ್ಥ. ಅಂತಪ್ಪ ಅಹಂಕಾರವ ನಿವೃತ್ತಿಮಾಡಿ ಚಿದಹಂಕಾರವ ನಿವೃತ್ತಿಮಾಡಿ ಚಿದಹಂಕಾರ ಸ್ವರೂಪನಾದ ಶರಣನ ಜೀವಭಾವದಲ್ಲಿ ಜೀವತ್ರಯಂಗಳು ಅಡಗಿದವೆಂಬುದೀಗ ಕೈಯ್ಯೊಳಗಾದರು ಮೂವರು ಧೊರೆಗಳು ಎಂಬ ಶಬ್ದಕ್ಕರ್ಥ. ಆ ಶಿವಭಾವತ್ರಯಂಗಳನವಗ್ರಹಿಸಿದ ಶರಣ ಗುರೂಪಾವಸ್ಥೆಯ ಮಾಡಲು ಶ್ರೀಗುರು ಕರುಣಿಸಿ ಪ್ರಸನ್ನನಾಗಿ ಕ್ರಿಯಾದೀಕ್ಷೆಯಿಂ ವಿಶ್ವಂಗೆ ಸಂಬಂಧವಾದ ಸ್ಥೂಲತನುವ ನಿವೃತ್ತಿಯ ಮಾಡಿ ಇಷ್ಟಲಿಂಗವ ಸಾಹಿತ್ಯವ ಮಾಡಿದನೆಂಬುದೀಗ ನರಪತಿಯ ಅಂಡವ ಕಿತ್ತು ಎಂಬ ಶಬ್ದಕ್ಕರ್ಥ. ಮಂತ್ರ ದೀಕ್ಷೆಯಿಂದ ಸೂಕ್ಷ್ಮತನು ನಿವೃತ್ತಿಯಾಗಿ ಪ್ರಾಣಲಿಂಗ ಸಾಹಿತ್ಯವಾಗಲು ತೈಜಸನು ಭೋಕ್ತೃವ್ಯವನುಂಬ ಮನೋಹಸ್ತವು ನಷ್ಟವಾಯಿತ್ತೆಂಬುದೀಗ ಸುರಪತಿಯ ಕೈಯ್ಯಹಿಡಿದು ಎಂಬ ಶಬ್ದಕ್ಕರ್ಥ. ವೇಧಾದೀಕ್ಷೆಯಿಂದ ಹಸ್ತಮಸ್ತಕ ಸಂಯೋಗವಾದಲ್ಲಿ ಕಾರಣದೇಹವಳಿದು ಭಾವಲಿಂಗ ಸಂಬಂಧವಾದಲ್ಲಿ ಆ ಪ್ರಾಜ್ಞ ಭಿನ್ನಜ್ಞಾನ ನಷ್ಟವಾಯಿತ್ತೆಂಬುದೀಗ ಸಿರಿಮುರಿಗೊಡೆಯನ ಕಣ್ಣ ಕಳೆದು ಎಂಬ ಶಬ್ದಕ್ಕರ್ಥ. ಅಂತು ಅಂಗತ್ರಯ ಮುಖ್ಯವಾದ ಜೀವತ್ರಯವಳಿದು

ಲಿಂಗತ್ರಯ ಸಂಬಂಧವಾದ ಶರಣನ ಸಕಲ ಕರಣಂಗಳೆಲ್ಲ ಲಿಂಗ
ಕರಣಂಗಳಾದ ಕಾರಣ ಶರಣಂಗೆ ವಿರೋಧವಿಲ್ಲದೆ ಹೋಯಿತ್ತೆಂಬು
ದೀಗ ಅರಿಗಳಿಲ್ಲ ಎಂಬ ಶಬ್ದಕ್ಕರ್ಥ. ಆ ಕರಣಂಗಳ ನಿವೃತ್ತಿ ಮಾಡಿದ
ಶರಣನ ಪ್ರಪಂಚಿನತ್ತಭಿಮುಖವಾಗಿರ್ಪ ದುರ್ವರ್ತನೆ ನಿವೃತ್ತಿಯ ಮಾಡಿದ
ನೆಂಬುದೀಗ ಅಭಿಮುಖವ ನಷ್ಟವ ಮಾಡಿ ಎಂಬ ಶಬ್ದಕ್ಕರ್ಥ. ಆ
ಪ್ರಪಂಚ ನಷ್ಟವಾದಲ್ಲಿ ಶಿವಜ್ಞಾನ ಸ್ವರೂಪನಾಗಿರ್ದನೆಂಬುದೀಗ ಊರ್ಧ್ವ
ಮುಖವಾದನೆಂಬ ಶಬ್ದಕ್ಕರ್ಥ. ಆ ಜ್ಞಾನಸ್ವರೂಪನಾದ ಶರಣನು ಆ
ಜ್ಞಾನಸ್ವರೂಪಿಯಾದ ಮಾಯೆಯ ನಿವೃತ್ತಿಯ ಮಾಡಿ ಮಲತ್ರಯ
ರಹಿತನಾಗಿರ್ಪನೆಂಬುದೀಗ ಮಾಯಾ ಕೋಳಾಹಳ ಮಲಂನಾಸ್ತಿ ಎಂಬ
ಶಬ್ದಕ್ಕರ್ಥ. ಆ ನಿರ್ಮಲಸ್ವರೂಪನಾದ ಶರಣಂಗೆ ತಾನೆಂಬ ಭಾವ
ನಷ್ಟವಾಗಿ ಉಪಮಾತೀತನಾಗಿರ್ದನೆಂಬುದೀಗ ಭಾವರಹಿತ ಅನುಪಮ
ಚರಿತ ಸದಾಶಿವಮೂರ್ತಿಲಿಂಗಕ್ಕೆ ಅರಿಗಳಿಲ್ಲದೆ ನಿರಾಳವಾಯಿತ್ತೆಂಬ
ಶಬ್ದಕ್ಕರ್ಥ.

೯೨. ಊರ ಹೊರಗಣ ಹೊಲತಿಯು ಹಾರುವನೆರೆದು ತನ್ನಯ'
ಸೂತಕ ಹೋಯಿತ್ತು. ಹೊಲತಿಯ ಕುಲ ಹರಿದು ಹಾರುವ ಹೊಲೆ
ಯನಾಗಿ ಸದಾಶಿವಮೂರ್ತಿ ಲಿಂಗಕ್ಕೊಳಗಾದ.

ಟೀಕು:-- ದೇಹ ಭಾವಕ್ಕೆ ಹೊರಗಾಗಿರ್ಪ ನಿಷ್ಕಲ ಚಿಚ್ಛಕ್ತಿ ಎಂಬು
ದೀಗ ಊರ ಹೊರಗಣ ಹೊಲತಿಯು ಎಂಬ ಶಬ್ದಕ್ಕರ್ಥ. ಪರಧನ
ಪರಸ್ತ್ರೀಯರ ಬಯಸುತ್ತಿರ್ದ ಜೀವಂಗೆ ಶಿವಕೃಪೆಯಿಂ ಸುಜ್ಞಾನೋದ
ಯವಾಗಿ ಗುರೂಪಾವಸ್ಥೆಯ ಮಾಡಲು ಆ ನಿಷ್ಕಲ ಚಿಚ್ಛಕ್ತಿಯೇ ಗುರು
ಸ್ವರೂಪವಾಗಿ ಬಂದು ದೀಕ್ಷಾತ್ರಯಂಗಳಿಂದಂಗಕ್ಕೆ ಲಿಂಗ ಸಂಬಂಧವ
ಮಾಡಿದಲ್ಲಿ ಆ ಶ್ರೀಗುರು ತತ್ಪದಲ್ಲಿ ಶಿಷ್ಯನವಿರಳ ಸಂಗವ ಮಾಡಲು
ತನ್ನ ಮುನ್ನಿನ ಜೀವಭಾವ ಭ್ರಾಂತಿನ ಸೂತಕ ನಿವೃತ್ತಿಯಾಯಿತ್ತೆಂ
ಬುದೀಗ ಹಾರುವನೆರೆದು ತನ್ನಯ ಸೂತಕ ಹೋಯಿತ್ತು ಎಂಬ
ಶಬ್ದಕ್ಕರ್ಥ. ಆ ಚಿಚ್ಛಕ್ತಿ ಸ್ವರೂಪವಾದ ಶ್ರೀಗುರು ತಾನೆ ಪರಬ್ರಹ್ಮ
ವೆಂಬ ಚಿದಹಂಕಾರವ ನಿವೃತ್ತಿಯ ಮಾಡಿದನೆಂಬುದೀಗ ಹೊಲತಿಯ
ಕುಲ ಹರಿದು ಎಂಬ ಶಬ್ದಕ್ಕರ್ಥ. ಶಿವಾಪೇಕ್ಷೆಯ ಮುಂದುಗೊಂಡಿರ್ಪ
ಶರಣನು ಸರ್ವ ಸೂತಕ ರಹಿತವಾದ ಪರಬ್ರಹ್ಮನೆಯಾದನೆಂಬುದೀಗ

ಹಾರುವ ಹೊಲೆಯನಾಗಿ ಸದಾಶಿವಮೂರ್ತಿ ಲಿಂಗಕ್ಕೊಳಗಾದನೆಂಬ ಶಬ್ದಕ್ಕರ್ಥ.

೯೩. ವೀರಶೈವ ಗುರುವಾಗಿ ಶುದ್ಧಶೈವಕ್ಕೆ ಹೊರಗಾಗಬೇಕು. ಶುದ್ಧಶೈವ ಗುರುವಾಗಿ, ಮಾರ್ಗಶೈವಕ್ಕೆ ಹೊರಗಾಗಬೇಕು. ಮಾರ್ಗ ಶೈವ ಗುರುವಾಗಿ ಪೂರ್ವಶೈವಕ್ಕೆ ಹೊರಗಾಗಬೇಕು. ಇಂತೀ ಶೈವಂ ಗಳಲ್ಲಿ ಸನ್ನರ್ಧನಾಗಿ ತಿಳಿದು ಅಂಗಲಿಂಗಾತ್ಮನಲ್ಲಿ ನಿಂದು ಸಂಯೋ ಗವ ಮಾಡಬೇಕು. ಮಾಡಿದಲ್ಲಿ ಕೂಡಿದ ಕಾರಣ ಪರಶೈವವೆಂಬ ಹೆಸ ರಾಯಿತ್ತು ಸದಾಶಿವಮೂರ್ತಿ ಲಿಂಗವನರಿತಲ್ಲಿ.

೯೪. ಲಿಂಗ ಹೊರ್ತಾಗಿ ವಿಭೂತಿ ರುದ್ರಾಕ್ಷಿಯ ಕೊಟ್ಟ ಗುರು ವಾಗಬಹುದೇ ಅಯ್ಯ? ಬೀಜವಿಲ್ಲದೆ ಅಂಕುರವಾಗಬಲ್ಲುದೇ? ಗಂಡ ನಿಲ್ಲದೆ ಮುಂಡೆಗೆ ಗರ್ಭ ನಿಂದಡೆ ಅವಳಾರಿಗೆ ಯೋಗ್ಯ? ಉಭ ಯವು ಕೇಡಾಯಿತ್ತು. ಇದನರಿತು ಮಾಡಿ ಸದಾಶಿವಮೂರ್ತಿ ಲಿಂಗ ವನರಿವುದಕ್ಕೆ.

೯೫. ಭಕ್ತ ತನ್ನಯ ಪಾಶವ ಗುರುಮುಖದಿಂದ ಕಳೆವ. ಗುರು ತನ್ನಯ ಪಾಶವ ಏತರಿಂದ ಕಳೆಯಬೇಕೆಂಬುದನರಿಯಬೇಕು. ಹಾಗರಿ ರಿಯದೆ ಉಪಾಧಿಕನಾಗಿ ಮಾತಿನ ಮಾಲೆಯ ನುಡಿದು ಜ್ಞಾತೃ, ಜ್ಞಾನ ಜ್ಞೇಯವನರಿಯದೆ ಭಾವ ಶುದ್ಧವಿಲ್ಲದ ಆಚಾರ್ಯನ ಕೈಯಿಂದ ಕೊಂಡ ಪಾಷಾಣದ ಕುರುಹು ಅದೇತಕ್ಕು ಯೋಗ್ಯವಲ್ಲ ಎಂದೆ. ಪ್ರತಿಷ್ಠೆ ಘನದಿಂದಲ್ಲದೆ ಲಿಂಗ ಚೇತನವಿಲ್ಲ ಎಂದೆ ಸದಾಶಿವಮೂರ್ತಿ ಲಿಂಗವನರಿವುದಕ್ಕೆ.

೯೬. ಪ್ರಾಣಕ್ಕುಪದೇಶವ ಮಾಡಿ ಕಾಯಕ್ಕೆ ಲಿಂಗವ ಕೊಡ ಬೇಕು. ಕಾಯ ಶುದ್ಧವ ಮಾಡಿ ಪ್ರಾಣಕ್ಕರಿವ ತೋರಬೇಕು. ಇಷ್ಟವ ನರಿಯದೆ ದೀಕ್ಷೆಯ ಮಾಡಬಾರದು. ಕುರುಡನ ಕೈಯ್ಯಲ್ಲಿ ಕೂಳ ಕಲಿಸಿ ಪ್ರತಿಗುರುಡಂಗೂಡಿಸಿದಂತಾಯಿತ್ತು. ಮಲಭಾಂಡದ ಜೀವಿಯ ಕೈಯ್ಯಲ್ಲಿ ಅನುಜ್ಞೆಯ ಪಡೆದ ಶಿಷ್ಯಂಗೆ ಉಭಯದ ಕೇಡಾಯಿತ್ತು. ಇದನರಿದು ಅರಿವುಳ್ಳ ಶಿಷ್ಯನು ಶಿವ ಜ್ಞಾನ ಮಾರ್ಗವ ಬಲ್ಲ ಗುರುವಿನ ಕೈಯ್ಯಲ್ಲಿ ಆ ಲಿಂಗವ ಕೊಟ್ಟು ಮರಳಿ ಪಡೆಯಬೇಕಣ್ಣಾ. ಸದಾಶಿವ ಲಿಂಗ ಮೂರ್ತಿಯನರಿವುದಕ್ಕೆ ಇದೇ ಚಿಹ್ನ.

೯೭. ಪ್ರಥಮದೀಕ್ಷೆ ಪರಬ್ರಹ್ಮದೀಕ್ಷೆ ಅಂಗಲಿಂಗದೀಕ್ಷೆ ಪುನರ್ದೀಕ್ಷೆ ಇಂತೀ ದೀಕ್ಷಂಗಳಲ್ಲಿ ತಿಳಿಯಬೇಕು. ಪ್ರಥಮದೀಕ್ಷೆ ಮಾಡುವಲ್ಲಿ ಬ್ರಹ್ಮನ ಪಾಶವ ಹರಿಯಬೇಕು. ಪರಬ್ರಹ್ಮ ದೀಕ್ಷೆಯ ಮಾಡುವಲ್ಲಿ ವಿಷ್ಣುವಿನ ಪಾಶವ ಹರಿಯಬೇಕು. ಅಂಗಲಿಂಗದೀಕ್ಷೆಯ ಮಾಡುವಲ್ಲಿ ರುದ್ರನ ಪಾಶವ ಹರಿಯಬೇಕು. ಪುನರ್ದೀಕ್ಷೆಯ ಮಾಡುವಲ್ಲಿ ಘಟದಲ್ಲಿದ್ದಾತ್ಮನ ಕಳೆದು ಪುನರಪಿಯ ಮಾಡಿ, ಪುನರ್ದೀಕ್ಷೆಯ ಮಾಡಬೇಕು. ಅದೆಂ ತೆಂದೊಡೆ ಇದಕ್ಕೆ ದೃಷ್ಟ. ದ್ವಿಜರ ಗರ್ಭದಲ್ಲಿ ಜನಿಸಿದ ಪಿಂಡಕ್ಕೆ ಮಂತ್ರೋ ಚ್ಚರಣೆ ಮುಂಜೆಯಿಂದಲ್ಲದೆ ಭೂಸುರ ಕುಲವಿಲ್ಲ. ಇದನರಿತು ವಿಚಾರವ ಮಾಡಿ ಕೇಳಿ ಕಂಡು ಉಪದೇಶ ಗುರುವಾಗಬೇಕು ಸದಾಶಿವಮೂರ್ತಿ ಲಿಂಗವನರಿವುದಕ್ಕೆ.

೯೮. ದೀಕ್ಷಾಗುರುವಾದಲ್ಲಿ ತ್ರಿವಿಧದಾಸೆ ಇಲ್ಲದಿರಬೇಕು. ಶಿಕ್ಷಾ ಗುರುವಾದಲ್ಲಿ ಅರಿಗಳಿಗಂಜದೆ ಪ್ರಾಣತ್ಯಾಗ ನಿಶ್ಚಯವಾಗಿರಬೇಕು. ಮೋಕ್ಷಾಗುರುವಾದಲ್ಲಿ ಸರ್ವದೋಷ ಸರ್ವೇಂದ್ರಿಯ ನಾಶವಾಗಿರಬೇಕು. ಇಂತೀ ಮೂರ ಮೀರಿ ಬೇರೊಂದರಲ್ಲಿ ನಿಂದು ತ್ಯಾಗಾಂಗ, ಭೋಗಾಂಗ, ಯೋಗಾಂಗ, ತ್ರಿವಿಧ ಲೇಪನಾಗಿ ನಿಂದುದೇ ನಿಜಗುರುಸ್ಥಲ. ಆ ಗುರುವಿನ ಕೈಯ್ಯ ಅನುಜ್ಞೆ ಪರಂಜ್ಯೋತಿ ಪ್ರಕಾಶ, ಅದು ನಿರವಯ ತತ್ವ, ಸದಾಶಿವಮೂರ್ತಿ ಲಿಂಗವು ತಾನೆ.

## ಲಿಂಗ.

**ವಿವರಣೆ:—** ಬ್ರಹ್ಮ ರಂಧ್ರದಲ್ಲಿ ಪರಮಾಮೃತ ಕೂಪವಿದೆ. ಅದ ರಲ್ಲಿ ಉಂಟಾಗಿದ್ದ ದೇಹದಲ್ಲಿ ಸುಜ್ಞಾನೋದಯವಾಗುವದು. ಇಂತಹ ಸುಜ್ಞಾನ ಗುರುವೇ ಕ್ರಿಯಾಘನ ಗುರುವಾಗಿ ಬಂದು ಅಂಗಕ್ಕೆ ಲಿಂಗ ಸಂಬಂಧವ ಮಾಡಿ ತನ್ನಾದಿಯನೆಚ್ಚರಿಸುವನು. ಆಗ ಗುರುಮಾರ್ಗಾ ಚಾರವನ್ನು ಹಿಡಿದು ಶಿವತತ್ವದತ್ತ ಹೋಗುವನು. (೯೯) ಮನುಷ್ಯನಲ್ಲಿ ವಿಶ್ವ ತೈಜಸ ಪ್ರಾಜ್ಞ ಎಂಬ ಜೀವತ್ರಯಂಗಳಿದ್ದು ಸುಜ್ಞಾನವು ಪ್ರಭಾ ವಿಸಲು ಅವುಗಳ ಪ್ರಪಂಚು ನಿವೃತ್ತಿಯಾಗುವದು. ಆಗ ಸತ್ಕ್ರಿಯೆಗಳ ಮೂಲಕ ಇಷ್ಟಲಿಂಗ ಸಂಬಂಧವು, ಸುಜ್ಞಾನವು ನೆಲೆಗೊಳ್ಳಲು ಪ್ರಾಣ ಲಿಂಗ ಸಾಹಿತ್ಯವು, ಅದೃಢವನ್ನು ದೂರಮಾಡಲು ತೃಪ್ತಿಲಿಂಗ ಸಂಬಂ ಧವು. (೧೦೦) ಆಗ ಗುರು ಶಿಷ್ಯರೆಂಬ ಉಭಯ ಭಾವವಳಿದು ಶಿವಬ್ರಹ್ಮ ಸ್ವರೂಪನಾಗುವನು.

### ವಚನಗಳು.

೯೯. ಶ್ರೀಶೈಲದ ಮಧ್ಯದಲ್ಲಿ ಒಂದು ಪರುಷದ ರಸದ ಭಾವಿ ಹುಟ್ಟಿತ್ತು. ಆ ಭಾವಿಯೊಳಗೆ ಕಬ್ಬಿಣದ ಆದುರು ಹುಟ್ಟಿ ಸಿದ್ಧರಸವ ನುಂಗಿತ್ತು. ಇದ್ದವನ ಸುದ್ದಿಯ ಸತ್ತವ ಹೇಳಿ ಕಾಣದವ ಕೇಳಿ ಹೋದ. ಸದಾಶಿವಮೂರ್ತಿ ಲಿಂಗ ಬಚ್ಚ ಬಯಲು.

**ಟೀಕು:—** ಬ್ರಹ್ಮರಂಧ್ರದ ಸಹಸ್ರದಳ ಕಮಲಕರ್ಣಿಕಾ ಮಧ್ಯ ದಲ್ಲಿ ಎಂಬುದೀಗ ಶ್ರೀಶೈಲದ ಮಧ್ಯದಲ್ಲಿ ಎಂಬ ಶಬ್ದಕ್ಕರ್ಥ. ಆ ಬ್ರಹ್ಮರಂಧ್ರದ ಸ್ಥಾನದಲ್ಲಿ ಪವಿತ್ರಸ್ವರೂಪವಾದ ಪರಮಾಮೃತ ಕೂಪ ಉದಿಸಿತ್ತೆಂಬುದೀಗ ಪರುಷ ರಸದ ಬಾವಿ ಹುಟ್ಟಿತ್ತೆಂಬ ಶಬ್ದಕ್ಕರ್ಥ. ಆ ಪರಮಾಮೃತ ಕೂಪವನೊಳಕೊಂಡಿರ್ಪ ಚಿದ್ಘನ ಲಿಂಗದಿಂದೆ ಅಜ್ಞಾನ ಸಂಬಂಧವಾದ ದೇಹಭಾವ ತೋರಿತ್ತು ಜೀವಂಗೆಂಬುದೀಗ ಆ ಭಾವಿ ಯೊಳಗೆ ಕಬ್ಬಿಣದ ಆದರು ಹುಟ್ಟಿ ಎಂಬ ಶಬ್ದಕ್ಕರ್ಥ. ಅಂತಪ್ಪ ದೇಹವು ಆ ಪರಮಾಮೃತ ರಸ ಬಿಂದುವನೊಳಕೊಂಡಿಹುದೆಂಬುದೀಗ ಸಿದ್ಧರಸವ ನುಂಗಿತ್ತು ಎಂಬ ಶಬ್ದಕ್ಕರ್ಥ. ಇಂತಪ್ಪ ದೇಹ ಸಂಬಂಧಿ

ಯಾಗಿರ್ದ ಆತ್ಮಂಗೆ ಶಿವಕೃಪೆಯಿಂ ಸುಜ್ಞಾನೋದಯವಾಗಲು ಅಂತ ರಂಗದ ಸುಜ್ಞಾನ ಗುರುವೇ ಕ್ರಿಯಾಘನ ಗುರುವಾಗಿ ಬಂದು ಅಂಗಕ್ಕೆ ಲಿಂಗಸಂಬಂಧವ ಮಾಡಿ ತನ್ನಾದಿಯನೆಚ್ಚರಿಸಿ ಸುಜ್ಞಾನ ಬೋಧೆಯ ಕೇಳಿ ಆ ಗುರುಮಾರ್ಗಾಚಾರವಿಡಿದು ಶಿವ ತತ್ವದತ್ತಲೆಯ್ದುತ್ತಿರ್ದನೆಂಬು ದೀಗ ಕಾಣದವ ಕೇಳಿ ಹೋದ ಸದಾಶಿವಮೂರ್ತಿಲಿಂಗ ಬಚ್ಚ ಬಯಲು ಎಂಬ ಶಬ್ದಕ್ಕರ್ಥ.

೧೦೦. ಮೂಳಿಯ ಮೊದಲಿನಲ್ಲಿ ಮೂವರು ಮಕ್ಕಳು ಹುಟ್ಟಿ ಒಬ್ಬ ಕಾಲಲ್ಲಿ ಬಲ್ಲಿದ, ಒಬ್ಬ ಕೈಯ್ಯಲ್ಲಿ ಬಲ್ಲಿದ, ಒಬ್ಬ ಬಾಯಲ್ಲಿ ಬಲ್ಲಿದ ಇಂತೀ ಮೂವರು ಮಕ್ಕಳ ಹೆತ್ತ ತಂದೆಯನಾಳುಮಾಡುತ್ತಿರ ಲಾಗಿ ಇವರು ಎನಗೆ ಹಗೆ ಮಕ್ಕಳಲ್ಲಾ ಎಂದು ಹಗೆಯೆಂಬುದನರಿದು ಹಿರಿಯ ಮಗನ ಕಾಲ ಮುರಿದು ನಡುವಣ ಮಗನ ಕೈ ಮುರಿದು ಕಿರಿಯ ಮಗನ ಬಾಯ ಮುಚ್ಚಿ ಗೋಣ ಮುರಿದು ಅವರ ಹಿಂಗಿ ನಾ ಬದುಕಿದೆನೆಂದು ತ್ರಿವಿಧ ಸಂದ ಬಿಟ್ಟು ಸದಾಶಿವಮೂರ್ತಿಲಿಂಗ ದಲ್ಲಿ ಸಂದಿತ್ತು ಚಿತ್ತ.

ಟೀಕು:— ಅನಾಹತ ಕರ್ಣದ್ವಾರಂಗಳು ರಹಿತವಾಗಿರ್ಪ ಮಾಯೆಯ ತಾನೆಂಬ ಮೂಲಾಹಂಕಾರದಲ್ಲಿ ಎಂಬುದೀಗ ಮೂಳಿಯ ಮೊದಲಿನಲ್ಲಿ ಎಂಬ ಶಬ್ದಕ್ಕರ್ಥ. ಆ ಮಾಯಾ ಸಂಬಂಧವಾದ ಮೂಲಾ ಹಂಕಾರದಲ್ಲಿ ವಿಶ್ವ ತೈಜಸ ಪ್ರಾಜ್ಞರೆಂಬ ಜೀವತ್ರಯಂಗಳುದಯಿಸಿದ ವೆಂಬುದೀಗ ಮೂವರು ಮಕ್ಕಳು ಹುಟ್ಟಿದರೆಂಬ ಶಬ್ದಕ್ಕರ್ಥ. ಸ್ಥೂಲ ತನು ಸಂಬಂಧವಾದ ವಿಶ್ವನು ದುಶ್ಚರಿತ್ರದಲ್ಲಿ ಚರಿಸುತ್ತಿಹನೆಂಬುದೀಗ ಒಬ್ಬ ಕಾಲಲ್ಲಿ ಬಲ್ಲಿದನೆಂಬ ಶಬ್ದಕ್ಕರ್ಥ. ಸೂಕ್ಷ್ಮತನು ಸಂಬಂಧಿ ಯಪ್ಪ ತೈಜಸನು ಸಂಕಲ್ಪರೂಪವಾದ ಮನೋವರ್ತನೆಯಲ್ಲಿ ಕೂಡಿಹ ನೆಂಬುದೀಗ ಒಬ್ಬರ ಕೈಯ್ಯಲ್ಲಿ ಬಲ್ಲಿದನೆಂಬ ಶಬ್ದಕ್ಕರ್ಥ. ಕಾರಣತನು ಸಂಬಂಧಿಯಪ್ಪ ಪ್ರಾಜ್ಞನು ಭಿನ್ನಾಪೇಕ್ಷೆಯಲ್ಲಿ ಕೂಡಿಹನೆಂಬುದೀಗ ಒಬ್ಬ ಬಾಯಲ್ಲಿ ಬಲ್ಲಿದನೆಂಬ ಶಬ್ದಕ್ಕರ್ಥ. ಅಂತಪ್ಪ ಜೀವತ್ರ ಯಂಗಳ ಮಧ್ಯದಲ್ಲಿ ಆ ಶಿವಕೃಪೆಯಿಂ ಸುಜ್ಞಾನ ಪ್ರಭಾವಿಸಿ ಅಹಂಕಾರ ಯುಕ್ತವಾದ ಜೀವನು ಅನಿತ್ಯವಾದ ಮಾಯಾ ಪ್ರಪಂಚಿಗೆ ಸಿಲ್ಕಿದ ನಲ್ಲಾ ಎಂದು ಹಾಸ್ಯೋಪಮಾನವ ಮಾಡುತ್ತಿಹನೆಂಬುದೀಗ ಇಂತೀ ಮೂವರು ಮಕ್ಕಳು ಹೆತ್ತ ತಂದೆಯನಾಳುಮಾಡುತ್ತಿರಲಾಗಿ ಎಂಬ

ಶಬ್ದಕ್ಕರ್ಥ. ಆ ಸುಜ್ಞಾನ ಪ್ರಕಾಶದಿಂದ ತನ್ನ ನಿಜವ ತಾನೆಚ್ಚತ್ತು ನೋಡಿಯೂ ಜೀವತ್ರಯಂಗಳು ಸಕಲ ಪ್ರಪಂಚ ನಿವೃತ್ತಿಯ ಮಾಡಿದ ಶರಣನು ಶ್ರೀಗುರೂಪಾವಸ್ಥೆಯ ಮಾಡಲು ಆ ಗುರು ಕರುಣಿಸಿ ವಿಶ್ವನ ದುಶ್ಚರಿತ್ರವೆಂಬ ಚರಣವ ಕ್ರಿಯಾದೀಕ್ಷೆಯಿಂ ಛೇದಿಸಿ ಸತ್ಕ್ರಿಯಾಚಾರವ ನೆಲೆಗೊಳಿಸಿ ಇಷ್ಟಲಿಂಗ ಸಂಬಂಧವ ಮಾಡಿದನೆಂಬುದೀಗ ಹಿರಿಯ ಮಗನ ಕಾಲು ಮುರಿದು ಎಂಬ ಶಬ್ದಕ್ಕರ್ಥ. ಇಂತು ಸತ್ಕ್ರಿಯಾಚಾರವ ನೆಲೆಗೊಳಿಸಿ ತೈಜಸನ ಸಂಕಲ್ಪ ರೂಪವಾದ ಮನೋಹಸ್ತವ ಮಂತ್ರದೀಕ್ಷೆಯಿಂ ಛೇದಿಸಿ ಸುಜ್ಞಾನವ ನೆಲೆಗೊಳಿಸಿ ಪ್ರಾಣಲಿಂಗ ಸಾಹಿತ್ಯವ ಮಾಡಿದನೆಂಬುದೀಗ ನಡುವಣ ಮಗನ ಕೈಯ್ಯ ಮುರಿದು ಎಂಬ ಶಬ್ದಕ್ಕರ್ಥ. ಅಂತು ಮನೋಹಸ್ತ ನಷ್ಟವಾಗಿ ಸುಜ್ಞಾನ ನೆಲೆಗೊಂಡಲ್ಲಿ ಪ್ರಾಜ್ಞನ ಭಿನ್ನಾಪೇಕ್ಷೆಯನು ಅದೃಢವ ಕಂಡವನು ವೇಧಾದೀಕ್ಷೆಯಿಂ ನಷ್ಟವ ಮಾಡಿ ಭಾವವ ನೆಲೆಗೊಳಿಸಿ ತೃಪ್ತಿಲಿಂಗ ಸಂಬಂಧವ ಮಾಡಿದನೆಂಬುದೀಗ ಕಿರಿಯ ಮಗನ ಬಾಯ ಮುಚ್ಚಿ ಗೋಣು ಮುರಿದು ಎಂಬ ಶಬ್ದಕ್ಕರ್ಥ. ಅಂತು ಜೀವತ್ರಯಂಗಳು ನಷ್ಟವಾಗಿ ಮಹಾಘನ ಲಿಂಗದಲ್ಲಿ ಶರಣ ಮಹಾಜ್ಞಾನ ಪ್ರಕಾಶ ನಿಷ್ಪತ್ತಿಯಾಯಿತ್ತೆಂಬುದೀಗ ಅವರು ಹಿಂಗಿ ನಾ ಬದುಕಿದೆನೆಂದು ತ್ರಿವಿಧ ಸಂದು ಬಿಟ್ಟು ಸದಾಶಿವ ಮೂರ್ತಿ ಲಿಂಗದಲ್ಲಿ ಸಂದಿತ್ತು ಚಿತ್ತ ಎಂಬ ಶಬ್ದಕ್ಕರ್ಥ.

೧೦೧. ಮೂಷಕ ಮಾರ್ಜಾಲ ಕೂಡಿ ಭೇಕನ ಕಂಡು ನೀತಿಯ ಕೇಳಿ ಮೂಷಕ ನೆರೆದಲ್ಲಿ ಅಳಿಯಿತ್ತು. ಮಾರ್ಜಾಲ ಮನೆಗೆ ಹೋಯಿತ್ತು. ನಾ ನೀನೆಂಬುದು ನಿಂದಿತ್ತು ಸದಾಶಿವಮೂರ್ತಿ ಲಿಂಗವನರಿದಲ್ಲಿ.

ಟೀಕು:— ದೇಹ ಸಂಬಂಧಿಯಾಗಿರ್ಪ ಜೀವನು ಮಾಯಾ ವಾಸನೆಯ ಕೂಡಿರ್ದಲ್ಲಿ ಶಿವಕೃಪೆಯಿಂ ಸುಜ್ಞಾನೋದಯವಾಗಲು ಜೀವ ಭಾವವಳಿದು ಸಜ್ಜೀವ ಸ್ವರೂಪವನೆಯ್ದಿ ಮನೋ ಮಾರ್ಜಾಲನ ವರ್ತನೆಯ ನಿವೃತ್ತಿ ಮಾಡಿ ಶಿವಭಾವ ಘಟಿಸಿ ಎರಡು ಏಕವಾಗಿ ಎಂಬುದೀಗ ಮೂಷಕ ಮಾರ್ಜಾಲ ಕೂಡಿ ಎಂಬ ಶಬ್ದಕ್ಕರ್ಥ. ಆ ಶಿವ ಭಾವದಲ್ಲಿ ಸನ್ನಿಹಿತವಾದ ಚಿತ್‌ಸ್ವರೂಪನಾದ ಶಿಷ್ಯನ ಆತ್ಮ ಚೈತನ್ಯವಾದ ಪರಮ ಶಾಂತಿಯ ಚಿದ್ಬಿಂದುವೇ ಗುರು ಸ್ವರೂಪವಾಗಿ ಬಂದು ಪ್ರತ್ಯಕ್ಷವಾದಲ್ಲಿ ಆ ಶಿಷ್ಯನು ಗುರೂಪಾವಸ್ಥೆಯ ಮಾಡುತ್ತಿರ್ದನೆಂಬುದೀಗ ಭೇಕನ ಕಂಡು ಎಂಬ ಶಬ್ದಕ್ಕರ್ಥ. ಆ ಶ್ರೀಗುರುವಿಂಗೆ ಉಪಾ

ವಸ್ಥೆಯ ಮಾಡುತ್ತಿರ್ದ ಶಿಷ್ಯನು ತನ್ನ ನಿಜ ಸ್ವರೂಪವಾವುದೆಂದು ಬೆಸ ಗೊಂಡಲ್ಲಿ ಆ ಶಿಷ್ಯನ ಆತ್ಮಾಂತರ್ಗತನಾಗಿರ್ಪ ಪರಮ ಚಿತ್ಕಲೆಯನು ಭಾವ ಮನ ದೃಕ್ಕಿನಿಂ ಬಹಿಷ್ಕರಿಸಿ ಕರಸ್ಥಲಕ್ಕೆ ಇಷ್ಟಲಿಂಗ ಸಾಹಿತ್ಯವ ಮಾಡಲು ಅಂಗದಲ್ಲಿ ಜ್ಞಾನಕ್ರಿಯಿಡಿದಾಚರಿಸಿ ಸಮರಸ ಭಾವದಿಂ ನಿಷ್ಪತ್ತಿಯಾದನೆಂಬುದೀಗ ನೀತಿಯ ಕೇಳಿ ಮೂಷಕ ನೆರೆದಲ್ಲಿ ಆಳಿಯಿತ್ತು ಎಂಬ ಶಬ್ದಕ್ಕರ್ಥ. ಆ ಸತ್ಕ್ರಿಯಾ ಲಿಂಗದಲ್ಲಿ ನಿಷ್ಪತ್ತಿಯನೆಯ್ದಿದ ಶಿಷ್ಯ ಉನ್ಮನಿ ತತ್ವಸ್ವರೂಪವಾದ ಮನಸ್ಸು ಅಂತರಂಗದಲ್ಲಿ ಸಾಹಿತ್ಯವಾಗಿರ್ಪ ಪ್ರಾಣಲಿಂಗದಲ್ಲಿ ಸಮರಸವನೆಯ್ದಿತ್ತೆಂಬುದೀಗ ಮಾರ್ಜಾಲ ಮನೆಗೆ ಹೋಯಿತ್ತು ಎಂಬ ಶಬ್ದಕ್ಕರ್ಥ. ಆ ಮನವು ಲಿಂಗದಲ್ಲಿ ಸಮರಸವನೆಯ್ದಲು ಗುರು ಶಿಷ್ಯರೆಂಬುಭಯ ಭಾವವಳಿದು ಶಿವಬ್ರಹ್ಮ ಸ್ವರೂಪವಾಯಿತ್ತೆಂಬುದೀಗ ನಾನೀನೆಂಬುದು ನಿಂದಿತ್ತು ಸದಾಶಿವಮೂರ್ತಿ ಲಿಂಗವನರಿದಲ್ಲಿ ಎಂಬ ಶಬ್ದಕ್ಕರ್ಥ.

೧೦೨. ಮಹಾ ಧರೆಯಲ್ಲಿ ಮನೆಯ ಕಟ್ಟುವದಕ್ಕೆ ಕಾವಿಲ್ಲದ ಕೊಡಲಿಯಲ್ಲಿ ಹುಟ್ಟಿದ ಮರನ ತರಿದು ಎತ್ತಿಲ್ಲದ ಏರಿನಲ್ಲಿ ಹೂಡಿ ತಂದವ ನೀನಾರಣ್ಣಾ? ನಾನೆಂಬುದಕ್ಕೆ ಮೊದಲೇ ನಾಮ ನಷ್ಟವಾಯಿತ್ತು. ಸದಾಶಿವಮೂರ್ತಿ ಲಿಂಗವು ಇಲ್ಲಿ ಸತ್ತು ಅಲ್ಲಿ ಹೆಣನಾಯಿತ್ತು.

ಟೀಕು:— ಅಖಂಡ ಚಿತ್ ಪೃಥ್ವಿಯಲ್ಲಿ ಶರಣ ತನ್ನ ಜ್ಞಾನಕಾಯುವ ರಚಿಸುತ್ತಿರ್ದನೆಂಬುದೀಗ ಮಹಾ ಧರೆಯಲ್ಲಿ ಮನೆಯ ಕಟ್ಟುವದಕ್ಕೆ ಎಂಬ ಶಬ್ದಕ್ಕರ್ಥ. ಆ ಶರಣನು ಭಿನ್ನಭಾವವಲ್ಲದೆ ಇರ್ಪ ಶಿವ ಜ್ಞಾನದಲ್ಲಿ ಎಂಬುದೀಗ ಕಾವಿಲ್ಲದ ಕೊಡಲಿಯಲ್ಲಿ ಎಂಬ ಶಬ್ದಕ್ಕರ್ಥ. ಜನನಾಂಕುರವಿಲ್ಲದ ಸದ್ವಿವೇಕ ವೃಕ್ಷವ ಆ ಶಿವಜ್ಞಾನದಲ್ಲಿ ಅಪಗ್ರಹಿಸಿದನೆಂಬುದೀಗ ಹುಟ್ಟಿದ ಮರನ ತರಿದು ಎಂಬ ಶಬ್ದಕ್ಕರ್ಥ. ಆತ್ಮತ್ರಯಂಗಳಿಲ್ಲದ ಅಭಿನ್ನ ಕ್ರಿಯಾಚಾರದಲ್ಲಿ ಆ ಸದ್ವಿವೇಕ ವೃಕ್ಷವ ಸಂಬಂಧಿಸಿದಾತ ಶ್ರೀಗುರುವೆಂದು ಶಿಷ್ಯ ಬೆಸಗೊಳುತ್ತಿರ್ದನೆಂಬುದೀಗ ಎತ್ತಿಲ್ಲದ ಏರಿನಲ್ಲಿ ಹೂಡಿ ತಂದವ ನೀನಾರಣ್ಣಾ ಎಂಬ ಶಬ್ದಕ್ಕರ್ಥ. ತಾನೆಂಬ ಅಹಂಕಾರವ ತಲೆದೋರುವದಕ್ಕೆ ಮೊದಲೇ ಶರಣ ಲಿಂಗವೆಂಬುಭಯ ನಾಮವಳಿಯಿತ್ತೆಂಬುದೀಗ ನಾನೆಂಬುದಕ್ಕೆ ಮೊದಲೇ ನಾಮ ನಷ್ಟವಾಯಿತ್ತೆಂಬುದೀ ಶಬ್ದಕ್ಕರ್ಥ. ಅಂತು ಉಭಯ ನಾಮ ವಳಿದು ಶರಣನ ಬಹಿರಂಗದ ಅಭಿನ್ನ ಕ್ರಿಯಾಚಾರದಲ್ಲಿ ಸ್ವರೂಪ

ನಾದ ಇಷ್ಟಲಿಂಗವು ಸಂಬಂಧವಾಗಿಹುದೆಂಬುದೀಗ ಸದಾಶಿವಮೂರ್ತಿ ಲಿಂಗವು ಇಲ್ಲಿ ಸತ್ತು ಎಂಬ ಶಬ್ದಕ್ಕರ್ಥ. ಆ ಮಾರ್ಗ ಕ್ರಿಯೆಯಲ್ಲಿ ಸಂಬಂಧವಾದ ಇಷ್ಟಲಿಂಗವು ಮೀರಿದ ಕ್ರಿಯೆಯನೊಳಕೊಂಡು ಅಂತರಂಗದಲ್ಲಿ ನಿವೃತ್ತಿಯಾಯಿತ್ತೆಂಬುದೀಗ ಅಲ್ಲಿ ಹೆಣನಾಯಿತ್ತೆಂಬ ಶಬ್ದಕ್ಕರ್ಥ. ತನ್ನಯ ಬಾಯ ಶೇಷವ ಲಿಂಗಕ್ಕೆ ತೋರಿ, ಲಿಂಗದ ಶೇಷವ ತಾ ಕೊಂಡೆನೆಂದು ಕೊಂಡುದು ಪ್ರಸಾದ, ಇದ್ದುದು ಸುಯಿಧಾನವೆಂದುಂಡು ಲಿಂಗಕ್ಕೆ ಕೊಡಲಹುದೇ ಅಯ್ಯ? ಅದು ಮುನ್ನವೇ ಲಿಂಗಾರ್ಪಿತ. ತನ್ನ ಸಂದೇಹಕ್ಕೆ ಕೊಟ್ಟು ಕೊಂಡಿಹೆನೆಂಬ ಭೇದವಲ್ಲದೆ ಇಂತೀ ಗುಣ ಸದಾಶಿವಮೂರ್ತಿ ಲಿಂಗಕ್ಕೆ ಹೊರಗು.

೧೦೩. ಸ್ಥಾವರಲಿಂಗ ಪೂಜೆ ಶುದ್ಧಶೈವಪೂಜೆ. ವೀರಶೈವಲಿಂಗ ಪೂಜೆ ಅಂಗದ ಮೇಲೆ ಹಿಂಗದೆ ಧರಿಸಿಹುದು. ಇದೆಲ್ಲವು ಸರಿ. ವೀರಶೈವ ಪೂಜೆ ಎಂತೆಂದೊಡೆ ಇಷ್ಟಲಿಂಗ ಜೀವನಂಗ ಉಭಯವು ಕೂಡಿ ಲೀಯವಾಗಿದ್ದುದು, ಶೈವ ಭೇದಂಗಳಿಗೆ ಹೊರಗು, ಸದಾಶಿವಮೂರ್ತಿ ಲಿಂಗಕ್ಕೊಳಗು.

೧೦೪. ಬೀಜವಿಲ್ಲದ ಬೆಳೆಯುಂಟೇ ಅಯ್ಯ? ನಾದವಿಲ್ಲದ ಶಬ್ದ ಉಂಟೇ ಅಯ್ಯ? ದೃಷ್ಟಿ ಇಲ್ಲದ ಕಳೆಯುಂಟೇ ಅಯ್ಯ? ಅಂಗ ಸಾಹಿತ್ಯವಾಗಿ ಸರ್ವಸಂಗವನರಿಯಬೇಕಲ್ಲದೆ ಲಿಂಗ ಅಂಗದಲ್ಲಿ ಹೊಕ್ಕು ಸರ್ವಭೋಗಂಗಳ ಕಾಂಬುದಕ್ಕೆ ಇದೇ ದೃಷ್ಟ. ಭಂಗಾರದ ಒಡಲಿನಲ್ಲಿ ಬಣ್ಣ ನಿಂದು ಲೆಕ್ಕವಟ್ಟಕ್ಕೆ ಬಾಹಂತೆ ಆತ್ಮನ ದೃಷ್ಟವ ಕಂಡು ಮತ್ತೆ ಅಧ್ಯಾತ್ಮವೆನಲೇಕೆ? ಘಟದ ಮಧ್ಯದಲ್ಲಿ ನಿಂದು ನುಡಿವುದೇ ಕ್ರಿ ಎಂದೆ ಸದಾಶಿವಮೂರ್ತಿ ಲಿಂಗವನರಿವುದಕ್ಕೆ.

೧೦೫. ಪಂಚತತ್ವದಲ್ಲಿದ್ದು ಪರತತ್ವವನರಿಯಬೇಕು. ಅದಕ್ಕೆ ದೃಷ್ಟ. ಪಶುವಿನ ಹೊಟ್ಟೆಯಲ್ಲಿ ಕರುವಿದ್ದಡೆ ಕರೆವುದಕ್ಕೆ ಮನೋಹರ ಉಂಟೇ? ಅದು ಭಿನ್ನಭಾವವಾಗಿ ಇದಿರಿಟ್ಟು ಉಂಡಲ್ಲದೆ ಮೊಲೆ ತೊರೆಯವು. ಆ ತೆರನನರಿದಲ್ಲಿ ಅರಿವುದಕ್ಕೊಂದು ಕುರುಹು ಬೇಕು. ಬಲ್ಲಿದ ವೀರನೆಂದಡೆ ಅಲಗಿನ ಮೊನೆಯಲ್ಲಲ್ಲದೆ ಗೆಲಬಹುದೇ? ಆ ಅರಿವ ಚಿತ್ತ ಕುರುಹಿನ ಘಟದಲ್ಲಿದ್ದು ಅರಿವುತಿದ್ದಿತಾದ ಕಾರಣ ಇದನರಿತಾತ್ಮನಾದವನೆನಲಿಲ್ಲ. ಸದಾಶಿವಮೂರ್ತಿ ಲಿಂಗವನರಿವುದಕ್ಕೆ ಇದಿರಿಟ್ಟು ಕಳೆದುಳಿಯಬೇಕು.

## ಜಂಗಮು.

**ವಿವರಣೆ**:— ಯಾವುದು ವಸ್ತುವಿನಲ್ಲಿ ಚೈತನ್ಯಾತ್ಮಕವಾಗಿ ವ್ಯವಹರಿಸುತ್ತದೋ ಅದೇ ಜಂಗಮುವೆಂದು ಹೇಳಲ್ಪಡುತ್ತದೆ. ಈ ದೃಷ್ಟಿಯಿಂದ ಕಾಯುವನ್ನು ಭಕ್ತನೆಂದು ಕರೆದರೆ ಜಂಗಮುವು ಅದಕ್ಕೆ ಪ್ರಾಣವಾಗಿರುವದು. (೧೦೬) ಜಂಗಮುವು ಜ್ಞಾನವಾಗಿ ಪದಾರ್ಥಗಳಲ್ಲಿ ಪ್ರೇರಣೆ ಮಾಡುತ್ತದೆ. ಆದುದರಿಂದ ಜಂಗಮುನು ಉಚ್ಚವರ್ತನೆಯುಳ್ಳವನಾಗಿರಬೇಕು. ಅಂದರೆ ಮಾತ್ರ ಅವನು ಭಕ್ತನಲ್ಲಿ ಪರಿಣಾಮ ಮಾಡುವನು. ಜಂಗಮುನ ವರ್ತನೆ ಹೇಗಿರಬೇಕೆಂಬದು ಮುಂದಿನ ವಚನಗಳಲ್ಲಿ ಹೇಳಲ್ಪಟ್ಟಿರುತ್ತದೆ.

### ವಚನಗಳು.

೧೦೬. ಅಪ್ಪು ಚಿಪ್ಪಿನಲ್ಲಿ ನಿಂದು ಅಪ್ಪುವ ಬೆರಸದಂತೆ, ವ್ಯತ್ತಿಕೆ ತೇಜದಲ್ಲಿ ಬೆಂದು ಪೃಥ್ವಿಯ ಕೂಡದಂತೆ, ಹಾಗಿರಬೇಕು ಭಕ್ತ ವಿರಕ್ತನ ಭೇದ ಇಷ್ಟಪ್ರಾಣದಿರವು ಇದು ನಿಶ್ಚಯ. ಲಿಂಗಾಂಗಕಾಯ ಭಕ್ತಪ್ರಾಣ ಜಂಗಮುವಾದ ಸ್ವಾನುಭಾವಸಿದ್ಧಿ ಈ ತೆರ ತಾನೆ ಸದಾಶಿವಮೂರ್ತಿಲಿಂಗವು.

೧೦೭. ಅರಿದು ಮಾಡುವುದು ಗುರುಭಕ್ತಿ, ಅರಿದು ಮಾಡುವುದು ಲಿಂಗಭಕ್ತಿ, ಅರಿದು ಮಾಡುವುದು ಜಂಗಮುಭಕ್ತಿ, ಅರಿಕೆಯಿಂದ ಕಾಂಬುದು ಸದಾಶಿವಮೂರ್ತಿಲಿಂಗವನರಿವುದಕ್ಕೆ.

೧೦೮. ಉಪಾಧಿಯುಳ್ಳನ್ನಕ್ಕ ಗುರುವಲ್ಲ. ವೇಷವ ಹೊತ್ತು ಬಾಗಿಲ ಕಾಯುವನ್ನಕ್ಕ ಜಂಗಮುವಲ್ಲ. ಶಕ್ತಿಸಹಿತ ಉಳ್ಳನ್ನಕ್ಕ ಲಿಂಗವಸ್ತುವಲ್ಲ. ಅದೇಂತೆಂದೊಡೆ ಏತರಲ್ಲಿರ್ದಡೂ ಶರೀರ ಬಲಿದು ತದ್ರೂಪ ಹಾಕಿದಂತಿರಬೇಕು. ಇದು ಅರಿವಿನ ಮೊದಲು ಸದಾಶಿವಮೂರ್ತಿ ಲಿಂಗದಿರವು.

೧೦೯. ಗುರು ಚರ ಮೂರ್ತಿ ಪೂಜಿಸಿಕೊಂಬಲ್ಲಿ ತಮ್ಮ ವಿವರವ ತಾವರಿಯಬೇಕು. ಹೆಣ್ಣು, ಹೊನ್ನು, ಮಣ್ಣು ಹೊರಗೆಂದು ಕೆಲರಿಗೆ ಹೇಳಿ ಗನ್ನದಿಂದ ಗಳಿಸಿಕೊಡುವುದು ಅದು ತಾನೇ ಅನ್ಯಾಯವಲ್ಲವೇ? ಬಿರಿದ ಕಟ್ಟಿದ ಬಂಟ ಭಾಷೆಗೆ ತಪ್ಪಿದಡೆ ರಾಜನ ಮುಖಕ್ಕರಿವಡೆ ಭಂಗ. ಇಂತಿದನರಿಯದೆ, ಮಾಗ ಲಿಂಯಪ್ಪ ಪಾರಕಣ್ಣಾ

ಪೇಲುವ ಎಣ್ಣೆಗಳ್ಳಗೇಕೆ ಗುರು ಚರಸ್ಥಲ? ಇಂತಿವರೆಲ್ಲರು ಸದಾಶಿವ ಮೂರ್ತಿ ಲಿಂಗಕ್ಕೆ ಹೊರಗು.

೧೧೦. ಗುರುವಾದಡೂ ಮಲತ್ರಯದಾಸೆಯುಳ್ಳನ್ನಕ್ಕ ಮಲ ದೇಹಿ. ಲಿಂಗವಾದಡೂ ಶಕ್ತಿಸಂಪುಟವುಳ್ಳನ್ನಕ್ಕ ಭವಕ್ಕೊಳಗು. ಜಂಗಮ ವಾದಡೂ ತನ್ನಿರವ ತಾನರಿಯದನ್ನಕ್ಕ ಪ್ರಸಿದ್ಧಭಾವವಿಲ್ಲ. ಇಂತಿದ ನರಿದು ಪೂಜಿಸಬೇಕು. ತನ್ನಯ ಜನ್ಮ ನಿವೃತ್ತಿಯ ಮಾಡಿಕೊಳಬಲ್ಲಡೆ ಇದೇ ಸದ್ಭಕ್ತನಿರವು ಸದಾಶಿವಮೂರ್ತಿಲಿಂಗವನರಿವುದಕ್ಕೆ.

೧೧೧. ಗುರುವೆಂದು ಅನುಸರಣೆಯ ಮಾಡಿದಲ್ಲಿ ಲಿಂಗವಿಲ್ಲ. ಲಿಂಗವೆಂದು ಅನುಸರಣೆಯ ಮಾಡಿದಲ್ಲಿ ಜಂಗಮವಿಲ್ಲ. ಜಂಗಮ ವೆಂದು ಅನುಸರಣೆಯ ಮಾಡಿದಲ್ಲಿ ಪಂಚಾಚಾರ ಶುದ್ಧಕ್ಕೆ ಹೊರಗು. ತಾ ಮಾಡುವ ಭಕ್ತಿ ತನಗೆ ಹಾನಿಯಾದ ಕಾರಣ ಈ ತ್ರಿವಿಧಕ್ಕೆ ಅನುಸರಣೆಯ ಮಾಡಲಿಲ್ಲ ಸದಾಶಿವಮೂರ್ತಿಲಿಂಗವನರಿವುದಕ್ಕೆ.

೧೧೨. ಗುರುವಿಂಗೆ ಗುರುವಿಲ್ಲದೆ ಅರಿವ ಪರಿ ಇನ್ನೆಂತೋ? ಲಿಂಗಕ್ಕೆ ಕಳೆ ಇಲ್ಲದೆ ಅರಿವ ಪರಿ ಇನ್ನೆಂತೋ? ಜಂಗಮಕ್ಕೆ ಪದಫಲ ನಾಸ್ತಿಯಾದಲ್ಲದೆ, ಪ್ರಸಿದ್ಧವಹ ಪರಿ ಇನ್ನೆಂತೋ? ಇಂತೀ ಅರಿವನರಿ ದಲ್ಲಿ ಸದಾಶಿವಮೂರ್ತಿಲಿಂಗವನರಿದುದು.

೧೧೩. ಪಾಶವರತು ಗುರುವಾಗಬೇಕು. ವೇಷವರತು ಚರವಾ ಗಬೇಕು. ಭ್ರಾಮಕವರತು ಲಿಂಗವಾಗಬೇಕು. ಸಕಲಕೃತ ಭೇದವರತು ವಿರಕ್ತವಾಗಬೇಕು. ಇಂತೀ ಸಕಲ ಭ್ರಮೆಯಳಿದು ನಿಂದುದೇ ಸದಾ ಶಿವ ಮೂರ್ತಿಲಿಂಗವು ತಾನೆ.

೧೧೪. ಭಕ್ತಂಗೆ ಕ್ರಿಯೆ, ಜಂಗಮಕ್ಕೆ ನಿಷ್ಕ್ರಿಯೆ, ಎನ್ನಬಾರದು ನೋಡಾ. ಜಂಗಮವಾದರೆ ಸದ್ಭಕ್ತಿ ಸದಾಚಾರ ಸತ್ಕ್ರಿಯೆಗಳಲ್ಲಿರ ಬೇಕು. ಅದೆಂತೆಂದಡೆ ಪುರುಷನ ಆಚಾರ ಸತಿಗೆ ಕಟ್ಟು. ಜಂಗಮದ ಆಚಾರವು ಭಕ್ತನ ಸಂಪದದ ಬೆಳೆ. ಅವತಾರಕ್ಕೆ ವೇಷ ಅರುಹಿಂಗೆ ಆಚಾರ. ಆ ಜಂಗಮ, ಆ ಭಕ್ತ ಈ ಉಭಯದ ಇರವು ಅಂಗಪ್ರಾಣ ದಂತೆ, ಭಿನ್ನವಿಲ್ಲ ಕಾಣಾ. ಸದಾಶಿವಮೂರ್ತಿ ಲಿಂಗವು ತಾನೆ.

**ಸಮಾಪ್ತ.**